ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

೬ —6

## ನಾಗರಖಂಡ (Nagar khand)

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ

(ಭಾಗ ೪) —4

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೪

# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ (ಭಾಗ ೪)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೆ

(ಭಾಗ ೪)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೪

# ಅರಿಕೆ

ಇಪ್ಪತ್ತನಾಲ್ಕನೆಯ ಸಂಪುಟದಿಂದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ಖಂಡವಾದ ನಾಗರಖಂಡವು ಉಪಕ್ರಮವಾಗಿದೆ. ಈ ಖಂಡದಲ್ಲಿ "ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ" ಎಂಬ ಒಂದೇ ಪ್ರಕರಣವಿರುವುದು. ಇದು ೨೭೯ ಅಧ್ಯಾಯಗಳುಳ್ಳದಾಗಿದೆ. ಈ ಸಂಪುಟದಲ್ಲಿ ಇನ್ನೂರ ಏಳನೆಯ ಅಧ್ಯಾಯದಿಂದ ಇನ್ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯದವರೆಗಿನ ಗ್ರಂಥ ಮುಗಿದು ನಾಗರಖಂಡವು ಪೂರ್ಣವಾಗಿದೆ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಪ್ರಾರ್ಥಿಸುತ್ತೇನೆ.

ನ್ಯೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಸ ಧೂರ್ಜಟಿಜಟಾಜೂಟೋ ಜಾಯತಾಂ ವಿಜಯಾಯ ವಃ ।
ಯತ್ರೈಕಪಲಿತಭ್ರಾಂತಿಂ ಕರೋತ್ಯದ್ಯಾಽಪಿ ಜಾಹ್ನವೀ ॥

ತಾತ್ಪರ್ಯ

ಗಂಗಾದೇವಿ (ನದಿ)ಯು,
ಯಾವ ಜಟಾಜೂಟದಲ್ಲಿ ನೆಲಸಿ ಅದರಲ್ಲಿ ಒಂದೇ ಒಂದು
ನೆರೆಗೂದಲಿರುವುದೆಂಬ ಭ್ರಾಂತಿಯನ್ನು ಇಂದಿಗೂ ಉಂಟುಮಾಡುತ್ತಿರುವಳೋ
ಆ ಧೂರ್ಜಟಿಯ ಜಟಾಜೂಟವು ಭಕ್ತರಾದ ನಿಮ್ಮ
ವಿಜಯಕ್ಕಾಗಿ ನೆರವಾಗಲಿ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಷಷ್ಠೇ ನಾಗರಖಂಡೇ
## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ

### ಚತುರ್ಥೋ ಭಾಗಃ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರನಾಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದನಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಸಪ್ತೋತ್ತರದ್ವಿಶತತಮೋಽಧ್ಯಾಯಃ

ಇಂದ್ರಮಹೋತ್ಸವವರ್ಣನಂ

ವಿಶ್ವಾಮಿತ್ರ ಉವಾಚ :—

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರಾಧಿಪ ।
ಬಾಲಮಂಡನಮಾಹಾತ್ಮ್ಯಂ ಸರ್ವಪಾತಕನಾಶನಂ ॥ ೧ ॥
ಯತ್ರೈಕಸ್ಮಿನ್ನಪಿ ಸ್ನಾನೇ ಕೃತೇ ಪಾರ್ಥಿವಸತ್ತಮ ।
ಸರ್ವೇಷಾಂ ಲಭ್ಯತೇ ಪುಣ್ಯಂ ತೀರ್ಥಾನಾಂ ಸ್ನಾನಸಂಭವಂ ।
ಮಾಘಮಾಸೇ ತ್ರಯೋದಶ್ಯಾಂ ಶುಕ್ಲಪಕ್ಷ ಉಪಸ್ಥಿತೇ ॥ ೨ ॥

---

### ಕನ್ನಡದ ಅನುವಾದ

ಇಂದ್ರಮಹೋತ್ಸವವರ್ಣನ

೧. ವಿಶ್ವಾಮಿತ್ರನು ಹೇಳುತ್ತಾನೆ:—ನರೇಂದ್ರ! ನೀನು ಕೇಳಿದಂತೆ ಸಕಲ ಪಾಪಗಳನ್ನೂ ನೀಗಿಸುವ ಬಾಲಮಂಡನದ ಮಾಹಾತ್ಮ್ಯವನ್ನೆಲ್ಲ ಹೇಳಿದ್ದೇನೆ.

೨. ಮಾಘಮಾಸದ ಶುಕ್ಲಪಕ್ಷದ ತ್ರಯೋದಶೀ ದಿನ ಈ ಒಂದು ಸ್ಥಾನದಲ್ಲಿ ಮಿಂದರೂ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ದೊರೆಯುವುದು.

ಆನರ್ತ ಉವಾಚ :—

ಕಸ್ಮಾಚ್ಛಕ್ರಸ್ಯ ಸಂಸ್ಥಾನಂ ಪಂಚರಾತ್ರಂ ಧರಾತಲೇ ।
ನಾಽಧಿಕಂ ಜಾಯತೇ ತೇಷಾಂ ಯಥಾಽನ್ಯೇಷಾಂ ದಿವೌಕಸಾಂ ॥ ೩ ॥
ವರ್ಷಾಂತೇ ಕಾನಿ ಚಾಽಹಾನಿ ಯೇಷು ಶಕ್ರೋ ಧರಾತಲೇ ।
ಸಮಾಗಚ್ಛತಿ ಕೋ ಮಾಸ ಏತತ್ಸರ್ವಂ ಬ್ರವೀಹಿ ಮೇ ॥ ೪ ॥

ವಿಶ್ವಾಮಿತ್ರ ಉವಾಚ :—

ಶ್ರೂಯತಾಮಭಿಧಾಸ್ಯಾಮಿ ಕಥಾಮೇನಾಂ ಧರಾಧಿಪ ।
ಪಂಚರಾತ್ರಾತ್ಪರಂ ಶಕ್ರೋ ಯಥಾ ನ ಸ್ಯಾದ್ಧರಾತಲೇ ॥ ೫ ॥
ಆಸೀತ್ಪೂರ್ವಂ ಬೃಹತ್ಕಲ್ಪೇ ಜಯತ್ಸೇನಃ ಸುರೇಶ್ವರಃ ।
ತ್ರೈಲೋಕ್ಯಸ್ಯ ಸಮಸ್ತಸ್ಯ ಸ್ವಾಮೀ ದಾನವದರ್ಪಹಾ ॥ ೬ ॥
ತ್ರೈಲೋಕ್ಯೇ ಸಕಲೇ ಪೂಜಾಂ ಭಜಮಾನಃ ಸದೈವ ಹಿ ।
ಕಸ್ಯಚಿತ್ತ್ವಥ ಕಾಲಸ್ಯ ಗೌತಮಸ್ಯ ಮುನೇಃ ಪ್ರಿಯಾ ॥ ೭ ॥
ಅಹಲ್ಯಾ ನಾಮ ಭಾರ್ಯಾಽಭೂದ್ರೂಪೇಣಾಪ್ರತಿಮಾ ಭುವಿ ।
ತಾಂ ದೃಷ್ಟ್ವಾ ಚಕಮೇ ಶಕ್ರಃ ಕಾಮದೇವವಶಂ ಗತಃ ॥ ೮ ॥
ನಿತ್ಯಮೇವ ಸಮಾಗತ್ಯ ಸ್ವರ್ಗ ಲೋಕಾತ್ಸ ಕಾಮಭಾಕ್ ।
ಗೌತಮೇ ನಿರ್ಗತೇ ರಾಜನ್ ಸಮಿದಿಧ್ಮಾರ್ಥಮೇವ ಹಿ ।
ದರ್ಭಾರ್ಥಂ ಫಲಮೂಲಾರ್ಥಂ ಸ್ವಯಮೇವ ಮಹಾತ್ಮಭಿಃ ॥ ೯ ॥

---

೩-೪. ಆನರ್ತನು ಹೇಳುತ್ತಾನೆ:—ಇತರ ದೇವತೆಗಳಂತೆ ಇಂದ್ರನು ಭೂಮಿಯಲ್ಲಿ ಐದು ರಾತ್ರಿಗಳಿಗಿಂತ ಹೆಚ್ಚಾಗಿ ಏಕೆ ವಾಸಿಸುವುದಿಲ್ಲ? ವರ್ಷದ ಕೊನೆಯ ಯಾವ ತಿಂಗಳ ಯಾವ ದಿನಗಳಲ್ಲಿ ಅವನು ಭೂಮಿಗೆ ಬರುವನು?

೫. ವಿಶ್ವಾಮಿತ್ರನು ಹೇಳುತ್ತಾನೆ:—ಇಂದ್ರನು ಐದು ರಾತ್ರಿಗಳಿಗಿಂತ ಹೆಚ್ಚಾಗಿ ಏಕೆ ಭೂಮಿಯಲ್ಲಿರುವುದಿಲ್ಲವೆಂಬುದಕ್ಕೆ ಒಂದು ಕಥೆಯನ್ನು ಹೇಳುವೆನು, ಕೇಳು.

೬-೯. ಹಿಂದೆ ಬೃಹತ್ಕಲ್ಪದಲ್ಲಿ ಮೂರು ಲೋಕಗಳಿಗೆ ಒಡೆಯನೂ, ದಾನವರ ದರ್ಪವನ್ನು ದಮನಮಾಡುವವನೂ, ಮೂರು ಲೋಕಗಳಲ್ಲಿಯೂ ಪೂಜೆಯನ್ನು ಕೈಗೊಳ್ಳುವವನೂ ಆದ ಜಯತ್ಸೇನನೆಂಬ ಸುರೇಶ್ವರನಿದ್ದನು. ಒಂದಾನೊಂದುಕಾಲದಲ್ಲಿ ಗೌತಮಮುನಿಗೆ ಅತ್ಯಂತ ಸುಂದರಿಯಾದ ಅಹಲ್ಯೆಯೆಂಬ ಓರ್ವ ಪತ್ನಿಯಿದ್ದಳು. ಇಂದ್ರನು ಅವಳನ್ನು ನೋಡಿ ಕಾಮಪರವಶನಾಗಿ ನಿತ್ಯವೂ ಸ್ವರ್ಗಲೋಕದಿಂದ ಅವಳೆಡೆಗೆ ಬಂದು ಗೌತಮನು ಮಹಾತ್ಮರಾದ ಮುನಿಗಳೊಡನೆ ಸಮಿತ್ತು, ದರ್ಭೆ, ಹಣ್ಣು, ಗೆಣಸು ಇವುಗಳಿಗಾಗಿ ಆಶ್ರಮದಿಂದ ಹೊರಗೆ ಹೋಗಿರಲು ಕಾಮಸುಖವನ್ನನುಭವಿಸುತ್ತಿದ್ದನು.

ಅಥ ತಸ್ಯ ಸಮಾಚಖ್ಯೌ ನಾರದೋ ಮುನಿಸತ್ತಮಃ ।
ಶಕ್ರಸ್ಯ ಚೇಷ್ಟಿತಂ ಸರ್ವಂ ತಥಾಽಹಲ್ಯಾ ಸಮುದ್ಭವಂ ॥ ೧೦ ॥
ತಚ್ಛ್ರುತ್ವಾ ಸಹಸಾ ತೂರ್ಣಂ ಗೌತಮೋ ಗೃಹಮಭ್ಯಗಾತ್ ।
ಯಾವತ್ಪಶ್ಯತಿ ದೇವೇಶಂ ಸಹ ಪತ್ನ್ಯಾ ಸಮಾಗತಂ ॥ ೧೧ ॥
ಶಕ್ರೋಽಪಿ ಗೌತಮಂ ದೃಷ್ಟ್ವಾ ಪಲಾಯನಪರಾಯಣಃ ।
ನಿರ್ಜಗಾಮಾಶ್ರಮಾತ್ತಸ್ಮಾದ್ವಿವಸ್ತ್ರೋಽಪಿ ಭಯಾಕುಲಃ ॥ ೧೨ ॥
ಅಹಲ್ಯಾಽಪಿ ಭಯತ್ರಸ್ತಾ ದೃಷ್ಟ್ವಾ ಭರ್ತಾರಮಾಗತಂ ।
ಅಧೋಮುಖೀ ಸ್ಥಿತಾ ರಾಜಂಸ್ತದಾ ವ್ಯಾಕುಲಿತೇಂದ್ರಿಯಾ ॥ ೧೩ ॥
ಗೌತಮೋಽಪಿ ಚ ತದ್ದೃಷ್ಟ್ವಾ ಸಮ್ಯಗ್ಭಾರ್ಯಾವಿಚೇಷ್ಟಿತಂ ।
ದದೌ ಶಾಪಂ ಮಹಾರಾಜ ಕೋಪಸಂರಕ್ತಲೋಚನಃ ॥ ೧೪ ॥
ಯಸ್ಮಾಚ್ಛಕ್ರ ಪಾಪಕರ್ಮ ಕೃತನಿಂದ್ಯಗ್ವಿಗರ್ಹಿತಂ ।
ಭಾರ್ಯಾ ಮೇ ದೂಷಿತಾ ಸಾಧ್ವೀ ತಸ್ಮಾದವೃಷಣೋ ಭವ ॥ ೧೫ ॥
ಸಹಸ್ರಂ ಚ ಭಗಾನಾಂ ತೇ ವಕ್ತ್ರೇ ಭವತು ಮಾಚಿರಂ ।
ಯೇನ ತ್ವಂ ವಿಪ್ಲವಂ ಯಾಸಿ ತ್ರೈಲೋಕ್ಯೇನ ಚರಾಚರೇ ॥ ೧೬ ॥
ಅಪರಂ ಮರ್ತ್ಯಲೋಕೇಽತ್ರ ಯದ್ಯಾಗಚ್ಛಸಿ ವಾಸವ ।
ಪೂಜಾಕೃತೇ ತತೋ ಮೂರ್ಧಾ ಶತಧಾ ತೇ ಭವಿಷ್ಯತಿ ॥ ೧೭ ॥

---

೧೦. ತರುವಾಯ ನಾರದ ಮುನಿಯು ಅಹಲ್ಯೆಯ ವಿಷಯದಲ್ಲಿ ಇಂದ್ರನು ಮಾಡಿದ ದುಶ್ಚೇಷ್ಟೆಯನ್ನು ಗೌತಮುನಿಗೆ ತಿಳಿಸಿದನು.

೧೧. ಗೌತಮನು ಆ ಮಾತನ್ನು ಕೇಳಿ ಶೀಘ್ರವಾಗಿ ಮನೆಗೆ ಬಂದು ಪತ್ನಿಯೊಡನೆ ಸೇರಿರುವ ದೇವರಾಜನನ್ನು ನೋಡಿದನು.

೧೨. ಇಂದ್ರನು ಗೌತಮನನ್ನು ನೋಡಿ ಭಯಗೊಂಡು ವಿವಸ್ತ್ರನಾಗಿದರೂ ಅವನ ಆಶ್ರಮದಿಂದ ಓಡಿಹೋದನು.

೧೩. ಅಹಲ್ಯೆಯೂ ಗಂಡನು ಬಂದುದನ್ನು ಕಂಡು ಭಯದಿಂದ ವ್ಯಾಕುಲಗೊಂಡವಳಾಗಿ ತಲೆತಗ್ಗಿಸಿಕೊಂಡು ನಿಂತಳು.

೧೪. ಗೌತಮನು ಪತ್ನಿಯ ಕೆಲಸವನ್ನು ಚೆನ್ನಾಗಿ ತಿಳಿದು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಶಾಪವನ್ನಿತ್ತನು.

೧೫. "ಇಂದ್ರ! ನೀನು ಸಾಧ್ವಿಯಾದ ನನ್ನ ಭಾರ್ಯೆಯನ್ನು ಕೆಡಿಸಿ ಇಂತಹ ನಿಂದ್ಯವಾದ ಪಾಪಕಾರ್ಯವನ್ನೆಸಗಿದ ಕಾರಣ ವೃಷಣಗಳಿಲ್ಲದವನಾಗು.

೧೬. ಬೇಗನೆ ನಿನ್ನ ಮುಖದಲ್ಲಿ ಸಾವಿರ ಯೋನಿಗಳುಂಟಾಗಲಿ. ಅದರಿಂದ ಚರಾಚರಾತ್ಮಕವಾದ ಈ ಮೂರು ಲೋಕಗಳಲ್ಲಿಯೂ ತೊಂದರೆಯನ್ನು ಹೊಂದುವೆ.

೧೭. ಮತ್ತು ನೀನು ಪೂಜೆಗಾಗಿ ಭೂಲೋಕಕ್ಕೆ ಬಂದರೆ ನಿನ್ನ ತಲೆಯು ನೂರು ಭಾಗವಾಗುವುದು."

ಏವಂ ಶಪ್ತ್ವಾ ಚ ತಂ ಶಕ್ರಂ ತತೋಽಹಲ್ಯಾಮುವಾಚ ಸಃ ।
ಕೋಪಸಂರಕ್ತನೇತ್ರಸ್ತು ಭರ್ತ್ಸಯಿತ್ವಾ ಮುಹುರ್ಮುಹುಃ ॥ ೧೮ ॥
ಯಸ್ಮಾತ್ಪಾಪೇ ತ್ವಯಾ ಕರ್ಮ ಕೃತಮೇತದ್ವಿಗರ್ಹಿತಂ ।
ತಸ್ಮಾಚ್ಛಿಲಾಮಯೀ ಭೂತ್ವಾ ತ್ವಂ ತಿಷ್ಠ ವಸುಧಾತಲೇ ॥ ೧೯ ॥
ತತಃ ಸಾ ತತ್ಕ್ಷಣಾಜ್ಜಾತಾ ತಸ್ಯ ಭಾರ್ಯಾ ಶಿಲಾತ್ಮಿಕಾ ।
ಇಂದ್ರೋಽಪಿ ಚ ಪರಿತ್ಯಕ್ತೋ ವೃಷಣಾಭ್ಯಾಂ ತಥಾಽಭವತ್ ॥ ೨೦ ॥
ಸಹಸ್ರ ಭಗಚಿಹ್ನಸ್ತು ವಕ್ತ್ರದೇಶೇ ಬಭೂವ ಹ ॥ ೨೧ ॥
ಅಥ ಮೇರೋಃ ಸಮಾಸಾದ್ಯ ಕಂದರಂ ವಿಜನಂ ಹರಿಃ ।
ಸವ್ರೀಡಃ ಸೇವತೇ ನಿತ್ಯಂ ನ ಜಗಾಮ ನಿಜಾಂ ಪುರೀಂ ॥ ೨೨ ॥
ತತೋ ದೇವಗಣಾಃ ಸರ್ವೇ ಸೋದ್ವೇಗಾಸ್ತೇನ ವರ್ಜಿತಾಃ ।
ನೋ ಜಾನಂತಿ ಚ ತತ್ರಸ್ಥಂ ಕಂದರಾನ್ವೇಷಣೇ ರತಾಃ ॥ ೨೩ ॥
ಪೀಡ್ಯಂತೇ ದಾನವೈ ರೌದ್ರೈಃ ಸ್ವರ್ಗೇ ಜಾತೇ ವಿರಾಜಕೇ ॥ ೨೪ ॥
ಏತಸ್ಮಿನ್ನಂತರೇ ಜೀವಃ ಶಕ್ರಾಣ್ಯಾ ಭಯಭೀತಯಾ ।
ಸೋದ್ವೇಗಯಾ ಪರಿಪೃಷ್ಟಃ ಕ್ವ ಗತೋಽಥ ಪುರಂದರಃ ॥ ೨೫ ॥
ಅಥ ಜೀವಶ್ಚಿರಂ ಧ್ಯಾತ್ವಾ ದೃಷ್ಟ್ವಾ ತಂ ಜ್ಞಾನಚಕ್ಷುಷಾ ।
ಜಗಾಮ ಸಹಿತೋ ದೇವೈಃ ಪ್ರೋವಾಚಾಽಥ ಸುನಿಷ್ಠುರಂ ॥ ೨೬ ॥

---

೧೮. ಆ ಗೌತಮನು ಇಂದ್ರನಿಗೆ ಹೀಗೆ ಶಾಪವನ್ನಿತ್ತು ಅಹಲ್ಯೆಯನ್ನು ಕೋಪದಿಂದ ಬಹುವಾಗಿ ಗದರಿಸಿ ಹೀಗೆಂದನು.

೧೯. "ಪಾಪಿಷ್ಠಳೆ! ನೀನು ಇಂತಹ ನಿಂದ್ಯವಾದ ಕರ್ಮವನ್ನಾಚರಿಸಿದ್ದರಿಂದ ಭೂಮಿಯಲ್ಲಿ ಶಿಲೆಯಾಗಿ ನಿಲ್ಲು."

೨೦–೨೧. ಕೂಡಲೆ ಆ ಅಹಲ್ಯೆಯು ಶಿಲೆಯಾದಳು. ಇಂದ್ರನೂ ವೃಷಣವಿಲ್ಲದವನಾದನು. ಮುಖದಲ್ಲಿ ಸಾವಿರ ಭಗಗಳ ಚಿಹ್ನೆಗಳು ಕಾಣಿಸಿದುವು.

೨೨. ಬಳಿಕ ಇಂದ್ರನು ಲಜ್ಜೆಯಿಂದ ಮೇರುಶೈಲದ ನಿರ್ಜನ ಗುಹೆಯನ್ನು ಹೊಂದಿ ವಾಸಮಾಡಿದನು. ತನ್ನ ಪಟ್ಟಣಕ್ಕೆ ಹೋಗಲಿಲ್ಲ.

೨೩. ಬಳಿಕ ದೇವತೆಗಳು ಇಂದ್ರನಿಲ್ಲದಿರುವುದರಿಂದ ವ್ಯಥೆಗೊಂಡು ಅವನಿರುವ ಸ್ಥಳವನ್ನರಿಯದೆ ಗುಹೆಗಳಲ್ಲಿ ಹುಡುಕತೊಡಗಿದರು.

೨೪. ಅರಾಜಕವಾದ ಸ್ವರ್ಗವನ್ನು ದಾರುಣರಾದ ದಾನವರು ಪೀಡಿಸಿದರು.

೨೫–೨೬. ಈ ಸಮಯದಲ್ಲಿ ಶಚಿಯು ಭಯಗೊಂಡು ಬೃಹಸ್ಪತಿಯನ್ನು ಇಂದ್ರನೆಲ್ಲಿಗೆ ಹೋದನೆಂದು ಕೇಳಿದಳು. ತರುವಾಯ ಬೃಹಸ್ಪತಿಯು ಬಹಳ ಹೊತ್ತು ಆಲೋಚಿಸಿ ಜ್ಞಾನದೃಷ್ಟಿಯಿಂದ ಅವನನ್ನು ಕಂಡು ದೇವತೆಗಳೊಡನೆ ಅವನೆಡೆಗೆ ಹೋಗಿ ಕಠಿನವಾಗಿ ಇಂತೆಂದನು.

ಕಿಮಿತ್ಥಂ ರಾಜ್ಯಭೋಗಾಂಸ್ತ್ವಂ ತ್ಯಕ್ತ್ವಾ ವಿಜನಮಾಶ್ರಿತಃ ।
ಕಿಂ ತ್ವಯಾ ವಿಹಿತಂ ಧ್ಯಾನಂ ಕಿಂ ರೌದ್ರಂ ಸಂಶ್ರಿತಂ ತಪಃ ॥ ೨೭ ॥
ಬೃಹಸ್ಪತೇರ್ವಚಃ ಶ್ರುತ್ವಾ ಭಗವಕ್ತ್ರಃ ಪುರಂದರಃ ।
ಪ್ರೋವಾಚ ಲಜ್ಜಯಾ ಯುಕ್ತೋ ದೀನೋ ಬಾಷ್ಪಪರಿಪ್ಲುತಃ ॥ ೨೮ ॥
ನಾಽಹಂ ರಾಜ್ಯಂ ಕರಿಷ್ಯಾಮಿ ತ್ರೈಲೋಕ್ಯೇಽಪಿ ಕಥಂಚನ ।
ಪಶ್ಯ ಮೇ ಯಾದೃಶೀ ಜಾತಾ ಹ್ಯವಸ್ಥಾ ಗೌತಮಾನ್ಮುನೇಃ ॥ ೨೯ ॥
ಸಹಸ್ರ ಭಗಚಿಹ್ನೇನ ಕಥಂ ವಕ್ತ್ರೇಣ ತಾನಹಂ ।
ದೇವಾನ್ ಸಂಭಾವಯಿಷ್ಯಾಮಿ ಪೌಲೋಮೀಂ ಚ ತಥಾ ಶಿವಂ ॥ ೩೦ ॥
ಮರ್ತ್ಯಲೋಕೋದ್ಭವಾ ಪೂಜಾ ನಷ್ಟಾ ಮಮ ಬೃಹಸ್ಪತೇ ।
ಗೌತಮಸ್ಯ ಮುನೇಃ ಶಾಪಾತ್ಕಸ್ಮಿಂಶ್ಚಿತ್ಕಾರಣಾಂತರೇ ॥ ೩೧ ॥
ತಚ್ಛ್ರುತ್ವಾ ದೇವರಾಜಸ್ಯ ಬೃಹಸ್ಪತಿರುವಾಚ ಹ ।
ದುಃಖೇನ ಮಹತಾಯುಕ್ತಃ ಸರ್ವೈರ್ದೇವೈಃ ಸಮಾವೃತಃ ।
ಗೌತಮಸ್ಯ ಸಮೀಪೇ ಚ ಗತ್ವಾ ಪ್ರೋವಾಚ ತಂ ಸ್ವಯಂ ॥ ೩೨ ॥

---

೨೭. "ದೇವರಾಜ! ನೀನು ರಾಜ್ಯಭೋಗಗಳನ್ನು ತೊರೆದು ಏಕೆ ಹೀಗೆ ನಿರ್ಜನ ಪ್ರದೇಶದಲ್ಲಿರುವೆ? ಧ್ಯಾನಮಾಡುತ್ತಿರುವೆಯೊ ಏನು? ಅಥವಾ ಭಯಂಕರವಾದ ತಪವನ್ನಾಚರಿಸುತ್ತಿರುವೆಯೊ?

೨೮. ಮುಖದಲ್ಲಿ ಯೋನಿಗಳ ಚಿಹ್ನೆಗಳುಳ್ಳ ಇಂದ್ರನು ಬೃಹಸ್ಪತಿಯ ಮಾತನ್ನು ಕೇಳಿ ಲಜ್ಜೆಯುಳ್ಳವನಾಗಿ ದೈನ್ಯದಿಂದ ಕಣ್ಣೀರನ್ನು ಸುರಿಸುತ್ತ ಹೀಗೆಂದನು.

೨೯. "ನಾನು ಈ ತ್ರೈಲೋಕ್ಯ ರಾಜ್ಯವನ್ನಾಳುವುದಿಲ್ಲ. ನೋಡು, ನನಗೆ ಗೌತಮಮುನಿಯಿಂದ ಎಂತಹ ಅವಸ್ಥೆಯುಂಟಾಗಿದೆ.

೩೦. ನಾನು ಸಾವಿರ ಯೋನಿಯ ಚಿಹ್ನೆಯುಳ್ಳ ಮುಖದಿಂದ ಆ ದೇವತೆಗಳನ್ನೂ, ಶಚಿಯನ್ನೂ, ಶಿವನನ್ನೂ ಹೇಗೆ ಸನ್ಮಾನಿಸಲಿ.

೩೧. ಬೃಹಸ್ಪತಿಯೆ! ಗೌತಮಮುನಿಯು ಯಾವುದೋ ಒಂದು ಕಾರಣದಿಂದ ನನ್ನನ್ನು ಶಪಿಸಿದ್ದರಿಂದ ಭೂಲೋಕದ ಪೂಜೆಯು ನನಗಿಲ್ಲವಾಗಿದೆ."

೩೨. ಬೃಹಸ್ಪತಿಯು ಇಂದ್ರನ ಆ ಮಾತನ್ನು ಕೇಳಿ ಅತ್ಯಂತ ದುಃಖದಿಂದ ಕೂಡಿದವನಾಗಿ ಸಮಸ್ತ ದೇವತೆಗಳೊಡನೆ ಗೌತಮಮುನಿಯ ಬಳಿಗೆ ಹೋಗಿ ಇಂತೆಂದನು.

ಏತಚ್ಛಕ್ರಪರಿತ್ಯಕ್ತಂ ತ್ರೈಲೋಕ್ಯಮಪಿ ಚಾಽಖಿಲಂ ।
ಪೀಡ್ಯತೇ ದಾನವೈರ್ವಿಪ್ರ ನಷ್ಟಯಜ್ಞೋತ್ಸವಕ್ರಿಯಂ ॥ ೩೩ ॥
ನೈಷ ವಾಂಛತಿ ರಾಜ್ಯಂ ಸ್ವಂ ಲಜ್ಜಯಾ ಪರಯಾ ಯುತಃ ।
ತಸ್ಮಾದಸ್ಯ ಪ್ರಸಾದಂ ತ್ವಂ ಯಥಾವತ್ಕರ್ತುಮರ್ಹಸಿ ।
ಅನುಗ್ರಹೇಣ ಶಾಪಸ್ಯ ಮಮ ವಾಕ್ಯಾದ್ದ್ವಿಜೋತ್ತಮ ॥ ೩೪ ॥
ತಚ್ಛ್ರುತ್ವಾ ಗೌತಮಃ ಪ್ರಾಹ ನ ಮೇ ವಾಕ್ಯಂ ಭವೇನ್ಮೃಷಾ ।
ನ ವಾಕ್ಯಂ ಲೋಪಯಿಷ್ಯಾಮಿ ಯದುಕ್ತಂ ಸ್ವಯಮೇವ ಹಿ ॥ ೩೫ ॥
ತತಃ ಪ್ರೋವಾಚ ತೇ ವಿಷ್ಣುಃ ಸ್ವಯಂ ಚಾಽಪಿ ಮಹೇಶ್ವರಃ ।
ತಥಾ ದೇವಗಣಾಃ ಸರ್ವೇ ವಿನಯಾಽವನತಾ ಸ್ಥಿತಾಃ ॥ ೩೬ ॥
ಅನ್ಯಥಾ ಬ್ರಹ್ಮಣೋ ವಾಕ್ಯಂ ನ ತೇ ಕರ್ತುಂ ಪ್ರಯುಜ್ಯತೇ ।
ತಸ್ಮಾತ್ಕುರುಷ್ವ ವಿಪ್ರೇಂದ್ರ ಶಾಪಸ್ಯಾನುಗ್ರಹಂ ಹರೇಃ ॥ ೩೭ ॥
ದೃಷ್ಟ್ವಾ ತನ್ಮನಸೋ ದಾರ್ಢ್ಯಂ ಸುರಾ ವಿಷ್ಣುಪುರೋಗಮಾಃ ।
ಬ್ರಹ್ಮಣೋಽಂತಿಕಮಭ್ಯೇತ್ಯ ತಸ್ಮೈ ಸರ್ವಂ ನ್ಯವೇದಯನ್ ॥ ೩೮ ॥
ಶಾಪಂ ಶಕ್ರಸ್ಯ ಸಂಜಾತಂ ತಥಾ ತಸ್ಮಾನ್ಮಹಾಮುನೇಃ ॥ ೩೯ ॥
ಯಥಾ ವಿಡಂಬನಾ ಜಾತಾ ದೇವರಾಜಸ್ಯ ಗರ್ಹಿತಾ ।
ತಥಾ ಚ ದಾನವೈಃ ಸರ್ವಂ ತ್ರೈಲೋಕ್ಯಂ ವ್ಯಾಕುಲೀಕೃತಂ ॥ ೪೦ ॥

---

೩೩. ಮುನಿಯೆ! ಈ ಇಂದ್ರನು ತ್ರೈಲೋಕ್ಯವನ್ನು ತ್ಯಜಿಸಿರುವುದರಿಂದ ಯಜ್ಞೋತ್ಸವವಿಲ್ಲದೆ ಈ ಮೂರು ಲೋಕಗಳನ್ನೂ ದಾನವರು ಪೀಡಿಸುತ್ತಿದ್ದಾರೆ.

೩೪. ಇವನು ಅತ್ಯಂತ ನಾಚಿಕೆಗೀಡಾಗಿ ರಾಜ್ಯವನ್ನಾಳಲು ಬಯಸುವುದಿಲ್ಲ. ಆದುದರಿಂದ ನನ್ನ ಮಾತಿನಂತೆ ಇವನನ್ನು ಅನುಗ್ರಹಿಸಿ ಮೊದಲಿನ ಹಾಗೆ ಆಗುವಂತೆ ಮಾಡು.

೩೫. ಅದನ್ನು ಕೇಳಿ ಗೌತಮನು, "ನನ್ನ ಮಾತು ಸುಳ್ಳಾಗುವುದಿಲ್ಲ. ನಾನು ಹೇಳಿದ ಮಾತನ್ನು ನಾನೇ ಕೆಡಿಸಲಾರೆನು" ಎಂದನು.

೩೬–೩೭. ಬಳಿಕ ವಿಷ್ಣುವೂ, ಮಹೇಶ್ವರನೂ, ವಿನೀತರಾದ ಸಕಲ ದಿವಿಜರೂ ಗೌತಮನನ್ನು ಕುರಿತು, ನಿನ್ನ ಮಾತನ್ನು ವ್ಯತ್ಯಾಸಗೊಳಿಸಲು ಸಾಧ್ಯವಿಲ್ಲ. ಆದುದರಿಂದ ಮುನಿಯೆ! ಇಂದ್ರನಿಗೆ ಅನುಗ್ರಹ ಮಾಡು ಎಂದರು.

೩೮–೪೪. ವಿಷ್ಣು ಮೊದಲಾದ ದೇವತೆಗಳು ಆ ಗೌತಮನ ಮನೋದಾರ್ಢ್ಯವನ್ನು ನೋಡಿ ಬ್ರಹ್ಮನ ಹತ್ತಿರ ಹೋಗಿ ಅವನಿಗೆ ಗೌತಮನಿಂದ ಇಂದ್ರನಿಗುಂಟಾದ ಶಾಪವನ್ನೂ, ಅವನ ನಿಂದ್ಯವಾದ ಸ್ಥಿತಿಯನ್ನೂ, ದಾನವರು ಮೂರು ಲೋಕಗಳನ್ನು ವ್ಯಾಕುಲಗೊಳಿಸಿರುವುದನ್ನೂ, ಲಜ್ಜೆಗೊಂಡ ಇಂದ್ರನು ರಾಜ್ಯ

ಯಥಾ ನ ಕುರುತೇ ರಾಜ್ಯಂ ವ್ರೀಡಿತಃ ಸ ಶಚೀಪತಿಃ ।
ತಚ್ಛ್ರುತ್ವಾ ಪದ್ಮಜಸ್ತೂರ್ಣಂ ಹರಿಶಂಭುಸಮನ್ವಿತಃ ॥ ೪೧ ॥
ಜಗಾಮ ತತ್ರ ಯತ್ರಾಸ್ತೇ ದುಃಖಿತಃ ಪಾಕಶಾಸನಃ ।
ಗೌತಮಂ ಚ ಸಮಾನೀಯ ತತ್ರೈವ ಚ ಪಿತಾಮಹಃ ॥ ೪೨ ॥
ತತಃ ಪ್ರೋವಾಚ ಪ್ರತ್ಯಕ್ಷಂ ದೇವಾನಾಂ ವಾಸವಸ್ಯ ಚ ।
ಅಯುಕ್ತಂ ದೇವರಾಜೇನ ವಿಹಿತಂ ಮುನಿಸತ್ತಮ ॥ ೪೩ ॥
ಯತ್ತೇ ಪ್ರದೂಷಿತಾ ಭಾರ್ಯಾ ಕಾಮೋಪಹತಚೇತಸಾ ।
ನ ತೇ ದೋಷೋಽಸ್ತಿ ಯಚ್ಛಪ್ತಶ್ಛಿದ್ರೇ ಚಾಽಸ್ಮಿನ್ಪುರಂದರಃ ।
ಪರಂ ಪ್ರಶಸ್ಯತೇ ನಿತ್ಯಂ ಮುನೀನಾಂ ಪರಮಾ ಕ್ಷಮಾ ॥ ೪೪ ॥
ಯಥಾ ತ್ರೈಲೋಕ್ಯರಾಜ್ಯಂ ಸ್ವಂ ಪ್ರಕರೋತಿ ಶತಕ್ರತುಃ ।
ತ್ವಯಾ ಸ್ವಯಂ ಪ್ರಸಾದೇನ ತಥಾ ನೀತಿರ್ವಿಧೀಯತಾಂ ॥ ೪೫ ॥
ದತ್ವಾಽಸ್ಯ ವೃಷಣೌ ಭೂಯೋ ನಾಶಯಿತ್ವಾ ಭಗಾನಿಮಾನ್ ।
ಮರ್ತ್ಯಲೋಕೇ ಗತಿಶ್ಚಾಽಸ್ಯ ಯಥಾ ಸ್ಯಾತ್ತತ್ಸಮಾಚರ ॥ ೪೬ ॥
ತಚ್ಛ್ರುತ್ವಾ ವಚನಂ ತೇಷಾಂ ಸ ಮುನಿರ್ದೇವ ಗೌರವಾತ್ ।
ವೃಷಣೌ ಮೇಷಸಂಭೂತೌ ಯೋಜಯಾಮಾಸ ತೌ ತದಾ ॥ ೪೭ ॥
ತಾನ್ ಭಗಾನ್ ಪಾಣಿನಾ ಸ್ಪೃಷ್ಟ್ವಾ ಚಕ್ರೇ ನೇತ್ರಾಣಿ ಸನ್ಮುನಿಃ ।
ತತಃ ಪ್ರೋವಾಚ ತಾನ್ ದೇವಾನ್ ಗೌತಮಶ್ಚ ಮಹಾತಪಾಃ ॥ ೪೮ ॥

---

ನಾಳದೆ ಇರುವುದನ್ನೂ ತಿಳಿಸಿದರು. ಬ್ರಹ್ಮನು ಅದನ್ನು ಕೇಳಿ ವಿಷ್ಣು ಶಿವರಿಂದ ಸಹಿತನಾಗಿ ಇಂದ್ರನಿರುವ ಕಡೆಗೆ ಹೋಗಿ ಗೌತಮನನ್ನು ಅಲ್ಲಿಗೆ ಕರೆಯಿಸಿ ಇಂದ್ರ ಮತ್ತು ಸಕಲ ದೇವತೆಗಳ ಮುಂದೆ ಇಂತೆಂದನು. "ಇಂದ್ರನು ಕಾಮ ಪರವಶನಾಗಿ ನಿನ್ನ ಭಾರ್ಯೆಯನ್ನು ಕೆಡಿಸಿ ಅಯೋಗ್ಯವಾದ ಕಾರ್ಯವನ್ನೆಸಗಿರು ವನು. ಈ ಅಪರಾಧಕ್ಕಾಗಿ ಇಂದ್ರನನ್ನು ಶಪಿಸಿದ ನಿನ್ನಲ್ಲಿ ತಪ್ಪಿಲ್ಲ. ಆದರೆ ಮುನಿಗಳಿಗೆ ಸಹನೆಯು ಶ್ಲಾಘ್ಯವಾದುದು.

೪೫. ಇಂದ್ರನು ತ್ರೈಲೋಕ್ಯ ರಾಜ್ಯವನ್ನು ಆಳುವಂತೆ ನ್ಯಾಯವನ್ನು ಏರ್ಪಡಿಸಿ ಅನುಗ್ರಹಿಸು.

೪೬. ಇವನಿಗೆ ವೃಷಣಗಳನ್ನಿತ್ತು ಈ ಭಗಗಳನ್ನು ನಿವಾರಿಸಿ ಭೂಲೋಕ ದಲ್ಲಿ ಸಂಚರಿಸುವಂತೆ ಮಾಡು."

೪೭. ಆ ಗೌತಮನು ದೇವತೆಗಳ ಮಾತುಗಳನ್ನು ಕೇಳಿ ಅವರಲ್ಲಿ ಗೌರವ ದಿಂದ ಇಂದ್ರನಿಗೆ ಮೇಕೆಯ ಅಂಡಕೋಶವನ್ನು ಸೇರಿಸಿದನು.

೪೮. ಆ ಯೋನಿಗಳನ್ನು ಕೈಯಿಂದ ಮುಟ್ಟಿ ನೇತ್ರಗಳನ್ನಾಗಿಸಿ ಆ ದೇವತೆ ಗಳನ್ನು ಕುರಿತು ಹೀಗೆಂದನು.

ಸಹಸ್ರಾಕ್ಷೋ ಮಯಾ ಶಕ್ರೋ ನಿರ್ಮಿತೋಽಯಂ ಸುರೋತ್ತಮಾಃ ।
ಸ ಮೇಷವೃಷಣಶ್ಚಾಽಪಿ ಸ್ವಂ ಚ ರಾಜ್ಯಂ ಕರಿಷ್ಯತಿ ।
ಶೋಭಾಽಸ್ಯ ನೇತ್ರಜಾ ವಕ್ತ್ರೇ ಸುರಮ್ಯಾ ಸಂಭವಿಷ್ಯತಿ ॥ ೪೯ ॥
ಪುಂಸ್ತ್ವಂ ಚ ಮೇಷಜೋತ್ಥಾಭ್ಯಾಂ ವೃಷಣಾಭ್ಯಾಂ ಭವಿಷ್ಯತಿ ।
ನ ಚ ಮರ್ತ್ಯೇ ಗತಿಶ್ಚಾಽಸ್ಯ ಪೂಜಾರ್ಥಂ ಸಂಭವಿಷ್ಯತಿ ॥ ೫೦ ॥
ಏತಸ್ಮಿನ್ನಂತರೇ ಜಾತಃ ಸಹಸ್ರಾಕ್ಷಃ ಪುರಂದರಃ ।
ಶೋಭಯಾ ಪರಯಾ ಯುಕ್ತೋ ಮುನೇಸ್ತಸ್ಯ ಪ್ರಭಾವತಃ ॥ ೫೧ ॥
ತತಃ ಸಂಗೃಹ್ಯ ಪಾದೌ ಚ ಗೌತಮಸ್ಯ ಮಹಾತ್ಮನಃ ।
ಪ್ರೋವಾಚ ವಚನಂ ಶಕ್ರಃ ಸರ್ವದೇವಸಮಾಗಮೇ ॥ ೫೨ ॥
ದುರ್ಲಭಾ ಮರ್ತ್ಯಲೋಕೋತ್ಥಾ ಪೂಜಾ ಬ್ರಾಹ್ಮಣಸತ್ತಮ ।
ಸಾ ಮೇ ತವ ಪ್ರಸಾದೇನ ಯಥಾ ಸ್ಯಾತ್ತತ್ಸಮಾಚರ ॥ ೫೩ ॥
ತ್ರೈಲೋಕ್ಯಪತಿಜಾಸಂಜ್ಞಾ ಮಾ ನಾಶಂ ಯಾತು ಮೇ ದ್ವಿಜ ।
ಪ್ರಸಾದಾತ್ತವ ಸಾ ನಿತ್ಯಂ ಯಥಾ ಸ್ಯಾತ್ತದ್ವಿಧೀಯತಾಂ ॥ ೫೪ ॥
ತಚ್ಛ್ರುತ್ವಾ ಲಜ್ಜಯಾವಿಷ್ಟಃ ಕೃಪಯಾಚಾಽಥ ಸನ್ಮುನಿಃ ।
ತಮಾಹ ಸರ್ವದೇವಾನಾಂ ಪ್ರತ್ಯಕ್ಷಂ ಪಾಕಶಾಸನಂ ॥ ೫೫ ॥

---

೪೯. "ಸುರವರ್ಯರೆ! ನಾನು ಈ ಇಂದ್ರನನ್ನು ಸಹಸ್ರಾಕ್ಷನನ್ನಾಗಿಯೂ, ಮೇಷವೃಷಣವುಳ್ಳವನನ್ನಾಗಿಯೂ ಮಾಡಿದ್ದೇನೆ. ಇವನು ಸ್ವರಾಜ್ಯವನ್ನಾಳುವನು. ಇವನ ಮುಖದಲ್ಲಿ ಕಣ್ಣುಗಳಿಂದ ರಮ್ಯವಾದ ಸೌಂದರ್ಯವುಂಟಾಗುವುದು.

೫೦. ಇವನಿಗೆ ಮೇಷದ ಅಂಡಕೋಶಗಳಿಂದಲೇ ಪುಂಸ್ತ್ವವುಂಟಾಗುವುದು. ಆದರೆ ಪೂಜೆಗಾಗಿ ಭೂಲೋಕಕ್ಕೆ ಹೋಗಲು ಸಮರ್ಥನಾಗುವುದಿಲ್ಲ."

೫೧. ಇಷ್ಟರಲ್ಲಿ ಇಂದ್ರನು ಆ ಗೌತಮನ ಪ್ರಭಾವದಿಂದ ಸಹಸ್ರಾಕ್ಷನೂ, ಅತ್ಯಂತ ಕಾಂತಿಯುಳ್ಳವನೂ ಆದನು.

೫೨. ಬಳಿಕ ಇಂದ್ರನು ಮಹಾತ್ಮನಾದ ಗೌತಮನ ಚರಣಗಳನ್ನು ಹಿಡಿದುಕೊಂಡು ಸಕಲ ದೇವತೆಗಳ ಪ್ರತ್ಯಕ್ಷದಲ್ಲಿ ಇಂತೆಂದನು.

೫೩. "ಮುನಿವರ್ಯನೆ! ಭೂಲೋಕದ ಪೂಜೆಯು ದುರ್ಲಭವಾದುದು. ಅದು ನಿನ್ನ ಅನುಗ್ರಹದಿಂದ ಲಭಿಸುವಂತೆ ಮಾಡು.

೫೪. ಮುನಿಯೆ! ನನ್ನ ತ್ರೈಲೋಕ್ಯಾಧಿಪತಿಯೆಂಬ ಹೆಸರು ಅಳಿಯದಿರಲಿ. ಅದು ನಿನ್ನ ಅನುಗ್ರಹದಿಂದ ಉಂಟಾಗುವಂತೆ ಮಾಡು."

೫೫. ಅದನ್ನು ಕೇಳಿ ಲಜ್ಜಿತನೂ, ದಯೆಗೊಂಡವನೂ ಆದ ಆ ಗೌತಮನು ಸಮಸ್ತ ದೇವತೆಗಳ ಮುಂದೆ ದೇವರಾಜನನ್ನು ಕುರಿತು ಹೀಗೆಂದನು.

ಪಂಚರಾತ್ರಂ ಚ ತೇ ಪೂಜಾ ಮರ್ತ್ಯಲೋಕೇ ಭವಿಷ್ಯತಿ ।
ಅನನ್ಯಾಂ ತೃಪ್ತಿಮಭ್ಯೇಷಿ ಯಥಾ ಚೈವ ತು ವತ್ಸರಂ ॥ ೫೬ ॥
ಯತ್ರ ದೇಶೇ ಪುರೇ ಗ್ರಾಮೇ ಪಂಚರಾತ್ರಂ ಮಹೋತ್ಸವಃ ।
ತತ್ರ ಸಂವತ್ಸರಂ ಯಾವನ್ನೀರೋಗೋ ಭವಿತಾ ಜನಃ ॥ ೫೭ ॥
ಆಧಯೋ ವ್ಯಾಧಯೋ ನೈವ ನ ದುರ್ಭಿಕ್ಷಂ ಕಥಂಚನ ।
ನ ಚ ರಾಜ್ಞೋ ವಿನಾಶಃ ಸ್ಯಾನ್ನೈವ ಲೋಕೇಽಸುಖಂ ಕ್ವಚಿತ್ ॥ ೫೮ ॥
ಯತ್ರಸ್ಥಾನೇ ಮಹೋ ಭಾವೀ ತಾವಕಶ್ಚ ಪುರಂದರ ।
ಪ್ರಭೂತಪಯಸೋ ಗಾವಃ ಪ್ರಭವಿಷ್ಯಂತಿ ತತ್ರ ಚ ।
ಸುಭಿಕ್ಷಂ ಸುಖಿನೋ ಲೋಕಾಃ ಸರ್ವೋಪದ್ರವವರ್ಜಿತಾಃ ॥ ೫೯ ॥

ಇಂದ್ರ ಉವಾಚ :—

ಯದ್ಯೇವಂ ಶರದಿ ಪ್ರಾಪ್ತೇ ಸರ್ವಸತ್ವಮನೋಹರೇ ।
ಸಪ್ತಚ್ಛದ ಸಮಾಕೀರ್ಣೇ ಬಂಧೂಕ ಸುವಿರಾಜಿತೇ ॥ ೬೦ ॥
ಮಾಲತೀಗಂಧ ಸಂಕೀರ್ಣೇ ನವಸಸ್ಯ ಸಮಾಕುಲೇ ।
ಚಂದ್ರಜ್ಯೋತ್ಸ್ನಾ ಕೃತೋದ್ಯೋತೇ ಷಟ್‌ಪದಾರಾವ ಸಂಕುಲೇ ॥ ೬೧ ॥
ಕುಮುದೋತ್ಪಲಸಂಯುಕ್ತೇ ತತ್ರ ಸ್ಯಾತ್ಸುಮಹೋತ್ಸವಃ ।
ಯೇನ ಬಾಲೋಽಪಿ ವೃದ್ಧೋಽಪಿ ಸಂಹೃಷ್ಟಸ್ತತ್ಸಮಾಚರ ॥ ೬೨ ॥

---

೫೬. "ನಿನಗೆ ಐದು ರಾತ್ರಿ ಮಾತ್ರ ಭೂಲೋಕದಲ್ಲಿ ಪೂಜೆಯು ಲಭಿಸುವುದು. ಅದರಿಂದ ನೀನು ಒಂದು ವರ್ಷಕಾಲ ಪೂಜೆ ಮಾಡಿಸಿಕೊಂಡವನಂತೆ ಅಸಾಧಾರಣ ತೃಪ್ತಿಯನ್ನು ಪಡೆಯುವೆ.

೫೭. ಯಾವ ದೇಶ, ನಗರ, ಗ್ರಾಮಗಳಲ್ಲಿ ಐದು ರಾತ್ರಿ ನಿನ್ನ ಉತ್ಸವವು ನಡೆಯುವುದೊ ಅಲ್ಲಿ ಜನರು ಒಂದು ವರ್ಷಕಾಲ ರೋಗವಿಲ್ಲದವರಾಗುವರು.

೫೮–೫೯. ಆದಿವ್ಯಾಧಿಗಳೂ, ದುರ್ಭಿಕ್ಷವೂ ಉಂಟಾಗುವುದಿಲ್ಲ. ರಾಜನು ಮಡಿಯುವುದಿಲ್ಲ. ಎಲ್ಲಿಯೂ ದುಃಖವುಂಟಾಗುವುದಿಲ್ಲ. ನಿನ್ನ ಉತ್ಸವವು ನಡೆದ ಸ್ಥಳದಲ್ಲಿ ಗೋವುಗಳು ಹೆಚ್ಚು ಹಾಲನ್ನು ಕೊಡುವುವೂ, ಸುಭಿಕ್ಷವೂ, ಜನರು ಯಾವ ಉಪದ್ರವವಿಲ್ಲದೆ ಸುಖಿಗಳೂ ಆಗುವರು."

೬೦–೬೨. ಇಂದ್ರನು ಹೇಳುತ್ತಾನೆ:—ಹೀಗಾದರೆ ಸಮಸ್ತ ಪ್ರಾಣಿಗಳಿಗೆ ಮನೋಹರವೂ, ಸಪ್ತಚ್ಛದಗಳಿಂದ ತುಂಬಿರುವುದೂ, ಬಂಧೂಕ ಕುಸುಮಗಳಿಂದ ವಿರಾಜಿಸುವುದೂ, ಜಾಜಿಹೂವಿನಿಂದ ಸುವಾಸನೆಯಾಗಿರುವುದೂ, ಹೊಸ ಸಸ್ಯಗಳಿಂದ ವ್ಯಾಪ್ತವೂ, ಬೆಳದಿಂಗಳಿಂದ ಪ್ರಕಾಶಗೊಂಡುದೂ, ತುಂಬಿಗಳ ಧ್ವನಿಯಿಂದ ತುಂಬಿರುವುದೂ, ನೈದಿಲೆ ಕನ್ನೈದಿಲೆಗಳಿಂದ ಸಹಿತವೂ ಆದ ಶರತ್ಕಾಲದಲ್ಲಿ ನನ್ನ ಉತ್ಸವವು ನಡೆಯಲಿ. ಅದರಿಂದ ಆಬಾಲವೃದ್ಧರೂ ಸಂತೋಷಗೊಳ್ಳುವರು. ಆದುದರಿಂದ ಹಾಗೆ ಮಾಡು.

ಗೌತಮ ಉವಾಚ:—
ಅದ್ಯ ಶ್ರವಣನಕ್ಷತ್ರೇ ತವ ದತ್ತೋ ಮಹೋತ್ಸವಃ ।
ವೈಷ್ಣವೇ ಪುಣ್ಯನಕ್ಷತ್ರೇ ಸರ್ವಪಾಪ ವಿವರ್ಜಿತೇ ॥ ೬೩ ॥
ತ್ವಯಾ ಮೇ ಧರ್ಷಿತಾ ಭಾರ್ಯಾ ಪೌಷ್ಣೇ ನಕ್ಷತ್ರ ಸಂಜ್ಞಿತೇ ।
ತಸ್ಮಿನ್ ಭವಿಷ್ಯತಿ ವ್ಯಕ್ತಂ ತವ ಪಾತಃ ಪುರಂದರ ॥ ೬೪ ॥
ಯೇನೈಷಾ ಮಾಮಕೀ ಕೀರ್ತಿಸ್ತಾವಕಂ ವಕ್ತು ಕರ್ಮ ತತ್ ।
ವಿಖ್ಯಾತಿಂ ಯಾತು ಲೋಕೇಽತ್ರ ನ ಕಶ್ಚಿತ್ಪಾಪಮಾಚರೇತ್ ॥ ೬೫ ॥
ಶ್ರವಣಾದೀನಿ ಪಂಚೈವ ನಕ್ಷತ್ರಾಣಿ ಪೃಥಕ್ ಪೃಥಕ್ ।
ತವ ಪೂಜಾಕೃತೇ ಪಂಚ ಕ್ರತುತುಲ್ಯಾನಿ ತಾನಿ ಚ ।
ಭವಿಷ್ಯಂತಿ ನ ಸಂದೇಹಃ ಸರ್ವತೀರ್ಥಮಯಾನಿ ಚ ॥ ೬೬ ॥
ಯೋ ಯಂ ಕಾಮಮಭಿಧ್ಯಾಯ ಪೂಜಾಂ ತವ ಕರಿಷ್ಯತಿ ।
ವಿಶೇಷಾತ್ಫಲಪುಷ್ಪೈಶ್ಚ ಸ ತಂ ಕೃತ್ಸ್ನಮವಾಪ್ನುಯಾತ್ ॥ ೬೭ ॥
ಪರಂ ಮೂರ್ತಿರ್ನ ತೇ ಪೂಜ್ಯಾ ಕುತ್ರಾಽಪಿ ಚ ಭವಿಷ್ಯತಿ ।
ತ್ವಯಾ ಮೇ ದೂಷಿತಾ ಭಾರ್ಯಾ ಬ್ರಾಹ್ಮಣೀ ಪ್ರಾಣಸಮ್ಮತಾ ॥ ೬೮ ॥
ತಸ್ಮಾದ್ವೃಕ್ಷೋದ್ಭವಾಂ ಯಷ್ಟಿಂ ಬ್ರಾಹ್ಮಣಾ ವೇದಪಾರಗಾಃ ।
ತಾವಕೈಃ ಸಕಲೈರ್ಮಂತ್ರೈಃ ಸ್ಥಾಪಯಿಷ್ಯಂತಿ ಶಕ್ತಿತಃ ॥ ೬೯ ॥

---

೬೩. ಗೌತಮನು ಹೇಳುತ್ತಾನೆ:—ನಿನಗೆ ಈ ವಿಷ್ಣುದೇವತಾಕವೂ, ಸಮಸ್ತ ಪಾಪರಹಿತವೂ ಆದ ಶ್ರವಣ ನಕ್ಷತ್ರದಲ್ಲಿ ಉತ್ಸವವನ್ನು ಕೊಟ್ಟಿರುವೆನು.

೬೪. ಇಂದ್ರ! ನೀನು ನನ್ನ ಪತ್ನಿಯನ್ನು ಪೌಷ್ಣ ನಕ್ಷತ್ರದಲ್ಲಿ ಕೆಡಿಸಿರುವೆ. ಅದರಲ್ಲಿ ನಿನ್ನ ಪಾತಕವು ವ್ಯಕ್ತವಾಗುವುದು.

೬೫. ಅದರಿಂದ ನನ್ನ ಕೀರ್ತಿಯು ನಿನ್ನ ಕರ್ಮವನ್ನು ತಿಳಿಸಿ ಲೋಕದಲ್ಲಿ ವಿಖ್ಯಾತವಾಗಲಿ. ಈ ಲೋಕದಲ್ಲಿ ಯಾರೂ ಪಾಪವನ್ನಾಚರಿಸದಿರಲಿ.

೬೬. ಶ್ರವಣ ಮೊದಲಾದ ಐದು ನಕ್ಷತ್ರಗಳು ನಿನ್ನ ಪೂಜೆಗೆ ವಿಹಿತವಾಗಿರುವುವು. ಅವು ಯಜ್ಞಕ್ಕೆ ಸಮಾನಗಳೂ, ಸಕಲ ತೀರ್ಥರೂಪಗಳೂ ಆಗುವುವು.

೬೭. ಯಾವ ಮನುಷ್ಯನು ಯಾವ ಇಷ್ಟಾರ್ಥವನ್ನು ಚಿಂತಿಸಿ ಫಲಪುಷ್ಪಗಳಿಂದ ನಿನ್ನ ಪೂಜೆಯನ್ನು ವಿಶೇಷವಾಗಿ ಮಾಡುವನೊ, ಅವನು ಆ ಅಭೀಷ್ಟವನ್ನು ಹೊಂದುವನು.

೬೮. ನೀನು ನನ್ನ ಪ್ರಾಣದಂತಿರುವ ಪತ್ನಿಯನ್ನು ಕೆಡಿಸಿರುವುದರಿಂದ ನಿನ್ನ ಈ ಮೂರ್ತಿಯು ಎಲ್ಲಿಯೂ ಪೂಜ್ಯವಾಗುವುದಿಲ್ಲ.

೬೯—೭೦. ಆದುದರಿಂದ ವೇದಪಾರಂಗತರಾದ ಬ್ರಾಹ್ಮಣರು ಮರದ ದೊಣ್ಣೆಯನ್ನು ನಿನ್ನ ಸಕಲ ಮಂತ್ರಗಳಿಂದ ಇತರ ದೇವತೆಗಳ ಪ್ರತಿಮೆಯನ್ನು

ಪಂಚರಾತ್ರವಿಧಾನೇನ ಯಥಾಽನ್ಯೇಷಾಂ ದಿವೌಕಸಾಂ ।
ತತಃ ಸಂಕ್ರಮಣಂ ಕೃತ್ವಾ ಪೂಜಾ ಮರ್ತ್ಯಸಮುದ್ಭವಾ ।
ತ್ವಯಾ ಗ್ರಾಹ್ಯಾ ಸಹಸ್ರಾಕ್ಷ ತೃಪ್ತಿಶ್ಚೈವ ಭವಿಷ್ಯತಿ ॥ ೨೦ ॥
ಯೋ ಯಥಾ ಚೈವ ತೇ ಯಷ್ಟಿಂ ಸುಪ್ತಾಮುತ್ಥಾಪಯಿಷ್ಯತಿ ।
ತಸ್ಯ ತಸ್ಯಾಧಿಕಾ ಸಿದ್ಧಿಃ ಸಂಭವಿಷ್ಯಂತಿ ವಾಸವ ॥ ೨೧ ॥
ಪಂಚರಾತ್ರವ್ರತಸ್ಥೋ ಯೋ ಬ್ರಹ್ಮಚರ್ಯಪರಾಯಣಃ ।
ಪ್ರಕರಿಷ್ಯತಿ ತೇ ಪೂಜಾಂ ಫಲಪುಷ್ಪೈರ್ಯಥೋದಿತೈಃ ॥ ೨೨ ॥
ಪರದಾರಕೃತಾತ್ಪಾಪಾತ್ಸಸರ್ವಾನ್ಮುಕ್ತಿಮೇಷ್ಯತಿ ॥ ೨೩ ॥
ನಮಃ ಶಕ್ರಾಯ ದೇವಾಯ ಶುನಾಸೀರಾಯ ತೇ ನಮಃ ।
ನಮಸ್ತೇ ವಜ್ರಹಸ್ತಾಯ ನಮಸ್ತೇ ವಜ್ರಪಾಣಯೇ ॥ ೨೪ ॥
ಮಂತ್ರೇಣಾಽನೇನ ಯಶ್ಚಾಽರ್ಘ್ಯಂ ತವ ಶಕ್ರ ಪ್ರದಾಸ್ಯತಿ ।
ಪರದಾರಕೃತಂ ಪಾಪಂ ತಸ್ಯ ಸರ್ವಂ ಪ್ರಯಾಸ್ಯತಿ ॥ ೨೫ ॥
ಯಶ್ಚೇದಂ ತವ ಸಂವಾದಂ ಮಯಾ ಸಾರ್ಧಂ ಪುರಂದರ ।
ಕೀರ್ತಯಿಷ್ಯತಿ ಸದ್ಭಕ್ತ್ಯಾ ತಥೈವಾಕರ್ಣಯಿಷ್ಯತಿ ॥ ೨೬ ॥
ತಸ್ಯ ಸಂವತ್ಸರಂ ಯಾವನ್ನೈವರೋಗೋ ಭವಿಷ್ಯತಿ ।
ತಚ್ಛ್ರುತ್ವಾ ವಿಬುಧಾಃ ಸರ್ವೇ ತಥೇತ್ಯುಕ್ತ್ವಾ ಪ್ರಹರ್ಷಿತಾಃ ॥ ೨೭ ॥

---

ಸ್ಥಾಪಿಸುವಂತೆ ಪಂಚರಾತ್ರ ವಿಧಿಯಿಂದ ಸ್ಥಾಪಿಸುವರು. ಅನಂತರ ನೀನು ಅದರಲ್ಲಿ ಸನ್ನಿಹಿತನಾಗಿ ಮನುಷ್ಯರ ಪೂಜೆಯನ್ನು ಸ್ವೀಕರಿಸು. ಅದರಿಂದ ನೀನು ತೃಪ್ತಿಗೊಳ್ಳುವೆ.

೨೧. ಇಂದ್ರ! ಕೆಳಗೆ ಬಿದ್ದ ನಿನ್ನ ಯಷ್ಟಿಯನ್ನು ಯಾವನು ಎತ್ತುವನೊ, ಅವನಿಗೆ ಅಧಿಕ ಸಿದ್ಧಿಯುಂಟಾಗುವುದು.

೨೨–೨೩. ಪಂಚರಾತ್ರ ವ್ರತಸ್ಥನೂ, ಬ್ರಹ್ಮಚರ್ಯನಿರತನೂ ಆಗಿ ಫಲಪುಷ್ಪಗಳಿಂದ ನಿನ್ನನ್ನು ಪೂಜಿಸಿದವನು ಸಮಗ್ರವಾಗಿ ಪರಪತ್ನೀಗಮನದಿಂದುಂಟಾದ ಪಾಪದಿಂದ ಮುಕ್ತನಾಗುವನು.

೨೪. ಶಕ್ರನಿಗೂ, ಶುನಾಸೀರನಿಗೂ, ವಜ್ರಹಸ್ತನಿಗೂ, ವಜ್ರಪಾಣಿಗೂ ನಮಸ್ಕಾರವು.

೨೫. ಈ ಮಂತ್ರದಿಂದ ನಿನಗೆ ಅರ್ಘ್ಯವನ್ನಿತ್ತವನ ಪರದಾರಸಂಗದ ಪಾಪವು ಪೂರ್ತಿಯಾಗಿ ನೀಗುವುದು.

೨೬–೨೮. ದೇವೇಂದ್ರ! ನಮ್ಮಿಬ್ಬರ ಈ ಸಂಭಾಷಣೆಯನ್ನು ಹೇಳುವವನಿಗೂ, ಕೇಳುವವನಿಗೂ ಒಂದು ವರ್ಷಕಾಲ ರೋಗವುಂಟಾಗುವುದಿಲ್ಲ.

ಜಗ್ಮುಃ ಶಕ್ರಂ ಸಮಾದಾಯ ಪುನರೇವಾಽಮರಾವತೀಂ ।
ಗೌತಮೋಽಪಿ ನಿಜಾವಾಸಂ ಗತ ಕೋಪಃ ಸಮಾಶ್ರಿತಃ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಇಂದ್ರಮಹೋತ್ಸವವರ್ಣನಂ" ನಾಮ
ಸಪ್ತೋತ್ತರದ್ವಿಶತತಮೋಽಧ್ಯಾಯಃ

---

ಸಮಸ್ತ ದೇವತೆಗಳು ಅದನ್ನು ಕೇಳಿ ಹಾಗೆಯೇ ಆಗಲೆಂದು ಸಂತೋಷದಿಂದ ಇಂದ್ರನನ್ನು ಕರೆದುಕೊಂಡು ಅಮರಾವತಿಗೆ ತೆರಳಿದರು. ಗೌತಮನೂ ಕೋಪವನ್ನು ಕಳೆದು ತನ್ನ ವಾಸಸ್ಥಳಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಇಂದ್ರಮಹೋತ್ಸವವರ್ಣನ"ವೆಂಬ
ಇನ್ನೂರಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟೋತ್ತರದ್ವಿಶತತಮೋಽಧ್ಯಾಯಃ

### ಗೌತಮೇಶ್ವರಾಽಹಲ್ಯೇಶ್ವರ ಶತಾನಂದೇಶ್ವರಮಾಹಾತ್ಮ್ಯವರ್ಣನಂ

ವಿಶ್ವಾಮಿತ್ರ ಉವಾಚ :—

ಏವಂ ಶಕ್ರೇ ದಿವಂ ಪ್ರಾಪ್ತೇ ದೇವೇಷು ಸಕಲೇಷು ಚ ।
ಗೌತಮಃ ಸ್ವಾಶ್ರಮಂ ಪ್ರಾಪತ್ಕೋಪೇನ ಮಹತಾಜ್ವಲನ್ ॥ ೧ ॥
ತತಃ ಸ ಕಥಯಾಮಾಸ ಸರ್ವಂ ದೇವ ವಿಚೇಷ್ಟಿತಂ ।
ವರದಾನಂ ಚ ಶಕ್ರಾಯ ಶತಾನಂದಸ್ಯ ಚಾಽಗ್ರತಃ ॥ ೨ ॥
ತಚ್ಛ್ರುತ್ವಾ ಪಿತರಂ ಪ್ರಾಹ ವಿನಯಾಽವನತಃ ಸ್ಥಿತಃ ।
ತಾತಾಂಬಾಯಾ ನಕಸ್ಮಾತ್ತ್ವಂ ಪ್ರಸಾದಂ ಪ್ರಕರೋಷಿ ಮೇ ॥ ೩ ॥
ಉತ್ಥಾಪನೇ ನ ತೇ ಕಿಂಚಿದಸಾಧ್ಯಂ ವಿದ್ಯತೇ ವಿಭೋ ।
ತಸ್ಮಾತ್ಕುರು ಪ್ರಸಾದಂ ಮೇ ಯಥಾ ಸ್ಯಾನ್ಮಮ ಚಾಂಬಯಾ ॥ ೪ ॥
ಸಮಾಗಮೋ ಮುನಿಶ್ರೇಷ್ಠ ದೀನಸ್ಯೋತ್ಕಂಠಿತಸ್ಯ ಚ ।
ತಸ್ಮಾದುತ್ಥಾಪ್ಯ ತಾಂ ತೂರ್ಣಂ ಪ್ರಾಯಶ್ಚಿತ್ತವಿಧಿಂ ತತಃ ।
ತಸ್ಮಾದಾದಿಶ ಮೇ ಕ್ಷಿಪ್ರಂ ಯೇನ ಶುದ್ಧಿಃ ಪ್ರಜಾಯತೇ ॥ ೫ ॥

---

### ಕನ್ನಡದ ಅನುವಾದ

#### ಗೌತಮಾಹಲ್ಯಾಶತಾನಂದೇಶ್ವರಮಾಹಾತ್ಮ್ಯವರ್ಣನ

೧. ವಿಶ್ವಾಮಿತ್ರನು ಹೇಳುತ್ತಾನೆ :—ಹೀಗೆ ಇಂದ್ರನೂ, ಸಮಸ್ತ ದೇವತೆಗಳೂ ದೇವಲೋಕಕ್ಕೆ ತೆರಳಲು ಗೌತಮನು ಅತ್ಯಂತ ಕೋಪದಿಂದ ಜ್ವಲಿಸುತ್ತ ತನ್ನ ಆಶ್ರಮವನ್ನು ಸೇರಿದನು.

೨. ಬಳಿಕ ಅವನು ದೇವತೆಗಳ ಸಕಲ ಕಾರ್ಯಗಳನ್ನೂ, ಇಂದ್ರನಿಗೆ ವರವನ್ನು ಕೊಟ್ಟುದನ್ನೂ ಶತಾನಂದನ ಮುಂದೆ ಹೇಳಿದನು.

೩. ಆ ಶತಾನಂದನು ಅದನ್ನು ಕೇಳಿ ತಂದೆಯನ್ನು ಕುರಿತು ವಿನಯದಿಂದ ಅಪ್ಪ! ನೀನು ನನ್ನ ತಾಯಿಗೆ ಏಕೆ ಅನುಗ್ರಹ ಮಾಡುವುದಿಲ್ಲ.

೪–೫. ಅವಳನ್ನು ಮೇಲಕ್ಕೆಬ್ಬಿಸುವುದು ನಿನಗೆ ಅಸಾಧ್ಯವಾದುದಲ್ಲ. ಆದುದರಿಂದ ನೀನು ದೀನನೂ, ಉತ್ಕಂಠಿತನೂ ಆದ ನನಗೆ ತಾಯಿಯ ಸಮಾಗಮವು ಆಗುವಂತೆ ಅನುಗ್ರಹ ಮಾಡು. ಆದರಿಂದ ಆಕೆಯನ್ನು ಬೇಗನೆ ಎಬ್ಬಿಸಿ ಶುದ್ಧಳಾಗಲು ಪ್ರಾಯಶ್ಚಿತ್ತವನ್ನು ವಿಧಿಸು.

ಗೌತಮ ಉವಾಚ:—

ಮದ್ಯಾವಲಿಪ್ತಭಾಂಡಸ್ಯ ಯದಿ ಶುದ್ಧಿಃ ಪ್ರಜಾಯತೇ ।
ತತ್ಸ್ತ್ರೀಣಾಂ ಜಾಯತೇ ಶುದ್ಧಿರ್ಯೋನೌ ಘುಕ್ರಾಽಭಿಷೇಚನಾತ್ ॥ ೬ ॥
ಬ್ರಾಹ್ಮಣಸ್ತು ಸುರಾಂ ಪೀತ್ವಾ ಮೌಂಜೀಹೋಮೇನ ಶುಧ್ಯತಿ ।
ತಿಂಗಿನೀಂ ಸಾಧಯಿತ್ವಾ ಚ ನ ತು ನಾರೀ ವಿಧರ್ಮಿತಾ ॥ ೭ ॥
ಮದ್ಯಭಾಂಡಮಪಿ ಪ್ರಾಯೋ ಯಥಾವದ್ವಹ್ನಿಶೋಧಿತಂ ।
ವಿಶುಧ್ಯತಿ ತಥಾ ನಾರೀ ವಹ್ನಿದಗ್ಧಾ ವಿಶುಧ್ಯತಿ ।
ಯಸ್ಯಾ ರೇತೋಽಥ ಸಂಕ್ರಾಂತಮುದರಾಂತೇಽನ್ಯಸಂಭವಂ ॥ ೮ ॥
ಏತಸ್ಮಾತ್ಕಾರಣಾನ್ಮಾತಾ ಮಯಾ ತೇ ಪುತ್ರ ಸಾ ಶಿಲಾ ।
ವಿಹಿತಾ ನ ಹಿ ತಸ್ಯಾಶ್ಚ ವಿಶುದ್ಧಿಸ್ತು ಕಥಂಚನ ॥ ೯ ॥

ಶತಾನಂದ ಉವಾಚ:—

ಯದ್ಯೇವಂ ಸಾಧಯಿಷ್ಯಾಮಿ ತತ್ಕೃತೇಽಹಂ ಹುತಾಶನಂ ।
ವಿಷಂ ವಾ ಭಕ್ಷಯಿಷ್ಯಾಮಿ ಪತಿಷ್ಯಾಮಿ ಜಲಾಶಯೇ ॥ ೧೦ ॥
ಮಾತುರ್ವಿಯೋಗತಸ್ತಾತ ಸತ್ಯಮೇತನ್ಮಯೋದಿತಂ ।
ಧರ್ಮದ್ರೋಣಾಃ ಸ್ಥಿತಾಶ್ಚಾಽನ್ಯೇ ಮನ್ವಾದ್ಯಾ ಮುನಯಸ್ತಥಾ ॥ ೧೧ ॥

---

೬. ಗೌತಮನು ಹೇಳುತ್ತಾನೆ:—ಮದ್ಯದಿಂದ ಲಿಪ್ತವಾದ ಪಾತ್ರೆಯು ಶುದ್ಧವಾಗುವುದಾದರೆ ವ್ಯಭಿಚಾರಿಣಿಯಾದ ಹೆಂಗಸೂ ಶುದ್ಧಳಾಗುವಳು.

೭. ಮದ್ಯಪಾನ ಮಾಡಿದ ಬ್ರಾಹ್ಮಣನು ಮೌಂಜೀ ಹೋಮದಿಂದ ಶುದ್ಧನಾಗುವನು. ಪರಪುರುಷನಿಂದ ದೂಷಿತಳಾದ ಸ್ತ್ರೀಯು ತಿಂಗಿನೀ ಪ್ರಾಯಶ್ಚಿತ್ತದಿಂದಲೂ ಶುದ್ಧಳಾಗುವುದಿಲ್ಲ.

೮. ಹೆಂಡದ ಪಾತ್ರೆಯು ಬೆಂಕಿಯಿಂದ ಶುದ್ಧವಾಗುವಂತೆ ವ್ಯಭಿಚಾರಿಣಿಯು ವಹ್ನಿಯಿಂದ ದಗ್ಧಳಾಗಿ ಶುದ್ಧಳಾಗುವಳು.

೯. ಮಗು! ಈ ಕಾರಣದಿಂದ ನಾನು ನಿನ್ನ ತಾಯಿಯನ್ನು ಶಿಲೆಯಾಗಿ ಮಾಡಿದೆನು. ಅವಳಿಗೆ ಯಾವ ರೀತಿಯಿಂದಲೂ ಶುದ್ಧಿಯಿಲ್ಲ.

೧೦–೧೧. ಶತಾನಂದನು ಹೇಳುತ್ತಾನೆ:—ಹೀಗಾದರೆ ನಾನು ತಾಯಿಯ ವಿಯೋಗವನ್ನು ಸಹಿಸಲಾರದೆ ಅವಳಿಗಾಗಿ ಅಗ್ನಿಯನ್ನು ಪ್ರವೇಶಿಸುವೆನು. ಅಥವಾ ವಿಷವನ್ನು ಕುಡಿಯುವೆನು. ಅಥವಾ ನೀರಿನಲ್ಲಿ ಬೀಳುವೆನು. ಅಪ್ಪ! ನಾನು ಹೇಳಿರುವುದು ನಿಜ. ಧರ್ಮಶಾಸ್ತ್ರಪ್ರವರ್ತಕರಾದ ಮನ್ವಾದಿ ಮುನಿಗಳೂ, ಇತಿಹಾಸ ಪುರಾಣಗಳೂ, ಅನೇಕ ವೇದಾಂತಗಳೂ ಇರುವುವು. ಅವು

ಇತಿಹಾಸ ಪುರಾಣಾನಿ ವೇದಾಂತಾನಿ ಬಹೂನಿ ಚ ।
ಸಂಚಿಂತ್ಯ ತಾತ ಸರ್ವಾಣಿ ದೇಹಿಶುದ್ಧಿಂ ಮಮಾಪಿ ತಾಂ ।
ಮಮ ಮಾತುಃ ಕರಿಷ್ಯಾಮಿ ನೋ ಚೇತ್ಪ್ರಾಣಪರಿಕ್ಷಯಂ ॥ ೧೨ ॥

ವಿಶ್ವಾಮಿತ್ರ ಉವಾಚ:—

ತಚ್ಛ್ರುತ್ವಾ ಸುಚಿರಂ ಧ್ಯಾತ್ವಾ ಗೌತಮಃ ಪ್ರಾಹ ತಂ ಸುತಂ ।
ಪರಿಷ್ವಜ್ಯ ಸ್ವಬಾಹುಭ್ಯಾಂ ಮೂರ್ಧ್ನ್ಯಾಘ್ರಾಯ ತತಃ ಪರಂ ॥ ೧೩ ॥
ಯದ್ಯೇವಂ ವತ್ಸ ಮಾಕಾರ್ಷೀಃ ಸಾಹಸಂ ಪಾಪಸಂಭವಂ ।
ಆತ್ಮದೇಹ ವಿಘಾತೇನ ಶ್ರೂಯತಾಂ ವಚನಂ ಮಮ ॥ ೧೪ ॥
ಮೇಧ್ಯತ್ವೇ ತವ ಮಾತುಶ್ಚ ಶುದ್ಧಿರ್ಜ್ಞಾತಾ ಮಯಾ ಪುರಾ ।
ಯಯಾ ಸಾ ಮಮ ಹರ್ಮ್ಯಾರ್ಹಾ ಭವಿಷ್ಯತಿ ನ ಸಂಶಯಃ ॥ ೧೫ ॥
ಉತ್ಪತ್ಸ್ಯತೇ ರವೇರ್ವಂಶೇ ರಾಮರೂಪೀ ಜನಾರ್ದನಃ ।
ರಾವಣಸ್ಯ ವಧಾರ್ಥಾಯ ಮಾನುಷಂ ರೂಪಮಾಸ್ಥಿತಃ ॥ ೧೬ ॥
ತಸ್ಯ ಪಾದಸ್ಯ ಸಂಸ್ಪರ್ಶಾದ್ಭೂಯಃ ಶುದ್ಧಾ ಭವಿಷ್ಯತಿ ।
ತಸ್ಮಾತ್ಪ್ರತೀಕ್ಷ್ಯ ತಾವತ್ತ್ವಮೌತ್ಸುಕ್ಯಂ ವ್ರಜ ಪುತ್ರಕ ॥ ೧೭ ॥
ಏತತ್ಸರ್ವಂ ಮಯಾ ಜ್ಞಾತಂ ವತ್ಸ ದಿವ್ಯೇನ ಚಕ್ಷುಷಾ ॥ ೧೮ ॥

---

ಗಳನ್ನೆಲ್ಲ ವಿಮರ್ಶಿಸಿ ಶುದ್ಧಿಯನ್ನು ವಿಧಿಸು. ಅದರಂತೆ ನಾನು ತಾಯಿಗೆ ಪ್ರಾಯಶ್ಚಿತ್ತವನ್ನು ಮಾಡಿಸುವೆನು. ನೀನು ಹಾಗೆ ಮಾಡದಿದ್ದರೆ ನಾನು ಪ್ರಾಣತ್ಯಾಗಮಾಡುವುದು ಖಂಡಿತ.

೧೩. ವಿಶ್ವಾಮಿತ್ರನು ಹೇಳುತ್ತಾನೆ:—ಗೌತಮನು ಅದನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಮಗನನ್ನು ಆಲಿಂಗಿಸಿ ತಲೆಯನ್ನು ಅಘ್ರಾಣಿಸಿ ಇಂತೆಂದನು.

೧೪. "ಮಗು! ಹೀಗಾದರೆ ಆತ್ಮಹತ್ಯೆಯಿಂದ ಪಾಪವನ್ನುಂಟುಮಾಡುವ ಸಾಹಸಕಾರ್ಯವನ್ನು ಮಾಡಬೇಡ. ನನ್ನ ಮಾತನ್ನು ಕೇಳು.

೧೫. ನಿನ್ನ ತಾಯಿಯ ಶುದ್ಧಿಯ ವಿಷಯದಲ್ಲಿ ಪ್ರಾಯಶ್ಚಿತ್ತವನ್ನು ಹಿಂದೆಯೇ ತಿಳಿದಿದ್ದೇನೆ. ಅದರಿಂದವಳು ನನ್ನ ಮನೆಯಲ್ಲಿ ವಾಸಮಾಡಲರ್ಹಳಾಗುವಳು.

೧೬. ವಿಷ್ಣುವು ರಾವಣನ ವಧೆಗಾಗಿ ಮನುಷ್ಯರೂಪವನ್ನು ತಾಳಿ ರಾಮನೆಂಬ ಹೆಸರಿನಿಂದ ಸೂರ್ಯವಂಶದಲ್ಲಿ ಜನಿಸುವನು.

೧೭. ಅವನ ಪಾದಸ್ಪರ್ಶದಿಂದ ಇವಳು ಶುದ್ಧಳಾಗುವಳು. ಆದುದರಿಂದ ನೀನು ಅಲ್ಲಿಯವರೆಗೆ ನಿರೀಕ್ಷಿಸು. ಮಗು! ಉತ್ಸುಕನಾಗಬೇಡ.

೧೮. ಇದನ್ನು ನಾನು ದಿವ್ಯದೃಷ್ಟಿಯಿಂದ ಚೆನ್ನಾಗಿ ಅರಿತಿರುವೆನು."

ಏತಚ್ಛ್ರುತ್ವಾ ತಥೇತ್ಯುಕ್ತ್ವಾ ಶತಾನಂದಃ ಪ್ರಹರ್ಷಿತಃ ।
ಸ್ಥಿತಃ ಪ್ರತೀಕ್ಷಮಾಣಸ್ತು ತಂ ಕಾಲಂ ಮಾತೃವತ್ಸಲಃ ॥ ೧೯ ॥
ತತಃ ಕಾಲೇನ ಮಹತಾ ರಾಮರೂಪೀ ಜನಾರ್ದನಃ ।
ರಾವಣಸ್ಯ ವಧಾರ್ಥಾಯ ಜಾತೋ ದಶರಥಾಲಯೇ ॥ ೨೦ ॥
ಸ ಮಯಾ ಭಗವಾನ್ವಿಷ್ಣುರ್ಬಾಲಭಾವೇನ ಸಂಸ್ಥಿತಃ ।
ನಿಜ ಯಜ್ಞಸ್ಯ ರಕ್ಷಾರ್ಥಂ ಸಮಾನೀತಃ ಸ್ವಮಾಶ್ರಮಂ ।
ರಾಕ್ಷಸಾನಾಂ ವಿನಾಶಾಯ ಯಜ್ಞಕರ್ಮವಿನಾಶಿನಾಂ ॥ ೨೧ ॥
ಹತೈಸ್ತೈ ರಾಕ್ಷಸೈಃ ರೌದ್ರೈರ್ಮಮ ಪೂರ್ಣೋಽಭವನ್ಮಖಃ ।
ಅಯೋಧ್ಯಾಯಾಃ ಸಮಾನೀತಃ ಸ ಮಯಾ ರಘುನಂದನಃ ॥ ೨೨ ॥
ಸೀತಾಯಾಶ್ಚ ವಿವಾಹಾರ್ಥಂ ಲಕ್ಷ್ಮಣೇನ ಸಮನ್ವಿತಃ ।
ಶ್ರುತ್ವಾ ಸ್ವಯಂವರಂ ತಸ್ಯಾಃ ಪಾರ್ಥಿವಾನಾಂ ಸಮಾಗಮಂ ॥ ೨೩ ॥
ತತೋ ಮಾರ್ಗೇ ಮಯಾ ದೃಷ್ಟಾ ಗೌತಮಸ್ಯಾಶ್ರಮೇ ಶುಭೇ ।
ಅಹಲ್ಯಾ ಸಾ ಶಿಲಾರೂಪಾ ಪ್ರಮಾಣೇನ ಮಹತ್ತಮಾ ॥ ೨೪ ॥
ತತಃ ಪ್ರೋಕ್ತೋ ಮಯಾ ರಾಮಃ ಸ್ಪೃಶೇಮಾಂ ವತ್ಸ ಪಾಣಿನಾ ।
ಮಾನುಷತ್ವಂ ಲಭೇದ್ಯೇನ ಗೌತಮಸ್ಯ ಪ್ರಿಯಾ ಮುನೇಃ ।
ಶಾಪದೋಷೇಣ ಸಂಜಾತಾ ಶಿಲೇಯಂ ತಸ್ಯ ಸನ್ಮುನೇಃ ॥ ೨೫ ॥

---

೧೯. ಶತಾನಂದನು ಇದನ್ನು ಕೇಳಿ ಸಂತೋಷದಿಂದ ಹಾಗೆಯೇ ಆಗಲೆಂದು ತಾಯಿಯಲ್ಲಿರುವ ಪ್ರೀತಿಯಿಂದ ಆ ಕಾಲವನ್ನು ನಿರೀಕ್ಷಿಸುತ್ತಿದ್ದನು.

೨೦. ಬಹುಕಾಲದ ಮೇಲೆ ವಿಷ್ಣುವು ರಾವಣನ ವಧೆಗಾಗಿ ದಶರಥನ ಮನೆಯಲ್ಲಿ ಜನಿಸಿದನು.

೨೧. ಆ ರಾಮನು ಬಾಲಕನಾಗಿರಲು ನಾನು ಯಜ್ಞವನ್ನು ನಾಶಗೊಳಿಸುವ ರಾಕ್ಷಸರನ್ನು ವಧಿಸಿ ನನ್ನ ಯಜ್ಞವನ್ನು ರಕ್ಷಿಸುವುದಕ್ಕಾಗಿ ಆಶ್ರಮಕ್ಕೆ ಕರೆತಂದೆನು.

೨೨. ಅಯೋಧ್ಯೆಯಿಂದ ಕರೆತಂದ ಆ ರಾಮನಿಂದ ಭಯಂಕರರಾದ ರಾಕ್ಷಸರು ಹತರಾಗಲು ನನ್ನ ಯಜ್ಞವು ಪೂರ್ಣವಾಯಿತು.

೨೩. ಅನಂತರ ನಾನು ಸೀತೆಯ ಸ್ವಯಂವರಕ್ಕಾಗಿ ರಾಜರು ಸೇರುವುದನ್ನು ಕೇಳಿ ಲಕ್ಷ್ಮಣನೊಡನೆ ರಾಮನನ್ನು ಮಿಥಿಲೆಗೆ ಕರೆದುಕೊಂಡು ಹೋದೆನು.

೨೪. ದಾರಿಯಲ್ಲಿ ಗೌತಮರ ಆಶ್ರಮದಲ್ಲಿ ದೊಡ್ಡ ಶಿಲೆಯಾಗಿ ನಿಂತಿರುವ ಅಹಲ್ಯೆಯನ್ನು ಕಂಡೆನು.

೨೫. ತರುವಾಯ ನಾನು ರಾಮ! ಗೌತಮರ ಪತ್ನಿಯಾದ ಇವಳನ್ನು ಕೈಯಿಂದ ಮುಟ್ಟು, ಅದರಿಂದವಳು ಮನುಷ್ಯಳಾಗುವಳು ಎಂದೆನು.

ಅವಿಕಲ್ಪಂ ತತೋ ರಾಮೋ ಮಮ ವಾಕ್ಯೇನ ತಾಂ ಶಿಲಾಂ ।
ಪಸ್ಪರ್ಶ ಪಾರ್ಥಿವಶ್ರೇಷ್ಠ ಕೌತೂಹಲಸಮನ್ವಿತಃ ॥ ೨೬ ॥
ಅಥ ರಾಮೇಣ ಸಂಸ್ಪೃಷ್ಟಾ ಸಹಸೈವಾಂಗನಾ ಮುನೇಃ ।
ಶುಶುಭೇ ಮಾನುಷೀ ಜಾತಾ ದಿವ್ಯರೂಪವಪುರ್ಧರಾ ॥ ೨೭ ॥
ತತಃ ಸಾ ಲಜ್ಜಯಾವಿಷ್ಟಾ ಪ್ರಣಿಪತ್ಯ ಚ ಗೌತಮಂ ।
ಸ್ಮರಮಾಣಾಽಽತ್ಮನಃ ಕೃತ್ಯಂ ಯಚ್ಛಕ್ರೇಣ ಸಮನ್ವಿತಂ ॥ ೨೮ ॥
ಪ್ರಾಯಶ್ಚಿತ್ತಂ ಮಮ ಸ್ವಾಮಿನ್ ದೇಹಿ ಸರ್ವಮಶೇಷತಃ ।
ಯನ್ನರಸ್ಯ ಸಮಾಯೋಗೇ ಪರಸ್ಯಾಹ ಪ್ರಜಾಪತಿಃ ॥ ೨೯ ॥
ಅಹಂ ದುಷ್ಕರಮಪ್ಯೇತತ್ಕರಿಷ್ಯಾಮಿ ನ ಸಂಶಯಃ ।
ಯೇನ ಶುದ್ಧಿರ್ಭವೇನ್ಮಹ್ಯಂ ಪುರಶ್ಚರಣಸೇವನಾತ್ ॥ ೩೦ ॥
ತತಃ ಸಂಚಿಂತ್ಯ ಸುಚಿರಂ ಪ್ರೋವಾಚ ಗೌತಮಸ್ತದಾ ।
ಕುರು ಚಾಂದ್ರಾಯಣಶತಂ ಕೃಚ್ಛ್ರಾಣಾಂ ಚ ಸಹಸ್ರಕಂ ॥ ೩೧ ॥
ಪ್ರಾಜಾಪತ್ಯಾಽಯುತಂ ಚಾಽಪಿ ತೀರ್ಥಯಾತ್ರಾ ಪರಾಯಣಾ ।
ಅಷ್ಟಷಷ್ಟಿಷು ತೀರ್ಥೇಷು ಯಾನಿ ತೀರ್ಥಾನಿ ಭೂತಲೇ ।
ತೇಷಾಂ ಸಂದರ್ಶನಾತ್ಸಮ್ಯಕ್ತತಃ ಶುದ್ಧಿಮವಾಪ್ಸ್ಯಸಿ ॥ ೩೨ ॥

---

೨೬. ರಾಮನು ವಿಚಾರಮಾಡದೆ ನನ್ನ ಮಾತಿನಿಂದ ಆ ಶಿಲೆಯನ್ನು ಕೌತೂಹಲದಿಂದ ಮುಟ್ಟಿದನು.

೨೭. ಅದರಿಂದ ಗೌತಮರ ಸತಿಯಾದ ಅವಳು ಸುಂದರರೂಪವುಳ್ಳ ಮನುಷ್ಯ ಸ್ತ್ರೀಯಾದಳು.

೨೮–೨೯. ಅನಂತರ ಆ ಅಹಲ್ಯೆಯು ಲಜ್ಜಿತಳಾಗಿ ಗೌತಮರನ್ನು ವಂದಿಸಿ ಇಂದ್ರನೊಡನೆ ತಾನು ಮಾಡಿದ ಅಕಾರ್ಯವನ್ನು ಸ್ಮರಿಸುತ್ತ, "ಸ್ವಾಮಿ! ಪರಪುರುಷಸಂಬಂಧಮಾಡಿದವರಿಗೆ ಬ್ರಹ್ಮನು ವಿಧಿಸಿರುವ ಪ್ರಾಯಶ್ಚಿತ್ತವನ್ನು ನನಗೆ ಹೇಳು.

೩೦. ನಾನು ಅದು ಮಾಡಲಸಾಧ್ಯವಾಗಿದ್ದರೂ ನಿಶ್ಚಯವಾಗಿಯೂ ಮಾಡುವೆನು. ಅದರ ಪುರಶ್ಚರಣ ಸೇವೆಯಿಂದ ನನಗೆ ಶುದ್ಧಿಯಾಗುವುದು.

೩೧–೩೨. ಅನಂತರ ಗೌತಮನು ಬಹಳ ಹೊತ್ತು ಆಲೋಚಿಸಿ "ನೂರು ಚಾಂದ್ರಾಯಣಗಳನ್ನೂ, ಸಾವಿರ ಕೃಚ್ಛ್ರಗಳನ್ನೂ, ಹತ್ತುಸಾವಿರ ಪ್ರಾಜಾಪತ್ಯಗಳನ್ನೂ ಮಾಡಿ, ತೀರ್ಥಯಾತ್ರಾನಿರತಳಾಗಿ ಭೂಮಿಯಲ್ಲಿರುವ ಅರುವತ್ತೆಂಟು ತೀರ್ಥಗಳನ್ನು ದರ್ಶನ ಮಾಡುವುದರಿಂದ ಶುದ್ಧಳಾಗುವೆ" ಎಂದನು.

ಸಾ ತಥೇತಿ ಪ್ರತಿಜ್ಞಾಯ ನಿತ್ಯಂ ವ್ರತಪರಾಯಣಾ ।
ಅಷ್ಟಷಷ್ಟಿಷು ತೀರ್ಥೇಷು ವಾರಾಣಸ್ಯಾದಿಷು ಕ್ರಮಾತ್ ॥ ೩೩ ॥
ಬಭ್ರಾಮ ತಾನಿ ಲಿಂಗಾನಿ ಪೂಜಯಂತೀ ಪ್ರಭಕ್ತಿತಃ ।
ಕ್ರಮೇಣೈವ ತು ಸಂಪ್ರಾಪ್ತಾ ಹಾಟಕೇಶ್ವರಸಂಭವಂ ॥ ೩೪ ॥
ಯಾವತ್ಪಶ್ಯತಿ ಸಾ ಸಾಧ್ವೀ ತಾವನ್ನಾಗಬಿಲೋ ಮಹಾನ್ ।
ಪೂರಿತೋ ನಾಗರೇಣೈವ ಮಾರ್ಗಃ ಪಾತಾಲಸಂಭವಃ ॥ ೩೫ ॥
ಗಚ್ಛಂತಿ ಯೇನ ಪೂರ್ವಂ ತು ತೀರ್ಥಯಾತ್ರಾಪರಾಯಣಾಃ ।
ಹಾಟಕೇಶ್ವರದೇವಸ್ಯ ದರ್ಶನಾರ್ಥಂ ಮುನೀಶ್ವರಾಃ ॥ ೩೬ ॥
ಅಥ ಸಾ ಚಿಂತಯಾಮಾಸ ನ ದೃಷ್ಟೇ ತು ಸುರೇಶ್ವರೇ ।
ಹಾಟಕೇಶ್ವರ ದೇವೇ ಚ ನ ಹಿ ಯಾತ್ರಾಫಲಂ ಲಭೇತ್ ॥ ೩೭ ॥
ತಸ್ಮಾತ್ತಪಃ ಕರಿಷ್ಯಾಮಿ ಸ್ಥಿತ್ವಾಽತ್ರೈವ ಸುದುಷ್ಕರಂ ।
ಯೇನಾಽಹಂ ತತ್ಪ್ರಭಾವೇನ ತಂ ಪಶ್ಯಾಮಿ ಸುರೇಶ್ವರಂ ॥ ೩೮ ॥
ಏವಂ ಸಾ ನಿಶ್ಚಯಂ ಕೃತ್ವಾ ತಪಸ್ತೇಪೇ ಸುದುಷ್ಕರಂ ।
ದರ್ಶನಾರ್ಥಂ ಹಿ ದೇವಸ್ಯ ಪಾತಾಲನಿಲಯಸ್ಯ ಚ ॥ ೩೯ ॥
ಪಂಚಾಗ್ನಿಸಾಧಿಕಾ ಗ್ರೀಷ್ಮೇ ಹೇಮಂತೇ ಸಲಿಲಾಶ್ರಯಾ ।
ವರ್ಷಾಸ್ವಾಕಾಶಶಯನಾ ಸಾ ಬಭೂವ ತಪಸ್ವಿನೀ ॥ ೪೦ ॥

---

೩೩–೩೪. ಅವಳು ಹಾಗೆಯೇ ಆಗಲೆಂದು ಒಪ್ಪಿ ನಿತ್ಯವೂ ವ್ರತನಿರತಳಾಗಿ ಕಾಶಿ ಮೊದಲಾದ ಅರುವತ್ತೆಂಟು ತೀರ್ಥಗಳಲ್ಲಿ ಸಂಚರಿಸುತ್ತ ಅಲ್ಲಿರುವ ಲಿಂಗಗಳನ್ನು ಪೂಜಿಸುತ್ತ ಕ್ರಮವಾಗಿ ಹಾಟಕೇಶ್ವರಕ್ಷೇತ್ರಕ್ಕೆ ಬಂದಳು.

೩೫. ಅವಳು ಅಲ್ಲಿ ಆಗ ಪಾತಾಳಮಾರ್ಗವನ್ನು ನೋಡಲು ಅದನ್ನು ನಾಗರರೇ ತುಂಬಿಬಿಟ್ಟಿದ್ದರು.

೩೬. ಹಿಂದೆ ತೀರ್ಥಯಾತ್ರಾನಿರತರಾದ ಮುನಿವರ್ಯರು ಹಾಟಕೇಶ್ವರನ ದರ್ಶನಕ್ಕಾಗಿ ಆ ಮಾರ್ಗದಿಂದಲೇ ಹೋಗುತ್ತಿದ್ದರು.

೩೭–೩೮. ಬಳಿಕ ಅವಳು ಹಾಟಕೇಶ್ವರನನ್ನು ನೋಡದಿದ್ದರೆ ತೀರ್ಥಯಾತ್ರೆಯ ಫಲವು ಲಭಿಸುವುದಿಲ್ಲ. ಆದುದರಿಂದ ಇಲ್ಲಿಯೇ ಇದ್ದು ಘೋರ ತಪಸ್ಸನ್ನು ಮಾಡಿ ಅದರ ಪ್ರಭಾವದಿಂದ ಹಾಟಕೇಶ್ವರನನ್ನು ನೋಡುವೆನು. ಎಂದಾಲೋಚಿಸಿದಳು.

೩೯–೪೦. ಹೀಗೆ ನಿಶ್ಚಯಿಸಿ ಆ ಅಹಲ್ಯೆಯು ಪಾತಾಳವಾಸಿಯಾದ ಹಾಟಕೇಶ್ವರನ ದರ್ಶನಕ್ಕಾಗಿ ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ, ಹೇಮಂತದಲ್ಲಿ ನೀರಿನಲ್ಲಿಯೂ, ಮಳೆಗಾಲದಲ್ಲಿ ಅನಾವರಣ ಸ್ಥಳದಲ್ಲಿಯೂ ವಾಸಿಸುತ್ತ ಘೋರತಪಸ್ಸನ್ನು ಮಾಡಿದಳು.

ಹರಲಿಂಗಂ ಪ್ರತಿಷ್ಠಾಪ್ಯ ಸ್ವನಾಮ್ನಾ ಚಾಂತಿಕೇ ತದಾ ।
ತ್ರಿಕಾಲಂ ಪೂಜಯಾಮಾಸ ಗಂಧಪುಷ್ಪಾನುಲೇಪನೈಃ ॥ ೪೧ ॥
ಏವಂ ತಪಸಿ ಸಂಸ್ಥಾಯಾಸ್ತಸ್ಯಾಃ ಕಾಲೋ ಮಹಾನ್ ಗತಃ ।
ನ ಚ ಸಂದರ್ಶನಂ ಜಾತಂ ಹಾಟಕೇಶ್ವರಸಂಭವಂ ॥ ೪೨ ॥
ಕಸ್ಯಚಿತ್ತ್ವಥ ಕಾಲಸ್ಯ ಶತಾನಂದಶ್ಚ ತತ್ಸುತಃ ।
ಸ ತಾಮನ್ವೇಷಮಾಣಸ್ತು ತಸ್ಮಿನ್ ಕ್ಷೇತ್ರೇ ಸಮಾಗತಃ ।
ಮಾತೃಸ್ನೇಹಪರೀತಾತ್ಮಾ ತೀರ್ಥಾನ್ವೇಷಣತತ್ಪರಃ ॥ ೪೩ ॥
ಅಥ ತಾಂ ತತ್ರ ಸಂವೀಕ್ಷ್ಯ ದಾರುಣೇ ತಪಸಿ ಸ್ಥಿತಾಂ ।
ಪ್ರಣಿಪತ್ಯ ಸ್ಥಿತೋ ದೀನಃ ಸ ದುಃಖೋ ವಾಕ್ಯಮಬ್ರವೀತ್ ॥ ೪೪ ॥
ಕಿಮತ್ರ ಕ್ಲಿಶ್ಯತೇ ಕಾಯಸ್ತಪಃ ಕೃತ್ವಾ ಸುದಾರುಣಂ ।
ಸಪ್ತಷಷ್ಟಿಷು ತೀರ್ಥೇಷು ಯಾನಿ ಲಿಂಗಾನಿ ತೇಷು ಚ ॥ ೪೫ ॥
ಮಾಹೇಶ್ವರಾಣಿ ಲಿಂಗಾನಿ ತಾನಿ ದೃಷ್ಟಾನಿ ಚ ತ್ವಯಾ ।
ಏತತ್ಪಾತಾಲಸಂಸ್ಥಂ ಚ ಹಾಟಕೇಶ್ವರಸಂಜ್ಞಿತಂ ॥ ೪೬ ॥
ನ ಪಶ್ಯತಿ ನರಃ ಕಶ್ಚಿದ್ದೃಷ್ಟಂ ಕ್ಷೇತ್ರೇ ನ ಕೇನಚಿತ್ ।
ತೇನ ಶುದ್ಧಿಶ್ಚ ಸಂಜಾತಾ ಸ್ವಭರ್ತ್ರಾ ವಿಹಿತಾ ತು ಯಾ ॥ ೪೭ ॥

---

೪೧. ತನ್ನ ಹೆಸರಿನಿಂದ ಮಹೇಶ್ವರ ಲಿಂಗವನ್ನು ಹತ್ತಿರದಲ್ಲಿ ಪ್ರತಿಷ್ಠೆಮಾಡಿ ತ್ರಿಕಾಲದಲ್ಲಿಯೂ ಗಂಧಪುಷ್ಪಾನುಲೇಪನಗಳಿಂದ ಪೂಜಿಸಿದಳು.

೪೨. ಹೀಗೆ ಅವಳು ತಪಸ್ಸನ್ನು ಮಾಡುತ್ತಿರಲು ಬಹುಕಾಲ ಕಳೆಯಿತು. ಆದರೆ ಹಾಟಕೇಶ್ವರನ ದರ್ಶನವಾಗಲಿಲ್ಲ.

೪೩. ಒಂದಾನೊಂದು ಕಾಲದಲ್ಲಿ ಶತಾನಂದನೆಂಬ ಆ ಅಹಲ್ಯೆಯ ಮಗನು ಮಾತೃಸ್ನೇಹದಿಂದ ಕೂಡಿದವನೂ, ತೀರ್ಥಗಳನ್ನು ಹುಡುಕುವುದರಲ್ಲಿ ಆಸಕ್ತನೂ ಆಗಿ ತಾಯಿಯನ್ನು ಹುಡುಕುತ್ತ ಆ ಕ್ಷೇತ್ರಕ್ಕೆ ಬಂದನು.

೪೪. ಅವನು ಅಲ್ಲಿ ಭಯಂಕರ ತಪಸ್ಸನ್ನು ಮಾಡುತ್ತಿರುವ ತಾಯಿಯನ್ನು ನೋಡಿ ವಂದಿಸಿ ದೈನ್ಯದುಃಖಗಳಿಂದ ಹೀಗೆಂದನು.

೪೫–೪೭. "ಅಮ್ಮಾ! ನೀನು ದಾರುಣ ತಪಸ್ಸನ್ನು ಮಾಡಿ ಏತಕ್ಕೆ ವ್ಯಥೆಗೊಳ್ಳುತ್ತಿರುವೆ? ನೀನು ಅರುವತ್ತೇಳು ತೀರ್ಥಗಳಲ್ಲಿರುವ ಮಹೇಶ್ವರ ಲಿಂಗಗಳನ್ನು ನೋಡಿರುವೆ. ಈ ಪಾತಾಳದಲ್ಲಿರುವ ಹಾಟಕೇಶ್ವರ ಲಿಂಗವನ್ನು ಯಾವ ಮನುಷ್ಯನೂ ನೋಡಲಿಲ್ಲ. ನೋಡುವುದೂ ಇಲ್ಲ, ತಂದೆಯು ಹೇಳಿದಂತೆ ನಿನಗೆ ಶುದ್ಧಿಯು ಆಗಿದೆ.

ತಸ್ಮಾದಾಗಚ್ಛ ಗಚ್ಛಾಮಸ್ತಾತಾಶ್ರಮಪದೇ ಶುಭೇ ।
ತ್ವನ್ಮಾರ್ಗಂ ವೀಕ್ಷತೇ ತಾತಃ ಕರ್ಷಕೋ ವರ್ಷಣಂ ಯಥಾ ॥ ೨೮ ॥

ಅಹಲ್ಯೋವಾಚ :—

ಯಾವತ್ಪಶ್ಯಾಮಿ ನೋ ದೇವಂ ಹಾಟಕೇಶ್ವರಸಂಜ್ಞಿತಂ ।
ತಾವದ್ಗಚ್ಛಾಮಿ ನೋ ಗೇಹಂ ಯದಾ ಪಶ್ಯಾಮಿ ತಂ ಹರಂ ॥ ೨೯ ॥
ತದಾ ಯಾಸ್ಯೇ ಗೃಹಂ ಪುತ್ರ ನಿಶ್ಚಯೋಽಯಂ ಮಯಾ ಕೃತಃ ॥ ೩೦ ॥
ತಚ್ಛ್ರುತ್ವಾ ಸೋಽಪಿ ತಾಂ ಪ್ರಾಹ ಹ್ಯೇಷ ಚೇನ್ನಿಶ್ಚಯಸ್ತವ ।
ಮಯಾಽಪಿ ತಾತಪಾರ್ಶ್ವೇ ತು ಪ್ರಗಂತವ್ಯಂ ತ್ವಯಾ ಸಹ ॥ ೩೧ ॥
ಏವಮುಕ್ತ್ವಾ ತತಃ ಸೋಽಪಿ ಸ್ಥಾಪಯಾಮಾಸ ಶಾಂಭವಂ ।
ಲಿಂಗಂ ಚ ಪೂಜಯಾಮಾಸ ತ್ರಿಕಾಲಂ ತಪಸಿ ಸ್ಥಿತಃ ॥ ೩೨ ॥
ಶತಾನಂದಸ್ತು ರಾಜರ್ಷೇ ಗಂಧಪುಷ್ಪಾನುಲೇಪನೈಃ ।
ನೈವೇದ್ಯೈರ್ವಿವಿಧೈಃ ಸೂಕ್ತೈರ್ವೇದೋಕ್ತೈಃ ಪರ್ಯತೋಷಯತ್ ॥ ೩೩ ॥
ಷಷ್ಠಾನ್ನಕಾಲಭೋಜ್ಯಸ್ಯ ವ್ರತಚರ್ಯಾರತಸ್ಯ ಚ ।
ಏವಂ ತಸ್ಯಾಽಪಿ ಸಂಸ್ಥಸ್ಯ ಗತಃ ಕಾಲೋ ಮಹಾನ್ಮನೇ ।
ನ ಚ ತುಷ್ಯತಿ ದೇವೇಶಸ್ತಾಭ್ಯಾಂ ದ್ವಾಭ್ಯಾಂ ಕಥಂಚನ ॥ ೩೪ ॥
ತತಃ ಕಾಲೇನ ಮಹತಾ ಗೌತಮೋಽಪಿ ಮಹಾಮುನಿಃ ।
ಆಜಗಾಮ ಸ್ವಯಂ ತತ್ರ ಪುತ್ರದರ್ಶನ ಲಾಲಸಃ ॥ ೩೫ ॥

---

೨೮. ಆದುದರಿಂದ ಬಾ ತಂದೆಯ ಆಶ್ರಮಕ್ಕೆ ಹೋಗೋಣ. ರೈತನು ಮಳೆಯನ್ನು ನಿರೀಕ್ಷಿಸುವಂತೆ ಅಪ್ಪನು ನಿನ್ನನ್ನು ನಿರೀಕ್ಷಿಸುತ್ತಿದ್ದಾನೆ."

೨೯–೩೦. ಅಹಲ್ಯೆಯು ಹೇಳುತ್ತಾಳೆ:—ಮಗು! ನಾನು ಹಾಟಕೇಶ್ವರ ನನ್ನು ನೋಡುವವರೆಗೆ ಮನೆಗೆ ಹೋಗುವುದಿಲ್ಲ. ಅವನನ್ನು ನೋಡಿದ ಮೇಲೆ ಮನೆಗೆ ಹೋಗುವೆನೆಂದು ನಿಶ್ಚಯಿಸಿದ್ದೇನೆ.

೩೧. ಶತಾನಂದನು ಅದನ್ನು ಕೇಳಿ, "ಇದು ನಿನ್ನ ನಿಶ್ಚಯವಾದರೆ ನಾನೂ ನಿನ್ನೊಡನೆಯೇ ತಂದೆಯ ಬಳಿಗೆ ಹೋಗುವೆನು."

೩೨–೩೩. ಅವನು ಹೀಗೆ ಹೇಳಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿ ತ್ರಿಕಾಲ ದಲ್ಲಿ ಅದನ್ನು ಗಂಧಪುಷ್ಪಾನುಲೇಪನಗಳಿಂದಲೂ, ವಿವಿಧ ನೈವೇದ್ಯಗಳಿಂದಲೂ, ವೇದೋಕ್ತ ಸೂಕ್ತಗಳಿಂದಲೂ ಪೂಜಿಸುತ್ತ ತಪೋನಿರತನಾದನು.

೩೪–೩೫. ಹೀಗೆ ಅವನು ಷಷ್ಠಕಾಲ ಭೋಜನನೂ, ವ್ರತನಿರತನೂ ಆಗಿ ತಪಸ್ಸನ್ನು ಮಾಡುತ್ತಿರಲು ಬಹುಕಾಲ ಕಳೆಯಿತು. ಆದರೂ ಶಿವನು ಅವರಿಬ್ಬ ರಲ್ಲಿಯೂ ಸಂತುಷ್ಟನಾಗಲಿಲ್ಲ. ಹೀಗೆ ಬಹುಕಾಲ ಕಳೆಯಲು ಗೌತಮಮುನಿಯು ತಾನೇ ಪುತ್ರನನ್ನು ನೋಡಲು ಅಲ್ಲಿಗೆ ಬಂದನು.

ಸ ದೃಷ್ಟ್ವಾ ಭಾರ್ಯಯಾ ಸಾರ್ಧಂ ಪುತ್ರಂ ತಪಸಿ ಸಂಸ್ಥಿತಂ ।
ತುತೋಷ ಪ್ರಥಮಂ ತಾವತ್ಪಶ್ಚಾದ್ದುಃಖಸಮನ್ವಿತಃ ॥ ೫೬ ॥
ಅಹೋ ಬತ ಮಹತ್ಕಷ್ಟಂ ಪುತ್ರೋ ಮೇ ಕೃಶತಾಂ ಗತಃ ।
ತಪಸಃ ಸಂಪ್ರಭಾವೇನ ನ ಯಾಮಿ ಸ್ವಗೃಹಂ ಕಥಂ ।
ಭಾರ್ಯೇಯಂ ಚ ತಥಾ ಮಹ್ಯಂ ವಿವರ್ಣಾ ತು ಕೃಶಾ ಸ್ಥಿತಾ ॥ ೫೭ ॥
ಏವಂ ಸಂಚಿಂತ್ಯ ಮನಸಾ ತಾವುಭೌ ಪ್ರತ್ಯಭಾಷತ ।
ಗಮ್ಯತಾಂ ಸ್ವಗೃಹಂ ಕೃತ್ವಾ ತಪಸಃ ಸನ್ನಿವರ್ತನಂ ॥ ೫೮ ॥

ಶತಾನಂದ ಉವಾಚ :—

ತಾತಾಂಬಾ ಬಹುಧಾ ಪ್ರೋಕ್ತಾ ತಪಸಃ ಸನ್ನಿವರ್ತನೇ ।
ನೋ ಗಚ್ಛತಿ ತಥಾ ಹರ್ಮ್ಯಮದೃಷ್ಟ್ವೇ ಹಾಟಕೇಶ್ವರೇ ॥ ೫೯ ॥
ಅಹಂ ತಯಾ ವಿಹೀನಸ್ತು ನೈವ ಯಾಸ್ಯಾಮಿ ನಿಶ್ಚಿತಂ ।
ಏವಂ ಜ್ಞಾತ್ವಾ ಮಹಾಭಾಗ ಯದ್ಯುಕ್ತಂ ತತ್ಸಮಾಚರ ॥ ೬೦ ॥

ಗೌತಮ ಉವಾಚ :—

ಯದ್ಯೇವಂ ನಿಶ್ಚಯೋ ವತ್ಸ ತವ ಮಾತುಶ್ಚ ಸಂಸ್ಥಿತಃ ।
ಅಹಂ ತಂ ದರ್ಶಯಿಷ್ಯಾಮಿ ತಪಸಾ ಹಾಟಕೇಶ್ವರಂ ॥ ೬೧ ॥

---

೫೬. ಆ ಮುನಿಯು ತಾಯಿಯೊಡನೆ ತಪವನ್ನಾಚರಿಸುತ್ತಿರುವ ಪುತ್ರನನ್ನು ಕಂಡು ಮೊದಲು ಸಂತೋಷಗೊಂಡನು. ಅನಂತರ ದುಃಖಿತನಾದನು.

೫೭. "ಅಯ್ಯೋ! ಕಷ್ಟ! ನನ್ನ ಮಗನು ತಪಸ್ಸಿನಿಂದ ಕೃಶನಾಗಿರುವನು. ಇವನನ್ನು ಹೇಗೆ ನನ್ನ ಮನೆಗೆ ಕರೆದುಕೊಂಡು ಹೋಗುವೆನೊ! ಈ ನನ್ನ ಪತ್ನಿಯೂ ನನಗಾಗಿ ಕಳೆಗುಂದಿದವಳೂ, ಕೃಶಳೂ ಆಗಿರುವಳು."

೫೮. ಅವನು ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಅವರಿಬ್ಬರನ್ನು ಕುರಿತು "ನೀವು ತಪಸ್ಸನ್ನು ತ್ಯಜಿಸಿ ಮನೆಗೆ ಬನ್ನಿರಿ" ಎಂದನು.

೫೯. ಶತಾನಂದನು ಹೇಳುತ್ತಾನೆ:—ಅಪ್ಪ! ನಾನು ತಪಸ್ಸನ್ನು ತ್ಯಜಿಸೆಂದು ಅಮ್ಮನನ್ನು ಬಹುವಾಗಿ ಕೇಳಿದೆನು. ಆದರೆ ಅವಳು ಹಾಟಕೇಶ್ವರನನ್ನು ನೋಡದೆ ಮನೆಗೆ ಹೋಗುವುದಿಲ್ಲವೆಂದು ಹೇಳುತ್ತಾಳೆ.

೬೦. ಅವಳನ್ನು ಬಿಟ್ಟು ನಿಶ್ಚಯವಾಗಿಯೂ ನಾನು ಮನೆಗೆ ಹೋಗುವುದಿಲ್ಲ. ಮಹಾತ್ಮನೆ! ಇದನ್ನರಿತು ಯುಕ್ತವಾದುದನ್ನು ಆಚರಿಸು.

೬೧. ಗೌತಮನು ಹೇಳುತ್ತಾನೆ:—ಮಗು! ನಿನ್ನ ತಾಯಿಯು ಹೀಗೆ ನಿಶ್ಚಯಿಸಿರುವುದಾದರೆ ನಾನು ತಪಸ್ಸಿನಿಂದ ಆ ಹಾಟಕೇಶ್ವರನನ್ನು ತೋರಿಸುವೆನು.

ಏವಮುಕ್ತ್ವಾ ತತಃ ಸೋಽಪಿ ತಪಶ್ಚಕ್ರೇ ಮಹಾಮುನಿಃ ।
ಏಕಾಂತರೋಪವಾಸಸ್ತು ಸ್ಥಿತೋ ವರ್ಷಶತಂ ಮುನಿಃ ।
ಷಷ್ಠಾನ್ನಕಾಲಭೋಜೀ ಚ ತಾವತ್ಕಾಲೇ ತತೋಽಭವತ್ ॥ ೬೨ ॥
ತ್ರಿರಾತ್ರಭೋಜೀ ಪಶ್ಚಾಚ್ಚ ಸ ಬಭೂವ ಮುನೀಶ್ವರಃ ।
ತಾವತ್ಕಾಲಂ ಫಲೈರ್ನಿನ್ಯೇ ತಾವತ್ಕಾಲಂ ಜಲಾಶನಃ ।
ವಾಯುಭಕ್ಷಸ್ತತೋ ಭೂಯಸ್ತಾವತ್ಕಾಲಮಭೂನ್ಮುನಿಃ ॥ ೬೩ ॥
ತತೋ ವರ್ಷ ಸಹಸ್ರಾಂತೇ ಪರಮೇ ಸಂವ್ಯವಸ್ಥಿತೇ ।
ಪ್ರಭಿದ್ಯ ಮೇದಿನೀ ಪೃಷ್ಠಂ ನಿಷ್ಕ್ರಾಂತಂ ಲಿಂಗಮುತ್ತಮಂ ॥ ೬೪ ॥
ದ್ವಾದಶಾರ್ಕಪ್ರತೀಕಾಶಂ ಸರ್ವಲಕ್ಷಣಲಕ್ಷಿತಂ ।
ಏತಸ್ಮಿನ್ನಂತರೇ ದೇವಃ ಶಂಭುಃ ಪ್ರತ್ಯಕ್ಷತಾಂ ಗತಃ ॥ ೬೫ ॥
ಏತಸ್ಮಿನ್ನೇವ ಕಾಲೇ ತು ಭಗವಾಂಛಶಿಶೇಖರಃ ।
ತಸ್ಯ ದೃಷ್ಟಿಪಥಂ ಗತ್ವಾ ವಾಕ್ಯಮೇತದುವಾಚ ಹ ॥ ೬೬ ॥
ಗೌತಮಾಽಹಂ ಪ್ರತುಷ್ಟಸ್ತೇ ತಪಸಾಽನೇನ ಸುವ್ರತ ॥ ೬೭ ॥
ಏತಚ್ಚ ಮಾಮಕಂ ಲಿಂಗಂ ಹಾಟಕೇಶ್ವರ ಸಂಜ್ಞಿತಂ ।
ಪಾತಾಲಾಚ್ಚ ವಿನಿಷ್ಕ್ರಾಂತಂ ತವ ಭಕ್ತ್ಯಾ ಮಹಾಮುನೇ ॥ ೬೮ ॥
ಏತದರ್ಥಂ ತಪಸ್ತಪ್ತಂ ಸ ಭಾರ್ಯೇಣ ತ್ವಯಾ ಹಿ ತತ್ ।
ಸ ಪುತ್ರೇಣಾಽಖಿಲಂ ಜಾತಂ ಫಲಂ ತಸ್ಯ ಯಥೇಪ್ಸಿತಂ ॥ ೬೯ ॥

---

೬೨–೬೫. ಅವನು ಹೀಗೆ ಹೇಳಿ ತಾನೂ ತಪಸ್ಸನ್ನು ಮಾಡಿದನು. ಅವನು ಎರಡು ದಿವಸಕ್ಕೊಮ್ಮೆ ಊಟಮಾಡುತ್ತ ನೂರು ವರ್ಷಗಳ ಕಾಲವೂ, ಷಷ್ಠಕಾಲ ಭೋಜಿಯಾಗಿ ನೂರು ವರ್ಷಕಾಲವೂ, ಮೂರು ರಾತ್ರಿಗಳಿಗೊಮ್ಮೆ ಊಟಮಾಡುತ್ತ ನೂರು ವರ್ಷಕಾಲವೂ, ಫಲಾಹಾರನಾಗಿ ನೂರು ವರ್ಷಗಳ ಕಾಲವೂ, ನೀರನ್ನು ಕುಡಿಯುತ್ತ ನೂರು ವರ್ಷಕಾಲವೂ, ವಾಯುಭಕ್ಷನಾಗಿ ನೂರು ವರ್ಷಕಾಲವೂ ತಪಸ್ಸನ್ನು ಮಾಡುತ್ತ ಪರಮಾತ್ಮಧ್ಯಾನನಿರತನಾಗಿರಲು ಸಾವಿರ ವರ್ಷಗಳ ತರುವಾಯ ದ್ವಾದಶಾದಿತ್ಯರಂತೆ ಪ್ರಕಾಶಿಸುವುದೂ, ಸಮಸ್ತ ಲಕ್ಷಣಗಳಿಂದ ಕೂಡಿರುವುದೂ ಆದ ಮಹೇಶ್ವರ ಲಿಂಗವು ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಬಂದಿತು. ಇಷ್ಟರಲ್ಲಿ ಶಿವನು ಪ್ರತ್ಯಕ್ಷನಾದನು.

೬೬. ಆ ಮಹೇಶ್ವರನು ಪ್ರತ್ಯಕ್ಷನಾಗಿ ಹೀಗೆ ಮಾತಾಡಿದನು.

೬೭. ಗೌತಮ! ನಾನು ನಿನ್ನೀ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ.

೬೮–೬೯. ಮಹಾಮುನಿಯೆ! ನಿನ್ನ ಭಕ್ತಿಯಿಂದ ನನ್ನ ಹಾಟಕೇಶ್ವರ ಲಿಂಗವು ಪಾತಾಳದಿಂದ ಮೇಲಕ್ಕೆ ಬಂದಿತು. ಇದಕ್ಕಾಗಿಯೇ ನೀನು ಭಾರ್ಯಾಪುತ್ರ ರೊಡನೆ ತಪಸ್ಸನ್ನು ಮಾಡಿರುವೆ. ಅದರ ಫಲವು ಈಗ ಲಭಿಸಿರುವುದು.

ಏತತ್ಪಶ್ಯತು ತೇ ಭಾರ್ಯಾ ಅಹಲ್ಯಾ ದಿವ್ಯರೂಪಿಣೀ ।
ಅಷ್ಟಷಷ್ಟ್ಯುದ್ಭವಂ ಯೇನ ಯಾತ್ರಾ ಫಲಮವಾಪ್ನುಯಾತ್ ॥ ೭೦ ॥
ತ್ವಂ ಚಾಽಪಿ ಪ್ರಾರ್ಥಯ ವರಂ ಯೇನ ಸರ್ವಂ ದದಾಮಿ ತೇ ॥ ೭೧ ॥
ಗೌತಮ ಉವಾಚ:—
ಹಾಟಕೇಶ್ವರ ಸಂಜ್ಞೇ ತು ಸಕೃದ್ದೃಷ್ಟೇ ಚ ಯತ್ಫಲಂ ।
ಪಾತಾಲಸ್ಥೇ ಚ ಯತ್ಪುಣ್ಯಂ ನರಾಣಾಂ ಜಾಯತೇ ಫಲಂ ।
ದೃಷ್ಟೇನಾನೇನ ತತ್ಪುಣ್ಯಂ ಪೂಜಿತೇನ ವಿಶೇಷತಃ ॥ ೭೨ ॥
ಅನ್ಯೇಽಪಿ ಯೇ ಜನಾಸ್ತುಚ್ಚ ಪೂಜಯಂತಿ ಪ್ರಭಕ್ತಿತಃ ।
ಚೈತ್ರಶುಕ್ಲ ಚತುರ್ದಶ್ಯಾಂ ತೇ ಪ್ರಯಾಂತು ತ್ರಿವಿಷ್ಟಪಂ ॥ ೭೩ ॥
ಏತಲ್ಲಿಂಗಂ ನ ಜಾನಂತಿ ನರಾಃ ಸಿಧ್ಯಭಿಕಾಂಕ್ಷಿಣಃ ।
ವಿಶಂತಿ ವಿವರಂ ತೇನ ಹಾಟಕೇಶ್ವರ ಕಾಂಕ್ಷಯಾ ॥ ೭೪ ॥
ಅಪಿ ಪಾಪಸಮೋಪೇತಾ ಲಿಂಗಸ್ಯಾಸ್ಯ ಪ್ರಭಾವತಃ ।
ಪರದಾರೋದ್ಭವಾತ್ಪಾಪಾದಹಲ್ಯೇಶ್ವರ ದರ್ಶನಾತ್ ॥ ೭೫ ॥
ಮುಚ್ಯಂತೇ ಮಾನವಾಸ್ತದ್ವಚ್ಛತಾನಂದೇಶ್ವರಾದಪಿ ।
ತಸ್ಮಿಂದಿನೇ ವಿಹಿತಯಾ ತಾಭ್ಯಾಂ ಚೈವ ಪ್ರಪೂಜಯಾ ॥ ೭೬ ॥

---

೭೦. ದಿವ್ಯರೂಪವುಳ್ಳ ನಿನ್ನ ಪತ್ನಿಯಾದ ಈ ಅಹಲ್ಯೆಯು ಈ ಲಿಂಗವನ್ನು ನೋಡಿ ಅರುವತ್ತೆಂಟು ತೀರ್ಥಗಳ ಯಾತ್ರೆ ಮಾಡಿದ ಫಲವನ್ನು ಹೊಂದಲಿ.

೭೧. ನೀನೂ ವರವನ್ನು ಕೇಳಿಕೊ. ಅದೆಲ್ಲವನ್ನೂ ಕೊಡುವೆನು.

೭೨. ಗೌತಮನು ಹೇಳುತ್ತಾನೆ:—ಈ ಲಿಂಗವನ್ನು ನೋಡುವುದರಿಂದಲೂ, ಪೂಜಿಸುವುದರಿಂದಲೂ ಮನುಷ್ಯರಿಗೆ ಹಾಟಕೇಶ್ವರ ಲಿಂಗವನ್ನು ಒಂದುಸಾರಿ ನೋಡಿದ ಪುಣ್ಯವೂ, ಪಾತಾಳಸ್ಥ ಲಿಂಗದ ದರ್ಶನದಿಂದಾಗುವ ಫಲವೂ ಲಭಿಸಲಿ.

೭೩. ಇತರರೂ ಚೈತ್ರ ಶುಕ್ಲ ಚತುರ್ದಶೀ ದಿನ ಈ ಲಿಂಗವನ್ನು ಭಕ್ತಿಯಿಂದ ಪೂಜಿಸಿದರೆ ಸ್ವರ್ಗವನ್ನು ಹೊಂದಲಿ.

೭೪. ಸಿದ್ಧಿಯನ್ನು ಬಯಸುವ ಮಾನವರು ಈ ಲಿಂಗವನ್ನು ತಿಳಿಯುವುದಿಲ್ಲ. ಅದರಿಂದ ಅವರು ಹಾಟಕೇಶ್ವರ ಲಿಂಗವನ್ನು ನೋಡಲು ಪಾತಾಳ ವಿವರವನ್ನು ಪ್ರವೇಶಿಸುತ್ತಾರೆ.

೭೫—೭೬. ಪಾಪಿಗಳೂ ಆ ದಿನ ಮಾಡಿದ ಪೂಜೆಯಿಂದ ಈ ಲಿಂಗದ ಪ್ರಭಾವದಿಂದಲೂ, ಅಹಲ್ಯೇಶ್ವರ ಮತ್ತು ಶತಾನಂದೇಶ್ವರರ ದರ್ಶನದಿಂದಲೂ ಪರದಾರಗಮನದಿಂದುಂಟಾದ ಪಾಪದಿಂದ ಮುಕ್ತರಾಗುವರು.

ವಿಶ್ವಾಮಿತ್ರ ಉವಾಚ:–

ಏತಸ್ಮಿನ್ನೇವ ಕಾಲೇ ತು ವ್ಯಾಪ್ತಃ ಸ್ವರ್ಗೋಽಖಿಲೋ ನೃಪ ।
ಮಾನುಷ್ಯೈರಪಿ ಪಾಪಾಢ್ಯೈಃ ಸರ್ವಧರ್ಮವಿವರ್ಜಿತೈಃ ॥ ೭೭ ॥
ನ ಕಶ್ಚಿತ್ಕುರುತೇ ಯಜ್ಞಂ ತೀರ್ಥಯಾತ್ರಾಮಥಾಪರಂ ।
ನ ವ್ರತಂ ನಿಯಮಂ ಚೈವ ದಾನಸ್ಯಾಽಪಿ ಕಥಾಮಪಿ ॥ ೭೮ ॥
ತಚ್ಚ ಲಿಂಗತ್ರಯಂ ದೃಷ್ಟ್ವಾ ಸ್ಪೃಷ್ಟ್ವಾ ಸಂಪೂಜ್ಯ ಭಕ್ತಿತಃ ॥ ೭೯ ॥
ತತೋ ಭೀತಾಃ ಸುರಾಃ ಸರ್ವೇ ಸಸ್ಪರ್ಧೈರ್ಮಾನುಷ್ಯೈರ್ವೃತಾಃ ।
ಪ್ರೋಚುಃ ಪುರಂದರಂ ಗತ್ವಾ ವ್ಯಥಯಾ ಪರಯಾ ಯುತಾಃ ॥ ೮೦ ॥
ಮರ್ತ್ಯಲೋಕೇ ಸಹಸ್ರಾಕ್ಷ ಸರ್ವೇ ಧರ್ಮಾಃ ಕ್ಷಯಂ ಗತಾಃ ।
ಅಪಿ ಪಾಪಸಮಾಚಾರಾ ಅಭ್ಯೇತ್ಯ ಪುರುಷಾ ಇಹ ॥ ೮೧ ॥
ಅಸ್ಮಾಭಿಃ ಸಹ ಗರ್ವಾಢ್ಯಾಃ ಸ್ಪರ್ಧಾಂ ಕುರ್ವಂತಿ ಸರ್ವದಾ ।
ಹಾಟಕೇಶ್ವರಜೇ ಕ್ಷೇತ್ರೇ ಲಿಂಗತ್ರಯಮನುತ್ತಮಂ ॥ ೮೨ ॥
ಯತ್ಸ್ಥಿತಂ ಸ್ಥಾಪಿತಂ ತತ್ರ ಗೌತಮೇನ ಮಹಾತ್ಮನಾ ।
ಸಪುತ್ರೇಣ ಸದಾರೇಣ ತಸ್ಯ ಪೂಜಾ ಪ್ರಭಾವತಃ ॥ ೮೩ ॥
ಅಪಿ ಪಾಪಸಮಾಚಾರಾ ಇಹಾಗಚ್ಛಂತಿ ತೇಽಖಿಲಾಃ ।
ಯಮಸ್ಯ ನರಕಾಃ ಸರ್ವೇ ಸಾಂಪ್ರತಂ ಶೂನ್ಯತಾಂ ಗತಾಃ ॥ ೮೪ ॥

---

೭೭. ವಿಶ್ವಾಮಿತ್ರನು ಹೇಳುತ್ತಾನೆ:—ಈ ಸಮಯದಲ್ಲಿ ಸ್ವರ್ಗವು ಪಾಪಿಷ್ಠರೂ, ಸಕಲಧರ್ಮಬಾಹ್ಯರೂ ಆದ ಮಾನವರಿಂದ ಸಂಪೂರ್ಣವಾಗಿ ವ್ಯಾಪ್ತವಾಯಿತು.

೭೮–೭೯. ಆ ಮೂರು ಲಿಂಗಗಳನ್ನು ನೋಡಿ, ಸ್ಪರ್ಶಮಾಡಿ, ಭಕ್ತಿಯಿಂದ ಪೂಜಿಸಿದ ಒಬ್ಬ ಮನುಷ್ಯನೂ ಯಜ್ಞ, ತೀರ್ಥಯಾತ್ರೆ, ವ್ರತ, ನಿಯಮ, ದಾನಗಳನ್ನು ಮಾಡುತ್ತಿರಲಿಲ್ಲ.

೮೦. ಅನಂತರ ಸ್ಪರ್ಧಿಸುತ್ತಿರುವ ನರರಿಂದ ಪರಿವೃತರಾದ ದೇವತೆಗಳು ಭಯಗೊಂಡು ಅತ್ಯಂತ ವ್ಯಥಿತರಾಗಿ ಮಹೇಂದ್ರನನ್ನು ಕುರಿತು ಇಂತೆಂದರು.

೮೧–೮೪. "ದೇವರಾಜ! ಮರ್ತ್ಯಲೋಕದಲ್ಲಿ ಸಕಲ ಧರ್ಮಗಳೂ ನಾಶವಾದುವು. ಪಾಪಿಷ್ಠರೂ ಇಲ್ಲಿಗೆ ಬಂದು ಗರ್ವದಿಂದ ನಮ್ಮೊಡನೆ ಯಾವಾಗಲೂ ಸ್ಪರ್ಧಿಸುತ್ತಾರೆ. ಹಾಟಕೇಶ್ವರಜಕ್ಷೇತ್ರದಲ್ಲಿ ಗೌತಮನು ಭಾರ್ಯಾಪುತ್ರರೊಡನೆ ಮೂರು ಲಿಂಗಗಳನ್ನು ಪ್ರತಿಷ್ಠೆ ಮಾಡಿದ್ದಾನೆ. ಅದರ ಪೂಜಾ ಪ್ರಭಾವದಿಂದ ಪಾಪಿಷ್ಠರೂ ಇಲ್ಲಿಗೆ ಬರುತ್ತಿದ್ದಾರೆ. ಯಮನ ನರಕವೆಲ್ಲ ಈಗ ಶೂನ್ಯವಾದುವು.

ಗೌತಮೇನ ಸಮಾನೀತಃ ಪಾತಾಲಾದ್ಧಾಟಕೇಶ್ವರಃ ।
ತಪಸಾ ತೋಷಯಿತ್ವಾ ತು ತತ್ರ ಸ್ಥಾನೇ ಸುರೇಶ್ವರಃ ॥ ೮೫ ॥
ತತ್ಪ್ರಭಾವಾದಯಂ ಜಾತೋ ವ್ಯವಹಾರೋ ಧರಾತಲೇ ॥ ೮೬ ॥
ಏವಂ ಜ್ಞಾತ್ವಾ ಪ್ರವರ್ತಂತೇ ಯಥಾ ಯಜ್ಞಾಸ್ತಥಾ ಕುರು ।
ತೈರ್ವಿನಾ ನೈವ ತೃಪ್ತಿಃ ಸ್ಯಾದಸ್ಮಾಕಂ ಚ ಕಥಂಚನ ॥ ೮೭ ॥
ತಚ್ಛ್ರುತ್ವಾ ವಾಸವಸ್ತತ್ರ ಸಮಾಹೂಯ ಚ ಮನ್ಮಥಂ ।
ಕ್ರೋಧಂ ಲೋಭಂ ತಥಾ ದಂಭಂ ಮತ್ಸರಂ ದ್ವೇಷ ಸಂಯುತಂ ॥ ೮೮ ॥
ಗತ್ವಾ ಧರಾತಲಂ ಸರ್ವೇ ಮಮಾದೇಶಾದ್ದ್ರುತಂ ತತಃ ।
ಸ್ವಶಕ್ತ್ಯಾ ವಾರಯಧ್ವಂ ಭೋ ಗೌತಮೇಶ್ವರ ಪೂಜಕಾನ್ ।
ಅಹಲ್ಯೇಶ್ವರ ದೇವಸ್ಯ ಶತಾನಂದೇಶ್ವರಸ್ಯ ಚ ॥ ೮೯ ॥
ಶಕ್ರಾದೇಶಂ ತು ಸಂಪ್ರಾಪ್ಯ ತೇ ಗತಾ ಧರಣೀತಲೇ ॥ ೯೦ ॥
ಕಾಮಾದಿಕಾ ನರಾನ್ ಭೇಜುರ್ಗೌತಮೇಶ್ವರ ಪೂಜಕಾನ್ ।
ತಥಾಽಹಲ್ಯೇಶ್ವರಸ್ಯಾಽಪಿ ಶತಾನಂದೇಶ್ವರಸ್ಯ ಚ ॥ ೯೧ ॥
ತತೋ ಭೂಯೋ ಮಖಾ ಜಾತಾಃ ಸಮಗ್ರೇ ಧರಣೀತಲೇ ।
ಸಂಪೂರ್ಣದಕ್ಷಿಣಾಃ ಸರ್ವೇ ವ್ರತಾನಿ ನಿಯಮಾಸ್ತಥಾ ॥ ೯೨ ॥

---

೮೫. ಆ ಕ್ಷೇತ್ರದಲ್ಲಿ ಗೌತಮನು ಮಹೇಶ್ವರನನ್ನು ಸಂತೋಷಗೊಳಿಸಿ ಪಾತಾಳದಿಂದ ಹಾಟಕೇಶ್ವರನನ್ನು ಮೇಲಕ್ಕೆ ತಂದಿರುವನು.

೮೬. ಅದರ ಪ್ರಭಾವದಿಂದ ಭೂಮಿಯಲ್ಲಿ ಈರೀತಿಯಾಗಿರುವುದು.

೮೭. ಇಂದ್ರ! ನೀನು ಇದನ್ನರಿತು ಯಜ್ಞಗಳು ನಡೆಯುವಂತೆ ಮಾಡು. ಆ ಯಜ್ಞಗಳಿಲ್ಲದೆ ನಮಗೆ ತೃಪ್ತಿಯಾಗುವುದಿಲ್ಲ."

೮೮–೮೯. ದೇವೇಂದ್ರನು ಅದನ್ನು ಕೇಳಿ ಮನ್ಮಥ, ಕ್ರೋಧ, ಲೋಭ, ದಂಭ, ಮತ್ಸರ, ದ್ವೇಷ ಇವರನ್ನು ಕರೆಯಿಸಿ "ನೀವೆಲ್ಲ ನನ್ನ ಅಪ್ಪಣೆಯಿಂದ ಭೂಲೋಕಕ್ಕೆ ಹೋಗಿ ಗೌತಮೇಶ್ವರ, ಅಹಲ್ಯೇಶ್ವರ, ಶತಾನಂದೇಶ್ವರರನ್ನು ಪೂಜಿಸುವ ಮಾನವರನ್ನು ನಿಮ್ಮ ಶಕ್ತ್ಯನುಸಾರ ತಡೆಯಿರಿ" ಎಂದು ಅಪ್ಪಣೆ ಮಾಡಿದನು.

೯೦–೯೧. ಆ ಕಾಮಾದಿಗಳು ಇಂದ್ರನ ಅಪ್ಪಣೆಯನ್ನು ಹೊಂದಿ ಭೂಲೋಕಕ್ಕೆ ಹೋಗಿ ಗೌತಮೇಶ್ವರ, ಅಹಲ್ಯೇಶ್ವರ, ಶತಾನಂದೇಶ್ವರರನ್ನು ಪೂಜಿಸುವ ಮಾನವರನ್ನು ಸೇರಿದರು.

೯೨–೯೫. ಅನಂತರ ಸಮಸ್ತ ಭೂಮಂಡಲದಲ್ಲಿ ಸಂಪೂರ್ಣ ದಕ್ಷಿಣೆಗಳುಳ್ಳ ಯಜ್ಞಗಳೂ, ವ್ರತನಿಯಮಗಳೂ, ತೀರ್ಥಯಾತ್ರೆ ಜಪಹೋಮಗಳೂ, ಇತರ

ತೀರ್ಥಯಾತ್ರಾ ಜಪೋ ಹೋಮೋ ಯಾಶ್ಚಾಽನ್ಯಾಃ ಸುಕೃತಕ್ರಿಯಾಃ ।
ಏತತ್ಸರ್ವಂ ಮಯಾಽಽಖ್ಯಾತಂ ಯತ್ಪೃಷ್ಟೋಽಸ್ಮಿ ಧರಾಧಿಪ ॥ ೯೩ ॥
ಗಯಾಕೂಪ್ಯನುಷಂಗೇಣ ಶಕ್ರ ಗೌತಮಚೇಷ್ಟಿತಂ ।
ಬಾಲಮಂಡನಮಾಹಾತ್ಮ್ಯಂ ಶಕ್ರೇಶ್ವರ ಸಮನ್ವಿತಂ ॥ ೯೪ ॥
ಇಂದ್ರಸ್ಯ ಸ್ಥಾಪನಂ ಮರ್ತ್ಯೇ ಅಹಲ್ಯಾಖ್ಯಾನಮೇವ ಚ ।
ಗೌತಮೇಶ್ವರಮಾಹಾತ್ಮ್ಯಂ ತಥಾಽಹಲ್ಯೇಶ್ವರಸ್ಯ ಚ ॥ ೯೫ ॥
ಯಶ್ಚೈತಚ್ಛೃಣುಯಾನ್ನಿತ್ಯಂ ಶ್ರದ್ಧಯಾ ಪರಯಾ ಯುತಃ ।
ಸ ಮುಚ್ಯೇತ್ಪಾತಕಾತ್ಸದ್ಯಃ ಪರದಾರ ಸಮುದ್ಭವಾತ್ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗೌತಮೇಶ್ವರಾಽಹಲ್ಯೇಶ್ವರ ಶತಾನಂದೇಶ್ವರ ಮಾಹಾತ್ಮ್ಯವರ್ಣನಂ"
ನಾಮಾಷ್ಟೋತ್ತರದ್ವಿಶತತಮೋಽಧ್ಯಾಯಃ

---

ಧರ್ಮಕಾರ್ಯಗಳೂ ನಡೆದುವು. ಅರಸ! ನೀನು ಕೇಳಿದ ಗಯಾಕೂಪದ ಸಂಬಂಧದಿಂದ ಇಂದ್ರಗೌತಮರ ಕಾರ್ಯ, ಬಾಲಮಂಡನ ಮಾಹಾತ್ಮ್ಯ, ಶಕ್ರೇಶ್ವರ ಮಾಹಾತ್ಮ್ಯ, ಇಂದ್ರಪ್ರತಿಷ್ಠೆ, ಅಹಲ್ಯಾಖ್ಯಾನ, ಗೌತಮಾಹಲ್ಯೇಶ್ವರ ಮಾಹಾತ್ಮ್ಯ ಇವುಗಳನ್ನು ಹೇಳಿದ್ದೇನೆ.

೯೬. ನಿತ್ಯವೂ ಇದನ್ನು ಅತ್ಯಂತ ಶ್ರದ್ಧೆಯಿಂದ ಕೇಳಿದವನು ಪರಪತ್ನೀಗಮನದಿಂದುಂಟಾದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗೌತಮಾಹಲ್ಯಾಶತಾನಂದೇಶ್ವರಮಾಹಾತ್ಮ್ಯವರ್ಣನ"ವೆಂಬ
ಇನ್ನೂರೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತೋತ್ತರದ್ವಿಶತತಮೋಽಧ್ಯಾಯಃ

### ಶಂಖಾದಿತ್ಯ ಶಂಖತೀರ್ಥೋತ್ಪತ್ತಿವೃತ್ತಾಂತವರ್ಣನಂ

ಆನರ್ತ ಉವಾಚ:—

ಸಾಂಪ್ರತಂ ಮುನಿಶಾರ್ದೂಲ ಶಂಖತೀರ್ಥ ಸಮುದ್ಭವಂ ।
ಮಾಹಾತ್ಮ್ಯಂ ವದ ಮೇ ಕೃತ್ಸ್ನಂ ಶ್ರದ್ಧಾ ಮೇ ಮಹತೀ ಸ್ಥಿತಾ ॥ ೧ ॥
ಅಹೋ ತೀರ್ಥಮಹೋ ತೀರ್ಥಂ ಹಾಟಕೇಶ್ವರ ಸಂಜ್ಞಿತಂ ।
ಕ್ಷೇತ್ರಂ ಯಚ್ಚ ಧರಾಪೃಷ್ಠೇ ಸರ್ವಾಶ್ಚರ್ಯಮಯಂ ಶುಭಂ ॥ ೨ ॥
ನಾಽಹಂ ತೃಪ್ತಿಂ ದ್ವಿಜಶ್ರೇಷ್ಠ ಪ್ರಗಚ್ಛಾಮಿ ಕಥಂಚನ ।
ಶೃಣ್ವಾನಸ್ತು ಸುಮಾಹಾತ್ಮ್ಯಂ ಕ್ಷೇತ್ರಸ್ಯಾಸ್ಯ ಸಮುದ್ಭವಂ ॥ ೩ ॥

ವಿಶ್ವಾಮಿತ್ರ ಉವಾಚ:—

ಅತ್ರ ತೇ ಕೀರ್ತಯಿಷ್ಯಾಮಿ ಪೂರ್ವವೃತ್ತಂ ಕಥಾಂತರಂ ।
ಶಂಖತೀರ್ಥಸ್ಯ ಮಾಹಾತ್ಮ್ಯಂ ಯಥಾ ಜಾತಂ ಧರಾತಲೇ ॥ ೪ ॥
ಆನರ್ತಾಧಿಪತಿಃ ಪೂರ್ವಮಾಸೀದನ್ಯೋ ಮಹೀಪತಿಃ ।
ಯಥಾ ತ್ವಂ ಸಾಂಪ್ರತಂ ಭೂಮೌ ಸರ್ವಲೋಕಪ್ರಪಾಲಕಃ ॥ ೫ ॥

---

### ಕನ್ನಡದ ಅನುವಾದ

#### ಶಂಖಾದಿತ್ಯಶಂಖತೀರ್ಥೋತ್ಪತ್ತಿವೃತ್ತಾಂತವರ್ಣನ

೧. ಆನರ್ತನು ಹೇಳುತ್ತಾನೆ:—ಮುನಿವರ್ಯನೆ! ಈಗ ನನಗೆ ಶಂಖ ತೀರ್ಥದ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ಹೇಳು. ಕೇಳಲು ಅತ್ಯಂತ ಶ್ರದ್ಧೆಯುಂಟಾಗಿದೆ.

೨. ಈ ಹಾಟಕೇಶ್ವರ ಕ್ಷೇತ್ರವು ಭೂಲೋಕದಲ್ಲಿ ಸಮಸ್ತಾಶ್ಚರ್ಯಕ್ಕೆ ಆಶ್ರಯವಾದುದು.

೩. ನಾನು ಈ ಕ್ಷೇತ್ರದ ಮಾಹಾತ್ಮ್ಯವನ್ನು ಕೇಳುತ್ತ ತೃಪ್ತಿಯನ್ನು ಹೊಂದುವುದಿಲ್ಲ.

೪. ವಿಶ್ವಾಮಿತ್ರನು ಹೇಳುತ್ತಾನೆ:—ಅರಸ! ಭೂಮಿಯಲ್ಲಿ ಶಂಖತೀರ್ಥದ ಮಾಹಾತ್ಮ್ಯೆಯು ಹೇಗುಂಟಾಯಿತು? ಎಂಬ ವಿಷಯದಲ್ಲಿ ಹಿಂದೆ ನಡೆದ ಒಂದು ಕಥೆಯನ್ನು ನಿನಗೆ ಹೇಳುತ್ತೇನೆ ಕೇಳು.

೫. ಹಿಂದೆ ಈಗ ಭೂಮಿಯನ್ನು ಪಾಲಿಸುವ ನಿನ್ನಂತೆಯೇ ಆನರ್ತದೇಶದಲ್ಲಿ ಒಬ್ಬ ದೊರೆಯಿದ್ದನು.

ಸೋಽಕಸ್ಮಾತ್ಕುಷ್ಟಭಾಗ್ಜಾತೋ ವಿಕಲಾಂಗೋ ಬಭೂವ ಹ ।
ಅಪುತ್ರಃ ಶತ್ರುಭಿರ್ವ್ಯಾಪ್ತಸ್ತ್ರಸ್ತಶ್ಚ ನೃಪಸತ್ತಮಃ ॥ ೬ ॥
ಸ ಸರ್ವೈರ್ಭೂಮಿಪಾಲೈಶ್ಚ ಸರ್ವತಃ ಪರಿಪೀಡಿತಃ ।
ರಾಜ್ಯಭ್ರಂಶಸಮೋಪೇತಃ ಪ್ರಾಪ್ತೋ ರೈವತಕಂ ಗಿರಿಂ ॥ ೭ ॥
ತತ್ರಾಽಪಿ ಪೀಡ್ಯತೇ ನಿತ್ಯಂ ಸರ್ವತಸ್ತು ಮಲಿಮ್ಲುಚೈಃ ॥ ೮ ॥
ಹಸ್ತ್ಯಶ್ವರಥಹೀನಸ್ತು ಕೋಶಹೀನೋ ಯದಾಽಭವತ್ ।
ಸ ತದಾ ಚಿಂತಯಾಮಾಸ ಕಿಂ ಕರೋಮಿ ಚ ಸಾಂಪ್ರತಂ ॥ ೯ ॥
ಕಲತ್ರಾಣ್ಯಪಿ ಸರ್ವಾಣಿ ಹ್ರಿಯಂತೇ ತಸ್ಕರೈರ್ಬಲಾತ್ ॥ ೧೦ ॥
ಸ ಏವಂ ಚಿಂತಯಾನಸ್ತು ಗತೋ ವೈ ನಾರದಂ ವಿಭುಂ ।
ದ್ರಷ್ಟುಂ ಪಾರ್ಥಿವಶಾರ್ದೂಲ ವೈಷ್ಣವೇ ದಿವಸೇ ಸ್ಥಿತೇ ॥ ೧೧ ॥
ತತ್ರಾಽಪಶ್ಯತ್ಸ ಸಂಪ್ರಾಪ್ತಂ ನಾರದಂ ಮುನಿಸತ್ತಮಂ ।
ತೀರ್ಥಯಾತ್ರಾ ಪ್ರಸಂಗೇನ ದಾಮೋದರ ದಿದೃಕ್ಷಯಾ ॥ ೧೨ ॥
ತಂ ಪ್ರಣಮ್ಯಾಽಥ ಶಿರಸಾ ಕೃತಾಂಜಲಿಪುಟಃ ಸ್ಥಿತಃ ।
ಪ್ರೋವಾಚ ವಚನಂ ದೀನ ಉಪವಿಶ್ಯ ತದಗ್ರತಃ ॥ ೧೩ ॥

ರಾಜೋವಾಚ :—

ಶತ್ರುಭಿಃ ಪರಿಭೂತೋಽಹಂ ಸಮುಂತಾನ್ಮುನಿಸತ್ತಮ ।
ತತೋ ರಾಜ್ಯಪರಿಭ್ರಂಶಾತ್ಸಂಪ್ರಾಪ್ತೋಽತ್ರ ಮಹಾಗಿರೌ ॥ ೧೪ ॥

---

೬–೭. ಅವನು ಅಕಸ್ಮಾತ್ತಾಗಿ ಕುಷ್ಠರೋಗಿಯೂ, ಅಂಗಹೀನನೂ, ಅಪುತ್ರನೂ, ಶತ್ರುಗಳಿಂದ ವ್ಯಾಪ್ತನೂ, ಭಯಗ್ರಸ್ತನೂ, ಸಮಸ್ತ ರಾಜರಿಂದ ಪೀಡಿತನೂ, ರಾಜ್ಯಭ್ರಷ್ಟನೂ ಆಗಿ ರೈವತಕಗಿರಿಯನ್ನು ಸೇರಿದನು.

೮. ಅಲ್ಲಿ ಯಾವಾಗಲೂ ಕಳ್ಳರು ಅವನನ್ನು ಪೀಡಿಸಿದರು.

೯. ಆನೆ, ಕುದುರೆ; ರಥ, ಬೊಕ್ಕಸಗಳಿಲ್ಲದವನಾಗಲು ಅವನು ಹೀಗೆ ಆಲೋಚಿಸಿದನು. "ನಾನೀಗ ಏನನ್ನು ಮಾಡಲಿ.

೧೦. ಕಳ್ಳರು ಬಲಾತ್ಕಾರದಿಂದ ಪತ್ನಿಯರನ್ನು ಅಪಹರಿಸುತ್ತಿದ್ದಾರೆ."

೧೧–೧೨. ಅವನು ಹೀಗೆ ಚಿಂತಿಸುತ್ತ ವಿಷ್ಣುದಿನದಲ್ಲಿ ನಾರದಮುನಿಯನ್ನು ನೋಡಲು ಹೋದನು. ಅವನು ಅಲ್ಲಿ ತೀರ್ಥಯಾತ್ರೆಯ ನಿಮಿತ್ತದಿಂದ ವಿಷ್ಣುವನ್ನು ನೋಡಲು ಬಂದ ನಾರದಮುನಿಯನ್ನು ಕಂಡನು.

೧೩. ಅವನಿಗೆ ತಲೆಬಾಗಿ ವಂದಿಸಿ ಕೈಜೋಡಿಸಿಕೊಂಡು ಆ ಮುನಿಯ ಮುಂದೆ ಕುಳಿತು ದೈನ್ಯದಿಂದ ಇಂತೆಂದನು.

೧೪. ರಾಜನು ಹೇಳುತ್ತಾನೆ:—ಮುನಿವರ್ಯನೇ! ನಾನು ಶತ್ರುಗಳಿಂದ ಪರಾಜಿತನಾಗಿ ರಾಜ್ಯಭ್ರಂಶದಿಂದ ಈ ರೈವತಕಪರ್ವತಕ್ಕೆ ಬಂದೆನು.

ವಿಪಿನೇ ತಸ್ಕರೈಃ ಪಾಪೈಃ ಪ್ರಪೀಡ್ಯೇಽಹಂ ಸಮಂತತಃ ।
ಯತ್ಕಿಂಚಿದಶ್ವನಾಗಾದ್ಯಂ ಮಯಾ ಸಹ ಸಮಾಗತಂ ॥ ೧೫ ॥
ತತ್ಸರ್ವಂ ತಸ್ಕರೈರ್ನೀತಂ ಕೋಶಾ ದಾರಾಸ್ತಥಾ ವಸು ।
ತಸ್ಮಾದ್ವದ ಮುನಿಶ್ರೇಷ್ಠ ವೈರಾಗ್ಯಂ ಮೇ ಮಹತ್ಸ್ಥಿತಂ ॥ ೧೬ ॥
ಅನ್ಯಜನ್ಮೋದ್ಭವಂ ಕಿಂಚಿನ್ಮಮ ಪಾಪಾಂ ಸುದಾರುಣಂ ।
ಯೇನೇಮಾಂ ಚ ದಶಾಂ ಪ್ರಾಪ್ತಃ ಸಹಸಾ ಮುನಿಸತ್ತಮ ॥ ೧೭ ॥
ತಸ್ಯ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಮುನೀಶ್ವರಃ ।
ಪ್ರೋವಾಚಾಽಥ ನೃಪಂ ದೀನಂ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೧೮ ॥

ನಾರದ ಉವಾಚ:—

ನ ತ್ವಯಾ ಕುತ್ಸಿತಂ ಕಿಂಚಿತ್ಪೂರ್ವದೇಹಾಂತರೇ ಕೃತಂ ।
ಮಯಾ ಜ್ಞಾತಂ ಮಹಾರಾಜ ಸರ್ವಂ ದಿವ್ಯೇನ ಚಕ್ಷುಷಾ ॥ ೧೯ ॥
ತ್ವಮಾಸೀಃ ಪಾರ್ಥಿವಃ ಪೂರ್ವಂ ಸಿದ್ಧಪನ್ನಗಸಂಜ್ಞಿತೇ ।
ಪತ್ತನೇ ಸೋಮವಂಶೀಯಃ ಸರ್ವಶತ್ರುನಿಬರ್ಹಣಃ ॥ ೨೦ ॥
ತ್ವಯಾ ಚೇಷ್ಟಂ ಮಹಾಯಜ್ಞೈಃ ಸದಾ ಸಂಪೂರ್ಣದಕ್ಷಿಣೈಃ ।
ಮಹಾದಾನಾನಿ ದತ್ತಾನಿ ಪೂಜಿತಾ ಬ್ರಾಹ್ಮಣೋತ್ತಮಾಃ ॥ ೨೧ ॥
ತೇನ ಕರ್ಮವಿಪಾಕೇನ ಭೂಯಃ ಪಾರ್ಥಿವತಾಂ ಗತಃ ॥ ೨೨ ॥

---

೧೫–೧೭. ಈ ಕಾಡಿನಲ್ಲಿ ಪಾಪಿಗಳಾದ ಕಳ್ಳರು ನನ್ನನ್ನು ಪೀಡಿಸುತ್ತಾರೆ. ನನ್ನೊಡನೆ ಬಂದ ಆನೆ, ಕುದುರೆ, ಬೊಕ್ಕಸ, ಪತ್ನಿ, ದ್ರವ್ಯ ಇವೆಲ್ಲವನ್ನೂ ಕಳ್ಳರು ಕದ್ದೊಯ್ದರು. ಆದರಿಂದ ನಾನು ವೈರಾಗ್ಯಗೊಂಡೆನು. ಇತರ ಜನ್ಮದ ಯಾವ ದಾರುಣ ಪಾಪವು ನಮಗೆ ಇಂತಹ ದುರವಸ್ಥೆಯನ್ನುಂಟುಮಾಡಿತು? ಕೂಡಲೆ ಹೇಳು.

೧೮. ನಾರದನು ಅವನ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ದಿವ್ಯ ದೃಷ್ಟಿಯಿಂದ ತಿಳಿದು ದೀನನಾದ ಆ ರಾಜನನ್ನು ಕುರಿತು ಹೀಗೆಂದನು.

೧೯. ನಾರದನು ಹೇಳುತ್ತಾನೆ:—ದೊರೆಯೆ! ನೀನು ಹಿಂದಿನ ಜನ್ಮದಲ್ಲಿ ಸ್ವಲ್ಪವೂ ದುಷ್ಕಾರ್ಯವನ್ನೆಸಗಲಿಲ್ಲ. ಅದನ್ನು ನಾನು ದಿವ್ಯದೃಷ್ಟಿಯಿಂದ ನೋಡಿದೆನು.

೨೦. ನೀನು ಹಿಂದೆ ಸಿದ್ಧಪನ್ನಗವೆಂಬ ಪಟ್ಟಣದಲ್ಲಿ ಶತ್ರುಗಳನ್ನು ನಾಶಗೊಳಿಸುವ ಸೋಮವಂಶದ ದೊರೆಯಾಗಿ ಜನಿಸಿದ್ದೆ.

೨೧. ನೀನು ಅನೇಕ ಯಜ್ಞಗಳನ್ನು ಮಾಡಿ ಸಂಪೂರ್ಣವಾಗಿ ದಕ್ಷಿಣೆಯನ್ನು ಕೊಟ್ಟಿರುವೆ. ಮಹಾ ದಾನಗಳನ್ನಿತ್ತು ಬ್ರಾಹ್ಮಣೋತ್ತಮರನ್ನು ಪೂಜಿಸಿರುವೆ.

೨೨. ಆ ಕರ್ಮದ ಪರಿಣಾಮದಿಂದ ನೀನು ಮರಳಿ ರಾಜನಾಗಿರುವೆ.

ಆನರ್ತ ಉವಾಚ :—

ಇಹ ಜನ್ಮನಿ ನೋ ಕೃತ್ಯಂ ಸಂಸ್ಮರಾಮಿ ವಿಭೋ ಕೃತಂ ।
ತತ್ಕಿಂ ರಾಜ್ಯಪರಿಭ್ರಂಶಃ ಸಹಸಾ ಮೇ ಸಮುತ್ಥಿತಃ ॥ ೨೩ ॥
ಲಕ್ಷ್ಮ್ಯಾ ಹೀನಸ್ಯ ಲೋಕಸ್ಯ ಲೋಕೇಽಸ್ಮಿನ್ ವ್ಯರ್ಥತಾಂ ವ್ರಜೇತ್ ।
ಜೀವಿತಂ ಮುನಿಶಾರ್ದೂಲ ವಿಜ್ಞಾತಂ ಹಿ ಮಯಾಽಧುನಾ ॥ ೨೪ ॥
ಮೃತೋ ನರೋ ಗತಶ್ರೀಕೋ ಮೃತಂ ರಾಷ್ಟ್ರಮರಾಜಕಂ ।
ಮೃತಮಶ್ರೋತ್ರಿಯೇ ದಾನಂ ಮೃತೋ ಯಜ್ಞಸ್ತ್ವದಕ್ಷಿಣಃ ॥ ೨೫ ॥
ಲಕ್ಷ್ಮ್ಯಾ ಹೀನಸ್ಯ ಮರ್ತ್ಯಸ್ಯ ಬಾಂಧವೋಽಪಿ ವಿಜಾಯತೇ ।
ಪ್ರಾರ್ಥಯಿಷ್ಯತಿ ಮಾಂ ನೂನಂ ದೃಷ್ಟ್ವಾ ತಂ ಚಾಽನ್ಯತೋ ವ್ರಜೇತ್ ॥
ಯಥಾ ಮಾಂ ಸಾಂಪ್ರತಂ ದೃಷ್ಟ್ವಾ ಯೇ ಮಯಾಽಪಿ ಪ್ರತರ್ಪಿತಾಃ ।
ತೇಽಪಿ ದೂರತರಂ ಯಾಂತಿ ಏಷ ಮಾಂ ಪ್ರಾರ್ಥಯಿಷ್ಯತಿ ॥ ೨೭ ॥
ಧನಹೀನಂ ನರಂ ತ್ಯಕ್ತ್ವಾ ಕುಲೀನಮಪಿ ಚೋತ್ತಮಂ ।
ಗಚ್ಛತಿ ಸ್ವಜನೋಽನ್ಯತ್ರ ಶುಷ್ಕಂ ವೃಕ್ಷಮಿವಾಂಡಜಾಃ ॥ ೨೮ ॥
ತತ್ಕಾರ್ಯ ಕಾರಣಾರ್ಥಾಯ ದರಿದ್ರೋಽಭ್ಯೇತಿ ಚೇದ್ಗೃಹಂ ।
ಧನಿನೋ ಭರ್ತ್ಸಯಂತ್ಯೇನಂ ಸಮಾಗಚ್ಛಂತಿ ನಾಂತಿಕಂ ॥ ೨೯ ॥

---

೨೩. ಆನರ್ತನು ಹೇಳುತ್ತಾನೆ:—ಮುನಿವರ್ಯನೆ! ನಾನು ಈ ಜನ್ಮದಲ್ಲಿ ಮಾಡಿದ ಯಾವ ಅಕಾರ್ಯವನ್ನೂ ಸ್ಮರಿಸುವುದಿಲ್ಲ. ಆದರೂ ನಾನು ಹೇಗೆ ರಾಜ್ಯಭ್ರಷ್ಟನಾದೆನು?

೨೪. ಈ ಲೋಕದಲ್ಲಿ ಸಂಪತ್ತಿಲ್ಲದವನ ಜೀವನವು ವ್ಯರ್ಥವೆಂಬುದನ್ನು ನಾನೀಗ ಅರಿತೆನು.

೨೫. ಸಂಪತ್ತಿಲ್ಲದ ಮನುಷ್ಯನೂ, ರಾಜನಿಲ್ಲದ ರಾಜ್ಯವೂ, ಅಶ್ರೋತ್ರಿಯನಲ್ಲಿತ್ತ ದಾನವೂ, ದಕ್ಷಿಣೆಯಿಲ್ಲದ ಯಜ್ಞವೂ ಮೃತವಾದಂತೆಯೇ.

೨೬. ಸಂಪತ್ತಿಲ್ಲದ ಮಾನವನಿಗೆ ಬಂಧುಗಳು ವಿರುದ್ಧರಾಗುವರು. ಈ ದರಿದ್ರನು ನಮ್ಮನ್ನು ಪ್ರಾರ್ಥಿಸುವನೆಂದು ಅವನನ್ನು ನೋಡಿ ದೂರ ಹೋಗುವರು.

೨೭. ಅದರಂತೆ ನನ್ನಿಂದ ಹಿಂದೆ ತೃಪ್ತಿಗೊಂಡ ಬಾಂಧವರು ಈಗ ನನ್ನನ್ನು ನೋಡಿ ಇವನು ನನ್ನನ್ನು ಪ್ರಾರ್ಥಿಸುವನೆಂದು ದೂರ ಹೋಗುತ್ತಾರೆ.

೨೮. ಸ್ವಜನರು ಧನಹೀನನಾದ ನರನು ಕುಲೀನನೂ, ಉತ್ತಮನೂ ಆಗಿದ್ದರೂ ಅವನನ್ನು ಒಣಗಿದ ಮರವನ್ನು ಪಕ್ಷಿಗಳಂತೆ ತ್ಯಜಿಸಿ ಬೇರೆಕಡೆ ಹೋಗುತ್ತಾರೆ.

೨೯. ತನ್ನ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಬಡವನು ಧನಿಕನ ಮನೆಗೆ ಬಂದರೆ ಅವನನ್ನು ಧನಿಕನು ಹೆದರಿಸುತ್ತಾನೆ. ಹತ್ತಿರ ಬರುವುದಿಲ್ಲ.

ಕೃಪಣೋಽಪಿ ಧನಾಢ್ಯಶ್ಚೇದಾಗಚ್ಛತಿ ಹಿ ಯಾಚಿತುಂ ।
ಏಷ ದಾಸ್ಯತಿ ಮೇ ಕಿಂಚಿದಿತಿ ಚಿತ್ತೇ ನೃಣಾಂ ಭವೇತ್ ॥ ೩೦ ॥
ಮಮ ತ್ವಂ ಪೂರ್ವವಂಶೀಯಃ ಪಿತಾ ತೇ ಚ ಪಿತುರ್ಮಮ ।
ಸದಾ ಸ್ನೇಹಪರಶ್ಚಾಽಽಸೀತ್ತ್ವಂ ಚ ಸ್ನೇಹವಿವರ್ಜಿತಃ ॥ ೩೧ ॥
ಏವಂ ಬ್ರುವಂತಿ ಲೋಕೇಽತ್ರ ಧನಿನಾಂ ಪುರತಃ ಸ್ಥಿತಾಃ ।
ಕುಲೀನಾ ಅಪಿ ಪಾಪಾನಾಂ ದೃಶ್ಯಂತೇ ಧನಲಿಪ್ಸಯಾ ।
ದರಿದ್ರಸ್ಯ ಮನುಷ್ಯಸ್ಯ ಕ್ಷಿತೌ ರಾಜ್ಯಂ ಪ್ರಕುರ್ವತಃ ॥ ೩೨ ॥
ಪ್ರಶೋಷಃ ಕೇವಲಂ ಭಾವೀ ಹೃದಯಸ್ಯ ಮಹಾಮುನೇ ।
ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರ ಪರಿಶೋಷಿಣೌ ।
ಯಶ್ಚಾಽಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥ ೩೩ ॥
ಶ್ಮಶಾನಮಪಿ ಸೇವಂತೇ ಧನಲುಬ್ಧಾ ನಿಶಾಽಗಮೇ ।
ಜನೇತಾರಮಪಿ ತ್ಯಕ್ತ್ವಾ ನಿತ್ಯಂ ಯಾಂತಿ ಸುದೂರತಃ ॥ ೩೪ ॥
ಸುಮೂರ್ಖೋಽಪಿ ಭವೇದ್ವಿದ್ವಾನಕುಲೀನೋಽಪಿ ಸತ್ಕುಲಃ ।
ಯಸ್ಯ ವಿತ್ತಂ ಭವೇದ್ಧರ್ಮ್ಯೇ ವಿಪರೀತಮತೋಽನ್ಯಥಾ ॥ ೩೫ ॥
ನಿರ್ವಿಣ್ಣೋಽಹಂ ಮುನಿಶ್ರೇಷ್ಠ ಜೀವಿತಸ್ಯ ಚ ಸಾಂಪ್ರತಂ ।
ತಸ್ಮಾದ್ಬ್ರೂಹಿ ಕಿಮರ್ಥಂ ಮೇ ದಾರಿದ್ರ್ಯಂ ಸಮುಪಸ್ಥಿತಂ ॥ ೩೬ ॥

---

೩೦. ಕೃಪಣನು ಧನಿಕನಾದರೆ ಅವನ ಹತ್ತಿರ ಬೇಡಲು ಯಾಚಕರು ಬರುತ್ತಾರೆ. ಇವನು ಏನನ್ನಾದರೂ ಕೊಡುವನೆಂದು ಯಾಚಕರು ಮನಸ್ಸಿನಲ್ಲಿ ಆಲೋಚಿಸುವರು.

೩೧–೩೩. ಕುಲೀನರೂ ಧನದಾಶೆಯಿಂದ ಲೋಕದಲ್ಲಿ ಧನಿಕರ ಮುಂದೆ ನಿಂತು ನೀನು ನನ್ನ ವಂಶದವನು. ನಿನ್ನ ತಂದೆಯು ನನ್ನ ತಂದೆಗೆ ಯಾವಾಗಲೂ ಅತ್ಯಂತ ಮಿತ್ರನಾಗಿದ್ದನು. ನೀನು ಮಾತ್ರ ಪ್ರೀತಿ ಮಾಡುವುದಿಲ್ಲ. ಎಂದು ಹೇಳುವುದನ್ನು ನೋಡುತ್ತೇವೆ. ರಾಜ್ಯವಾಳುತ್ತಿರುವ ಬಡ ಮನುಷ್ಯನ ಹೃದಯವು ಕೇವಲ ಶೋಷಣೆಗೀಡಾಗುವುದು. ಆಶೆಗೊಳ್ಳುವ ಬಡವನೂ, ಕೋಪಿಸಿಕೊಳ್ಳುವ ಅಸಮರ್ಥರಾಜನೂ ಇವರಿಬ್ಬರೂ ಶರೀರವನ್ನು ಒಣಗಿಸುವ ಕಠಿನವಾದ ಮುಳ್ಳುಗಳು.

೩೪. ದ್ರವ್ಯಾಶೆಯುಳ್ಳ ಮಾನವರು ರಾತ್ರಿಯಲ್ಲಿ ಶ್ಮಶಾನವನ್ನೂ ಸೇವಿಸುತ್ತಾರೆ. ರಾತ್ರಿಯಲ್ಲಿ ತಂದೆಯನ್ನೂ ತ್ಯಜಿಸಿ ದೂರ ಹೋಗುತ್ತಾರೆ.

೩೫. ಧರ್ಮಕಾರ್ಯದಲ್ಲಿ ದ್ರವ್ಯವನ್ನು ವಿನಿಯೋಗಿಸುವವನು ಮೂರ್ಖನಾಗಿದ್ದರೂ ವಿದ್ವಾಂಸನಾಗುವನು. ದುಷ್ಕುಲದವನಾದರೂ ಕುಲೀನನಾಗುವನು.

೩೬. ಮುನಿವರ್ಯನೆ! ನಾನೀಗ ಜೀವನದಲ್ಲಿ ವೈರಾಗ್ಯಗೊಂಡಿರುವೆನು. ಆದುದರಿಂದ ನನಗೆ ಏಕೆ ಬಡತನ ಬಂದಿತು? ಹೇಳು.

ಕುಷ್ಠಶ್ಚಾಽಪಿ ಮನೋಪೇತಃ ಶತ್ರುಭಿಶ್ಚ ಪರಾಭವಂ ।
ಅನ್ಯಜನ್ಮಾಂತರಂ ದೃಷ್ಟಂ ತ್ವಯಾ ದಿವ್ಯೇನ ಚಕ್ಷುಷಾ ॥ ೩೭ ॥
ಕುಕರ್ಮಣಾ ನ ಸಂಸ್ಪೃಷ್ಟಂ ಸ್ವಲ್ಪೇನಾಽಪಿ ಬ್ರವೀಷಿ ಮಾಂ ।
ಏತಜ್ಜನ್ಮಾಂತರಂ ದೃಷ್ಟಂ ಸ್ಮರಾಮಿ ಮುನಿಸತ್ತಮ ॥ ೩೮ ॥
ನ ಮಯಾ ಕುಕೃತಂ ಕಿಂಚಿತ್ಕದಾಚಿತ್ಸಮನುಷ್ಠಿತಂ ।
ತತ್ಕಿಂ ರಾಜ್ಯಪರಿಭ್ರಂಶೋ ಜಾತೋಽಯಂ ಮಮ ಸನ್ಮುನೇ ॥ ೩೯ ॥
ಅತ್ರ ಮೇ ಕೌತುಕಂ ಜಾತಂ ತಸ್ಮಾದ್ದೇಹಿ ವಿನಿರ್ಣಯಂ ।
ಭವೇನ್ನ ವಾ ಭವೇತ್ಕರ್ಮ ಕೃತಂ ಯಚ್ಚ ಶುಭಾಽಶುಭಂ ॥ ೪೦ ॥

ವಿಶ್ವಾಮಿತ್ರ ಉವಾಚ:—

ತಸ್ಯ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ತು ನಾರದಃ ।
ಕೃಪಯಾ ಪರಯಾವಿಷ್ಟಸ್ತತಃ ಪ್ರೋವಾಚ ಸಾದರಂ ॥ ೪೧ ॥
ಶೃಣು ರಾಜನ್ ಪ್ರವಕ್ಷ್ಯಾಮಿ ಯಥಾ ಶುದ್ಧಿಃ ಪ್ರಜಾಯತೇ ।
ತವ ರಾಜ್ಯಸ್ಯ ಸಂಪ್ರಾಪ್ತಿರ್ಯಥಾ ಭೂಯೋಽಪಿ ಜಾಯತೇ ॥ ೪೨ ॥
ತವ ಭೂಮೌ ಮಹಾಪುಣ್ಯಮಸ್ತಿ ಕ್ಷೇತ್ರಂ ಜಗತ್ತ್ರಯೇ ।
ಹಾಟಕೇಶ್ವರಸಂಜ್ಞಂ ತು ತೀರ್ಥಂ ತತ್ರಾಽಸ್ತಿ ಶೋಭನಂ ।
ಶಂಖತೀರ್ಥಮಿತಿ ಖ್ಯಾತಂ ಸರ್ವಪಾತಕನಾಶನಂ ॥ ೪೩ ॥

---

೩೭. ನನ್ನನ್ನು ಕುಷ್ಠರೋಗವು ಆವರಿಸಿದೆ. ಶತ್ರುಗಳಿಂದ ಸೋತಿರುವೆನು. ನೀನು ದಿವ್ಯದೃಷ್ಟಿಯಿಂದ ಇತರ ಜನ್ಮದ ವೃತ್ತಾಂತವನ್ನು ನೋಡಿರುವೆ.

೩೮–೩೯. ಜನ್ಮಾಂತರದಲ್ಲಿ ಸ್ವಲ್ಪವೂ ದುಷ್ಕಾರ್ಯವನ್ನು ಮಾಡಲಿಲ್ಲವೆಂದು ಹೇಳುತ್ತಿರುವೆ. ನಾನು ಮಾಡಿದ ಯಾವ ಅಕಾರ್ಯವೂ ಸ್ಮರಣೆಗೆ ಬರುವುದಿಲ್ಲ. ನನಗೆ ರಾಜ್ಯಭ್ರಂಶವು ಏಕೆ ಆಯಿತು ?

೪೦. ಆದುದರಿಂದ ಶುಭಾಶುಭಕಾರ್ಯವನ್ನು ಮಾಡಿದ್ದೇನೊ ಇಲ್ಲವೊ? ನಿಶ್ಚಯಿಸಿ ಹೇಳು. ಈ ವಿಷಯದಲ್ಲಿ ನನಗೆ ಕುತೂಹಲವುಂಟಾಗಿದೆ.

೪೧. ವಿಶ್ವಾಮಿತ್ರನು ಹೇಳುತ್ತಾನೆ:—ನಾರದನು ಅವನ ಆ ಮಾತನ್ನು ಕೇಳಿ ಬಹಳ ಹೊತ್ತು ಚಿಂತಿಸಿ ಅತ್ಯಂತ ದಯೆಯಿಂದ ಆದರಪೂರ್ವಕವಾಗಿ ಹೀಗೆ ಹೇಳಿದನು.

೪೨. "ಅರಸ! ನಿನಗೆ ಹೇಗೆ ಶುದ್ಧಿಯಾಗುವುದು ? ಮರಳಿ ರಾಜ್ಯವು ಹೇಗೆ ಲಭಿಸುವುದು ಎಂಬುದನ್ನು ಹೇಳುತ್ತೇನೆ ಕೇಳು.

೪೩. ಭೂಲೋಕದಲ್ಲಿಯೇ ಅಲ್ಲದೆ ಜಗತ್ರಯದಲ್ಲಿಯೇ ಪುಣ್ಯಕರವಾದ ಹಾಟಕೇಶ್ವರವೆಂಬ ಒಂದು ತೀರ್ಥವಿದೆ. ಅಲ್ಲಿ ಸಕಲ ಪಾಪಗಳನ್ನು ನಾಶಗೊಳಿಸುವ ಪ್ರಸಿದ್ಧವಾದ ಶಂಖತೀರ್ಥವಿದೆ.

ಯಸ್ತತ್ರ ಕುರುತೇ ಸ್ನಾನಂ ಶ್ರದ್ಧಯಾ ಪರಯಾ ಯುತಃ ।
ಅಷ್ಟಮ್ಯಾಂ ಶುಕ್ಲಪಕ್ಷಸ್ಯ ಸಂಪ್ರಾಪ್ತೇ ಮಾಸಿ ಮಾಧವೇ ॥ ೪೪ ॥
ಸೂರ್ಯವಾರೇ ತು ಸಂಪ್ರಾಪ್ತೇ ಭಾಸ್ಕರಸ್ಯೋದಯಂ ಪ್ರತಿ ।
ಸರ್ವಕುಷ್ಠವಿನಿರ್ಮುಕ್ತೋ ಜಾಯತೇ ಸೂರ್ಯಸನ್ನಿಭಃ ॥ ೪೫ ॥
ಯಂ ಯಂ ಕಾಮಮಭಿಧ್ಯಾಯೇತ್ತಂ ತಂ ಸರ್ವೇಷು ದುರ್ಲಭಂ ।
ಸ ತದಾಪ್ನೋತ್ಯಸಂದಿಗ್ಧಂ ದೃಷ್ಟ್ವಾ ಶಂಖೇಶ್ವರಂ ಶುಭಂ ॥ ೪೬ ॥
ಕಿಂ ತ್ವಯಾ ನ ಶ್ರುತಂ ತತ್ರ ಸ್ವದೇಶೇ ವಸತಾ ನೃಪ ।
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಯತ್ತ್ವಮತ್ರ ಸಮಾಗತಃ ॥ ೪೭ ॥
ಸಿದ್ಧಸೇನ ಉವಾಚ:—
ಕಥಂ ಶಂಖೇಶ್ವರೋ ದೇವಃ ಸಂಜಾತೋ ವದ ಸನ್ಮುನೇ ॥ ೪೮ ॥
ನಾರದ ಉವಾಚ:—
ಅಹಂ ತೇ ಕಥಯಿಷ್ಯಾಮಿ ಕಥಾಮೇತಾಂ ಪುರಾತನೀಂ ।
ಯಥಾ ಶಂಖೇಶ್ವರೋ ಜಾತಃ ಶಂಖತೀರ್ಥಂ ತು ಪಾರ್ಥಿವ ॥ ೪೯ ॥
ಆಸತುರ್ಬ್ರಾಹ್ಮಣೌ ಪೂರ್ವಂ ಲಿಖಿತಃ ಶಂಖ ಏವ ಚ ।
ಭ್ರಾತರೌ ವೇದವಿದುಷೌ ತಪಸ್ಯುಗ್ರೇ ವ್ಯವಸ್ಥಿತೌ ॥ ೫೦ ॥

---

೪೪—೪೫. ವೈಶಾಖ ಶುಕ್ಲ ಅಷ್ಟಮಿ ಭಾನುವಾರದ ದಿನ ಸೂರ್ಯೋದಯ ಕಾಲದಲ್ಲಿ ಅಲ್ಲಿ ಅತ್ಯಂತ ಶ್ರದ್ಧೆಯಿಂದ ಮಿಂದವನು ಸಕಲ ಕುಷ್ಠರೋಗದಿಂದ ಮುಕ್ತನಾಗಿ ಸೂರ್ಯನಂತಾಗುವನು.

೪೬. ಯಾವನು ಸಮಸ್ತ ತೀರ್ಥಗಳಲ್ಲಿ ದುರ್ಲಭವಾದ ಯಾವ ಇಷ್ಟಾರ್ಥ ವನ್ನು ಅಲ್ಲಿ ಚಿಂತಿಸುವನೊ, ಅವನು ಶಂಖೇಶ್ವರನ ದರ್ಶನದಿಂದ ಅದನ್ನು ನಿಶ್ಚಯವಾಗಿಯೂ ಪಡೆಯುವನು.

೪೭. ರಾಜನೆ! ನೀನು ನಿನ್ನ ದೇಶದಲ್ಲಿ ವಾಸಿಸುತ್ತ ಆ ತೀರ್ಥದ ಮಾಹಾತ್ಮ್ಯ ವನ್ನು ಕೇಳಲಿಲ್ಲವೊ? ಇಲ್ಲಿಗೆ ಬಂದಿರುವೆಯಲ್ಲ.

೪೮. ಸಿದ್ಧಸೇನನು ಹೇಳುತ್ತಾನೆ:—ಮುನಿಯೆ! ಅಲ್ಲಿ ಶಂಖೇಶ್ವರನು ಹೇಗೆ ಹುಟ್ಟಿದನು? ಅದನ್ನು ನನಗೆ ಹೇಳು.

೪೯. ನಾರದನು ಹೇಳುತ್ತಾನೆ:—ದೊರೆಯೆ! ನಿನಗೆ ನಾನು ಈ ಶಂಖೇ ಶ್ವರನೂ, ಶಂಖತೀರ್ಥವೂ ಹೇಗಾದುವೆಂಬುದರ ವಿಷಯದಲ್ಲಿ ಹಿಂದಿನ ಒಂದು ಕಥೆಯನ್ನು ಹೇಳುತ್ತೇನೆ.

೫೦. ಹಿಂದೆ ವೇದಾಧ್ಯಯನಸಂಪನ್ನರೂ, ಕಠಿನವಾದ ತಪಸ್ಸನ್ನು ಮಾಡು ವವರೂ ಆದ ಶಂಖಲಿಖಿತರೆಂಬ ಅಣ್ಣ ತಮ್ಮಂದಿರಾದ ಇಬ್ಬರು ಬ್ರಾಹ್ಮಣರಿದ್ದರು.

ಕಸ್ಯಚಿತ್ತ್ವಥ ಕಾಲಸ್ಯ ಲಿಖಿತಸ್ಯಾಶ್ರಮಂ ಪ್ರತಿ ।
ಭ್ರಾತುರ್ಜ್ಯೇಷ್ಠಸ್ಯ ಸಂಪ್ರಾಪ್ತೋ ನಮಸ್ಕಾರಕೃತೇ ನೃಪ ॥ ೫೧ ॥
ಸೋಽಪಶ್ಯದಾಶ್ರಮಂ ಶೂನ್ಯಂ ಲಿಖಿತೇನ ವಿವರ್ಜಿತಂ ॥ ೫೨ ॥
ಅಥಾಽಪಶ್ಯದ್ವನೇ ತಸ್ಮಿನ್ ಪರಿಪಕ್ವಫಲಾನಿ ಸಃ ।
ಪ್ರಣಯಾತ್ಪ್ರತಿಜಗ್ರಾಹ ಮತ್ವಾ ಭ್ರಾತುರ್ನೃಪಾಶ್ರಮಂ ॥ ೫೩ ॥
ಏತಸ್ಮಿನ್ನಂತರೇ ಪ್ರಾಪ್ತೋ ಲಿಖಿತಸ್ತತ್ರ ಚಾಽಽಶ್ರಮೇ ।
ಯಾವತ್ಪಶ್ಯತಿ ಶಂಖಂ ಸ ಪ್ರಗೃಹೀತಬೃಹತ್ಫಲಂ ॥ ೫೪ ॥
ಕಿಮಿದಂ ವಿಹಿತಂ ಪಾಪ ಪಾಪಂ ಸಾಧುವಿಗರ್ಹಿತಂ ।
ಚೌರ್ಯಕರ್ಮ ತ್ವಯಾ ನಿಂದ್ಯಂ ಯದ್ಧೃತಾನಿ ಫಲಾನಿ ಚ ॥ ೫೫ ॥
ಅನೇನ ಕರ್ಮಣಾ ತುಭ್ಯಂ ತಪೋ ಯಾಸ್ಯತಿ ಸಂಕ್ಷಯಂ ।
ಚೌರ್ಯಕರ್ಮಪ್ರವೃತ್ತಸ್ಯ ಬ್ರಾಹ್ಮಣೈರ್ಗರ್ಹಿತಸ್ಯ ಚ ॥ ೫೬ ॥

ಶಂಖ ಉವಾಚ:—

ಏಕೋದರಸಮುತ್ಪನ್ನೋ ಜ್ಯೇಷ್ಠಭ್ರಾತಾ ಯಥಾ ಪಿತಾ ।
ಭೂಯಾದಿತಿ ಶ್ರುತಿರ್ಲೋಕೇ ಪ್ರಸಿದ್ಧಾ ಸರ್ವತಃ ಸ್ಥಿತಾ ॥ ೫೭ ॥
ತತ್ಕಿಂ ಪುತ್ರಸ್ಯ ವಿಪ್ರೇಂದ್ರ ನಾಽಧಿಕಾರಃ ಪಿತುರ್ಧನೇ ।
ಯತ್ಥೈವಂ ನಿಷ್ಠುರೈರ್ವಾಕ್ಯೈರ್ನಿರ್ಭರ್ತ್ಸಯಸಿ ಮಾಂ ವಿಭೋ ॥ ೫೮ ॥

---

೫೧. ಒಂದಾನೊಂದು ದಿನ ಶಂಖನು ಅಣ್ಣನಾದ ಲಿಖಿತನ ಆಶ್ರಮಕ್ಕೆ ನಮಸ್ಕಾರ ಮಾಡಲು ಬಂದನು.

೫೨. ಆಗ ಆ ಆಶ್ರಮದಲ್ಲಿ ಲಿಖಿತನಿಲ್ಲದಿರುವುದನ್ನು ನೋಡಿದನು.

೫೩. ತರುವಾಯ ಶಂಖನು ಆ ವನದಲ್ಲಿ ಮಾಗಿದ ಹಣ್ಣುಗಳನ್ನು ನೋಡಿ ಅಣ್ಣನ ಆಶ್ರಮವೆಂದರಿತು ಪ್ರೀತಿಯಿಂದ ಅವುಗಳನ್ನು ತೆಗೆದುಕೊಂಡನು.

೫೪—೫೫. ಇಷ್ಟರಲ್ಲಿ ಆಶ್ರಮಕ್ಕೆ ಬಂದ ಲಿಖಿತನು ಶಂಖನು ಹಣ್ಣುಗಳನ್ನು ತೆಗೆದುಕೊಂಡಿರುವುದನ್ನು ನೋಡಿ ಪಾಪಿ! ನೀನು ಈ ಫಲಗಳನ್ನು ತೆಗೆದುಕೊಂಡು ಸಜ್ಜನನಿಂದ್ಯವಾದ ಪಾಪವನ್ನುಂಟುಮಾಡುವ ಈ ಕಳ್ಳತನವನ್ನು ಏಕೆ ಮಾಡಿದೆ?

೫೬. ಈ ಕೆಲಸದಿಂದ ಕಳ್ಳತನದಲ್ಲಿ ತೊಡಗಿದವನೂ, ಬ್ರಾಹ್ಮಣರಿಂದ ನಿಂದ್ಯನೂ ಆದ ನಿನ್ನ ತಪಸ್ಸು ಕ್ಷಯಿಸುವುದು.

೫೭. ಶಂಖನು ಹೇಳುತ್ತಾನೆ:—ಏಕೋದರದಲ್ಲಿ ಜನಿಸಿದ ಜ್ಯೇಷ್ಠಭ್ರಾತನು ತಂದೆಯಂತೆಯೇ ಎಂದು ಲೋಕದಲ್ಲಿ ಶ್ರುತಿಯು ಪ್ರಸಿದ್ಧವಾಗಿದೆ.

೫೮. ಆದುದರಿಂದ ತಂದೆಯ ಸ್ವತ್ತಿನಲ್ಲಿ ಮಗನಿಗೆ ಅಧಿಕಾರವಿಲ್ಲವೇನು? ಹೀಗೆ ಕಠಿನ ಮಾತುಗಳಿಂದ ನನ್ನನ್ನು ಗದರಿಸುವೆಯಲ್ಲ.

ಲಿಖಿತ ಉವಾಚ:—

ನ ದೋಷೋ ಜಾಯತೇ ಹರ್ತುಃ ಪುತ್ರಸ್ಯಾಽತ್ರ ಕಥಂಚನ ।
ಏಕತ್ರ ಸಂಸ್ಥಿತಸ್ಯಾಽತ್ರ ಪಿತುರ್ವಿತ್ತಮಸಂಶಯಮ್ ॥ ೫೯ ॥
ವಿಭಕ್ತಸ್ತು ಯದಾ ಪುತ್ರೋ ಭ್ರಾತಾ ವಾಽಪಹರೇದ್ಧನಮ್ ।
ತದಾ ದೋಷಮವಾಪ್ನೋತಿ ಚೌರ್ಯೋತ್ಥಂ ಮತಮೇವ ಮೇ ॥ ೬೦ ॥
ಪುತ್ರಸ್ಯ ತು ಪುನರ್ವಿತ್ತಂ ಪಿತಾ ಹರತಿ ಸರ್ವದಾ ।
ನ ತಸ್ಯ ವಿದ್ಯತೇ ದೋಷೋ ವಿಭಕ್ತಸ್ಯಾಽಪಿ ಕರ್ಹಿಚಿತ್ ॥ ೬೧ ॥
ಅತ್ರ ಶ್ಲೋಕಃ ಪುರಾ ಗೀತೋ ಮನುನಾ ಸ್ಮೃತಿಕಾರಿಣಾ ।
ತಂ ತೇಽಹಂ ಸಂಪ್ರವಕ್ಷ್ಯಾಮಿ ಧರ್ಮಶಾಸ್ತ್ರೋದ್ಭವಂ ವಚಃ ॥ ೬೨ ॥
ತ್ರಯ ಏವಾಽಧನಾಃ ಪ್ರೋಕ್ತಾ ಭಾರ್ಯಾ ದಾಸಸ್ತಥಾ ಸುತಃ ।
ಯತ್ತೇ ಸಮಧಿಗಚ್ಛಂತಿ ಯಸ್ಯ ತೇ ತಸ್ಯ ತದ್ಧನಮ್ ॥ ೬೩ ॥

ಶಂಖ ಉವಾಚ:—

ಯದ್ಯೇವಂ ಚೌರ್ಯದೋಷೋಽಸ್ತಿ ಮಮ ತಾತ ಮಹತ್ತರಃ ।
ನಿಗ್ರಹಂ ಕುರು ಮೇ ಶೀಘ್ರಂ ಯೇನ ನ ಸ್ಯಾತ್ತಪಃ ಕ್ಷಯಃ ॥ ೬೪ ॥

---

೫೯. ಲಿಖಿತನು ಹೇಳುತ್ತಾನೆ:—ಒಂದೇ ಸ್ಥಳದಲ್ಲಿರುವ ತಂದೆಯ ಸ್ವತ್ತನ್ನು ತೆಗೆದುಕೊಳ್ಳುವ ಪುತ್ರನಿಗೆ ನಿಜವಾಗಿಯೂ ದೋಷವುಂಟಾಗುವುದಿಲ್ಲ.

೬೦. ವಿಭಕ್ತನಾದ ಪುತ್ರನಾಗಲಿ, ಸಹೋದರನಾಗಲಿ ಧನವನ್ನು ಅಪಹರಿಸಿದರೆ ಚೌರ್ಯದೋಷವನ್ನು ಹೊಂದುವನೆಂದು ನನ್ನ ಅಭಿಪ್ರಾಯ.

೬೧. ತಂದೆಯು ವಿಭಕ್ತನಾಗಿದ್ದರೂ ಮಗನ ದ್ರವ್ಯವನ್ನು ಯಾವಾಗಲೂ ತೆಗೆದುಕೊಳ್ಳುತ್ತಾನೆ. ಅದರಿಂದವನಿಗೆ ದೋಷವಿಲ್ಲ.

೬೨. ಈ ವಿಷಯದಲ್ಲಿ ಹಿಂದೆ ಸ್ಮೃತಿಕರ್ತನಾದ ಮನುವು ಹೇಳಿದ ಧರ್ಮಶಾಸ್ತ್ರದ ಮಾತನ್ನು ನಿನಗೆ ಹೇಳುವೆನು.

೬೩. ಹೆಂಡತಿ, ಸೇವಕ, ಪುತ್ರ ಈ ಮೂವರು ಧನವಿಲ್ಲದವರೆನ್ನಿಸಿಕೊಳ್ಳುವರು. ಇವರು ಯಾರ ಧನವನ್ನು ಪಡೆಯುವರೊ, ಅದು ಅವರ ಧನವಾಗುವುದು.

೬೪. ಶಂಖನು ಹೇಳುತ್ತಾನೆ:—ಅಣ್ಣ! ಹೀಗಾದರೆ ನನಗೆ ಬಹಳವಾದ ಚೌರ್ಯದೋಷವುಂಟಾಗುವುದು. ಆದುದರಿಂದ ನನ್ನ ತಪಸ್ಸು ಹಾಳಾಗದಂತೆ ನನ್ನನ್ನು ಶೀಘ್ರವಾಗಿ ನಿಗ್ರಹಿಸು.

ವಿಶ್ವಾಮಿತ್ರ ಉವಾಚ :—

ತಸ್ಯ ತಂ ನಿಶ್ಚಯಂ ಜ್ಞಾತ್ವಾ ಶಸ್ತ್ರಮಾದಾಯ ನಿರ್ಮಲಂ ।
ಚಕರ್ತಾಽಥ ಭುಜೌ ತಸ್ಯ ಭ್ರಾತಾ ಭ್ರಾತುಶ್ಚ ನಿರ್ಘೃಣಃ ।
ಸೋಽಪಿ ಛಿನ್ನಕರೋ ವಿಪ್ರೋ ವ್ಯಥಯಾಽಪಿ ಸಮನ್ವಿತಃ ॥ ೬೫ ॥
ಮನ್ಯಮಾನಃ ಪ್ರಸಾದಂ ತಂ ಭ್ರಾತುರ್ಜ್ಯೇಷ್ಠಸ್ಯ ಪಾರ್ಥಿವ ॥ ೬೬ ॥
ತತಸ್ತು ಕಾಮದಂ ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ಮತ್ವಾ ಪ್ರಾಪ್ಯ ತಪಸ್ತೇಪೇ ಕಂಚಿತ್ಪ್ರಾಪ್ಯ ಜಲಾಶಯಂ ॥ ೬೭ ॥
ವರ್ಷಾಸ್ವಾಕಾಶಶಾಯೀ ಚ ಹೇಮಂತೇ ಸಲಿಲಾಶ್ರಯಃ ।
ಪಂಚಾಽಗ್ನಿಸಾಧಕೋ ಗ್ರೀಷ್ಮೇ ಷಷ್ಠಕಾಲಕೃತಾಽಶನಃ ॥ ೬೮ ॥
ಸಂಸ್ನಾಪ್ಯ ಭಾಸ್ಕರಂ ಸ್ಥಾಣುಂ ತತ್ಪುರಃ ಶತರುದ್ರಿಯಂ ।
ಜಪನ್ ಸಾಮೋಕ್ತರುದ್ರಾಂಶ್ಚ ಭವರುದ್ರಾಂಸ್ತಥಾ ಜಪನ್ ।
ಪ್ರಾಣರುದ್ರಾಂಸ್ತಥಾ ನೀಲಾನ್ ಸ್ಕಂದಸೂಕ್ತಸಮನ್ವಿತಾನ್ ॥ ೬೯ ॥
ತತೋ ವರ್ಷಸಹಸ್ರಾಂತೇ ತುಷ್ಟಸ್ತಸ್ಯ ಮಹೇಶ್ವರಃ ।
ಪ್ರೋವಾಚ ದರ್ಶನಂ ಗತ್ವಾ ಸಹ ಸೂರ್ಯವೃಷೇಶ್ವರೈಃ ॥ ೭೦ ॥

ಮಹೇಶ್ವರ ಉವಾಚಃ—

ಶಂಖ ತುಷ್ಟೋಽಸ್ಮಿ ತೇ ವತ್ಸ ತಪಸಾಽನೇನ ಸುವ್ರತ ।
ತಸ್ಮಾತ್ಕಥಯ ಮೇ ಕ್ಷಿಪ್ರಂ ಯದ್ದದಾಮಿ ತವಾಽಧುನಾ ॥ ೭೧ ॥

---

೬೫–೬೭. ವಿಶ್ವಾಮಿತ್ರನು ಹೇಳುತ್ತಾನೆ:—ಲಿಖಿತನು ಆ ತಮ್ಮನ ಆ ನಿಶ್ಚಯವನ್ನರಿತು ನಿರ್ಮಲವಾದ ಶಸ್ತ್ರವನ್ನು ತೆಗೆದುಕೊಂಡು ದಯೆಯಿಲ್ಲದವನಾಗಿ ಅವನ ತೋಳುಗಳನ್ನು ಕತ್ತರಿಸಿದನು. ಕತ್ತರಿಸಿದ ಹಸ್ತವುಳ್ಳ ಆ ಶಂಖನೂ ಅತ್ಯಂತ ವ್ಯಥೆಗೊಂಡು ಅದು ಅಣ್ಣನ ಅನುಗ್ರಹವೆಂದು ತಿಳಿಯುವವನಾಗಿ ಹಾಟಕೇಶ್ವರ ಕ್ಷೇತ್ರವು ಇಷ್ಟಾರ್ಥವನ್ನು ಕೊಡುವುದೆಂದರಿತು ಅದನ್ನು ಸೇರಿ ಅಲ್ಲಿ ಒಂದು ಕೆರೆಯಲ್ಲಿ ತಪವನ್ನಾಚರಿಸಿದನು.

೬೮–೬೯. ಅವನು ಮಳೆಗಾಲದಲ್ಲಿ ಅನಾವರಣ ಸ್ಥಳದಲ್ಲಿ ಮಲಗುವವನೂ, ಚಳಿಗಾಲದಲ್ಲಿ ನೀರಿನಲ್ಲಿರುವವನೂ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿರುವವನೂ ಆಗಿ ಷಷ್ಠಕಾಲದಲ್ಲಿ ಭೋಜನಮಾಡುತ್ತ, ಸೂರ್ಯನಿಗೂ, ಮಹೇಶ್ವರನಿಗೂ ಅಭಿಷೇಕ ಮಾಡಿ, ಅವರ ಮುಂದೆ ಶತರುದ್ರಿಯ, ಸಾಮೋಕ್ತರುದ್ರ, ಭವರುದ್ರ, ಪ್ರಾಣರುದ್ರ, ನೀಲರುದ್ರ, ಸ್ಕಂದಸೂಕ್ತ ಇವುಗಳನ್ನು ಜಪಿಸುತ್ತ ತಪವನ್ನಾಚರಿಸಿದನು.

೭೦. ಅನಂತರ ಸಾವಿರ ವರ್ಷಗಳ ತರುವಾಯ ಮಹೇಶ್ವರನು ಸಂತುಷ್ಟನಾಗಿ ಸೂರ್ಯವೃಷಭೇಶ್ವರರೊಡನೆ ಪ್ರತ್ಯಕ್ಷನಾಗಿ ಇಂತೆಂದನು.

೭೧. ಮಹೇಶ್ವರನು ಹೇಳುತ್ತಾನೆ:—ಮಗು! ಶಂಖ! ನಿನ್ನೀ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ಆದುದರಿಂದ ನಿನಗೀಗ ಏನನ್ನು ಕೊಡಲಿ. ಬೇಗನೆ ಹೇಳು.

ಶಂಖ ಉವಾಚ :—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ಜಾಯೇತಾಂ ತಾದೃಶೌ ಹಸ್ತೌ ಯಾದೃಶೌ ಮೇ ಪುರಾ ಸ್ಥಿತೌ ॥ ೭೨ ॥
ತ್ವಯಾಽತ್ರೈವ ಸದಾ ವಾಸಃ ಕಾರ್ಯಃ ಸುರವರೇಶ್ವರ ।
ಲಿಂಗೇ ಕೃತ್ವಾ ದಯಾಂ ದೇವ ಮಮೋಪರಿ ಮಹತ್ತರಾಂ ॥ ೭೩ ॥
ಏತಜ್ಜಲಾಶಯಂ ನಾಥ ಮಮ ನಾಮ್ನಾ ಧರಾತಲೇ ।
ಪ್ರಸಿದ್ಧಿಂ ಯಾತು ಲೋಕಸ್ಯ ಯಾವಚ್ಚಂದ್ರಾರ್ಕತಾರಕಾಃ ॥ ೭೪ ॥
ಅತ್ರ ಯಃ ಕುರುತೇ ಸ್ನಾನಂ ಧೃತ್ವಾ ಮನಸಿ ದುರ್ಲಭಂ ।
ಕಿಂಚಿದ್ವಸ್ತು ಸಮಗ್ರಂ ತು ತಸ್ಯ ಸಂಪತ್ಸ್ಯತಾಂ ವಿಭೋ ॥ ೭೫ ॥

ಶ್ರೀ ಭಗವಾನುವಾಚ :—

ಅದ್ಯಾಽಹಂ ದರ್ಶನಂ ಪ್ರಾಪ್ತಸ್ತವ ಚೈವಾಽಷ್ಟಮೀ ದಿನೇ ।
ಮಾಧವಸ್ಯ ಸಿತೇ ಪಕ್ಷೇ ಯಸ್ಮಾದ್ಬ್ರಾಹ್ಮಣಸತ್ತಮ ॥ ೭೬ ॥
ತಸ್ಮಾತ್ಸಂಕ್ರಮಣಂ ಲಿಂಗೇ ತಾವಕೇಽಸ್ಮಿನ್ದ್ವಿಜೋತ್ತಮ ।
ಕರಿಷ್ಯಾಮಿ ನ ಸಂದೇಹೋ ದಿನಮೇಕಮಸಂಶಯಂ ॥ ೭೭ ॥
ಯಶ್ಚಾಽತ್ರ ದಿವಸೇ ಪ್ರಾಪ್ತೇ ತೀರ್ಥೇಽತ್ರೈವ ಭವೋದ್ಭವೇ ।
ಸ್ನಾನಂ ಕೃತ್ವಾ ರವೇರ್ವಾರ ಉದಯಂ ಸಮುಪಸ್ಥಿತೇ ॥ ೭೮ ॥
ಪೂಜಯಿಷ್ಯತಿ ಮೇ ಮೂರ್ತಿಂ ತ್ವಯಾ ಸಂಸ್ಥಾಪಿತಾಂ ದ್ವಿಜ ।
ಕುಷ್ಠವ್ಯಾಧಿವಿನಿರ್ಮುಕ್ತೋ ಮಮ ಲೋಕಂ ಸ ಯಾಸ್ಯತಿ ॥ ೭೯ ॥

---

೭೨. ಶಂಖನು ಹೇಳುತ್ತಾನೆ :—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ, ವರವನ್ನು ಕೊಡುವುದಾದರೆ ನನಗೆ ಮೊದಲಿದ್ದಂತೆಯೇ ತೋಳುಗಳುಂಟಾಗಲಿ.

೭೩–೭೪. ಮಹೇಶ್ವರ! ನನ್ನಲ್ಲಿ ಅತಿಶಯವಾಗಿ ದಯಮಾಡಿ ಈ ಲಿಂಗದಲ್ಲಿ ಯಾವಾಗಲೂ ವಾಸಿಸು. ಸ್ವಾಮಿ! ಈ ಸರೋವರವು ಭೂಲೋಕದಲ್ಲಿ ಚಂದ್ರ ಸೂರ್ಯರಿರುವವರೆಗೆ ನನ್ನ ಹೆಸರಿನಿಂದ ಪ್ರಸಿದ್ಧಿಗೊಳ್ಳಲಿ.

೭೫. ಇಲ್ಲಿ ಮನಸ್ಸಿನಲ್ಲಿ ದುರ್ಲಭವಾದ ವಸ್ತುವನ್ನು ಆಲೋಚಿಸಿ ಮಿಂದವನಿಗೆ ಅದು ಸಮಗ್ರವಾಗಿ ದೊರೆಯಲಿ.

೭೬–೭೭. ಶ್ರೀ ಭಗವಂತನು ಹೇಳುತ್ತಾನೆ :—ಬ್ರಾಹ್ಮಣವರ್ಯನೆ! ನಾನು ವೈಶಾಖ ಶುಕ್ಲ ಅಷ್ಟಮೀ ದಿನ ನಿನಗೆ ದರ್ಶನವನ್ನಿತ್ತುದರಿಂದ ಆ ಒಂದು ದಿನ ಈ ಲಿಂಗದಲ್ಲಿ ಸನ್ನಿಹಿತನಾಗಿರುವೆನು.

೭೮–೭೯. ಈ ಭಾನುವಾರದ ದಿನ ಸೂರ್ಯೋದಯಕಾಲದಲ್ಲಿ ಈ ತೀರ್ಥದಲ್ಲಿ ಮಿಂದು ನೀನು ಪ್ರತಿಷ್ಠೆ ಮಾಡಿದ ನನ್ನ ಮೂರ್ತಿಯನ್ನು ಪೂಜಿಸಿದವನು ಕುಷ್ಠ ವ್ಯಾಧಿರಹಿತನಾಗಿ ನನ್ನ ಲೋಕವನ್ನು ಸೇರುವನು.

ಶೇಷಕಾಲೇಽಪಿ ವಿಪ್ರೇಂದ್ರ ಅಜ್ಞಾನವಿಹಿತಾದಘಾತ್ ।
ಮುಕ್ತಿಂ ಪ್ರಾಪ್ಸ್ಯತ್ಯಸಂದಿಗ್ಧಂ ಮಮ ವಾಕ್ಯಾದ್ದ್ವಿಜೋತ್ತಮ ॥ ೮೦ ॥
ತಥಾ ತವಾಽಪಿ ಯೌ ಹಸ್ತೌ ಛಿನ್ನಾವೇತಾವುಭಾವಪಿ ।
ತಸ್ಮಿನ್ ಯೋಗೇಽಭಿಷೇಕಾತ್ತೌ ಸ್ಯಾತಾಂ ಭೂಯೋಽಪಿ ತಾದೃಶೌ ॥೮೧॥
ಏಷ ಮೇ ಪ್ರತ್ಯಯೋ ವಿಪ್ರ ಭವಿಷ್ಯತಿ ತವಾಽಧುನಾ ।
ಭೂಯಃ ಸ್ನಾನಂ ವಿಧಾಯ ತ್ವಂ ತತೋ ಮೂರ್ತಿಂ ಸಮರ್ಚಯ॥ ೮೨ ॥
ಅನ್ಯೇಽಪಿ ವ್ಯಂಗತಾಂ ಪ್ರಾಪ್ತಾಃ ಸಂಯೋಗೇಽತ್ರ ತವ ಸ್ಥಿತೇ ।
ಸ್ನಾತ್ವಾ ಮಾಂ ಪೂಜಯಿಷ್ಯಂತಿ ಮುಕ್ತಿಂ ಯಾಸ್ಯಂತಿ ತೇ ದ್ವಿಜ ॥ ೮೩ ॥
ಏವಮುಕ್ತ್ವಾ ಸಹಸ್ರಾಂಶುಸ್ತತಶ್ಚಾಽದರ್ಶನಂ ಗತಃ ।
ಶಂಖೋಽಪಿ ತತ್ಕ್ಷಣಾತ್ ಸ್ನಾತ್ವಾ ಪೂಜಯಿತ್ವಾ ದಿವಾಕರಂ ॥ ೮೪ ॥
ಯಾವತ್ಪಶ್ಯತಿ ಚಾಽಽತ್ಮಾನಂ ತಾವದ್ಧಸ್ತಸಮನ್ವಿತಂ ।
ಆತ್ಮಾನಂ ಪಶ್ಯಮಾನಸ್ತು ವಿಸ್ಮಯಂ ಪರಮಂ ಗತಃ ॥ ೮೫ ॥
ತತಃ ಪ್ರಭೃತಿ ತತ್ರೈವ ಕೃತ್ವಾಽಽಶ್ರಮಪದಂ ನೃಪ ।
ತಪಸ್ತೇಪೇ ದ್ವಿಜಶ್ರೇಷ್ಠೋ ಗತಶ್ಚ ಪರಮಾಂ ಗತಿಂ ॥ ೮೬ ॥
ತಸ್ಮಾತ್ತ್ವಮಪಿ ರಾಜೇಂದ್ರ ಸಂಯೋಗಂ ಪ್ರಾಪ್ಯ ತತ್ತ್ವತಃ ।
ತೇನೈವ ವಿಧಿನಾ ಸ್ನಾತ್ವಾ ತ್ವಂ ಪೂಜಯ ದಿವಾಕರಂ ॥ ೮೭ ॥

---

೮೦-೮೧. ಇತರ ಸಮಯದಲ್ಲಿಯೂ ಈ ಲಿಂಗವನ್ನು ಅರ್ಚಿಸಿದವನು ನನ್ನ ಮಾತಿನಂತೆ ಅಜ್ಞಾನದಿಂದೆಸಗಿದ ಪಾಪದಿಂದ ನಿಶ್ಚಯವಾಗಿಯೂ ಮುಕ್ತನಾಗುವನು. ಆ ದಿನ ಅಭಿಷೇಕ ಮಾಡುವುದರಿಂದ ಕತ್ತರಿಸಲ್ಪಟ್ಟ ಈ ನಿನ್ನ ಕೈಗಳು ಮರಳಿ ಮೊದಲಿನಂತೆಯೇ ಆಗುವುವು.

೮೨. ಈಗ ನಿನ್ನ ತೋಳುಗಳು ಹಾಗೆಯೇ ಆಗುವುವುವೆಂದು ನನ್ನ ನಂಬಿಕೆ. ಆದುದರಿಂದ ನೀನು ಮರಳಿ ಬಂದು ನನ್ನ ಪ್ರತಿಮೆಯನ್ನು ಅರ್ಚಿಸು.

೮೩. ದ್ವಿಜನೆ! ಅಂಗವಿಕಲರಾದ ಇತರ ಮನುಷ್ಯರೂ ಈ ದಿನ ಮಿಂದು ನನ್ನನ್ನು ಅರ್ಚಿಸಿದರೆ ಮುಕ್ತರಾಗುವರು.

೮೪-೮೫. ಸೂರ್ಯನು ಹೀಗೆ ನುಡಿದು ಕಣ್ಮರೆಯಾದನು. ಶಂಖನೂ ಕೂಡಲೆ ಮಿಂದು ಸೂರ್ಯನನ್ನು ಪೂಜಿಸಿ ತನ್ನನ್ನು ನೋಡುವಷ್ಟರಲ್ಲಿ ಕೈಗಳಿಂದ ಸಹಿತನಾಗಿದ್ದನು. ಆದರಿಂದವನು ಅತ್ಯಂತ ಆಶ್ಚರ್ಯಗೊಂಡನು.

೮೬. ಆ ಶಂಖನು ಅದು ಮೊದಲ್ಗೊಂಡು ಅಲ್ಲಿಯೇ ಆಶ್ರಮವನ್ನು ರಚಿಸಿಕೊಂಡು ತಪಸ್ಸನ್ನು ಮಾಡುತ್ತ ಉತ್ತಮಗತಿಯನ್ನು ಹೊಂದಿದನು.

೮೭. ದೊರೆಯೆ! ಆದುದರಿಂದ ನೀನೂ ವೈಶಾಖ ಶುಕ್ಲಾಷ್ಟಮೀ ದಿನ ಅವೇ ವಿಧಿಯಿಂದ ಮಿಂದು ಸೂರ್ಯನನ್ನು ಪೂಜಿಸು.

ಯಶ್ಚೈತಚ್ಛೃಣುಯಾನ್ನಿತ್ಯಂ ಪಠೇದ್ವಾ ಪುರತೋ ರವೇಃ ।
ತಸ್ಯಾನ್ವಯೇಽಪಿ ನೋ ಕುಷ್ಠೀ ಕದಾಚಿತ್ಸಂಪ್ರಜಾಯತೇ ॥ ೮೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಂಖಾದಿತ್ಯಶಂಖತೀರ್ಥೋತ್ಪತ್ತಿವೃತ್ತಾಂತವರ್ಣನಂ" ನಾಮ
ನವೋತ್ತರದ್ವಿಶತತಮೋಽಧ್ಯಾಯಃ

---

೮೮. ಇದನ್ನು ನಿತ್ಯವೂ ಕೇಳುವವನೂ, ಸೂರ್ಯನ ಮುಂದೆ ಪಠಿಸುವವನೂ ಆದವನ ವಂಶದಲ್ಲಿ ಯಾವಾಗಲೂ ಕುಷ್ಠರೋಗಿಯು ಜನಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಂಖಾದಿತ್ಯಶಂಖತೀರ್ಥೋತ್ಪತ್ತಿವೃತ್ತಾಂತವರ್ಣನ" ವೆಂಬ
ಇನ್ನೂರಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶೋತ್ತರದ್ವಿಶತತಮೋಽಧ್ಯಾಯಃ

### ತಾಂಬೂಲೋತ್ಪತ್ತಿ ತಾಂಬೂಲಮಾಹಾತ್ಮ್ಯವರ್ಣನಂ

ವಿಶ್ವಾಮಿತ್ರ ಉವಾಚ :—

ತಚ್ಛ್ರುತ್ವಾ ವಚನಂ ತಸ್ಯ ದೇವರ್ಷೇರ್ನಾರದಸ್ಯ ಚ ।
ಸಿದ್ಧಸೇನೋ ಮಹೀಪಾಲಃ ಪ್ರಾಪ್ಯ ತಂ ಯೋಗಮುತ್ತಮಂ ॥ ೧ ॥
ಮಾಧವೇ ಮಾಸಿ ಸಂಪ್ರಾಪ್ತೇ ಅಷ್ಟಮ್ಯಾಂ ಸೂರ್ಯವಾಸರೇ ।
ಸೂರ್ಯೋದಯೇ ತು ಸಂಪ್ರಾಪ್ತೇ ಯಾವತ್ಸ್ನಾತ್ವಾಽರ್ಚಯೇದ್ರವಿಂ ॥
ತಾವತ್ಕುಷ್ಠವಿನಿರ್ಮುಕ್ತಃ ಸಹಸಾ ಸಮಪದ್ಯತ ।
ತತೋ ದಿವ್ಯವಪುರ್ಭೂತ್ವಾ ಸಂತೋಷಂ ಪರಮಂ ಗತಃ ॥ ೩ ॥
ಪ್ರಾಯಶ್ಚಿತ್ತಂ ತತಶ್ಚಕ್ರೇ ತಾಂಬೂಲಸ್ಯ ಚ ಭಕ್ಷಣಂ ।
ಅಜ್ಞಾನೇನ ಕೃತಂ ಯಚ್ಚ ಚೂರ್ಣಪತ್ರಸಮನ್ವಿತಂ ॥ ೪ ॥
ತತಶ್ಚ ಪರಮಾಂ ಲಕ್ಷ್ಮೀಂ ಸಂಪ್ರಾಪ್ತಃ ಸ ಮಹೀಪತಿಃ ।
ಪಿತೃಪೈತಾಮಹಂ ರಾಜ್ಯಂ ಸ ಪ್ರಚಕ್ರೇ ಯಥಾ ಪುರಾ ॥ ೫ ॥
ಏತತ್ತೇ ಸರ್ವಮಾಖ್ಯಾತಂ ಶಂಖತೀರ್ಥಸಮುದ್ಭವಂ ।
ಮಾಹಾತ್ಮ್ಯಂ ಪಾರ್ಥಿವಶ್ರೇಷ್ಠ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೬ ॥

---

## ಕನ್ನಡದ ಅನುವಾದ

### ತಾಂಬೂಲೋತ್ಪತ್ತಿ ತಾಂಬೂಲಮಾಹಾತ್ಮ್ಯವರ್ಣನ

೧–೩. ವಿಶ್ವಾಮಿತ್ರನು ಹೇಳುತ್ತಾನೆ :—ಸಿದ್ಧಸೇನನು ನಾರದ ಮಹರ್ಷಿಯ ಆ ಮಾತನ್ನು ಕೇಳಿ ಆ ಯೋಗವನ್ನು ಹೊಂದಿ ವೈಶಾಖ ಶುಕ್ಲಪಕ್ಷದ ಅಷ್ಟಮಿ ಭಾನುವಾರದ ದಿನ ಸೂರ್ಯೋದಯಕಾಲದಲ್ಲಿ ಮಿಂದು ಸೂರ್ಯನನ್ನು ಅರ್ಚಿಸಿದ ಕೂಡಲೆ ಕುಷ್ಠರೋಗದಿಂದ ಮುಕ್ತನಾಗಿ ಸುಂದರ ರೂಪವನ್ನು ಹೊಂದಿ ಅತ್ಯಂತ ಸಂತೋಷಗೊಂಡನು.

೪. ಬಳಿಕ ಅಜ್ಞಾನದಿಂದ ಸೀಳಿದ ತಾಂಬೂಲದೆಲೆಯನ್ನು ತಿಂದುದಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡನು.

೫. ಅನಂತರ ಆ ರಾಜನು ಅತಿಶಯ ಸಂಪತ್ತನ್ನು ಹೊಂದಿ ಮೊದಲಿನಂತೆ ಪಿತೃಪಿತಾಮಹ ಸಂಬಂಧವಾದ ರಾಜ್ಯವನ್ನು ಪಡೆದು ಆಳುತ್ತಿದ್ದನು.

೬. ದೊರೆಯೆ ! ನಿನಗೆ ಶಂಖತೀರ್ಥದ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು. ಪುನಃ ಏನನ್ನು ಕೇಳಬಯಸುವೆ?

ಆನರ್ತ ಉವಾಚ :—

ಅತ್ಯಾಶ್ಚರ್ಯಮಿದಂ ಬ್ರಹ್ಮನ್ ಯತ್ತ್ವಯಾ ಪರಿಕೀರ್ತಿತಂ ।
ಯಲ್ಲಕ್ಷ್ಮೀಸ್ತಸ್ಯ ಸನ್ನಷ್ಟಾ ಚೂರ್ಣಪರ್ಣಸ್ಯ ಭಕ್ಷಣಾತ್ ॥ ೭ ॥
ಕೀದೃಕ್ತೇನ ಕೃತಂ ತಸ್ಯ ಪ್ರಾಯಶ್ಚಿತ್ತಂ ವಿಶುದ್ಧಯೇ ।
ಕೀದೃಕ್ತೇನ ಕೃತಂ ತಚ್ಚ ನಿಜರಾಜ್ಯಂ ಯಥಾ ಪುರಾ ॥ ೮ ॥

ವಿಶ್ವಾಮಿತ್ರ ಉವಾಚ :—

ಏಷಾ ಪುಣ್ಯತಮಾ ಮೇಧ್ಯಾ ನಾಗವಲ್ಲೀ ನರಾಧಿಪ ।
ಅಯಥಾವತ್ಕೃತಾ ವಕ್ತ್ರೇ ಬಹೂನ್ ದೋಷಾನ್ ಪ್ರಯಚ್ಛತಿ ।
ತಸ್ಮಾದ್ಯತ್ನೇನ ಸಂಭಕ್ಷ್ಯಾ ದತ್ವಾ ಚೈವ ಸ್ವಶಕ್ತಿತಃ ॥ ೯ ॥

ಆನರ್ತ ಉವಾಚ :—

ನಾಗವಲ್ಲೀ ಕಥಂ ಜಾತಾ ಕಸ್ಮಾದ್ದೋಷೋ ಮಹಾನ್ ಸ್ಮೃತಃ ।
ಅಯಥಾವದ್ಭಕ್ಷಣಾಚ್ಚ ತನ್ಮೇ ವಕ್ತುಮಿಹಾರ್ಹಸಿ ॥ ೧೦ ॥

ವಿಶ್ವಾಮಿತ್ರ ಉವಾಚ :—

ಪ್ರಶ್ನಭಾರೋ ಮಹಾನೇಷ ತ್ವಯಾ ಮೇ ಪರಿಕೀರ್ತಿತಃ ।
ತಥಾಽಪಿ ಚ ವದಿಷ್ಯಾಮಿ ಯದಿ ತೇ ಕೌತುಕಂ ನೃಪ ।
ಯಸ್ಮಾತ್ಸಂಜಾಯತೇ ದೋಷಶ್ಚೂರ್ಣಪತ್ರಸ್ಯ ಭಕ್ಷಣಾತ್ ॥ ೧೧ ॥

---

೭. ಆನರ್ತನು ಹೇಳುತ್ತಾನೆ:—ಮುನಿಯೆ! ಚೂರ್ಣ ತಾಂಬೂಲಪತ್ರದ ಭಕ್ಷಣದಿಂದ ಅವನ ಐಶ್ವರ್ಯವು ನಷ್ಟವಾಯಿತೆಂದು ಹೇಳಿದೆಯಷ್ಟೆ. ಇದು ಅತ್ಯಾಶ್ಚರ್ಯಕರವಾದುದು.

೮. ಆ ದೊರೆಯು ಅದಕ್ಕೆ ಎಂತಹ ಪ್ರಾಯಶ್ಚಿತ್ತವನ್ನು ಮಾಡಿದನು? ಹೇಗೆ ತನ್ನ ರಾಜ್ಯವನ್ನು ಮೊದಲಿನಂತೆ ಆಳಿದನು?

೯. ವಿಶ್ವಾಮಿತ್ರನು ಹೇಳುತ್ತಾನೆ:—ದೊರೆಯೆ! ಈ ತಾಂಬೂಲವು ಪುಣ್ಯಕರವೂ ಪವಿತ್ರವೂ ಆಗಿರುವುದು. ವಿಧಿಯಂತೆ ಭಕ್ಷಿಸದಿದ್ದರೆ ಇದು ಬಹಳ ಕೆಡಕನ್ನುಂಟುಮಾಡುವುದು. ಆದುದರಿಂದ ಇದನ್ನು ಶಕ್ತ್ಯನುಸಾರ ದಾನಮಾಡಿ ಭಕ್ಷಿಸಬೇಕು.

೧೦. ಆನರ್ತನು ಹೇಳುತ್ತಾನೆ:—ತಾಂಬೂಲವು ಹೇಗೆ ಹುಟ್ಟಿತು? ವಿಧಿಯಂತೆ ಭಕ್ಷಿಸದಿದ್ದರೆ ಏಕೆ ಬಹಳ ದೋಷವುಂಟಾಗುವುದು? ಅದನ್ನು ನನಗೆ ಹೇಳು.

೧೧. ವಿಶ್ವಾಮಿತ್ರನು ಹೇಳುತ್ತಾನೆ:—ಅರಸ! ನೀನು ಕೇಳಿದ ಪ್ರಶ್ನೆಯು ದೊಡ್ಡದಾದುದು. ಆದರೂ ನಿನಗೆ ಕೇಳಲು ಕುತೂಹಲವಿದ್ದರೆ ಚೂರ್ಣ ತಾಂಬೂಲಪತ್ರದ ಭಕ್ಷಣದಿಂದಾಗುವ ದೋಷವನ್ನು ಹೇಳುವೆನು.

ಅಮೃತಾರ್ಥಂ ಪುರಾ ದೇವೈರ್ಮಥಿತಃ ಕಲಶೋದಧಿಃ ।
ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಂ ॥ ೧೨ ॥
ಮುಖದೇಶೇ ಬಲಿರ್ಲಗ್ನಃ ಪುಚ್ಛದೇಶೇಽಖಿಲಾಃ ಸುರಾಃ ।
ವಾಸುದೇವಮತೇನೈವ ಸಂದಧಾರಾಽಥ ಕಚ್ಛಪಃ ॥ ೧೩ ॥
ಮಂದರೇ ಭ್ರಮಮಾಣೇ ತು ಪ್ರಾಗೇವ ನೃಪಸತ್ತಮ ।
ಆನರ್ತ ಸಹಸಾ ಜಾತಂ ರತ್ನತ್ರಿತಯಮೇವ ಚ ॥ ೧೪ ॥
ನೀಲಾಂಬರಧರಃ ಕೃಷ್ಣಃ ಪುರುಷೋ ವಕ್ರನಾಸಿಕಃ ।
ಕೃಷ್ಣದಂತಃ ಸ್ಥೂಲಶಿರಾ ದೀರ್ಘಗ್ರೀವೋ ಮಹೋದರಃ ।
ಶೂರ್ಪಾಕಾರಾಂಘ್ರಿರೇವಾಽಸೌ ಚಿಪಿಟಾಕ್ಷೋ ಭಯಾವಹಃ ॥ ೧೫ ॥
ತಥಾ ತದ್ರೂಪಿಣೀ ತಸ್ಯ ಕುಭಾರ್ಯಾ ರಾಕ್ಷಸೀ ಯಥಾ ।
ಶಿಶುನಾಂಗುಲಿಲಗ್ನೇನ ಗರ್ಭಶ್ರಮಪರಾಯಣಾ ॥ ೧೬ ॥
ತತೋ ದೇವಗಣಾಃ ಸರ್ವೇ ದಾನವಾಶ್ಚ ವಿಶೇಷತಃ ।
ಮಂಥಾನಂ ತತ್ಪರಿತ್ಯಜ್ಯ ತಾನ್ ಗ್ರಹೀತುಂ ಪ್ರಧಾವಿತಾಃ ॥ ೧೭ ॥
ಅಥ ತಾನ್ವಿಕೃತಾನ್ ದೃಷ್ಟ್ವಾ ಸರ್ವೇ ಶಂಕಾಸಮನ್ವಿತಾಃ ।
ಜಗೃಹುರ್ನೈವ ರಾಜೇಂದ್ರ ಜಹಸುಶ್ಚ ಪರಸ್ಪರಂ ॥ ೧೮ ॥

---

೧೨. ಹಿಂದೆ ದೇವತೆಗಳು ಮಂದರಪರ್ವತವನ್ನು ಕಡಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಅಮೃತಕ್ಕೋಸ್ಕರ ಕ್ಷೀರ ವಾರಿಧಿಯನ್ನು ಕಡೆದರು.

೧೩. ಆ ವಾಸುಕಿಯ ಬಾಯಿಯ ಕಡೆ ಬಲಿಯೂ, ಬಾಲದ ಕಡೆ ಸಕಲ ಸುರರೂ ಹಿಡಿದುಕೊಂಡು ಕಡೆದರು. ಆದಿಕೂರ್ಮನು ವಿಷ್ಣುವಿನ ಅಭಿಪ್ರಾಯ ದಂತೆ ಆ ಪರ್ವತವನ್ನು ಹೊತ್ತನು.

೧೪–೧೬. ಆನರ್ತ! ಮಂದರಪರ್ವತವನ್ನು ತಿರುಗಿಸುತ್ತಿರುವಾಗ ಕೂಡಲೆ ನೀಲವಸ್ತ್ರವನ್ನುಟ್ಟವನೂ, ವಕ್ರವಾದ ಮೂಗುಳ್ಳವನೂ, ಕೃಷ್ಣದನ್ತಗಳುಳ್ಳವನೂ, ಸ್ಥೂಲವಾದ ತಲೆಯುಳ್ಳವನೂ, ಉದ್ದವಾದ ಕುತ್ತಿಗೆಯುಳ್ಳವನೂ, ಮೊರದಂತೆ ಪಾದಗಳುಳ್ಳವನೂ, ಚಪ್ಪಟೆಯಾದ ಕಣ್ಣುಗಳುಳ್ಳವನೂ, ಭಯಂಕರನೂ ಆದ ಒಬ್ಬ ಮನುಷ್ಯನೂ, ಬೆರಳನ್ನು ಹಿಡಿದುಕೊಂಡಿರುವ ಶಿಶುವಿನಿಂದ ಸಹಿತಳೂ, ಗರ್ಭಭಾರದಿಂದ ಶ್ರಮಗೊಂಡವಳೂ, ರಾಕ್ಷಸಿಯೂ ಆದಂತಹ ಅವನ ಪತ್ನಿಯೂ ಹೀಗೆ ಮೂರು ರತ್ನಗಳು ಹುಟ್ಟಿದುವು.

೧೭–೧೮. ತರುವಾಯ ಸಮಸ್ತ ದೇವದಾನವರು ಕಡೆಯುವುದನ್ನು ಬಿಟ್ಟು ಅವರನ್ನು ಹಿಡಿದುಕೊಳ್ಳಲು ಓಡಿದರು. ಬಳಿಕ ಅವರೆಲ್ಲ ವಿಕಾರರೂಪಿಗಳಾದ ಅವರನ್ನೆಲ್ಲ ಕಂಡು ಶಂಕೆಯಿಂದ ಹಿಡಿದುಕೊಳ್ಳದೆ ಪರಸ್ಪರವಾಗಿ ನಕ್ಕರು.

ಅಥೋವಾಚ ಬಲಿರ್ದೈತ್ಯಃ ಕೃತಾಂಜಲಿಪುಟಃ ಸ್ಥಿತಃ ।
ಬ್ರಹ್ಮಾಽಽದಿಯಲ್ಲಭೇತ್ಸರ್ವಂ ಯತ್ಪುರಸ್ತಾತ್ಪ್ರಜಾಯತೇ ॥ ೧೯ ॥
ರತ್ನತ್ರಿತಯಮೇತದ್ಧಿ ತಸ್ಮಾದ್ಗೃಹ್ಣಾತು ಪದ್ಮಜಃ ।
ಯೇನ ಸಿದ್ಧಿರ್ಭವೇದಸ್ಮಿನ್ಮಂಥನೇ ಕಸ್ಯ ಚಾರ್ಪಣಾತ್ ॥ ೨೦ ॥
ತದ್ವಾಕ್ಯಂ ವಿಷ್ಣುನಾ ತಸ್ಯ ಶಂಸಿತಂ ಶಂಕರೇಣ ತು ।
ಇಂದ್ರಾದ್ಯೈಶ್ಚ ಸುರೈಃ ಸರ್ವೈರ್ದಾನವೈಶ್ಚ ವಿಶೇಷತಃ ॥ ೨೧ ॥
ಏತಸ್ಮಿನ್ನಂತರೇ ಬ್ರಹ್ಮಾ ಜಗ್ರಾಹ ತ್ರಿತಯಂ ಚ ತತ್ ।
ದಾಕ್ಷಿಣ್ಯಾತ್ಸರ್ವದೇವಾನಾಮನಿಚ್ಛನ್ನಪಿ ಪಾರ್ಥಿವ ।
ಮಮಂಥುಃ ಸಾಗರಂ ರಾಜನ್ ಪುನಸ್ತೇ ಯತ್ನಮಾಶ್ರಿತಾಃ ॥ ೨೨ ॥
ತತಶ್ಚ ವಾರುಣೀ ಜಾತಾ ದಿವ್ಯಗಂಧಸಮನ್ವಿತಾ ।
ಬಲಿನಾ ಸಂಗ್ರಹೀತಾ ಸಾ ಪ್ರತ್ಯಕ್ಷಂ ಬಲವಿದ್ವಿಷಃ ॥ ೨೩ ॥
ಆವರ್ತೇ ಚಾಪರೇ ಜಾತೇ ನಿಷ್ಕ್ರಾಂತಃ ಕೌಸ್ತುಭೋ ಮಣಿಃ ।
ಸ ಗೃಹೀತೋ ಮಹಾರಾಜ ವಿಷ್ಣುನಾ ಪ್ರಭವಿಷ್ಣುನಾ ॥ ೨೪ ॥
ಅಥಾಪರೇ ಸ್ಥಿತೇ ತತ್ರ ಮಹಾವರ್ತೇ ನಿಶಾಪತಿಃ ।
ಸಂಜಾತಃ ಸ ವೃಷಾಂಕೇನ ಸಂಗ್ರಹೀತಶ್ಚ ತತ್ಕ್ಷಣಾತ್ ॥ ೨೫ ॥

---

೧೯. ಬಳಿಕ ಬಲಿಯು ಕೈಮುಗಿದುಕೊಂಡು ನಮ್ಮಲ್ಲಿ ಆದಿಪುರುಷನಾದ ಬ್ರಹ್ಮನು ಮೊದಲು ಹುಟ್ಟಿದ ವಸ್ತುವನ್ನು ತೆಗೆದುಕೊಳ್ಳಲರ್ಹನು.

೨೦. ಆದುದರಿಂದ ಅವನು ಈ ಮೂರು ರತ್ನಗಳನ್ನು ತೆಗೆದುಕೊಳ್ಳಲಿ. ಬ್ರಹ್ಮನಿಗೆ ಇದನ್ನು ಅರ್ಪಿಸಿದ್ದರಿಂದ ನಮ್ಮ ಮಂಥನ ಕಾರ್ಯವು ಕೈಗೂಡುವುದು.

೨೧. ಆ ಬಲಿಯ ಮಾತನ್ನು ವಿಷ್ಣು, ಶಂಕರ, ಇಂದ್ರಾದಿ ದೇವತೆಗಳೂ, ಸಮಸ್ತ ದಾನವರೂ ಶ್ಲಾಘಿಸಿದರು.

೨೨. ಈ ಸಮಯದಲ್ಲಿ ಬ್ರಹ್ಮನು ಅವುಗಳನ್ನು ತೆಗೆದುಕೊಳ್ಳಲಿಚ್ಛೆಯಿಲ್ಲದಿದ್ದರೂ ಸಮಸ್ತ ದೇವತೆಗಳ ದಾಕ್ಷಿಣ್ಯದಿಂದ ಪರಿಗ್ರಹಿಸಿದನು. ಮರಳಿ ಆ ದೇವದಾನವರು ಪ್ರಯತ್ನದಿಂದ ಸಮುದ್ರವನ್ನು ಕಡೆದರು.

೨೩. ಅನಂತರ ದಿವ್ಯಗಂಧದಿಂದ ಕೂಡಿದ ಮದ್ಯವುಂಟಾಯಿತು. ಬಲಿಯು ಅದನ್ನು ಇಂದ್ರನ ಮುಂದೆ ತೆಗೆದುಕೊಂಡನು.

೨೪. ಮತ್ತೊಂದು ಸುತ್ತು ಕಡೆಯಲು ಕೌಸ್ತುಭಮಣಿಯು ಹೊರಟಿತು. ಮಹಾರಾಜ! ಅದನ್ನು ವಿಷ್ಣುವು ತೆಗೆದುಕೊಂಡನು.

೨೫. ಬಳಿಕ ಮತ್ತೊಂದು ಸುತ್ತು ಕಡೆಯಲು ಚಂದ್ರನು ಹುಟ್ಟಿದನು. ಅವನನ್ನು ಕೂಡಲೆ ಮಹೇಶ್ವರನು ಪರಿಗ್ರಹಿಸಿದನು.

ಪಾರಿಜಾತಸ್ತತೋ ಜಾತೋ ದಿವ್ಯಗಂಧಸಮನ್ವಿತಃ ।
ಸ ಗೃಹೀತ್ವಾ ಸುರೈಃ ಸರ್ವೈಃ ಸ್ಥಾಪಿತೋ ನಂದನೇ ವನೇ ॥ ೨೬ ॥
ತಸ್ಯಾನಂತರಮೇವಾಽಥ ಸುರಭೀ ವತ್ಸಸಂಯುತಾ ।
ನಿಷ್ಕ್ರಾಂತಾ ವ್ಯೋಮಮಾರ್ಗೇಣ ಗೋಲೋಕಂ ಸಮುಪಸ್ಥಿತಾ ॥ ೨೭ ॥
ತತೋ ಧನ್ವಂತರಿರ್ಜಾತೋ ಬಿಭ್ರದ್ಧಸ್ತೇ ಕಮಂಡಲುಂ ।
ಸಂಪೂರ್ಣಮಮೃತೇನೈವ ಸ ದೇವೈರ್ದಾನವೈರ್ನೃಪ ॥ ೨೮ ॥
ಗೃಹೀತೋ ಯುಗಪತ್ಕ್ರುದ್ಧೈಃ ಪರಸ್ಪರಜಿಗೀಷಯಾ ।
ದೇವಾನಾಂ ಹಸ್ತಗೋ ವೈದ್ಯೋ ದೈತ್ಯಾನಾಂ ಚ ಕಮಂಡಲುಃ ॥ ೨೯ ॥
ತತಸ್ತಂ ಲೋಭಸಂಯುಕ್ತಾ ಮಮಂಥುಃ ಸಾಗರಂ ನೃಪ ।
ಪದ್ಮಹಸ್ತಾಽತ್ರ ಸಂಜಾತಾ ತತೋ ಲಕ್ಷ್ಮೀಃ ಸಿತಾಂಬರಾ ॥ ೩೦ ॥
ಸ್ವಯಮೇವ ವೃತೋ ವಿಷ್ಣುಸ್ತಯಾ ಪಾರ್ಥಿವಸತ್ತಮ ।
ಮಥ್ಯಮಾನೇ ತತೋಽತೀವ ಸಮುದ್ರೇ ದೇವದಾನವೈಃ ॥ ೩೧ ॥
ಕಾಲಕೂಟಂ ಸಮುತ್ಪನ್ನಂ ಯೇನ ಸರ್ವೇ ಸುರಾಸುರಾಃ ।
ಸಂಪ್ರಾಪ್ತಾಃ ಪರಮಂ ಕಷ್ಟಂ ಪ್ರಭಗ್ನಾಶ್ಚ ದಿಶೋ ದಶ ॥ ೩೨ ॥
ತಂ ದೃಷ್ಟ್ವಾ ಭಗವಾಂಛಂಭುಸ್ತೀವ್ರಂ ತೀವ್ರಪರಾಕ್ರಮಃ ।
ಭಕ್ಷಯಾಮಾಸ ರಾಜೇಂದ್ರ ನೀಲಕಂಠಸ್ತತೋಽಭವತ್ ॥ ೩೩ ॥

---

೨೬. ಅನಂತರ ದಿವ್ಯಗಂಧದಿಂದ ಕೂಡಿದ ಪಾರಿಜಾತತರುವು ಹುಟ್ಟಿತು. ಅದನ್ನು ಸಮಸ್ತ ದೇವತೆಗಳು ತೆಗೆದುಕೊಂಡು ನಂದನವನದಲ್ಲಿ ನೆಟ್ಟರು.

೨೭. ಅನಂತರ ಕಾಮಧೇನುವು ಕರುವಿನಿಂದ ಸಹಿತವಾಗಿ ಹೊರಟು ಆಕಾಶಮಾರ್ಗದಿಂದ ಸ್ವರ್ಗವನ್ನು ಸೇರಿತು.

೨೮–೨೯. ಬಳಿಕ ಅಮೃತದಿಂದ ತುಂಬಿರುವ ಕಮಂಡಲುವನ್ನು ಹಿಡಿದ ಧನ್ವಂತರಿಯು ಹುಟ್ಟಲು ದೇವದಾನವರು ಕ್ರುದ್ಧರಾಗಿ ಪರಸ್ಪರ ಜಯಿಸಲಪೇಕ್ಷೆಯಿಂದ ಅವನನ್ನು ಹಿಡಿದುಕೊಂಡರು. ಆಗ ಧನ್ವಂತರಿಯು ದೇವತೆಗಳ ಹಸ್ತವನ್ನೂ, ಕಮಂಡಲುವು ದಾನವರ ಹಸ್ತವನ್ನೂ ಸೇರಿತು.

೩೦. ಬಳಿಕ ದೇವದಾನವರು ಅತ್ಯಾಶೆಯಿಂದ ಸಮುದ್ರವನ್ನು ಕಡೆಯಲು ಶ್ವೇತವಸ್ತ್ರವನ್ನುಟ್ಟು ಪದ್ಮಪಾಣಿಯಾದ ಲಕ್ಷ್ಮಿಯು ಉದ್ಭವಿಸಿದಳು.

೩೧–೩೩. ಅವಳು ತಾನಾಗಿಯೇ ವಿಷ್ಣುವನ್ನು ವರಿಸಿದಳು. ತರುವಾಯ ದೇವದಾನವರು ಸಮುದ್ರವನ್ನು ಕಡೆಯುತ್ತಿರಲು ಕಾಲಕೂಟ ವಿಷವು ಹುಟ್ಟಿತು. ಅದರಿಂದ ಆ ಸಮಸ್ತ ಸುರಾಸುರರು ಅತ್ಯಂತ ಕಷ್ಟವನ್ನು ಹೊಂದಿ ದಶದಿಕ್ಕುಗಳಿಗೆ ಓಡಿದರು. ಅದನ್ನು ಕಂಡು ಕಠಿನ ಪರಾಕ್ರಮವುಳ್ಳ ಶಂಕರನು ಕುಡಿದನು. ಅದರಿಂದವನು ನೀಲಕಂಠನಾದನು.

ಅಥ ಸಂತ್ಯಜ್ಯ ಮಂಥಾನಂ ಮಂದರಂ ವಾಸುಕಿಂ ತಥಾ ।
ಅಮೃತಾರ್ಥೇಽಭವದ್ಯುದ್ಧಂ ದೈತ್ಯಾನಾಂ ವಿಬುಧೈಃ ಸಹ ॥ ೩೪ ॥
ಅಥ ಸ್ತ್ರೀರೂಪಮಾಧಾಯ ವಿಷ್ಣುರ್ದೈತ್ಯಾನುವಾಚ ತಾನ್ ।
ತತೋ ಹೃಷ್ಟೋ ಬಲಿಸ್ತಸ್ಯೈ ದತ್ವಾ ಪೀಯೂಷಮೇವ ತತ್ ॥ ೩೫ ॥
ವಿಶ್ವಾಸಂ ಪರಮಂ ಗತ್ವಾ ಯುದ್ಧಂ ಚಕ್ರೇ ಸುರೈಃ ಸಹ ।
ತತೋ ವಿಷ್ಣುಃ ಪರಿತ್ಯಜ್ಯ ಸ್ತ್ರೀ ರೂಪಂ ಪುರುಷಾಕೃತಿಃ ॥ ೩೬ ॥
ತದೇವಾಽಮೃತಮಾದಾಯ ಯಯೌ ಯತ್ರ ದಿವೌಕಸಃ ।
ಅಬ್ರವೀತ್ತಾನ್ ಸುಹೃಷ್ಟಾತ್ಮಾ ಪಿಬಧ್ವಮಮೃತಂ ಸುರಾಃ ॥ ೩೭ ॥
ಯೇನಾಽಮರತ್ವಮಾಸಾದ್ಯ ವ್ಯಾಪಾದಯತ ದಾನವಾನ್ ।
ತೇ ತಥೇತಿ ಪ್ರತಿಜ್ಞಾಯ ಪಪುಃ ಪೀಯೂಷಮುತ್ತಮಂ ॥ ೩೮ ॥
ಅಮರಾಶ್ಚ ತತೋ ಜಾತಾ ಜಘ್ನುಃ ಸಂಖ್ಯೇ ಮಹಾಸುರಾನ್ ॥ ೩೯ ॥
ತೇಷಾಂ ಪಾನವಿಧೌ ತತ್ರ ವರ್ತಮಾನೇ ಮಹೀಪತೇ ।
ರಾಹುರ್ವಿಬುಧರೂಪೇಣ ಪಪೌ ಪೀಯೂಷಮುತ್ಸುಕಃ ॥ ೪೦ ॥
ಸ ಲಕ್ಷಿತೋ ಮಹಾದೈತ್ಯಶ್ಚಂದ್ರಾರ್ಕಾಭ್ಯಾಂ ಚ ತತ್ಕ್ಷಣಾತ್ ।
ನಿವೇದಿತೋ ಹರೇ ರಾಜನ್ನಾಯಂ ದೇವೋ ಮಹಾಸುರಃ ॥ ೪೧ ॥

---

೩೪. ಬಳಿಕ ದೇವದಾನವರು ಮಂದರಪರ್ವತವನ್ನೂ, ವಾಸುಕಿಯನ್ನೂ ಬಿಟ್ಟು ಅಮೃತಕ್ಕಾಗಿ ಪರಸ್ಪರ ಯುದ್ಧಮಾಡಿದರು.

೩೫–೩೮. ಅನಂತರ ವಿಷ್ಣುವು ಹೆಂಗಸಾಗಿ ದೈತ್ಯರನ್ನು ಕುರಿತು ಮಾತಾಡಿದನು. ಆದರಿಂದ ನಂಬುಗೆಗೊಂಡ ಬಲಿಯು ಅವಳ ಹತ್ತಿರ ಅಮೃತವನ್ನು ಕೊಟ್ಟು ಸುರರೊಡನೆ ಕಾಳಗ ಮಾಡಿದನು. ವಿಷ್ಣುವು ಸ್ತ್ರೀರೂಪವನ್ನು ತ್ಯಜಿಸಿ ಪುರುಷನಾಗಿ ಆ ಅಮೃತವನ್ನು ತೆಗೆದುಕೊಂಡು ದೇವತೆಗಳೆಡೆಗೆ ಹೋಗಿ ಸಂತೋಷದಿಂದ ಇಂತೆಂದನು. ದೇವತೆಗಳೆ! ನೀವು ಅಮೃತವನ್ನು ಕುಡಿಯಿರಿ. ಆದರಿಂದ ನೀವು ಅಮರರಾಗಿ ದಾನವರನ್ನು ಕೊಲ್ಲಿರಿ. ದೇವತೆಗಳು ಹಾಗೆಯೇ ಆಗಲೆಂದು ಒಪ್ಪಿ ಉತ್ತಮವಾದ ಅಮೃತವನ್ನು ಕುಡಿದರು.

೩೯–೪೦. ಅದರಿಂದವರು ಅಮರರಾಗಿ ಯುದ್ಧದಲ್ಲಿ ಅಸುರರನ್ನು ಕೊಂದರು. ಆ ದೇವತೆಗಳು ಅಮೃತವನ್ನು ಕುಡಿಯುತ್ತಿರಲು ರಾಹುವೆಂಬ ದೈತ್ಯನು ಔತ್ಸುಕ್ಯದಿಂದ ದೇವರೂಪವನ್ನು ಧರಿಸಿ ಅಮೃತವನ್ನು ಕುಡಿದನು.

೪೧. ಅದನ್ನು ಚಂದ್ರಸೂರ್ಯರು ಕೂಡಲೆ ನೋಡಿ ಇವನು ದೇವತೆಯಲ್ಲ, ಅಸುರನೆಂದು ವಿಷ್ಣುವಿಗೆ ತಿಳಿಸಿದರು.

ತಚ್ಛ್ರುತ್ವಾ ವಾಸುದೇವೇನ ತಸ್ಯ ಚಕ್ರಂ ಸುದರ್ಶನಂ ।
ವಧಾಯ ಪಾರ್ಥಿವಶ್ರೇಷ್ಠ ಮುಕ್ತಂ ವಜ್ರಸಮಪ್ರಭಂ ॥ ೪೨ ॥
ಯಾವನ್ಮಾತ್ರಂ ಶರೀರಂ ತತ್ತಸ್ಯ ವ್ಯಾಪ್ತಂ ಮಹೀಪತೇ ।
ಅಮೃತೇನ ತತಃ ಕೃತ್ತಮಮೋಘೇನಾಪಿ ತಚ್ಛಿರಃ ॥ ೪೩ ॥
ತತೋಽಮರತ್ವಮಾಪನ್ನಃ ಸ ಯಾವತ್ಸಿಂಹಿಕಾಸುತಃ ।
ತಾವತ್ಪ್ರೋಕ್ತೋಽಚ್ಯುತೇನಾಽಥ ಸಾಮ್ನಾ ಪರಮವಲ್ಗುನಾ ॥ ೪೪ ॥
ತ್ಯಜ ದೈತ್ಯಾನ್ ಮಹಾಭಾಗ ದೇವಾನಾಂ ಸಮ್ಮತೋ ಭವ ।
ಸಂಪ್ರಾಪ್ಸ್ಯಸಿ ಪರಾಂ ಪೂಜಾಂ ಸದಾ ತ್ವಂ ಗ್ರಹಮಂಡಲೇ ॥ ೪೫ ॥
ಸ ತಥೇತಿ ಪ್ರತಿಜ್ಞಾಯ ತ್ಯಕ್ತ್ವಾ ತಾನ್ ದೈತ್ಯಸತ್ತಮಾನ್ ।
ಪೂಜಾಂ ಪ್ರಾಪ್ನೋತಿ ಮರ್ತ್ಯಾನಾಂ ಸಂಸ್ಥಿತೋ ಗ್ರಹಮಂಡಲೇ ॥ ೪೬ ॥
ಏತಸ್ಮಿನ್ನಂತರೇ ದೈತ್ಯಾ ನಿರ್ಜಿತಾಃ ಸುರಸತ್ತಮೈಃ ।
ದಿಶೋ ಜಗ್ಮುಃ ಪರಿತ್ರಸ್ತಾಃ ಕೇಚಿನ್ಮೃತ್ಯುಮುಪಾಗತಾಃ ॥ ೪೭ ॥
ಪೀತಶೇಷಂ ಚ ಪೀಯೂಷಂ ಸ್ಥಾಪಿತಂ ನಂದನೇ ವನೇ ।
ನಾಗರಾಜಸ್ಯ ಯತ್ರೈವ ಸ್ಥಿತಮಾಲಾನಮೇವ ಚ ॥ ೪೮ ॥
ಅಹರ್ನಿಶಂ ಮದಸ್ರಾವೀ ಕರೀಂದ್ರಃ ಸೋಽಪಿ ಸಂಸ್ಥಿತಃ ।
ತತ್ಪ್ರಭಾವೈಃ ಪ್ರಭಿನ್ನಃ ಸ ಪೀಯೂಷಸ್ಯ ಕಮಂಡಲುಃ ॥ ೪೯ ॥

---

೪೨. ವಿಷ್ಣುವು ಅದನ್ನು ಕೇಳಿ ಅವನನ್ನು ಕೊಲ್ಲಲು ವಜ್ರದಂತೆ ಹೊಳೆಯುವ ಚಕ್ರವನ್ನು ಪ್ರಯೋಗಿಸಿದನು.

೪೩. ಅಮೃತವು ಅವನ ಶರೀರವನ್ನು ವ್ಯಾಪಿಸುವಷ್ಟರಲ್ಲಿ ಚಕ್ರವು ತಲೆಯನ್ನು ಕತ್ತರಿಸಿತು.

೪೪. ಅಷ್ಟರಲ್ಲಿಯೇ ಅಮರನಾದ ಆ ರಾಹುವನ್ನು ಕುರಿತು ವಿಷ್ಣುವು ಮೃದುನುಡಿಯಿಂದ ಇಂತೆಂದನು.

೪೫–೪೬. ಮಹಾಭಾಗ್ಯವಂತನೆ! ನೀನು ದೈತ್ಯರನ್ನು ತ್ಯಜಿಸಿ ದೇವತೆಗಳಿಗೆ ಪ್ರಿಯನಾಗು. ಆದರಿಂದ ನೀನು ಗ್ರಹಮಂಡಲದಲ್ಲಿ ಉತ್ತಮ ಪೂಜೆಯನ್ನು ಪಡೆಯುವೆ. ಅವನು ಹಾಗೆಯೇ ಆಗಲೆಂದು ಒಪ್ಪಿ ಆ ದೈತ್ಯಶ್ರೇಷ್ಠರನ್ನು ತ್ಯಜಿಸಿ ಗ್ರಹಗಳ ನಡುವೆ ನೆಲೆಸಿ ಮಾನವರಿಂದ ಪೂಜೆಯನ್ನು ಪಡೆಯುತ್ತಿರುವನು.

೪೭. ಇಷ್ಟರಲ್ಲಿ ಸುರೋತ್ತಮರಿಂದ ನಿರ್ಜಿತರಾದ ಕೆಲವು ದೈತ್ಯರು ಭಯದಿಂದ ದಿಕ್ಕುಗಳಿಗೆ ಓಡಿದರು. ಕೆಲವರು ಮಡಿದರು.

೪೮. ದೇವತೆಗಳು ಕುಡಿದುಳಿದ ಅಮೃತವನ್ನು ನಂದನವನದಲ್ಲಿ ಐರಾವತವನ್ನು ಕಟ್ಟುವ ಕಂಬದೆಡೆಯಲ್ಲಿ ಸ್ಥಾಪಿಸಿದರು.

೪೯. ಆ ಐರಾವತವು ಹಗಲು ರಾತ್ರಿ ಮದವನ್ನು ಸುರಿಸುತ್ತಿದ್ದಿತು. ಆದರಿಂದ ಅಮೃತದ ಕಮಂಡಲುವು ಒಡೆಯಿತು.

ತತೋ ವಲ್ಲೀ ಸಮುತ್ಪನ್ನಾ ತಸ್ಮಾಚ್ಚೈವ ಕಮಂಡಲೋಃ ।
ತತ್ರಾಲಾನಸಮಾರೂಢಾ ವೃದ್ಧಿಂ ಚ ಪರಮಾಂ ಗತಾ ॥ ೫೦ ॥
ತದುದ್ಭವಾನಿ ಪತ್ರಾಣಿ ಗೃಹೀತ್ವಾ ಸುರಸತ್ತಮಾಃ ।
ಅಪೂರ್ವಾಣಿ ಸುಗಂಧೀನಿ ಮತ್ವಾ ತೇ ಭಕ್ಷಯಂತಿ ಚ ॥ ೫೧ ॥
ವಕ್ತ್ರಶುದ್ಧಿಕೃತೇ ರಾಜನ್ ವಿಶೇಷೇಣ ಪ್ರಹರ್ಷಿತಾಃ ॥ ೫೨ ॥
ಅಥ ಧನ್ವಂತರಿರ್ವೈದ್ಯಃ ಸ್ವಬುದ್ಧ್ಯಾ ಪೃಥಿವೀಪತೇ ।
ನಾಗಾಲಾನೇ ಯತೋ ಜಾತಾ ನಾಗವಲ್ಲೀ ಭವಿಷ್ಯತಿ ॥ ೫೩ ॥
ಸದಾ ಸ್ಮರಸ್ಯ ಸಂಸ್ಥಾನಂ ಮಮ ವಾಕ್ಯಾದ್ಭವಿಷ್ಯತಿ ।
ನಾಗವಲ್ಲೀತಿ ವೈ ನಾಮ ತಸ್ಯಾಶ್ಚಕ್ರೇ ತತಃ ಪರಂ ॥ ೫೪ ॥
ಸಂಯೋಗಂ ಚ ಚಕಾರಾಽಥ ತಾಂಬೂಲಂ ಜಾಯತೇ ಯಥಾ ।
ಪೂಗೀಫಲೇನ ಚೂರ್ಣೇನ ಖದಿರೇಣಾಽಪಿ ಪಾರ್ಥಿವ ॥ ೫೫ ॥
ಕಸ್ಯಚಿತ್ತ್ವಥ ಕಾಲಸ್ಯ ವಾಣೀವತ್ಸರಕೋ ನೃಪಃ ।
ಪ್ರತೋಷಂ ನೀತವಾಂಛಕ್ರಂ ತಪಸಾ ನಿರ್ಮಲೇನ ಚ ॥ ೫೬ ॥
ತತಸ್ತತ್ತಪಸಾ ತುಷ್ಟ ಇಂದ್ರೋ ವಚನಮಬ್ರವೀತ್ ॥ ೫೭ ॥

ಇಂದ್ರ ಉವಾಚ :—

ಭೋ ಭೋಃ ಪಾರ್ಥಿವ ತುಷ್ಟೋಽಸ್ಮಿ ತಪಸಾಽನೇನ ಸಾಂಪ್ರತಂ ।
ಬ್ರೂಹಿ ಯತ್ತೇ ವರಂ ದದ್ಮಿ ಮನಸಾ ವಾಂಛಿತಂ ಸದಾ ॥ ೫೮ ॥

---

೫೦—೫೨. ಆ ಕಮಂಡಲುವಿನಿಂದ ಒಂದು ಲತೆಯು ಹುಟ್ಟಿತು. ಅದು ಆ ಕಂಬದ ಮೇಲೆ ಹಬ್ಬಿ ಅತಿಶಯವಾಗಿ ಬೆಳೆಯಿತು. ದೇವತೆಗಳು ಅದರ ಎಲೆಗಳನ್ನು ಅತ್ಯಂತ ಸುವಾಸನೆಯಾಗಿವೆಯೆಂದು ತಿಳಿದು ಮುಖಶುದ್ಧಿಗಾಗಿ ಮೆದ್ದು ಬಹುವಾಗಿ ಸಂತೋಷಗೊಂಡರು.

೫೩—೫೪. ಬಳಿಕ ಧನ್ವಂತರಿಯು ತನ್ನ ಬುದ್ಧಿಯಿಂದ ಇದು ನಾಗಾಲಾನದಲ್ಲಿ ಹುಟ್ಟಿದಕಾರಣ ನಾಗವಲ್ಲಿಯೆಂದು ಹೆಸರಾಗಿ, ಯಾವಾಗಲೂ ಮನ್ಮಥನಿಗೆ ಆವಾಸಸ್ಥಾನವಾಗಿರುವುದೆಂದು ನುಡಿದು ಅದಕ್ಕೆನಾಗವಲ್ಲೀ ಎಂದು ಹೆಸರನ್ನಿಟ್ಟನು.

೫೫. ಬಳಿಕ ಅಡಿಕೆಪುಡಿ, ಖದಿರ ಇವುಗಳನ್ನು ಸೇರಿಸಿ ತಾಂಬೂಲವಾಗುವಂತೆ ಮಾಡಿದನು.

೫೬. ಒಂದಾನೊಂದು ಕಾಲದಲ್ಲಿ ವಾಣೀವತ್ಸರಕನೆಂಬ ದೊರೆಯು ನಿರ್ಮಲ ತಪಸ್ಸಿನಿಂದ ಇಂದ್ರನನ್ನು ಸಂತೋಷಗೊಳಿಸಿದನು.

೫೭. ಬಳಿಕ ತಪಸ್ಸಿನಿಂದ ಸಂತೋಷಗೊಂಡ ಇಂದ್ರನು ಇಂತೆಂದನು.

೫೮. ಇಂದ್ರನು ಹೇಳುತ್ತಾನೆ :—ಎಲೈ ದೊರೆಯೆ! ಈಗ ನಾನು ನಿನ್ನ ಈ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ನಿನ್ನ ಅಭೀಷ್ಟವೇನೆಂಬುದನ್ನು ಹೇಳು. ಅದನ್ನು ಕೊಡುವೆನು.

ಸೋಽಬ್ರವೀದ್ಯದಿ ಮೇ ತುಷ್ಟೋ ಯದಿ ದೇಯೋ ವರೋ ಮಮ ।
ವಿಮಾನಂ ಖೇಚರಂ ದೇಹಿ ಯೇನಾಽಽಗಚ್ಛಾಮಿ ತೇ ಗೃಹೇ ।
ನಿತ್ಯಮೇವ ಧರಾಪೃಷ್ಠಾದ್ವಂದನಾರ್ಥಂ ತವ ಪ್ರಭೋ ॥ ೫೯ ॥
ಸ ತಥೇತಿ ಪ್ರತಿಜ್ಞಾಯ ಹಂಸಬರ್ಹಿಣನಾದಿತಂ ।
ವಿಮಾನಂ ಪ್ರದದೌ ತಸ್ಮೈ ಮನೋಮಾರುತವೇಗಧೃಕ್ ॥ ೬೦ ॥
ಸ ತತ್ರ ನಿತ್ಯಮಾರುಹ್ಯ ಪ್ರಯಾತಿ ತ್ರಿದಶಾಲಯಂ ।
ಭಕ್ತ್ಯಾ ಪರಮಯಾ ಯುಕ್ತಃ ಸಹಸ್ರಾಕ್ಷಂ ಪ್ರವಂದಿತುಂ ॥ ೬೧ ॥
ತಸ್ಯ ಶಕ್ರಃ ಸ್ವಹಸ್ತೇನ ತಾಂಬೂಲಂ ಚ ಪ್ರಯಚ್ಛತಿ ।
ಸ ಚ ತದ್ಭಕ್ಷಯಾಮಾಸ ಪ್ರಹೃಷ್ಟೇನಾಂತರಾತ್ಮನಾ ॥ ೬೨ ॥
ವೃದ್ಧಭಾವೇಽಪಿ ಸಂಪ್ರಾಪ್ತೇ ತಸ್ಯ ಕಾಮೋಽತ್ಯವರ್ಧತ ।
ತಾಂಬೂಲಸ್ಯ ಪ್ರಭಾವೇನ ಸುಮಹಾನ್ಪೃಥಿವೀಪತೇ ॥ ೬೩ ॥
ಅಥ ಶಕ್ರಮುವಾಚೇದಂ ಸ ರಾಜಾ ವಿನಯಾನ್ವಿತಃ ।
ನಾಗವಲ್ಲೀಪ್ರದಾನೇನ ಪ್ರಸಾದೋ ಮೇ ವಿಧೀಯತಾಂ ॥ ೬೪ ॥
ಮರ್ತ್ಯಲೋಕೇ ಸಮಾನೇತುಂ ಪ್ರಚಾರಂ ಯೇನ ಗಚ್ಛತಿ ।
ಸ ತಥೇತಿ ಪ್ರತಿಜ್ಞಾಯ ತಸ್ಮೈ ತಾಂ ಪ್ರದದೌ ತದಾ ॥ ೬೫ ॥

---

೫೯. ಸ್ವಾಮಿ! ನೀನು ನನ್ನಲ್ಲಿ ಸಂತುಷ್ಟನಾಗಿದ್ದು ನನಗೆ ವರವನ್ನೀಯುವುದಾದರೆ ನನಗೆ ಆಕಾಶದಲ್ಲಿ ಸಂಚರಿಸುವ ವಿಮಾನವನ್ನು ಕೊಡು. ನಾನು ನಿತ್ಯವೂ ನಿನ್ನನ್ನು ವಂದಿಸಲು ಭೂಮಿಯಿಂದ ಸ್ವರ್ಗಕ್ಕೆ ಬರುವೆನು.

೬೦. ಇಂದ್ರನು ಹಾಗೆಯೇ ಆಗಲೆಂದು ಅವನಿಗೆ ಹಂಸ ಮಯೂರಗಳಿಂದ ಶಬ್ದಗೊಂಡುದೂ, ಮನಸ್ಸು ಮತ್ತು ಗಾಳಿಗಳಂತೆ ವೇಗವುಳ್ಳುದೂ ಆದ ವಿಮಾನವನ್ನು ಕೊಟ್ಟನು.

೬೧. ಅವನು ನಿತ್ಯವೂ ಅದನ್ನೇರಿ ಅಧಿಕ ಭಕ್ತಿಯಿಂದ ಇಂದ್ರನನ್ನು ವಂದಿಸಲು ದೇವಲೋಕಕ್ಕೆ ಹೋಗುತ್ತಿದ್ದನು.

೬೨. ಅವನಿಗೆ ಇಂದ್ರನು ತನ್ನ ಕೈಯಿಂದಲೇ ತಾಂಬೂಲವನ್ನು ಕೊಡುತ್ತಿದ್ದನು. ಅವನು ಅದನ್ನು ಆನಂದಗೊಂಡ ಮನಸ್ಸಿನಿಂದ ತಿನ್ನುತ್ತಿದ್ದನು.

೬೩. ದೊರೆಯೆ! ತಾಂಬೂಲದ ಸಾಮರ್ಥ್ಯದಿಂದ ಅವನಿಗೆ ಮುಪ್ಪಿನಲ್ಲಿಯೂ ಅತ್ಯಂತವಾಗಿ ಕಾಮವು ಹೆಚ್ಚಿತು.

೬೪–೬೫. ಬಳಿಕ ರಾಜನು ಇಂದ್ರನನ್ನು ಕುರಿತು ವಿನಯದಿಂದ, "ನನಗೆ ನಾಗವಲ್ಲೀ ದಾನಮಾಡಿ ಅನುಗ್ರಹಿಸು. ಅದನ್ನು ಭೂಲೋಕಕ್ಕೆ ತೆಗೆದುಕೊಂಡು ಹೋಗಿ ಪ್ರಚಾರಗೊಳಿಸುವೆನು" ಎಂದನು. ಇಂದ್ರನು ಅದಕ್ಕೆ ಒಪ್ಪಿ ಅವನಿಗೆ ಆಗ ನಾಗವಲ್ಲೀಯುವನ್ನಿತ್ತನು.

ಗತ್ವಾ ನಿಜಪುರಂ ಸೋಽಪಿ ಸ್ವೋದ್ಯಾನೇಽಸ್ಥಾಪಯತ್ತದಾ ।
ತತಃ ಕಾಲೇನ ಮಹತಾ ಪ್ರಚಾರಂ ಸಾ ಗತಾ ಕ್ಷಿತೌ ॥ ೧೬ ॥
ಯಸ್ಯಾಸ್ವಾದನತೋ ಲೋಕಃ ಕಾಮಾತ್ಮಾ ಸಮಪದ್ಯತ ।
ನ ಕಶ್ಚಿದ್ಯಜನಂ ಚಕ್ರೇ ಯಾಜನಂ ಚ ವಿಶೇಷತಃ ।
ಅನ್ಯಾ ಧರ್ಮಕ್ರಿಯಾಃ ಸರ್ವಾಃ ಪ್ರಣಷ್ಟಾ ಧರ್ಮಸಂಭವಾಃ ॥ ೧೭ ॥
ತತೋ ದೇವಗಣಾಃ ಸರ್ವೇ ಯಜ್ಞಭಾಗ ವಿವರ್ಜಿತಾಃ ।
ಪೀಡ್ಯಮಾನಾಃ ಕ್ರುಧಾವಿಷ್ಟಾ ಗತ್ವಾ ಪ್ರೋಚುಃ ಪಿತಾಮಹಂ ॥ ೧೮ ॥
ಮರ್ತ್ಯಲೋಕೇ ಸುರಶ್ರೇಷ್ಠ ನಷ್ಟಾ ಧರ್ಮಕ್ರಿಯಾ ಭೃಶಂ ।
ಕಾಮಾಸಕ್ತೋ ಯತೋ ಲೋಕಸ್ತಾಂಬೂಲಸ್ಯ ಚ ಭಕ್ಷಣಾತ್ ।
ತಸ್ಮಾತ್ಕುರು ಪ್ರಸಾದಂ ನೋ ಯೇನಾಽಸ್ಮಾಕಂ ಕ್ರಿಯಾ ಭವೇತ್ ॥ ೧೯ ॥
ಏತಸ್ಮಿನ್ನೇವ ಕಾಲೇ ತು ಪುಷ್ಕರಸ್ಥಂ ಪಿತಾಮಹಂ ।
ಯಜನಾರ್ಥೇ ಸಮಾಯಾಂತಂ ದರಿದ್ರೋ ವೀಕ್ಷ್ಯ ಪಾರ್ಥಿವ ॥ ೨೦ ॥
ಪ್ರಣಿಪತ್ಯ ತತಃ ಪ್ರಾಹ ವಿನಯಾಽವನತಃ ಸ್ಥಿತಃ ।
ನಿರ್ವಿಣ್ಣೋಽಹಂ ಸುರಶ್ರೇಷ್ಠ ಬ್ರಾಹ್ಮಣಾನಾಂ ಗೃಹೇ ಸ್ಥಿತಃ ॥ ೨೧ ॥
ತಸ್ಮಾತ್ಕೀರ್ತಯ ಮೇ ಸ್ಥಾನಂ ಶ್ರೇಷ್ಠಂ ವಿತ್ತವತಾಂ ಹಿ ಯತ್ ।
ತತ್ರ ಸಂಜಾಯತೇ ತೃಪ್ತಿಃ ಶಾಶ್ವತೀ ಪ್ರಚುರಾ ಪ್ರಭೋ ॥ ೨೨ ॥

---

೧೬. ಆ ರಾಜನು ತನ್ನ ಪಟ್ಟಣಕ್ಕೆ ಹೋಗಿ ಅದನ್ನು ತನ್ನ ಉದ್ಯಾನದಲ್ಲಿ ಸ್ಥಾಪಿಸಿದನು. ಅದು ಬಹು ಕಾಲದಮೇಲೆ ಭೂಲೋಕದಲ್ಲಿ ಪ್ರಚಾರಗೊಂಡಿತು.

೧೭. ಜನರು ಅದನ್ನು ಮೆಲ್ಲುವುದರಿಂದ ಕಾಮಿಗಳಾಗಿಹೋದರು. ಯಾರೂ ಯಜನ ಯಾಜನಗಳನ್ನು ಮಾಡಲಿಲ್ಲ. ಇದರಿಂದ ಧರ್ಮಸಂಬಂಧವಾದ ಕಾರ್ಯಗಳೆಲ್ಲ ಅತಿಶಯವಾಗಿ ಹಾಳಾದುವು.

೧೮. ಬಳಿಕ ಸಕಲ ದೇವತೆಗಳೂ ಯಜ್ಞಭಾಗವಿಲ್ಲದೆ ಪೀಡಿತರಾಗಿ ಕೋಪಗೊಂಡು ಬ್ರಹ್ಮನೆಡೆಗೆ ಹೋಗಿ ಹೀಗೆಂದರು.

೧೯. ದೇವೋತ್ತಮ! ಭೂಲೋಕದಲ್ಲಿ ಮಾನವರೆಲ್ಲ ತಾಂಬೂಲಭಕ್ಷಣದಿಂದ ಕಾಮಾಸಕ್ತರಾಗಿರುವುದರಿಂದ ಧರ್ಮಕಾರ್ಯಗಳೆಲ್ಲ ನಷ್ಟವಾದುವು. ಆದುದರಿಂದ ನಮ್ಮಮೇಲೆ ಅನುಗ್ರಹಮಾಡು. ಅದರಿಂದ ಧರ್ಮಕಾರ್ಯಗಳು ನಡೆಯುವುವು.

೨೦–೨೧. ಈ ಸಮಯದಲ್ಲಿ ದರಿದ್ರನು ಯಾಗಕ್ಕಾಗಿ ಪುಷ್ಕರಕ್ಷೇತ್ರಕ್ಕೆ ಬರುತ್ತಿರುವ ಬ್ರಹ್ಮನನ್ನು ನೋಡಿ ವಿನಯದಿಂದ ನಮಸ್ಕರಿಸಿ ಇಂತೆಂದನು. ಚತುರ್ಮುಖ! ನಾನು ಬ್ರಾಹ್ಮಣರ ಮನೆಯಲ್ಲಿ ವಾಸಿಸುತ್ತ ವ್ಯಥೆಗೊಂಡಿರುವೆನು.

೨೨. ಸ್ವಾಮಿ! ಆದುದರಿಂದ ನನಗೆ ಶ್ರೇಷ್ಠವಾದ ಧನಿಕರ ಮನೆಯನ್ನು ಹೇಳು. ಅಲ್ಲಿ ನನಗೆ ಶಾಶ್ವತವೂ ಹೆಚ್ಚಿನದೂ ಆದ ತೃಪ್ತಿಯುಂಟಾಗುವುದು.

ತಸ್ಯ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಪಿತಾಮಹಃ ।
ಅಬ್ರವೀಚ್ಚ ದರಿದ್ರಂ ತಂ ಛಿದ್ರಾರ್ಥಂ ಧನಿನಾಮಿಹ ॥ ೭೩ ॥
ಚೂರ್ಣಪತ್ರೇ ತ್ವಯಾ ವಾಸಃ ಸದಾ ಕಾರ್ಯೋ ದರಿದ್ರ ಭೋಃ ।
ತಾಂಬೂಲಸ್ಯ ತು ಪರ್ಣಾಗ್ರೇ ಭಾರ್ಯಯಾ ಮಮ ವಾಕ್ಯತಃ ॥ ೭೪ ॥
ಪರ್ಣಾನಾಂ ಚೈವ ವೃಂತೇಷು ಸರ್ವೇಷು ತ್ವತ್ಸುತೇನ ಚ ।
ರಾತ್ರೌ ಖದಿರಸಾರೇ ಚ ತ್ವಂ ತಾಭ್ಯಾಂ ಸರ್ವದಾ ವಸ ॥ ೭೫ ॥
ಧನಿನಾಂ ಛಿದ್ರಕೃತ್ಪ್ರೋಕ್ತಮೇತತ್ಸ್ಥಾನಚತುಷ್ಟಯಂ ।
ಪಾರ್ಥಿವಾನಾಂ ವಿಶೇಷೇಣ ಮಮ ವಾಕ್ಯಾದ್ವ್ರಜ ದ್ರುತಂ ॥ ೭೬ ॥

ನಾರದ ಉವಾಚ:—

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರಾಧಿಪ ॥ ೭೭ ॥
ತಾಂಬೂಲೋತ್ಥಾನಿ ಛಿದ್ರಾಣಿ ಯಥಾಸ್ಯುರ್ಧನಿನಾಮಿಹ ।
ತಾನಿ ಸರ್ವಾಣಿ ಚೀರ್ಣಾನಿ ತ್ವಯಾ ರಾಜನ್ನಜಾನತಾ ।
ತೇನ ವೈ ವಿಭವೋಚ್ಛಿತ್ತಿಃ ಸಂಜಾತಾ ಸಹಸಾ ನೃಪ ॥ ೭೮ ॥

ರಾಜೋವಾಚ:—

ತದರ್ಥಮಪಿ ಮೇ ಬ್ರೂಹಿ ಪ್ರಾಯಶ್ಚಿತ್ತಂ ಮುನೀಶ್ವರ ।
ಕದಾಚಿದ್ಭಕ್ಷಣಂ ಮೇ ಸ್ಯಾತ್ತಾಂಬೂಲಸ್ಯ ತಥಾ ವಿಧಂ ॥ ೭೯ ॥

---

೭೩. ಬ್ರಹ್ಮನು ಅವನ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಧನಿಕರ ಛಿದ್ರಕ್ಕಾಗಿ ಹೀಗೆಂದನು.

೭೪–೭೫. ಎಲೈ ನೀನು ನನ್ನ ಮಾತಿನಿಂದ ತಾಂಬೂಲದ ಹರಿದ ಎಲೆಯ ಕೊನೆಯಲ್ಲಿ ಯಾವಾಗಲೂ ಪತ್ನಿಯೊಡನೆ ವಾಸಿಸು. ತೊಟ್ಟುಗಳಲ್ಲಿ ನಿನ್ನ ಮಗನು ವಾಸಿಸಲಿ. ರಾತ್ರಿವೇಳೆ ಖದಿರರಸದಲ್ಲಿ ನೀನು ಅವರಿಬ್ಬರೊಡನೆ ನೆಲೆಸು.

೭೬. ಈ ನಾಲ್ಕು ಸ್ಥಾನಗಳು ಧನಿಕರಿಗೆ ಕೆಡಕನ್ನುಂಟುಮಾಡುವುವು. ವಿಶೇಷವಾಗಿ ರಾಜರಿಗೆ ಕೆಡಕನ್ನುಂಟುಮಾಡುವುವು. ಆದುದರಿಂದ ನನ್ನ ಮಾತಿನಿಂದ ಶೀಘ್ರವಾಗಿ ಹೊರಡು.

೭೭. ದೊರೆಯೆ! ನೀನು ಕೇಳಿದ್ದನ್ನೆಲ್ಲ ಹೇಳಿರುವೆನು.

೭೮. ಧನಿಕರಿಗೆ ತಾಂಬೂಲದಿಂದುಂಟಾಗುವ ಛಿದ್ರಗಳನ್ನೆಲ್ಲ ನೀನು ತಿಳಿಯದೆ ಸಂಪಾದಿಸಿರುವೆ. ಆದರಿಂದ ನಿನ್ನ ಸಂಪತ್ತು ಕೂಡಲೆ ನಾಶವಾಯಿತು.

೭೯. ರಾಜನು ಹೇಳುತ್ತಾನೆ:—ಮುನಿವರ್ಯನೆ! ಅದಕ್ಕಾಗಿ ತಾಂಬೂಲ ಭಕ್ಷಣರೂಪವಾದ ಪ್ರಾಯಶ್ಚಿತ್ತವನ್ನು ನನಗೆ ಹೇಳು.

ಯೇನ ಸಂಜಾಯತೇ ಶುದ್ಧಿಃ ಕುತಾಂಬೂಲಸಮುದ್ಭವಾ ॥ ೮೦ ॥
ವಿಶ್ವಾಮಿತ್ರ ಉವಾಚ :—
ಶೃಣು ರಾಜನ್ ಪ್ರವಕ್ಷ್ಯಾಮಿ ಪ್ರಾಯಶ್ಚಿತ್ತಂ ತು ಯಚ್ಚರೇತ್ ।
ಆಶ್ವಾಸನೇನ ಶುದ್ಧ್ಯರ್ಥಂ ಕುತಾಂಬೂಲಸ್ಯ ಭಕ್ಷಣಾತ್ ॥ ೮೧ ॥
ಪರ್ವಕಾಲಂ ಸಮುದ್ದಿಶ್ಯ ಸಮ್ಯಕ್ಛ್ರದ್ಧಾ ಸಮನ್ವಿತಃ ।
ಆನಯೇದ್ಬ್ರಾಹ್ಮಣಂ ರಾಜನ್ ವೇದವೇದಾಂಗಪಾರಗಂ ॥ ೮೨ ॥
ಪ್ರಕ್ಷಾಲ್ಯ ಚರಣೌ ತಸ್ಯ ವಾಸಸೀ ಪರಿಧಾಪಯೇತ್ ।
ಸಂಪೂಜ್ಯ ಗಂಧಪುಷ್ಪಾದ್ಯೈಸ್ತತಃ ಪತ್ರಂ ಹಿರಣ್ಮಯಂ ।
ಸ್ವಶಕ್ತ್ಯಾ ಕಾರಯಿತ್ವಾಽಥ ಚೂರ್ಣೇ ಮುಕ್ತಾಫಲಂ ನ್ಯಸೇತ್ ॥ ೮೩ ॥
ಪೂಗೀಫಲಂ ಚ ವೈಡೂರ್ಯಂ ಖದಿರಂ ರೂಪ್ಯಮೇವ ಚ ।
ಮಂತ್ರೇಣಾಽನೇನ ವಿಪ್ರಾಯ ತಥೈವ ಚ ಸಮರ್ಪಯೇತ್ ॥ ೮೪ ॥
ಯನ್ಮಯಾ ಭಕ್ಷಿತಂ ಪೂರ್ವಂ ವೃಂತಂ ಪತ್ರಸಮುದ್ಭವಂ ।
ಚೂರ್ಣಪತ್ರಂ ತಥೈವಾಽನ್ಯದ್ರಾತ್ರೌ ಖದಿರಮೇವ ಚ ॥ ೮೫ ॥
ತಸ್ಯ ಪಾಪಸ್ಯ ಶುದ್ಧ್ಯರ್ಥಂ ತಾಂಬೂಲಂ ಪ್ರತಿಗೃಹ್ಯತಾಂ ।
ತತಸ್ತು ಬ್ರಾಹ್ಮಣೋ ಮಂತ್ರಮೇವಂ ರಾಜನ್ನುದಾಹರೇತ್ ॥ ೮೬ ॥
ಯಜಮಾನಹಿತಾರ್ಥಾಯ ಸರ್ವಪಾಪವಿಶುದ್ಧಯೇ ।
ಅಜ್ಞಾನಾತ್ ಜ್ಞಾನತೋ ವಾಽಪಿ ಕುತಾಂಬೂಲಂ ಪ್ರಭಕ್ಷಿತಂ ॥ ೮೭ ॥

---

೮೦. ಅದರಿಂದ ನನ್ನ ಕುತಾಂಬೂಲ ಭಕ್ಷಣದಿಂದುಂಟಾದ ದೋಷವು ಪರಿಹಾರವಾದೀತು.

೮೧. ವಿಶ್ವಾಮಿತ್ರನು ಹೇಳುತ್ತಾನೆ:— ದೊರೆಯೆ! ಕುತಾಂಬೂಲ ಭಕ್ಷಣದ ದೋಷದ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಹೇಳುವೆನು ಕೇಳು.

೮೨. ಪರ್ವಕಾಲದಲ್ಲಿ ಶ್ರದ್ಧೆಯಿಂದ ವೇದವೇದಾಂಗಪಾರಂಗತನಾದ ಬ್ರಾಹ್ಮಣನನ್ನು ಕರೆಯಿಸಬೇಕು.

೮೩–೮೪. ಅವನ ಕಾಲುಗಳನ್ನು ತೊಳೆದು ಬಟ್ಟೆಗಳನ್ನುಡಿಸಿ ಗಂಧಪುಷ್ಪಾದಿಗಳಿಂದ ಆರಾಧಿಸಿ ತನ್ನ ಶಕ್ತ್ಯನುಸಾರ ಚಿನ್ನದ ಎಲೆಯನ್ನೂ, ಮುತ್ತಿನ ಸುಣ್ಣವನ್ನೂ, ವೈಡೂರ್ಯದ ಅಡಿಕೆಯನ್ನೂ, ಬೆಳ್ಳಿಯ ಖದಿರವನ್ನೂ ಮಾಡಿಸಿ ಈ ಮಂತ್ರದಿಂದ ಬ್ರಾಹ್ಮಣನಿಗೆ ಸಮರ್ಪಿಸಬೇಕು.

೮೫–೮೬. ನಾನು ಹಿಂದೆ ಚೂರ್ಣವಾದ ತಾಂಬೂಲವನ್ನೂ, ಅದರ ತೊಟ್ಟನ್ನೂ, ರಾತ್ರಿಯಲ್ಲಿ ಖದಿರವನ್ನೂ ಭಕ್ಷಿಸಿರುವೆನು. ಅದರ ಶುದ್ಧಿಗಾಗಿ ತಾಂಬೂಲವನ್ನು ತೆಗೆದುಕೊ. ಬಳಿಕ ಬ್ರಾಹ್ಮಣನು ಯಜಮಾನನ ಹಿತಕ್ಕಾಗಿಯೂ, ಸಕಲ ಪಾಪಗಳ ಪರಿಹಾರಕ್ಕಾಗಿಯೂ ಈ ಮಂತ್ರವನ್ನು ಹೇಳಬೇಕು.

ಭಕ್ಷಯಿಷ್ಯತಿ ಯಚ್ಚಾಽನ್ಯತ್ಕದಾಚಿನ್ಮೇ ಪ್ರಸಾದನಾತ್ ।
ತಸ್ಯ ದೋಷೋ ನ ತೇ ಭಾವೀ ಮಮ ವಾಕ್ಯಾದಸಂಶಯಂ ॥ ೮೮ ॥
ಅನೇನ ವಿಧಿನಾ ದತ್ವಾ ತಾಂಬೂಲಂ ಶುದ್ಧಿಮಾಪ್ನುಯಾತ್ ।
ಕುತಾಂಬೂಲಸ್ಯ ದೋಷೇಣ ಗೃಹ್ಯತೇ ನ ನರೋ ನೃಪ ॥ ೮೯ ॥
ತಸ್ಮಾತ್ತ್ವಂ ಹಿ ಮಹಾರಾಜ ವ್ರತಮೇತತ್ಸಮಾಚರ ।
ಬಹುಪುಣ್ಯತಮಂ ಹ್ಯೇತನ್ಮಹಾಭೋಗವಿವರ್ಧನಂ ॥ ೯೦ ॥
ಯಃ ಪ್ರಯಚ್ಛತಿ ರಾಜೇಂದ್ರ ವಿಧಿನಾಽನೇನ ಭಕ್ತಿತಃ ।
ಜನ್ಮಜನ್ಮಾಂತರೇ ವಾಽಪಿ ನ ತಾಂಬೂಲೇನ ಮುಚ್ಯತೇ ॥ ೯೧ ॥
ತಾಂಬೂಲಂ ಭಕ್ಷಯಿತ್ವಾ ಯೋ ನೈತದ್ದಾನಂ ಪ್ರಯಚ್ಛತಿ ।
ತಾಂಬೂಲವರ್ಜಿತಃ ಸೋಽತ್ರ ಭವೇಜ್ಜನ್ಮನಿ ಜನ್ಮನಿ ॥ ೯೨ ॥
ತಾಂಬೂಲವರ್ಜಿತಂ ಯಸ್ಯ ಮುಖಂ ಸ್ಯಾತ್ಪೃಥಿವೀಪತೇ ।
ಕೃಪಣಸ್ಯ ದರಿದ್ರಸ್ಯ ತದ್ಬಿಲಂ ನ ಹಿ ತನ್ಮುಖಂ ॥ ೯೩ ॥
ತಾಂಬೂಲಂ ಬ್ರಾಹ್ಮಣೇಂದ್ರಾಯ ಯೋ ದತ್ವಾ ಪ್ರಾಕ್ಪ್ರಭಕ್ಷಯೇತ್ ।
ಸುರೂಪೋ ಭಾಗ್ಯವಾನ್ ದಕ್ಷೋ ಭವೇಜ್ಜನ್ಮನಿ ಜನ್ಮನಿ ॥ ೯೪ ॥

---

ನೀನು ಅಜ್ಞಾನದಿಂದಾಗಲಿ, ಜ್ಞಾನದಿಂದಾಗಲಿ ಕುತಾಂಬೂಲವನ್ನು ಭಕ್ಷಿಸಿದ್ದರೆ ಅಥವಾ ಯಾವಾಗಲಾದರೂ ಭಕ್ಷಿಸುವುದಾದರೆ ನಿನಗೆ ನನ್ನ ಅನುಗ್ರಹದಿಂದ ನನ್ನ ಮಾತಿನಂತೆ ನಿಶ್ಚಯವಾಗಿಯೂ ದೋಷವುಂಟಾಗುವುದಿಲ್ಲ.

೮೯. ಈ ವಿಧಿಯಿಂದ ತಾಂಬೂಲವನ್ನು ದಾನಮಾಡಿದರೆ ಶುದ್ಧನಾಗುವನು. ಕುತಾಂಬೂಲದ ದೋಷವುಂಟಾಗುವುದಿಲ್ಲ.

೯೦. ಮಹಾರಾಜ! ಆದುದರಿಂದ ನೀನು ಅತಿ ಪುಣ್ಯಕರವೂ, ಅತಿಶಯ ಭೋಗವನ್ನು ಹೆಚ್ಚಿಸುವುದೂ ಆದ ಈ ವ್ರತವನ್ನಾಚರಿಸು.

೯೧. ರಾಜೇಂದ್ರ! ಈ ವಿಧಿಯಿಂದ ಭಕ್ತಿಪೂರ್ವಕವಾಗಿ ದಾನಮಾಡುವವನು ಜನ್ಮಜನ್ಮಾಂತರದಲ್ಲಿಯೂ ತಾಂಬೂಲದಿಂದ ಬಿಡಲ್ಪಡುವುದಿಲ್ಲ.

೯೨. ತಾಂಬೂಲವನ್ನು ಭಕ್ಷಿಸಿ ಈ ದಾನವನ್ನು ಕೊಡದವನು ಜನ್ಮಜನ್ಮಾಂತರದಲ್ಲಿಯೂ ತಾಂಬೂಲವಿಲ್ಲದವನಾಗುವನು.

೯೩. ದೊರೆಯೆ! ವೀಳೆಯವನ್ನು ತಿನ್ನದ ದೀನನೂ, ದರಿದ್ರನೂ ಆದವನ ಬಾಯಿಯು ಬಿಲವು. ಬಾಯಿಯಲ್ಲ.

೯೪. ಮೊದಲು ಬ್ರಾಹ್ಮಣನಿಗೆ ತಾಂಬೂಲವನ್ನು ದಾನಮಾಡಿ ಅದನ್ನು ಭಕ್ಷಿಸಿದವನು ಪ್ರತಿ ಜನ್ಮದಲ್ಲಿಯೂ ಸುಂದರನೂ, ಭಾಗ್ಯವಂತನೂ, ಕುಶಲನೂ ಆಗುವನು.

ಏತತ್ತೇ ಸರ್ವಮಾಖ್ಯಾತಂ ಕುತಾಂಬೂಲಸ್ಯ ಭಕ್ಷಣಾತ್ ।
ಯತ್ಫಲಂ ಜಾಯತೇ ಪುಂಸಾಂ ಯದ್ದಾನೇನ ಮಹೀಪತೇ ॥ ೯೫ ॥
ಶಂಖಾದಿತ್ಯಾನುಷಂಗೇಣ ತಾಂಬೂಲಸ್ಯ ಚ ಭಕ್ಷಣೇ ।
ಯೇ ದೋಷಾ ಯೇ ಗುಣಾ ರಾಜನ್ ದಾನಂ ಚೈವ ಪ್ರಭಕ್ಷಣೇ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ತಾಂಬೂಲಮಾಹಾತ್ಮ್ಯವರ್ಣನಂ " ನಾಮ
ದಶೋತ್ತರದ್ವಿಶತತಮೋಽಧ್ಯಾಯಃ

---

೯೫-೯೬. ರಾಜನೇ! ನರರಿಗೆ ಕುತಾಂಬೂಲದ ಭಕ್ಷಣೆಯಿಂದಾಗುವ ದೋಷವನ್ನೂ, ದಾನದಿಂದಾಗುವ ಪುಣ್ಯವನ್ನೂ, ಶಂಖಾದಿತ್ಯನ ಮಾಹಾತ್ಮ್ಯವನ್ನೂ ಹೇಳುವ ನಿಮಿತ್ತದಿಂದ ಸಂಪೂರ್ಣವಾಗಿ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ತಾಂಬೂಲಮಾಹಾತ್ಮ್ಯವರ್ಣನ "ವೆಂಬ
ಇನ್ನೂರಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾದಶೋತ್ತರದ್ವಿಶತತಮೋಽಧ್ಯಾಯಃ

## ಶಂಖತೀರ್ಥಮಾಹಾತ್ಮ್ಯವರ್ಣನಂ

ವಿಶ್ವಾಮಿತ್ರ ಉವಾಚ :—

ರಾಜ್ಞೋ ದಾರಿದ್ರ್ಯದೋಷಸ್ಯ ಕುಷ್ಠವ್ಯಾಧೇಶ್ಚ ಕಾರಣಂ ।
ಕಥಯಿತ್ವಾ ಪುನಃ ಪ್ರಾಹ ನಾರದೋ ಮುನಿಸತ್ತಮಃ ॥ ೧ ॥

ನಾರದ ಉವಾಚ :—

ಏತತ್ತೇ ಸರ್ವಮಾಖ್ಯಾತಂ ರಾಜನ್ ಕುಷ್ಠಸ್ಯ ಕಾರಣಂ ।
ದಾರಿದ್ರ್ಯಸ್ಯ ಚ ಯತ್ಸಮ್ಯಕ್ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೨ ॥
ಅಧುನಾ ಸಂಪ್ರವಕ್ಷ್ಯಾಮಿ ಯಥಾ ತವ ಪರಾಭವಃ ।
ಶತ್ರುಭ್ಯಃ ಸಂಪ್ರಜಾತೋಽತ್ರ ದ್ವಿಜಾನಾಮುಪಮಾನತಃ ॥ ೩ ॥
ಆನರ್ತಾಽಧಿಪತಿರ್ಯೋಽತ್ರ ಕಶ್ಚಿದ್ರಾಜ್ಯೇಽಭಿಷಿಚ್ಯತೇ ।
ಸ ಪೂರ್ವಂ ಗಚ್ಛತಿ ಗ್ರಾಮಂ ನಾಗರಾಣಾಂ ಪ್ರಭಕ್ತಿತಃ ॥ ೪ ॥
ತ್ವಯಾ ತತ್ಕಲ್ಪಿತಂ ರಾಜನ್ನೈವ ದತ್ತಂ ಪ್ರಮಾದತಃ ।
ಪರಾಭೂತಾ ದ್ವಿಜಾಸ್ತೇಽಚ ಯಾಚಮಾನಾ ಮುಹುರ್ಮುಹುಃ ॥ ೫ ॥
ತಥಾ ಕೋಪವಶಾದ್ಯಾನಿ ಶಾಸನಾನಿ ದ್ವಿಜನ್ಮನಾಂ ।
ಲೋಪಿತಾನಿ ತ್ವಯಾಽನ್ಯಾನಿ ಪಿತೃಪೈತಾಮಹಾನಿ ಚ ॥ ೬ ॥

---

## ಕನ್ನಡದ ಅನುವಾದ

### ಶಂಖತೀರ್ಥಮಾಹಾತ್ಮ್ಯವರ್ಣನ

೧. ವಿಶ್ವಾಮಿತ್ರನು ಹೇಳುತ್ತಾನೆ:—ನಾರದಮುನಿವರ್ಯನು ಹೀಗೆ ದೊರೆಗೆ ದಾರಿದ್ರ್ಯ, ಕುಷ್ಠವ್ಯಾಧಿಗಳಿಗೆ ಕಾರಣವನ್ನು ಹೇಳಿ ಮರಳಿ ಇಂತೆಂದನು.

೨. ನಾರದನು ಹೇಳುತ್ತಾನೆ:—ನೃಪನೆ! ನಾನು ದಿವ್ಯದೃಷ್ಟಿಯಿಂದ ಚೆನ್ನಾಗಿ ಅರಿತು ನಿನ್ನೀ ಕುಷ್ಠ ಮತ್ತು ದಾರಿದ್ರ್ಯಕ್ಕೆ ಕಾರಣವನ್ನು ಹೇಳಿರುವೆನು.

೩. ಈಗ ನೀನು ಬ್ರಾಹ್ಮಣರನ್ನು ಅವಮಾನ ಮಾಡಿದ ಕಾರಣ ಶತ್ರುಗಳಿಂದ ಅಪಜಯವು ಹೇಗಾಯಿತೆಂಬುದನ್ನು ಹೇಳುವೆನು.

೪. ಹಿಂದೆ ಆನರ್ತಾಧಿಪನು ಪಟ್ಟಾಭಿಷಿಕ್ತನಾಗುವಾಗ ನಾಗರರಿಗೆ ಗ್ರಾಮವನ್ನು ಕೊಡುತ್ತಿದ್ದನು.

೫. ನೀನು ಅವರು ಕಲ್ಪಿಸಿದ ವೃತ್ತಿಯನ್ನು ಪ್ರಮಾದದಿಂದ ಬ್ರಾಹ್ಮಣರಿಗೆ ಕೊಡದೆ ಬೇಡುತ್ತಿರುವ ಅವರನ್ನು ತಿರಸ್ಕರಿಸಿರುವೆ.

೬–೧೦. ಹಾಗೆ ನೀನು ಕೋಪದಿಂದ ಪಿತೃಪಿತಾಮಹರು ಕೊಟ್ಟ ಶಾಸನಗಳನ್ನು ಹಾಳುಮಾಡಿದ್ದರಿಂದ ಶತ್ರುಗಳಿಂದ ಅಪಜಯವುಂಟಾಯಿತು. ಇದನ್ನು

ತೇನ ತೇಽತ್ರ ಪರಾಭೂತಿಃ ಸಂಜಾತಾ ಶತ್ರುಸಂಭವಾ ।
ಏವಂ ಜ್ಞಾತ್ವಾ ದ್ವಿಜೇಂದ್ರಾಣಾಂ ಶಾಸನಾನಿ ಪ್ರಯಚ್ಛ ಭೋಃ ॥ ೭ ॥
ಗೃಹೀತಾನಿ ಚ ಯಾನ್ಯೇವ ತೇಷಾಂ ಮೋಕ್ಷಂ ಸಮಾಚರ ।
ತಚ್ಛ್ರುತ್ವಾ ಪಾರ್ಥಿವಃ ಸೋಽಥ ಶಂಖತೀರ್ಥೇ ಪ್ರಭಕ್ತಿತಃ ॥ ೮ ॥
ಸ್ನಾತ್ವಾ ವಿಪ್ರಾನ್ ಸಮಾಹೂಯ ಮಧ್ಯಗೇನ ಸಮನ್ವಿತಾನ್ ।
ಶಂಖಾದಿತ್ಯಸ್ಯ ಪುರತಃ ಪ್ರಕ್ಷಾಲ್ಯ ಚರಣೌ ನೃಪ ॥ ೯ ॥
ದದೌ ಚ ಶಾಸನಶತಂ ಪ್ರಕ್ಷಾಲ್ಯ ಚರಣಾಂ ಸ್ತತಃ ।
ಷಡ್ವಿಂಶತ್ಯಧಿಕಂ ರಾಜಾ ನಾಗರಾಣಾಂ ಮಹಾತ್ಮನಾಂ ॥ ೧೦ ॥
ಏತಸ್ಮಿನ್ನಂತರೇ ತತ್ರ ಶತ್ರವೋ ಯೇ ಚ ಸಂಸ್ಥಿತಾಃ ।
ಸರ್ವೇ ಮೃತ್ಯುಂ ಸಮಾಪನ್ನಾ ಬ್ರಾಹ್ಮಣಾನಾಂ ಪ್ರಸಾದತಃ ॥ ೧೧ ॥

ವಿಶ್ವಾಮಿತ್ರ ಉವಾಚ:—

ಏತತ್ತೇ ಸರ್ವಮಾಖ್ಯಾತಂ ಶಂಖತೀರ್ಥಸಮುದ್ಭವಂ ।
ಪ್ರಭಾವಂ ಪಾರ್ಥಿವಶ್ರೇಷ್ಠ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಂಖತೀರ್ಥಮಾಹಾತ್ಮ್ಯವರ್ಣನಂ"
ನಾಮೈಕಾದಶೋತ್ತರದ್ವಿಶತತಮೋಽಧ್ಯಾಯಃ

---

ಆರಿತು ನೀನು ತೆಗೆದುಕೊಂಡಿರುವ ಶಾಸನವನ್ನು ಮರಳಿ ಆ ಬ್ರಾಹ್ಮಣರಿಗೆ ಕೊಡು. ಅರಸನು ಅದನ್ನು ಕೇಳಿ ಭಕ್ತಿಯಿಂದ ಶಂಖತೀರ್ಥದಲ್ಲಿ ಮಿಂದು ಮಧ್ಯಗ ನೊಡನೆ ಬ್ರಾಹ್ಮಣರನ್ನು ಕರೆಯಿಸಿ ಶಂಖಾದಿತ್ಯನ ಮುಂದೆ ಅವರ ಕಾಲುಗಳನ್ನು ತೊಳೆದು ನೂರಿಪ್ಪತ್ತಾರು ಶಾಸನಗಳನ್ನು ಕೊಟ್ಟನು.

೧೧. ಇಷ್ಟರಲ್ಲಿ ಅಲ್ಲಿರುವ ಶತ್ರುಗಳೆಲ್ಲ ಬ್ರಾಹ್ಮಣರ ಅನುಗ್ರಹದಿಂದ ಮಡಿದರು.

೧೨. ವಿಶ್ವಾಮಿತ್ರನು ಹೇಳುತ್ತಾನೆ:—ನೃಪವರ್ಯನೆ! ನಿನಗೀ ಶಂಖ ತೀರ್ಥದ ಪ್ರಭಾವವನ್ನು ಹೇಳಿರುವೆನು. ಮರಳಿ ಏನನ್ನು ಕೇಳಬಯಸುವೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಂಖತೀರ್ಥಮಾಹಾತ್ಮ್ಯವರ್ಣನ" ವೆಂಬ
ಇನ್ನೂರಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋತ್ತರದ್ವಿಶತತಮೋಽಧ್ಯಾಯಃ

### ರತ್ನಾದಿತ್ಯಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಶ್ರುತಂ ತೀರ್ಥತ್ರಯಂ ಪುಣ್ಯಂ ಹಾಟಕೇಶ್ವರಸಂಜ್ಞಿತೇ ।
ಕ್ಷೇತ್ರೇಽತ್ರ ಯತ್ತ್ವಯಾ ಪ್ರೋಕ್ತಮಸ್ಮಾಕಂ ಸೂತನಂದನ ॥ ೧ ॥
ವಿಶ್ವಾಮಿತ್ರೀಯಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ವಯಂ ।
ಸಾಂಪ್ರತಂ ತತ್ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೨ ॥

ಸೂತ ಉವಾಚ:—

ಸಮುದ್ರಸ್ಯಾಽಪಿ ಪಾರೋಽತ್ರ ಲಕ್ಷ್ಯತೇ ಚ ಕ್ಷಿತೇರಪಿ ।
ತಾರಕಾಣಾಂ ಮುನೇಸ್ತಸ್ಯ ನ ಗುಣಾನಾಂ ದ್ವಿಜೋತ್ತಮಾಃ ॥ ೩ ॥
ಲಕ್ಷ್ಯತೇ ಕೇನಚಿತ್ಪಾರೋ ಗಾಧೇಃ ಪುತ್ರಸ್ಯ ಧೀಮತಃ ।
ಕ್ಷತ್ರಿಯೋಽಪಿ ದ್ವಿಜತ್ವಂ ಯಃ ಸಂಪ್ರಾಪ್ತೋ ದ್ವಿಜಸತ್ತಮಾಃ ॥ ೪ ॥
ಅಂತ್ಯಜತ್ವಂ ಗತಸ್ಯಾಽಪಿ ತ್ರಿಶಂಕೋಃ ಪೃಥಿವೀಪತೇಃ ।
ಯಜ್ಞಭಾಗಭುಜೋ ದೇವಾಃ ಪ್ರತ್ಯಕ್ಷೇಣ ವಿನಿರ್ಮಿತಾಃ ॥ ೫ ॥
ಬ್ರಹ್ಮಣಃ ಸ್ಪರ್ಧಯಾ ಯೇನ ಪುರಾ ಸೃಷ್ಟಿರ್ದ್ವಿಜೋತ್ತಮಾಃ ।
ಪ್ರಾರಬ್ಧಾ ಚ ತತೋ ದೇವೈಃ ಪ್ರಣಿಪತ್ಯ ನಿವಾರಿತಃ ॥ ೬ ॥

---

### ಕನ್ನಡದ ಅನುವಾದ

#### ರತ್ನಾದಿತ್ಯಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಈ ಹಾಟಕೇಶ್ವರ ಕ್ಷೇತ್ರದಲ್ಲಿರುವ ನೀನು ಹೇಳಿದ ಮೂರು ತೀರ್ಥಗಳನ್ನು ಕೇಳಿದೆವು.

೨. ಈಗ ನಾವು ವಿಶ್ವಾಮಿತ್ರ ತೀರ್ಥದ ಮಾಹಾತ್ಮ್ಯವನ್ನು ಕೇಳಲು ಅಪೇಕ್ಷಿಸುತ್ತೇವೆ. ನಮಗೆ ಅತ್ಯಂತ ಕುತೂಹಲವುಂಟಾಗಿದೆ.

೩–೪. ಸೂತನು ಹೇಳುತ್ತಾನೆ:—ಸಮುದ್ರ, ಭೂಮಿ, ನಕ್ಷತ್ರಗಳ ಪಾರವಾದರೂ ಕಾಣುವುದು. ಜ್ಞಾನಿಯಾದ ಆ ವಿಶ್ವಾಮಿತ್ರನ ಗುಣಗಳ ಪಾರವನ್ನು ಯಾರೂ ನೋಡಲಿಲ್ಲ. ಅವನು ಕ್ಷತ್ರಿಯನಾಗಿದ್ದರೂ ಬ್ರಾಹ್ಮಣನಾದನು.

೫–೬. ದೇವತೆಗಳು ಚಂಡಾಲನಾದ ತ್ರಿಶಂಕುರಾಜನ ಯಜ್ಞಭಾಗವನ್ನು ಭುಜಿಸುವಂತೆ ಮಾಡಿದನು. ದ್ವಿಜವರ್ಯರೆ! ಅವನು ಹಿಂದೆ ಬ್ರಹ್ಮನ ಮೇಲಿನ ಸ್ಪರ್ಧೆಯಿಂದ ಜಗತ್ತಿನ ಸೃಷ್ಟಿಯನ್ನು ಮಾಡಲುಪಕ್ರಮಿಸಲು ದೇವತೆಗಳು ನಮಸ್ಕರಿಸಿ ಅವನನ್ನು ತಡೆದರು.

ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಸಾಂಪ್ರತಂ ವದತೋ ಮಮ ।
ಶ್ರೂಯತಾಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೭ ॥
ತೇನ ತತ್ರ ಕೃತಂ ಕುಂಡಂ ಸ್ವಹಸ್ತೇನ ಮಹಾತ್ಮನಾ ।
ಶಸ್ತ್ರಂ ವಿನಾಽಪಿ ಭೂಪೃಷ್ಠಂ ಪ್ರವಿದಾರ್ಯ ಸಮಂತತಃ ॥ ೮ ॥
ತತ್ರ ಧ್ಯಾತ್ವಾ ಸಮಾನೀತಾ ಪಾತಾಲಾಜ್ಜಾಹ್ನವೀ ನದೀ ।
ಮರ್ತ್ಯಲೋಕೇ ಸಮಾಯಾತಂ ಯಸ್ಯಾಸ್ತೋಯಂ ಸುನಿರ್ಮಲಂ ॥ ೯ ॥
ಸುಸ್ವಾದು ಚ ತಥಾ ಸ್ನಾನಾತ್ಸರ್ವಪಾತಕನಾಶನಂ ।
ತೇನಾಽಪಿ ಸ್ಥಾಪಿತಸ್ತತ್ರ ಭಾಸ್ಕರೋ ವಾರಿತಸ್ಕರಃ ॥ ೧೦ ॥
ಯಃ ಸಪ್ತಮ್ಯಾಂ ಸೂರ್ಯವಾರೇ ಸ್ನಾತ್ವಾ ತಸ್ಯ ಹ್ರದೇ ಶುಭೇ ।
ಮಾಘಮಾಸೇ ಸಿತೇ ಪಕ್ಷೇ ನಮಸ್ಯತಿ ದಿವಾಕರಂ ।
ಸ ಕುಷ್ಠೈರ್ಮುಚ್ಯತೇ ಸರ್ವೈಸ್ತಥಾ ಪಾಪೈರ್ದ್ವಿಜೋತ್ತಮಾಃ ॥ ೧೧ ॥
ಪಶ್ಚಿಮೋತ್ತರ ದಿಗ್ಭಾಗೇ ತಸ್ಯಾಸ್ತಿ ಜಲಸಂಭವಾ ।
ಧನ್ವಂತರಿಕೃತಾ ವಾಪೀ ಸರ್ವರೋಗವಿನಾಶಿನೀ ॥ ೧೨ ॥
ತತ್ರ ಪೂರ್ವಂ ತಪಸ್ತೇಪೇ ಧನ್ವಂತರಿರುದಾರಧೀಃ ।
ವವಂದೇ ತಪಸಾ ಯುಕ್ತೋ ಧ್ಯಾಯಮಾನಃ ಸಮಾಹಿತಃ ॥ ೧೩ ॥

---

೭. ಈಗ ಸಕಲ ಪಾಪಗಳನ್ನು ಪರಿಹರಿಸುವ ವಿಶ್ವಾಮಿತ್ರತೀರ್ಥದ ಮಾಹಾತ್ಮ್ಯವನ್ನು ಹೇಳುವೆನು. ಕೇಳಿರಿ.

೮. ಆ ಮುನಿಯು ಅಲ್ಲಿ ಆಯುಧವಿಲ್ಲದೆ ತನ್ನ ಕೈಯಿಂದಲೇ ಭೂಮಿಯನ್ನು ಸೀಳಿ ಕುಂಡವನ್ನು ವಿರಚಿಸಿದನು.

೯–೧೦. ಅವನು ಧ್ಯಾನಮಾಡಿ ಪಾತಾಳದಿಂದ ಗಂಗೆಯನ್ನು ತರಿಸಿದನು. ಅದರಿಂದ ಭೂಲೋಕದಲ್ಲಿ ನಿರ್ಮಲವೂ, ರುಚಿಕರವೂ, ಸ್ನಾನದಿಂದ ಸಕಲ ಪಾಪಗಳನ್ನು ಪರಿಹರಿಸುವುದೂ ಆದ ಗಂಗಾಜಲವು ಬಂದಿತು. ಅಲ್ಲಿ ಆ ಮುನಿಯು ಸೂರ್ಯನನ್ನು ಸ್ಥಾಪಿಸಿರುವನು.

೧೧. ಬ್ರಾಹ್ಮಣೋತ್ತಮರೆ! ಮಾಘ ಶುದ್ಧ ಸಪ್ತಮೀ ಭಾನುವಾರದ ದಿನ ಶುಭಕರವಾದ ಆ ಕುಂಡದಲ್ಲಿ ಮಿಂದು ಸೂರ್ಯನನ್ನು ನಮಸ್ಕರಿಸಿದವನು ಕುಷ್ಠ ರೋಗದಿಂದಲೂ, ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೧೨. ಆ ಕುಂಡದ ವಾಯುವ್ಯದಿಕ್ಕಿನಲ್ಲಿ ಧನ್ವಂತರಿಯು ನಿರ್ಮಿಸಿರುವ ಸಮಸ್ತ ರೋಗಗಳನ್ನು ನಿವಾರಿಸುವ ನೀರಿನಿಂದ ತುಂಬಿದ ಬಾವಿಯಿದೆ.

೧೩. ಅಲ್ಲಿ ಹಿಂದೆ ಉತ್ಕೃಷ್ಟಮತಿಯುಳ್ಳ ಧನ್ವಂತರಿಯು ಸಾವಧಾನ ಮನಸ್ಸಿನಿಂದ ಸೂರ್ಯನನ್ನು ಧ್ಯಾನಿಸುತ್ತ ತಪಸ್ಸನ್ನು ಮಾಡುತ್ತ ನಮಸ್ಕರಿಸುತ್ತಿದ್ದನು.

ತತಃ ಕಾಲೇನ ಮಹತಾ ಸಂತುಷ್ಟಸ್ತಸ್ಯ ಭಾಸ್ಕರಃ ।
ಉವಾಚ ವರದೋಽಸ್ಮೀತಿ ಪ್ರಾರ್ಥಯಸ್ವ ಮಹಾಮತೇ ॥ ೧೪ ॥
ಧನ್ವಂತರಿರುವಾಚ :—
ಅತ್ರ ಕುಂಡೇ ನರೋ ಭಕ್ತ್ಯಾ ಯಃ ಸ್ನಾನಂ ಕುರುತೇ ವಿಭೋ ।
ತಸ್ಯ ಸ್ಯಾತ್ಸರ್ವರೋಗಾಣಾಂ ಸಂಕ್ಷಯಃ ಸುರಸತ್ತಮ ॥ ೧೫ ॥
ಶ್ರೀ ಭಗವಾನುವಾಚ :—
ಅದ್ಯ ಶಸ್ತೇ ದಿನೇ ಯೋಽತ್ರ ಸಪ್ತಮ್ಯಾಂ ರವಿವಾಸರೇ ।
ಸೂರ್ಯೋದಯೇ ನರಃ ಸ್ನಾನಂ ಕರಿಷ್ಯತಿ ಸಮಾಹಿತಃ ।
ವ್ಯಾಧಿಗ್ರಸ್ತಃ ಸ ನೀರೋಗಸ್ತತ್ಕ್ಷಣಾತ್ಸಂಭವಿಷ್ಯತಿ ॥ ೧೬ ॥
ನೀರೋಗಶ್ಚೇಪ್ಸಿತಾನ್ ಕಾಮಾನ್ನಿಷ್ಕಾಮೋ ಮೋಕ್ಷಮೇಷ್ಯತಿ ॥ ೧೭ ॥
ಏವಮುಕ್ತ್ವಾ ಸುರಶ್ರೇಷ್ಠೋಽಂತರ್ಧಾನಂ ಗತೋ ರವಿಃ ।
ಧನ್ವಂತರಿಃ ಪ್ರಹೃಷ್ಟಾತ್ಮಾ ಸ್ವಸ್ಥಾನಂ ಚ ಗತಸ್ತತಃ ॥ ೧೮ ॥
ಕಸ್ಯಚಿತ್ತ್ವಥ ಕಾಲಸ್ಯ ರತ್ನಾಕ್ಷೋಽಥ ಮಹೀಪತಿಃ ।
ಅಯೋಧ್ಯಾಧಿಪತಿಃ ಖ್ಯಾತಃ ಸೂರ್ಯವಂಶಸಮುದ್ಭವಃ ॥ ೧೯ ॥
ಕೃತಜ್ಞಶ್ಚ ವದಾನ್ಯಶ್ಚ ಸ್ವದಾರನಿರತಃ ಸದಾ ।
ಶೂರಃ ಪರಮತೇಜಸ್ವೀ ಸರ್ವಶತ್ರುನಿಷೂದನಃ ॥ ೨೦ ॥

---

೧೪. ಅನಂತರ ಬಹುಕಾಲದ ಮೇಲೆ ಸೂರ್ಯನು ಅವನಲ್ಲಿ ಸಂತುಷ್ಟನಾಗಿ ವರವನ್ನು ಕೊಡುತ್ತೇನೆ. ಕೇಳಿಕೊ ಎಂದನು.

೧೫. ಧನ್ವಂತರಿಯು ಹೇಳುತ್ತಾನೆ:—ಸ್ವಾಮಿ! ಈ ಕುಂಡದಲ್ಲಿ ಭಕ್ತಿಯಿಂದ ಮಿಂದವನ ಸಮಸ್ತ ರೋಗಗಳೂ ಪರಿಹಾರವಾಗಲಿ.

೧೬. ಶ್ರೀ ಭಗವಂತನು ಹೇಳುತ್ತಾನೆ:—ಶ್ರೇಷ್ಠವಾದ ಈ ಸಪ್ತಮೀ ಭಾನುವಾರದ ದಿನ ಸೂರ್ಯೋದಯಕಾಲದಲ್ಲಿ ವ್ಯಾಧಿಗ್ರಸ್ತನಾದ ಮಾನವನು ಸಾವಧಾನ ಮನಸ್ಸಿನಿಂದ ಮಿಂದರೆ ಕೂಡಲೆ ನೀರೋಗನಾಗುವನು.

೧೭. ರೋಗವಿಲ್ಲದವನು ಇಷ್ಟಾರ್ಥವನ್ನು ಪಡೆಯುವನು. ನಿಷ್ಕಾಮನಾದರೆ ಮೋಕ್ಷವನ್ನು ಹೊಂದುವನು.

೧೮. ಸುರೋತ್ತಮನಾದ ಸೂರ್ಯನು ಹೀಗೆ ಹೇಳಿ ಅದೃಶ್ಯನಾದನು. ಧನ್ವಂತರಿಯೂ ಸಂತೋಷದಿಂದ ತನ್ನ ಸ್ಥಳಕ್ಕೆ ತೆರಳಿದನು.

೧೯—೨೦. ಒಂದಾನೊಂದು ಕಾಲದಲ್ಲಿ ಸೂರ್ಯವಂಶದಲ್ಲಿ ಜನಿಸಿದವನೂ, ಕೃತಜ್ಞನೂ, ದಾನಶೌಂಡನೂ, ಯಾವಾಗಲೂ ತನ್ನ ಪತ್ನಿಯಲ್ಲಿಯೇ ಆಸಕ್ತನಾಗಿರುವವನೂ, ಶೌರ್ಯವುಳ್ಳವನೂ, ಅತ್ಯಂತ ತೇಜಸ್ವಿಯೂ, ಸಕಲ ಶತ್ರುಗಳನ್ನು ನಾಶಗೊಳಿಸುವವನೂ ಆದ ರತ್ನಾಕ್ಷನೆಂಬ ಅಯೋಧ್ಯಾಪತಿಯಿದ್ದನು.

ಪೂರ್ವಕರ್ಮವಿಪಾಕೇನ ತಸ್ಯ ಭೂಮಿಪತೇರ್ದ್ವಿಜಾಃ ।
ಕುಷ್ಠವ್ಯಾಧಿರಭೂದ್ರೌದ್ರೋ ದುಶ್ಚಿಕಿತ್ಸ್ಯೋ ಜಗತ್ರಯೇ ॥ ೨೧ ॥
ತದಸ್ತಿ ನೌಷಧಂ ಲೋಕೇ ಯತ್ತೇನ ನ ಕೃತಂ ದ್ವಿಜಾಃ ।
ಕುಷ್ಠಗ್ರಸ್ತೇನ ವಾ ದಾನಂ ಯತ್ರ ದತ್ತಂ ಮಹಾತ್ಮನಾ ॥ ೨೨ ॥
ಯಥಾ ಯಥೌಷಧಾನ್ಯೇವ ಸ ಕರೋತಿ ದದಾತಿ ಚ ।
ತಥಾ ತಥಾ ತಸ್ಯ ಕಾಯೋ ವ್ಯಾಧಿನಾ ಕ್ಷಾಮಿತೋ ಭೃಶಂ ॥ ೨೩ ॥
ತತೋ ವೈರಾಗ್ಯಮಾಪನ್ನಃ ಸ ನೃಪೋ ದ್ವಿಜಸತ್ತಮಾಃ ।
ಪುತ್ರಂ ರಾಜ್ಯೇಽಥ ಸಂಸ್ಥಾಪ್ಯ ವಾಂಛಯಾಮಾಸ ಪಾವಕಂ ।
ನಿಷಿದ್ಧೋಽಪಿ ಹಿ ತೈಃ ಸರ್ವೈಃ ಕಲತ್ರೈರಾಪ್ತಸೇವಕೈಃ ॥ ೨೪ ॥
ದತ್ವಾ ದಾನಾನಿ ವಿಪ್ರೇಭ್ಯಃ ಪೂಜಯಿತ್ವಾ ಸುರೋತ್ತಮಾನ್ ।
ಸಂಭಾಷ್ಯ ಚ ಸುಹೃದ್ವರ್ಗಂ ಶಾಸಯಿತ್ವಾ ನಿಜಂ ಸುತಂ ॥ ೨೫ ॥
ಏತಸ್ಮಿನ್ನೇವ ಕಾಲೇ ತು ಭ್ರಮಮಾಣೋ ಯದೃಚ್ಛಯಾ ।
ಕಶ್ಚಿತ್ಕಾರ್ಪಟಿಕಃ ಪ್ರಾಪ್ತೋ ದಿವ್ಯರೂಪವಪುರ್ಧರಃ ॥ ೨೬ ॥
ಅಥಾಸೌ ವ್ಯಾಕುಲಂ ದೃಷ್ಟ್ವಾ ತತ್ಸರ್ವಂ ನೃಪತೇಃ ಪುರಂ ।
ಅಪೃಚ್ಛದ್ವಿಸ್ಮಯಾವಿಷ್ಟೋ ದೃಷ್ಟ್ವಾ ಕಂಚಿನ್ನರಂ ದ್ವಿಜಾಃ ॥ ೨೭ ॥

---

೨೧. ದ್ವಿಜರೆ! ಅವನಿಗೆ ಪೂರ್ವಜನ್ಮದ ಕರ್ಮ ಪರಿಣಾಮದಿಂದ ಮೂರು ಲೋಕಗಳಲ್ಲಿಯೂ ಚಿಕಿತ್ಸೆ ಮಾಡಲಾಗದ ಭಯಂಕರ ಕುಷ್ಠವ್ಯಾಧಿಯುಂಟಾಯಿತು.

೨೨. ಕುಷ್ಠರೋಗ ಪೀಡಿತನಾದ ಅವನು ಮಾಡದ ಔಷಧವೂ, ಕೊಡದ ದಾನವೂ ಪ್ರಪಂಚದಲ್ಲಿರಲಿಲ್ಲ.

೨೩. ಅವನು ಔಷಧ ದಾನಮಾಡಿದ ಹಾಗೆಲ್ಲ ಅವನ ದೇಹವು ಅತಿಶಯವಾಗಿ ಕ್ಷೀಣವಾಗುತ್ತ ಬಂದಿತು.

೨೪–೨೫. ಬಳಿಕ ಅವನು ವೈರಾಗ್ಯಗೊಂಡು ಮಗನನ್ನು ರಾಜ್ಯದಲ್ಲಿ ಸ್ಥಾಪಿಸಿ ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟು, ದೇವತೆಗಳನ್ನಾರಾಧಿಸಿ, ಸ್ನೇಹಿತರೊಡನೆ ಮಾತಾಡಿ, ತನ್ನ ಮಗನಿಗೆ ಆದೇಶವನ್ನಿತ್ತು ಹೆಂಡತಿ ಮತ್ತು ಆಪ್ತ ಸೇವಕರು ತಡೆದರೂ ಅಗ್ನಿಪ್ರವೇಶ ಮಾಡಲು ಬಯಸಿದನು.

೨೬. ಆ ಸಮಯದಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿರುವ ಸುಂದರ ರೂಪವುಳ್ಳ ಒಬ್ಬ ಕಾರ್ಪಟಿಕನು ಅಲ್ಲಿಗೆ ಬಂದನು.

೨೭. ದ್ವಿಜರೆ! ಅವನು ವ್ಯಾಕುಲಗೊಂಡಿರುವ ಆ ರಾಜನ ಪಟ್ಟಣವನ್ನು ನೋಡಿ ಆಶ್ಚರ್ಯದಿಂದ ಒಬ್ಬ ಮನುಷ್ಯನನ್ನು ಪ್ರಶ್ನಿಸಿದನು.

ಕಾರ್ಪಟಿಕ ಉವಾಚ :—

ಕಿಮೇಷಾ ವ್ಯಾಕುಲಾ ಭದ್ರ ಸರ್ವಾ ಜಾತಾ ಮಹಾಪುರೀ ।
ನಿರಾನಂದಾಽಶ್ರುಪೂರ್ಣಾಕ್ಷೈರ್ಬಾಲವೃದ್ಧೈರ್ನಿಷೇವಿತಾ ॥ ೨೮ ॥
ಸೋಽಬ್ರವೀನ್ನೃಪತಿಶ್ಚಾಽಯಂ ಕುಷ್ಠವ್ಯಾಧಿ ಸಮನ್ವಿತಃ ।
ಸಾಧಯಿಷ್ಯತಿ ಸಂದೀಪ್ತಂ ಸುನಿರ್ವಿಣ್ಣೋ ಹುತಾಶನಂ ॥ ೨೯ ॥
ತೇನೇಯಂ ನಗರೀ ಕೃತ್ಸ್ನಾ ಪರಂ ದುಃಖಮುಪಾಗತಾ ।
ಗುಣೈರಸ್ಯ ಸಮಾವಿಷ್ಟಾ ನೂನಂ ಮೃತ್ಯುಂ ಪ್ರಯಾಸ್ಯತಿ ॥ ೩೦ ॥
ತಚ್ಛ್ರುತ್ವಾ ಸತ್ವರಂ ಗತ್ವಾ ನೃಪಂ ಕಾರ್ಪಟಿಕೋಽಬ್ರವೀತ್ ॥ ೩೧ ॥
ಸರ್ವಂ ಜನಂ ನರೇಂದ್ರಸ್ಯ ಮೃತಂ ಜೀವಾಪಯನ್ನಿವ ।
ಮಾ ನೃಪಾಽನೇನ ದುಃಖೇನ ವ್ಯಾಧಿಜೇನ ಹುತಾಶನಂ ।
ಪ್ರವಿಶ ತ್ವಂ ಸ್ಥಿತೇ ತೀರ್ಥೇ ಸರ್ವವ್ಯಾಧಿಕ್ಷಯಾವಹೇ ॥ ೩೨ ॥
ಮದೀಯೋ ಭೂಪತೇ ದೇಹ ಈದೃಗಾಸೀದ್ಯಥಾ ತವ ।
ತತ್ರ ಸ್ನಾತಸ್ಯ ಸದ್ಯೋಽಥ ಜಾತ ಈದೃಕ್ಪುನಃ ಪ್ರಭೋ ॥ ೩೩ ॥
ಸಪ್ತಮ್ಯಾಂ ಸೂರ್ಯವಾರೇಣ ಭಾಸ್ಕರಸ್ಯೋದಯಂ ಪ್ರತಿ ।
ಯಸ್ತತ್ರ ಕುರುತೇ ಸ್ನಾನಂ ವ್ಯಾಧಿಗ್ರಸ್ತೋ ನರೋ ಭುವಿ ॥ ೩೪ ॥
ಸ ವ್ಯಾಧಿನಾ ವಿನಿರ್ಮುಕ್ತಸ್ತತ್ಕ್ಷಣಾತ್ಕಲ್ಪತಾಂ ವ್ರಜೇತ್ ।
ತಥಾ ಪಾಪವಿನಿರ್ಮುಕ್ತೋ ಯಥಾಽಹಂ ನೃಪಸತ್ತಮ ॥ ೩೫ ॥

---

೨೮. ಕಾರ್ಪಟಕನು ಹೇಳುತ್ತಾನೆ :—ಮಂಗಳಕರನೆ! ಈ ದೊಡ್ಡ ಪಟ್ಟಣವು ಆನಂದವಿಲ್ಲದಿರುವುದೂ, ಕಣ್ಣೀರನ್ನು ಸುರಿಸುತ್ತಿರುವ ಬಾಲವೃದ್ಧರಿಂದ ಕೂಡಿರುವುದೂ ಆಗಿರುವುದೇಕೆ?

೨೯. ಅವನು ಹೀಗೆಂದನು. ಕುಷ್ಠವ್ಯಾಧಿಯಿಂದ ಪೀಡಿತನಾದ ಈ ರಾಜನು ವೈರಾಗ್ಯಗೊಂಡು ಉರಿಯುತ್ತಿರುವ ಅಗ್ನಿಯನ್ನು ಪ್ರವೇಶಿಸುವನು.

೩೦. ಅದರಿಂದ ಅವನ ಗುಣಗಳಿಂದ ಆಕೃಷ್ಟರಾದ ಪಟ್ಟಣದ ಜನರೆಲ್ಲ ಅತ್ಯಂತ ದುಃಖಗೊಂಡು ಮರಣವನ್ನು ಹೊಂದುವರು.

೩೧–೩೩. ಕಾರ್ಪಟಕನು ಅದನ್ನು ಕೇಳಿ ರಾಜನ ಬಳಿಗೆ ಹೋಗಿ ಅವನನ್ನು ಕುರಿತು ಸಮಸ್ತ ಜನರನ್ನು ಬದುಕಿಸುವನಂತೆ ಇಂತೆಂದನು. ದೊರೆಯೆ! ನೀನು ಈ ವ್ಯಾಧಿಯಿಂದುಂಟಾದ ದುಃಖದಿಂದ ಸಮಸ್ತ ರೋಗವನ್ನು ನಿವಾರಿಸುವ ತೀರ್ಥವಿರುವಾಗ ಅಗ್ನಿಯನ್ನು ಪ್ರವೇಶಿಸಬೇಡ. ನನ್ನ ಶರೀರವು ಮೊದಲು ನಿನ್ನ ದೇಹದಂತೆಯೇ ಇದ್ದಿತು. ಆ ತೀರ್ಥದಲ್ಲಿ ಮಿಂದ ಕೂಡಲೆ ಹೀಗಾಯಿತು.

೩೪–೩೫. ಸಪ್ತಮೀ ಭಾನುವಾರದ ದಿನ ಸೂರ್ಯೋದಯ ಕಾಲದಲ್ಲಿ ವ್ಯಾಧಿಗ್ರಸ್ತನಾದ ಮಾನವನು ಅಲ್ಲಿ ಮಿಂದರೆ ಅವನು ಕೂಡಲೆ ನನ್ನಂತೆಯೇ ನೀರೋಗಿಯೂ, ಪಾಪರಹಿತನೂ ಆಗುವನು.

ರಾಜೋವಾಚ :—

ಕಸ್ಮಿನ್ದೇಶೇ ಮಹಾತೀರ್ಥಂ ತಾದೃಶಂ ವದ ಮೇ ದ್ರುತಂ ॥ ೩೬ ॥

ಕಾರ್ಪಟಿಕ ಉವಾಚ :—

ಅಸ್ತಿ ಭೂಮಿತಲೇ ಖ್ಯಾತಂ ನಾಗರಂ ಕ್ಷೇತ್ರಮುತ್ತಮಂ ।
ಕುಷ್ಠವ್ಯಾಧಿಸಮಾಕ್ರಾಂತೋ ಗತೋಽಹಂ ತತ್ರ ಭೂಪತೇ ॥ ೩೭ ॥
ತಸ್ಯ ಸಂದರ್ಶನಾರ್ಥಾಯ ತೀರ್ಥಯಾತ್ರಾ ಪರಾಯಣಃ ।
ತತ್ರ ಮಾಂ ದೀನಮಾಲೋಕ್ಯ ವ್ಯಾಧಿಗ್ರಸ್ತಂ ಸುದುಃಖಿತಂ ।
ಕಶ್ಚಿತ್ತತ್ರಾಶ್ರಯಃ ಪ್ರಾಹ ತಪಸ್ವೀ ಕೃಪಯಾನ್ವಿತಃ ॥ ೩೮ ॥
ಪಶ್ಚಿಮೋತ್ತರ ದಿಗ್ಭಾಗೇ ದೇವಸ್ಯ ಜಲಶಾಯಿನಃ ।
ತೀರ್ಥಮಸ್ತಿ ಮಹಾಪುಣ್ಯಂ ವಿಶ್ವಾಮಿತ್ರಜಲಾವಹಂ ॥ ೩೯ ॥
ತತ್ರ ಗತ್ವಾ ಕುರು ಸ್ನಾನಂ ಸಪ್ತಮ್ಯಾಂ ರವಿವಾಸರೇ ।
ಮಾಘಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷೇ ವಿಶೇಷತಃ ॥ ೪೦ ॥
ಯೇನ ನಿರ್ಯಾತಿ ತೇ ಕುಷ್ಠೋ ಭಾಸ್ಕರಸ್ಯೋದಯಂ ಪ್ರತಿ ।
ತಚ್ಛ್ರುತ್ವಾಽಹಂ ಚ ತತ್ಪ್ರಾಪ್ತಃ ಸಪ್ತಮ್ಯಾಂ ಸೂರ್ಯಸಂಯುಜೇ ।
ತತಶ್ಚ ಕೃತವಾನ್ ಸ್ನಾನಂ ನಿರ್ಝರೇ ತತ್ರ ಶಾಂಭವೇ ॥ ೪೧ ॥
ತತಸ್ತಸ್ಮಾದ್ವಿನಿಷ್ಕ್ರಾಂತೋ ಯಾವತ್ಪಶ್ಯಾಮ್ಯಹಂ ತನುಂ ।
ತಾವನ್ನೃಪೇದೃಶೀ ಜಾತಾ ಸತ್ಯಮೇತತ್ತವೋದಿತಂ ॥ ೪೨ ॥

---

೩೬. ರಾಜನು ಹೇಳುತ್ತಾನೆ :—ಆ ಮಹಾತೀರ್ಥವು ಎಲ್ಲಿದೆ? ಶೀಘ್ರವಾಗಿ ನನಗೆ ಹೇಳು.

೩೭—೩೮. ಕಾರ್ಪಟಿಕನು ಹೇಳುತ್ತಾನೆ :—ಭೂಮಿಯಲ್ಲಿ ನಾಗರವೆಂಬ ಉತ್ತಮ ಕ್ಷೇತ್ರವಿದೆ. ಕುಷ್ಠವ್ಯಾಧಿ ಪೀಡಿತನಾದ ನಾನು ತೀರ್ಥಯಾತ್ರಾ ನಿರತನಾಗಿ ಆ ತೀರ್ಥವನ್ನು ನೋಡುವುದಕ್ಕೋಸ್ಕರ ಅಲ್ಲಿಗೆ ಹೋದೆನು. ಆ ತೀರ್ಥದಲ್ಲಿ ವಾಸಿಸುತ್ತಿರುವ ಒಬ್ಬ ತಾಪಸನು ವ್ಯಾಧಿಪೀಡಿತನೂ, ದುಃಖಿತನೂ, ದೀನನೂ ಆದ ನನ್ನನ್ನು ನೋಡಿ ದಯೆಯಿಂದ ಹೀಗೆಂದನು.

೩೯. ಇಲ್ಲಿ ವಾಯುವ್ಯ ದಿಕ್ಕಿನಲ್ಲಿ ಪುಣ್ಯಕರವಾದ ವಿಶ್ವಾಮಿತ್ರನು ನಿರ್ಮಿಸಿದ ವಿಷ್ಣುತೀರ್ಥವಿದೆ.

೪೦—೪೧. ನೀನು ಅಲ್ಲಿಗೆ ಹೋಗಿ ಮಾಘಮಾಸದ ಶುಕ್ಲಪಕ್ಷ ಸಪ್ತಮೀ ಭಾನುವಾರದ ದಿನ ಸೂರ್ಯೋದಯ ಕಾಲದಲ್ಲಿ ಸ್ನಾನಮಾಡು. ಅದರಿಂದ ನಿನ್ನ ಕುಷ್ಠರೋಗವು ನಿವಾರಣೆಯಾಗುವುದು. ನಾನು ಅವನ ಮಾತನ್ನು ಕೇಳಿ ಸಪ್ತಮೀ ದಿನ ಅಲ್ಲಿಗೆ ಬಂದು ಆ ಶಂಭುತೀರ್ಥದಲ್ಲಿ ಮಿಂದೆನು.

೪೨. ಅನಂತರ ಮೇಲಕ್ಕೆದ್ದು ನೋಡುವಷ್ಟರಲ್ಲಿ ನನ್ನ ಶರೀರವು ಹೀಗಾಗಿರುವುದು. ನಾನು ಹೇಳಿದ ಈ ಮಾತು ನಿಜ.

ತಸ್ಮಾತ್ತ್ವಮಪಿ ರಾಜೇಂದ್ರ ತತ್ರ ಸ್ನಾನಂ ಸಮಾಚರ ।
ಸಪ್ತಮ್ಯಾಂ ಸೂರ್ಯವಾರೇಣ ಭಾಸ್ಕರಸ್ಯೋದಯಂ ಪ್ರತಿ ॥ ೪೩ ॥
ಯೇನ ತೇ ನಶ್ಯತಿ ವ್ಯಾಧಿರ್ವಿಶೇಷಮಪಿ ಪಾತಕಂ ।
ತಚ್ಛ್ರುತ್ವಾ ಸ ನೃಪಸ್ತೂರ್ಣಂ ತೇನೈವ ಸಹಿತೋ ಯಯೌ ॥ ೪೪ ॥
ಚಕಾರ ಸ ತಥಾ ಸ್ನಾನಂ ಸಪ್ತಮ್ಯಾಂ ಸೂರ್ಯವಾಸರೇ ।
ಮಾಘಮಾಸೇ ತು ಸಂಪ್ರಾಪ್ತೇ ವಿಶ್ವಾಮಿತ್ರಜಲೇ ಶುಭೇ ॥ ೪೫ ॥
ತತಃ ಕುಷ್ಠವಿನಿರ್ಮುಕ್ತಸ್ತತ್ಕ್ಷಣಾತ್ಸಮಪದ್ಯತ ।
ದಿವ್ಯರೂಪವಪುರ್ಧಾರೀ ಕಾಮದೇವ ಇವಾಽಪರಃ ॥ ೪೬ ॥
ಅಥ ತುಷ್ಟೋ ನರೇಂದ್ರಸ್ತು ತಸ್ಮೈ ಕಾರ್ಪಟಿಕಾಯ ಚ ।
ದದೌ ಕೋಟಿತ್ರಯಂ ಹೇಮ್ನಃ ಪ್ರೋವಾಚ ಸ ತತೋ ವಚಃ ॥ ೪೭ ॥
ತ್ವತ್ಪ್ರಸಾದಾದ್ವಿಮುಕ್ತೋಽಸ್ಮಿ ರೋಗಾದಸ್ಮಾತ್ಸುದಾರುಣಾತ್ ।
ತಸ್ಮಾತ್ತ್ವಂ ಗಚ್ಛ ಗೇಹಂ ಸ್ವಂ ಸ್ಥಾಸ್ಯೇಽಹಂ ಚಾಽತ್ರ ನಿರ್ಭರಂ ॥ ೪೮ ॥
ಕರಿಷ್ಯಾಮಿ ತಪೋ ನಿತ್ಯಂ ಸ್ವಕಲತ್ರ ಸಮನ್ವಿತಃ ।
ರಾಜ್ಯೇ ಸಂಸ್ಥಾಪಿತಃ ಪುತ್ರಃ ಸಮರ್ಥೋ ರಾಜ್ಯಕರ್ಮಣಿ ॥ ೪೯ ॥

---

೪೩. ಆದುದರಿಂದ ಅರಸ! ನೀನು ಸಪ್ತಮೀ ಭಾನುವಾರದ ದಿನ ಸೂರ್ಯೋದಯಕಾಲದಲ್ಲಿ ಅಲ್ಲಿ ಸ್ನಾನಮಾಡು.

೪೪. ಅದರಿಂದ ನಿನ್ನ ವ್ಯಾಧಿಯೂ, ಪಾಪವೂ ಪರಿಹಾರವಾಗುವುದು. ಆ ರಾಜನು ಅದನ್ನು ಕೇಳಿ ಬೇಗನೆ ಆ ಕಾರ್ಪಟಿಕನೊಡನೆ ಅಲ್ಲಿಗೆ ಹೋದನು.

೪೫. ಹಾಗೆಯೇ ಮಾಘ ಶುದ್ಧ ಸಪ್ತಮೀ ಭಾನುವಾರದ ದಿನ ವಿಶ್ವಾಮಿತ್ರ ಕುಂಡದಲ್ಲಿ ಮಿಂದನು.

೪೬. ಅದರಿಂದ ಕೂಡಲೆ ಕುಷ್ಠರೋಗದಿಂದ ಮುಕ್ತನಾಗಿ ಮತ್ತೊಬ್ಬ ಮನ್ಮಥನಂತೆ ಸುಂದರ ರೂಪವುಳ್ಳವನಾದನು.

೪೭. ಬಳಿಕ ಸಂತೋಷಗೊಂಡ ಆ ದೊರೆಯು ಆ ಕಾರ್ಪಟಿಕನಿಗೆ ಮೂರು ಕೋಟಿ ಸುವರ್ಣ ನಾಣ್ಯಗಳನ್ನಿತ್ತು ಇಂತೆಂದನು.

೪೮. ನಾನು ನಿನ್ನ ಅನುಗ್ರಹದಿಂದ ಈ ದಾರುಣ ರೋಗದಿಂದ ಮುಕ್ತ ನಾದೆನು. ಆದುದರಿಂದ ನೀನು ನಿನ್ನ ಮನೆಗೆ ತೆರಳು. ನಾನು ಇಲ್ಲಿಯೇ ಇರುವೆನು.

೪೯. ನನ್ನ ಪತ್ನಿಯೊಡನೆ ನಿತ್ಯವೂ ತಪಸ್ಸನ್ನು ಮಾಡುವೆನು. ನಾನು ರಾಜ್ಯಭಾರಕಾರ್ಯದಲ್ಲಿ ಸಮರ್ಥನಾದ ಪುತ್ರನನ್ನು ಸ್ಥಾಪಿಸಿದ್ದೇನೆ.

ಇತ್ಯುಕ್ತ್ವಾ ಪ್ರೇರಯಾಮಾಸ ತಂ ತಥಾಽನ್ಯಾನ್ ಸಮಾಗತಾನ್ ।
ಸೇವಕಾನ್ ಸ್ವಗೃಹಾಯ್ಯೈವ ಸ್ವಯಂ ತತ್ರೈವ ಸಂಸ್ಥಿತಃ ॥ ೫೦ ॥
ಕೃತ್ವಾಶ್ರಮುಪದಂ ರಮ್ಯಂ ಸ್ವಕಲತ್ರಸಮನ್ವಿತಃ ।
ಸಂಪ್ರಾಪ್ತಶ್ಚ ಪರಾಂ ಸಿದ್ಧಿಂ ಕಾಲೇನ ದ್ವಿಜಸತ್ತಮಾಃ ॥ ೫೧ ॥
ತಸ್ಯ ನಾಮ್ನಾ ತತಃ ಖ್ಯಾತಂ ತೀರ್ಥಮೇತತ್ತ್ರಿವಿಷ್ಟಪೇ ।
ಸರ್ವವ್ಯಾಧಿಹರಂ ರಮ್ಯಂ ಸರ್ವಪಾತಕನಾಶನಂ ॥ ೫೨ ॥
ತೇನ ಸಂಸ್ಥಾಪಿತಸ್ತತ್ರ ದೇವದೇವೋ ದಿವಾಕರಃ ।
ರತ್ನಾದಿತ್ಯ ಇತಿ ಖ್ಯಾತೋ ನಿಜನಾಮ್ನಾ ಮಹಾತ್ಮನಾ ॥ ೫೩ ॥
ಸಪ್ತಮ್ಯಾಂ ಸೂರ್ಯವಾರೇಣ ತತ್ರ ಸ್ನಾತ್ವಾ ಪ್ರಪಶ್ಯತಿ ।
ಯಸ್ತು ಪಾಪವಿನಿರ್ಮುಕ್ತಃ ಸೂರ್ಯಲೋಕಂ ಸ ಗಚ್ಛತಿ ॥ ೫೪ ॥
ಯದನ್ಯತ್ತತ್ರ ಸಂವೃತ್ತಂ ಕ್ಷೇತ್ರಜಾತಂ ದ್ವಿಜೋತ್ತಮಾಃ ।
ತದಹಂ ಕೀರ್ತಯಿಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೫೫ ॥
ಆಸೀತ್ತತ್ರ ಪುಮಾನ್ ಕಶ್ಚಿದ್ದೇಶೇ ಗ್ರಾಮ್ಯೋ ಜರಾತ್ಮಕಃ ।
ಕುಷ್ಠೀ ತಥಾಽಪಿ ನಿತ್ಯಂ ಸ ಕರೋತಿ ಪಶುರಕ್ಷಣಂ ॥ ೫೬ ॥

---

೫೦-೫೧. ಆ ದೊರೆಯು ಹೀಗೆ ಹೇಳಿ ಅವನನ್ನೂ, ಬಂದಿರುವ ಇತರರನ್ನೂ, ಸೇವಕರನ್ನೂ ತಮ್ಮ ತಮ್ಮ ಮನೆಗಳಿಗೆ ಕಳುಹಿಸಿ ತಾನು ಅಲ್ಲಿಯೇ ಮನೋಹರವಾದ ಆಶ್ರಮವನ್ನು ರಚಿಸಿಕೊಂಡು ಪತ್ನಿಯೊಡನೆ ಇದ್ದು ಕಾಲಾಂತರದಲ್ಲಿ ಉತ್ತಮ ಸಿದ್ಧಿಯನ್ನು ಹೊಂದಿದನು.

೫೨. ಸಕಲ ವ್ಯಾಧಿಯನ್ನು ನಿವಾರಿಸುವುದೂ, ರಮ್ಯವೂ, ಸಮಸ್ತ ಪಾಪವನ್ನು ಪರಿಹರಿಸುವುದೂ ಆದ ಈ ತೀರ್ಥವು ಲೋಕದಲ್ಲಿ ಅವನ ಹೆಸರಿನಿಂದ ವಿಖ್ಯಾತವಾಯಿತು.

೫೩. ಮಹಾತ್ಮನಾದ ಅವನು ತನ್ನ ಹೆಸರಿನಿಂದ ರತ್ನಾದಿತ್ಯನೆಂದು ವಿಖ್ಯಾತನಾದ ಸೂರ್ಯನನ್ನು ಅಲ್ಲಿ ಪ್ರತಿಷ್ಠೆ ಮಾಡಿದನು.

೫೪. ಸಪ್ತಮೀ ಭಾನುವಾರದ ದಿನ ಅಲ್ಲಿ ಮಿಂದು ಸೂರ್ಯನನ್ನು ದರ್ಶನ ಮಾಡಿದವನು ಪಾಪಮುಕ್ತನಾಗಿ ಸೂರ್ಯಲೋಕವನ್ನು ಸೇರುವನು.

೫೫. ದ್ವಿಜವರ್ಯರೆ! ಅಲ್ಲಿ ಉಂಟಾದ ಇತರ ತೀರ್ಥಗಳನ್ನು ನಿಮಗೆ ಹೇಳುವೆನು. ಸಾವಧಾನ ಮನಸ್ಸಿನಿಂದ ಅದನ್ನು ಕೇಳಿರಿ.

೫೬. ಆ ದೇಶದಲ್ಲಿ ಕುಷ್ಠರೋಗಿಯೂ, ಮುದುಕನೂ ಆದ ಹಳ್ಳಿಯವನೊಬ್ಬನಿದ್ದನು. ಅವನು ನಿತ್ಯವೂ ಪಶುಗಳನ್ನು ಕಾಯುತ್ತಿದ್ದನು.

ಏಕದಾ ರಕ್ಷತಸ್ತಸ್ಯ ಪಶೂಂಸ್ತತ್ರ ಗಿರೇರಥಃ ।
ಏಕಃ ಪಶುರ್ವಿನಿಷ್ಕ್ರಾಂತಃ ಸತ್ಪಥಾತ್ತೃಣಲೋಭತಃ ॥ ೫೭ ॥
ಸಪ್ತಮ್ಯಾಂ ರವಿವಾರೇಣ ಪತಿತಸ್ತಸ್ಯ ನಿರ್ಝರೇ ।
ನ ಚ ಸಂಲಕ್ಷಿತಸ್ತೇನ ಗಚ್ಛಮಾನಃ ಕಥಂಚನ ॥ ೫೮ ॥
ಅಥ ಯಾವದ್ಗೃಹೇ ಸೋಽಥ ಭೋಜನಾರ್ಥಂ ಸಮುದ್ಯತಃ ।
ತಾವತ್ತಸ್ಯ ಪಶೋಃ ಸ್ವಾಮೀ ಭರ್ತ್ಸಯನ್ ಸಮುಪಾಗತಃ ॥ ೫೯ ॥
ನಾಯಾತಃ ಸ ಪಶುಃ ಕಸ್ಮಾನ್ಮದೀಯೋ ಮಾಮಕೇ ಗೃಹೇ ।
ತಸ್ಮಾದಾನಯ ತಂ ಶೀಘ್ರಂ ನೋ ಚೇತ್ಪ್ರಾಣಾನ್ ಹರಾಮಿ ತೇ ॥ ೬೦ ॥

ಸೂತ ಉವಾಚ:—

ತಚ್ಛ್ರುತ್ವಾ ಭಯಸಂತ್ರಸ್ತಃ ಸ ಕುಷ್ಠೀ ಸತ್ವರಂ ಯಯೌ ।
ತೇನ ಮಾರ್ಗೇಣ ಯೇನೈವ ದಿವಾ ಭ್ರಾಂತೋ ಮಹೀತಲೇ ॥ ೬೧ ॥
ಅಥ ದೂರಾತ್ಸ ಶುಶ್ರಾವ ತಸ್ಯ ರಾವಂ ಪಶೋಸ್ತದಾ ।
ಪತಿತಸ್ಯ ಮಹಾಗರ್ತೇ ನಿಶಾಂತೇ ತಮಸಿ ಸ್ಥಿತೇ ॥ ೬೨ ॥
ತತೋ ಗತ್ವಾಽಥ ತಂ ಗರ್ತಂ ಪ್ರವಿಶ್ಯ ಜಲಮಧ್ಯತಃ ।
ಚಕರ್ಷ ತಂ ಪಶುಂ ಕೃಚ್ಛ್ರಾತ್ಪಂಕಮಧ್ಯಾತ್ಸುದಾರುಣಾತ್ ।
ಸಮಾದಾಯಾಽಥ ತಂ ಹರ್ಮ್ಯಂ ಪ್ರಜಗಾಮ ಶನೈಃ ಶನೈಃ ॥ ೬೩ ॥

---

೫೭–೫೮. ಒಂದಾನೊಂದು ದಿನ ಅಲ್ಲಿ ಬೆಟ್ಟದ ಕೆಳಗೆ ಅವನು ಪಶುಗಳನ್ನು ಕಾಯುತ್ತಿರಲು ಒಂದು ಪಶುವು ಹುಲ್ಲಿನ ಆಶೆಯಿಂದ ಸಪ್ತಮೀ ಭಾನುವಾರದ ದಿನ ದಾರಿತಪ್ಪಿ ಹೊರಟು ಆ ತೀರ್ಥದಲ್ಲಿ ಬಿದ್ದಿತು. ಅದು ಹಾಗೆ ದಾರಿಬಿಟ್ಟು ಹೋಗುತ್ತಿರುವುದನ್ನು ಅವನು ನೋಡಲಿಲ್ಲ.

೫೯. ತರುವಾಯ ಅವನು ಮನೆಯಲ್ಲಿ ಊಟಕ್ಕಾಗಿ ಉದ್ಯುಕ್ತನಾಗಿರಲು ಆ ಪಶುವಿನ ಯಜಮಾನನು ಅವನನ್ನು ಗದರಿಸುತ್ತ ಬಂದನು.

೬೦. ನನ್ನ ಆ ಪಶುವು ಏಕೆ ಮನೆಗೆ ಬರಲಿಲ್ಲ? ಅದನ್ನು ಶೀಘ್ರವಾಗಿ ತೆಗೆದುಕೊಂಡು ಬಾ. ಇಲ್ಲದಿದ್ದರೆ ನಿನ್ನನ್ನು ಕೊಲ್ಲುವೆನು ಎಂದನು.

೬೧–೬೨. ಸೂತನು ಹೇಳುತ್ತಾನೆ:—ಆ ಕುಷ್ಠಿಯು ಅವನ ಆ ಮಾತನ್ನು ಕೇಳಿ ಭಯದಿಂದ ನಡುಗುತ್ತ ಬೇಗನೆ ತಾನು ಹಗಲು ಸಂಚರಿಸಿದ ಮಾರ್ಗದಿಂದ ಹೊರಟನು. ಬಳಿಕ ಅವನು ದೂರದಿಂದ ಬೆಳಗಿನಜಾವು ದೊಡ್ಡ ಹಳ್ಳದಲ್ಲಿ ಬಿದ್ದಿರುವ ಆ ಪಶುವಿನ ಧ್ವನಿಯನ್ನು ಕೇಳಿದನು.

೬೩. ಅವನು ಆ ಕುಣಿಯ ಹತ್ತಿರ ಹೋಗಿ ಅದನ್ನು ಪ್ರವೇಶಿಸಿ ನೀರಿನ ಮಧ್ಯದಲ್ಲಿದ್ದ ಆ ಪಶುವನ್ನು ಕಠಿನವಾದ ಆ ಕೆಸರಿನಿಂದ ಎಳೆದು ತೆಗೆದುಕೊಂಡು ಮೆಲ್ಲಮೆಲ್ಲನೆ ಯಜಮಾನನ ಮನೆಗೆ ಹೋದನು.

ಅರ್ಪಯಿತ್ವಾಽಥ ತಂ ತಸ್ಯ ಸ್ವಕೀಯಂ ತ್ವಾಶ್ರಮಂ ಗತಃ ॥ ೬೪ ॥
ತತಃ ಸುಪ್ತೋ ಮಹಾಭಾಗಾಃ ಸ ಪ್ರಬುದ್ಧಃ ಪುನರ್ಯದಾ ।
ಪ್ರಭಾತೇ ವೀಕ್ಷತೇ ಗಾತ್ರಂ ಯಾವತ್ಕುಷ್ಠವಿವರ್ಜಿತಂ ॥ ೬೫ ॥
ಶೋಭಯಾ ಪರಯಾ ಯುಕ್ತಂ ವಿಸ್ಮಯೋತ್ಫುಲ್ಲಲೋಚನಃ ।
ಚಿಂತಯಾಮಾಸ ಕಿಂ ಹ್ಯೇತದಕಸ್ಮಾದ್ರೋಗಸಂಕ್ಷಯಃ ॥ ೬೬ ॥
ನೂನಂ ತಸ್ಯ ಪ್ರಭಾವೋಽಯಂ ತೀರ್ಥಸ್ಯಾಽದ್ಯ ನಿಶಾಗಮೇ ।
ಮಯಾಽವಗಾಹಿತಂ ಯಚ್ಚ ಪಶೋರರ್ಥಂ ಸುಕರ್ದಮಂ ॥ ೬೭ ॥
ತತಶ್ಚ ವೀಕ್ಷಯಾಮಾಸ ತೇನ ಗತ್ವಾ ಸುಕೌತುಕಾತ್ ।
ಯಾವತ್ಕುಂಡಾದ್ವಿನಿರ್ಮುಕ್ತಸ್ತೇಜಸಾ ಪರಿವಾರಿತಃ ॥ ೬೮ ॥
ತತ್ರ ಸ್ಥಾನೇ ಸ್ವಯಂ ಗತ್ವಾ ಜ್ಞಾತ್ವಾ ಚ ತೀರ್ಥಮುತ್ತಮಂ ।
ತಪಸ್ತೇಪೇ ಸ ತತ್ರೈವ ಧ್ಯಾಯಮಾನೋ ದಿವಾಕರಂ ॥ ೬೯ ॥
ಅರಣ್ಯವಾಸಿನಂ ಸಮ್ಯಗ್ದಿವಾರಾತ್ರಮತಂದ್ರಿತಃ ।
ಗತಶ್ಚ ಪರಮಾಂ ಸಿದ್ಧಿಂ ದುರ್ಲಭಾಂ ತ್ರಿದಶೈರಪಿ ॥ ೭೦ ॥
ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾನಂ ಸಮಾಚರೇತ್ ॥ ೭೧ ॥
ಪೂಜಯೇಚ್ಚಾಽಪಿ ತಂ ದೇವಂ ಭಾಸ್ಕರಂ ವಾರಿತಸ್ಕರಂ ।
ಅದ್ಯಾಽಪಿ ಕಲಿಕಾಲೇಽಪಿ ತತ್ರ ಸ್ನಾತೋ ನರಃ ಶುಚಿಃ ॥ ೭೨ ॥

---

೬೪. ಬಳಿಕ ಅವನು ಆ ಪಶುವನ್ನು ಯಜಮಾನನಿಗೆ ಒಪ್ಪಿಸಿ ತನ್ನ ಆಶ್ರಮಕ್ಕೆ ತೆರಳಿದನು.

೬೫–೬೬. ತರುವಾಯ ಮಲಗಿ ಬೆಳಗ್ಗೆ ಎದ್ದು ಅವನು ಕುಷ್ಠವಿಲ್ಲದಿರುವುದೂ, ಅತ್ಯಂತ ಕಾಂತಿಯಿಂದ ಕೂಡಿರುವುದೂ ಆದ ತನ್ನ ಶರೀರವನ್ನು ನೋಡಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಹೀಗೆ ಚಿಂತಿಸಿದನು. ಅಕಸ್ಮಾತ್ತಾಗಿ ಈ ರೋಗವು ಪರಿಹಾರವಾದುದು ಹೇಗೆ?

೬೭. ನಾನು ಪಶುವಿಗಾಗಿ ರಾತ್ರಿಯಲ್ಲಿ ಅತಿಶಯವಾದ ಕೆಸರುಳ್ಳ ಈ ತೀರ್ಥದಲ್ಲಿ ಪ್ರವೇಶಿಸಿದೆನು. ಇದು ನಿಶ್ಚಯವಾಗಿಯೂ ಈ ತೀರ್ಥದ ಪ್ರಭಾವವೇ.

೬೮. ಅನಂತರ ನವೆಯಿಲ್ಲದವನೂ, ತೇಜಸ್ಸುಳ್ಳವನೂ ಆದ ಅವನು ಕುತೂಹಲದಿಂದ ಅಲ್ಲಿಗೆ ಹೋಗಿ ನೋಡಿದನು.

೬೯–೭೦. ಅದು ಉತ್ತಮ ತೀರ್ಥವೆಂದರಿತು ಅಲ್ಲಿಯೇ ಅರಣ್ಯವಾಸಿಯಾದ ಸೂರ್ಯನನ್ನು ಹಗಲು ರಾತ್ರಿ ಆಲಸ್ಯವಿಲ್ಲದೆ ಧ್ಯಾನಿಸುತ್ತ ತಪವನ್ನಾಚರಿಸಿದನು. ಮತ್ತು ದೇವತೆಗಳಿಗೂ ದುರ್ಲಭವಾದ ಉತ್ತಮ ಸಿದ್ಧಿಯನ್ನು ಪಡೆದನು.

೭೧–೭೨. ಆದುದರಿಂದ ಅಲ್ಲಿ ಮಿಂದು ಸೂರ್ಯನನ್ನು ಪೂಜಿಸಬೇಕು. ಈ ಕಲಿಕಾಲದಲ್ಲಿಯೂ ಮನುಷ್ಯನು ಸಪ್ತಮೀ ಭಾನುವಾರದ ದಿನ ಆ ಕುಂಡದಲ್ಲಿ

ತತ್ರ ಪುಣ್ಯಜಲೇ ಕುಂಡೇ ಸಪ್ತಮ್ಯಾಂ ಸೂರ್ಯವಾಸರೇ ।
ಯಸ್ತಂ ಪೂಜಯತೇ ಭಕ್ತ್ಯಾ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೨೩ ॥
ಗಾಯತ್ರ್ಯಷ್ಟಸಹಸ್ರಂ ಯೋ ಜಪೇತ್ತತ್ಪುರತಃ ಸ್ಥಿತಃ ।
ಸೋಽಪಿ ರೋಗವಿನಿರ್ಮುಕ್ತೋ ಮುಚ್ಯತೇ ಸರ್ವಪಾತಕೈಃ ॥ ೨೪ ॥
ತಸ್ಯೋದ್ದೇಶೇನ ಯೋ ದದ್ಯಾದ್ಧೇನುಂ ಶ್ರದ್ಧಾ ಸಮನ್ವಿತಃ ।
ನ ತಸ್ಯಾನ್ವಯ ಜಾತೋಽಪಿ ವ್ಯಾಧಿನಾ ಪರಿಗೃಹ್ಯತೇ ॥ ೨೫ ॥
ಏತದ್ವಃ ಸರ್ವಮಾಖ್ಯಾತಂ ಮಯಾದಿತ್ಯಸ್ಯ ಸಂಭವಂ ।
ಮಾಹಾತ್ಮ್ಯಂ ಶ್ರವಣಾದ್ಯಸ್ಯ ನರಃ ಪಾಪಾದ್ವಿಮುಚ್ಯತೇ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರತ್ನಾದಿತ್ಯಮಾಹಾತ್ಮ್ಯವರ್ಣನಂ" ನಾಮ
ದ್ವಾದಶೋತ್ತರದ್ವಿಶತತಮೋಽಧ್ಯಾಯಃ

---

ನಿಂದು ಶುದ್ಧನಾಗಿ ಆ ಭಾಸ್ಕರನನ್ನು ಭಕ್ತಿಯಿಂದ ಪೂಜಿಸಿದವನು ಪಾಪಮುಕ್ತನಾಗುವನು.

೨೪. ಆ ಸೂರ್ಯನ ಮುಂದೆ ಎಂಟು ಸಾವಿರ ಗಾಯತ್ರಿಗಳನ್ನು ಜಪಿಸುವವನು ನೀರೋಗಿಯೂ, ಸಮಸ್ತ ಪಾಪಮುಕ್ತನೂ ಆಗುವನು.

೨೫. ಆ ಸೂರ್ಯನನ್ನು ಉದ್ದೇಶಿಸಿ ಶ್ರದ್ಧೆಯಿಂದ ಆಕಳನ್ನು ದಾನಮಾಡುವವನ ವಂಶದಲ್ಲಿ ಜನಿಸಿದವನು ಸಹ ರೋಗಿಯಾಗುವುದಿಲ್ಲ.

೨೬. ಈ ರತ್ನಾದಿತ್ಯನ ಉತ್ಪತ್ತಿಯ ಕ್ರಮವನ್ನು ನಾನು ನಿಮಗೆ ಹೇಳಿರುವೆನು. ಇವನ ಮಾಹಾತ್ಮ್ಯವನ್ನು ಕೇಳಿದ ಮನುಷ್ಯನು ಪಾಪಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರತ್ನಾದಿತ್ಯಮಾಹಾತ್ಮ್ಯವರ್ಣನ" ವೆಂಬ
ಇನ್ನೂರಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋತ್ತರದ್ವಿಶತತಮೋಽಧ್ಯಾಯಃ

### ಸಾಂಬಾದಿತ್ಯಪ್ರಭಾವವರ್ಣನಂ

ಸೂತ ಉವಾಚ :—

ರತ್ನಾದಿತ್ಯಸ್ಯ ಮಾಹಾತ್ಮ್ಯಮೇತದ್ವಃ ಪರಿಕೀರ್ತಿತಂ ।
ಸರ್ವಕುಷ್ಠಹರಂ ಯಚ್ಚ ಸರ್ವಪಾತಕನಾಶನಂ ।
ಭೂಯಸ್ತಥೈವ ಮಾಹಾತ್ಮ್ಯಂ ಮಹದ್ವೈ ಶ್ರೂಯತಾಂ ರವೇಃ ॥ ೧ ॥
ಪುರಾಸೀದ್ಬ್ರಾಹ್ಮಣಃ ಕಶ್ಚಿತ್ಕುಷ್ಠವ್ಯಾಧಿ ಸಮಾಕುಲಃ ।
ತೇನ ಚಾರಾಧಿತಃ ಸೂರ್ಯಸ್ತತ್ರಸ್ಥೇನ ದ್ವಿಜೋತ್ತಮಾಃ ॥ ೨ ॥
ಪೂರ್ವದಕ್ಷಿಣದಿಗ್ಭಾಗೇ ಸಮಾಸಾದ್ಯ ತತಃ ಪರಂ ।
ರಕ್ತಚಂದನಜಾಂ ಕೃತ್ವಾ ಪ್ರತಿಮಾಂ ಭಾವಿತಾತ್ಮನಾ ॥ ೩ ॥
ತತೋ ವರ್ಷಸಹಸ್ರಾಂತೇ ತುಷ್ಟಸ್ತಸ್ಯ ದಿವಾಕರಃ ।
ವರದೋಽಸ್ಮೀತಿ ತಂ ಪ್ರಾಹ ದೃಷ್ಟಿಗೋಚರಮಾಗತಃ ॥ ೪ ॥

ಬ್ರಾಹ್ಮಣ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ಕುಷ್ಠವ್ಯಾಧಿಂ ಹರ ಪ್ರಭೋ ।
ನಾಽನ್ಯೇನ ಕಾರಣಂ ಮೇಽಸ್ತಿ ರಾಜ್ಯೇನಾಽಪಿ ತ್ರಿವಿಷ್ಟಪೇ ॥ ೫ ॥

---

### ಕನ್ನಡದ ಅನುವಾದ

### ಸಾಂಬಾದಿತ್ಯಪ್ರಭಾವವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮುನಿಗಳೆ! ನಿಮಗೆ ಸಕಲ ಕುಷ್ಠ ರೋಗಗಳನ್ನು ಪರಿಹರಿಸುವುದೂ, ಸಮಸ್ತ ಪಾಪಗಳನ್ನು ನಿವಾರಿಸುವುದೂ ಆದ ರತ್ನಾದಿತ್ಯನ ಮಾಹಾತ್ಮ್ಯವನ್ನು ಹೇಳಿರುತ್ತೇನೆ. ಮರಳಿಯೂ ರವಿಯ ಮಾಹಾತ್ಮ್ಯವನ್ನು ಕೇಳಿರಿ.

೨-೩. ಹಿಂದೆ ಕುಷ್ಠವ್ಯಾಧಿಗ್ರಸ್ತನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ಅಲ್ಲಿಯೇ ವಾಸಿಸುತ್ತ ಆಗ್ನೇಯ ದಿಕ್ಕಿನಲ್ಲಿ ರಕ್ತಚಂದನದಿಂದ ಸೂರ್ಯನ ಪ್ರತಿಮೆಯನ್ನು ಮಾಡಿ ಆರಾಧಿಸುತ್ತಿದ್ದನು.

೪. ತರುವಾಯ ಸಾವಿರ ವರ್ಷಗಳಾದ ಮೇಲೆ ಸಂತುಷ್ಟನಾದ ಸೂರ್ಯನು ಪ್ರತ್ಯಕ್ಷನಾಗಿ ವರವನ್ನು ಕೊಡುತ್ತೇನೆ ಎಂದನು.

೫. ಬ್ರಾಹ್ಮಣನು ಹೇಳುತ್ತಾನೆ:—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ ನನ್ನ ಕುಷ್ಠರೋಗವನ್ನು ನಿವಾರಿಸು. ನನಗೆ ಇತರ ಯಾವುದರಿಂದಲೂ, ದೇವಲೋಕದ ರಾಜ್ಯದಿಂದಲೂ ಪ್ರಯೋಜನವಿಲ್ಲ.

ಶ್ರೀ ಭಗವಾನುವಾಚ :—

ಸಪ್ತಮ್ಯಾಂ ಸೂರ್ಯವಾರೇಣ ಕುರು ವಿಪ್ರ ಪ್ರದಕ್ಷಿಣಾಂ ।
ಶತಮಷ್ಟೋತ್ತರಂ ಯಾವತ್ಸ್ನಾತ್ವಾ ಪುಣ್ಯಪ್ರದೇ ಶುಭೇ ।
ಫಲಹಸ್ತಃ ಪೃಥಕ್ತ್ವೇನ ತತಃ ಕುಷ್ಠೇನ ಮುಚ್ಯಸೇ ॥ ೬ ॥
ಅನ್ಯೋಽತ್ರ ಗಾಂ ಗತೋ ಯೋಽಪಿ ವ್ರತಮೇತತ್ಕರಿಷ್ಯತಿ ।
ಸರ್ವರೋಗವಿನಿರ್ಮುಕ್ತೋ ಮಮ ಲೋಕಂ ಸ ಗಚ್ಛತಿ ॥ ೭ ॥

ಸೂತ ಉವಾಚ :—

ತಚ್ಛ್ರುತ್ವಾ ಸ ತಥಾ ಚಕ್ರೇ ಬ್ರಾಹ್ಮಣಃ ಶ್ರದ್ಧಯಾನ್ವಿತಃ ।
ವಿಮುಕ್ತಶ್ಚ ತದಾ ಕುಷ್ಠಾದ್ದಿವ್ಯದೇಹಮವಾಪ್ತವಾನ್ ॥ ೮ ॥
ಅಥ ಭೂಯೋಽಪಿ ತಂ ಪ್ರಾಹ ನೀರೋಗಂ ಭಗವಾನ್ರವಿಃ ।
ಕಿಂ ತೇ ಪ್ರಿಯಂ ಕರೋಮ್ಯನ್ಯದ್ವದ ಬ್ರಾಹ್ಮಣಸತ್ತಮ ॥ ೯ ॥
ಸೋಽಬ್ರವೀತ್ಸರ್ವದೈವಾತ್ರ ಸ್ಥಾತವ್ಯಂ ಭಗವನ್ವಿಭೋ ॥ ೧೦ ॥

ಶ್ರೀ ಭಗವಾನುವಾಚ :—

ಅತಃ ಪರಂ ಮಮಾವಾಸಃ ಸ್ಥಾನೇಽತ್ರ ಚ ಭವಿಷ್ಯತಿ ।
ನಾಮ್ನಾ ಕುಹರವಾಸಾಖ್ಯಾ ಸಂಜ್ಞಾ ಮಮ ಭವಿಷ್ಯತಿ ॥ ೧೧ ॥

---

೬. ಶ್ರೀ ಭಗವಂತನು ಹೇಳುತ್ತಾನೆ:—ಸಪ್ತಮೀ ಭಾನುವಾರದ ದಿನ ಪುಣ್ಯಕರವಾದ ಈ ಕುಂಡದಲ್ಲಿ ಮಿಂದು ಕೈಯಲ್ಲಿ ಪ್ರತ್ಯೇಕವಾಗಿ ಫಲವನ್ನು ಹಿಡಿದುಕೊಂಡು ನೂರೆಂಟು ಪ್ರದಕ್ಷಿಣೆಗಳನ್ನು ಮಾಡು. ಅದರಿಂದ ನಿನ್ನ ಕುಷ್ಠರೋಗವು ಪರಿಹಾರವಾಗುವುದು.

೭. ಭೂಮಿಯಲ್ಲಿರುವ ಇತರ ಮಾನವನೂ ಈ ವ್ರತವನ್ನಾಚರಿಸಿದರೆ ಸಮಸ್ತ ರೋಗಗಳಿಂದ ಮುಕ್ತನಾಗಿ ನನ್ನ ಲೋಕವನ್ನು ಸೇರುವನು.

೮. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣನು ಅದನ್ನು ಕೇಳಿ ಅತ್ಯಂತ ಶ್ರದ್ಧೆಯಿಂದ ಹಾಗೆಯೇ ಮಾಡಿದನು. ಆಗ ಕುಷ್ಠವ್ಯಾಧಿಯಿಂದ ಮುಕ್ತನಾಗಿ ಸುಂದರವಾದ ಶರೀರವನ್ನು ಪಡೆದನು.

೯. ಬಳಿಕ ಸೂರ್ಯನು ರೋಗವಿಲ್ಲದ ಆ ಬ್ರಾಹ್ಮಣನನ್ನು ಕುರಿತು ನಿನಗೆ ಬೇರಾವ ಹಿತವನ್ನುಂಟುಮಾಡಲಿ ಎಂದು ಕೇಳಿದನು.

೧೦. ಆ ಬ್ರಾಹ್ಮಣನು ನೀನು ಯಾವಾಗಲೂ ಇಲ್ಲಿರಬೇಕೆಂದನು.

೧೧. ಶ್ರೀ ಭಗವಂತನು ಹೇಳುತ್ತಾನೆ:— ಇನ್ನು ಮುಂದೆ ನಾನು ಇಲ್ಲಿ ವಾಸಮಾಡುವೆನು. ನನಗೆ ಕುಹರವಾಸನೆಂಬ ಹೆಸರಾಗುವುದು.

ಸೂತ ಉವಾಚ :—
ಕಸ್ಯಚಿತ್ತ್ವಥ ಕಾಲಸ್ಯ ವಿಷ್ಣುಪುತ್ರೋ ಬಭೂವ ಹ ।
ಸಾಂಬೋ ನಾಮ ಸುರೂಪಾಢ್ಯೋ ಜಾಂಬವತ್ಯಾಂ ದ್ವಿಜೋತ್ತಮಾಃ ॥ ೧೨ ॥
ಕ್ಷೋಭಸಂಜನನಃ ಸ್ತ್ರೀಣಾಂ ಮಾತೄಣಾಮಪಿ ಸ ದ್ವಿಜಾಃ ।
ಅಥ ತಂ ರಾಜಮಾರ್ಗೇಣ ಗಚ್ಛಂತಂ ಯದುಸತ್ತಮಂ ॥ ೧೩ ॥
ಪುರನಾರ್ಯೋಽಪಿ ಸಂತುಷ್ಟಾ ವೀಕ್ಷಾಂ ಚಕ್ರುಃ ಸುಕೌತುಕಾತ್ ।
ಗೃಹಕಾರ್ಯಾಣಿ ಸಂತ್ಯಜ್ಯ ಸಮಾರೂಢಾ ಗವಾಕ್ಷಕಾನ್ ॥ ೧೪ ॥
ತಸ್ಯ ಕಾಮಾತ್ಮದೇಹಸ್ಯ ದರ್ಶನಾರ್ಥಂ ಸಮುತ್ಸುಕಾಃ ।
ಕಾಶ್ಚಿದರ್ಧಾನುಲಿಪ್ತಾಂಗ್ಯಃ ಕಾಶ್ಚಿದೇಕಾಂಚಿತೇಕ್ಷಣಾಃ ॥ ೧೫ ॥
ಅರ್ಧಸಂಯಮಿತೈಃ ಕೇಶೈಸ್ತಥಾಽನ್ಯಾಸ್ತ್ಯಕ್ತಬಾಲಕಾಃ ।
ಏಕಸ್ಮಿಂಶ್ಚರಣೇ ಕಾಶ್ಚಿನ್ನಿಯೋಜ್ಯೋಪಾನಹಂ ದ್ರುತಾಃ ॥ ೧೬ ॥
ಪಾದುಕಾಂ ತು ದ್ವಿತೀಯೇ ತು ಪರ್ಯಧಾವನ್ನಿತಂಬಿನೀಃ ।
ವ್ರಜಂತೀಷು ತಥಾಽನ್ಯಾಸು ವನಿತಾಸು ಗವಾಕ್ಷಕಾನ್ ॥ ೧೭ ॥
ವ್ಯಾಕ್ರೋಶಂತಿ ಕ್ರುಧಾವಿಷ್ಟಾಃ ಶಿಶವೋ ಗುರವಸ್ತಥಾ ।
ನೀವೀಬಂಧನವಿಶ್ಲೇಷಸಮಾಕುಲಿತಚೇತಸಃ ॥ ೧೮ ॥
ಯಯುರೇವಾಽಪರಾಃ ಸ್ವೇಷು ಗವಾಕ್ಷೇಷು ವರಾಂಗನಾಃ ।
ಸ ಚಕರ್ಷ ತದಾ ತಾಸಾಂ ಪತಿತೈರ್ನೇತ್ರರಶ್ಮಿಭಿಃ ॥ ೧೯ ॥

---

೧೨–೧೪. ಸೂತನು ಹೇಳುತ್ತಾನೆ:—ಒಂದಾನೊಂದು ಕಾಲದಲ್ಲಿ ಶ್ರೀ ಕೃಷ್ಣನಿಂದ ಜಾಂಬವತಿಯಲ್ಲಿ ಸಮಸ್ತ ಸ್ತ್ರೀಯರಿಗೂ, ತಾಯಂದಿರಿಗೂ ಚಿತ್ತ ಚಾಂಚಲ್ಯವನ್ನುಂಟುಮಾಡುವ ಸುಂದರನಾದ ಸಾಂಬನೆಂಬ ಕುಮಾರನು ಜನಿಸಿ ದನು. ಅವನು ಹೆದ್ದಾರಿಯಲ್ಲಿ ಹೋಗುತ್ತಿರುವಾಗ ಪಟ್ಟಣದ ಹೆಂಗಸರೆಲ್ಲ ಸಂತೋಷ ಕುತೂಹಲಗಳಿಂದ ಮನೆಗೆಲಸಗಳನ್ನು ತ್ಯಜಿಸಿ ಗವಾಕ್ಷದಿಂದ ಅವನನ್ನೇ ನೋಡುತ್ತಿದ್ದರು.

೧೫–೨೧. ಮನ್ಮಥನಂತೆ ಸುಂದರನಾದ ಅವನನ್ನು ನೋಡಲು ಅವಸರ ದಿಂದ ಕೆಲವು ಸ್ತ್ರೀಯರು ಅರ್ಧವಾಗಿ ಗಂಧವನ್ನು ಹಚ್ಚಿಕೊಂಡವರೂ, ಕೆಲವರು ಒಂದು ಕಣ್ಣಿಗೆ ಮಾತ್ರ ಕಪ್ಪನ್ನು ಹಚ್ಚಿಕೊಂಡವರೂ, ಕೆಲವರು ಅರ್ಧವಾಗಿ ಕಟ್ಟಿದ ಕೂದಲುಳ್ಳವರೂ ಆಗಿದ್ದರು. ಕೆಲವರು ಮಕ್ಕಳನ್ನು ತ್ಯಜಿಸಿಯೂ, ಕೆಲವರು ಒಂದು ಪಾದದಲ್ಲಿ ಪಾದರಕ್ಷೆಯನ್ನೂ, ಇನ್ನೊಂದರಲ್ಲಿ ಪಾದುಕೆಯನ್ನೂ ಧರಿಸಿಯೂ ಓಡಿಬಂದರು. ಇತರ ಸ್ತ್ರೀಯರು ಗವಾಕ್ಷದ ಹತ್ತಿರಕ್ಕೆ ಓಡುತ್ತಿರು ವಾಗ ಶಿಶುಗಳೂ, ಗುರುಗಳೂ ಕೋಪದಿಂದ ಕೂಗಿಕೊಳ್ಳುತ್ತಿದ್ದರು. ಇನ್ನು ಕೆಲವು ಹೆಂಗಸರು ನೀವಿಯು ಸಡಿಲವಾದ್ದರಿಂದ ವ್ಯಾಕುಲಚಿತ್ತರಾಗಿ ತಮ್ಮ

ಹೃದಯಾನಿ ಧರಾಪೃಷ್ಠೇ ಕಾಮದೇವಸಮೋ ಯುವಾ ।
ಕಾಚಿದ್ದೃಷ್ಟ್ವೈವ ತದ್ರೂಪಂ ತಸ್ಯ ಸಾಂಬಸ್ಯ ಕಾಮಿನೀ ॥ ೨೦ ॥
ನಿಶ್ಚಲಾ ಕಾಮತಪ್ತಾಂಗೀ ಲಿಖಿತೇವ ವಿಭಾವ್ಯತೇ ।
ಕಾಚಿದಗ್ನಿಸಮಾನ್ ಮುಕ್ತ್ವಾ ನಿಃಶ್ವಾಸಾನ್ ಕಾಮಪೀಡಿತಾ ॥ ೨೧ ॥
ಏಕಾ ತಂ ಚ ಸಮಾಲೋಕ್ಯ ರೂಪಯೌವನಸಂಯುತಂ ।
ಗವಾಕ್ಷಾತ್ಪ್ರಪತಚ್ಚೈವ ನಿಶ್ಚೇಷ್ಟಾ ಧರಣೀತಲೇ ॥ ೨೨ ॥
ಅನ್ಯಾಃ ಪರಸ್ಪರಾಲಾಪಂ ಪ್ರಕುರ್ವಂತಿ ವರಸ್ತ್ರಿಯಃ ।
ಏಕಾ ಸಾ ಕಾಮಿನೀ ಧನ್ಯಾ ಯಾಽಸ್ಯ ಚಕ್ರೇಽವಗೂಹನಂ ॥ ೨೩ ॥
ನಿಃಶೇಷಾಂ ರಜನೀಂ ಪ್ರಾಪ್ಯ ಮಾಘಮಾಸಸಮುದ್ಭವಾಂ ।
ಆಸ್ತಾಂ ತಾವತ್ ಸ್ತ್ರಿಯೋ ಯಾಶ್ಚ ನರಾ ಅಪಿ ನಿರರ್ಗಲಂ ॥ ೨೪ ॥
ಜಲ್ಪಂತಿ ಚೇದೃಶಂ ಸರ್ವಂ ತಸ್ಯ ರೂಪೇಣ ವಿಸ್ಮಿತಾಃ ।
ಅನ್ಯೇ ವದಂತಿ ಸೇವಾಮ ಏನಮರ್ಥೇನ ವರ್ಜಿತಾಃ ॥ ೨೫ ॥
ವೀಕ್ಷ್ಯಾಮೋ ವದನಂ ಯೇನ ನಿತ್ಯಮೇವೇಂದುಸನ್ನಿಭಂ ।
ಕರ್ಣಾಭ್ಯಾಂ ವಾರಿತಾ ವೃದ್ಧಿರ್ನೇತ್ರಯೋರಪ್ಯಸಂಶಯಂ ।
ನೋಚೇಜ್ಜಾನೀಮಹೇ ಚೈವ ಕಿಯತೀ ಸಂಭವಿಷ್ಯತಿ ॥ ೨೬ ॥
ಏವಂ ಸಂವೀಕ್ಷ್ಯಮಾಣಸ್ತು ಕಾಮಿನೀಭಿರ್ನರೈಸ್ತಥಾ ।
ನಿರ್ಯಯೌ ರಾಜಮಾರ್ಗೇಣ ಪಿತೃದರ್ಶನಲಾಲಸಃ ॥ ೨೭ ॥

---

ಗವಾಕ್ಷಗಳಿಗೆ ಹೋದರು. ಮನ್ಮಥನಂತಿರುವ ಅವನು ಆಗ ಅವರ ಹೃದಯಗಳನ್ನು ನಯನಗಳೆಂಬ ಹಗ್ಗಗಳಿಂದ ಸೆಳೆದನು. ಒಬ್ಬ ಹೆಂಗಸು ಆ ಸಾಂಬನ ಸೌಂದರ್ಯವನ್ನು ಕಂಡು ಕಾಮಬಾಧೆಯಿಂದ ಅಲ್ಲಾಡದೆ ಬರೆಯಲ್ಪಟ್ಟವಳಂತೆ ಕಂಡಳು. ಒಬ್ಬಳು ಕಾಮಪೀಡಿತಳಾಗಿ ಅಗ್ನಿಯಂತಿರುವ ನಿಟ್ಟುಸಿರನ್ನು ಬಿಟ್ಟಳು.

೨೨. ಒಬ್ಬಳು ಸೌಂದರ್ಯ ಯೌವನಗಳಿಂದ ಕೂಡಿದ ಅವನನ್ನು ನೋಡಿ ಗವಾಕ್ಷದಿಂದ ನಿಶ್ಚೇಷ್ಟಳಾಗಿ ನೆಲದಮೇಲೆ ಬಿದ್ದಳು.

೨೩–೨೬. ಇತರ ಉತ್ತಮ ಸ್ತ್ರೀಯರು ಮಾಘಮಾಸದ ಸಂಪೂರ್ಣ ರಾತ್ರಿಯಲ್ಲಿ ಇವನನ್ನು ಆಲಿಂಗಿಸಿದ ಸ್ತ್ರೀಯು ಧನ್ಯಳೆಂದು ಪರಸ್ಪರವಾಗಿ ಮಾತಾಡಿಕೊಳ್ಳುತ್ತಿದ್ದರು. ಹೆಂಗಸರು ಮಾತ್ರವಲ್ಲ. ಪುರುಷರೂ ಅವನ ರೂಪದಿಂದ ವಿಸ್ಮಿತರಾಗಿ ನಿರರ್ಗಳವಾಗಿ ಹೀಗೆ ಮಾತಾಡಿಕೊಳ್ಳುತ್ತಿದ್ದರು. ನಿತ್ಯವೂ ಇವನ ಮುಖದ ದರ್ಶನವು ಲಭಿಸುವುದರಿಂದ ನಾವು ಸಂಬಳವಿಲ್ಲದೆ ಇವನನ್ನು ಸೇವಿಸುತ್ತೇವೆ. ಕಣ್ಣು ಅಗಲವಾಗುವುದನ್ನು ಕಿವಿಯು ತಡೆಯದಿದ್ದರೆ ಇವನ ದರ್ಶನವು ನಮಗೆ ಎಷ್ಟು ಲಭಿಸುತ್ತಿದ್ದಿತೊ ಎಂದು ಮಾತನಾಡಿಕೊಂಡರು.

೨೭. ಹೀಗೆ ಸ್ತ್ರೀಪುರುಷರು ನೋಡುತ್ತಿರಲು ಆ ಸಾಂಬನು ತಂದೆಯನ್ನು ನೋಡುವುದಕ್ಕಾಗಿ ರಾಜಮಾರ್ಗದಿಂದ ಹೊರಟನು.

ಭಗಿನ್ಯೋ ಮಾತರೋ ಯಾಶ್ಚ ಭ್ರಾತೃಪತ್ನ್ಯಶ್ಚ ಯಾಃ ಸ್ಥಿತಾಃ ।
ಅವಸ್ಥಾಮೀದೃಶೀಂ ಪ್ರಾಪ್ತಾ ಬ್ರಾಹ್ಮಣಾನಾಮಪಿ ಸ್ತ್ರಿಯಃ ।
ಮಾತರೋಽಪಿ ಚ ಯಾಸ್ತಸ್ಯ ಭಗಿನ್ಯಶ್ಚ ವಿಶೇಷತಃ ॥ ೨೮ ॥
ಅನ್ಯಸ್ಮಿನ್ನಹನಿ ಪ್ರಾಪ್ತೇ ಪ್ರಾವೃಟ್ಕಾಲೇ ನಿಶಾಗಮೇ ।
ಕೃಷ್ಣಪಕ್ಷೇ ತಮೋಭೂತೇ ಅಲಕ್ಷ್ಯೇಽಪಿ ಗತೇ ಪುರಃ ॥ ೨೯ ॥
ತನ್ಮಾತಾ ನಂದಿನೀನಾಮ ಕಾಮದೇವಶರಾರ್ದಿತಾ ।
ತತ್ಪತ್ನ್ಯಾ ವೇಷಮಾಧಾಯ ತಚ್ಛಯ್ಯಾಯಾಮುಪಸ್ಥಿತಾ ॥ ೩೦ ॥
ಸೋಽಪಿ ತಾಂ ದಯಿತಾಂ ಜ್ಞಾತ್ವಾ ಸೇವಯಾಮಾಸ ಕಾಮಿನೀಂ ।
ರತೋಪಚಾರೈರ್ವಿವಿಧೈರಶ್ರದ್ಧೇಯವಿನಿರ್ಮಿತೈಃ ॥ ೩೧ ॥
ತಂಬಾ ತತ್ರ ಯದುಶ್ರೇಷ್ಠೋ ವಿಕಲ್ಪಮಕರೋತ್ತದಾ ।
ಅಂಗರಾಜಸುತಾ ಯಾ ಮೇ ಪ್ರಾಣೇಭ್ಯೋಽಪಿ ಗರೀಯಸೀ ॥ ೩೨ ॥
ನೈವಂ ವಿಧಂ ರತಂ ವೇದ ಅನಯಾ ಯದ್ವಿನಿರ್ಮಿತಂ ।
ವೇಶ್ಯಾ ಅಪಿ ನ ಜಾನಂತಿ ರತಿಮೀದೃಕ್ಕಥಂಚನ ॥ ೩೩ ॥
ತತೋ ಗಾಢಂ ಕರೇ ಧೃತ್ವಾ ದೀಪಮಾನೀಯ ತತ್ಕ್ಷಣಾತ್ ।
ಯಾವತ್ಪಶ್ಯತಿ ಸಾ ಮಾತಾ ನಂದಿನೀತಿ ಚ ಯಾ ಸ್ಮೃತಾ ॥ ೩೪ ॥

---

೨೮. ಅವನ ಸಹೋದರಿಯರೂ, ತಾಯಂದಿರೂ, ಅತ್ತಿಗೆಯರೂ, ಬ್ರಾಹ್ಮಣ ಪತ್ನಿಯರೂ ಸಹ ಇಂತಹ ಸ್ಥಿತಿಯನ್ನು ಹೊಂದಿದರು.

೨೯-೩೦. ಒಂದಾನೊಂದು ಮಳೆಗಾಲದ ಕೃಷ್ಣಪಕ್ಷದ ರಾತ್ರಿಯಲ್ಲಿ ಕತ್ತಲೆಯಿಂದ ಪಟ್ಟಣವೇ ಕಾಣದಿರಲು ಅವನ ತಾಯಿಯಾದ ನಂದಿನಿಯು ಕಾಮಪರವಶಳಾಗಿ ಅವನ ಪತ್ನಿಯ ವೇಷವನ್ನು ಧರಿಸಿ ಅವನ ಹಾಸಿಗೆಯಲ್ಲಿ ಮಲಗಿಕೊಂಡಳು.

೩೧-೩೩. ಆ ಸಾಂಬನು ಅವಳು ತನ್ನ ಸತಿಯೆಂದೇ ಭಾವಿಸಿ ರತಿಕ್ರೀಡೆಯಲ್ಲಿ ನಿರತನಾದನು. ಆಗ ಪತ್ನಿಯ ರತವೆಂದು ನಂಬಲನರ್ಹವಾದ ಆ ನಂದಿನಿಯ ವಿವಿಧ ರತೋಪಚಾರಗಳಿಂದ ಸಾಂಬನು ಮನಸ್ಸಿನಲ್ಲಿ ಹೀಗೆ ವಿಚಾರಮಾಡಿದನು. ನನ್ನ ಪ್ರಾಣಕ್ಕಿಂತಲೂ ಪ್ರಿಯಳಾದ ಅಂಗರಾಜನ ತನಯೆಯು ಇವಳು ಮಾಡಿದಂತಹ ರತವನ್ನು ಅರಿಯುವುದಿಲ್ಲ. ವೇಶ್ಯೆಯೂ ಇಂತಹ ರತವನ್ನು ತಿಳಿಯುವುದಿಲ್ಲ.

೩೪. ಹೀಗೆ ವಿಚಾರಮಾಡಿದ ಬಳಿಕ ಅವನು ಅವಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕೂಡಲೆ ದೀಪವನ್ನು ತಂದು ನೋಡಿ ಅವಳು ನಂದಿನಿಯೆಂಬ ತನ್ನ ತಾಯಿಯೆಂದು ತಿಳಿದನು.

ತತಶ್ಚ ಗರ್ಹಯಾಮಾಸ ಧಿಕ್ಪಾಪೇ ಕಿಮಿದಂ ಕೃತಂ ।
ಗರ್ಹಿತಂ ಸರ್ವಲೋಕಾನಾಂ ನರಕಾರ್ತಿಪ್ರದಂ ತಥಾ ॥ ೩೫ ॥
ಸಾಪಿ ಲಜ್ಜಾಸಮೋಪೇತಾ ಮಹಾಭಯಸಮಾಕುಲಾ ।
ಪ್ರಣಷ್ಟಾ ತತ್ಕ್ಷಣಾದೇವ ಭಯೇನ ಮಹತಾನ್ವಿತಾ ॥ ೩೬ ॥
ಸಾಂಬೋಽಪಿ ಪ್ರಲಪನ್ನಾರ್ತೋ ನಿದ್ರಾಂ ಲೇಭೇ ಸ ವೈ ದ್ವಿಜಾಃ ।
ರಾತ್ರಿಶೇಷಮಭೂತ್ತಸ್ಯ ತದಾ ವರ್ಷಶತೋಪಮಂ ॥ ೩೭ ॥
ಅಥ ರಾತ್ರ್ಯಾಂ ವ್ಯತೀತಾಯಾಂ ಪ್ರೋದ್ಗತೇ ರವಿಮಂಡಲೇ ।
ದುಃಖೇನ ಮಹತಾ ಯುಕ್ತಃ ಪ್ರೋತ್ಥಿತಃ ಸ ಹರೇಃ ಸುತಃ ॥ ೩೮ ॥
ಆವಶ್ಯಕಮಪಿ ತ್ಯಕ್ತ್ವಾ ಕಂಚಿದ್ಬ್ರಾಹ್ಮಣಸತ್ತಮಂ ।
ಧರ್ಮಶಾಸ್ತ್ರವಿಧಾನಜ್ಞಂ ಸಮಾನೀಯಾಽಥ ಚಾಽಬ್ರವೀತ್ ।
ರಹಸ್ಯೇ ವಿನಯೋಪೇತಃ ಕೃತಾಂಜಲಿಪುಟಃ ಸ್ಥಿತಃ ॥ ೩೯ ॥

ಸಾಂಬ ಉವಾಚ:—

ಮಾತ್ರಾ ಸ್ವಸ್ರಾ ದುಹಿತ್ರಾ ವಾ ಸ್ವಯಂ ಸ್ಯಾದ್ಯದಿ ಮೋಹನಂ ॥ ೪೦ ॥
ಕಥಂ ಶುದ್ಧಿರ್ಭವೇತ್ತಸ್ಯ ಪರಮಾರ್ಥೇನ ಮೇ ವದ ।
ಧರ್ಮಶಾಸ್ತ್ರಾಣಿ ಸಂವೀಕ್ಷ್ಯ ಸರ್ವಾಣಿ ಚ ಯಥಾಕ್ರಮಂ ॥ ೪೧ ॥

---

೩೫. ಅವಳನ್ನು ಎಲೈ ಪಾಪಿಷ್ಠಳೆ! ಸಮಸ್ತ ಲೋಕನಿಂದ್ಯವೂ, ನರಕ ದುಃಖವನ್ನು ಕೊಡುವುದೂ ಆದ ಎಂತಹ ನಿಂದ್ಯವಾದ ಅಕಾರ್ಯವನ್ನೆಸಗಿದೆ? ಎಂದು ಹಳಿದನು.

೩೬. ಅವಳೂ ಲಜ್ಜಿತಳಾಗಿ ಅತ್ಯಂತ ಭಯದಿಂದ ಕೂಡಲೆ ಕಣ್ಮರೆಯಾದಳು.

೩೭. ದ್ವಿಜರೆ! ಸಾಂಬನೂ ದುಃಖದಿಂದ ಗೋಳಾಡುತ್ತ ನಿದ್ರಿಸಲಿಲ್ಲ. ಅವನಿಗೆ ಉಳಿದ ರಾತ್ರಿಭಾಗವು ನೂರು ವರ್ಷಗಳಂತಾಯಿತು.

೩೮. ಬಳಿಕ ರಾತ್ರಿ ಕಳೆದು ಸೂರ್ಯನು ಉದಯಿಸಲು ಕೃಷ್ಣತನಯನಾದ ಆ ಸಾಂಬನು ಅತ್ಯಂತ ದುಃಖದಿಂದ ಎದ್ದನು.

೩೯. ಅವನು ಆವಶ್ಯಕ ಕಾರ್ಯಗಳನ್ನು ತ್ಯಜಿಸಿ ಧರ್ಮಶಾಸ್ತ್ರ ವಿಧಿಯನ್ನರಿತ ಒಬ್ಬ ಬ್ರಾಹ್ಮಣನನ್ನು ಕರೆಯಿಸಿ ರಹಸ್ಯದಲ್ಲಿ ವಿನಯದಿಂದ ಕೈಮುಗಿದುಕೊಂಡು ಇಂತೆಂದನು.

೪೦–೪೧. ಸಾಂಬನು ಹೇಳುತ್ತಾನೆ:—ದ್ವಿಜನೆ! ತಾಯಿ, ಸಹೋದರಿ, ಮಗಳು ಇವರ ಸಂಗವನ್ನು ಮಾಡಿದ ನರನಿಗೆ ಶುದ್ಧಿಯುಂಟೆ? ನೀನು ಸಕಲ ಧರ್ಮಶಾಸ್ತ್ರಗಳನ್ನು ಕ್ರಮವಾಗಿ ಅವಲೋಕಿಸಿ ನಿಜತತ್ವವನ್ನು ನನಗೆ ಹೇಳು.

ಬ್ರಾಹ್ಮಣ ಉವಾಚ:—

ಪರನಾರ್ಯಾಃ ಕೃತೇ ವತ್ಸ ಪ್ರಾಯಶ್ಚಿತ್ತಂ ವಿನಿರ್ಮಿತಂ ।
ಧರ್ಮಗ್ರಂಥೇಷು ಸರ್ವೇಷು ವರ್ಣಾನಾಂ ಚ ಪೃಥಗ್ವಿಧಂ ॥ ೪೨ ॥
ಆಸಾಂ ಚ ತಿಸೃಣಾಂ ಚೈವ ತ್ರಯಾಣಾಂ ಪರಿಕೀರ್ತಿತಂ ।
ಏವಮೇವಂ ವಿನಿರ್ದಿಷ್ಟಂ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ೪೩ ॥
ಮಾತ್ರಾ ಸೋಪದಸಮಾಸಾದ್ಯ ಭಗಿನ್ಯಾವಾಽಥ ಯಾದವ ।
ದುಹಿತ್ರಾ ವಾ ಪ್ರಮಾದಾಚ್ಚ ಕಾರ್ಯಂ ಸಂಶೋಧನಂ ಬುಧೈಃ ।
ಶುದ್ಧ್ಯರ್ಥಂ ತಿಂಗಿನೀಮೇಕಾಂ ನಾನ್ಯಚ್ಚಾನಾಮ್ಯಹಂ ಯತಃ ॥ ೪೪ ॥
ಧರ್ಮಗ್ರಂಥೇಷು ಸರ್ವೇಷು ನಿರ್ಣಯೋಽಯಮುದಾಹೃತಃ ।
ಯೋ ಮಯಾ ತವ ಸಂದಿಷ್ಟೋ ನಾನ್ಯೋಽಸ್ತಿ ಯದುಪುಂಗವ ॥ ೪೫ ॥
ಅನ್ಯಥಾ ಯೋ ವದೇತ್ಸ್ಪಷ್ಟಃ ಪ್ರಾಯಶ್ಚಿತ್ತಂ ಚ ಧಂದಶಃ ।
ತಸ್ಯ ಪಾಪಸ್ಯ ಭಾಗೀಸ್ಯಾದ್ಯಥಾ ಕರ್ತಾ ತಥೈವ ಸಃ ॥ ೪೬ ॥

ಸಾಂಬ ಉವಾಚ:—

ತಿಂಗಿನ್ಯಾಃ ಕಿಂ ಸ್ವರೂಪಂ ಚ ಕಿಂ ಪ್ರಮಾಣಂ ದ್ವಿಜೋತ್ತಮ ।
ಸರ್ವಂ ವಿಸ್ತರತೋ ಬ್ರೂಹಿ ಮಮಾಸ್ಯತ್ರ ಪ್ರಯೋಜನಂ ॥ ೪೭ ॥

---

೪೨. ಬ್ರಾಹ್ಮಣನು ಹೇಳುತ್ತಾನೆ:—ಮಗು! ಸಮಸ್ತ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಸಕಲ ವರ್ಣದವರಿಗೂ ಪರಸ್ತ್ರೀಸಂಗ ವಿಷಯದಲ್ಲಿ ಬೇರೆ ಬೇರೆ ಪ್ರಾಯಶ್ಚಿತ್ತಗಳು ವಿಹಿತವಾಗಿವೆ.

೪೩. ಈ ತಾಯಿ ಮೊದಲಾದವರ ಸಂಗವಿಷಯದಲ್ಲಿ ಮುಂದೆ ಹೇಳುವಂತೆ ಪ್ರಾಯಶ್ಚಿತ್ತವು ವಿಹಿತವಾಗಿರುವುದು.

೪೪. ಸಾಂಬ! ತಾಯಿ, ಸಹೋದರಿ, ಮಗಳು ಇವರ ಸಂಗವನ್ನು ಅರಿಯದೆ ಮಾಡಿದವರಿಗೆ ಪಂಡಿತರು ತಿಂಗಿನಿಯೊಂದನ್ನು ಮಾತ್ರ ಪ್ರಾಯಶ್ಚಿತ್ತವಾಗಿ ಹೇಳಿರುವರು. ಬೇರೆ ಪ್ರಾಯಶ್ಚಿತ್ತವನ್ನು ನಾನರಿಯೆನು.

೪೫. ಸಮಸ್ತ ಧರ್ಮಶಾಸ್ತ್ರ ಗ್ರಂಥಗಳಲ್ಲಿಯೂ ನಾನು ನಿನಗೆ ಹೇಳಿದ ಪ್ರಾಯಶ್ಚಿತ್ತದ ಹೊರತು ಬೇರೇನೂ ವಿಹಿತವಾಗಿಲ್ಲ.

೪೬. ಇದಕ್ಕಿಂತ ಬೇರೆ ಪ್ರಾಯಶ್ಚಿತ್ತವನ್ನು ಸ್ವೇಚ್ಛೆಯಾಗಿ ಹೇಳುವವನು ಆ ಅಕಾರ್ಯವನ್ನು ಮಾಡಿದವನ ಪಾಪಕ್ಕೆ ಭಾಗಿಯಾಗುವನು.

೪೭. ಸಾಂಬನು ಹೇಳುತ್ತಾನೆ:—ಎಲೈ ಬ್ರಾಹ್ಮಣನೆ! ತಿಂಗಿನಿಯ ಸ್ವರೂಪವನ್ನೂ, ಮಿತಿಯನ್ನೂ ವಿಸ್ತಾರವಾಗಿ ನನಗೆ ಹೇಳು. ಅದರಿಂದ ನನಗೆ ಪ್ರಯೋಜನವಿದೆ.

ಬ್ರಾಹ್ಮಣ ಉವಾಚ :—

ಗೋವಾಟೇಚೂರ್ಣಮಾದಾಯ ಗರ್ತಾಂ ಭೃತ್ವಾ ಸ್ವಮಾನಜಾಂ ।
ಶಯನಂ ತತ್ರ ಕರ್ತವ್ಯಂ ಯಾವದ್ವಕ್ತ್ರೇಣ ಯಾದವ ॥ ೪೮ ॥
ಉಪರಿಷ್ಟಾಸ್ತಚ್ಚ ಚೂರ್ಣಂ ಧಾರ್ಯಂ ಗೋಪಾಟಸಂಭವಂ ।
ಯಾವದ್ವಕ್ತ್ರಪ್ರಮಾಣಂ ಚ ವರ್ಜಯಿತ್ವಾ ಸ್ವಮಾನನಂ ॥ ೪೯ ॥
ತತಃ ಪಾದಪ್ರದೇ ತು ಜ್ವಾಲಯೇದ್ಧವ್ಯವಾಹನಂ ।
ಯಥಾ ಶನೈಃಶನೈರ್ದಾಹಃ ಶರೀರಸ್ಯ ಪ್ರಜಾಯತೇ ॥ ೫೦ ॥
ನ ಚೈವ ಚಾಲಯೇದಂಗಂ ಕಥಂಚಿತ್ತತ್ರ ಸಂಸ್ಥಿತಃ ।
ನೈವಾಕ್ರಂದಂ ತಥಾ ಕುರ್ಯಾದ್ಧ್ಯಾಯೇದೇಕಂ ಜನಾರ್ದನಂ ॥ ೫೧ ॥
ತತೋ ಜೀವಿತನಾಶೇನ ಗಾತ್ರಶುದ್ಧಿಃ ಪ್ರಜಾಯತೇ ॥ ೫೨ ॥
ತಿಂಗಿನ್ಯಾ ಯತ್ಸ್ವರೂಪಂ ಚ ತನ್ಮಯಾ ಪರಿಕೀರ್ತಿತಂ ।
ಪ್ರಾಯಶ್ಚಿತ್ತಮಿದಂ ಸಮ್ಯಙ್ಮಹಾಪಾತಕನಾಶನಂ ॥ ೫೩ ॥
ತಚ್ಛ್ರುತ್ವಾ ವಚನಂ ತಸ್ಯ ಸಾಂಬೋ ಜಾಂಬವತೀಸುತಃ ।
ಹೃದಯೇ ನಿಶ್ಚಯಂ ಕೃತ್ವಾ ತಿಂಗಿನೀ ಸಾಧಕೋದ್ಭವಂ ॥ ೫೪ ॥
ತತಃ ಪ್ರೋವಾಚ ವಿಜನೇ ವಾಸುದೇವಂ ಘೃಣಾನ್ವಿತಃ ।
ತಾತಾಽಹಂ ವಿಪ್ರಲಬ್ಧಸ್ತು ನಂದಿನ್ಯಾ ತವ ಭಾರ್ಯಯಾ ॥ ೫೫ ॥
ಭಾರ್ಯಾಯಾ ರೂಪಮಾಧಾಯ ಪಾಪಯಾ ತಮಸಿ ಸ್ಥಿತೇ ।
ಸಾ ಮಯಾ ನಿಜ ಭಾರ್ಯೇಯಮಿತಿ ಮತ್ವಾ ನಿಷೇವಿತಾ ॥ ೫೬ ॥

---

೪೮—೪೯. ಬ್ರಾಹ್ಮಣನು ಹೇಳುತ್ತಾನೆ:—ತಿಂಗಿನೀ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವವನು ತನ್ನಷ್ಟು ಪರಿಮಾಣದ ಕುಣಿಯನ್ನು ತೋಡಿ ಅದರಲ್ಲಿ ಮಲಗಿಕೊಂಡು ಮುಖದವರೆಗೆ ಗೋಶಾಲೆಯ ಧೂಳಿನಿಂದ ಮುಚ್ಚಿಕೊಳ್ಳಬೇಕು.

೫೦—೫೧. ಬಳಿಕ ಕಾಲಿನ ಕಡೆಯಿಂದ ಬೆಂಕಿಯನ್ನು ಹೊತ್ತಿಸಿಕೊಳ್ಳಬೇಕು. ಮೆಲ್ಲಮೆಲ್ಲನೆ ಶರೀರವು ಸುಡುತ್ತಿರುವಾಗ ಅವಯವಗಳನ್ನು ಅಲ್ಲಾಡಿಸಬಾರದು. ಕಿರಿಚಿಕೊಳ್ಳದೆ ವಿಷ್ಣುವನ್ನು ಮಾತ್ರ ಧ್ಯಾನಿಸುತ್ತಿರಬೇಕು.

೫೨. ಅನಂತರ ಪ್ರಾಣ ನಾಶದಿಂದ ಶರೀರವು ಶುದ್ಧವಾಗುವುದು.

೫೩. ತಿಂಗಿನಿಯ ಸ್ವರೂಪವನ್ನು ನಾನು ನಿನಗೆ ಹೇಳಿದ್ದೇನೆ. ಈ ಪ್ರಾಯಶ್ಚಿತ್ತವು ಚೆನ್ನಾಗಿ ಪಾಪವನ್ನು ನಾಶಗೊಳಿಸುವುದು.

೫೪—೫೬. ಜಾಂಬವತೀತನಯನಾದ ಆ ಸಾಂಬನು ಆ ಬ್ರಾಹ್ಮಣನ ಆ ಮಾತನ್ನು ಕೇಳಿ ಮನಸ್ಸಿನಲ್ಲಿ ತಿಂಗಿನೀ ಪ್ರಾಯಶ್ಚಿತ್ತವನ್ನು ಮಾಡುವುದಾಗಿ ನಿಶ್ಚಯಿಸಿ ರಹಸ್ಯದಲ್ಲಿ ಕೃಷ್ಣನನ್ನು ಕುರಿತು ದೈನ್ಯದಿಂದ ಅಪ್ಪ! ನಿನ್ನ ಭಾರ್ಯೆಯಾದ ನಂದಿನಿಯು ನನ್ನ ಪತ್ನಿಯ ವೇಷವನ್ನು ಧರಿಸಿ ಕತ್ತಲೆಯಲ್ಲಿ ನನ್ನನ್ನು ವಂಚಿಸಿದಳು. ನಾನು ನನ್ನ ಪತ್ನಿಯೆಂದೇ ತಿಳಿದು ಅವಳ ಸಂಗವನ್ನು ಮಾಡಿದೆನು.

ತತಸ್ತು ಚೇಷ್ಟಿತೈರ್ಜ್ಞಾತ್ವಾ ಗರ್ಹಯಿತ್ವಾ ವಿಸರ್ಜಿತಾ ।
ತತಃ ಪ್ರಭೃತಿ ಗಾತ್ರೇ ಮೇ ಕುಷ್ಠವ್ಯಾಧಿರಯಂ ಸ್ಥಿತಃ ॥ ೫೭ ॥
ಮಯಾಽಥ ಧರ್ಮಶಾಸ್ತ್ರಜ್ಞಃ ಕಶ್ಚಿತ್ಪೃಷ್ಟೋ ದ್ವಿಜೋತ್ತಮಃ ।
ಪ್ರಾಯಶ್ಚಿತ್ತಂ ಯಥೋಕ್ತಂ ಮೇ ವದ ಮಾತೃನಿಷೇವಣಾತ್ ॥ ೫೮ ॥
ತೇನೋಕ್ತಂ ಸಾಧನಂ ಸಮ್ಯಕ್ತಿಂಗಿನ್ಯಾ ಮಮ ಶುದ್ಧಯೇ ।
ಸೋಽಹಂ ತಾಂ ಸಾಧಯಿಷ್ಯಾಮಿ ತಸ್ಯ ಪಾಪಸ್ಯ ಶುದ್ಧಯೇ ॥ ೫೯ ॥
ಅನುಜ್ಞಾಂ ದೇಹಿ ಮೇ ಶೀಘ್ರಂ ಕಾರ್ಯಂ ಯೇನ ಕರೋಮ್ಯಹಂ ।
ಕ್ಷಂತವ್ಯಂ ಚ ಮಯಾ ಬಾಲ್ಯೇ ಯತ್ಕಿಂಚಿತ್ಕುಕೃತಂ ಕೃತಂ ॥ ೬೦ ॥
ಮಮ ಮಾತಾ ಯಥಾ ದುಃಖಂ ನ ಕುರ್ಯಾತ್ತ್ವಂ ತಥಾ ಕುರು ॥ ೬೧ ॥
ತಚ್ಛ್ರುತ್ವಾ ವಚನಂ ತಸ್ಯ ವಜ್ರಪಾತೋಪಮಂ ಹರಿಃ ।
ಬಾಷ್ಪಪೂರ್ಣೇಕ್ಷಣೋ ದೀನಸ್ತತಃ ಪ್ರೋವಾಚ ಗದ್ಗದಂ ॥ ೬೨ ॥
ನ ತ್ವಯಾ ಕಾಮತಃ ಪುತ್ರ ಕೃತ್ಯಮೇತದನುಷ್ಠಿತಂ ।
ನ ಜ್ಞಾನೇನ ಕೃತಂ ಯಸ್ಮಾತ್ತಸ್ಮಾತ್ಸ್ವಲ್ಪಂ ಹಿ ಪಾತಕಂ ॥ ೬೩ ॥
ಜಾನತಾ ಯತ್ಕೃತಂ ಪಾಪಂ ತಚ್ಚೈವಾಕ್ಷಯತಾಂ ವ್ರಜೇತ್ ।
ನ ಕರೋತಿ ಮಹೀಪಾಲೋ ಯದಿ ತಸ್ಯ ವಿನಿಗ್ರಹಂ ॥ ೬೪ ॥

---

೫೭. ತರುವಾಯ ಅವಳ ಚೇಷ್ಟೆಗಳನ್ನು ನೋಡಿ ಅವಳು ನನ್ನ ಪತ್ನಿಯಲ್ಲ ವೆಂದು ತಿಳಿದು ನಿಂದಿಸಿ ಕಳುಹಿಸಿದೆನು. ಅದು ಮೊದಲ್ಗೊಂಡು ನನ್ನ ಶರೀರದಲ್ಲಿ ಈ ಕುಷ್ಠರೋಗವು ವ್ಯಾಪಿಸಿತು.

೫೮. ಬಳಿಕ ನಾನು ಧರ್ಮಶಾಸ್ತ್ರವನ್ನರಿತ ಒಬ್ಬ ಬ್ರಾಹ್ಮಣನನ್ನು ಮಾತೃ ಸಂಗದಿಂದ ಉಂಟಾದ ದೋಷಕ್ಕೆ ಪ್ರಾಯಶ್ಚಿತ್ತವನ್ನು ಹೇಳೆಂದು ಕೇಳಿದೆನು.

೫೯. ಅವನು ನನ್ನ ಶುದ್ಧಿಗೆ ತಿಂಗಿನಿಯು ಸರಿಯಾದ ಪ್ರಾಯಶ್ಚಿತ್ತವೆಂದು ಹೇಳಿದ್ದರಿಂದ ನಾನು ಆ ಪಾಪದ ಶುದ್ಧಿಗಾಗಿ ಅದನ್ನಾಚರಿಸುವೆನು.

೬೦. ಹೀಗೆ ಅನುಷ್ಠಾನ ಮಾಡುವುದಕ್ಕೆ ನನಗೆ ಅಪ್ಪಣೆಯನ್ನು ಕೊಡು. ನಾನು ಬಾಲ್ಯದಲ್ಲೆಸಗಿದ ಅಕಾರ್ಯವನ್ನು ಕ್ಷಮಿಸು.

೬೧. ನನ್ನ ತಾಯಿಯು ದುಃಖಿಸದಂತೆ ಮಾಡು.

೬೨. ಕೃಷ್ಣನು ಸಿಡಿಲು ಬಡಿದಂತಿರುವ ಅವನ ಆ ಮಾತನ್ನು ಕೇಳಿ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ಗದ್ಗದವಾದ ಸ್ವರದಿಂದ ಮಾತಾಡಿದನು.

೬೩. "ಮಗು! ನೀನು ಈ ಕೆಲಸವನ್ನು ತಿಳಿದು ಕಾಮದಿಂದ ಮಾಡಲಿಲ್ಲ ವಾದ್ದರಿಂದ ಇದರ ಪಾಪವು ಸ್ವಲ್ಪವಾಗಿರುವುದು.

೬೪. ತಿಳಿದು ಪಾಪ ಮಾಡಿದವನನ್ನು ದೊರೆಯು ನಿಗ್ರಹಿಸದಿದ್ದರೆ ಅವನ ಪಾಪವು ಅಕ್ಷಯವಾಗುವುದು.

ತಸ್ಮಾತ್ತೇ ಕೀರ್ತಯಿಷ್ಯಾಮಿ ಪ್ರಾಯಶ್ಚಿತ್ತಂ ವಿಶುದ್ಧಯೇ ।
ದಾನಂ ಚೈವ ಮಹಾಭಾಗ ಯೇನ ಕುಷ್ಠಂ ಪ್ರಣಶ್ಯತಿ ॥ ೬೫ ॥
ಉಕ್ತಾನಿ ಪ್ರತಿಷಿದ್ಧಾನಿ ಪುನಃ ಸಂಭಾವಿತಾನಿ ಚ ।
ಸಾಪೇಕ್ಷನಿರಪೇಕ್ಷಾಣಿ ಮುನಿವಾಕ್ಯಾನ್ಯಶೇಷತಃ ॥ ೬೬ ॥
ತದತ್ರ ವಿಷಯೇ ಪುತ್ರ ಮಮ ವಾಕ್ಯಂ ಸಮಾಚರ ।
ಭವಿಷ್ಯತಿ ಮಹಚ್ಛ್ರೇಯ ಇಹಲೋಕೇ ಪರತ್ರ ಚ ॥ ೬೭ ॥
ಹಾಟಕೇಶ್ವರಜೇ ಕ್ಷೇತ್ರೇ ವಿಶ್ವಾಮಿತ್ರ ಪ್ರತಿಷ್ಠಿತಃ ।
ಮಾರ್ತಂಡೋಽಸ್ತಿ ಸುವಿಖ್ಯಾತಃ ಸರ್ವಕುಷ್ಠವಿನಾಶಕಃ ॥ ೬೮ ॥
ಸೂರ್ಯವಾರೇಣ ಸಪ್ತಮ್ಯಾಂ ಸಂಪ್ರಾಪ್ತೇ ಮಾಸಿ ಮಾಧವೇ ।
ನಕ್ಷತ್ರೇ ಪಿತೃದೈವತ್ಯೇ ಶುಕ್ಲಪಕ್ಷೇ ಸಮಾಗತೇ ॥ ೬೯ ॥
ಭಾಸ್ಕರಸ್ಯೋದಯೇ ಪ್ರಾಪ್ತೇ ಶ್ರದ್ಧಾಪೂತೇನ ಚೇತಸಾ ।
ಶತಮಷ್ಟೋತ್ತರಂ ಯಾವತ್ಕುರುತೇ ಚ ಪ್ರದಕ್ಷಿಣಾಂ ॥ ೭೦ ॥
ಫಲೈಃ ಶ್ರೇಷ್ಠತಮೈಶ್ಚೈವ ತತ್ರಮಾಣೈಃ ಪೃಥಕ್ಪೃಥಕ್ ।
ತಸ್ಯ ಕುಷ್ಠೋ ವಿನಿರ್ಯಾತಿ ಸದ್ಯ ಏವ ನ ಸಂಶಯಃ ॥ ೭೧ ॥
ನೀರೋಗಃ ಕುರುತೇ ಯಸ್ತು ರವೇಸ್ತಸ್ಯ ಪ್ರದಕ್ಷಿಣಾಃ ।
ತಾವದ್ಯುಗಂ ಪುಮಾನೇಷ ಸೂರ್ಯಲೋಕೇ ಮಹೀಯತೇ ॥ ೭೨ ॥

---

೬೫. ಆದುದರಿಂದ ನಿನಗೆ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನೂ, ದಾನವನ್ನೂ ಹೇಳುತ್ತೇನೆ. ಅದರಿಂದ ನಿನ್ನ ಕುಷ್ಠರೋಗವು ಪರಿಹಾರವಾಗುವುದು.

೬೬. ಮುನಿವಾಕ್ಯಗಳೆಲ್ಲ ವಿಧಿ, ನಿಷೇಧ, ಸಂಭಾವನೆ, ಸಾಪೇಕ್ಷ, ನಿರಪೇಕ್ಷ ರೂಪಗಳಾಗಿರುವುವು.

೬೭. ಮಗು! ಆದುದರಿಂದ ನೀನು ಈ ವಿಷಯದಲ್ಲಿ ನನ್ನ ಮಾತಿನಂತೆ ಮಾಡು. ಇದರಿಂದ ಇಹಪರಲೋಕಗಳಲ್ಲಿ ಮಹಾ ಶ್ರೇಯಸ್ಸಾಗುವುದು.

೬೮. ಹಾಟಕೇಶ್ವರ ಕ್ಷೇತ್ರದಲ್ಲಿ ವಿಶ್ವಾಮಿತ್ರನು ಪ್ರತಿಷ್ಠೆ ಮಾಡಿರುವ ಅತ್ಯಂತ ಪ್ರಖ್ಯಾತನಾದ ಸಕಲ ಕುಷ್ಠರೋಗಗಳನ್ನು ನಿವಾರಿಸುವ ಸೂರ್ಯನಿದ್ದಾನೆ.

೬೯–೭೧. ವೈಶಾಖ ಶುಕ್ಲಪಕ್ಷ ಸಪ್ತಮೀ ಭಾನುವಾರದ ದಿನ ಮಘಾ ನಕ್ಷತ್ರದಲ್ಲಿ ಸೂರ್ಯೋದಯಕಾಲದಲ್ಲಿ ಶ್ರದ್ಧೆಯಿಂದ ಕೂಡಿದ ಮನಸ್ಸಿನಿಂದ ಉತ್ತಮವಾದ ಫಲಗಳನ್ನು ಹಿಡಿದುಕೊಂಡು ಪ್ರತ್ಯೇಕವಾಗಿ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಿದವನ ಕುಷ್ಠರೋಗವು ಕೂಡಲೆ ನಿಶ್ಚಯವಾಗಿಯೂ ಪರಿಹಾರವಾಗುವುದು.

೭೨. ರೋಗವಿಲ್ಲದ ನರನು ಆ ಸೂರ್ಯನಿಗೆ ಪ್ರದಕ್ಷಿಣೆಗೈದರೆ ಆ ಪ್ರದಕ್ಷಿಣೆಯ ಸಂಖ್ಯೆಯ ಯುಗಗಳಕಾಲ ಸೂರ್ಯಲೋಕದಲ್ಲಿ ಪೂಜ್ಯನಾಗುವನು.

ಸೂರ್ಯವಾರೇಣ ಯೋ ಮರ್ತ್ಯಸ್ತಸ್ಯ ಕೃತ್ವಾ ಪ್ರದಕ್ಷಿಣಾಂ ।
ನಮಸ್ಕರೋತಿ ಸದ್ಭಕ್ತ್ಯಾ ಸೋಽಪಿ ರೋಗೈಃ ಪ್ರಮುಚ್ಯತೇ ॥ ೭೩ ॥
ತಸ್ಮಾತ್ತ್ವಂ ಹಿ ಮಹಾರಾಜ ಸಮಾರಾಧಯ ಭಾಸ್ಕರಂ ।
ದೇವಂ ವೈ ವಿಧಿನಾನೇನ ಯೋ ಮಯೋಕ್ತೋಽಖಿಲಸ್ತವ ॥ ೭೪ ॥
ಅವಿಕಲ್ಪೇನ ಮನಸಾ ಸಮಾರಾಧಯ ಸತ್ವರಂ ।
ಮುಕ್ತ ರೋಗೋ ವಿಪಾಪ್ಮಾಥ ದಿವ್ಯದೇಹಮವಾಪ್ಸ್ಯಸಿ ॥ ೭೫ ॥
ಮಾ ಕುರುಷ್ವ ವಿಷಾದಂ ತ್ವಂ ಕುಷ್ಠವ್ಯಾಧಿ ಸಮುದ್ಭವಂ ।
ತಸ್ಮಿನ್ ಕ್ಷೇತ್ರೇ ಸ್ಥಿತೇ ದೇವೇ ಕುಹರಾಶ್ರಯ ಸಂಜ್ಞಿತೇ ॥ ೭೬ ॥
ಅಥ ತದ್ವಚನಂ ಶ್ರುತ್ವಾ ಪ್ರಸ್ಥಿತೋ ವಿಷ್ಣುನಂದನಃ ॥ ೭೭ ॥

ಸೂತ ಉವಾಚ:—

ಏತಚ್ಛ್ರುತ್ವಾ ವಚಸ್ತಸ್ಯ ದೇವದೇವಸ್ಯ ಚಕ್ರಿಣಃ ।
ಚಕಾರ ಗಮನೇ ಬುದ್ಧಿಂ ಯೋಗಂ ಸಾಂಬೋಽರ್ಬುದಂ ಪ್ರತಿ ॥ ೭೮ ॥
ತತಃ ಶುಭೇಽಹನಿ ಪ್ರಾಪ್ತೇ ಹಸ್ತ್ಯಶ್ವರಥಸಂಯುತಃ ।
ಪ್ರತಸ್ಥೇ ಸ ಸುತೋ ವಿಷ್ಣೋಃ ಸೇನಯಾ ಪರಿವಾರಿತಃ ॥ ೭೯ ॥
ಅನುಯಾತಃ ಸುದೂರಂ ಚ ಕೃಷ್ಣೇನಾಕ್ಲಿಷ್ಟ ಕರ್ಮಣಾ ।
ಬಾಷ್ಪಪೂರ್ಣೇಕ್ಷಣೇನೈವ ಸರ್ವಮಾತೃಜನೇನ ಚ ॥ ೮೦ ॥

---

೭೩. ಭಾನುವಾರದ ದಿನ ಆ ಸೂರ್ಯನಿಗೆ ಭಕ್ತಿಯಿಂದ ಪ್ರದಕ್ಷಿಣೆ ಮಾಡಿ ವಂದಿಸಿದವನು ರೋಗಮುಕ್ತನಾಗುವನು.

೭೪. ಆದುದರಿಂದ ನೀನೂ ನಾನು ಹೇಳಿದ ಈ ವಿಧಿಯಿಂದ ಆ ಸೂರ್ಯನನ್ನು ಆರಾಧಿಸು.

೭೫. ವಿಕಲ್ಪವಿಲ್ಲದ ಮನಸ್ಸಿನಿಂದ ಶೀಘ್ರವಾಗಿ ಅವನನ್ನು ಆರಾಧಿಸಿದರೆ ರೋಗವಿಲ್ಲದವನೂ, ಪಾಪರಹಿತನೂ ಆಗಿ ದಿವ್ಯ ದೇಹವನ್ನು ಪಡೆಯುವೆ.

೭೬. ಆ ಕ್ಷೇತ್ರದಲ್ಲಿ ಕುಹರವಾಸಿಯಾದ ಭಾಸ್ಕರನಿರಲು ನೀನು ಕುಷ್ಠ ವ್ಯಾಧಿಯಿಂದ ವಿಷಣ್ಣನಾಗಬೇಡ.''

೭೭. ಬಳಿಕ ಕೃಷ್ಣನ ಮಗನಾದ ಆ ಸಾಂಬನು ತಂದೆಯ ಮಾತನ್ನು ಕೇಳಿ ಹೊರಟನು.

೭೮. ಸೂತನು ಹೇಳುತ್ತಾನೆ:—ಸಾಂಬನು ಶ್ರೀಕೃಷ್ಣನ ಈ ಮಾತನ್ನು ಕೇಳಿ ಅರ್ಬುದಾಚಲಕ್ಕೆ ಹೋಗಲು ನಿಶ್ಚಯಿಸಿದನು.

೭೯. ಬಳಿಕ ಶುಭದಿನದಲ್ಲಿ ಆ ಸಾಂಬನು ಆನೆ ಮೊದಲಾದ ಸೈನ್ಯಗಳೊಡನೆ ಹೊರಟನು.

೮೦–೮೧. ಶುಭಕಾರಿಯಾದ ಕೃಷ್ಣನೂ, ಕಣ್ಣೀರನ್ನು ಸುರಿಸುತ್ತಿರುವ

ಬಲಭದ್ರೇಣ ವೀರೇಣ ಚಾರುದೇಷ್ಣೇನ ಧೀಮತಾ ।
ಯುಯುಧಾನಾನಿರುದ್ಧಾಭ್ಯಾಂ ಪ್ರದ್ಯುಮ್ನೇನ ಚ ಧೀಮತಾ ॥ ೮೧ ॥
ತತೋ ಜಾಂಬವತೀ ಪುತ್ರಂ ದೃಷ್ಟ್ವಾ ತೀರ್ಥೋನ್ಮುಖಂ ತದಾ ।
ಗಚ್ಛಮಾನಂ ಪ್ರಚಕ್ರೇಽಥ ಪ್ರಲಾಪಾನ್ ಕುರರೀ ಯಥಾ ॥ ೮೨ ॥
ಹಾ ಹತಾಽಸ್ಮಿ ವಿನಷ್ಟಾಽಸ್ಮಿ ಮಂದ ಭಾಗ್ಯಾಹ್ಯಭಾಗಿನೀ ।
ಏಕೋಽಪಿ ತನಯೋ ಯಸ್ಯಾ ಮಮಾಪ್ಯೇನಾಂ ದಶಾಂ ಗತಃ ॥ ೮೩ ॥
ಅಥ ತಾಂ ರುದತೀಂ ದೃಷ್ಟ್ವಾ ಪ್ರೋವಾಚ ಮಧುಸೂದನಃ ।
ಕಿಮಮಂಗಲಮೇತಸ್ಯ ಪ್ರಸ್ಥಿತಸ್ಯ ಕರಿಷ್ಯಸಿ ॥ ೮೪ ॥
ಬಾಷ್ಪಪೂರ್ಣೇಕ್ಷಣಾ ದೀನಾ ಮುಕ್ತಕೇಶೀ ವಿಶೇಷತಃ ।
ಏಷ ವ್ಯಾಧಿವಿನಿರ್ಮುಕ್ತಸ್ತೀರ್ಥಯಾತ್ರಾಫಲಾನ್ವಿತಃ ।
ಕುಷ್ಠವ್ಯಾಧಿಪರಿತ್ಯಕ್ತಃ ಪುನರೇಷ್ಯತಿ ತೇಽಂತಿಕಂ ॥ ೮೫ ॥
ಏತಸ್ಮಿನ್ನಂತರೇ ಯಾನಾದವತೀರ್ಯ ತ್ವರಾನ್ವಿತಃ ।
ಸಾಂಬೋಽಸೌ ಪ್ರಸ್ಥಿತಸ್ತತ್ರ ಯತ್ರ ಜಾಂಬವತೀ ಸ್ಥಿತಾ ॥ ೮೬ ॥
ಸ ತಾಂ ಪ್ರಣಮ್ಯ ಹೃಷ್ಟಾತ್ಮಾ ಕೃತಾಂಜಲಿಪುಟಃ ಸ್ಥಿತಃ ।
ಪ್ರಣಿಪತ್ಯ ವಿಹಸ್ಯೋಚ್ಚೈರ್ವಾಕ್ಯಮೇತದುವಾಚ ಹ ॥ ೮೭ ॥

---

ಸಕಲ ಮಾತೆಯರೂ, ವೀರನಾದ ಬಲರಾಮ, ಜ್ಞಾನಿಯಾದ ಚಾರುದೇಷ್ಣ, ಯುಯುಧಾನ, ಅನಿರುದ್ಧ, ಪ್ರದ್ಯುಮ್ನ ಇವರೂ ಬಹುದೂರ ಹಿಂಬಾಲಿಸಿದರು.

೮೨. ಬಳಿಕ ಜಾಂಬವತಿಯು ತೀರ್ಥಯಾತ್ರೆಗೆ ಹೋಗುತ್ತಿರುವ ಮಗನನ್ನು ನೋಡಿ ಕುರರಿಯಂತೆ ಗೋಳಾಡಿದಳು.

೮೩. "ನನ್ನ ಒಬ್ಬ ಮಗನೂ ಇಂತಹ ಸ್ಥಿತಿಯನ್ನು ಹೊಂದಿದ್ದರಿಂದ ಮಂದಭಾಗ್ಯಳಾದ ನಾನು ಹತಳಾದೆನು, ನಷ್ಟಳಾದೆನು."

೮೪–೮೫. ತರುವಾಯ ಅಳುತ್ತಿರುವ ಅವಳನ್ನು ನೋಡಿ ಕೃಷ್ಣನು "ಜಾಂಬವತಿ! ಕಣ್ಣೀರನ್ನು ಸುರಿಸುತ್ತ, ತಲೆಕೂದಲುಗಳನ್ನು ಬಿಡಿಸಿಕೊಂಡು ನೀನು ಪ್ರಯಾಣ ಮಾಡುತ್ತಿರುವ ಸಾಂಬನಿಗೆ ಏಕೆ ಅಮಂಗಳವನ್ನುಂಟು ಮಾಡುವೆ? ಇವನು ತೀರ್ಥಯಾತ್ರೆಯಿಂದ ಕುಷ್ಠವ್ಯಾಧಿಮುಕ್ತನಾಗಿ ಮರಳಿ ನಿನ್ನೆಡೆಗೆ ಬರುವನು" ಎಂದನು.

೮೬. ಈ ಸಮಯದಲ್ಲಿ ಸಾಂಬನು ವಾಹನದಿಂದ ಇಳಿದು ತ್ವರೆಯಿಂದ ಜಾಂಬವತಿಯ ಹತ್ತಿರ ಹೋದನು.

೮೭. ಅವನು ಸಂತೋಷದಿಂದ ಅವಳಿಗೆ ವಂದಿಸಿ ಕೈಮುಗಿದುಕೊಂಡು ಗಟ್ಟಿಯಾಗಿ ಇಂತೆಂದನು.

ಮಾ ತ್ವಂ ಮಾತರ್ವೃಥಾ ದುಃಖಮಸ್ಮದರ್ಥೇ ಕರಿಷ್ಯಸಿ ।
ಆಗಮಿಷ್ಯಾಮ್ಯಹಂ ಶೀಘ್ರಂ ತೀರ್ಥಯಾತ್ರಾಂ ವಿಧಾಯ ವೈ ॥ ೮೮ ॥

ಜಾಂಬವತ್ಯುವಾಚ :—

ರಕ್ಷಂತು ತ್ವಾಂ ವನೇ ವತ್ಸ ಸರ್ವಾಸ್ತಾ ವನದೇವತಾಃ ।
ಶ್ವಾಪದೇಭ್ಯಃ ಪಿಶಾಚೇಭ್ಯೋ ದುಷ್ಟೇಭ್ಯಃ ಪುತ್ರ ಸರ್ವತಃ ॥ ೮೯ ॥
ಶಿರಸ್ತೇ ಪಾತು ಗೋವಿಂದಃ ಕಂಠಂ ಚ ಮಧುಸೂದನಃ ।
ಬಾಹುದೇಶಂ ಹೃಷೀಕೇಶೋ ಹೃದಯಂ ದೈತ್ಯನಾಶನಃ ॥ ೯೦ ॥
ಜಠರಂ ಪುಂಡರೀಕಾಕ್ಷಃ ಕಟಿಂಪಾತು ಗದಾಧರಃ ।
ಜಾನೂರುಯುಗಲಂ ಕೃಷ್ಣಃ ಪಾದೌಚ ಧರಣೀಧರಃ ॥ ೯೧ ॥
ಏವಂ ಸಂಸ್ಪೃಶ್ಯ ಹಸ್ತೇನ ನಿಜೇನಾಂಗಾನಿ ತಸ್ಯ ಸಾ ।
ಸಮಾಲಿಂಗ್ಯ ಸಮಾಘ್ರಾಯ ಮೂರ್ಧದೇಶೇ ಮುಹುರ್ಮುಹುಃ ॥ ೯೨ ॥
ಪ್ರೇಷಯಾಮಾಸ ತಂ ಪುತ್ರಂ ಕೃತರಕ್ಷಂ ಯಶಸ್ವಿನೀ ।
ಸಾ ಸರ್ವಾಂತಃಪುರೀಯುಕ್ತಾ ನಿವೃತ್ತಾ ತದನಂತರಂ ॥ ೯೩ ॥
ಅಶ್ರುಪೂರ್ಣೇಕ್ಷಣಾ ದೀನಾ ನಿಃಶ್ವಸಂತೀ ಯಥೋರಗೀ ।
ತಥಾ ಚ ಭಗವಾನ್ ವಿಷ್ಣುರ್ಯಾದವೈಃ ಸಕಲೈಃ ಸಹ ॥ ೯೪ ॥
ಪ್ರವಿಷ್ಟೋ ದ್ವಾರಕಾಪುರ್ಯಾಂ ಸಾಂಬಂ ಪ್ರೇಷ್ಯ ತತಃ ಪರಂ ।
ಅಶ್ರು ಪೂರ್ಣೇಕ್ಷಣೋ ದೀನೋ ಬಲಭದ್ರಪುರಸ್ಸರಃ ॥ ೯೫ ॥

---

೮೮. "ಅಮ್ಮ! ನೀನು ನನಗಾಗಿ ವ್ಯರ್ಥವಾಗಿ ದುಃಖಪಡಬೇಡ. ನಾನು ತೀರ್ಥಯಾತ್ರೆಯನ್ನು ಮಾಡಿಕೊಂಡು ಶೀಘ್ರವಾಗಿ ಬರುವೆನು."

೮೯. ಜಾಂಬವತಿಯು ಹೇಳುತ್ತಾಳೆ:—ಮಗು! ಕಾಡಿನಲ್ಲಿ ನಿನ್ನನ್ನು ಸಮಸ್ತ ವನದೇವತೆಗಳು ಹಿಂಸ್ರಜಂತುಗಳಿಂದಲೂ, ದುಷ್ಟ ಪಿಶಾಚಗಳಿಂದಲೂ ರಕ್ಷಿಸಲಿ.

೯೦–೯೧. ನಿನ್ನ ತಲೆಯನ್ನು ಗೋವಿಂದನೂ, ಕಂಠವನ್ನು ಮಧುಸೂದನನೂ, ತೋಳುಗಳನ್ನು ಹೃಷೀಕೇಶನೂ, ಹೃದಯವನ್ನು ದೈತ್ಯನಾಶಕನೂ, ಹೊಟ್ಟೆಯನ್ನು ಪುಂಡರೀಕಾಕ್ಷನೂ, ಸೊಂಟವನ್ನು ಗದಾಧರನೂ, ಎರಡು ಮೊಣ ಕಾಲುಗಳನ್ನೂ ಊರುಗಳನ್ನೂ ಕೃಷ್ಣನೂ, ಚರಣಗಳನ್ನು ಧರಣೀಧರನೂ ಕಾಪಾಡಲಿ.

೯೨–೧೦೮. ಅವಳು ಹೀಗೆ ತನ್ನ ಕೈಯಿಂದ ಅವನ ಅಂಗಗಳನ್ನು ಸ್ಪರ್ಶಮಾಡಿ ಆಲಿಂಗಿಸಿ ತಲೆಯಲ್ಲಿ ಬಾರಿಬಾರಿಗೂ ಆಘ್ರಾಣಿಸಿ ರಕ್ಷೆಯನ್ನು ಮಾಡಿ ಕಳುಹಿಸಿ ತಾನು ಕಣ್ಣೀರನ್ನು ಸುರಿಸುತ್ತ ಹಾವಿನಂತೆ ಬುಸುಗುಟ್ಟುತ್ತ ಸಮಸ್ತ ಅಂತಃಪುರದ ಸ್ತ್ರೀಯರೊಡನೆ ಹಿಂದಿರುಗಿದಳು. ಹಾಗೆಯೇ ಕೃಷ್ಣನೂ

ಪುತ್ರೈಃ ಪೌತ್ರೈಸ್ತಥಾ ಮಿತ್ರೈರ್ಬಾಂಧವೈರಪರೈರಪಿ ।
ದ್ವಾರಕಾಯಾ ವಿನಿಷ್ಕ್ರಮ್ಯ ಸಾಂಬೋಽಪಿ ದ್ವಿಜಸತ್ತಮಾಃ ॥ ೯೬ ॥
ಸಂಪ್ರಾಪ್ತಶ್ಚ ಕ್ರಮೇಣಾಽಥ ಸಿಂಧುಸಾಗರಸಂಗಮೇ ।
ಯತ್ರ ಯೋಗೀಶ್ವರಃ ಸಾಕ್ಷಾದಂಬರೀಷಪ್ರತಿಷ್ಠಿತಃ ॥ ೯೭ ॥
ಅದ್ಯಾಽಪಿ ತಿಷ್ಠತೇ ವಿಷ್ಣುರ್ಜಂತೂನಾಂ ಪಾಪನಾಶನಃ ।
ತತ್ರ ಸ್ನಾತ್ವಾ ಸಮಭ್ಯರ್ಚ್ಯ ದೇವಂ ಯೋಗೀಶ್ವರಂ ತತಃ ॥ ೯೮ ॥
ದದೌ ದಾನಾನಿ ವಿಪ್ರೇಭ್ಯೋ ನಾನಾರೂಪಾಣಿ ಶಕ್ತಿತಃ ।
ದೀನಾಂಧ ಕೃಪಣೇಭ್ಯಶ್ಚ ತಥೈವಾಽನ್ಯೇಭ್ಯ ಏವ ಚ ॥ ೯೯ ॥
ಯಾನಾನಿ ವಸ್ತ್ರರತ್ನಾನಿ ಯಥ್ಯಚ್ಚ ಯೇನ ವಾಂಛಿತಂ ।
ಸ ತ್ರಿರಾತ್ರಂ ಹರೇಃ ಪುತ್ರಃ ಸ್ಥಿತ್ವಾ ತತ್ರ ಸಮಾಹಿತಃ ॥ ೧೦೦ ॥
ಚ್ಯವನಸ್ಯಾಶ್ರಮಂ ಪುಣ್ಯಂ ಜಗಾಮಾಽಥ ತತಃ ಪರಂ ।
ಯತ್ರ ಸಂತಿಷ್ಠತೇ ವಿಷ್ಣುಶ್ಚ್ಯವನೇನ ಪ್ರತಿಷ್ಠಿತಃ ॥ ೧೦೧ ॥
ಸಿಂಧೋಸ್ತಟೇ ಚ ಪುಣ್ಯೇಽಚ ಸರ್ವಪಾತಕನಾಶನಃ ।
ತತ್ರಾಽಪಿ ವಿಪ್ರಮುಖ್ಯೇಭ್ಯೋ ದದೌ ದಾನಾನಿ ಯಾದವಃ ॥ ೧೦೨ ॥
ವಾಂಛಿತಾನಿ ಯಥೋಕ್ತಾನಿ ಶಾಸ್ತ್ರದೃಷ್ಟೇನ ಕರ್ಮಣಾ ।
ತತ್ರಾಽಪಿ ಸಂಯುತಃ ಸಾಂಬಃ ಸ ಸ್ಥಿತ್ವಾ ಶ್ರದ್ಧಯಾನ್ವಿತಃ ॥ ೧೦೩ ॥
ತ್ರಿರಾತ್ರಂ ಪ್ರಜಗಾಮಾಽಥ ಸ್ನಾತ್ವಾ ಸಿಂಧೂದಕೇ ಶುಭೇ ।
ತತಸ್ತು ಪುಷ್ಕರಾದೀನಿ ಸಮುದ್ದಿಶ್ಯ ಶನೈಃ ಶನೈಃ ॥ ೧೦೪ ॥

---

ಸಾಂಬನನ್ನು ಕಳುಹಿಸಿ ಸಮಸ್ತ ಯಾದವರು, ಪುತ್ರ, ಪೌತ್ರ, ಮಿತ್ರರು, ಬಾಂಧವರು, ಬಲರಾಮ ಇವರೊಡನೆ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ದ್ವಾರಕೆಯನ್ನು ಪ್ರವೇಶಿಸಿದನು. ಸಾಂಬನೂ ದ್ವಾರಕೆಯಿಂದ ಹೊರಟು ಕ್ರಮವಾಗಿ ಸಿಂಧುಸಾಗರ ಸಂಗಮವನ್ನು ಸೇರಿ ಅಲ್ಲಿ ಮಿಂದು ಅಂಬರೀಷನು ಪ್ರತಿಷ್ಠೆ ಮಾಡಿದ, ಪ್ರಾಣಿಗಳ ಪಾಪವನ್ನು ಪರಿಹರಿಸುವ ಯೋಗೀಶ್ವರನಾದ ವಿಷ್ಣುವನ್ನು ಪೂಜಿಸಿ ಬ್ರಾಹ್ಮಣರಿಗೆ ನಾನಾವಿಧ ದಾನಗಳನ್ನಿತ್ತು ದೀನ, ಅಂಧ, ಕೃಪಣರಿಗೂ, ಇತರರಿಗೂ ಶಕ್ತ್ಯನುಸಾರ ಅವರ ಇಷ್ಟದಂತೆ ವಾಹನ, ವಸ್ತ್ರಗಳನ್ನು ಕೊಟ್ಟು ಮೂರು ರಾತ್ರಿ ಅಲ್ಲಿ ವಾಸಿಸಿ ಸಮುದ್ರದ ತೀರದಲ್ಲಿ ಚ್ಯವನನು ಪ್ರತಿಷ್ಠೆಮಾಡಿರುವ ವಿಷ್ಣುವು ನೆಲಸಿರುವ ಚ್ಯವನಾಶ್ರಮಕ್ಕೆ ಹೋದನು. ಅಲ್ಲಿಯೂ ಶಾಸ್ತ್ರೋಕ್ತರೀತಿಯಿಂದ ಶ್ರೇಷ್ಠರಾದ ಬ್ರಾಹ್ಮಣರಿಗೆ ಅವರಿಗಿಷ್ಟವಾದ ದಾನಗಳನ್ನು ಕೊಟ್ಟು ಮೂರು ರಾತ್ರಿ ನಿಯಮ ಶ್ರದ್ಧೆಗಳಿಂದ ವಾಸಮಾಡಿ ಸಮುದ್ರಜಲದಲ್ಲಿ ಮಿಂದು ಹಗಲು ರಾತ್ರಿ ಪುಷ್ಕರವಾಸಿಯನ್ನು ಧ್ಯಾನಿಸುತ್ತ ಆ ಪುಷ್ಕರ ತೀರ್ಥವನ್ನುದ್ದೇಶಿಸಿ ಮೆಲ್ಲಮೆಲ್ಲನೆ ಹೋದನು. ಬಳಿಕ ಆತನು ಆ ಪುಷ್ಕರ

ಪುಷ್ಕರಾವಾಸಿನಂ ದೇವಂ ಧ್ಯಾಯಮಾನೋಽಪ್ಯಹರ್ನಿಶಂ ।
ತತಸ್ತು ಪುಷ್ಕರಂ ಪ್ರಾಪ್ಯ ಕ್ರಮೇಣ ಯದುಸತ್ತಮಃ ॥ ೧೦೫ ॥
ಪುಣ್ಯೇ ಕುಂಡಜಲೇ ಸ್ನಾತಃ ಸಂತರ್ಪ್ಯ ಪಿತೃದೇವತಾಃ ।
ಸಪ್ತಮ್ಯಾಂ ಸೂರ್ಯವಾರೇಣ ಗೃಹೀತ್ವಾಽಥ ಫಲಾನಿ ಚ ।
ಗತಃ ಸಂತಿಷ್ಠತೇ ಯತ್ರ ದೇವೋ ವೈ ವಿಷ್ಣುಸೂಚಿತಃ ॥ ೧೦೬ ॥
ಪೂಜಯಿತ್ವಾ ತತೋ ಭಕ್ತ್ಯಾ ದೇವಂ ಕುಹರವಾಸಿನಂ ।
ವಸ್ತ್ರಾನುಲೇಪನೈರ್ಧೂಪೈರ್ನೈವೇದ್ಯೈಸ್ತು ಪೃಥಗ್ವಿಧೈಃ ॥ ೧೦೭ ॥
ತತಃ ಪ್ರದಕ್ಷಿಣಾಂಶ್ಚಕ್ರೇ ಫಲಹಸ್ತಃ ಶನೈಃ ಶನೈಃ ।
ಪ್ರಪಠನ್ ಸೂರ್ಯಗಾಯತ್ರೀಂ ಶ್ರದ್ಧಯಾ ಪರಯಾಯುತಃ ॥ ೧೦೮ ॥
ಯಥಾ ಯಥಾ ಕರೋತ್ಯೇಷ ರವೇಸ್ತಸ್ಯ ಪ್ರದಕ್ಷಿಣಾಂ ।
ತಥಾ ತಥಾ ಚ ಸಂಯಾತಿ ತಸ್ಯ ಕುಷ್ಠಂ ದ್ವಿಜೋತ್ತಮಾಃ ॥ ೧೦೯ ॥
ತತ್ರ ಕ್ಷಣೇಽಭವತ್ತಸ್ಯ ಚಿತ್ತೇ ಸಾಂಬಸ್ಯ ಧೀಮತಃ ।
ಮುಕ್ತೋಽಹಂ ಕುಷ್ಠರೋಗೇಣ ನಿರ್ವಿಕಲ್ಪಂ ದ್ವಿಜೋತ್ತಮಾಃ ॥ ೧೧೦ ॥
ತತಶ್ಚ ಸಹಿತಂ ತೇನ ಯತ್ಕಿಂಚಿತ್ತತ್ರ ಚಾಗತಂ ।
ಹಸ್ತ್ಯಶ್ವರಥ ರತ್ನಾಢ್ಯಂ ತತ್ಸರ್ವಂ ಭಕ್ತಿಪೂರ್ವಕಂ ॥ ೧೧೧ ॥
ನಾಗರಾಣಾಂ ದದೌ ಸರ್ವಂ ತಥಾಽನ್ಯದ್ಗ್ರಾಮಪಂಚಕಂ ।
ಸಾಂಬಾದಿತ್ಯಂ ಪ್ರತಿಷ್ಠಾಪ್ಯ ತತಃ ಸಂಪ್ರಸ್ಥಿತೋ ಗೃಹಂ ॥ ೧೧೨ ॥

---

ಕ್ಷೇತ್ರವನ್ನು ಸೇರಿ ಸಪ್ತಮಿ ಭಾನುವಾರದ ದಿನ ಅಲ್ಲಿರುವ ಪುಣ್ಯಕರವಾದ ಕುಂಡದಲ್ಲಿ ಮಿಂದು ಪಿತೃತರ್ಪಣ ಮಾಡಿ ಕೃಷ್ಣನು ಹೇಳಿದ ಭಾಸ್ಕರನೆಡೆಗೆ ಫಲವನ್ನು ತೆಗೆದುಕೊಂಡು ಹೋಗಿ ಕುಹರವಾಸಿಯಾದ ಅವನನ್ನು ಭಕ್ತಿಯಿಂದ ವಸ್ತ್ರ, ಗಂಧ, ಧೂಪ, ನೈವೇದ್ಯಗಳಿಂದ ಆರಾಧಿಸಿ ಕೈಯಲ್ಲಿ ಫಲವನ್ನು ಹಿಡಿದು ಕೊಂಡು ಸೂರ್ಯಗಾಯತ್ರಿಯನ್ನು ಅತಿ ಶ್ರದ್ಧೆಯಿಂದ ಪಠಿಸುತ್ತ ಮೆಲ್ಲಮೆಲ್ಲನೆ ಪ್ರದಕ್ಷಿಣೆಗೈದನು.

೧೦೯. ಈ ಸಾಂಬನು ಹೇಗೆ ಹೇಗೆ ಸೂರ್ಯನಿಗೆ ಪ್ರದಕ್ಷಿಣೆ ಮಾಡುತ್ತಿದ್ದನೊ, ಹಾಗೆ ಹಾಗೆ ಅವನ ಕುಷ್ಠರೋಗವೂ ತೊಲಗುತ್ತಿದ್ದಿತು.

೧೧೦. ಆಗ ಬುದ್ಧಿವಂತನಾದ ಆ ಸಾಂಬನು ಮನಸ್ಸಿನಲ್ಲಿ ತನ್ನ ಕುಷ್ಠರೋಗವು ನಿಜವಾಗಿಯೂ ನೀಗಿತೆಂದು ಆಲೋಚಿಸಿದನು.

೧೧೧–೧೧೨. ಬಳಿಕ ಅವನು ತನ್ನೊಡನೆ ತಂದಿರುವ ಆನೆ, ಕುದುರೆ, ರಥ, ರತ್ನ ಮೊದಲಾದುವುಗಳನ್ನೂ, ಐದು ಗ್ರಾಮಗಳನ್ನೂ ನಾಗರರಿಗೆ ಕೊಟ್ಟನು. ಅನಂತರ ಸಾಂಬಾದಿತ್ಯನನ್ನು ಪ್ರತಿಷ್ಠೆ ಮಾಡಿ ಸೂರ್ಯವಿಪ್ರರಿಗೆ ಉಳಿದ ವಸ್ತು

ಕಿಂಚಿದುರ್ವರಿತಂ ಯಚ್ಚ ತತ್ಸರ್ವಂ ಭಕ್ತಿಸಂಯುತಂ ।
ಪ್ರದದೌ ಸೂರ್ಯವಿಪ್ರೇಭ್ಯಃ ಪೂಜಯಿತ್ವಾ ದಿವಾಕರಂ ॥ ೧೧೩ ॥
ಅಷ್ಟೌ ವಾಜಿಸಹಸ್ರಾಣಿ ನಾಗಾನಾಂ ಚ ಶತತ್ರಯಂ ।
ರಥಾನಾಂ ಷಟ್ಛತಾನ್ಯೇವ ಅಶ್ವೈರ್ಯುಕ್ತಾನಿ ವಾಜಿಭಿಃ ।
ಅನಂತಾನಿ ಚ ರತ್ನಾನಿ ದತ್ವಾ ಸಾಂಬೋ ಗೃಹಂ ಗತಃ ॥ ೧೧೪ ॥
ಯ ಏತತ್ಪಠತೇ ಭಕ್ತ್ಯಾ ಸಾಂಬಾಖ್ಯಾನಮುತ್ತಮಂ ।
ಶೃಣೋತಿ ವಾಽನ್ವಯೇ ತಸ್ಯ ನ ಕುಷ್ಠಂ ಸಂಪ್ರಜಾಯತೇ ॥ ೧೧೫ ॥

ಸೂತ ಉವಾಚ:—

ಏತದ್ವಃ ಸರ್ವಮಾಖ್ಯಾತಂ ವಿಶ್ವಾಮಿತ್ರೀಯಮುತ್ತಮಂ ।
ಚತುರ್ಥಂ ಚ ಪುಣ್ಯತೀರ್ಥಂ ಸ್ತ್ರೀಣಾಂ ಚೈವ ಶುಭಾವಹಂ ॥ ೧೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಾಂಬಾದಿತ್ಯಪ್ರಭಾವವರ್ಣನಂ" ನಾಮ
ತ್ರಯೋದಶೋತ್ತರದ್ವಿಶತತಮೋಽಧ್ಯಾಯಃ

---

ಗಳನ್ನೂ, ಎಂಟುಸಾವಿರ ಕುದುರೆಗಳನ್ನೂ, ಮುನ್ನೂರು ಆನೆಗಳನ್ನೂ, ಅಶ್ವಗಳನ್ನು ಕಟ್ಟಿರುವ ಆರುನೂರು ರಥಗಳನ್ನೂ, ಅಪರಿಮಿತ ರತ್ನಗಳನ್ನೂ ಕೊಟ್ಟು ಮನೆಗೆ ಹೋದನು.

೧೧೫. ಈ ಉತ್ತಮವಾದ ಸಾಂಬಾಖ್ಯಾನವನ್ನು ಭಕ್ತಿಯಿಂದ ಪಠಿಸುವವನ ಅಥವಾ ಕೇಳುವವನ ವಂಶದಲ್ಲಿ ಕುಷ್ಠರೋಗವುಂಟಾಗುವುದಿಲ್ಲ.

೧೧೬. ಸೂತನು ಹೇಳುತ್ತಾನೆ:—ದ್ವಿಜರೆ! ನಿಮಗೆ ಸ್ತ್ರೀಯರಿಗೆ ಶುಭವನ್ನುಂಟುಮಾಡುವ ವಿಶ್ವಾಮಿತ್ರನ ನಾಲ್ಕನೆಯ ಈ ಪುಣ್ಯತೀರ್ಥವನ್ನು ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಾಂಬಾದಿತ್ಯಪ್ರಭಾವವರ್ಣನ"ವೆಂಬ
ಇನ್ನೂರಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋತ್ತರದ್ವಿಶತತಮೋಽಧ್ಯಾಯಃ

### ಗಣಪತಿಪೂಜಾವಿಧಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯೋಽಪಿ ಚ ತತ್ರಾಽಸ್ತಿ ವಿಶ್ವಾಮಿತ್ರಪ್ರತಿಷ್ಠಿತಃ ।
ಗಣನಾಥೋ ದ್ವಿಜಶ್ರೇಷ್ಠಾಃ ಸರ್ವಸಿದ್ಧಿಪ್ರದೋ ನೃಣಾಂ ॥ ೧ ॥
ಮಾಘಮಾಸೇ ಚತುರ್ಥ್ಯಾಂ ಚ ಶುಕ್ಲಾಯಾಂ ಪೂಜಯೇತ್ತು ಯಃ ।
ಸ ಚ ಸಂವತ್ಸರಂ ಯಾವತ್ಸರ್ವೈರ್ವಿಘ್ನೈರ್ವಿಮುಚ್ಯತೇ ॥ ೨ ॥

ಋಷಯ ಊಚುಃ :—

ಗಣನಾಥಸ್ಯ ಚೋತ್ಪತ್ತಿಂ ಸಾಂಪ್ರತಂ ಸೂತ ನೋ ವದ ।
ಕಥಮೇಷ ಸಮುತ್ಪನ್ನಃ ಕಿಂ ಮಾಹಾತ್ಮ್ಯಃ ಪ್ರಕೀರ್ತಿತಃ ॥ ೩ ॥

ಸೂತ ಉವಾಚ :—

ಏಷ ಚೋತ್ಪಾದಿತೋ ಗೌರ್ಯಾ ನಿಜಾಂಗಮಲತಃ ಸ್ವಯಂ ।
ಕ್ರೀಡಾರ್ಥಂ ಮಾನುಷೈರಂಗೈರ್ಮಾತಂಗಾನನಶೋಭಿತಃ ॥ ೪ ॥
ಚತುರ್ಹಸ್ತಸಮೋಪೇತ ಆಖುವಾಹನಗಸ್ತಥಾ ।
ಕುಠಾರಹಸ್ತಶ್ಚ ತಥಾ ಮೋದಕಾಽಶನತೋಷಕೃತ್ ॥ ೫ ॥

---

## ಕನ್ನಡದ ಅನುವಾದ

### ಗಣಪತಿಪೂಜಾವಿಧಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಕ್ಷೇತ್ರದಲ್ಲಿ ವಿಶ್ವಾಮಿತ್ರನು ಪ್ರತಿಷ್ಠೆ ಮಾಡಿರುವ ಮನುಷ್ಯರಿಗೆ ಸಕಲ ಸಿದ್ಧಿಯನ್ನೀಯುವ ಗಣಪತಿಯು ನೆಲಸಿರುವನು.

೨. ಮಾಘ ಶುಕ್ಲ ಚತುರ್ಥೀ ದಿನ ಅವನನ್ನು ಪೂಜಿಸಿದವನು ಒಂದು ವರ್ಷ ಕಾಲ ವಿಘ್ನಗಳಿಂದ ಮುಕ್ತನಾಗುವನು.

೩. ಋಷಿಗಳು ಹೇಳುತ್ತಾರೆ:— ಸೂತ! ಈಗ ನಮಗೆ ಗಣನಾಥನ ಉತ್ಪತ್ತಿಯ ಕ್ರಮವನ್ನೂ, ಇವನು ಹೇಗೆ ಹುಟ್ಟಿದನು? ಇವನು ಎಂತಹ ಮಾಹಾತ್ಮ್ಯವುಳ್ಳವನು ಎಂಬುದನ್ನೂ ಹೇಳು.

೪–೭. ಸೂತನು ಹೇಳುತ್ತಾನೆ:—ಮನುಷ್ಯಶರೀರವುಳ್ಳವನೂ, ಆನೆಯ ಮುಖವುಳ್ಳವನೂ, ನಾಲ್ಕು ಕೈಗಳುಳ್ಳವನೂ, ಮೂಷಕವಾಹನನೂ, ಕುಠಾರಪಾಣಿಯೂ, ಮೋದಕಗಳಿಂದ ಸಂತೋಷಗೊಳ್ಳುವವನೂ, ಭಕ್ತರಿಗೆ ಸಮಸ್ತ ಸಿದ್ಧಿಯನ್ನೀಯುವವನೂ ಆದ ಇವನನ್ನು ಗೌರಿಯು ಕ್ರೀಡೆಗಾಗಿ ತನ್ನ ಶರೀರದ

ಸರ್ವಸಿದ್ಧಿಪ್ರದೋ ಲೋಕೇ ಭಕ್ತಾನಾಂ ಚ ವಿಶೇಷತಃ ।
ಏಷ ಪೂರ್ವಂ ಪ್ರಭೋಃ ಕಾರ್ಯೇ ಸಂಗ್ರಾಮೇ ತಾರಕಾಮಯೇ ॥ ೬ ॥
ಸಂಗ್ರಾಮಮಕರೋದ್ರೌದ್ರಂ ನ ಕೃತಂ ಯಚ್ಚ ಕೇನಚಿತ್ ।
ನಿಹತಾ ದಾನವಾಃ ಸರ್ವೇ ಸಂಖ್ಯಯಾ ಪರಿವರ್ಜಿತಾಃ ॥ ೭ ॥
ತತಃ ಶಕ್ರೇಣ ತುಷ್ಟೇನ ಪ್ರೋಕ್ತಃ ಸಂಗ್ರಾಮಭೂಮಿಪಃ ।
ಕ್ಷತವಿಕ್ಷತಸರ್ವಾಂಗೋ ರುಧಿರೇಣಪರಿಪ್ಲುತಃ ॥ ೮ ॥
ಅಸ್ಮದರ್ಥೇ ತ್ವಯಾ ಯುದ್ಧಂ ಯತ್ಕೃತಂ ಸುಗಜಾನನ ।
ನಿಹತಾ ದಾನವಾಃ ಸರ್ವೇ ಸಂಖ್ಯಯಾ ಪರಿವರ್ಜಿತಾಃ ॥ ೯ ॥
ತಸ್ಮಾತ್ತ್ವಂ ಸರ್ವದೇವಾನಾಮಪಿ ಪೂಜ್ಯೋ ಭವಿಷ್ಯಸಿ ।
ಕಿಂ ಪುನರ್ಮಾನುಷಾಣಾಂ ಚ ಯೇ ನಿತ್ಯಂ ವಿಘ್ನಸಂಪ್ಲುತಾಃ ॥ ೧೦ ॥
ಯೇ ತ್ವಾಂ ಸಂಪೂಜಯಿಷ್ಯಂತಿ ಕಾರ್ಯಾರಂಭೇಷು ಸರ್ವತಃ ।
ಕಾರ್ಯಸಿದ್ಧಿರ್ನ ಸಂದೇಹಸ್ತೇಷಾಂ ಭೂಯಾದ್ಗಿರಾ ಮಮ ॥ ೧೧ ॥
ಏವಮುಕ್ತ್ವಾ ಸಹಸ್ರಾಕ್ಷೋ ವಿಸಸರ್ಜಾಥ ತಂ ತದಾ ।
ಸಂಪೂಜ್ಯ ಬಹುಮಾನೇನ ಗೌರೀಶಂಕರಪಾರ್ಶ್ವತಃ ॥ ೧೨ ॥
ಅಯಮರ್ಥಃ ಪುರಾ ಪೃಷ್ಟೋ ರೋಹಿತಾಶ್ವೇನ ಧೀಮತಾ ।
ಸರ್ವವಿಘ್ನವಿನಾಶಾರ್ಥಂ ಮಾರ್ಕಂಡೇಯಂ ಮಹಾಮುನಿಂ ॥ ೧೩ ॥

---

ಕೊಳೆಯಿಂದ ಸೃಷ್ಟಿಸಿದಳು. ಇವನು ಹಿಂದೆ ತಾರಕಾಸುರ ಸಂಗ್ರಾಮದಲ್ಲಿ ಅಸಾಧಾರಣವೂ, ಭಯಂಕರವೂ ಆದ ಯುದ್ಧವನ್ನು ಮಾಡಿ ಅಸಂಖ್ಯಾತ ದಾನವರನ್ನು ಕೊಂದಿರುವನು.

೮–೧೦. ತರುವಾಯ ಇಂದ್ರನು ಸಂತುಷ್ಟನಾಗಿ ಯುದ್ಧಾಂಗಣವನ್ನು ರಕ್ಷಿಸುವವನೂ, ಗಾಯಗೊಂಡ ಸಮಸ್ತಾವಯವವುಳ್ಳವನೂ, ರಕ್ತದಿಂದ ಒದ್ದೆಯಾದವನೂ ಆದ ಗಣೇಶನನ್ನು ಕುರಿತು ನೀನು ನಮಗಾಗಿ ಯುದ್ಧ ಮಾಡಿದೆ. ಅಸಂಖ್ಯಾತ ದಾನವರನ್ನು ಕೊಂದಿರುವೆ. ಆದುದರಿಂದ ನೀನು ಸಕಲ ದೇವತೆಗಳಿಗೂ ಪೂಜ್ಯನಾಗುವೆ. ಯಾವಾಗಲೂ ವಿಘ್ನಗಳಿಗೊಳಗಾಗಿರುವ ಮನುಷ್ಯರ ವಿಷಯವಿನ್ನೇನು.

೧೧. ಕಾರ್ಯದ ಆರಂಭದಲ್ಲಿ ನಿನ್ನನ್ನು ಪೂಜಿಸಿದವರ ಕಾರ್ಯವು ನನ್ನ ಮಾತಿನಿಂದ ಕೈಗೂಡಲಿ.

೧೨. ಇಂದ್ರನು ಹೀಗೆಂದು ಅವನನ್ನು ಬಹುಮಾನದಿಂದ ಸನ್ಮಾನಿಸಿ ಪಾರ್ವತೀಪರಮೇಶ್ವರರ ಹತ್ತಿರಕ್ಕೆ ಕಳುಹಿಸಿದನು.

೧೩. ಈ ವಿಷಯವನ್ನು ಹಿಂದೆ ರೋಹಿತಾಶ್ವನು ಮಾರ್ಕಂಡೇಯ ಮಹಾಮುನಿಯನ್ನು ಕುರಿತು ವಿಘ್ನಪರಿಹಾರಕ್ಕಾಗಿ ಪ್ರಶ್ನೆಮಾಡಿದ್ದನು.

ತನೋವಾಽರ್ಥಂ ಮಹಾಭಾಗಾಃ ಕಥಯಿಷ್ಯೇ ಯಥಾರ್ಥತಃ ।
ತಚ್ಛೃಣುಧ್ವಂ ಪುರಾವೃತ್ತಂ ಸರ್ವಂ ಸರ್ವೇ ಸಮಾಹಿತಾಃ ॥ ೧೪ ॥
ಲೋಹಿತಾಶ್ವ ಉವಾಚ:—
ಭಗವನ್ನತ್ರ ಯೇ ಮರ್ತ್ಯಾಃ ಸರ್ವೇ ವಿಘ್ನಸಮನ್ವಿತಾಃ ।
ಶುಭಕೃತ್ಯೇಷು ಸರ್ವೇಷು ಜಾಯಂತೇ ಶುಚಯೋಽಪಿ ಚ ॥ ೧೫ ॥
ಪ್ರಾರಬ್ಧೇಷು ಚ ಕಾರ್ಯೇಷು ಧರ್ಮಜೇಷು ವಿಶೇಷತಃ ।
ತಾನಿ ವಿಘ್ನಾನಿ ಜಾಯಂತೇ ಯೈಸ್ತತ್ಕಾರ್ಯಂ ನ ಸಿದ್ಧ್ಯತಿ ॥ ೧೬ ॥
ತಸ್ಮಾದ್ವಿಘ್ನವಿನಾಶಾಯ ಕಿಂಚಿನ್ಮೇ ವ್ರತಮಾದಿಶ ।
ವ್ರತಂ ವಾ ನಿಯಮೋವಾಽಥ ತಪೋ ವಾ ದಾನಮೇವ ಚ ॥ ೧೭ ॥
ಸಕೃಚ್ಚೀರ್ಣೇನ ಯೇನಾಽತ್ರ ಯಾವಜ್ಜೀವತಿ ಮಾನವಃ ।
ತಾವನ್ನ ಜಾಯತೇ ವಿಘ್ನಮಾಜನ್ಮಮರಣಾಂತಿಕಂ ॥ ೧೮ ॥
ಮಾರ್ಕಂಡೇಯ ಉವಾಚ:—
ಅತ್ರ ತೇ ಕೀರ್ತಯಿಷ್ಯಾಮಿ ಸರ್ವವಿಘ್ನವಿನಾಶನಂ ।
ವ್ರತಂ ಸರ್ವಗುಣೋಪೇತಂ ಸರ್ವಪಾಪಪ್ರಣಾಶನಂ ।
ವಿಶ್ವಾಮಿತ್ರೇಣ ಸಂಚೀರ್ಣಂ ಯತ್ಪುರಾ ಭಾವಿತಾತ್ಮನಾ ॥ ೧೯ ॥

---

೧೪. ಭಾಗ್ಯವಂತರೆ! ಅದೇ ವಿಷಯವನ್ನು ನಿಮಗೆ ಯಥಾರ್ಥವಾಗಿ ಹೇಳುವೆನು. ಹಿಂದೆ ನಡೆದ ಈ ವಿಷಯವನ್ನು ಸಾವಧಾನ ಮನಸ್ಸಿನಿಂದ ಕೇಳಿರಿ.

೧೫. ಲೋಹಿತಾಶ್ವನು ಹೇಳುತ್ತಾನೆ:—ಪೂಜ್ಯನೆ! ಸಕಲ ಮಾನವರೂ ಶುದ್ಧರಾಗಿದ್ದರೂ ಅವರು ಮಾಡುವ ಶುಭಕಾರ್ಯಗಳಲ್ಲಿ ವಿಘ್ನಗಳು ಉಂಟಾಗುವುವು.

೧೬. ಧರ್ಮಕಾರ್ಯಗಳು ಆರಂಭವಾದಾಗ ವಿಘ್ನಗಳು ಸಂಭವಿಸಿ ಆ ಕಾರ್ಯಗಳು ನೆರವೇರುವುದಿಲ್ಲ.

೧೭. ಆದುದರಿಂದ ನನ್ನ ವಿಘ್ನಗಳು ಪರಿಹಾರವಾಗುವುದಕ್ಕಾಗಿ ವ್ರತ, ನಿಯಮ, ತಪಸ್ಸು, ದಾನ ಇವುಗಳಲ್ಲಿ ಯಾವುದನ್ನಾದರೂ ಹೇಳು.

೧೮. ಅದನ್ನು ಮಾಡುವುದರಿಂದ ಮಾನವನಿಗೆ ಮರಣಕಾಲದವರೆಗೆ ವಿಘ್ನವುಂಟಾಗಬಾರದು.

೧೯. ಮಾರ್ಕಂಡೇಯನು ಹೇಳುತ್ತಾನೆ:—ಈ ವಿಷಯದಲ್ಲಿ ನಿನಗೆ ಹಿಂದೆ ಜ್ಞಾನಿಯಾದ ವಿಶ್ವಾಮಿತ್ರನು ಆಚರಿಸಿದುದೂ, ಸಕಲ ವಿಘ್ನಗಳನ್ನು ಪರಿಹರಿಸುವುದೂ, ಸಮಸ್ತ ಗುಣಗಳಿಂದ ಕೂಡಿರುವುದೂ, ಸಮಸ್ತ ಪಾಪಗಳನ್ನು ನಿವಾರಿಸುವುದೂ ಆದ ಒಂದು ವ್ರತವನ್ನು ಹೇಳುವೆನು.

ವಿಶ್ವಾಮಿತ್ರ ಇತಿ ಖ್ಯಾತೋ ಗಾಧಿಪುತ್ರಃ ಪ್ರತಾಪವಾನ್ ।
ವಸಿಷ್ಠೇನ ಸಮಂ ತಸ್ಯ ವೈರಮಾಸೀನ್ಮಹಾತ್ಮನಃ ॥ ೨೦ ॥
ಬ್ರಾಹ್ಮಣ್ಯಾರ್ಥೇ ನ ಸಂಪ್ರೋಕ್ತಃ ಕಥಂಚಿತ್ಸ ಮಹಾತಪಾಃ ।
ಬ್ರಾಹ್ಮಣಸ್ತ್ವಂ ವಸಿಷ್ಠೇನ ತತೋ ವೈರಮಜಾಯತ ॥ ೨೧ ॥

ರೋಹಿತಾಶ್ವ ಉವಾಚ :—

ಕಸ್ಮಾನ್ನ ಪ್ರೋಕ್ತವಾನ್ ವಿಪ್ರೋ ವಸಿಷ್ಠಸ್ತು ಕಥಂಚನ ।
ಬ್ರಾಹ್ಮಣಃ ಸ ಪರಂ ಪ್ರೋಕ್ತೋ ಬ್ರಹ್ಮಾದಿಭಿರಪಿ ಸ್ವಯಂ ॥ ೨೨ ॥

ಮಾರ್ಕಂಡೇಯ ಉವಾಚ :—

ಕ್ಷತ್ರಿಯಶ್ಚ ಸ್ಥಿತಃ ಪೂರ್ವಂ ವಿಶ್ವಾಮಿತ್ರೋ ಮಹೀಪತಿಃ ।
ಮೃಗಯಾಸು ಪರಿಭ್ರಾಂತೋ ವಸಿಷ್ಠಸ್ಯ ತದಾಶ್ರಮಂ ।
ಪ್ರವಿಷ್ಟಃ ಕ್ಷುತ್ಪಿಪಾಸಾರ್ತಃ ಸ ತೇನಾಽಥ ಪ್ರಪೂಜಿತಃ ॥ ೨೩ ॥
ತಸ್ಯಾಽಽಸೀನ್ನಂದಿನೀ ನಾಮ ಧೇನುಃ ಕಾಮದುಘಾ ಸದಾ ।
ಸಾ ಸೂತೇ ವಾಂಛಿತಂ ಸದ್ಯೋ ಯದ್ವಸಿಷ್ಠೋಽಭಿವಾಂಛತಿ ॥ ೨೪ ॥
ತತ್ಪ್ರಭಾವಾತ್ಸ ಭೂಪಾಲಃ ಸಭೃತ್ಯಬಲವಾಹನಃ ।
ತೇನ ತೃಪ್ತಿಂ ಪರಾಂ ನೀತೋ ಮಿಷ್ಟಾನ್ನೈರ್ವಿವಿಧೈಸ್ತತಃ ॥ ೨೫ ॥

---

೨೦—೨೧. ಹಿಂದೆ ಗಾಧಿಪುತ್ರನಾದ ವಿಶ್ವಾಮಿತ್ರನೆಂಬವನಿದ್ದನು. ಬ್ರಾಹ್ಮಣ್ಯಕ್ಕಾಗಿ ಅವನಿಗೆ ವಸಿಷ್ಠನೊಡನೆ ದ್ವೇಷವುಂಟಾಯಿತು. ಮಹಾ ತಪಸ್ವಿಯಾದ ಅವನನ್ನು ವಸಿಷ್ಠನು ನೀನು ಬ್ರಾಹ್ಮಣನಾಗಿರುವೆ ಎಂದು ಹೇಳ ದಿರುವುದೇ ದ್ವೇಷಕ್ಕೆ ಕಾರಣವಾಗಿರುವುದು.

೨೨. ರೋಹಿತಾಶ್ವನು ಹೇಳುತ್ತಾನೆ:—ಬ್ರಹ್ಮಾದಿಗಳು ಬ್ರಾಹ್ಮಣನಾಗಿರುವೆ ಎಂದು ಹೇಳಿದರೂ ವಸಿಷ್ಠನು ಏಕೆ ಹಾಗೆ ಹೇಳಲಿಲ್ಲ.

೨೩. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ವಿಶ್ವಾಮಿತ್ರನು ಕ್ಷತ್ರಿಯ ರಾಜನಾಗಿದ್ದನು. ಅವನು ಬೇಟೆಯಾಡಿ ಹಸಿವು ಬಾಯಾರಿಕೆಗಳಿಂದ ಪೀಡಿತ ನಾಗಿ ವಸಿಷ್ಠನ ಆಶ್ರಮಕ್ಕೆ ಹೋಗಲು ಅವನು ಆ ರಾಜನನ್ನು ಪೂಜಿಸಿದನು.

೨೪. ಆ ವಸಿಷ್ಠನ ಬಳಿಯಲ್ಲಿ ಇಷ್ಟಾರ್ಥಗಳನ್ನೀಯುವ ನಂದಿನಿಯೆಂಬ ಧೇನುವಿದ್ದಿತು. ಅದು ವಸಿಷ್ಠನು ಅಪೇಕ್ಷಿಸಿದುದನ್ನೆಲ್ಲ ಕೂಡಲೆ ಕೊಡು ತ್ತಿದ್ದಿತು.

೨೫—೨೬. ಆ ವಸಿಷ್ಠನು ಆ ಧೇನುವಿನ ಪ್ರಭಾವದಿಂದ ಭೃತ್ಯ, ಸೈನ್ಯ, ವಾಹನಗಳಿಂದ ಕೂಡಿದ ಆ ವಿಶ್ವಾಮಿತ್ರನನ್ನು ರಾಜನೆಂದರಿತು ಅರ್ಘ್ಯ ಭೋಜ ನಾದಿಗಳಿಂದ ಅಧಿಕವಾಗಿ ತೃಪ್ತಿಗೊಳಿಸಿದನು. ಆ ರಾಜನೂ ಆ ಆತಿಥ್ಯವೆಲ್ಲ

ಪಾರ್ಥಿವೋಽಯಮಿತಿ ಜ್ಞಾತ್ವಾ ಹ್ಯಶ್ವಾರ್ಯಾದ್ಯೈರ್ಭೋಜನೈಃ ಸ ಚ ।
ಸೋಽಪಿ ದೃಷ್ಟ್ವಾ ಪ್ರಭಾವಂ ತಂ ಸರ್ವಂ ಧೇನೋಶ್ಚ ಸಂಭವಂ ।
ಪ್ರಾರ್ಥಯಾಮಾಸ ತಾಂ ಮೂಲ್ಯೈರ್ಗಜವಾಜಿಸಮುದ್ಭವೈಃ ॥ ೨೬ ॥
ನ ದದೌ ಸ ತದಾ ವಿಪ್ರಃ ಸಾಮ್ನಾ ದಾನೇನ ವಾ ಪುನಃ ।
ಭೇದೇನ ಚ ತತೋ ದಂಡಂ ಯೋಜಯಾಮಾಸ ವೈ ನೃಪಃ ॥ ೨೭ ॥
ಕಾಲಯಾಮಾಸ ತಾಂ ಧೇನುಂ ತತಃ ಕೋಪಾತ್ಸ ಪಾರ್ಥಿವಃ ॥ ೨೮ ॥
ಸಾಽಬ್ರವೀನ್ನೀಯಮಾನಾಽಥ ವಸಿಷ್ಠಂ ಕಿಂ ತ್ವಯಾ ವಿಭೋ ।
ದತ್ತಾಽಹಮಸ್ಯ ನೃಪತೇರ್ಯನ್ಮಾಂ ನಯತಿ ಯತ್ನತಃ ॥ ೨೯ ॥

ವಸಿಷ್ಠ ಉವಾಚ :—

ನ ಮಯಾ ತ್ವಂ ಮಹಾಭಾಗೇ ದತ್ತಾ ಚಾಽಸ್ಯ ಮಹೀಪತೇಃ ।
ಬಲಾನ್ನಯತಿ ಯದ್ಯೇಷ ತಸ್ಮಾದ್ಯುಕ್ತಂ ಸಮಾಚರ ॥ ೩೦ ॥
ತಚ್ಛ್ರುತ್ವಾ ಕೋಪಸಂಯುಕ್ತಾ ನಂದಿನೀ ಧೇನುರುತ್ತಮಾ ।
ಜೃಂಭಾಂ ಚಕಾರ ತತ್ಸೈನ್ಯಂ ಸಮುದ್ದಿಶ್ಯ ನೃಪೋದ್ಭವಂ ॥ ೩೧ ॥
ಧೂಮಾವರ್ತಿಸ್ತತೋ ಜಾತಾ ತಸ್ಯಾ ವಕ್ತ್ರಾತ್ತತಃ ಪರಂ ।
ತತೋ ಜ್ವಾಲಾ ಮಹಾರೌದ್ರಾಸ್ತತೋ ಯೋಧಾಃ ಸಹಸ್ರಶಃ ॥ ೩೨ ॥

---

ಧೇನುವಿನ ಪ್ರಭಾವದಿಂದ ಆದುದನ್ನು ನೋಡಿ ಅದನ್ನು ಆನೆ ಕುದುರೆಗಳ ಮೂಲ್ಯಕ್ಕಾಗಿ ಕೊಡಬೇಕೆಂದು ಬೇಡಿದನು.

೨೭. ವಸಿಷ್ಠನು ಆ ಧೇನುವನ್ನು ಸಾಮ, ದಾನ, ಭೇದೋಪಾಯಗಳಿಂದ ಕೊಡದಿರಲು ರಾಜನು ದಂಡೋಪಾಯವನ್ನಾರಂಭಿಸಿದನು.

೨೮. ಅನಂತರ ಅವನು ಸಿಟ್ಟಿನಿಂದ ಆ ಧೇನುವನ್ನು ಎಳೆದನು.

೨೯. ಹೀಗೆ ವಿಶ್ವಾಮಿತ್ರನು ಎಳೆದುಕೊಂಡು ಹೋಗುತ್ತಿರಲು ಆ ಧೇನುವು ವಸಿಷ್ಠನನ್ನು ಕುರಿತು, "ಸ್ವಾಮಿ! ನೀನು ನನ್ನನ್ನು ಈ ರಾಜನಿಗೆ ಕೊಟ್ಟಿರುವೆಯಾ? ಇವನು ನನ್ನನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಿರುವನಲ್ಲ" ಎಂದು ಕೇಳಿತು.

೩೦. ವಸಿಷ್ಠನು ಹೇಳುತ್ತಾನೆ :—ಭಾಗ್ಯಶಾಲಿನಿಯೆ! ನಾನು ನಿನ್ನನ್ನು ಈ ರಾಜನಿಗೆ ಕೊಡಲಿಲ್ಲ. ಇವನು ನಿನ್ನನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋಗುತ್ತಿದ್ದಾನೆ. ಆದುದರಿಂದ ಯಾವುದು ಉಚಿತವೊ ಅದನ್ನು ಮಾಡು.

೩೧. ನಂದಿನಿಯು ವಸಿಷ್ಠನ ಆ ಮಾತನ್ನು ಕೇಳಿ ಕೋಪದಿಂದ ವಿಶ್ವಾಮಿತ್ರನ ಸೈನ್ಯವನ್ನು ಉದ್ದೇಶಿಸಿ ಆಕಳಿಸಿತು.

೩೨—೩೩. ಅದರ ಬಾಯಿಯಿಂದ ಹೊಗೆಯು ಹೊರಟಿತು. ಅದರಿಂದ ಭಯಂಕರ ಅಗ್ನಿಜ್ವಾಲೆಯೂ, ಅದರಿಂದ ಅನೇಕವಿಧ ಶಸ್ತ್ರಗಳನ್ನು ಧರಿಸಿರುವವರೂ,

ನಾನಾಶಸ್ತ್ರಧರಾ ರೌದ್ರಾ ಯಮದೂತಾ ಯಥಾ ಚ ತೇ ।
ಪುಲಿಂದಾ ಬರ್ಬರಾಭೀರಾಃ ಕಿರಾತಾ ಯವನಾಃ ಶಕಾಃ ॥ ೩೩ ॥
ತೇ ಪ್ರೋಚುಸ್ತಾಂ ವದಾಽಸ್ಮಾಕಂ ಕಸ್ಮಾತ್ಸೃಷ್ಟಾ ವಯಂ ಶುಭೇ ॥ ೩೪ ॥

ನಂದಿನ್ಯುವಾಚ :—

ಏತೇ ಮಾಂ ಯೇ ಬಲಾತ್ಪಾಪಾ ನಯಂತಿ ನೃಪಸೇವಕಾಃ ।
ತಾನ್ನಿಘ್ನಂತು ಸಮಾದೇಶಾನ್ನಾನ್ಯದ್ವಾಂಛಾಮಿ ಕಿಂ ಚ ನ ॥ ೩೫ ॥
ತತಸ್ತೈಸ್ತಸ್ಯ ತತ್ಸೈನ್ಯಂ ವಿಶ್ವಾಮಿತ್ರಸ್ಯ ಸೂದಿತಂ ।
ಯುದ್ಧ್ಯಮಾನಂ ಮಹಾರಾಜ ದಶರಾತ್ರೇಣ ಸಂಯುಗೇ ॥ ೩೬ ॥
ವಿಶ್ವಾಮಿತ್ರೋಽಪಿ ತದ್ದೃಷ್ಟ್ವಾ ಬ್ರಾಹ್ಮ್ಯಂ ಬಲಮನುತ್ತಮಂ ।
ಪ್ರತಿಜ್ಞಾಮಕರೋತ್ತತ್ರ ತಾರೇಣ ಸುಸ್ವರೇಣ ಚ ॥ ೩೭ ॥
ಅಥಾಽಹಂ ಸಂಭವಿಷ್ಯಾಮಿ ಬ್ರಾಹ್ಮಣೋ ನಾಽತ್ರ ಸಂಶಯಃ ।
ಮಮಾಽಪಿ ಜಾಯತೇ ಯೇನ ಪ್ರಭಾವಶ್ಚೇದೃಶೋಽದ್ಭುತಃ ॥ ೩೮ ॥
ತಸ್ಮಾತ್ತಪಃ ಕರಿಷ್ಯಾಮಿ ಯದಸಾಧ್ಯಂ ಸುರೈರಪಿ ।
ಸ್ವಪುತ್ರಂ ಸ್ವೇಪದೇ ಧೃತ್ವಾ ತತಶ್ಚಕ್ರೇ ತಪೋ ಮಹತ್ ॥ ೩೯ ॥
ಬ್ರಾಹ್ಮಣ್ಯಾರ್ಥಂ ಮಹಾರೌದ್ರಂ ಸುಮಹದ್ದುಷ್ಕರಂ ತಪಃ ।
ಬ್ರಾಹ್ಮಣ್ಯಂ ತೇನ ನೈವಾಽಪ್ತಂ ವೈಲಕ್ಷ್ಯಂ ಪರಮಂ ಗತಃ ॥ ೪೦ ॥

---

ಯಮದೂತರಂತೆ ಭಯಂಕರರೂ ಆದ ಕಿರಾತ, ಬರ್ಬರ, ಆಭೀರ, ಪುಳಿಂದ, ಯವನ, ಶಕರೇ ಮೊದಲಾದವರು ಹುಟ್ಟಿದರು.

೩೪. ಅವರು, "ಮಂಗಳಕರಳೆ! ನಮ್ಮನ್ನು ಏಕೆ ಸೃಷ್ಟಿಮಾಡಿದ್ದೀಯೆ?" ಎಂದು ಕೇಳಿದರು.

೩೫. ನಂದಿನಿಯು ಹೇಳುತ್ತಾಳೆ:—ಪಾಪಿಗಳಾದ ಈ ರಾಜಸೇವಕರು ನನ್ನನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಿದ್ದಾರೆ. ಅವರನ್ನು ನನ್ನ ಅಪ್ಪಣೆಯಿಂದ ಕೊಲ್ಲಿರಿ. ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ.

೩೬–೩೭. ಅನಂತರ ಅವರು ಹತ್ತುದಿವಸಗಳ ಕಾಲ ಯುದ್ಧ ಮಾಡುತ್ತಿರುವ ವಿಶ್ವಾಮಿತ್ರನ ಸೈನ್ಯವನ್ನು ಧ್ವಂಸಮಾಡಿದರು. ವಿಶ್ವಾಮಿತ್ರನು ಉತ್ತಮವಾದ ಆ ಬ್ರಹ್ಮಬಲವನ್ನು ಕಂಡು ಗಟ್ಟಿಯಾದ ಧ್ವನಿಯಿಂದ ಹೀಗೆ ಪ್ರತಿಜ್ಞೆಮಾಡಿದನು.

೩೮. "ನಾನು ನಿಶ್ಚಯವಾಗಿಯೂ ಬ್ರಾಹ್ಮಣನಾಗುವೆನು. ಅದರಿಂದ ನನಗೂ ಇಂತಹ ಅದ್ಭುತ ಪ್ರಭಾವವುಂಟಾಗುವುದು.

೩೯–೪೦. ಅದಕ್ಕಾಗಿ ದೇವತೆಗಳಿಗೂ ಅಸಾಧ್ಯವಾದ ತಪಸ್ಸನ್ನಾಚರಿಸುವೆನು." ಅವನು ಹೀಗೆ ಪ್ರತಿಜ್ಞೆಮಾಡಿ ತನ್ನ ಸ್ಥಾನದಲ್ಲಿ ಪುತ್ರನನ್ನು ಸ್ಥಾಪಿಸಿ ಬ್ರಾಹ್ಮಣ್ಯಕ್ಕಾಗಿ ದುಷ್ಕರವಾದ ಮಹಾ ತಪವನ್ನಾಚರಿಸಿದನು. ಆದರೆ ಅದರಿಂದ ಬ್ರಾಹ್ಮಣ್ಯವನ್ನು ಪಡೆಯದೆ ಅತ್ಯಂತ ಲಜ್ಜಿತನಾದನು.

ತತಃ ಕೈಲಾಸಮಾಸಾದ್ಯ ದೇವದೇವಂ ಮಹೇಶ್ವರಂ ।
ಸಮ್ಯಗಾರಾಧಯಾಮಾಸ ಗೌರೀಯುಕ್ತಂ ಮಹೇಶ್ವರಂ ॥ ೪೧ ॥
ಅಹಂ ತಪಃ ಕರಿಷ್ಯಾಮಿ ಬ್ರಾಹ್ಮಣ್ಯಸ್ಯ ಕೃತೇ ಪ್ರಭೋ ।
ತ್ವದೀಯೇ ಪರ್ವತಶ್ರೇಷ್ಠೇ ಕೈಲಾಸೇ ಶರಣಂ ಗತಃ ॥ ೪೨ ॥
ತಸ್ಮಾದ್ವಿಘ್ನಸ್ಯ ಮೇ ರಕ್ಷಾಂ ದೇವದೇವಃ ಪ್ರಯಚ್ಛತು ।
ಯಥಾ ನೋ ನಾಶಮಾಯಾತಿ ತಪಃ ಸರ್ವಂ ಕೃತಂ ಮಹತ್ ॥ ೪೩ ॥

ಶ್ರೀ ಭಗವಾನುವಾಚ :—

ಶುದ್ಧ್ಯರ್ಥಂ ಚೈವ ಯತ್ಕಾರ್ಯಂ ಕಾರ್ಯೇಽಸ್ಮಿನ್ನೃಪಸತ್ತಮ ।
ವಿನಾಯಕ ಸಮುದ್ಭೂತಾಂ ತತ್ತ್ವಂ ಪೂಜಾಂ ಸಮಾಚರ ॥ ೪೪ ॥
ಯೇನ ತೇ ಜಾಯತೇ ಸಿದ್ಧಿಃ ಸಮ್ಯಗ್ಬ್ರಾಹ್ಮಣ್ಯಸಂಭವಾ ॥ ೪೫ ॥

ವಿಶ್ವಾಮಿತ್ರ ಉವಾಚ :—

ತದ್ವದಸ್ವ ಸುರಶ್ರೇಷ್ಠ ತಥಾ ತಸ್ಯ ಕರೋಮ್ಯಹಂ ।
ಪೂರ್ವಂ ಪೂಜಾಂ ಗಣೇಶಸ್ಯ ಸರ್ವವಿಘ್ನಪ್ರಶಾಂತಯೇ ॥ ೪೬ ॥

ಶ್ರೀ ಭಗವಾನುವಾಚ :—

ಏಷ ಗೌರ್ಯಾ ಪುರಾಕೃತ್ವಾ ನಿಜಾಂಗೋದ್ವರ್ತನಂ ಕೃತಃ ।
ನಿರ್ಮಲೇನ ಕೃತಃ ಪಶ್ಚಾನ್ನರಾಕಾರಶ್ಚತುರ್ಭುಜಃ ॥ ೪೭ ॥

---

೪೧. ಬಳಿಕ ಅವನು ಕೈಲಾಸಪರ್ವತಕ್ಕೆ ಹೋಗಿ ಗೌರೀಸಹಿತನಾದ ಮಹೇಶ್ವರನನ್ನು ಚೆನ್ನಾಗಿ ಪೂಜಿಸಿ ಪ್ರಾರ್ಥಿಸಿದನು :

೪೨. "ಸ್ವಾಮಿ! ನಾನು ಬ್ರಾಹ್ಮಣ್ಯಕ್ಕಾಗಿ ಉತ್ತಮವಾದ ನಿನ್ನ ಕೈಲಾಸ ಶೈಲದಲ್ಲಿ ಶರಣಾಗತನಾಗಿ ತಪಸ್ಸನ್ನು ಮಾಡುವೆನು.

೪೩. ಸ್ವಾಮಿ! ನಾನು ಮಾಡಿದ ತಪಸ್ಸೆಲ್ಲ ನಾಶವಾಗದಂತೆ ನೀನು ವಿಘ್ನವನ್ನು ನಿವಾರಿಸು" ಎಂದನು.

೪೪–೪೫. ಶ್ರೀಭಗವಂತನು ಹೇಳುತ್ತಾನೆ:— ನೃಪೋತ್ತಮ! ನೀನು ಈ ಕಾರ್ಯಕ್ಕಾಗಿ ಶುದ್ಧಿಯುಂಟಾಗಲು ವಿನಾಯಕನ ಪೂಜೆಯನ್ನು ಮಾಡು. ಅದರಿಂದ ನಿನಗೆ ಬ್ರಾಹ್ಮಣ್ಯವು ಸಂಭವಿಸುವುದು.

೪೬. ವಿಶ್ವಾಮಿತ್ರನು ಹೇಳುತ್ತಾನೆ:—ಶಂಕರ! ಆ ಗಣೇಶನ ಪೂಜಾಕ್ರಮವನ್ನು ಹೇಳು. ಅದರಂತೆ ನಾನು ವಿಘ್ನಶಾಂತಿಗಾಗಿ ಅವನನ್ನು ಪೂಜಿಸುವೆನು.

೪೭–೪೮. ಶ್ರೀಭಗವಂತನು ಹೇಳುತ್ತಾನೆ:—ಹಿಂದೆ ಗೌರಿಯು ತನ್ನ ಅಂಗಗಳನ್ನು ಉಜ್ಜಿ ಬಂದ ಮಲದಿಂದ ಕ್ರೀಡೆಗಾಗಿ ನಾಲ್ಕು ತೋಳುಗಳುಳ್ಳವನೂ,

ಕ್ರೀಡಾರ್ಥಂ ಮಮ ಪುತ್ರೋಽಯಂ ಬಾಲಭಾವಃ ಪ್ರಕಲ್ಪಿತಃ ।
ಗಜವಕ್ತ್ರೋ ಮಹಾಕಾಯೋ ಲಂಬೋದರ ಲಘೂರುಕಃ ॥ ೪೮ ॥
ತತೋಽಹಮನಯಾ ಪ್ರೋಕ್ತಃ ಸಜೀವಃ ಕ್ರಿಯತಾಮಯಂ ।
ಪುತ್ರಕೋ ಮೇ ಯಥಾ ಭಾವೀ ಲೋಕೇ ಪೂಜ್ಯತಮೋ ವಿಭೋ ॥ ೪೯ ॥
ತತೋ ಮಯಾಽಪಿ ಸಂಸ್ಪೃಷ್ಟಃ ಸೃಷ್ಟಿಸೂಕ್ತೇನ ಪಾರ್ಥಿವ ।
ಜೀವಸೂಕ್ತೇನ ಸಮ್ಯಕ್ಸ ಪ್ರಾಣವಾನ್ ಸಮಜಾಯತ ॥ ೫೦ ॥
ತತೋ ಮಯಾ ಪ್ರಹೃಷ್ಟೇನ ಪ್ರೋಕ್ತಾ ದೇವೀ ಹಿಮಾದ್ರಿಜಾ ।
ಚತುರ್ಥೀ ದಿವಸೇ ಪ್ರಾಪ್ತೇ ಮಯಾಽದ್ಯಾಽಯಂ ವಿನಿರ್ಮಿತಃ ॥ ೫೧ ॥
ಪುತ್ರಸ್ತವ ಮಹಾಭಾಗೇ ಜೀವಸೂಕ್ತಪ್ರಭಾವತಃ ।
ಏಷ ಸರ್ವಗಣಾನಾಂ ಚ ಮದೀಯಾನಾಂ ಸುರೇಶ್ವರಿ ।
ಭವಿಷ್ಯತಿ ಸದಾಽಧ್ಯಕ್ಷಸ್ತಸ್ಮಾಚ್ಚ ಗಣನಾಯಕಃ ॥ ೫೨ ॥
ಪಠ್ಯಮಾನೇನ ಯಶ್ಚೈವಂ ಜೀವಸೂಕ್ತೇನ ಸುಂದರಿ ।
ಪೂಜಯಿಷ್ಯತಿ ಸದ್ಭಕ್ತ್ಯಾ ಚತುರ್ಥೀ ದಿವಸೇ ಶುಭೇ ॥ ೫೩ ॥
ತಸ್ಯ ಸರ್ವೇಷು ಕೃತ್ಯೇಷು ಸರ್ವವಿಘ್ನಾನಿ ಕೃತ್ಸ್ನಶಃ ।
ಪ್ರಯಾಸ್ಯಂತಿ ಕ್ಷಯಂ ದೇವಿ ತಮಃ ಸೂರ್ಯೋದಯೇ ಯಥಾ ॥ ೫೪ ॥
ನಮೋ ಲಂಬೋದರಾಯೇತಿ ನಮೋ ಗಣವಿಭೋ ತಥಾ ।
ಕುಠಾರಧಾರಿಣೇ ನಿತ್ಯಂ ತಥಾ ವಾಕ್ಸಂಗತಾಯ ಚ ॥ ೫೫ ॥

---

ಮನುಷ್ಯಾಕಾರನೂ, ಆನೆಯ ಮುಖದವನೂ, ಲಂಬೋದರನೂ, ಸಣ್ಣ ತೊಡೆಯುಳ್ಳವನೂ ಆದ ಗಣೇಶನನ್ನು ನಿರ್ಮಿಸಿದಳು.

೪೯. ಬಳಿಕ ಅವಳು ನನ್ನನ್ನು ಕುರಿತು, "ಪ್ರಭುವೆ! ಇವನಿಗೆ ಜೀವವನ್ನಿತ್ತು ಲೋಕಪೂಜ್ಯನಾದ ನನ್ನ ಮಗನಾಗುವಂತೆ ಮಾಡು" ಎಂದಳು.

೫೦. ಅನಂತರ ನಾನು ಸೃಷ್ಟಿಸೂಕ್ತದಿಂದ ಇವನನ್ನು ಮುಟ್ಟಿ ಜೀವಸೂಕ್ತದಿಂದ ಜೀವಸಹಿತನನ್ನಾಗಿ ಮಾಡಿದೆನು.

೫೧–೫೨. ಅನಂತರ ಸಂತುಷ್ಟನಾದ ನಾನು ಪಾರ್ವತಿಯನ್ನು ಕುರಿತು, "ಚತುರ್ಥೀದಿನ ಜೀವಸೂಕ್ತದಿಂದ ನಿರ್ಮಿಸಿದ ನಿನ್ನೀ ಮಗನು ನನ್ನ ಸಕಲ ಗಣಗಳಿಗೂ ಅಧ್ಯಕ್ಷನಾಗಿ ಗಣನಾಯಕನೆನ್ನಿಸಿಕೊಳ್ಳುವನು.

೫೩–೫೪. ಎಲೌ ಸುಂದರಿಯೆ! ಚತುರ್ಥೀದಿನ ಭಕ್ತಿಯಿಂದ ಜೀವಸೂಕ್ತವನ್ನು ಪಠಿಸಿ ಇವನನ್ನು ಪೂಜಿಸುವವನ ಸಕಲ ಕಾರ್ಯಗಳಲ್ಲಿಯ ಸಮಸ್ತ ವಿಘ್ನಗಳೂ ಸೂರ್ಯೋದಯಕಾಲದಲ್ಲಿ ಕತ್ತಲೆಯಂತೆ ನಾಶವಾಗುವುವು.

೫೫. ಲಂಬೋದರನೂ, ಗಣಾಧ್ಯಕ್ಷನೂ, ಕುಠಾರಧಾರಿಯೂ, ವಾಕ್ಸಂಯೋಜಕನೂ ಆದ ಗಣನಾಯಕನಿಗೆ ನಮಸ್ಕಾರವು.

ನಮೋ ಮೋದಕಭಕ್ಷ್ಯಾಯ ನಮೋ ದಂತೈಕಧಾರಿಣೇ ॥ ೫೬ ॥
ಏಭಿರ್ಮಂತ್ರೈಃ ಸಮಭ್ಯರ್ಚ್ಯ ಪಶ್ಚಾನ್ಮೋದಕಜಂ ಶುಭಂ ।
ನೈವೇದ್ಯಂ ಚ ಪ್ರದಾತವ್ಯಂ ತತಶ್ಚಾಽರ್ಘ್ಯಂ ನಿವೇದಯೇತ್ ॥ ೫೭ ॥
ಅಹಂ ಕರ್ಮ ಕರಿಷ್ಯಾಮಿ ಯತ್ಕಿಂಚಿಚ್ಛಂಭುಸಂಭವಂ ।
ಅವಿಘ್ನಂ ತತ್ರ ಕರ್ತವ್ಯಂ ಸರ್ವದೈವ ತ್ವಯಾ ವಿಭೋ ॥ ೫೮ ॥
ತತಸ್ತು ಬ್ರಾಹ್ಮಣಾನಾಂ ಚ ಭೋಜನಂ ಮೋದಕೋದ್ಭವಂ ।
ಯಥಾ ಶಕ್ತ್ಯಾ ಪ್ರದಾತವ್ಯಂ ವಿತ್ತಶಾಠ್ಯಂ ವಿವರ್ಜಯೇತ್ ॥ ೫೯ ॥
ಏವಮುಕ್ತಂ ಮಯಾ ಪೂರ್ವಂ ಸ್ವಯಮೇವ ನೃಪೋತ್ತಮ ।
ಗಣನಾಥಂ ಸಮುದ್ದಿಶ್ಯ ಗೌರ್ಯಾಃ ಪುರತ ಏವ ಚ ॥ ೬೦ ॥
ತತಃ ಪ್ರಹೃಷ್ಟಾ ಸಾ ದೇವೀ ವಾಕ್ಯಮೇತದುವಾಚ ಹ ।
ಅದ್ಯ ಪ್ರಭೃತಿ ಯಃ ಪುತ್ರಂ ಮದೀಯಂ ಗಣನಾಯಕಂ ॥ ೬೧ ॥
ಅನೇನ ವಿಧಿನಾ ಸಮ್ಯಕ್ಚತುರ್ಥ್ಯಾಂ ಪೂಜಯಿಷ್ಯತಿ ।
ತಸ್ಯ ವಿಘ್ನಾನಿ ಸರ್ವಾಣಿ ನಾಶಂ ಯಾಸ್ಯಂತ್ಯಸಂಶಯಂ ॥ ೬೨ ॥
ಸ್ಮೃತ್ವಾ ವಾ ಪೂಜಯಿತ್ವಾ ವಾ ಯಃ ಕಾರ್ಯಾಣಿ ಕರಿಷ್ಯತಿ ।
ಭವಿಷ್ಯಂತಿ ನ ಸಂದೇಹಸ್ತತೋಽಸ್ಯಾವಿಚಲಾನಿ ಚ ॥ ೬೩ ॥
ನ ಸಂದೇಹಸ್ತತೋಽಸ್ಯ ಶ್ರೀರಚಲೈವ ಭವಿಷ್ಯತಿ ॥ ೬೪ ॥

---

೫೬–೫೭. ಮೋದಕವನ್ನು ಭಕ್ಷಿಸುವವನೂ, ಏಕದಂತನೂ ಆದ ವಿನಾಯಕನಿಗೆ ನಮಸ್ಕಾರವು. ಈ ಮಂತ್ರಗಳಿಂದ ಅರ್ಚಿಸಿ ಮೋದಕವನ್ನು ನಿವೇದಿಸಿ ಅರ್ಘ್ಯವನ್ನು ಕೊಡಬೇಕು.

೫೮. "ಸ್ವಾಮಿ! ನಾನು ಯಾವ ಶುಭಕಾರ್ಯವನ್ನು ಮಾಡಿದರೂ ಅದಕ್ಕೆ ವಿಘ್ನಬಾರದಂತೆ ಮಾಡು." ಇದು ಅರ್ಘ್ಯಮಂತ್ರವು.

೫೯. ಅನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ವಿತ್ತಶಾಠ್ಯವಿಲ್ಲದಂತೆ ಶಕ್ತ್ಯನುಸಾರ ಮೋದಕವನ್ನು ದಾನ ಮಾಡಬೇಕು."

೬೦. ನೃಪೋತ್ತಮನೆ! ನಾನು ಪೂರ್ವದಲ್ಲಿ ಗಣೇಶನನ್ನು ಉದ್ದೇಶಿಸಿ ಗೌರಿಯ ಮುಂದೆ ಹೀಗೆ ಹೇಳಿರುವೆನು.

೬೧–೬೨. ಬಳಿಕ ಆ ದೇವಿಯು ಸಂತೋಷಗೊಂಡು ಇಂತೆಂದಳು. "ಇದು ಮೊದಲ್ಗೊಂಡು ನನ್ನ ಮಗನಾದ ಗಣನಾಯಕನನ್ನು ಚತುರ್ಥೀ ದಿನ ಈ ವಿಧಿಯಿಂದ ಪೂಜಿಸಿದವನ ಸಕಲ ವಿಘ್ನಗಳು ನಿಶ್ಚಯವಾಗಿಯೂ ನೀಗುವುವು.

೬೩–೬೪. ಇವನನ್ನು ಸ್ಮರಿಸಿ ಅಥವಾ ಪೂಜಿಸಿ ಕಾರ್ಯಗಳನ್ನು ಆರಂಭ ಮಾಡಿದರೆ ಆ ಕಾರ್ಯಗಳು ನಿಶ್ಚಯವಾಗಿಯೂ ಸ್ಥಿರವಾಗುವುವು. ಸಂಪತ್ತೂ ಸ್ಥಿರವಾಗುವುದು.

ಶ್ರೀ ಭಗವಾನುವಾಚ:—
ತಸ್ಮಾತ್ತ್ವಂ ಹಿ ಮಹಾಭಾಗ ಚತುರ್ಥ್ಯಾಂ ಸಮ್ಯಗಾಚರ ।
ವಿನಾಯಕೋದ್ಭವಾಂ ಪೂಜಾಂ ಯೇನಾಽಭೀಷ್ಟೇನ ಯುಜ್ಯಸೇ ॥ ೬೫ ॥
ಮಾರ್ಕಂಡೇಯ ಉವಾಚ:—
ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋ ಮಹೀಪತಿಃ ।
ಗಣನಾಥಸಮುದ್ಭೂತಾಂ ಪೂಜಾಂ ಕೃತ್ವಾ ಯಥೋಚಿತಾಂ ॥ ೬೬ ॥
ತಪಶ್ಚಚಾರ ವಿಪುಲಂ ಸರ್ವವಿಘ್ನವಿವರ್ಜಿತಂ ।
ಬ್ರಾಹ್ಮಣ್ಯಂ ಚ ತತಃ ಪ್ರಾಪ್ತಂ ಸರ್ವೇಷಾಮಪಿ ದುರ್ಲಭಂ ॥ ೬೭ ॥
ತಸ್ಮಾತ್ತ್ವಂ ಹಿ ಮಹಾಭಾಗ ವಿನಾಯಕಸಮುದ್ಭವಾಂ ।
ಪೂಜಾಂ ಕುರು ಚತುರ್ಥ್ಯಾಂ ಚ ಸಂಪ್ರಾಪ್ತಾಯಾಂ ವಿಶೇಷತಃ ।
ಸಂಪ್ರಾಪ್ಸ್ಯೋಷಿ ಮಹಾಭೋಗಾನ್ ಹೃದಿಸ್ಥಾನ್ನಾತ್ರ ಸಂಶಯಃ ॥ ೬೮ ॥
ಯೋ ಯಂ ಕಾಮಮಭಿಧ್ಯಾಯ ಗಣನಾಥಂ ಪ್ರಪೂಜಯೇತ್ ।
ಸ ತಂ ಸರ್ವಮವಾಪ್ನೋತಿ ಮಹೇಶ್ವರವಚೋ ಯಥಾ ॥ ೬೯ ॥
ಅಪುತ್ರೋ ಲಭತೇ ಪುತ್ರಂ ಧನಹೀನೋ ಮಹದ್ಧನಂ ।
ಶತ್ರೂಂಜಯತಿ ಸಂಗ್ರಾಮೇ ಸ್ಮೃತ್ವಾ ತಂ ಗಣನಾಯಕಂ ॥ ೭೦ ॥

---

೬೫. ಶ್ರೀ ಭಗವಂತನು ಹೇಳುತ್ತಾನೆ:—ಮಹಾ ಭಾಗ್ಯವಂತನೆ! ಆದುದರಿಂದ ನೀನು ಚತುರ್ಥೀ ದಿನ ವಿನಾಯಕನ ಪೂಜೆಯನ್ನು ಚೆನ್ನಾಗಿ ಮಾಡು. ಅದರಿಂದ ನಿನ್ನ ಅಭೀಷ್ಟವು ಲಭಿಸುವುದು.

೬೬–೬೭. ಮಾರ್ಕಂಡೇಯನು ಹೇಳುತ್ತಾನೆ:—ವಿಶ್ವಾಮಿತ್ರನು ಆ ಶಂಕರನ ಮಾತನ್ನು ಕೇಳಿ ವಿಧಿಯಂತೆ ಗಣನಾಥನ ಪೂಜೆಯನ್ನು ಮಾಡಿ ವಿಘ್ನವಿಲ್ಲದೆ ತಪವನ್ನಾಚರಿಸಿ ಸಕಲರಿಗೂ ದುರ್ಲಭವಾದ ಬ್ರಾಹ್ಮಣ್ಯವನ್ನು ಪಡೆದನು.

೬೮. ಭಾಗ್ಯವಂತನೆ! ಆದುದರಿಂದ ನೀನು ಚತುರ್ಥೀ ದಿನ ವಿಶೇಷವಾಗಿ ಗಣಪತಿಯನ್ನು ಪೂಜಿಸು. ಅದರಿಂದ ಮನಸ್ಸಿನಲ್ಲಿರುವ ಭೋಗಗಳನ್ನು ಪಡೆಯುವೆ.

೬೯. ಯಾವನು ಯಾವ ಇಷ್ಟಾರ್ಥವನ್ನು ಆಲೋಚಿಸಿ ಗಣನಾಥನನ್ನು ಪೂಜಿಸುವನೊ, ಅವನು ಅದನ್ನು ಶಂಕರನ ಮಾತಿನಂತೆ ಪಡೆಯುವನು.

೭೦. ಮಕ್ಕಳಿಲ್ಲದವನು ಮಕ್ಕಳನ್ನೂ, ದ್ರವ್ಯವಿಲ್ಲದವನು ದ್ರವ್ಯವನ್ನೂ ಹೊಂದುವನು. ಸಮರದಲ್ಲಿ ಗಣನಾಥನನ್ನು ಸ್ಮರಿಸಿದವನು ಶತ್ರುಗಳನ್ನು ಜಯಿಸುವನು.

ಯಾ ನಾರೀ ಪತಿನಾ ತ್ಯಕ್ತಾ ದುರ್ಭಗಾ ಚ ವಿರೂಪಿತಾ ।
ಸಾ ಸೌಭಾಗ್ಯಮವಾಪ್ನೋತಿ ಗಣನಾಥಸ್ಯ ಪೂಜಯಾ ॥ ೭೧ ॥
ಯ ಇದಂ ಪಠತೇ ನಿತ್ಯಂ ಶೃಣುಯಾದ್ವಾ ಸಮಾಹಿತಃ ।
ಸ ವಿಘ್ನಂ ಜಾಯತೇ ತಸ್ಯ ಸರ್ವಕೃತ್ಯೇಷು ಸರ್ವದಾ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಣಪತಿಪೂಜಾವಿಧಿಮಾಹಾತ್ಮ್ಯವರ್ಣನಂ" ನಾಮ
ಚತುರ್ದಶೋತ್ತರದ್ವಿಶತತಮೋಽಧ್ಯಾಯಃ

---

೭೧. ಗಂಡನಿಂದ ತ್ಯಜಿಸಲ್ಪಟ್ಟವಳೂ, ದುರ್ಭಗಳೂ, ಕುರೂಪಿಣಿಯೂ ಆದ ಹೆಂಗಸು ಗಣನಾಥನ ಪೂಜೆಯಿಂದ ಸೌಭಾಗ್ಯವನ್ನು ಹೊಂದುವಳು.

೭೨. ಸಾವಧಾನ ಮನಸ್ಸಿನಿಂದ ಇದನ್ನು ಪಠಿಸಿದವನ ಅಥವಾ ಕೇಳಿದವನ ಸಮಸ್ತ ಕಾರ್ಯಗಳಲ್ಲಿಯೂ ವಿಘ್ನವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಣಪತಿಪೂಜಾವಿಧಿಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಶ್ರಾದ್ಧಾವಶ್ಯಕತಾಕಾರಣವರ್ಣನಂ

ಋಷಯ ಊಚುಃ :—

ಸಾಂಪ್ರತಂ ವದ ನಃ ಸೂತ ಶ್ರಾದ್ಧಕಲ್ಪಸ್ಯ ಯೋ ವಿಧಿಃ ।
ವಿಸ್ತರೇಣ ಮಹಾಭಾಗ ಯಥಾ ತಚ್ಚಾಕ್ಷಯಂ ಭವೇತ್ ॥ ೧ ॥
ಕಸ್ಮಿನ್ಕಾಲೇ ಪ್ರಕರ್ತವ್ಯಂ ಶ್ರಾದ್ಧಂ ಪಿತೃಪರಾಯಣೈಃ ।
ಕೀದೃಶೈರ್ಬ್ರಾಹ್ಮಣೈಸ್ತಚ್ಚ ತಥಾ ದ್ರವ್ಯೈರ್ಮಹಾಮತೇ ॥ ೨ ॥

ಸೂತ ಉವಾಚ :—

ಏತದರ್ಥಂ ಪುರಾ ಪೃಷ್ಟೋ ಮಾರ್ಕಂಡೇಯೋ ಮಹಾಮುನಿಃ ।
ರೋಹಿತಾಶ್ವೇನ ವಿಪ್ರೇಂದ್ರಾ ಹರಿಶ್ಚಂದ್ರಸುತೇನ ಸಃ ॥ ೩ ॥
ಹರಿಶ್ಚಂದ್ರೇ ಗತೇ ಸ್ವರ್ಗಂ ರೋಹಿತಾಶ್ವೇ ನೃಪೇ ಸ್ಥಿತೇ ।
ತೀರ್ಥಯಾತ್ರಾ ಪ್ರಸಂಗೇನ ಮಾರ್ಕಂಡೋ ಮುನಿಸತ್ತಮಃ ॥ ೪ ॥

---

### ಕನ್ನಡದ ಅನುವಾದ

#### ಶ್ರಾದ್ಧಾವಶ್ಯಕತಾಕಾರಣವರ್ಣನ

೧–೨. ಋಷಿಗಳು ಹೇಳುತ್ತಾರೆ:—ಸೂತ! ಈಗ ಶ್ರಾದ್ಧಕಲ್ಪದ ವಿಧಿಯನ್ನೂ, ಆ ಶ್ರಾದ್ಧವು ಹೇಗೆ ಅಕ್ಷಯವಾಗುವುದೆಂಬುದನ್ನೂ, ಪಿತೃಗಳಲ್ಲಿ ಆಸಕ್ತಿಯುಳ್ಳ ಜನರು ಯಾವಾಗ ಶ್ರಾದ್ಧವನ್ನು ಎಂತಹ ಬ್ರಾಹ್ಮಣ ಮತ್ತು ದ್ರವ್ಯಗಳಿಂದ ಮಾಡಬೇಕು ಎಂಬುದನ್ನೂ ನಮಗೆ ವಿಸ್ತಾರವಾಗಿ ಹೇಳು.

೩. ಸೂತನು ಹೇಳುತ್ತಾನೆ:—ವಿಪ್ರವರ್ಯರೆ! ಹಿಂದೆ ಹರಿಶ್ಚಂದ್ರನ ಸುತನಾದ ರೋಹಿತಾಶ್ವನು ಮಾರ್ಕಂಡೇಯ ಮಹಾಮುನಿಯನ್ನು ಕುರಿತು ಈ ವಿಷಯದಲ್ಲಿ ಪ್ರಶ್ನೆಮಾಡಿರುವನು.

೪–೬. ಹರಿಶ್ಚಂದ್ರನು ಸ್ವರ್ಗಸ್ಥನಾದಮೇಲೆ ರೋಹಿತಾಶ್ವನು ರಾಜನಾಗಿರಲು ಮಾರ್ಕಂಡನೆಂಬ ಮುನಿವರ್ಯನು ತೀರ್ಥಯಾತ್ರಾನಿಮಿತ್ತದಿಂದ ಸರಯೂನದಿಯ ಪುಣ್ಯಕರವಾದ ಸಂಗಮದಲ್ಲಿ ಸ್ನಾನಕ್ಕಾಗಿ ಬಂದು ಅಲ್ಲಿ

ಸರಯ್ವಾಃ ಸಂಗಮೇ ಪುಣ್ಯೇ ಸ್ನಾನಾರ್ಥಂ ಸಮುಪಸ್ಥಿತಃ ।
ತತ್ರ ಸ್ನಾತ್ವಾ ಪಿತೄನ್ ದೇವಾನ್ ಸಂತರ್ಪ್ಯ ವಿಧಿಪೂರ್ವಕಂ ॥ ೫ ॥
ಪ್ರವಿಷ್ಟಸ್ತಾಂ ಪುರೀಂ ರಮ್ಯಾಮಯೋಧ್ಯಾಂ ಸತ್ಯನಾಮಿಕಾಂ ।
ರೋಹಿತಾಶ್ವೋಽಪಿ ತಂ ಶ್ರುತ್ವಾ ಸಮಾಯಾಂತಂ ಮುನೀಶ್ವರಂ ।
ಪದಾತಿಃ ಪ್ರಯಯೌ ತೂರ್ಣಂ ದೂರದೇಶಂ ತು ಸಮ್ಮುಖಂ ॥ ೬ ॥
ತತಃ ಪ್ರಣಮ್ಯ ತಂ ಮೂರ್ಧ್ನಾ ಕೃತಾಂಜಲಿಪುಟಃ ಸ್ಥಿತಃ ।
ಪ್ರೋವಾಚ ಮಧುರಂ ವಾಕ್ಯಂ ವಿನಯೇನ ಸಮನ್ವಿತಃ ॥ ೭ ॥
ಸ್ವಾಗತಂ ತೇ ಮುನಿಶ್ರೇಷ್ಠ ಭೂಯಃ ಸುಸ್ವಾಗತಂ ಮುನೇ ।
ಧನ್ಯೋಽಹಂ ಕೃತಪುಣ್ಯೋಽಹಂ ಸಂಪ್ರಾಪ್ತಃ ಪರಮಾಂ ಗತಿಂ ।
ಯತ್ತೇ ಪಾದರಜೋಭಿರ್ಮೇ ಮೂರ್ಧಜಾ ವಿಮಲೀಕೃತಾಃ ॥ ೮ ॥
ಏವಮುಕ್ತ್ವಾ ಗೃಹೀತ್ವಾ ತಂ ಸ್ವಹಸ್ತಾಲಂಬನಂ ತದಾ ।
ಯಯೌ ತತ್ರ ಸಭಾಸ್ಥಾನಂ ಬೃಹತ್ಸಿಂಹಾಸನಾಶ್ರಯಂ ॥ ೯ ॥
ಸಿಂಹಾಸನೇ ನಿವೇಶ್ಯಾಽಥ ತಂ ಮುನಿಂ ಪಾರ್ಥಿವೋತ್ತಮಃ ।
ಉಪವಿಷ್ಟೋ ಧರಾಪೃಷ್ಠೇ ಕೃತಾಂಜಲಿಪುಟಃ ಸ್ಥಿತಃ ॥ ೧೦ ॥
ತತಃ ಪ್ರೋವಾಚ ಮಧುರಂ ವಿನಯಾಽವನತಃ ಸ್ಥಿತಃ ।
ನಿಃಸ್ಪೃಹಸ್ಯಾಽಪಿ ವಿಪ್ರೇಂದ್ರ ಕಿಂ ವಾಽಽಗಮನಕಾರಣಂ ॥ ೧೧ ॥

---

ಏಂದು ವಿಧಿಯಂತೆ ಪಿತೃದೇವತೆಗಳನ್ನು ತೃಪ್ತಿಗೊಳಿಸಿ ಸತ್ಯವಾದ ಹೆಸರುಳ್ಳ ಅಯೋಧ್ಯಾಪುರವನ್ನು ಹೊಕ್ಕನು. ರೋಹಿತಾಶ್ವನೂ ಆ ಮುನಿವರ್ಯನು ಬರುತ್ತಿರುವುದನ್ನು ಕೇಳಿ ಶೀಘ್ರವಾಗಿ ಪಾದಚಾರಿಯಾಗಿ ಬಹಳ ದೂರ ಅಭಿಮುಖವಾಗಿ ಹೋದನು.

೭. ಬಳಿಕ ಆ ರೋಹಿತಾಶ್ವನು ಆ ಮಾರ್ಕಂಡನನ್ನು ವಂದಿಸಿ ಕೈಮುಗಿದು ಕೊಂಡು ವಿನಯದಿಂದ ಸವಿನುಡಿಯನ್ನಾಡಿದನು.

೮. "ಮುನಿವರ್ಯನೆ! ನಿನಗೆ ಸ್ವಾಗತವು; ಪುನಃ ಸುಸ್ವಾಗತವು. ನಿನ್ನ ಪಾದಧೂಳಿಯಿಂದ ನನ್ನ ತಲೆಕೂದಲುಗಳು ನಿರ್ಮಲವಾದುದರಿಂದ ನಾನು ಧನ್ಯನಾದೆನು. ಪುಣ್ಯವಂತನಾದೆನು. ಉತ್ತಮಗತಿಯನ್ನು ಪಡೆದೆನು."

೯. ಅವನು ಹೀಗೆ ಹೇಳಿ ಮುನಿಯ ಕೈಯನ್ನು ಹಿಡಿದುಕೊಂಡು ಮಹಾ ಸಿಂಹಾಸನವಿರುವ ಸಭಾಮಂಟಪಕ್ಕೆ ಹೋದನು.

೧೦–೧೨. ಅಲ್ಲಿ ಮುನಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ತಾನು ನೆಲದ ಮೇಲೆ ಕೈಮುಗಿದುಕೊಂಡು ಕುಳಿತು ವಿನಯದಿಂದ ಹೀಗೆಂದನು:. ಮುನಿಯೆ! ನೀನು ನಿಸ್ಪೃಹನಾದರೂ ಇಲ್ಲಿಗೆ ಬರಲು ಕಾರಣವೇನು? ನಿಜವಾಗಿ ಹೇಳು.

ತದ್ಬ್ರವೀಹಿ ಯಥಾತಥ್ಯಂ ಕರೋಮಿ ತವ ಸಾಂಪ್ರತಂ ।
ಅದೇಯಮಪಿ ದಾಸ್ಯಾಮಿ ಗೃಹಾಯಾತಸ್ಯ ತೇ ವಿಭೋ ॥ ೧೨ ॥

ಮಾರ್ಕಂಡೇಯ ಉವಾಚ:—

ತೀರ್ಥಯಾತ್ರಾ ಪ್ರಸಂಗೇನ ವಯಮತ್ರ ಸಮಾಗತಾಃ ।
ಸರಯ್ವಾಃ ಸಂಗಮೇ ಪುಣ್ಯೇ ಕಲ್ಯೇ ಯಾಸ್ಯಾಮಹೇ ಪುನಃ ॥ ೧೩ ॥
ನಿಃಸ್ಪೃಹೈರಪಿ ದ್ರಷ್ಟವ್ಯಾ ಧರ್ಮವಂತೋ ದ್ವಿಜೋತ್ತಮಾಃ ।
ತತಃ ಪ್ರೋಕ್ತಂ ಪುರಾಣಜ್ಞೈರ್ಬ್ರಾಹ್ಮಣೈಃ ಶಾಸ್ತ್ರದೃಷ್ಟಿಭಿಃ ॥ ೧೪ ॥
ಧರ್ಮವಂತಂ ನೃಪಂ ದೃಷ್ಟ್ವಾ ಲಿಂಗಂ ಸ್ವಾಯಂಭುವಂ ತಥಾ ।
ನದೀಂ ಸಾಗರಗಾಂ ಚೈವ ಮುಚ್ಯೇತ್ಪಾಪಾದ್ದಿನೋದ್ಭವಾತ್ ॥ ೧೫ ॥
ಏವಮುಕ್ತ್ವಾ ತತಶ್ಚಕ್ರೇ ಪೃಚ್ಛಾಂ ಸ ಮುನಿಸತ್ತಮಃ ।
ತಂ ದೃಷ್ಟ್ವಾ ನೃಪಶಾರ್ದೂಲಂ ಪುರಸ್ಥಂ ವಿನಯಾನ್ವಿತಂ ॥ ೧೬ ॥
ಕಚ್ಚಿತ್ತೇ ಸಫಲಾ ವೇದಾಃ ಕಚ್ಚಿತ್ತೇ ಸಫಲಂ ಶ್ರುತಂ ।
ಕಚ್ಚಿತ್ತೇ ಸಫಲಾ ದಾರಾಃ ಕಚ್ಚಿತ್ತೇ ಸಫಲಂ ಧನಂ ॥ ೧೭ ॥

ರೋಹಿತಾಶ್ವ ಉವಾಚ:—

ಕಥಂ ಸ್ಯುಃ ಸಫಲಾ ವೇದಾಃ ಕಥಂ ಸ್ಯಾತ್ಸಫಲಂ ಶ್ರುತಂ ।
ಕಥಂ ಸ್ಯುಃ ಸಫಲಾ ದಾರಾಃ ಕಥಂ ಸ್ಯಾತ್ಸಫಲಂ ಧನಂ ॥ ೧೮ ॥

---

ಈಗ ನಿನಗೆ ನಾನೇನು ಸಹಾಯಮಾಡಲಿ? ಮನೆಗೆ ಬಂದ ನಿನಗೆ ಕೊಡಕೂಡದಲ್ಲವಾದ ಏನನ್ನಾದರೂ ಕೊಡುವೆನು.

೧೩. ಮಾರ್ಕಂಡೇಯನು ಹೇಳುತ್ತಾನೆ:—ನಾವು ತೀರ್ಥಯಾತ್ರೆಯ ನಿಮಿತ್ತವಾಗಿ ಪುಣ್ಯಕರವಾದ ಸರಯೂ ನದಿಯ ಸಂಗಮ ಸ್ಥಳಕ್ಕೆ ಬಂದೆವು. ನಾಳೆ ಬೆಳಗ್ಗೆ ಮರಳಿ ತೆರಳುವೆವು.

೧೪–೧೫. ನಿಸ್ಪೃಹರೂ ಧರ್ಮಿಷ್ಠರೂ ಆದ ದ್ವಿಜೋತ್ತಮರನ್ನು ನೋಡಬೇಕು. ಆದುದರಿಂದ ಪುರಾಣವನ್ನರಿತವರೂ, ಶಾಸ್ತ್ರಜ್ಞಾನವುಳ್ಳವರೂ ಆದ ಬ್ರಾಹ್ಮಣರು ಧರ್ಮಿಷ್ಠನಾದ ದೊರೆಯನ್ನೂ, ಸ್ವಯಂ ಉತ್ಪನ್ನವಾದ ಲಿಂಗವನ್ನೂ, ಸಾಗರಗಾಮಿಯಾದ ನದಿಯನ್ನೂ ದರ್ಶನ ಮಾಡಿದವರಿಗೆ ಒಂದು ದಿನದ ಪಾಪವು ಪರಿಹಾರವಾಗುವುದು.

೧೬–೧೭. ಆ ಮಾರ್ಕಂಡೇಯನು ಹೀಗೆ ಹೇಳಿ ಮುಂದೆ ವಿನಯದಿಂದಿರುವ ರಾಜನನ್ನು ಹೀಗೆ ಪ್ರಶ್ನೆಮಾಡಿದನು. ನಿನ್ನ ವೇದಗಳೂ, ಶಾಸ್ತ್ರಶ್ರವಣವೂ, ಪತ್ನಿಯೂ, ಧನವೂ ಸಫಲವಾಗಿರುವುವೊ?

೧೮. ರೋಹಿತಾಶ್ವನು ಹೇಳುತ್ತಾನೆ:—ವೇದಗಳೂ, ಶಾಸ್ತ್ರಶ್ರವಣವೂ, ಪತ್ನಿಯೂ, ಧನವೂ ಹೇಗೆ ಸಫಲವಾಗುವುವು?

ಮಾರ್ಕಂಡೇಯ ಉವಾಚ :—

ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಂ ।
ರತಿಪುತ್ರಫಲಾ ದಾರಾ ದತ್ತಭುಕ್ತಫಲಂ ಧನಂ ॥ ೧೯ ॥
ಏವಂ ಜ್ಞಾತ್ವಾ ಮಹಾರಾಜ ನಾಽನ್ಯಥಾ ಕರ್ತುಮರ್ಹಸಿ ॥ ೨೦ ॥
ಚತ್ವಾರ್ಯೇತಾನಿ ಕೃತ್ಯಾನಿ ಮಯೋಕ್ತಾನಿ ಚ ತಾನಿ ತೇ ।
ಯಥಾ ತಾನಿ ಪ್ರಕೃತ್ಯಾನಿ ಲೋಕದ್ವಯಮಭೀಪ್ಸತಾ ॥ ೨೧ ॥
ಏವಮುಕ್ತ್ವಾ ತತಶ್ಚಕ್ರೇ ಕಥಾಶ್ಚಿತ್ರಾಶ್ಚ ತತ್ಪುರಃ ।
ರಾಜರ್ಷೀಣಾಂ ಪುರಾಣಾನಾಂ ದೇವರ್ಷೀಣಾಂ ವಿಶೇಷತಃ ॥ ೨೨ ॥
ತತಃ ಕಥಾವಸಾನೇ ಚ ಕಸ್ಮಿಂಶ್ಚಿದ್ದ್ವಿಜಸತ್ತಮಾಃ ।
ಪಪ್ರಚ್ಛ ತಂ ಮುನಿಶ್ರೇಷ್ಠಂ ರೋಹಿತಾಶ್ವೋ ಮಹೀಪತಿಃ ॥ ೨೩ ॥
ಭಗವಂಛ್ರೋತುಮಿಚ್ಛಾಮಿ ಶ್ರಾದ್ಧಕಲ್ಪಮಹಂ ಯತಃ ।
ದೃಶ್ಯಂತೇ ಬಹವೋ ಭೇದಾ ದ್ವಿಜಾನಾಂ ಶ್ರಾದ್ಧಕರ್ಮಣಿ ॥ ೨೪ ॥

ಮಾರ್ಕಂಡೇಯ ಉವಾಚ :—

ಸತ್ಯಮೇತನ್ಮಹಾಭಾಗ ಯತ್ಪೃಷ್ಟೋಽಸ್ಮಿ ನೃಪೋತ್ತಮ ।
ಶ್ರಾದ್ಧಸ್ಯ ಬಹವೋ ಭೇದಾಃ ಶಾಖಾಭೇದೈರ್ವ್ಯವಸ್ಥಿತಾಃ ॥ ೨೫ ॥

---

೧೯. ಮಾರ್ಕಂಡೇಯನು ಹೇಳುತ್ತಾನೆ:—ವೇದಗಳಿಗೆ ಅಗ್ನಿಹೋತ್ರ ಮಾಡುವುದೂ, ಶಾಸ್ತ್ರಶ್ರವಣಕ್ಕೆ ಒಳ್ಳೆ ನಡತೆಯೂ, ಪತ್ನಿಗೆ ರತಿ ಮತ್ತು ಪುತ್ರರೂ, ಧನಕ್ಕೆ ದಾನಭೋಗಗಳೂ ಫಲವಾಗಿರುವುವು.

೨೦—೨೧. ಮಹಾರಾಜ! ಇದನ್ನರಿತು ಇದಕ್ಕೆ ವ್ಯತ್ಯಾಸವಾಗಿ ಯಾವ ಕಾರ್ಯವನ್ನೂ ಮಾಡಬೇಡ. ಎರಡು ಲೋಕಗಳನ್ನು ಬಯಸುವವನು ಈ ನಾಲ್ಕನ್ನೂ ಅನುಷ್ಠಾನ ಮಾಡಬೇಕು.

೨೨. ಮಾರ್ಕಂಡೇಯನು ಹೀಗೆ ಹೇಳಿ ಆ ರೋಹಿತಾಶ್ವನ ಮುಂದೆ ಹಿಂದಿನ ರಾಜರ್ಷಿಗಳ ಮತ್ತು ದೇವರ್ಷಿಗಳ ವಿಚಿತ್ರವಾದ ಕಥೆಗಳನ್ನು ಹೇಳಿದನು.

೨೩. ಬಳಿಕ ರೋಹಿತಾಶ್ವನು ಕಥೆಯು ಮುಗಿದ ಕೂಡಲೆ ಆ ಮುನಿಯನ್ನು ಹೀಗೆ ಪ್ರಶ್ನೆಮಾಡಿದನು.

೨೪. ಪೂಜ್ಯನೆ! ದ್ವಿಜರ ಶ್ರಾದ್ಧವಿಷಯದಲ್ಲಿ ಬಹಳ ಭೇದಗಳು ಕಾಣಿಸುವುದರಿಂದ ಆ ಶ್ರಾದ್ಧಕಲ್ಪವನ್ನು ನಾನು ಕೇಳಲು ಇಚ್ಛಿಸುತ್ತೇನೆ.

೨೫. ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಭಾಗ್ಯವಂತನೆ! ನೀನು ಕೇಳಿರುವುದು ನಿಜ. ಶಾಖಾಭೇದಗಳಿಂದ ಶ್ರಾದ್ಧಭೇದಗಳೂ ಬಹಳವಾಗಿವೆ.

ತಸ್ಮಾತ್ತೇ ನಿರ್ಣಯಂ ವಚ್ಮಿ ಭರ್ತೃಯಜ್ಞೇನ ಯತ್ಪುರಾ ।
ಆನರ್ತಾಧಿಪತೇಃ ಪ್ರೋಕ್ತಂ ಸಮ್ಯಕ್ಛ್ರಾದ್ಧಸ್ಯ ಲಕ್ಷಣಂ ॥ ೨೬ ॥
ಭರ್ತೃಯಜ್ಞಂ ಸುಖಾಸೀನಂ ನಿಜಾಶ್ರಮುಪದೇ ನೃಪಃ ।
ಆನರ್ತಾಧಿಪತಿರ್ಗತ್ವಾ ಪ್ರಣಿಪತ್ಯ ತತೋಽಬ್ರವೀತ್ ॥ ೨೭ ॥

ಆನರ್ತ ಉವಾಚ :—

ಸಾಂಪ್ರತಂ ವದ ಮೇ ಬ್ರಹ್ಮಂಛ್ರಾದ್ಧಕಲ್ಪಂ ಪಿತ್ರೀಪ್ಸಿತಂ ।
ಯೇನ ಮೇ ತುಷ್ಟಿಮಾಯಾಂತಿ ಪಿತರಃ ಶ್ರಾದ್ಧತರ್ಪಿತಾಃ ॥ ೨೮ ॥
ಕಃ ಕಾಲೋ ವಿಹಿತಃ ಶ್ರಾದ್ಧೇ ಕಾನಿ ದ್ರವ್ಯಾಣಿ ಮೇ ವದ ।
ಶ್ರಾದ್ಧಾರ್ಹಾಣಿ ತಥಾಽನ್ಯಾನಿ ಮೇಧ್ಯಾನಿ ದ್ವಿಜಸತ್ತಮ ।
ಯಾನಿ ಯೋಜ್ಯಾನಿ ವಾಂಛದ್ಭಿಃ ಪಿತೄಣಾಂ ತೃಪ್ತಿಮುತ್ತಮಾಂ ॥ ೨೯ ॥
ಕೀದೃಶಾ ಬ್ರಾಹ್ಮಣಾ ಬ್ರಹ್ಮಂಛ್ರಾದ್ಧಾರ್ಹಾಃ ಪರಿಕೀರ್ತಿತಾಃ ।
ಕೀದೃಶಾ ವರ್ಜನೀಯಾಶ್ಚ ಸರ್ವಂ ಮೇ ವಿಸ್ತರಾದ್ವದ ॥ ೩೦ ॥

ಭರ್ತೃಯಜ್ಞ ಉವಾಚ :—

ಅಹಂ ತೇ ಕೀರ್ತಯಿಷ್ಯಾಮಿ ಶ್ರಾದ್ಧಕಲ್ಪಮನುತ್ತಮಂ ।
ಯಂ ಶ್ರುತ್ವಾಽಪಿ ಮಹಾರಾಜ ಲಭೇಚ್ಛ್ರಾದ್ಧಫಲಂ ನರಃ ॥ ೩೧ ॥
ಶ್ರಾದ್ಧಮಿಂದುಕ್ಷಯೇಽವಶ್ಯಂ ಸದಾ ಕಾರ್ಯಂ ವಿಪಶ್ಚಿತಾ ।
ಯದಿ ಜ್ಯೇಷ್ಠತಮಃ ಸರ್ಗಃ ಸಂತಾನಂ ಚ ತಥಾ ನೃಪ ॥ ೩೨ ॥

---

೨೬. ಆದುದರಿಂದ ಹಿಂದೆ ಭರ್ತೃಯಜ್ಞನು ಆನರ್ತರಾಜನಿಗೆ ಹೇಳಿದ ಶ್ರಾದ್ಧದ ಲಕ್ಷಣವನ್ನು ನಿರ್ಣಯಿಸಿ ನಿನಗೆ ಹೇಳುತ್ತೇನೆ.

೨೭. ಒಮ್ಮೆ ಆನರ್ತರಾಜನು ಆಶ್ರಮದಲ್ಲಿ ಸುಖವಾಗಿ ಕುಳಿತಿರುವ ಭರ್ತೃಯಜ್ಞನನ್ನು ಸಮೀಪಿಸಿ ನಮಸ್ಕರಿಸಿ ಇಂತೆಂದನು.

೨೮. ಆನರ್ತನು ಹೇಳುತ್ತಾನೆ:—ಮುನಿಯೆ! ಈಗ ನನ್ನ ಪಿತೃಗಳು ಶ್ರಾದ್ಧದಿಂದ ತೃಪ್ತಿಗೊಳ್ಳುವ ಅವರಿಗಿಷ್ಟವಾದ ಶ್ರಾದ್ಧಕಲ್ಪವನ್ನು ಹೇಳು.

೨೯-೩೦. ಶ್ರಾದ್ಧಕ್ಕೆ ವಿಹಿತವಾದ ಕಾಲವಾವುದು? ಅದರ ದ್ರವ್ಯಗಳು ಯಾವುವು? ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬಯಸುವವರು ಯಾವ ದ್ರವ್ಯಗಳಿಂದ ಶ್ರಾದ್ಧ ಮಾಡಬೇಕು? ಶ್ರಾದ್ಧಾರ್ಹರಾದ ಬ್ರಾಹ್ಮಣರಾರು? ಶ್ರಾದ್ಧದಲ್ಲಿ ವರ್ಜ್ಯರಾದ ಬ್ರಾಹ್ಮಣರಾರು? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

೩೧. ಭರ್ತೃಯಜ್ಞನು ಹೇಳುತ್ತಾನೆ:—ಮಹಾರಾಜ! ನಾನು ನಿನಗೆ ಉತ್ತಮವಾದ ಶ್ರಾದ್ಧಕಲ್ಪವನ್ನು ಹೇಳುತ್ತೇನೆ. ಇದನ್ನು ಕೇಳಿದ ಮನುಷ್ಯನೂ ಶ್ರಾದ್ಧಫಲವನ್ನು ಪಡೆಯುವನು.

೩೨. ಜ್ಯೇಷ್ಠಪುತ್ರನೂ, ಸಂತತಿಯುವರೂ ಇದ್ದರೆ ಅಮಾವಾಸ್ಯೆಯ ದಿನ ಅವರು ಅವಶ್ಯವಾಗಿ ಶ್ರಾದ್ಧ ಮಾಡಬೇಕು.

ಶೀತಾರ್ತಾ ಯದ್ವದಿಚ್ಛಂತಿ ವಹ್ನಿಂ ಪ್ರಾವರಣಾನಿ ಚ ।
ಪಿತರಸ್ತದ್ವದಿಚ್ಛಂತಿ ಕ್ಷುತ್ತ್ವಾಮಾಶ್ಚಂದ್ರಸಂಕ್ಷಯಂ ॥ ೩೩ ॥
ದರಿದ್ರೋಪಹತಾ ಯದ್ವದ್ಧನಂ ವಾಂಛಂತಿ ಮಾನವಾಃ ।
ಪಿತರಸ್ತದ್ವದಿಚ್ಛಂತಿ ಕ್ಷುತ್ಕ್ಷಾಮಾಶ್ಚಂದ್ರಸಂಕ್ಷಯಂ ॥ ೩೪ ॥
ಯಥಾ ವೃಷ್ಟಿಂ ಪ್ರವಾಂಛಂತಿ ಕರ್ಷಕಾಃ ಸಸ್ಯವೃದ್ಧಯೇ ।
ತಥಾಽಽತ್ಮಪ್ರೀತಯೇ ತೇಽಪಿ ಪ್ರವಾಂಛಂತೀಂದುಸಂಕ್ಷಯಂ ॥ ೩೫ ॥
ಯಥೋಪಶ್ಚಕ್ರವಾಕ್ಯಶ್ಚ ವಾಂಛಂತಿ ರವಿದರ್ಶನಂ ।
ಪಿತರಸ್ತದ್ವದಿಚ್ಛಂತಿ ಶ್ರಾದ್ಧಂ ದರ್ಶಸಮುದ್ಭವಂ ॥ ೩೬ ॥
ಜಲೇನಾಽಪಿ ಚ ಯಃ ಶ್ರಾದ್ಧಂ ಶಾಕೇನಾಽಪಿ ಕರೋತಿ ವಾ ।
ದರ್ಶಸ್ಯೇ ಪಿತರಸ್ತೃಪ್ತಿಂ ಯಾಂತಿ ಪಾಪಂ ಪ್ರಣಶ್ಯತಿ ॥ ೩೭ ॥
ಅಮಾವಾಸ್ಯಾದಿನೇ ಪ್ರಾಪ್ತೇ ಗೃಹದ್ವಾರಂ ಸಮಾಶ್ರಿತಾಃ ।
ವಾಯುಭೂತಾಃ ಪ್ರವಾಂಛಂತಿ ಶ್ರಾದ್ಧಂ ಪಿತೃಗಣಾ ನೃಣಾಂ ।
ಯಾವದಸ್ತಮಯಂ ಭಾನೋಃ ಕ್ಷುತ್ಪಿಪಾಸಾ ಸಮಾಕುಲಾಃ ॥ ೩೮ ॥
ತತಶ್ಚಾಽಸ್ತಂಗತೇ ಭಾನೌ ನಿರಾಶಾದುಃಖಸಂಯುತಾಃ ।
ನಿಃಶ್ವಸ್ಯ ಸುಚಿರಂ ಯಾಂತಿ ಗರ್ಹಯಂತಿ ಸ್ವವಂಶಜಂ ॥ ೩೯ ॥

ಆನರ್ತ ಉವಾಚ :—

ಕಿಮರ್ಥಂ ಕ್ರಿಯತೇ ಶ್ರಾದ್ಧಮಮಾವಾಸ್ಯಾದಿನೇ ದ್ವಿಜ ।
ವಿಶೇಷೇಣ ಮಮಾಚಕ್ಷ್ವ ವಿಸ್ತರೇಣ ಯಥಾ ತಥಂ ॥ ೪೦ ॥

---

೩೩. ಚಳಿಯಿಂದ ನಡುಗುವವರು ಬೆಂಕಿ ಮತ್ತು ಹೊದ್ದಿಕೆಯನ್ನು ಅಪೇಕ್ಷಿಸುವಂತೆ ಹಸಿವಿನಿಂದ ಕೃಶರಾದ ಪಿತೃಗಳು ಅಮಾವಾಸ್ಯೆಯನ್ನು ಅಪೇಕ್ಷಿಸುವರು.

೩೪–೩೬. ದರಿದ್ರರು ಹಣವನ್ನೂ, ಒಕ್ಕಲಿಗರು ಸಸ್ಯವೃದ್ಧಿಗೆ ಮಳೆಯನ್ನೂ, ಚಕ್ರವಾಕವು ಪ್ರಾತಃಕಾಲ ಸೂರ್ಯೋದಯವನ್ನೂ ಅಪೇಕ್ಷಿಸುವಂತೆ ಹಸಿವಿನಿಂದ ಕೃಶರಾದ ಪಿತೃಗಳು ಅಮಾವಾಸ್ಯೆಯ ದಿನ ಶ್ರಾದ್ಧವನ್ನು ಅಪೇಕ್ಷಿಸುವರು.

೩೭. ಅಮಾವಾಸ್ಯೆಯ ದಿನ ನೀರಿನಿಂದಾಗಲಿ, ಶಾಕದಿಂದಾಗಲಿ ಶ್ರಾದ್ಧ ಮಾಡಿದವನ ಪಿತೃಗಳು ತೃಪ್ತಿಗೊಳ್ಳುವರು. ಪಾಪವೂ ಪರಿಹಾರವಾಗುವುದು.

೩೮. ಅಮಾವಾಸ್ಯೆಯ ದಿವಸ ಪಿತೃಗಳು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಮನೆಯ ಬಾಗಿಲಿಗೆ ಬಂದು ಸೂರ್ಯನು ಅಸ್ತಂಗತನಾಗುವವರೆಗೆ ಶ್ರಾದ್ಧವನ್ನು ಅಪೇಕ್ಷಿಸುತ್ತಾರೆ.

೩೯. ಸೂರ್ಯನು ಮುಳುಗಿದ ತರುವಾಯ ಅವರು ನಿರಾಶರಾಗಿ ದುಃಖದಿಂದ ಬಹಳ ಹೊತ್ತು ನಿಟ್ಟುಸಿರುಬಿಟ್ಟು ತಮ್ಮ ವಂಶದವರನ್ನು ನಿಂದಿಸುತ್ತಾರೆ.

೪೦. ಆನರ್ತನು ಹೇಳುತ್ತಾನೆ:— ಮುನಿಯೆ! ಅಮಾವಾಸ್ಯೆಯ ದಿನ ಏತಕ್ಕಾಗಿ ಶ್ರಾದ್ಧ ಮಾಡಬೇಕು? ಇದನ್ನು ವಿಸ್ತಾರವಾಗಿ ನನಗೆ ಹೇಳು.

ಮೃತಾಶ್ಚ ಪುರುಷಾ ವಿಪ್ರ ಸ್ವಕರ್ಮಜನಿತಾಂ ಗತಿಂ ।
ಗಚ್ಛಂತಿ ತೇ ಕಥಂ ತಸ್ಯ ಸುತಸ್ಯಾಶ್ರಯಮಾಯಯುಃ ॥ ೪೧ ॥
ಏಷ ನಃ ಸಂಶಯೋ ವಿಪ್ರ ಸುಮಹಾನ್ ಹೃದಿ ಸಂಸ್ಥಿತಃ ॥ ೪೨ ॥

ಭರ್ತೃಯಜ್ಞ ಉವಾಚ:—

ಸತ್ಯಮೇತನ್ಮಹಾಭಾಗ ಯತ್ತ್ವಯಾ ವ್ಯಾಹೃತಂ ವಚಃ ।
ಸ್ವಕರ್ಮಾರ್ಹಾಂ ಗತಿಂ ಯಾಂತಿ ಮೃತಾಃ ಸರ್ವತ್ರ ಮಾನವಾಃ ॥ ೪೩ ॥
ಪರಂ ಯಥಾ ಸಮಾಯಾಂತಿ ವಂಶಜಸ್ಯಾಶ್ರಯಂ ಪ್ರತಿ ।
ತಥಾ ತೇಽಹಂ ಪ್ರವಕ್ಷ್ಯಾಮಿ ನ ತಥಾ ಸಂಶಯೋ ಭವೇತ್ ॥ ೪೪ ॥
ಮೃತಾ ಯಾಂತಿ ತಥಾ ರಾಜನ್ ಯೇಽತ್ರ ಕೇಚಿನ್ಮಹೀತಲೇ ।
ತೇ ಜಾಯಂತೇ ನ ಮರ್ತ್ಯೇಽತ್ರ ಯಾವದ್ವಂಶಸ್ಯ ಸಂಸ್ಥಿತಿಃ ॥ ೪೫ ॥
ಪರಂ ಶುಭಾತ್ಮಕಾ ಯೇ ಚ ತೇ ತಿಷ್ಠಂತಿ ಸುರಾಲಯೇ ।
ಪಾಪಾತ್ಮಾನೋ ನರಾ ಯೇ ಚ ವೈವಸ್ವತನಿವಾಸಿನಃ ॥ ೪೬ ॥
ಅನ್ಯದೇಹಂ ಸಮಾಶ್ರಿತ್ಯ ಭುಂಜಾನಾಃ ಕರ್ಮಣಃ ಫಲಂ ।
ಶುಭಂ ವಾ ಯದಿ ವಾ ಪಾಪಂ ಸ್ವಯಂ ವಿಹಿತಮಾತ್ಮನಃ ॥ ೪೭ ॥
ಯಮಲೋಕೇ ಸ್ಥಿತಾನಾಂ ಹಿ ಸ್ವರ್ಗಸ್ಥಾನಾಮಪಿ ಕ್ಷುಧಾ ।
ಪಿಪಾಸಾ ಚ ತಥಾ ರಾಜಂಸ್ತೇಷಾಂ ಸಂಜಾಯತೇಽಧಿಕಾ ॥ ೪೮ ॥

---

೪೧. ಮೃತರಾದ ಮನುಷ್ಯರು ತಮ್ಮ ಕರ್ಮಾನುಸಾರವಾದ ಗತಿಯನ್ನು ಪಡೆಯುವರು. ಅವರು ಮಗನ ಆಶ್ರಯವನ್ನು ಹೇಗೆ ಪಡೆಯುವರು?

೪೨. ಮುನಿಯೆ! ನನ್ನ ಮನಸ್ಸಿನಲ್ಲಿ ಈ ಒಂದು ದೊಡ್ಡ ಸಂಶಯವಿದೆ.

೪೩. ಭರ್ತೃಯಜ್ಞನು ಹೇಳುತ್ತಾನೆ:—ಮಹಾ ಭಾಗ್ಯವಂತನೆ! ನೀನು ಹೇಳಿದ ಮಾತು ನಿಜ. ಮೃತರಾದ ಮಾನವರು ಎಲ್ಲೆಡೆಯಲ್ಲಿಯೂ ತಮ್ಮ ಕರ್ಮಾನುಸಾರವಾದ ಗತಿಯನ್ನೇ ಹೊಂದುವರು.

೪೪. ಆದರೂ ವಂಶಜನನ್ನು ಹೇಗೆ ಆಶ್ರಯಿಸುವರೆಂಬುದನ್ನು ಹೇಳುವೆನು. ಅದರಿಂದ ನಿನಗೆ ಸಂದೇಹವುಂಟಾಗಲಾರದು.

೪೫. ಈ ಭೂಲೋಕದಲ್ಲಿ ಮೃತರಾದ ಕೆಲವು ಜನರು ತಮ್ಮ ವಂಶವು ಇರುವವರೆಗೂ ಮರಳಿ ಮರ್ತ್ಯಲೋಕದಲ್ಲಿ ಜನಿಸುವುದಿಲ್ಲ.

೪೬—೪೭. ಆದರೆ ಪುಣ್ಯಮಾಡಿದವರು ದೇವಲೋಕದಲ್ಲಿಯೂ, ಪಾಪಿಗಳು ಯಮಲೋಕದಲ್ಲಿಯೂ ವಾಸಿಸುತ್ತಾರೆ. ಅವರು ಅಲ್ಲಿ ಬೇರೆ ದೇಹವನ್ನಾಶ್ರಯಿಸಿ ತಾವು ಮಾಡಿದ ಶುಭಾಶುಭ ಕರ್ಮಗಳನ್ನನುಭವಿಸುತ್ತಿರುವರು.

೪೮. ಅವರು ಯಮಲೋಕದಲ್ಲಿ ಅಥವಾ ದೇವಲೋಕದಲ್ಲಿ ವಾಸಿಸುತ್ತಿದ್ದರೂ ಅವರಿಗೆ ಹಸಿವು ಬಾಯಾರಿಕೆಗಳು ಅಧಿಕವಾಗಿ ಉಂಟಾಗುವುವು.

ಯಾವನ್ನರತ್ರಯಂ ರಾಜನ್ ಮಾತೃತಃ ಪಿತೃತಸ್ತಥಾ ।
ತೇಷಾಂ ಚ ಪರತೋ ಯೇ ಚ ತೇ ಸ್ವಕರ್ಮ ಶುಭಾಽಶುಭಂ ।
ಭುಂಜತೇ ಕ್ಷುತ್ಪಿಪಾಸಾ ಚ ನ ತೇಷಾಂ ಜಾಯತೇ ಕ್ವಚಿತ್ ॥ ೪೯ ॥
ತತ್ರಾಽಪಿ ಪತನಂ ತಸ್ಮಾತ್ಸ್ಥಾನಾದ್ಭವತಿ ಭೂಮಿಪ ।
ವಂಶೋಚ್ಛೇದಾತ್ಪುನಃ ಸರ್ವೇ ನಿಪತಂತಿ ಮಹೀತಲೇ ।
ತ್ರುಟದ್ರಜ್ಜು ನಿಬದ್ಧಂ ಹಿ ಭಾಂಡಂ ಯದ್ವನ್ನಿರಾಶ್ರಯಂ ॥ ೫೦ ॥
ಏತಸ್ಮಾತ್ಕಾರಣಾದ್ಯತ್ನಃ ಸಂತಾನಾಯ ವಿಚಕ್ಷಣೈಃ ।
ಪ್ರಕರ್ತವ್ಯೋ ಮನುಷ್ಯೇಂದ್ರ ವಂಶಸ್ಯ ಸ್ಥಿತಯೇ ಸದಾ ॥ ೫೧ ॥
ಅಪಿ ದ್ವಾದಶಧಾ ರಾಜನ್ನೌರಸಾದಿ ಸಮುದ್ಭವಾಃ ।
ತೇಷಾಮೇಕತಮೋಽಪ್ಯತ್ರ ನದೈವಾಜ್ಜಾಯತೇ ಸುತಃ ॥ ೫೨ ॥
ಪಿತೄಣಾಂ ಗುಪ್ತಯೇ ತೇನ ಸ್ಥಾಪ್ಯೋಽಶ್ವತ್ಥಃ ಸಮಾಧಿನಾ ।
ಪುತ್ರವತ್ಪರಿಪಾಲ್ಯಶ್ಚ ನಿರ್ವಿಶೇಷಂ ನರಾಧಿಪ ॥ ೫೩ ॥
ಯಾವತ್ಸಂಧಾರಯೇದ್ಭೂಮಿಸ್ತಮಶ್ವತ್ಥಂ ನರಾಧಿಪ ।
ಕೃತೋದ್ವಾಹಂ ಸಮಂ ಶಮ್ಯಾ ತಾವದ್ವಂಶೋಽಪಿ ತಿಷ್ಠತಿ ॥ ೫೪ ॥
ಅಶ್ವತ್ಥಜನಕಾ ಮರ್ತ್ಯಾ ನಿಪತ್ಯ ಜಗತೀತಲೇ ।
ಪಾಪಾನ್ಮುಕ್ತಾಃ ಸಮಾಯಾಂತಿ ಯೋನಿಂ ಶ್ರೇಷ್ಠಾಃ ಶುಭಾನ್ವಿತಾಃ ॥ ೫೫ ॥
ಏತಸ್ಮಾತ್ಕಾರಣಾದನ್ನಂ ನಿತ್ಯಂ ದೇಯಂ ತಥೋದಕಂ ।
ಸಮುದ್ದಿಶ್ಯ ಪಿತೄನ್ರಾಜನ್ ಯತಸ್ತೇ ತನ್ಮಯಾಃ ಸ್ಮೃತಾಃ ॥ ೫೬ ॥

---

೪೯. ತಂದೆತಾಯಿಗಳ ಮೂರು ತಲೆಮೊರೆಯ ತರುವಾಯ ಶುಭಾಶುಭ ಕರ್ಮಗಳನ್ನನುಭವಿಸುವವರಿಗೆ ಎಲ್ಲಿಯೂ ಹಸಿವು ಬಾಯಾರಿಕೆಗಳುಂಟಾಗುವುದಿಲ್ಲ.

೫೦–೫೧. ಅಲ್ಲಿಯೂ ಅವರ ವಂಶವು ನಷ್ಟವಾಗಲು ಹಗ್ಗವು ತುಂಡಾಗಲು ಆಶ್ರಯವಿಲ್ಲದ ಪಾತ್ರೆಯು ಕೆಳಗೆ ಬೀಳುವಂತೆ ಆ ಪಿತೃಗಳು ಮರಳಿ ಮರ್ತ್ಯ ಲೋಕದಲ್ಲಿ ಬೀಳುವರು. ಈ ಕಾರಣದಿಂದಲೇ ವಿದ್ವಾಂಸರು ವಂಶವೃದ್ಧಿಗಾಗಿ ಸಂತತಿಯನ್ನು ಪಡೆಯಲು ಯತ್ನಿಸಬೇಕು.

೫೨–೫೩. ಔರಸನೇ ಮೊದಲಾದ ಹನ್ನೆರಡು ವಿಧ ಪುತ್ರರಲ್ಲಿ ಒಬ್ಬನೂ ಪಿತೃಗಳ ರಕ್ಷಣೆಗಾಗಿ ಅದೃಷ್ಟವಶದಿಂದ ಹುಟ್ಟದಿದ್ದರೆ ಅವನು ಅಶ್ವತ್ಥವೃಕ್ಷವನ್ನು ನೆಟ್ಟು ಅದನ್ನು ಮಗನಂತೆ ಕಾಪಾಡಬೇಕು.

೫೪–೫೫. ಎಲೈ ರಾಜನೆ! ಶಮಿಯೊಡನೆ ವಿವಾಹವಾಗಿರುವ ಅಶ್ವತ್ಥಮರವನ್ನು ಭೂಮಿಯು ಧರಿಸಿರುವವರೆಗೆ ಆ ವಂಶವು ಇರುವುದು. ಅಶ್ವತ್ಥವನ್ನು ನೆಟ್ಟ ಮಾನವರು ಭೂಮಿಯಲ್ಲಿ ಬಿದ್ದು ಪಾಪಮುಕ್ತರಾಗಿ ಉತ್ತಮ ಜನ್ಮವನ್ನು ಪಡೆಯುವರು.

೫೬. ಪಿತೃಗಳು ಅನ್ನಮಯ ಶರೀರವುಳ್ಳವರಾದ್ದರಿಂದ ಅವರನ್ನುದ್ದೇಶಿಸಿ ಯಾವಾಗಲೂ ಅನ್ನೋದಕಗಳನ್ನು ಕೊಡಬೇಕು.

ಅದತ್ವಾ ಸಲಿಲಂ ಸಸ್ಯಂ ಪಿತೄಣಾಂ ಯೋ ನರಾಧಿಪ ।
ಸ್ವಯಮಶ್ನಾತಿ ವಾ ತೋಯಂ ಪಿಬೇತ್ಸಸ್ಯಾತ್ಪಿತೃದ್ರುಹಃ ।
ಸ್ವರ್ಗೇಽಪಿ ಚ ನ ತೇ ತೋಯಂ ಲಭಂತೇ ನಾಽನ್ನಮೇವ ಚ ॥ ೫೭ ॥
ನ ದತ್ತಂ ವಂಶಜೈರ್ಯತ್ರೈಶ್ಚೇದ್ವ್ಯಥಾಂ ಯಾಂತಿ ದಾರುಣಾಂ ।
ಕ್ಷುತ್ಪಿಪಾಸಾ ಸಮುದ್ಭೂತಾಂ ತಸ್ಮಾತ್ಸಂತರ್ಪಯೇತ್ಪಿತೄನ್ ॥ ೫೮ ॥
ನಿತ್ಯಂ ಶಕ್ತ್ಯಾ ನರೋ ರಾಜನ್ ಪಯೋಽನ್ನೈಶ್ಚ ಪೃಥಗ್ವಿಧೈಃ ।
ತಥಾನ್ನೈರ್ವಸ್ತ್ರನೈವೇದ್ಯೈಃ ಪುಷ್ಪಗಂಧಾನುಲೇಪನೈಃ ॥ ೫೯ ॥
ಪಿತೃಮೇಧಾದಿಭಿಃ ಪುಣ್ಯೈಃ ಶ್ರಾದ್ಧೈರುಚ್ಚಾವಚೈರಪಿ ।
ತರ್ಪಿತಾಸ್ತೇ ಪ್ರಯಚ್ಛಂತಿ ಕಾಮಾನಿಷ್ಟಾನ್ ಹೃದಿಸ್ಥಿತಾನ್ ।
ತ್ರಿವರ್ಗಂ ಚ ಮಹಾರಾಜ ಪಿತರಃ ಶ್ರಾದ್ಧತರ್ಪಿತಾಃ ॥ ೬೦ ॥
ತರ್ಪಯಂತಿ ನ ಯೇ ಪಾಪಾಃ ಸ್ವಪಿತೄನ್ನಿತ್ಯಶೋ ನೃಪ ।
ಪಶವಸ್ತೇ ಸದಾ ಜ್ಞೇಯಾ ದ್ವಿಪದಾಃ ಶೃಂಗವರ್ಜಿತಾಃ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧಾಽವಶ್ಯಕತಾಕಾರಣವರ್ಣನಂ"
ನಾಮ ಪಂಚದಶೋತ್ತರದ್ವಿಶತತಮೋಽಧ್ಯಾಯಃ

---

೫೭. ಅರಸ! ಪಿತೃಗಳಿಗೆ ಅನ್ನೋದಕಗಳನ್ನೀಯದೆ ತಾನೇ ಭೋಜನ ಮಾಡುವವನು ಪಿತೃದ್ರೋಹಿಯು. ಅವನ ಪಿತೃಗಳು ಸ್ವರ್ಗದಲ್ಲಿಯೂ ಅನ್ನೋದಕಗಳನ್ನು ಪಡೆಯುವುದಿಲ್ಲ.

೫೮. ವಂಶದವರು ಪಿತೃಗಳಿಗೆ ಅನ್ನೋದಕಗಳನ್ನು ಕೊಡದಿದ್ದರೆ ಆ ಪಿತೃಗಳು ಹಸಿವು ಬಾಯಾರಿಕೆಗಳಿಂದ ದಾರುಣವ್ಯಥೆಯನ್ನು ಹೊಂದುವರು. ಆದುದರಿಂದ ಅವರನ್ನು ತೃಪ್ತಿಗೊಳಿಸಬೇಕು.

೫೯–೬೦. ಮನುಷ್ಯನು ಯಾವಾಗಲೂ ಹಾಲು, ನಾನಾ ವಿಧವಾದ ಅನ್ನ, ವಸ್ತ್ರ, ನೈವೇದ್ಯ, ಪುಷ್ಪ, ಗಂಧ ಮೊದಲಾದುವುಗಳಿಂದ ಪಿತೃಮೇಧ ಮೊದಲಾದ ಶ್ರಾದ್ಧವನ್ನು ಮಾಡಿ ತೃಪ್ತಿಗೊಳಿಸಿದರೆ ಆ ಪಿತೃಗಳು ಇಷ್ಟಾರ್ಥಗಳನ್ನೂ, ಧರ್ಮಾರ್ಥಕಾಮಗಳನ್ನೂ ಕೊಡುವರು.

೬೧. ತಮ್ಮ ಪಿತೃಗಳನ್ನು ತೃಪ್ತಿಗೊಳಿಸದ ಪಾಪಿಗಳಾದ ಮಾನವರು ಕೊಂಬಿಲ್ಲದ ಎರಡು ಕಾಲುಗಳ ಪಶುಗಳೆಂದೇ ತಿಳಿಯಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧಾವಶ್ಯಕತಾಕಾರಣವರ್ಣನ" ವೆಂಬ
ಇನ್ನೂರಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋತ್ತರದ್ವಿಶತತಮೋಽಧ್ಯಾಯಃ

### ಶ್ರಾದ್ಧೋತ್ಪತ್ತಿವರ್ಣನಂ

ಆನರ್ತ ಉವಾಚ :—

ಅನ್ಯೇಽಪಿ ವಿವಿಧಾಃ ಕಾಲಾಃ ಸಂತಿ ಪುಣ್ಯತಮಾ ದ್ವಿಜ ।
ಕಸ್ಮಾಚ್ಚೇಂದುಕ್ಷಯೇ ಶ್ರಾದ್ಧಂ ವಿಶೇಷಾತ್ಸಮುದಾಹೃತಂ ॥ ೧ ॥
ಏತನ್ಮೇ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮುನೇ ॥ ೨ ॥

ಭರ್ತೃಯಜ್ಞ ಉವಾಚ :—

ಸತ್ಯಮೇತನ್ಮಹಾರಾಜ ಶ್ರಾದ್ಧಾರ್ಹಾಃ ಸಂತಿ ಭೂರಿಶಃ ।
ಕಾಲಾಃ ಪಿತೃಗಣಾನಾಂ ಚ ತೃಪ್ತಿದಾಸ್ತುಷ್ಟಿದಾಶ್ಚ ಯೇ ॥ ೩ ॥
ಮನ್ವಾದ್ಯಾ ವಾ ಯುಗಾದ್ಯಾಶ್ಚ ತೇಷಾಂ ಸಂಕ್ರಾಂತಯೋಽಪರಾಃ ।
ವ್ಯತೀಪಾತೋ ಗಜಚ್ಛಾಯಾ ಗ್ರಹಣಂ ಸೋಮಸೂರ್ಯಯೋಃ ॥ ೪ ॥
ಏತೇಷು ಯುಜ್ಯತೇ ಶ್ರಾದ್ಧಂ ಪ್ರಕರ್ತುಂ ಪಿತೃತೃಪ್ತಯೇ ।
ತಥಾ ತೀರ್ಥೇ ವಿಶೇಷೇಣ ಪುಣ್ಯ ಆಯತನೇ ಶುಭೇ ॥ ೫ ॥
ಶ್ರಾದ್ಧಾರ್ಹೈರ್ಬ್ರಾಹ್ಮಣೈಃ ಪ್ರಾಪ್ತೈರ್ದ್ರವ್ಯೈರ್ವಾ ಪಿತೃವಲ್ಲಭೈಃ ।
ಅಪರ್ವಣ್ಯಪಿ ಕರ್ತವ್ಯಂ ಸದಾ ಶ್ರಾದ್ಧಂ ವಿಚಕ್ಷಣೈಃ ॥ ೬ ॥

---

### ಕನ್ನಡದ ಅನುವಾದ

#### ಶ್ರಾದ್ಧೋತ್ಪತ್ತಿವರ್ಣನ

೧-೨. ಆನರ್ತನು ಹೇಳುತ್ತಾನೆ :—ಮಹರ್ಷಿಯೆ ! ಬಗೆಬಗೆಯ ಪುಣ್ಯಕರವಾದ ಇತರ ಕಾಲಗಳಿರಲು ಅಮಾವಾಸ್ಯೆಯ ದಿನವೇ ಶ್ರಾದ್ಧವು ವಿಹಿತವಾಗಿರುವುದೇಕೆ ? ಇದನ್ನು ನನಗೆ ವಿಸ್ತಾರವಾಗಿ ಹೇಳು.

೩. ಭರ್ತೃಯಜ್ಞನು ಹೇಳುತ್ತಾನೆ:—ಮಹಾರಾಜ ! ಪಿತೃಗಳಿಗೆ ತೃಪ್ತಿಯನ್ನೂ, ಸಂತೋಷವನ್ನೂ ಉಂಟುಮಾಡುವ ಶ್ರಾದ್ಧಾರ್ಹವಾದ ಕಾಲಗಳು ಬಹಳ ಇವೆ ನಿಜ.

೪-೬. ಆದರೂ ಮನ್ವಾದಿಗಳು, ಯುಗಾದಿಗಳು, ಸಂಕ್ರಾಂತಿಗಳು, ವ್ಯತೀಪಾತಗಳು, ಗಜಚ್ಛಾಯೆಗಳು, ಚಂದ್ರಸೂರ್ಯ ಗ್ರಹಣಗಳು ಇವುಗಳಲ್ಲಿ ಪಿತೃತೃಪ್ತಿಗಾಗಿ ಶ್ರಾದ್ಧ ಮಾಡುವುದು ಉಚಿತವಾದುದು. ಹಾಗೆಯೇ ತೀರ್ಥ, ಪುಣ್ಯಕರವಾದ ದೇವಾಲಯ ಇವುಗಳಲ್ಲಿ ಶ್ರಾದ್ಧಾರ್ಹರಾದ ಬ್ರಾಹ್ಮಣರೂ, ಪಿತೃಪ್ರಿಯವಾದ ದ್ರವ್ಯಗಳೂ ದೊರೆತಾಗ ಸರ್ವಕಾಲವಲ್ಲದಿದ್ದರೂ ಶ್ರಾದ್ಧ ಮಾಡಬೇಕು.

ಸೋಮಕ್ಷಯೋ ವಿಶೇಷೇಣ ಶೃಣುಷ್ವೈಕಮನಾ ನೃಪ ।
ಅಮಾನಾಮ ರವೇ ರಶ್ಮಿ ಸಹಸ್ರಪ್ರಮುಖಃ ಸ್ಥಿತಃ ॥ ೭ ॥
ಯಸ್ಯ ಸ್ವತೇಜಸಾ ಸೂರ್ಯಃ ಪ್ರೋಕ್ತಸ್ತ್ರೈಲೋಕ್ಯದೀಪಕಃ ।
ತಸ್ಮಿನ್ವಸತಿ ಯೇನೇಂದುರಮಾವಸ್ಯಾ ತತಃ ಸ್ಮೃತಾ ॥ ೮ ॥
ಅಕ್ಷಯಾ ಧರ್ಮಕೃತ್ಯೇ ಸಾ ಪಿತೃಕೃತ್ಯೇ ವಿಶೇಷತಃ ।
ಅಗ್ನಿಷ್ವಾತ್ತಾ ಬರ್ಹಿಷದ ಆಜ್ಯಪಾಃ ಸೋಮಪಾಸ್ತಥಾ ॥ ೯ ॥
ರಶ್ಮಿಪಾ ಉಪಹೂತಾಶ್ಚ ತಥೈವಾಯಂತುನಾಃ ಪರೇ ।
ತಥಾ ಶ್ರಾದ್ಧಭುಜಶ್ಚಾಽನ್ಯೇ ಸ್ಮೃತಾ ನಾಂದೀಮುಖಾ ನೃಪ ॥ ೧೦ ॥
ಏತೇ ಪಿತೃಗಣಾಃ ಖ್ಯಾತಾ ನವದೇವಸಮುದ್ಭವಾಃ ।
ಆದಿತ್ಯಾ ವಸವೋ ರುದ್ರಾ ನಾಸತ್ಯಾವಶ್ವಿನಾವಪಿ ॥ ೧೧ ॥
ಸಂತರ್ಪಯಂತಿ ತೇ ಚೈತಾನ್ ಮುಕ್ತ್ವಾ ನಾಂದೀಮುಖಾನ್ ಪಿತೄನ್ ।
ಬ್ರಹ್ಮಣಾ ತೇ ಸಮಾದಿಷ್ಟಾಃ ಪಿತರೋ ನೃಪಸತ್ತಮ ॥ ೧೨ ॥
ತಾನ್ ಸಂತರ್ಪ್ಯ ತತಃ ಸೃಷ್ಟಿಂ ಕುರುತೇ ಪದ್ಮಸಂಭವಃ ॥ ೧೩ ॥
ಪಿತರೋಽನ್ಯೇಽಪಿ ಮರ್ತ್ಯಾಶ್ಚ ನಿವಸಂತಿ ತ್ರಿವಿಷ್ಟಪೇ ।
ದ್ವಿವಿಧಾಸ್ತೇ ಪ್ರದೃಶ್ಯಂತೇ ಸುಖಿನೋಽಸುಖಿನಃ ಪರೇ ॥ ೧೪ ॥

---

೭–೧೨. ಅಮಾವಾಸ್ಯೆಯ ದಿನ ವಿಶೇಷವಾಗಿ ಶ್ರಾದ್ಧ ಮಾಡಲು ಕಾರಣವನ್ನು ಕೇಳು. ಸೂರ್ಯನ ಸಾವಿರಾರು ಕಿರಣಗಳ ಸಮೀಪ ಭಾಗವು ಅಮಾ ಎನ್ನಿಸಿಕೊಳ್ಳುವುದು. ಆ ಸಮೀಪ ಭಾಗದ ಸಂಬಂಧದಿಂದ ಸೂರ್ಯನು ತನ್ನ ತೇಜಸ್ಸಿನಿಂದ ತ್ರೈಲೋಕ್ಯ ಪ್ರಕಾಶಕನಾಗಿರುವನು. ಅಲ್ಲಿ ಇಂದುವು ವಾಸಿಸುವುದರಿಂದ ಆ ತಿಥಿಯು ಅಮಾವಾಸ್ಯೆಯೆನ್ನಿಸಿಕೊಳ್ಳುವುದು. ಅದು ಧರ್ಮಕಾರ್ಯದಲ್ಲಿಯೂ ಪಿತೃಕಾರ್ಯದಲ್ಲಿಯೂ ಅಕ್ಷಯತಿಥಿಯಾಗಿರುವುದು. ಅಗ್ನಿಷ್ವಾತ್ತಾ, ಬರ್ಹಿಷದ, ಆಜ್ಯಪಾ, ಸೋಮಪಾ, ರಶ್ಮಿಪಾ, ಉಪಹೂತಾ, ಆಯಂತುನಾ, ಶ್ರಾದ್ಧಭುಜ, ನಾಂದೀಮುಖಾ ಎಂದು ದೇವಸಂಬಂಧವಾದ ಒಂಬತ್ತು ಪಿತೃಗಣಗಳು ಪ್ರಸಿದ್ಧವಾಗಿವೆ. ಇವರಲ್ಲಿ ನಾಂದೀಮುಖ ಪಿತೃಗಳನ್ನು ಹೊರತು ಉಳಿದ ಪಿತೃಗಳನ್ನು ಆದಿತ್ಯರು, ವಸುಗಳು, ರುದ್ರರು, ನಾಸತ್ಯರು, ಅಶ್ವಿನರು ಇವರು ತೃಪ್ತಿಗೊಳಿಸುವರು. ಬ್ರಹ್ಮನು ಅವರನ್ನು ಪಿತೃಗಳೆಂದಿರುವನು.

೧೩. ಬ್ರಹ್ಮನು ಅವರನ್ನು ತೃಪ್ತಿಗೊಳಿಸಿ ಸೃಷ್ಟಿ ಮಾಡುವನು.

೧೪. ಸ್ವರ್ಗದಲ್ಲಿ ಇತರ ಮರ್ತ್ಯಪಿತೃಗಳಿರುವರು. ಅವರು ಸುಖಿಗಳು, ಅಸುಖಿಗಳೆಂದು ಎರಡು ವಿಧವಾಗಿ ಕಾಣಿಸುತ್ತಾರೆ.

ಯೇಭ್ಯಃ ಶ್ರಾದ್ಧಾನಿ ಯಚ್ಛಂತಿ ಮರ್ತ್ಯಲೋಕೇ ಸ್ವವಂಶಜಾಃ ।
ತೇ ಸರ್ವೇ ತತ್ರ ಸಂಹೃಷ್ಟಾ ದೇವವನ್ಮುದಿತಾಃ ಸ್ಥಿತಾಃ ॥ ೧೫ ॥
ಯೇಷಾಂ ಯಚ್ಛಂತಿ ತೇನ್ನೈವ ಕಿಂಚಿತ್ಕಿಂಚಿತ್ಸ್ವವಂಶಜಾಃ ।
ಕ್ಷುತ್ಪಿಪಾಸಾಕುಲಾಸ್ತೇ ಚ ದೃಶ್ಯಂತೇ ಬಹುದುಃಖಿತಾಃ ॥ ೧೬ ॥
ಕಸ್ಯಚಿತ್ತ್ವಥ ಕಾಲಸ್ಯ ಪಿತರಃ ಸುರಪೂಜಿತಾಃ ।
ಅಗ್ನಿಷ್ವಾತ್ತಾದಯಃ ಸರ್ವೇ ತ್ರಿದಶೇಂದ್ರಮುಪಸ್ಥಿತಾಃ ॥ ೧೭ ॥
ಭಕ್ತ್ಯಾ ದೃಷ್ಟ್ವಾ ಮಹಾರಾಜ ಸಹಸ್ರಾಕ್ಷೇಣ ಪೂಜಿತಾಃ ।
ತಥಾಽನ್ಯೈರ್ವಿಬುಧೈಃ ಸರ್ವೈಃ ಪ್ರಸ್ಥಿತಾಃ ಸ್ವೇ ನಿಕೇತನೇ ॥ ೧೮ ॥
ಪಿತೃಲೋಕಂ ಮಹಾರಾಜ ದುರ್ಲಭಂ ತ್ರಿದಶೈರಪಿ ।
ತಾನ್ ದೃಷ್ಟ್ವಾ ಪ್ರಸ್ಥಿತಾನ್ ರಾಜನ್ ಪಿತರೋ ಮರ್ತ್ಯಸಂಭವಾಃ ॥೧೯॥
ಕ್ಷುತ್ಪಿಪಾಸಾರ್ದಿತಾ ಯೇಚ ತ ಊಚುರ್ದೈನ್ಯಮಾಶ್ರಿತಾಃ ।
ಸ್ತುತ್ವಾಽಥ ಸುಸ್ತವೈರ್ದಿವ್ಯೈಃ ಪಿತೃಸೂಕ್ತೈಶ್ಚ ಪಾರ್ಥಿವ ॥ ೨೦ ॥
ವೇದೋಕ್ತೈರಪರೈಶ್ಚೈವ ಪಿತೃತುಷ್ಟಿಕರೈಃ ಪರೈಃ ।
ತತಃ ಪ್ರೋಚುಶ್ಚ ಸಂಹೃಷ್ಟಾಃ ಪಿತರಸ್ತಾನ್ ಸುರೋದ್ಭವಾಃ ॥ ೨೧ ॥
ಪ್ರಸನ್ನಾಃ ಸ್ಮೋ ವಯಂ ಸರ್ವೇ ಯುಷ್ಮಾಕಂ ಶಂಸಿತವ್ರತಾಃ ।
ತಸ್ಮಾದ್ಬ್ರೂತ ವಯಂ ಯೇನ ಯಚ್ಛಾಮೋ ವೋ ಹೃದಿಸ್ಥಿತಂ ॥ ೨೨ ॥

---

೧೫. ಯಾರಿಗೆ ಮರ್ತ್ಯಲೋಕದಲ್ಲಿರುವ ವಂಶಜರು ಶ್ರಾದ್ಧ ಮಾಡುವರೊ, ಅವರು ದೇವತೆಗಳಂತೆ ಸುಖಿಗಳಾಗಿರುವರು.

೧೬. ಯಾರಿಗೆ ವಂಶಜರು ಸ್ವಲ್ಪವನ್ನೂ ಕೊಡುವುದಿಲ್ಲವೊ, ಅವರು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಅತಿ ದುಃಖಿಗಳಾಗಿರುವರು.

೧೭. ಒಂದಾನೊಂದು ಕಾಲದಲ್ಲಿ ಸುರಪೂಜಿತರಾದ ಅಗ್ನಿಷ್ವಾತ್ತಾದಿ ಪಿತೃಗಳು ಇಂದ್ರನೆಡೆಗೆ ಬಂದರು.

೧೮–೨೧. ಇಂದ್ರನು ಅವರನ್ನು ಭಕ್ತಿಯಿಂದ ಕಂಡು ಪೂಜಿಸಿದನು. ಇತರ ದೇವತೆಗಳೆಲ್ಲರೂ ಪೂಜಿಸಿದರು. ಅನಂತರ ಆ ಪಿತೃಗಳು ದೇವತೆಗಳಿಗೂ ದುರ್ಲಭವಾದ ತಮ್ಮ ಆವಾಸಸ್ಥಾನವಾದ ಪಿತೃಲೋಕಕ್ಕೆ ತೆರಳಲು ಹಸಿವು ಬಾಯಾರಿಕೆಗಳಿಂದ ಪೀಡಿತರಾದ ಮನುಷ್ಯಪಿತೃಗಳು ಅವರನ್ನು ನೋಡಿ ದಿವ್ಯ ಸ್ತೋತ್ರಗಳಿಂದಲೂ, ಪಿತೃಸೂಕ್ತಗಳಿಂದಲೂ, ಪಿತೃಗಳಿಗೆ ಸಂತೋಷವನ್ನುಂಟು ಮಾಡುವ ಇತರ ವೇದೋಕ್ತ ಮಂತ್ರಗಳಿಂದಲೂ ಸ್ತುತಿಸಿದರು. ಅನಂತರ ಆ ದೇವಪಿತೃಗಳು ಸಂತೋಷಗೊಂಡು ಇಂತೆಂದರು.

೨೨. ಸ್ತುತ್ಯವ್ರತವುಳ್ಳ ಮಾನುಷ ಪಿತೃಗಳೆ! ನಾವು ನಿಮ್ಮ ವಿಷಯದಲ್ಲಿ ಸಂತುಷ್ಟರಾಗಿದ್ದೇವೆ. ಆದುದರಿಂದ ನಾವು ನಿಮಗಿಷ್ಟವಾದ ಯಾವುದನ್ನು ಕೊಡಬೇಕು ಹೇಳಿರಿ.

ಪಿತರ ಊಚುಃ:—
ವಯಂ ಹಿ ಪಿತರಃ ಖ್ಯಾತಾ ಮನುಷ್ಯಾಣಾಮಿಹಾಗತಾಃ ।
ಸ್ವರ್ಗೇ ಸ್ವಕರ್ಮಣಾ ನಿತ್ಯಂ ನಿವಸಾಮ ಸುರೈಃ ಸಹ ॥ ೨೩ ॥
ವಿಮಾನೇಷು ವಿಚಿತ್ರೇಷು ಸಂಸ್ಥಿತಾಃ ಸರ್ವತೋ ದಿಶಂ ।
ಪಾಂಛಿತೇಷು ಚ ಲೋಕೇಷು ಯಾವನೋ ಧ್ವಜಪತಾಕಿಷು ॥ ೨೪ ॥
ಹಂಸಬರ್ಹಿಣಜುಷ್ಟೇಷು ಸಂಸೇವ್ಯೇಷ್ವಪ್ಸರೋಗಣೈಃ ।
ಗಂಧರ್ವೈರ್ಗೀಯಮಾನಾಶ್ಚ ಸ್ತೂಯಮಾನಾಶ್ಚ ಗುಹ್ಯಕೈಃ ॥ ೨೫ ॥
ಪರಂ ಸಂತಿಷ್ಠಮಾನಾನಾಮಸ್ಮಾಕಂ ತ್ರಿದಶೈಃ ಸಹ ।
ಅತ್ಯರ್ಥಂ ಜಾಯತೇ ತೀವ್ರಾ ಕ್ಷುತ್ಪಿಪಾಸಾ ಸುದಾರುಣಾ ॥ ೨೬ ॥
ಯಸ್ಯಾ ಮನ್ಯಾಮಹೇ ಚಿತ್ತೇ ವಹ್ನಿಮಧ್ಯಗತಾ ವಯಂ ।
ಭಕ್ಷಯಾಮಃ ಕಿಮೇತಾನ್ ಹಿ ಪಕ್ಷಿಣೋ ವಿವಿಧಾನಪಿ ।
ಹಂಸಾದೀನ್ ಮಧುರಾಲಾಪಾನ್ ಕಿಂವಾ ಚಾಽಪ್ಸರಸಾಂ ಗಣಾನ್ ॥೨೭॥
ಯದಿ ಕಶ್ಚಿತ್ಕ್ಷುಧಾವಿಷ್ಟಃ ಕಂಚಿದಾದಾಯ ಪಕ್ಷಿಣಂ ।
ಗುಪ್ತೋ ಗೃಹ್ಣಾತಿ ಭಕ್ಷಾರ್ಥಂ ಹಂತುಂ ಶಕ್ತೋಽಪಿ ಸೋಽಪಿ ನ ॥೨೮॥
ಅಜರಾಶ್ಚಾಮರಾಶ್ಚೈವ ಸ್ವರ್ಗೇ ಯೇ ಸ್ವರ್ಗಗಾಃ ಖಗಾಃ ।
ತಥಾ ಮನೋರಮಾ ವೃಕ್ಷಾ ನಂದನಾದಿ ವನೇಷು ಚ ॥ ೨೯ ॥

---

೨೩. ಪಿತೃಗಳು ಹೇಳುತ್ತಾರೆ:—ಮನುಷ್ಯಪಿತೃಗಳೆಂದೆನಿಸಿಕೊಂಡ ನಾವು ಕರ್ಮವಶದಿಂದ ಈ ಸ್ವರ್ಗಕ್ಕೆ ಬಂದು ದೇವತೆಗಳೊಡನೆ ವಾಸಿಸುತ್ತಿರುವೆವು.

೨೪—೨೫. ವಿಚಿತ್ರವಾದ ವಿಮಾನಗಳಲ್ಲಿ ಕುಳಿತು ಧ್ವಜಪತಾಕೆಗಳುಳ್ಳುದೂ, ಹಂಸ, ನವಿಲುಗಳಿಂದ ಸೇವಿತವಾದುದೂ, ಅಪ್ಸರೆಯರಿಂದ ಕೂಡಿರುವುದೂ ಆದ ಲೋಕಗಳಲ್ಲಿ ಗಂಧರ್ವರಿಂದ ಗಾನಮಾಡಲ್ಪಟ್ಟವರೂ, ಗುಹ್ಯಕರಿಂದ ಸ್ತುತಿಸಲ್ಪಟ್ಟವರೂ ಆಗಿ ಸಂಚರಿಸುವೆವು.

೨೬. ಆದರೆ ದೇವತೆಗಳೊಡನೆ ವಾಸಿಸುತ್ತಿರುವ ನಮಗೆ ದಾರುಣವಾದ ಹಸಿವು ಬಾಯಾರಿಕೆಗಳು ಅತಿಶಯವಾಗಿ ಉಂಟಾಗುವುವು.

೨೭. ನಾವು ಈ ಕ್ಷುತ್ಪಿಪಾಸೆಗಳಿಂದ ಬೆಂಕಿಯ ಮಧ್ಯದಲ್ಲಿರುವೆವೊ ಎಂಬಂತೆ ತಿಳಿಯುತ್ತೇವೆ. ಇಂಪಾಗಿ ನುಡಿಯುವ ಹಂಸ ಮೊದಲಾದ ಈ ಪಕ್ಷಿಗಳನ್ನೂ, ಅಪ್ಸರರ ಸಮೂಹವನ್ನೂ ತಿನ್ನೋಣವೇನು ಎಂದು ಅಪೇಕ್ಷಿಸುತ್ತೇವೆ.

೨೮—೩೧. ನಮ್ಮಲ್ಲೊಬ್ಬನು ಹಸಿವಿನಿಂದ ಯಾವುದಾದರೂ ಪಕ್ಷಿಯನ್ನು ತಿನ್ನುವುದಕ್ಕಾಗಿ ಗುಟ್ಟಾಗಿ ಹಿಡಿದರೂ ಸ್ವರ್ಗದಲ್ಲಿರುವ ಪಕ್ಷಿಗಳೆಲ್ಲ ಜರಾಮರಣವಿಲ್ಲದುವಾದ್ದರಿಂದ ಅದನ್ನು ಕೊಲ್ಲಲು ಶಕ್ತನಾಗುವುದಿಲ್ಲ. ಹಾಗೆಯೇ ನಂದನಾದಿ ವನಗಳಲ್ಲಿ ಬೆಳೆದ ಮನೋಹರ ವೃಕ್ಷಗಳು ಫಲದಿಂದ ಕೂಡಿ ಕೈಗೆ ಸಿಕ್ಕು

ಫಲಿತಾ ಯೇ ಪ್ರದೃಶ್ಯಂತೇ ಪ್ರಾಪ್ಯಾಶ್ಚಾಽಪಿ ಮನೋರಮಾಃ ।
ತತ್ಫಲಾನಿ ವಯಂ ಸರ್ವೇ ಗೃಹ್ಣೀಮಃ ಪಿತರೋ ಯದಿ ॥ ೩೦ ॥
ನ ತ್ರುಟಂತ್ಯಪಿ ಯತ್ನೇನ ಸಮಾಕೃಷ್ಟಾನಿ ತಾನ್ಯಪಿ ।
ಏತಲ್ಲೇಖಾಪಗಾತೋಯಂ ತೃಷಾರ್ತಾ ಯದಿ ಯತ್ನತಃ ।
ಪ್ರಪಿಬಾಮೋ ನ ಹಸ್ತೇಷು ತಚ್ಚ ತೋಯಂ ಪುನಃ ಸ್ಪೃಶೇತ್ ॥ ೩೧ ॥
ಭುಂಜಾನಶ್ಚ ನ ಕೋಽಪ್ಯತ್ರ ದೃಶ್ಯತೇಽತ್ರ ಪಿಬನ್ನಪಿ ।
ತಸ್ಮಾತ್ತ್ರಿವಿಷ್ಟಪಾವಾಸೋ ಹ್ಯಸ್ಮಾಕಂ ಘೋರದಾರುಣಃ ॥ ೩೨ ॥
ಏತೇ ಸುರಗಣಾಃ ಸರ್ವೇ ಯೇ ಚಾಽನ್ಯೇ ಗುಹ್ಯಕಾದಯಃ ।
ದೃಶ್ಯಂತೇಽತ್ರ ವಿಮಾನಸ್ಥಾಃ ಸರ್ವೇ ಸಂಹೃಷ್ಟಮಾನಸಾಃ ॥ ೩೩ ॥
ಕ್ಷುತ್ಪಿಪಾಸಾಪರಿತ್ಯಕ್ತಾ ನಾನಾಭೋಗಸಮಾಶ್ರಯಾಃ ।
ಕದಾಚಿಚ್ಚ ವಯಂ ಸರ್ವೇ ಭವಾಮಸ್ತಾದೃಶಾ ಇವ ॥ ೩೪ ॥
ಕ್ಷುತ್ಪಿಪಾಸಾ ಪರಿತ್ಯಕ್ತಾಃ ಸಂತೋಷಂ ಪರಮಂ ಗತಾಃ ।
ತತ್ಕಿಂ ಕಾರಣಮೇತದ್ಯತ್ಕ್ಷುತ್ಪಿಪಾಸಾ ಪ್ರಜಾಯತೇ ॥ ೩೫ ॥
ಆಕಸ್ಮಿಕೀ ಚ ಬಾಧಾ ನಃ ಕದಾಚಿನ್ನ ಪ್ರಣಶ್ಯತಿ ।
ತಥಾ ಕುರುತ ಭದ್ರಂ ವೋ ಯಥಾ ತುಷ್ಟಿಃ ಪ್ರಜಾಯತೇ ॥ ೩೬ ॥

---

ತ್ತಿದ್ದರೂ ಅವುಗಳಲ್ಲಿರುವ ಹಣ್ಣುಗಳನ್ನು ತೆಗೆದುಕೊಳ್ಳಲು ಪ್ರಯತ್ನದಿಂದ ಎಳೆದರೂ ಅವು ತೊಟ್ಟಿನಿಂದ ಬಿಡುವುದಿಲ್ಲ. ಬಾಯಾರಿಕೆಗೊಂಡ ನಾವು ಈ ಗಂಗಾನದಿಯ ನೀರನ್ನು ಕೈಯಿಂದ ಕುಡಿಯಲು ಯತ್ನಿಸಿದರೆ ಆ ನೀರು ಸಿಕ್ಕುವುದಿಲ್ಲ.

೩೨. ಈ ಸ್ವರ್ಗದಲ್ಲಿ ಯಾರೂ ಊಟಮಾಡುತ್ತಿರುವುದೂ, ಕುಡಿಯುತ್ತಿರುವುದೂ ಕಾಣಿಸುವುದಿಲ್ಲ. ಆದುದರಿಂದ ನಮಗೆ ಸ್ವರ್ಗವಾಸವು ಅತಿ ಭಯಂಕರವಾಗಿರುವುದು.

೩೩–೩೫. ಈ ದೇವತೆಗಳೂ, ಗುಹ್ಯಕರೇ ಮೊದಲಾದವರೂ ವಿಮಾನವಲ್ಲಿ ಸಂಚರಿಸುತ್ತ ಹಸಿವು ಬಾಯಾರಿಕೆಯಿಲ್ಲದವರೂ, ನಾನಾ ಭೋಗಾಶ್ರಯರೂ, ಹೃಷ್ಟಚಿತ್ತರೂ ಆಗಿ ಕಾಣಿಸುತ್ತಾರೆ. ನಾವೂ ಅವರಂತೆಯೇ ಯಾವಾಗ ಹಸಿವು ಬಾಯಾರಿಕೆಯಿಲ್ಲದವರೂ, ಸಂತೋಷವುಳ್ಳವರೂ ಆಗುವೆವೊ? ನಮಗೆ ಈ ಹಸಿವು ಬಾಯಾರಿಕೆ ಉಂಟಾಗಲು ಕಾರಣವೇನು?

೩೬–೩೭. ನಮ್ಮ ಆಕಸ್ಮಿಕ ಬಾಧೆಯು ಯಾವಾಗಲೂ ನಾಶವಾಗುವುದಿಲ್ಲ. ಆದುದರಿಂದ ಸ್ವರ್ಗವಾಸಿಗಳಾದ ಇತರ ದೇವತೆಗಳಿಗುಂಟಾದಂತೆಯೇ ನಮಗೂ ಶಾಶ್ವತ ತುಷ್ಟಿಯಾಗುವಂತೆ ಮಾಡಿರಿ. ನೀವು ಜ್ಞಾನಿಗಳಾದ ದಿವಿಜರಿಗೆ ಪಿತೃ

ಶಾಶ್ವತೀ ನೋ ಯಥಾಽನ್ಯೇಷಾಂ ದೇವಾನಾಂ ಸ್ವರ್ಗವಾಸಿನಾಂ ।
ಯೂಯಂ ಹಿ ಪಿತರೋ ಯಸ್ಮಾದ್ದೇವಾನಾಂ ಭಾವಿತಾತ್ಮನಾಂ ।
ವಯಂ ಚೈವ ಮನುಷ್ಯಾಣಾಂ ತೇನ ವಃ ಶರಣಂ ಗತಾಃ ॥ ೩೭ ॥

ಪಿತರ ಊಚುಃ:—

ಅಸ್ಮಾಕಮಪಿ ಚೈವೈಷಾ ಕಷ್ಟಾವಸ್ಥಾ ಪ್ರಜಾಯತೇ ॥ ೩೮ ॥
ಶಕ್ರಾದ್ಯಾ ವಿಬುಧಾ ವ್ಯಗ್ರಾಃ ಶ್ರಾದ್ಧಂ ಯಚ್ಛಂತಿ ನೋ ಯದಾ ।
ತತಶ್ಚಾಽಽಗತ್ಯ ತಾನ್ ಸರ್ವೇ ದೇವಾನ್ ಸಂಪ್ರಾರ್ಥಯಾಮಹೇ ॥ ೩೯ ॥
ತತಸ್ತೃಪ್ತಿಂ ಪ್ರಗಚ್ಛಾಮಸ್ತೈರ್ದೇವೈಸ್ತರ್ಪಿತಾ ವಯಂ ।
ಯುಷ್ಮಾಕಂ ವಂಶಜಾ ಯೇ ಚ ಪ್ರಯಚ್ಛಂತಿ ಸಮಾಹಿತಾಃ ॥ ೪೦ ॥
ಕಥಂ ನ ತೃಪ್ತಿಮಾಯಾತಾಸ್ತೇ ಸರ್ವೇ ತೈಃ ಪ್ರತರ್ಪಿತಾಃ ।
ಯತ್ರ ಪ್ರಮಾದಿಭಿರ್ವಂಶ್ಯೈರ್ನತರ್ಪ್ಯಂತೇ ಕಥಂಚನ ॥ ೪೧ ॥
ಕ್ಷುತ್ಪಿಪಾಸಾಕುಲಾಃ ಸರ್ವೇ ತೇ ತದಾಸ್ಯುರ್ನ ಸಂಶಯಃ ।
ಕಿಂ ಪುನರ್ನರಕಸ್ಥಾ ಯೇ ಧರ್ಮರಾಜ ನಿವೇಶನೇ ॥ ೪೨ ॥
ಏತದ್ಧಿ ಕಾರಣಂ ಪ್ರೋಕ್ತಂ ಯುಷ್ಮಾಕಂ ಚ ಕಥಂಚನ ।
ಕ್ಷುತ್ಪಿಪಾಸೋದ್ಭವಂ ರೌದ್ರಂ ಯುಷ್ಮಾಭಿರ್ಯದುದೀರಿತಂ ॥ ೪೩ ॥
ತದಸ್ಮಾಕಂ ವಿಭಾಗಂಚೇದ್ಯೂಯಂ ಯಚ್ಛಕ ಸತ್ತಮಾಃ ।
ಸರ್ವೇ ಕವ್ಯಸ್ಯ ದತ್ತಸ್ಯ ತತ್ಕುರ್ಮೋ ವೈ ಹಿತಂ ಶುಭಂ ॥ ೪೪ ॥

---

ಗಳಾಗಿರುವಿರಿ. ನಾವು ಮನುಷ್ಯರ ಪಿತೃಗಳು. ಆದುದರಿಂದ ನಿಮ್ಮನ್ನು ಮರೆ ಹೊಕ್ಕಿದ್ದೇವೆ.

೩೮–೩೯. ಪಿತೃಗಳು ಹೇಳುತ್ತಾರೆ:—ನಮಗೂ ಇಂದ್ರಾದಿ ದೇವತೆಗಳು ಶ್ರಾದ್ಧ ಮಾಡದಿದ್ದರೆ ಇಂತಹ ಕಷ್ಟಸ್ಥಿತಿಯು ಬರುವುದು. ಆದುದರಿಂದ ಇಲ್ಲಿಗೆ ಬಂದು ಇಂದ್ರಾದಿ ದೇವತೆಗಳನ್ನು ಪ್ರಾರ್ಥಿಸುತ್ತೇವೆ.

೪೦–೪೨. ಅನಂತರ ಅವರು ತರ್ಪಣ ಮಾಡುವುದರಿಂದ ನಾವು ತೃಪ್ತಿಗೊಳ್ಳುವೆವು. ನಿಮ್ಮ ವಂಶದವರು ಸಾವಧಾನ ಮನಸ್ಸಿನಿಂದ ಶ್ರಾದ್ಧಗಳನ್ನು ಮಾಡಿದರೆ ನೀವೆಲ್ಲ ಏಕೆ ತೃಪ್ತಿಗೊಳ್ಳುವುದಿಲ್ಲ? ಪ್ರಮಾದವುಳ್ಳ ವಂಶಜರು ತೃಪ್ತಿಗೊಳಿಸದಿದ್ದರೆ ಆಗ ಎಲ್ಲರೂ ನಿಶ್ಚಯವಾಗಿಯೂ ಹಸಿವು ಬಾಯಾರಿಕೆಗಳಿಂದ ವ್ಯಥೆಗೊಳ್ಳುವಿರಿ. ಯಮನ ಪಟ್ಟಣದಲ್ಲಿ ನರಕವಾಸಿಗಳಾದ ಪಿತೃಗಳ ವಿಷಯವಿನ್ನೇನು.

೪೩. ನೀವು ಹೇಳಿದ ಭಯಂಕರ ಹಸಿವು ಬಾಯಾರಿಕೆಗಳಿಗೆ ಇವು ಕಾರಣವಾಗಿವೆ.

೪೪–೪೭. ಆದುದರಿಂದ ನೀವು ನಿಮಗೆ ಮಾನವರು ಕೊಟ್ಟ ಕವ್ಯದ ಭಾಗವನ್ನು ವಿಭಾಗಿಸಿ ಕೊಡುವುದಾದರೆ ನಾವೇ ಬ್ರಹ್ಮನ ಹತ್ತಿರ ಹೋಗಿ ಅವನನ್ನು

ಬ್ರಹ್ಮಾಣಂ ಪ್ರಾರ್ಥಯಿತ್ವಾ ಚ ಸ್ವಯಂ ಗತ್ವಾ ತದಂತಿಕಂ ।
ಬಾಢಮಿತ್ಯೇವ ತೈರುಕ್ತೇ ತತ ಆದಾಯ ತಾನಪಿ ॥ ೪೫ ॥
ದಿವ್ಯಾಃ ಪಿತೃಗಣಾಃ ಪ್ರಾಪ್ತಾ ವಿಧೇಃ ಸದನಮುತ್ತಮಂ ।
ನಾಂದೀಮುಖಾನ್ ಪುರಸ್ಕೃತ್ಯ ಪಿತ್ರೂನ್ ಯಾಂಸ್ತರ್ಪಯೇದ್ವಿಧಿಃ ॥೪೬॥
ಸೃಷ್ಟಿಕಾಲೇತು ಸಂಪ್ರಾಪ್ತೇ ವೃದ್ಧಿಕಾಮಃ ಸುರೇಶ್ವರಃ ।
ಅಥ ತೈಃ ಸಹ ತೇ ಸರ್ವೇ ಸ್ತುತ್ವಾ ತಂ ಕಮಲಾಸನಂ ।
ಪ್ರಣಿಪತ್ಯ ಸ್ಥಿತಾಃ ಸರ್ವೇ ಪಿತರೋ ವಿನಯಾನ್ವಿತಾಃ ॥ ೪೭ ॥
ಪಿತ್ರೂಂಸ್ತಾನ್ವಿನಯೋಪೇತಾನ್ ಪ್ರಣಿಪಾತಪುರಃಸರಾನ್ ।
ವಿಧಿಃ ಪ್ರೋವಾಚ ರಾಜೇಂದ್ರ ಸಾಂತ್ವಯಂಛ್ಲಕ್ಷ್ಣಯಾ ಗಿರಾ ॥ ೪೮ ॥

ಬ್ರಹ್ಮೋವಾಚ:—

ಕಿಮರ್ಥಂ ಪಿತರಃ ಸರ್ವೇ ಸಮಾಯಾತಾ ಮಮಾಂತಿಕಂ ।
ದೇವತಾನಾಂ ಮಯಾ ಸಾರ್ಧಂ ಸಂಪೂಜ್ಯಾಃ ಸರ್ವದಾ ಸ್ಥಿತಾಃ ॥ ೪೯ ॥
ತಥಾಽನ್ಯೇಪಿ ಚ ದೃಶ್ಯಂತೇ ಯುಷ್ಮಾಭಿಃ ಸಹ ಸಂಗತಾಃ ।
ಯ ಏತೇ ಮಾನವಾಕಾರಾಃ ಸ್ವಲ್ಪತೇಜೋನ್ವಿತಾಃ ಸ್ಥಿತಾಃ ॥ ೫೦ ॥

ಪಿತರ ಊಚುಃ:—

ಪಿತರೋ ಮಾನವಾಹ್ಯೇತೇ ಸ್ವರ್ಗಂ ಪ್ರಾಪ್ತಾಃ ಸ್ವಕರ್ಮಭಿಃ ।
ದೇವಾನಾಂ ಮಧ್ಯಸಂಸ್ಥಾಶ್ಚ ಪೀಡ್ಯಂತೇ ಕ್ಷುತ್ಪಿಪಾಸಯಾ ॥ ೫೧ ॥

---

ಪ್ರಾರ್ಥಿಸಿ ನಿಮಗೆ ಹಿತವನ್ನುಂಟುಮಾಡುವೆವು. ಅವರು ಹಾಗೆಯೇ ಆಗಲೆನ್ನಲು, ದಿವ್ಯ ಪಿತೃಗಣಗಳು ಸೃಷ್ಟಿಕಾಲವೊದಗಲು ಬ್ರಹ್ಮನು ತೃಪ್ತಿಗೊಳಿಸಿಯಾನೆಂದು ನಾಂದೀಮುಖ ಪಿತೃಗಳನ್ನು ಮುಂದಿರಿಸಿಕೊಂಡು ಬ್ರಹ್ಮನ ಮನೆಗೆ ಹೋದರು. ಬಳಿಕ ಅವರೆಲ್ಲ ನಾಂದೀಮುಖ ಪಿತೃಗಳೊಡನೆ ಬ್ರಹ್ಮನನ್ನು ಸ್ತುತಿಸಿ ವಂದಿಸಿ ವಿನಯದಿಂದ ನಿಂತರು.

೪೮. ಅರಸ! ಬ್ರಹ್ಮನು ನಮಸ್ಕರಿಸಿ ವಿನಯದಿಂದ ನಿಂತಿರುವ ಪಿತೃಗಳನ್ನು ಮೃದುವಚನದಿಂದ ಸಮಾಧಾನಗೊಳಿಸುತ್ತ ಹೀಗೆಂದನು.

೪೯. ಬ್ರಹ್ಮನು ಹೇಳುತ್ತಾನೆ:—ನನಗೂ ದೇವತೆಗಳಿಗೂ ಪೂಜ್ಯರಾದ ಪಿತೃಗಳೆ! ನೀವು ಏಕೆ ನನ್ನ ಬಳಿಗೆ ಬಂದಿರಿ?

೫೦. ನಿಮ್ಮೊಡನೆ ಇರುವ ಮನುಷ್ಯಾಕಾರರೂ, ಅಲ್ಪತೇಜಸ್ಕರೂ ಆದ ಇವರಾರು?

೫೧. ಪಿತೃಗಳು ಹೇಳುತ್ತಾರೆ:—ಮಾನವ ಪಿತೃಗಳಾದ ಇವರು ತಮ್ಮ ಕರ್ಮಗಳಿಂದ ಸ್ವರ್ಗವನ್ನು ಹೊಂದಿ ದೇವತೆಗಳ ನಡುವೆ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿದ್ದಾರೆ.

ಯದಾ ಯಚ್ಛಂತಿ ನೋ ವಂಶ್ಯಾಃ ಕವ್ಯಂಚೈವ ಪ್ರಮಾದತಃ ।
ತದಾ ಗಚ್ಛಂತಿ ನೋ ತೃಪ್ತಿಂ ಯಾನೈರ್ಯಾಂತಿ ಯಥಾ ಸುರಾಃ ॥ ೫೨ ॥
ತದೇತೈಃ ಪ್ರಾರ್ಥನಾಽಸ್ಮಾಕಂ ಕೃತಾ ಶಾಶ್ವತತೃಪ್ತಯೇ ।
ನ ಚ ಶಕ್ತಾ ವಯಂ ದಾತುಂ ತೇನ ತ್ವಾಂ ಸಮುಪಸ್ಥಿತಾಃ ॥ ೫೩ ॥
ಯಥಾ ಸ್ಯುರ್ದೇವತಾ ವ್ಯಗ್ರಾಸ್ತದಾಽಸ್ಮಾಕಮಪಿ ಪ್ರಭೋ ।
ಕವ್ಯಂ ವಿನಾ ಭವೇದೇಷಾ ದಶಾ ಕಷ್ಟಾ ಸುರೇಶ್ವರ ॥ ೫೪ ॥
ತಸ್ಮಾತ್ಕುರು ಪ್ರಸಾದಂ ನಃ ಸಮಮೇತೈಃ ಸುರೇಶ್ವರ ।
ಯಥಾ ಸ್ಯಾಚ್ಛಾಶ್ವತೀ ತೃಪ್ತಿಃ ಸ್ವಸ್ಥಾನಸ್ಥಾಯಿನಾಮಪಿ ॥ ೫೫ ॥
ಏತೇಽಸ್ಮಾಕಂ ಪ್ರದಾಸ್ಯಂತಿ ಕವ್ಯಂ ಯನ್ನಿಜವಂಶಜೈಃ ।
ಪ್ರದತ್ತಂ ಯೇನ ಸಂಪ್ರಾಪ್ತಾ ವಯಂ ದೇವ ತ್ವದಂತಿಕಂ ॥ ೫೬ ॥
ದೇವಾನಾಂ ಚೈವ ಯತ್ಕವ್ಯಂ ತನ್ನಾಽಸ್ಮಾಕಂ ಪ್ರತೃಪ್ತಯೇ ।
ಯತಃ ಕ್ರಿಯಾವಿಹೀನಂ ತನ್ನ ತೇಷಾಂ ವಿದ್ಯತೇ ಕ್ರಿಯಾ ॥ ೫೭ ॥
ಪಿತೄನುದ್ದಿಶ್ಯ ಯತ್ಕವ್ಯಂ ಬ್ರಾಹ್ಮಣೇಭ್ಯಃ ಪ್ರದೀಯತೇ ।
ಸ್ನಾತೈರ್ಧೌತಾಂಬರೈರ್ಮರ್ತ್ಯೈರ್ಸ್ತದ್ಭವೇತ್ತೃಪ್ತಿದಂ ಮಹತ್ ॥ ೫೮ ॥
ಪಿತೄಣಾಂ ಸರ್ವದೇವೇಶ ಇತ್ಯೇಷಾ ವೈದಿಕೀಶ್ರುತಿಃ ।
ನ ಸ್ನಾತಸ್ಯಾಧಿಕಾರೋಽಸ್ತಿ ದೇವಾನಾಂ ಚ ದ್ವಿಜಾತಿವತ್ ॥ ೫೯ ॥

---

೫೨. ಇವರ ವಂಶದವರು ಪ್ರಮಾದದಿಂದ ಕವ್ಯವನ್ನು ಕೊಡದಿದ್ದರೆ ದೇವತೆಗಳಂತೆ ವಿಮಾನಗಳಿಂದ ಸಂಚರಿಸುತ್ತಿದ್ದರೂ ತೃಪ್ತಿಗೊಳ್ಳುವುದಿಲ್ಲ.

೫೩–೫೪. ಇವರು ಶಾಶ್ವತ ತೃಪ್ತಿಗಾಗಿ ನಮ್ಮನ್ನು ಬೇಡಿಕೊಂಡರು. ಹಾಗೆ ಮಾಡಲಸಮರ್ಥರಾದ ನಾವು ನಿನ್ನೆಡೆಗೆ ಬಂದೆವು. ದೇವತೆಗಳು ಸಂತರ್ಪಿಸದಿದ್ದಾಗ ನಮಗೂ ಕವ್ಯವಿಲ್ಲದೆ ಕಷ್ಟಸ್ಥಿತಿಯು ಒದಗೀತು.

೫೫. ಸುರೇಶ್ವರ! ಆದುದರಿಂದ ಇವರೊಡನೆ ಸ್ವಸ್ಥಾನದಲ್ಲಿರುವ ನಮಗೂ ಶಾಶ್ವತ ತೃಪ್ತಿಯಾಗುವಂತೆ ಅನುಗ್ರಹ ಮಾಡು.

೫೬. ಇವರು ತಮ್ಮ ವಂಶದವರಿತ್ತ ಕವ್ಯಭಾಗವನ್ನು ನಮಗೆ ಕೊಡುತ್ತಾರೆ. ಆದುದರಿಂದ ನಾವು ನಿನ್ನೆಡೆಗೆ ಬಂದಿರುವೆವು.

೫೭. ದೇವತೆಗಳಿಗೆ ಕ್ರಿಯೆಯಿಲ್ಲದಿರುವುದರಿಂದ ಕ್ರಿಯಾರಹಿತವಾಗಿ ಅವರು ಕೊಟ್ಟ ಕವ್ಯವು ನಮಗೆ ತೃಪ್ತಿಯನ್ನುಂಟುಮಾಡುವುದಿಲ್ಲ.

೫೮–೫೯. ಸ್ನಾನಮಾಡಿ ಒಗೆದ ಬಟ್ಟೆಯನ್ನುಟ್ಟ ಮಾನವರು ಪಿತೃಗಳನ್ನು ಉದ್ದೇಶಿಸಿ ಬ್ರಾಹ್ಮಣರಿಗೆ ಕೊಟ್ಟ ಕವ್ಯವು ಪಿತೃಗಳಿಗೆ ಮಹಾ ತೃಪ್ತಿಯನ್ನುಂಟುಮಾಡುವುದು ಎಂದು ದೇವವಾಕ್ಯವಿರುವುದು. ಬ್ರಾಹ್ಮಣರಂತೆ ಸ್ನಾನಮಾಡಿದ ದೇವತೆಗಳಿಗೆ ಅಧಿಕಾರವಿಲ್ಲ.

ಪೀಯೂಷಮಪಿ ತೈರ್ದತ್ತಂ ತೇನ ನಃ ಸ್ಯಾನ್ನತೃಪ್ತಯೇ ॥ ೬೦ ॥
ತಸ್ಮಾನ್ಮನುಷದತ್ತೈರ್ನೋ ಯಥಾ ಕವ್ಯೇ ಪ್ರಜಾಯತೇ ।
ಸ್ವರ್ಗಸ್ಥಾನಾಂ ಪರಾ ತೃಪ್ತಿಃ ಸಮಮೇತೈಸ್ತಥಾ ಕುರು ॥ ೬೧ ॥

ಭರ್ತೃಯಜ್ಞ ಉವಾಚ :—

ತಚ್ಛ್ರುತ್ವಾ ಸುಚಿರಂ ಧ್ಯಾತ್ವಾ ಬ್ರಹ್ಮಾ ಲೋಕ ಪಿತಾಮಹಃ ।
ತಾನುವಾಚ ತತಃ ಸರ್ವಾನ್ಪಿತೄನ್ಸ್ವರ್ಥಿವಸತ್ತಮ ॥ ೬೨ ॥

ಬ್ರಹ್ಮೋವಾಚ :—

ಅಸ್ಮಿಂಸ್ತ್ರೇತಾಯುಗೇ ಸಂಜ್ಞಾ ಹವ್ಯಕವ್ಯಸಮುದ್ಭವಾ ।
ಸಂಪ್ರಯಾತಾ ಯುಗೇ ಯುಗ್ಮೇ ಕಲೌ ನ ಪ್ರಭವಿಷ್ಯತಿ ॥ ೬೩ ॥
ಯಥಾ ಯಥಾ ಯುಗಾನಾಂ ಚ ಹ್ರಾಸ ಏಷ ಭವಿಷ್ಯತಿ ।
ತಥಾ ತಥಾ ಜನಾ ದುಷ್ಟಾ ಭವಿಷ್ಯಂತ್ಯನ್ಯಭಕ್ತಿಕಾಃ ॥ ೬೪ ॥
ನ ದಾಸ್ಯಂತಿ ಯಥೋಕ್ತಾನಿ ತೇ ಕವ್ಯಾನಿ ಕಥಂಚನ ।
ತತಃ ಕಷ್ಟತರಾಽವಸ್ಥಾ ಪಿತೄಣಾಂ ಸಂಭವಿಷ್ಯತಿ ॥ ೬೫ ॥
ತಸ್ಮಾದಹಂ ಕರಿಷ್ಯಾಮಿ ಸುಖೋಪಾಯಂ ಶರೀರಿಣಾಂ ।
ಯೇನ ಸಂತರ್ಪಿತಾ ಯೂಯಂ ಪರಾಂ ತೃಪ್ತಿಮವಾಪ್ಸ್ಯಥ ॥ ೬೬ ॥

---

೬೦. ಆದುದರಿಂದ ಆ ದೇವತೆಗಳು ಕೊಟ್ಟ ಅಮೃತವೂ ತೃಪ್ತಿಯನ್ನುಂಟು ಮಾಡುವುದಿಲ್ಲ.

೬೧. ಆದುದರಿಂದ ಸ್ವರ್ಗವಾಸಿಗಳಾದ ನಮಗೆ ಇವರೊಡನೆ ಮನುಷ್ಯರು ಕೊಟ್ಟ ಕವ್ಯಗಳಿಂದ ಅತ್ಯಂತ ತೃಪ್ತಿಯಾಗುವಂತೆ ಮಾಡು.

೬೨. ಭರ್ತೃಯಜ್ಞನು ಹೇಳುತ್ತಾನೆ:—ನರೇಂದ್ರ! ಬ್ರಹ್ಮನು ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಆ ಸಮಸ್ತ ಪಿತೃಗಳನ್ನು ಕುರಿತು ಇಂತೆಂದನು.

೬೩. ಬ್ರಹ್ಮನು ಹೇಳುತ್ತಾನೆ:—ಈ ತ್ರೇತಾಯುಗದಲ್ಲಿ ಹವ್ಯಕವ್ಯಸಂಬಂಧವಾದ ಹೆಸರು ಹೊರಟುಹೋಗಿರುವುದು. ದ್ವಾಪರ ಕಲಿಯುಗಗಳಲ್ಲಿ ಆ ಹವ್ಯಕವ್ಯಗಳು ಉಂಟಾಗುವುದಿಲ್ಲ.

೬೪. ಯುಗಗಳು ಹ್ರಾಸವಾದ ಹಾಗೆಲ್ಲ ಜನರು ದುಷ್ಟರೂ, ಭಕ್ತಿಯಿಲ್ಲದವರೂ ಆಗುವರು.

೬೫. ಅವರು ವಿಧಿಯಂತೆ ಕವ್ಯಗಳನ್ನು ಕೊಡುವುದಿಲ್ಲ. ಅನಂತರ ಪಿತೃಗಳಿಗೆ ಕಷ್ಟದಶೆಯು ಸಂಭವಿಸುವುದು.

೬೬. ಆದುದರಿಂದ ನಾನು ಮಾನವರಿಗೆ ಸುಖವಾದ ಒಂದು ಉಪಾಯವನ್ನು ಕಲ್ಪಿಸುವೆನು. ಅದರಿಂದ ತರ್ಪಣಮಾಡಲ್ಪಟ್ಟ ನೀವು ಅತಿಶಯ ತೃಪ್ತಿಯನ್ನು ಹೊಂದುವಿರಿ.

ಪಿತುಃ ಪಿತಾಮಹಸ್ಯೈವ ತತ್ಪಿತುಶ್ಚ ತತಃ ಪರಂ ।
ಸಮುದ್ದೇಶೇನ ದತ್ತೇನ ಬ್ರಾಹ್ಮಣೇಭ್ಯಃ ಪ್ರಭಕ್ತಿತಃ ॥ ೧೭ ॥
ಸರ್ವೇಷಾಂ ಸ್ಯಾತ್ಪರಾ ತೃಪ್ತಿರ್ಯಾವನ್ಮಾಂ ಪಿತರೋಽಧುನಾ ।
ತಥಾ ಮಾತಾಮಹಾನಾಂ ಚ ಪಕ್ಷೇ ನಾಽಸ್ತ್ಯತ್ರ ಸಂಶಯಃ ॥ ೧೮ ॥
ತ್ರಿಭಿಃ ಸಂತರ್ಪಿತಾಸ್ತೇಽಪಿ ತರ್ಪಿತಾಃ ಸ್ಯುರ್ಮಯಾವಧಿ ।
ಯುಷ್ಮಾಕಂ ತೃಪ್ತಯೇ ಯಶ್ಚ ಸುಖೋಪಾಯೋ ಭವಿಷ್ಯತಿ ॥ ೧೯ ॥
ತಂ ಶೃಣುಧ್ವಂ ಮಹಾಭಾಗಾ ಗದತೋ ಮಮ ಸಾಂಪ್ರತಂ ।
ಪಿತೄನುದ್ದಿಶ್ಯ ಯೇನೈವ ಸಮುದ್ದಿಶ್ಯ ದ್ವಿಜೋತ್ತಮಾನ್ ॥ ೨೦ ॥
ತರ್ಪಯಿಷ್ಯಂತಿ ತೇನೈವ ಪಿಂಡಾನ್ ದಾಸ್ಯಂತಿ ಭಕ್ತಿತಃ ।
ತನ್ನಾಮ್ನಾ ತೇನ ವಸ್ತೃಪ್ತಿಃ ಶಾಶ್ವತೀ ಸಂಭವಿಷ್ಯತಿ ॥ ೨೧ ॥
ತಸ್ಮಾದ್ಗಚ್ಛತ ಸಂತುಷ್ಟಾಃ ಸ್ವಾನಿ ಸ್ಥಾನಾನಿ ಪೂರ್ವಜಾಃ ॥ ೨೨ ॥
ತತಸ್ತೇ ಸಹಿತಾಸ್ತೈಸ್ತು ಸ್ವಾನಿ ಸ್ಥಾನಾನಿ ಭೇಜಿರೇ ।
ವಿಮಾನೈಃ ಸೂರ್ಯಸಂಕಾಶೈರ್ಗತ್ವಾ ಪಾರ್ಥಿವಸತ್ತಮ ॥ ೨೩ ॥
ಅಥ ಸಂಗಚ್ಛತಾ ರಾಜನ್ ಕಾಲೇನ ಮಹತಾ ತತಃ ।
ತಚ್ಛ್ರಾಽಪಿ ನ ದದುಃ ಶ್ರಾದ್ಧಂ ಮರ್ತ್ಯಾಸ್ತ್ರಿಪುರುಷಂ ಚ ಯತ್ ॥ ೨೪ ॥
ನಿತ್ಯಂ ಪಿತೄನ್ ಸಮುದ್ದಿಶ್ಯ ಬಹವೋಽತ್ರ ನರಾಧಿಪ ।
ಕವ್ಯಭಾಗಾನ್ ಪುನಸ್ತೇಷಾಂ ತಥಾಪೂರ್ವಂ ಯಥಾ ನೃಪ ॥ ೨೫ ॥

---

೧೭–೨೧. ಪಿತೃಗಳೇ! ತಂದೆ, ಅಜ್ಜ, ಪ್ರಪಿತಾಮಹ ಇವರನ್ನು ಉದ್ದೇಶಿಸಿ ಬ್ರಾಹ್ಮಣರಿಗೆ ದಾನ ಮಾಡುವುದರಿಂದ ನನ್ನವರೆಗೆ ಎಲ್ಲ ಪಿತೃಗಳಿಗೂ ತೃಪ್ತಿಯಾಗುವುದು. ಹಾಗೆಯೇ ಮಾತಾಮಹಪಕ್ಷದಲ್ಲಿಯೂ ಮೂವರನ್ನು ತೃಪ್ತಿಗೊಳಿಸಿದರೆ ನನ್ನವರೆಗೆ ಎಲ್ಲರೂ ತೃಪ್ತಿಗೊಳ್ಳುವರು. ನಿಮ್ಮ ತೃಪ್ತಿಗೆ ಸುಖವಾದ ಉಪಾಯವು ಯಾವುದೆಂಬುದನ್ನು ಹೇಳುತ್ತೇನೆ ಅದನ್ನು ಕೇಳಿರಿ. ಮನುಷ್ಯರು ಬ್ರಾಹ್ಮಣರಿಗೆ ನೀಡಿದ ಅನ್ನದಿಂದಲೇ ಪಿಂಡಗಳನ್ನು ಮಾಡಿ ಅದನ್ನು ಪಿತೃಗಳಿಗೆ ಅವರ ಹೆಸರನ್ನು ಹೇಳಿ ಸಮರ್ಪಿಸುತ್ತಾರೆ. ಅದರಿಂದ ನಿಮಗೆ ಶಾಶ್ವತವಾದ ತೃಪ್ತಿಯಾಗುವುದು.

೨೨. ಆದುದರಿಂದ ನೀವು ಸಂತುಷ್ಟರಾಗಿ ನಿಮ್ಮ ಸ್ಥಳಗಳಿಗೆ ತೆರಳಿರಿ.

೨೩. ಬಳಿಕ ಆ ಪಿತೃಗಳು ಮರ್ತ್ಯಪಿತೃಗಳೊಡನೆ ಸೂರ್ಯಸಂತಿರುವ ವಿಮಾನಗಳಿಂದ ತಮ್ಮ ಸ್ಥಳಗಳನ್ನು ಸೇರಿದರು.

೨೪–೨೫. ದೊರೆಯೆ! ಬಳಿಕ ಅನೇಕ ಕಾಲಗಳು ಕಳೆಯಲು ಬಹುಮಂದಿ ಮಾನವರು ತ್ರಿಪುರುಷರನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡಿ ಮೊದಲಿನಂತೆ ಪಿತೃಗಳಿಗೆ ಕವ್ಯಭಾಗಗಳನ್ನು ಕೊಡಲಿಲ್ಲ.

ಕ್ಷುತ್ಪಿಪಾಸೋದ್ಭವಾ ಪೀಡಾ ಮಹತೀ ಸಮುಜಾಯತ ।
ತೇಷಾಂ ಚ ದೈವಿಕಾನಾಂ ಚ ಪಿತ್ರೂಣಾಂ ನೃಪಸತ್ತಮ ॥ ೭೬ ॥
ಸಮೇತ್ಯಾಽಥ ಪುನಃ ಸರ್ವೇ ಬ್ರಹ್ಮಾಣಂ ಶರಣಂ ಗತಾಃ ।
ಪ್ರೋಚುಶ್ಚ ಪ್ರಣಿಪತ್ಯೋಚ್ಚೈಃ ಸುದೀನಾಃ ಪ್ರಪಿತಾಮಹಂ ॥ ೭೭ ॥
ಭಗವನ್ನ ಪ್ರಯಚ್ಛಂತಿ ನಿತ್ಯಂ ನೋ ವಂಶಸಂಭವಾಃ ।
ಶ್ರಾದ್ಧಾನಿ ದೌಸ್ಥ್ಯಮಾಪನ್ನಾಸ್ತೇನ ಸೀದಾಮಹೇ ವಿಭೋ ॥ ೭೮ ॥
ಯಥಾ ಪೂರ್ವಂ ತಥಾ ದೇವ ತದುಪಾಯಂ ಪ್ರಚಿಂತಯ ।
ಕಂಚಿದ್ಯೇನ ದರಿದ್ರಾ ವೈ ಪ್ರೀಣಯಂತಿ ಚ ತೇ ಪಿತ್ರೂನ್ ॥ ೭೯ ॥

ಭರ್ತೃಯಜ್ಞ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ತಾನಾಽಽಹ ಪ್ರಪಿತಾಮಹಃ ।
ಕೃಪಾವಿಷ್ಟೋ ಮಹಾರಾಜ ಸರ್ವಾನ್ ಪಿತೃಗಣಾಂಸ್ತಥಾ ॥ ೮೦ ॥
ಸತ್ಯಮೇತನ್ಮಹಾಭಾಗಾ ದೌಸ್ಥ್ಯಂ ಯಾಂತಿ ದಿನೇ ದಿನೇ ।
ಜನಾ ಯಥಾ ಯಥಾ ಯಾತಿ ಯುಗಂ ಶ್ರೇಷ್ಠಂ ಚ ಪೃಷ್ಠತಃ ॥ ೮೧ ॥
ತಥಾಽಪಿ ಚ ಕರಿಷ್ಯಾಮಿ ಯುಷ್ಮದರ್ಥಮಸಂಶಯಂ ।
ಉಪಾಯಂ ಲಘು ಸಂತೃಪ್ತಿರ್ಯೇನ ವೋಽತ್ರ ಭವಿಷ್ಯತಿ ॥ ೮೨ ॥

---

೭೬. ಆದರಿಂದ ಆ ದೇವಮರ್ತ್ಯ ಪಿತೃಗಳಿಗೆ ಅಧಿಕವಾದ ಹಸಿವು ಬಾಯಾರಿಕೆಗಳಿಂದ ಪೀಡೆಯುಂಟಾಯಿತು.

೭೭. ಅವರೆಲ್ಲ ಒಟ್ಟುಸೇರಿ ಬ್ರಹ್ಮನನ್ನು ಮರೆಹೊಕ್ಕು ಅವನನ್ನು ನಮಸ್ಕರಿಸಿ ದೈನ್ಯದಿಂದ ಇಂತೆಂದರು.

೭೮. ಪೂಜ್ಯನೆ! ನಮ್ಮ ವಂಶದವರು ನಿತ್ಯವೂ ಶ್ರಾದ್ಧವನ್ನು ಮಾಡುವುದಿಲ್ಲ. ಅದರಿಂದ ನಾವು ದುರವಸ್ಥೆಯನ್ನು ಹೊಂದಿ ವ್ಯಥೆಪಡುತ್ತಿದ್ದೇವೆ.

೭೯. ಸ್ವಾಮಿ! ಆ ದರಿದ್ರರು ಮೊದಲಿನಂತೆ ಪಿತೃಗಳನ್ನು ಸಂತೋಷಗೊಳಿಸುವುದಕ್ಕೆ ಒಂದುಪಾಯವನ್ನಾಲೋಚಿಸು.

೮೦. ಭರ್ತೃಯಜ್ಞನು ಹೇಳುತ್ತಾನೆ:— ಪಿತಾಮಹನು ಪಿತೃಗಳ ಆ ಮಾತನ್ನು ಕೇಳಿ ದಯೆಗೊಂಡು ಸಕಲ ಪಿತೃಗಳನ್ನೂ ಕುರಿತು ಇಂತೆಂದನು.

೮೧. "ಎಲೈ ಭಾಗ್ಯವಂತರೆ! ನೀವು ಹೇಳಿದ ಮಾತು ನಿಜ. ಶ್ರೇಷ್ಠವಾದ ಯುಗವು ಕಳೆದುಹೋದ ಹಾಗೆಲ್ಲ ಜನರು ದಿನೇ ದಿನೇ ದುರವಸ್ಥೆಯನ್ನು ಹೊಂದುವರು.

೮೨. ಆದರೂ ನಿಮಗಾಗಿ ನಿಶ್ಚಯವಾಗಿಯೂ ಒಂದು ಸಣ್ಣ ಉಪಾಯವನ್ನು ಮಾಡುವೆನು. ಅದರಿಂದ ನಿಮಗೆ ತೃಪ್ತಿಯುಂಟಾಗುವುದು.

ಅಮಾ ನಾಮ ರವೇ ರಶ್ಮಿಃ ಸಹಸ್ರಪ್ರಮುಖಃ ಸ್ಥಿತಃ ।
ತಸ್ಮಿನ್ ವಸತಿ ಯೇನೇಂದುರಮಾವಾಸ್ಯಾ ತತಃ ಸ್ಮೃತಾ ॥ ೮೩ ॥
ತಸ್ಮಿನ್ನಹನಿ ಯೇ ಶ್ರಾದ್ಧಂ ಪಿತೄನುದ್ದಿಶ್ಯ ಚಾಽಽತ್ಮನಃ ।
ಕರಿಷ್ಯಂತಿ ನರಾ ಭಕ್ತ್ಯಾ ತೇ ಭವಿಷ್ಯಂತಿ ಸುಸ್ಥಿತಾಃ ॥ ೮೪ ॥
ಧನಧಾನ್ಯಸಮೋಪೇತಾಃ ಸರ್ವಶತ್ರುವಿವರ್ಜಿತಾಃ ।
ಅಪಮೃತ್ಯುಪರಿತ್ಯಕ್ತಾ ಮಮ ವಾಕ್ಯಾದಸಂಶಯಂ ॥ ೮೫ ॥

ಭರ್ತೃಯಜ್ಞ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಬಭೂವುರ್ಹೃಷ್ಟಮಾನಸಾಃ ।
ಪಿತರಃ ಕವ್ಯಮಾಸಾದ್ಯ ಪ್ರಹೃಷ್ಟೇನಾಂತರಾತ್ಮನಾ ॥ ೮೬ ॥
ಯಯುಃ ಸ್ವಾನಿ ನಿಕೇತಾನಿ ಪ್ರೇಷಿತಾಃ ಪದ್ಮಯೋನಿನಾ ।
ಅಮಾವಾಸ್ಯಾದಿನಂ ಪ್ರಾಪ್ಯ ಶ್ರಾದ್ಧಂ ದತ್ತಂ ಸ್ವವಂಶಜೈಃ ॥ ೮೭ ॥
ಸಂತೃಪ್ತಾ ಮಾಸಮಾತ್ರಂ ಚ ತಸ್ಥುಃ ಸಂತುಷ್ಟಮಾನಸಾಃ ।
ಗಚ್ಛತಾ ತ್ವಥ ಕಾಲೇನ ದೌಸ್ಥ್ಯಂ ಪ್ರಾಪ್ಯ ನರಾ ಭುವಿ ।
ದರ್ಶೇಽಸ್ಮಿನ್ನಪಿ ನೋ ಶ್ರಾದ್ಧಂ ಪ್ರಾಯಃ ಕುರ್ವಂತಿ ಕೇಚನ ॥ ೮೮ ॥
ತತಃ ಪಿತೃಗಣಾಃ ಸರ್ವೇ ಯೇ ದಿವ್ಯಾ ಯೇ ಚ ಮಾನುಷಾಃ ।
ಕ್ಷುತ್ಪಿಪಾಸಾಕುಲಾ ಭೂಯೋ ಬ್ರಹ್ಮಾಣಂ ಶರಣಂ ಗತಾಃ ॥ ೮೯ ॥

---

೮೩. ಸೂರ್ಯನ ಸಾವಿರ ಕಿರಣಗಳ ಮುಖಭಾಗವು ಅಮಾ ಎನ್ನಿಸಿಕೊಳ್ಳುವುದು. ಅಲ್ಲಿ ಚಂದ್ರನು ವಾಸಮಾಡುವುದರಿಂದ ಆ ದಿನವು ಅಮಾವಾಸ್ಯೆಯೆಂದು ಹೆಸರನ್ನು ಪಡೆದಿರುವುದು.

೮೪–೮೫. ಆ ದಿನ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಮಾಡುವವರು ನನ್ನ ಮಾತಿನಿಂದ ಧನಧಾನ್ಯಸಮೃದ್ಧಿಯುಳ್ಳವರೂ, ಶತ್ರುಗಳಿಲ್ಲದವರೂ, ಅಪಮೃತ್ಯುರಹಿತರೂ, ಸುಖಚಿತ್ತರೂ ಆಗುವರು.

೮೬. ಭರ್ತೃಯಜ್ಞನು ಹೇಳುತ್ತಾನೆ:—ಪಿತೃಗಳು ಬ್ರಹ್ಮನ ಆ ಮಾತನ್ನು ಕೇಳಿ ಕವ್ಯವನ್ನು ಹೊಂದಿ ಸಂತುಷ್ಟಚಿತ್ತರಾದರು.

೮೭–೮೮. ಬ್ರಹ್ಮನು ಅವರನ್ನು ಕಳುಹಿಸಲು ಅವರು ತಮ್ಮ ಸ್ಥಾನವನ್ನು ಹೊಂದಿ ಅಮಾವಾಸ್ಯೆಯ ದಿನ ತಮ್ಮ ವಂಶದವರಿತ್ತ ಶ್ರಾದ್ಧ ತರ್ಪಣಗಳಿಂದ ಒಂದು ತಿಂಗಳು ತೃಪ್ತಿಗೊಂಡಿದ್ದರು. ಹೀಗೆ ಕಾಲವು ಕಳೆಯುತ್ತಿರಲು ಮಾನವರು ಭೂಮಿಯಲ್ಲಿ ದುರವಸ್ಥೆಯನ್ನು ಹೊಂದಿ ಕೆಲವರು ಈ ಅಮಾವಾಸ್ಯೆಯ ದಿನವೂ ಶ್ರಾದ್ಧವನ್ನು ಮಾಡಲಿಲ್ಲ.

೮೯. ಬಳಿಕ ದಿವ್ಯಮಾನುಷ ಪಿತೃಗಣಗಳು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಮರಳಿ ಬ್ರಹ್ಮನನ್ನು ಮರೆಹೊಕ್ಕರು.

ಪ್ರೋಚುಶ್ಚ ಪ್ರಣಿಪತ್ಯೋಚ್ಚೈಸ್ತೇ ಸಮೇತಾಃ ಪಿತಾಮಹಂ ।
ಪರಮಂ ದೈನ್ಯಮಾಸ್ಥಾಯ ಬಾಷ್ಪಗದ್ಗದಯಾ ಗಿರಾ ॥ ೯೦ ॥
ಭಗವನ್ನಿಂದುಕ್ಷಯೇ ಶ್ರಾದ್ಧಂ ಪ್ರೋಕ್ತಂ ಮಾಸಂ ತ್ವಯಾ ವಿಭೋ ।
ಅಸ್ಮಾಕಂ ಪ್ರೀಣನಾರ್ಥಾಯ ಯತ್ಕರಿಷ್ಯಂತಿ ಮಾನವಾಃ ॥ ೯೧ ॥
ದೌಃಸ್ಥ್ಯಾತ್ತದಪಿ ನೋ ಕುರ್ಯುಃ ಪ್ರಾಯಶಸ್ತು ಪಿತಾಮಹ ।
ತೇನಾಽಸ್ಮಾಕಂ ಪರಾ ಪೀಡಾ ಕ್ಷುತ್ಪಿಪಾಸಾ ಸಮುದ್ಭವಾ ॥ ೯೨ ॥
ತಸ್ಮಾತ್ಕುರು ಪ್ರಸಾದಂ ನೋ ಯಥಾ ಪೂರ್ವಂ ಸುರೇಶ್ವರ ।
ತಥಾಽಪಿ ದುಃಸ್ಥತಾಭಾಜಸ್ತರ್ಪಯಿಷ್ಯಂತಿ ನೋಽಧುನಾ ॥ ೯೩ ॥

ಭರ್ತೃಯಜ್ಞ ಉವಾಚ :—

ಅಥ ಬ್ರಹ್ಮಾಽಪಿ ಸಂಚಿಂತ್ಯ ತಾನುವಾಚ ಕೃಪಾನ್ವಿತಃ ।
ಯುಷ್ಮದರ್ಥಂ ಮಯೋಪಾಯಶ್ಚಿಂತಿತಃ ಪಿತರೋ ಲಘುಃ ॥ ೯೪ ॥
ಯೇನ ತೃಪ್ತಿಂ ಪರಾಂ ಯೂಯಂ ಗಮಿಷ್ಯಥ ಪಿತ್ರೀಶ್ವರಾಃ ।
ಅಮಾವಾಸ್ಯೋದ್ಭವಂ ಶ್ರಾದ್ಧಮಲಬ್ಧ್ವಾಽಪಿ ಚ ವತ್ಸರಂ ॥ ೯೫ ॥
ಯಥಾ ಮಮ ಪ್ರಸಾದೇನ ತಚ್ಛೃಣುಧ್ವಂ ಸಮಾಹಿತಾಃ ।
ಆಷಾಢ್ಯಾಃ ಪಂಚಮೇ ಪಕ್ಷೇ ಕನ್ಯಾಸಂಸ್ಥೇ ದಿವಾಕರೇ ॥ ೯೬ ॥

---

೯೦. ಅವರು ಒಟ್ಟಿಗೆ ಬ್ರಹ್ಮನಿಗೆ ವಂದಿಸಿ ದೈನ್ಯವನ್ನು ಹೊಂದಿ ಬಾಷ್ಪದಿಂದ ಗದ್ಗದವಾದ ಮಾತಿನಿಂದ ಹೀಗೆಂದರು.

೯೧. ಪೂಜ್ಯನೆ! ನೀನು ಒಂದು ತಿಂಗಳ ತೃಪ್ತಿಗಾಗಿ ಅಮಾವಾಸ್ಯೆಯ ದಿನ ಶ್ರಾದ್ಧವನ್ನು ವಿಧಿಸಿದೆ. ಮಾನವರು ಅದನ್ನು ಮಾಡುತ್ತಿದ್ದರು.

೯೨. ಈಗ ಆ ಮಾನವರು ದುರವಸ್ಥೆಯಿಂದ ಆ ದಿನವೂ ಶ್ರಾದ್ಧವನ್ನು ಮಾಡುವುದಿಲ್ಲ. ನಮಗೆ ಹಸಿವು ಬಾಯಾರಿಕೆಗಳಿಂದ ಅತ್ಯಂತ ಬಾಧೆಯು ಉಂಟಾಗಿದೆ.

೯೩. ಆದುದರಿಂದ ಈಗ ದುರವಸ್ಥೆಯನ್ನು ಹೊಂದಿದ ಮಾನವರು ನಮಗೆ ಮೊದಲಿನಂತೆ ತರ್ಪಣವನ್ನು ಮಾಡುವಂತೆ ಅನುಗ್ರಹಿಸು.

೯೪. ಭರ್ತೃಯಜ್ಞನು ಹೇಳುತ್ತಾನೆ:—ಬಳಿಕ ಬ್ರಹ್ಮನು ಆಲೋಚಿಸಿ ದಯೆಗೊಂಡು ಆ ಪಿತೃಗಳನ್ನು ಕುರಿತು ಹೀಗೆಂದನು. ನಿಮಗಾಗಿ ನಾನೊಂದು ಸಣ್ಣ ಉಪಾಯವನ್ನು ಆಲೋಚಿಸಿರುವೆನು.

೯೫–೯೭. ಅದರಿಂದ ನೀವು ಅಮಾವಾಸ್ಯೆಯ ಶ್ರಾದ್ಧವನ್ನು ಹೊಂದದಿದ್ದರೂ ನನ್ನ ಅನುಗ್ರಹದಿಂದ ಅತ್ಯಂತ ತೃಪ್ತಿಯನ್ನು ಪಡೆಯುವಿರಿ. ಅದನ್ನು ಸಾವಧಾನವಾದ ಮನಸ್ಸಿನಿಂದ ಕೇಳಿ. ಆಷಾಢ ಮಾಸದಿಂದ ಐದನೆ ಪಕ್ಷದಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿರಲು ಮೃತದಿನದಲ್ಲಿ ಯಾವ ಮನುಷ್ಯನು ಶ್ರಾದ್ಧವನ್ನು

ಮೃತಾಽಹನಿ ಪುನರ್ಯೋ ವೈ ಶ್ರಾದ್ಧಂ ದಾಸ್ಯತಿ ಮಾನವಃ ।
ತಸ್ಯ ಸಂವತ್ಸರಂ ಯಾವತ್ತೃಪ್ತಾಃ ಸ್ಯುಃ ಪಿತರೋ ಧ್ರುವಂ ॥ ೯೭ ॥
ಏವಂ ಜ್ಞಾತ್ವಾ ಕರಿಷ್ಯಂತಿ ಪ್ರೇತಪಕ್ಷೇ ನರಾಭುವಿ ।
ಶ್ರಾದ್ಧಂ ಯೂಯಂ ನ ಸಂದೇಹೋ ಭವಿಷ್ಯಥ ಸುತರ್ಪಿತಾಃ ॥ ೯೮ ॥
ಯಾವತ್ಸಂವತ್ಸರಂ ತೇನ ಏಕೇನಾಽಪಿ ತು ಸತ್ತಮಾಃ ।
ತಸ್ಮಿನ್ನಪಿ ಚ ಯಃ ಶ್ರಾದ್ಧಂ ಯುಷ್ಮಾಕಂ ನ ಪ್ರದಾಸ್ಯತಿ ॥ ೯೯ ॥
ಶಾಕೇನಾಽಪಿ ದರಿದ್ರೋಽಸಾವಂತ್ಯಜತ್ವಮುಪೇಷ್ಯತಿ ।
ಆಸನಂ ಶಯನಂ ಭೋಜ್ಯಂ ಸ್ಪರ್ಶಂ ಸಂಭಾಷಣಂ ತಥಾ ॥ ೧೦೦ ॥
ಯೇ ಕರಿಷ್ಯಂತಿ ತೈಃ ಸಾರ್ಧಂ ತೇಽಪಿ ಪಾಪತಮಾ ನರಾಃ ।
ನ ತೇಷಾಂ ಸಂತತಿರ್ವೃದ್ಧಿಂ ಸಂಪ್ರಯಾಸ್ಯತಿ ಕರ್ಹಿಚಿತ್ ॥ ೧೦೧ ॥
ನ ಸುಖಂ ಧನಧಾನ್ಯಂ ಚ ತೇಷಾಂ ಭಾವಿ ಕಥಂಚನ ।
ತಸ್ಮಾದ್ಗಚ್ಛತ ಚಾಽವ್ಯಗ್ರಾಃ ಸ್ವಸ್ಥಾನಂ ಪಿತರೋ ದ್ರುತಂ ॥ ೧೦೨ ॥
ಕಲಿಕಾಲೇಽಪಿ ಸಂಪ್ರಾಪ್ತೇ ದಾರುಣೇ ನಿರ್ಧನೇ ಜನೇ ।
ವರ್ಷಾಂತೇ ಶ್ರಾದ್ಧಮೇಕಂ ಹಿ ಪ್ರಕರಿಷ್ಯಂತಿ ಮಾನವಾಃ ॥ ೧೦೩ ॥
ಯೇನಾಽಖಿಲಂ ಭವೇದ್ವರ್ಷಂ ಯುಷ್ಮಾಕಂ ಪ್ರೀತಿರುತ್ತಮಾ ॥ ೧೦೪ ॥

ಭರ್ತೃಯಜ್ಞ ಉವಾಚ :—

ತಚ್ಛ್ರುತ್ವಾ ಪಿತರೋ ಹೃಷ್ಟಾ ಜಗ್ಮುಃ ಸ್ವಂ ಸ್ವಂ ನಿಕೇತನಂ ।
ವರ್ಷಾಂತೇಪಿ ಸಮಾಸಾದ್ಯ ಶ್ರಾದ್ಧಂ ನ ಸ್ಯುರ್ಬುಭುಕ್ಷಿತಾಃ ॥ ೧೦೫ ॥

---

ಮಾಡುವನೋ, ಅವನ ಪಿತೃಗಳು ಒಂದು ವರ್ಷಕಾಲ ನಿಶ್ಚಯವಾಗಿಯೂ ತೃಪ್ತಿಗೊಳ್ಳುವರು.

೯೮—೧೦೨. ಭೂಲೋಕದ ಮಾನವರು ಇದನ್ನರಿತು ಪ್ರೇತ ಪಕ್ಷದಲ್ಲಿ ಶ್ರಾದ್ಧವನ್ನು ಮಾಡುವರು. ಆದರಿಂದ ನೀವು ನಿಶ್ಚಯವಾಗಿಯೂ ಒಂದು ವರ್ಷ ಕಾಲ ತೃಪ್ತಿಗೊಳ್ಳುವಿರಿ. ಆ ದಿನ ನಿಮಗೆ ಶಾಕದಿಂದಾದರೂ ಶ್ರಾದ್ಧವನ್ನು ಮಾಡದವನು ದರಿದ್ರನೂ, ಅಂತ್ಯಜನೂ ಆಗುವನು. ಅವನೊಡನೆ ಆಸನ, ಶಯನ, ಭೋಜನ, ಸ್ಪರ್ಶ, ಸಂಭಾಷಣ ಇವುಗಳನ್ನು ಮಾಡುವವರೂ ಅತ್ಯಂತ ಪಾಪಿಗಳಾಗುವರು. ಅವರ ಸಂತತಿಯು ವೃದ್ಧಿಯಾಗುವುದಿಲ್ಲ. ಮತ್ತು ಸುಖವೂ, ಧನ, ಧಾನ್ಯಗಳೂ ಅವರಿಗುಂಟಾಗುವುದಿಲ್ಲ. ಆದುದರಿಂದ ಪಿತೃಗಳೆ! ನೀವು ವ್ಯಾಕುಲರಾಗದೆ ಶೀಘ್ರವಾಗಿ ನಿಮ್ಮ ಸ್ಥಾನಕ್ಕೆ ತೆರಳಿರಿ.

೧೦೩—೧೦೪. ಕಠಿನವಾದ ಕಲಿಕಾಲವೊದಗಿದರೂ, ಜನರು ಬಡವರಾದರೂ ವರ್ಷಾಂತ್ಯದಲ್ಲಿ ಶ್ರಾದ್ಧವನ್ನು ಮಾಡುವರು. ಅದರಿಂದ ನಿಮಗೆ ಒಂದು ವರ್ಷವೆಲ್ಲ ಅತಿಶಯ ಪ್ರೀತಿಯುಂಟಾಗುವುದು.

೧೦೫. ಭರ್ತೃಯಜ್ಞನು ಹೇಳುತ್ತಾನೆ:—ಪಿತೃಗಳು ಅದನ್ನು ಕೇಳಿ

ಅಥ ಯೇಽತ್ರ ದುರಾತ್ಮಾನೋ ನಿಃಶಂಕಾಃ ಕೃಪಣಾತ್ಮಕಾಃ ।
ಕಲಿನಾ ಮೋಹಿತಾಃ ಶ್ರಾದ್ಧಂ ವತ್ಸರಾಂತೇಽಪಿ ನೋ ದದುಃ ॥ ೧೦೬ ॥
ತೇಷಾಂ ತು ಪಿತರೋ ಭೂಯೋ ದಿವ್ಯೈಃ ಪಿತೃಭಿರನ್ವಿತಾ ।
ಬ್ರಹ್ಮಾಣಂ ಶರಣಂ ಜಗ್ಮುಃ ಪ್ರೋಚುಸ್ತೇ ದೀನಮಾನಸಾಃ ॥ ೧೦೭ ॥
ಭಗವನ್ ವತ್ಸರಾಂತೇಽಪಿ ಕನ್ಯಾಸಂಸ್ಥೇ ದಿವಾಕರೇ ।
ನಾಽಸ್ಮಾಕಂ ವಂಶಜಾಃ ಶ್ರಾದ್ಧಂ ಪ್ರಯಚ್ಛಂತಿ ದುರಾತ್ಮಕಾಃ ॥ ೧೦೮ ॥
ತೇನ ಸಂಪೀಡಿತಾ ದೇವ ಕ್ಷುತ್ಪಿಪಾಸಾ ಸಮಾಕುಲಾಃ ।
ವಯಂ ಶರಣಮಾಪನ್ನಾಸ್ತತ್ಪ್ರತೀಕಾರಮಾಚರ ॥ ೧೦೯ ॥
ಯಥಾ ಪೂರ್ವಂ ಮಹಾಭಾಗ ವದೋಪಾಯಂ ಲಘೂತ್ತಮಂ ।
ಏಕಾಹಿ ಕೇನ ಶ್ರಾದ್ಧೇನ ಯೇನಾಽಸ್ಮಾಕಂ ಹಿ ಶಾಶ್ವತೀ ।
ಪ್ರೀತಿಃ ಸಂಜಾಯತೇ ದೇವ ತ್ವತ್ಪ್ರಸಾದಾತ್ಸುರೇಶ್ವರ ॥ ೧೧೦ ॥
ವಂಶಕ್ಷಯೇಽಪಿ ಸಂಜಾತೇ ಹ್ಯಸ್ಮಾಕಂ ಪತನಂ ಭವೇತ್ ॥ ೧೧೧ ॥
ಭರ್ತೃಯಜ್ಞ ಉವಾಚ :—
ತೇಷಾಂ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಪಿತಾಮಹಃ ।
ಕೃಪಯಾ ಪರಯಾವಿಷ್ಟಸ್ತತಃ ಪ್ರೋವಾಚ ಸಾದರಂ ॥ ೧೧೨ ॥

---

ಸಂತೋಷಗೊಂಡು ತಮ್ಮ ತಮ್ಮ ಸ್ಥಾನಕ್ಕೆ ಹೋದರು. ಅವರು ವರ್ಷದ ಅಂತ್ಯದಲ್ಲಿ ಶ್ರಾದ್ಧವನ್ನು ಹೊಂದಿ ಹಸಿವುಗೊಳ್ಳಲಿಲ್ಲ.

೧೦೬. ಬಳಿಕ ಭೂಮಿಯಲ್ಲಿರುವ ದುಷ್ಟರೂ, ಕೃಪಣರೂ ಆದ ಮಾನವರು ಕಲಿಯಿಂದ ಮೋಹಗೊಂಡು ನಿಶ್ಶಂಕರಾಗಿ ವರ್ಷಾಂತ್ಯದಲ್ಲಿಯೂ ಶ್ರಾದ್ಧವನ್ನು ಮಾಡಲಿಲ್ಲ.

೧೦೭. ಅವರ ಪಿತೃಗಳು ದಿವ್ಯ ಪಿತೃಗಳೊಡನೆ ಮತ್ತೆ ಬ್ರಹ್ಮನನ್ನು ಮರೆಹೊಕ್ಕು ದೈನ್ಯದಿಂದ ಇಂತೆಂದರು.

೧೦೮. "ಪೂಜ್ಯನೆ! ವರ್ಷಾಂತ್ಯದಲ್ಲಿಯೂ ಸೂರ್ಯನು ಕನ್ಯಾರಾಶಿಯಲ್ಲಿ ಇರಲು ದುರಾತ್ಮರಾದ ನಮ್ಮ ಕುಲದವರು ನಮಗೆ ಶ್ರಾದ್ಧವನ್ನು ಮಾಡುವುದಿಲ್ಲ.

೧೦೯. ಆದರಿಂದ ನಾವು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ನಿನ್ನನ್ನು ಮರೆಹೊಕ್ಕಿದ್ದೇವೆ. ಆದುದರಿಂದ ಇದಕ್ಕೆ ಪ್ರತಿಕ್ರಿಯೆಯನ್ನು ಮಾಡು.

೧೧೦. ಮಹಾ ಭಾಗ್ಯಶಾಲಿಯೆ! ಮೊದಲಿನಂತೆಯೇ ಸಣ್ಣ ಉಪಾಯವನ್ನು ಹೇಳು. ನಿನ್ನ ಅನುಗ್ರಹದಿಂದ ನಮಗೆ ಒಂದು ದಿನದ ಶ್ರಾದ್ಧದಿಂದಲೇ ಶಾಶ್ವತವಾದ ತೃಪ್ತಿಯಾಗುವಂತೆ ಮಾಡು.

೧೧೧. ವಂಶವು ನಾಶವಾಗಲು ನಾವು ಭೂಮಿಯಲ್ಲಿ ಬಿದ್ದೇವು."

೧೧೨. ಭರ್ತೃಯಜ್ಞನು ಹೇಳುತ್ತಾನೆ:—ಪಿತಾಮಹನು ಅವರ ಆ ಮಾತನ್ನು

ಬ್ರಹ್ಮೋವಾಚ :—

ಅನ್ಯೋ ಯುಷ್ಮತ್ಪ್ರತುಷ್ಟ್ಯರ್ಥಮುಪಾಯಶ್ಚಿಂತಿತೋ ಮಯಾ ।
ಸ ಲಘುರ್ಯೇನ ವೋಽತ್ಯಂತಂ ತೃಪ್ತಿರ್ಭವತಿ ಶಾಶ್ವತೀ ॥ ೧೧೩ ॥
ಗಯಾಶಿರಃ ಸಮಾಸಾದ್ಯ ಶ್ರಾದ್ಧಂ ದಾಸ್ಯಂತಿ ಯೇಽತ್ರ ವಃ ।
ಅಪ್ಯೇಕಂ ತತ್ಪ್ರಭಾವೇನ ದಿವ್ಯಾಂ ಗತಿಮವಾಪ್ಸ್ಯಥ ॥ ೧೧೪ ॥
ಅಪಿ ಪಾಪಾತ್ಮನಃ ಪುಂಸೋ ಬ್ರಹ್ಮಘ್ನಸ್ಯಾಽಪಿ ದೇಹಿನಃ ।
ಅಪಿ ರೌರವಸಂಸ್ಥಸ್ಯ ಕುಂಭೀಪಾಕಗತಸ್ಯ ಚ ॥ ೧೧೫ ॥
ಪ್ರೇತಭಾವಂಗತಸ್ಯಾಽಪಿ ಯಸ್ಯ ಶ್ರಾದ್ಧಂ ಪ್ರದಾಸ್ಯತಿ ।
ಗಯಾಶಿರಸಿ ವಂಶಸ್ಥಸ್ತಸ್ಯ ಮುಕ್ತಿರ್ಭವಿಷ್ಯತಿ ॥ ೧೧೬ ॥
ಏತನ್ಮಮ ವಚಃ ಶ್ರುತ್ವಾ ಸಾಂಪ್ರತಂ ಭುವಿ ಮಾನವಾಃ ।
ನಿಃಸ್ವಾ ಅಪಿ ಕರಿಷ್ಯಂತಿ ಶ್ರಾದ್ಧಮೇಕಂ ಹಿ ತತ್ರ ಚ ।
ಗಯಾಶಿರಸಿ ಸುವ್ಯಕ್ತಂ ಯುಷ್ಮಾಕಂ ಮುಕ್ತಿದಾಯಕಂ ॥ ೧೧೭ ॥

ಭರ್ತೃಯಜ್ಞ ಉವಾಚ :—

ತಚ್ಛ್ರುತ್ವಾ ಪಿತರಸ್ತಸ್ಯ ವಚನಂ ಪರಮೇಷ್ಠಿನಃ ।
ಅನುಜ್ಞಾತಾಸ್ತತಸ್ತೇನ ಸ್ವಾನಿ ಸ್ಥಾನಾನಿ ಭೇಜಿರೇ ॥ ೧೧೮ ॥

---

ಕೇಳಿ ಬಹಳ ಹೊತ್ತು ಆಲೋಚಿಸಿ ಅತ್ಯಂತ ದಯೆಗೊಂಡು ಪ್ರೀತಿಯಿಂದ ಹೀಗೆಂದನು.

೧೧೩. ಬ್ರಹ್ಮನು ಹೇಳುತ್ತಾನೆ:—ನಿಮ್ಮ ಸಂತೋಷಕ್ಕಾಗಿ ನಾನು ಮತ್ತೊಂದು ಸಣ್ಣ ಉಪಾಯವನ್ನು ಆಲೋಚಿಸಿರುವೆನು. ಅದರಿಂದ ನಿಮಗೆ ಶಾಶ್ವತವಾದ ತೃಪ್ತಿಯುಂಟಾಗುವುದು.

೧೧೪. ಗಯೆಯಲ್ಲಿ ನಿಮ್ಮ ವಂಶದವರು ಒಂದು ಸಾರಿ ಶ್ರಾದ್ಧ ಮಾಡಿದರೂ ಅದರಿಂದ ನೀವು ದಿವ್ಯಗತಿಯನ್ನು ಹೊಂದುವಿರಿ.

೧೧೫–೧೧೬. ನಿಮ್ಮ ವಂಶದವರು ಗಯೆಯಲ್ಲಿ ಶ್ರಾದ್ಧವನ್ನು ಮಾಡಿದರೆ ಪಾಪಿಷ್ಠನೂ, ಬ್ರಹ್ಮಹತ್ಯೆ ಮಾಡಿದವನೂ, ರೌರವ ಕುಂಭೀಪಾಕನರಕದಲ್ಲಿರುವವನೂ, ಪ್ರೇತತ್ವವನ್ನು ಹೊಂದಿದವನೂ ಮೋಕ್ಷವನ್ನು ಪಡೆಯುವನು.

೧೧೭. ಈಗ ನನ್ನೀ ಮಾತನ್ನು ಕೇಳಿ ಭೂಲೋಕದ ಮಾನವರು ಬಡವರಾಗಿದ್ದರೂ ಗಯೆಯಲ್ಲಿ ನಿಮಗೆ ಮೋಕ್ಷವನ್ನು ಕೊಡುವ ಒಂದು ಶ್ರಾದ್ಧವನ್ನು ಮಾಡುವರು.

೧೧೮. ಭರ್ತೃಯಜ್ಞನು ಹೇಳುತ್ತಾನೆ:—ಪಿತೃಗಳು ಆ ಬ್ರಹ್ಮನ ಮಾತನ್ನು ಕೇಳಿ ಅವನ ಅನುಮತಿಯಿಂದ ತಮ್ಮ ಸ್ಥಾನಗಳಿಗೆ ಹೋದರು.

ತತಃ ಪ್ರಭೃತಿ ಶ್ರಾದ್ಧಾನಿ ಪ್ರವೃತ್ತಾನಿ ಧರಾತಲೇ ।
ಪಿಂಡದಾನ ಸಮೇತಾನಿ ಯಾವದಾಪುರುಷತ್ರಯಂ ॥ ೧೧೯ ॥
ಪೂರ್ವಂ ಬ್ರಹ್ಮಾದಿತಃ ಕೃತ್ವಾ ಯೇ ಕೇಚಿತ್ಪುರುಷಾ ಗತಾಃ ।
ಪರಲೋಕಂ ಸಮುದ್ದಿಶ್ಯ ತಾನ್ನರಾಂಛಕ್ತಿತೋ ನೃಪ ॥ ೧೨೦ ॥
ತತ್ಸಂಖ್ಯಾನಾಂ ದ್ವಿಜೇಂದ್ರಾಣಾಂ ದತ್ತವಂತೋಽಪಿ ವಾಂಛಿತಂ ।
ಅದ್ವೈವತ್ಯಮಿದಂ ಶ್ರಾದ್ಧಂ ದರಿದ್ರಾಣಾಂ ಸುಖಾವಹಂ ॥ ೧೨೧ ॥
ಪಿತ್ರೂಣಾಂ ದೇವತಾನಾಂ ಚ ಮನುಷ್ಯಾಣಾಂ ಸುತೃಪ್ತಿದಂ ।
ತಸ್ಮಾಚ್ಛ್ರಾದ್ಧಂ ಪ್ರಕರ್ತವ್ಯಂ ಪುರುಷೇಣ ವಿಜಾನತಾ ॥ ೧೨೨ ॥
ಪಿತ್ರೂಣಾಂ ವಾಂಛತಾ ತೃಪ್ತಿಂ ಕಾಲೇಷ್ವೇತೇಷು ಯತ್ನತಃ ।
ಗಯಾಯಾಂ ಚ ವಿಶೇಷೇಣ ಲೋಕದ್ವಯಮಭೀಪ್ಸತಾ ॥ ೧೨೩ ॥
ನ ದದಾತಿ ನರಃ ಶ್ರಾದ್ಧಂ ಪಿತ್ರೂಣಾಂ ಚಂದ್ರಸಂಕ್ಷಯೇ ।
ಕ್ಷುತ್ಪಿಪಾಸಾಪರೀತಾಂಗಾಃ ಪಿತರಸ್ತಸ್ಯ ದುಃಖಿತಾಃ ॥ ೧೨೪ ॥
ಪ್ರೇತಪಕ್ಷಂ ಪ್ರತೀಕ್ಷಂತೇ ಗುರುವಾಂಛಾಸಮನ್ವಿತಾಃ ।
ಕರ್ಷಕಾ ಜಲದಂ ಯದ್ವದ್ದಿವಾನಕ್ತಮತಂದ್ರಿತಾಃ ॥ ೧೨೫ ॥
ಪ್ರೇತಪಕ್ಷೇ ವ್ಯತಿಕ್ರಾಂತೇ ಯಾವತ್ಕನ್ಯಾಂ ಗತೋ ರವಿಃ ।
ತಾವಚ್ಛ್ರಾದ್ಧಂ ಚ ವಾಂಛಂತಿ ದತ್ತಂ ಸ್ವೈಃ ಪಿತರಃ ಸುತೈಃ ॥ ೧೨೬ ॥

---

೧೧೯. ಅದು ಮೊದಲ್ಗೊಂಡು ಭೂಮಿಯಲ್ಲಿ ಪಿಂಡದಾನದಿಂದ ಕೂಡಿದ ಪುರುಷತ್ರಯ ಶ್ರಾದ್ಧವು ಆರಂಭವಾಯಿತು.

೧೨೦. ಬ್ರಹ್ಮ ಮೊದಲ್ಗೊಂಡು ಪರಲೋಕಕ್ಕೆ ತೆರಳಿದ ಜನರನ್ನುದ್ದೇಶಿಸಿ ಅಷ್ಟೇ ಸಂಖ್ಯೆಯ ಬ್ರಾಹ್ಮಣರಿಗೆ ಶಕ್ತ್ಯನುಸಾರ ಇಷ್ಟವಾದುದನ್ನು ಕೊಟ್ಟರೂ ಈ ಶ್ರಾದ್ಧವು ಅದ್ವೈವತ್ಯವಾದ್ದರಿಂದ ಬಡವರಿಗೆ ಸುಖವನ್ನುಂಟುಮಾಡತಕ್ಕುದು.

೧೨೧–೧೨೩. ಮತ್ತು ದೇವಮನುಷ್ಯ ಪಿತೃಗಳಿಗೆ ತೃಪ್ತಿಯನ್ನುಂಟುಮಾಡತಕ್ಕುದು. ಆದುದರಿಂದ ಇದನ್ನರಿತ ಪಿತೃಗಳಿಗೆ ತೃಪ್ತಿಯಾಗುವುದನ್ನು ಬಯಸುವ ಮಾನವನು ಉಭಯ ಲೋಕಾಪೇಕ್ಷೆಯಿಂದ ಗಯೆಯಲ್ಲಿ ಶ್ರಾದ್ಧ ಮಾಡಬೇಕು.

೧೨೪–೧೨೫. ಮಾನವನು ಅಮಾವಾಸ್ಯೆಯ ದಿನ ಶ್ರಾದ್ಧವನ್ನು ಮಾಡದಿದ್ದರೆ ಅವನ ಪಿತೃಗಳು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಅತಿಶಯಾಪೇಕ್ಷೆಯಿಂದ ಕೂಡಿ ಒಕ್ಕಲಿಗರು ಮೋಡವನ್ನು ನಿರೀಕ್ಷಿಸುವಂತೆ ಹಗಲು ರಾತ್ರಿ ಆಲಸ್ಯವಿಲ್ಲದೆ ಪ್ರೇತಪಕ್ಷವನ್ನು ನಿರೀಕ್ಷಿಸುತ್ತಾರೆ.

೧೨೬. ಪ್ರೇತಪಕ್ಷವು ಕಳೆದಮೇಲೆ ಸೂರ್ಯನು ಕನ್ಯಾರಾಶಿಯನ್ನು ಸೇರಲು ಪಿತೃಗಳು ತಮ್ಮ ಮಕ್ಕಳು ಮಾಡುವ ಶ್ರಾದ್ಧವನ್ನು ಅಪೇಕ್ಷಿಸುತ್ತಾರೆ.

ತತಸ್ತುಲಾಗತೇಽಪ್ಯೇಕೇ ಸೂರ್ಯೇ ವಾಂಛಂತಿ ಪಾರ್ಥಿವ ।
ಶ್ರಾದ್ಧಂ ಸ್ವವಂಶಜೈರ್ದತ್ತಂ ಕ್ಷುತ್ಪಿಪಾಸಾಸಮಾಕುಲಾಃ ॥ ೧೨೭ ॥
ತಸ್ಮಿನ್ನಪಿ ವ್ಯತಿಕ್ರಾಂತೇ ಕಾಲೇ ಚಾಲಿಂಗತೇ ರವೌ ।
ನಿರಾಶಾಃ ಪಿತರೋ ದೀನಾಸ್ತತೋ ಯಾಂತಿ ನಿಜಾಲಯಂ ॥ ೧೨೮ ॥
ಮಾಸದ್ವಯಂ ಪ್ರತೀಕ್ಷಂತೇ ಗೃಹದ್ವಾರಂ ಸಮಾಶ್ರಿತಾಃ ।
ವಾಯುಭೂತಾಃ ಪಿಪಾಸಾರ್ತಾಃ ಕ್ಷುತ್ಕ್ಷಾಮಾಃ ಪಿತರೋ ನೃಣಾಂ ॥
ಯಾವತ್ಕನ್ಯಾಗತಃ ಸೂರ್ಯಸ್ತುಲಾಸ್ಥಶ್ಚ ಮಹೀಪತೇ ।
ತಥಾ ದರ್ಶದಿನೇ ತದ್ವದ್ಬ್ರಹ್ಮಣೋ ವಚನಾನ್ನೃಪ ॥ ೧೩೦ ॥
ತಸ್ಮಾಚ್ಛ್ರಾದ್ಧಂ ಸದಾ ಕಾರ್ಯಂ ಪಿತ್ರೂಣಾಂ ತೃಪ್ತಿಮಿಚ್ಛತಾ ।
ತಿಲೋದಕಂ ವಿಶೇಷೇಣ ಯಥಾ ಬ್ರಹ್ಮವಚೋ ನೃಪ ॥ ೧೩೧ ॥
ವಿತ್ತಾಭಾವೇಽಪಿ ದರ್ಶಾಯಾಂ ಶ್ರಾದ್ಧಂ ದೇಯಂ ವಿಪಶ್ಚಿತಾ ।
ತದಭಾವೇ ಚ ಕನ್ಯಾಯಾಂ ಸಂಸ್ಥಿತೇ ದಿವಸಾಧಿಪೇ ॥ ೧೩೨ ॥
ತದಭಾವೇ ಗಯಾಯಾಂ ಚ ಸಕೃಚ್ಛ್ರಾದ್ಧಂ ಹಿ ನಿರ್ವಪೇತ್ ।
ಯೇನ ನಿತ್ಯಂ ಪ್ರದತ್ತಸ್ಯ ಶ್ರಾದ್ಧಸ್ಯ ಫಲಮಶ್ನುತೇ ॥ ೧೩೩ ॥

---

೧೨೭–೧೨೮. ಕೆಲವು ಪಿತೃಗಳು ಸೂರ್ಯನು ತುಲಾರಾಶಿಗತನಾಗಲು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ತಮ್ಮ ವಂಶದವರು ಮಾಡುವ ಶ್ರಾದ್ಧವನ್ನು ಬಯಸುತ್ತಾರೆ. ಆ ತುಲಾಮಾಸವೂ ಕಳೆಯಲು ಸೂರ್ಯನು ವೃಶ್ಚಿಕರಾಶಿಯನ್ನು ಹೊಂದಲು ಆ ಪಿತೃಗಳು ದೈನ್ಯದಿಂದ ನಿರಾಶರಾಗಿ ತಮ್ಮ ವಾಸಸ್ಥಳಕ್ಕೆ ತೆರಳುವರು.

೧೨೯–೧೩೦. ಮಾನವಪಿತೃಗಳು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ವಾಯುರೂಪದಿಂದ ಮನೆಯ ಬಾಗಿಲನ್ನು ಹೊಂದಿ ಕನ್ಯಾಗತ ಸೂರ್ಯನು ತುಲಾರಾಶಿಯನ್ನು ಹೊಂದಿ ಅದನ್ನು ಬಿಡುವವರೆಗೂ ಎರಡು ತಿಂಗಳು ನಿರೀಕ್ಷಿಸುತ್ತಾರೆ. ಹಾಗೆಯೇ ಬ್ರಹ್ಮನ ಮಾತಿನಂತೆ ಅಮಾವಾಸ್ಯೆಯ ದಿನವೂ ನಿರೀಕ್ಷಿಸುತ್ತಾರೆ.

೧೩೧. ಆದುದರಿಂದ ಬ್ರಹ್ಮನ ವಚನದಂತೆ ಪಿತೃಗಳ ತೃಪ್ತಿಯನ್ನು ಬಯಸುವ ಮಾನವನು ಯಾವಾಗಲೂ ಶ್ರಾದ್ಧವನ್ನು ಮಾಡಬೇಕು. ತಿಲೋದಕವನ್ನು ಕೊಡಬೇಕು.

೧೩೨–೧೩೩. ಹಾಗೆ ಮಾಡಲು ದ್ರವ್ಯವಿಲ್ಲದಿದ್ದರೆ ಅಮಾವಾಸ್ಯೆಯ ದಿನ ಮಾಡಬೇಕು. ಅದೂ ಸಾಧ್ಯವಿಲ್ಲದಿದ್ದರೆ ಸೂರ್ಯನು ಕನ್ಯಾರಾಶಿಯನ್ನು ಹೊಂದಲು ಶ್ರಾದ್ಧ ಮಾಡಬೇಕು. ಅದೂ ಸಾಧ್ಯವಿಲ್ಲದಿದ್ದರೆ ಗಯೆಯಲ್ಲಿ ಒಂದುಸಾರಿ ಶ್ರಾದ್ಧ ಮಾಡಬೇಕು. ಅದರಿಂದ ನರನು ನಿತ್ಯವೂ ಮಾಡಿದ ಶ್ರಾದ್ಧದ ಫಲವನ್ನು ಪಡೆಯುವನು.

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರಾಧಿಪ ।
ಯೇನೈತತ್ಕ್ರಿಯತೇ ಶ್ರಾದ್ಧಂ ಜನೈಃ ಪಿತೃಪರಾಯಣೈಃ ॥ ೧೩೪ ॥
ಅಮಾವಾಸ್ಯಾಂ ವಿಶೇಷೇಣ ಪ್ರೇತಪಕ್ಷೇ ಚ ಪಾರ್ಥಿವ ॥ ೧೩೫ ॥
ಯಶ್ಚೈತಾಂ ಶೃಣುಯಾತ್ಪುಣ್ಯಾಂ ಶ್ರಾದ್ಧೋತ್ಪತ್ತಿಂ ಪಠೇಚ್ಚ ವಾ ।
ಸ ಸರ್ವದೋಷನಿರ್ಮುಕ್ತಃ ಶ್ರಾದ್ಧದಾನಫಲಂ ಲಭೇತ್ ॥ ೧೩೬ ॥
ಶ್ರಾದ್ಧಕಾಲೇ ಪಠೇದ್ಯಸ್ತು ಶ್ರಾದ್ಧೋತ್ಪತ್ತಿಮಿಮಾಂ ನರಃ ।
ಅಕ್ಷಯಂ ತದ್ಭವೇಚ್ಛ್ರಾದ್ಧಂ ಸರ್ವಚ್ಛಿದ್ರವಿವರ್ಜಿತಂ ॥ ೧೩೭ ॥
ಅಸದ್ದ್ರವ್ಯೇಣ ವಾ ಚೀರ್ಣಮನರ್ಹೈರ್ಬ್ರಾಹ್ಮಣೈರಪಿ ।
ಅಭುಕ್ತಂ ಕಾಮಹೀನಂ ವಾ ಮಂತ್ರಹೀನಮಥಾಽಪಿ ವಾ ॥ ೧೩೮ ॥
ಸರ್ವಂ ಸಂಪೂರ್ಣತಾಂ ಯಾತಿ ಕೀರ್ತನಾತ್ಪಾರ್ಥಿವೋತ್ತಮ ।
ಅಸ್ಯಾಃ ಶ್ರಾದ್ಧಸಮುತ್ಪತ್ತೇಃ ಕೀರ್ತನಾಚ್ಛ್ರವಣಾದಪಿ ॥ ೧೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧೋತ್ಪತ್ತಿವರ್ಣನಂ" ನಾಮ
ಷೋಡಶೋತ್ತರದ್ವಿಶತತಮೋಽಧ್ಯಾಯಃ

---

೧೩೪–೧೩೫. ದೊರೆಯೆ! ನೀನು ಕೇಳಿದಂತೆ ಜನರು ಪಿತೃಗಳಿಗೆ ಅಮಾವಾಸ್ಯೆ ಮತ್ತು ಪ್ರೇತಪಕ್ಷಗಳಲ್ಲಿ ಏಕೆ ಶ್ರಾದ್ಧವನ್ನು ಮಾಡುವರೆಂಬುದನ್ನು ಹೇಳಿರುತ್ತೇನೆ.

೧೩೬. ಪುಣ್ಯಕರವಾದ ಈ ಶ್ರಾದ್ಧೋತ್ಪತ್ತಿಯ ಕ್ರಮವನ್ನು ಕೇಳಿದವನು ಅಥವಾ ಪಠಿಸಿದವನು ಸಮಸ್ತ ದೋಷಮುಕ್ತನಾಗಿ ಶ್ರಾದ್ಧ ಮಾಡಿದ ಫಲವನ್ನು ಪಡೆಯುವನು.

೧೩೭. ಮನುಷ್ಯನು ಈ ಶ್ರಾದ್ಧೋತ್ಪತ್ತಿಯ ಕ್ರಮವನ್ನು ಶ್ರಾದ್ಧಕಾಲದಲ್ಲಿ ಪಠಿಸಿದರೆ ಆ ಶ್ರಾದ್ಧವು ಸಮಸ್ತ ದೋಷರಹಿತವಾಗಿ ಅಕ್ಷಯವಾಗುವುದು.

೧೩೮–೧೩೯. ಈ ಶ್ರಾದ್ಧೋತ್ಪತ್ತಿಯ ಕ್ರಮವನ್ನು ಹೇಳುವುದರಿಂದಲೂ, ಕೇಳುವುದರಿಂದಲೂ, ಅಸದ್ದ್ರವ್ಯ, ಅನರ್ಹ ಬ್ರಾಹ್ಮಣರಿಂದ ಮಾಡಿದ ಭೋಜನ, ಇಷ್ಟಾರ್ಥ, ಮಂತ್ರಗಳಿಲ್ಲದ ಶ್ರಾದ್ಧವೂ ಸಂಪೂರ್ಣವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧೋತ್ಪತ್ತಿವರ್ಣನ"ವೆಂಬ
ಇನ್ನೂರ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋತ್ತರದ್ವಿಶತತಮೋಽಧ್ಯಾಯಃ

### ಶ್ರಾದ್ಧಾರ್ಹಪದಾರ್ಥಬ್ರಾಹ್ಮಣಕಾಲನಿರ್ಣಯವರ್ಣನಂ

ಆನರ್ತ ಉವಾಚ :—

ವಿಧಿನಾ ಯೇನ ಕರ್ತವ್ಯಂ ಶ್ರಾದ್ಧಂ ಸರ್ವಂ ಮುನೀಶ್ವರ ।
ತಮಾಚಕ್ಷ್ವಾಽದ್ಯ ಕಾರ್ತ್ಸ್ನ್ಯೇನ ಶ್ರದ್ಧಾ ಮೇ ಮಹತೀ ಸ್ಥಿತಾ ॥ ೧ ॥

ಭರ್ತೃಯಜ್ಞ ಉವಾಚ :—

ಶೃಣು ರಾಜನ್ ಪ್ರವಕ್ಷ್ಯಾಮಿ ಶ್ರಾದ್ಧಸ್ಯ ವಿಧಿಮುತ್ತಮಂ ।
ಪಿತೄಣಾಂ ತುಷ್ಟಿದಂ ನಿತ್ಯಂ ಸರ್ವಕಾಮಪ್ರದಂ ನೃಣಾಂ ॥ ೨ ॥
ಸ್ವಕರ್ಮೋಪಾರ್ಜಿತೈರ್ವಿತ್ತೈಃ ಶ್ರಾದ್ಧಕಾರ್ಯಾಣಿ ಚಾಽಹರೇತ್ ।
ಮಾಯಾದಿಭಿರ್ನಚೌರ್ಯೇಣ ಸ ಚ್ಛಲಾಪ್ತೈರ್ನವಂಚನೈಃ ॥ ೩ ॥
ಸ್ವವೃತ್ಯೋಪಾರ್ಜಿತೈರ್ವಿತ್ತೈಃ ಶ್ರಾದ್ಧದ್ರವ್ಯಂ ಸಮಾಹರೇತ್ ।
ಸುಪ್ರತಿಗ್ರಹಜೈರ್ದ್ರವ್ಯೈರ್ಬ್ರಾಹ್ಮಣಾನಾಂ ವಿಶಿಷ್ಯತೇ ॥ ೪ ॥
ರಕ್ಷಣಾಪ್ತೈರ್ನರೇಂದ್ರಸ್ಯ ವೈಶ್ಯಸ್ಯ ಕ್ಷೇತ್ರಸಂಭವೈಃ ।
ಶೂದ್ರಸ್ಯ ಪಣ್ಯಲಬ್ಧೈಶ್ಚ ಶ್ರಾದ್ಧಂ ಕರ್ತುಂ ಪ್ರಯುಜ್ಯತೇ ॥ ೫ ॥

---

### ಕನ್ನಡದ ಅನುವಾದ

#### ಶ್ರಾದ್ಧಾರ್ಹಪದಾರ್ಥಬ್ರಾಹ್ಮಣಕಾಲನಿರ್ಣಯವರ್ಣನ

೧. ಆನರ್ತನು ಹೇಳುತ್ತಾನೆ:— ಮುನಿವರ್ಯನೆ! ಶ್ರಾದ್ಧಗಳೆಲ್ಲವನ್ನೂ ಯಾವ ವಿಧಿಯಿಂದ ಮಾಡಬೇಕು? ಅದನ್ನು ಸಂಪೂರ್ಣವಾಗಿ ನನಗೆ ಹೇಳು. ಆ ವಿಷಯದಲ್ಲಿ ನನಗೆ ಅತ್ಯಂತ ಶ್ರದ್ಧೆಯುಂಟಾಗಿದೆ.

೨. ಭರ್ತೃಯಜ್ಞನು ಹೇಳುತ್ತಾನೆ:—ಅರಸ! ಪಿತೃಗಳಿಗೆ ಸಂತೋಷವನ್ನುಂಟುಮಾಡುವುದೂ, ಮಾನವರಿಗೆ ಸಕಲೇಷ್ಟಾರ್ಥಗಳನ್ನೀಯುವುದೂ ಆದ ಉತ್ತಮವಾದ ಶ್ರಾದ್ಧ ವಿಧಿಯನ್ನು ಹೇಳುತ್ತೇನೆ ಕೇಳು.

೩. ತಾನು ಮಾಡಿದ ಕೆಲಸಗಳಿಂದ ಸಂಪಾದಿಸಿದ ದ್ರವ್ಯಗಳಿಂದಲೇ ಶ್ರಾದ್ಧವನ್ನು ಮಾಡಬೇಕು. ಕಪಟ, ಚೌರ್ಯ, ಮೋಸಗಳಿಂದ ಬಂದ ಹಣಗಳಿಂದ ಮಾಡಬಾರದು.

೪–೫. ತನ್ನ ವೃತ್ತಿಯಿಂದ ಸಂಪಾದಿಸಿದ ದ್ರವ್ಯಗಳಿಂದ ಶ್ರಾದ್ಧದ ವಸ್ತುಗಳನ್ನು ತರಬೇಕು. ಬ್ರಾಹ್ಮಣರಿಗೆ ಒಳ್ಳೆಯ ಪ್ರತಿಗ್ರಹದಿಂದ ಲಭಿಸಿದ ದ್ರವ್ಯಗಳಿಂದಲೂ, ರಾಜನಿಗೆ ರಕ್ಷಣೆಯಿಂದ ಬಂದ ದ್ರವ್ಯಗಳಿಂದಲೂ, ವೈಶ್ಯನಿಗೆ ಹೊಲಗದ್ದೆಗಳಿಂದ ಬಂದ ದ್ರವ್ಯಗಳಿಂದಲೂ, ಶೂದ್ರನಿಗೆ ವಸ್ತು ವಿಕ್ರಯದಿಂದ ಬಂದ ದ್ರವ್ಯಗಳಿಂದಲೂ ಶ್ರಾದ್ಧವನ್ನು ಮಾಡುವುದು ಉತ್ತಮವಾದುದು.

ಏವಂ ಶುದ್ಧಿಸಮೋಪೇತೇ ದ್ರವ್ಯೇ ಪ್ರಾಪ್ತೇ ಗೃಹಾಂತಿಕಂ ।
ಪೂರ್ವೇದ್ಯುಃ ಸಾಯಮಾಸಾದ್ಯ ಶ್ರಾದ್ಧಾರ್ಹಾಣಾಂ ದ್ವಿಜನ್ಮನಾಂ ॥ ೬ ॥
ಗೃಹಂ ಗತ್ವಾ ಶುಚಿರ್ಭೂತ್ವಾ ಕಾಮಕ್ರೋಧವಿವರ್ಜಿತಃ ।
ಆಮಂತ್ರಯೇದ್ಯತೀನ್ ಪಶ್ಚಾತ್ಸ್ನಾತಕಾನ್ ಬ್ರಹ್ಮಕರ್ಮಿಣಃ ॥ ೭ ॥
ತದಭಾವೇ ಗೃಹಸ್ಥಾಂಶ್ಚ ಬ್ರಹ್ಮಜ್ಞಾನಪರಾಯಣಾನ್ ।
ಅಗ್ನಿಹೋತ್ರಪರಾನ್ ವಿಪ್ರಾನ್ ವೇದವಿದ್ಯಾವಿಚಕ್ಷಣಾನ್ ॥ ೮ ॥
ಶ್ರೋತ್ರಿಯಾಂಶ್ಚ ತಥಾ ವೃದ್ಧಾನ್ ಷಟ್ಕರ್ಮನಿರತಾನ್ ಸದಾ ।
ಬಹುಭೃತ್ಯಕುಟುಂಬಾಂಶ್ಚ ದರಿದ್ರಾನ್ ಸಂಯುತಾನ್ ಗುಣೈಃ ॥ ೯ ॥
ಅವ್ಯಂಗಾನ್ರೋಗನಿರ್ಮುಕ್ತಾಂ ಜಿತಾಹಾರಾಂಸ್ತಥಾ ಶುಚೀನ್ ।
ಏತೇ ಸ್ಯುರ್ಬ್ರಾಹ್ಮಣಾ ರಾಜಂಛ್ರಾದ್ಧಾರ್ಹಾಃ ಪರಿಕೀರ್ತಿತಾಃ ॥ ೧೦ ॥
ಅನರ್ಹಾ ಯೇಚ ನಿರ್ದಿಷ್ಟಾ ಶೃಣು ತಾನಪಿ ವಚ್ಮಿ ತೇ ।
ಹೀನಾಂಗಾನಧಿಕಾಂಗಾಂಶ್ಚ ಸರ್ವಭಾಕ್ಷನ್ನಿರಾಕೃತೀನ್ ॥ ೧೧ ॥
ಶ್ಯಾವದಂತಾನ್ ವೃಥಾದಂತಾನ್ ವೇದವಿಕ್ರಯಕಾರಕಾನ್ ।
ವೇದವಿಪ್ಲವಕಾನ್ ವಾಽಪಿ ವೇದಶಾಸ್ತ್ರವಿವರ್ಜಿತಾನ್ ॥ ೧೨ ॥
ಕುನಖಾನ್ ರೋಗ ಸಂಯುಕ್ತಾನ್ ದ್ವಿರ್ನಗ್ನಾನ್ ಪರಹಿಂಸಕಾನ್ ।
ಜನಾಽಪವಾದಸಂಯುಕ್ತಾನ್ ನಾಽಸ್ತಿಕಾಽನೃತಕಾನಪಿ ॥ ೧೩ ॥

---

೬-೭. ಹೀಗೆ ಶುದ್ಧವಾದ ದ್ರವ್ಯವು ಮನೆಗೆ ಬರಲು ಯಜಮಾನನು ಹಿಂದಿನ ದಿನ ಸಾಯಂಕಾಲ ಶುದ್ಧನೂ, ಕಾಮಕ್ರೋಧಗಳಿಲ್ಲದವನೂ ಆಗಿ ಶ್ರಾದ್ಧಾರ್ಹರಾದ ಬ್ರಾಹ್ಮಣರ ಮನೆಗೆ ಹೋಗಿ ಯತಿಗಳನ್ನೂ, ಸ್ನಾತಕರನ್ನೂ, ಬ್ರಾಹ್ಮಣ ಕರ್ಮಗಳನ್ನು ಅನುಷ್ಠಾನ ಮಾಡುವುದರಲ್ಲಿ ಆಸಕ್ತರಾದವರನ್ನೂ ನಿಮಂತ್ರಣ ಮಾಡಬೇಕು.

೮-೧೦. ಅವರು ಸಿಕ್ಕದಿದ್ದಲ್ಲಿ ಬ್ರಹ್ಮಜ್ಞಾನಿಗಳೂ, ಅಗ್ನಿಹೋತ್ರಿಗಳೂ, ವೇದವಿದ್ಯೆಯಲ್ಲಿ ಕುಶಲರೂ, ಶ್ರೋತ್ರಿಯರೂ, ವೃದ್ಧರೂ, ಷಟ್ಕರ್ಮಾಸಕ್ತರೂ, ಅನೇಕ ಮಂದಿ ಸೇವಕರೂ ಕುಟುಂಬದವರೂ ಇರುವವರೂ, ಬಡವರೂ, ಗುಣಿಗಳೂ, ಅಂಗವೈಕಲ್ಯವಿಲ್ಲದವರೂ, ರೋಗರಹಿತರೂ, ಜಿತಾಹಾರಿಗಳೂ, ಶುದ್ಧರೂ ಆದ ಬ್ರಾಹ್ಮಣರು ಶ್ರಾದ್ಧಯೋಗ್ಯರಾಗುವರು.

೧೧-೧೫. ಅಂಗವಿಕಲರು, ಅಧಿಕಾಂಗರು, ಸರ್ವಭಕ್ಷಕರು, ಪಂಕ್ತಿಬಾಹ್ಯರು, ಹಳದಿ ಹಲ್ಲುಳ್ಳವರು, ನಿಷ್ಫಲವಾದ ಹಲ್ಲುಳ್ಳವರು, ವೇದವನ್ನು ವಿಕ್ರಯಿಸುವವರು, ವೇದದೂಷಕರು, ವೇದಶಾಸ್ತ್ರಗಳನ್ನು ತ್ಯಜಿಸಿದವರು, ಕೆಟ್ಟ ಉಗುರುಳ್ಳವರು, ರೋಗಿಗಳು, ದ್ವಿರ್ನಗ್ನರು, ಪರಹಿಂಸಕರು, ಜನಾಪವಾದವುಳ್ಳವರು, ನಾಸ್ತಿಕರು, ಸುಳ್ಳು ಹೇಳುವವರು, ಬಡ್ಡಿಯಿಂದ ಜೀವಿಸುವವರು, ವಿರುದ್ಧ

ವಾರ್ಧುಷಿಕಾನ್ ವಿಕರ್ಮಸ್ಥಾಂಶ್ಚೌಚಾಚಾರವಿವರ್ಜಿತಾನ್ ।
ಅತಿ ದೀರ್ಘಾನ್ ಕೃಶಾನ್ ವಾಽಪಿ ಸ್ಥೂಲಾನಪಿ ನ ಲೋಮಶಾನ್ ॥ ೧೪ ॥
ನಿರ್ಲೋಮಾನ್ ವರ್ಜಯೇಚ್ಛ್ರಾದ್ಧೇ ಯ ಇಚ್ಛೇತ್ಪಿತೃಗೌರವಂ ।
ಪರದಾರರತಾ ಯೇ ಚ ತಥಾ ಯೋ ವೃಷಲೀಪತಿಃ ॥ ೧೫ ॥
ವಂಧ್ಯಾ ವೈ ವೃಷಲೀ ಪ್ರೋಕ್ತಾ ವೃಷಲೀ ಚ ಮೃತಪ್ರಜಾ ।
ಅಪರಾ ವೃಷಲೀ ಪ್ರೋಕ್ತಾ ಕುಮಾರೀ ಯಾ ರಜಸ್ವಲಾ ॥ ೧೬ ॥
ಷಂಡೋ ಮಲಿಮ್ಲುಚೋ ದಂಭೀ ರಾಜಪೈಶುನ್ಯವೃತ್ತಯಃ ।
ಸಗೋತ್ರಾಯಾಶ್ಚ ಸಂಭೂತಸ್ತಥೈಕಪ್ರವರಾಸುತಃ ॥ ೧೭ ॥
ಕನಿಷ್ಠಃ ಪ್ರಾಕ್ಕೃತಾಧಾನಃ ಕೃತೋದ್ವಾಹಶ್ಚ ಪ್ರಾಕ್ತ್ತಯಃ ।
ತಥಾ ಪ್ರಾಗ್ದೀಕ್ಷಿತೋ ಯಶ್ಚ ಸ ತ್ಯಾಜ್ಯೋ ಗೃಹಸಂಯುತಃ ॥ ೧೮ ॥
ಪಿತೃಮಾತೃಪರಿತ್ಯಾಗೀ ತಥಾಚ ಗುರುತಲ್ಪಗಃ ।
ನಿರ್ದೋಷಾಂ ಯಸ್ತ್ಯಜೇತ್ಪತ್ನೀಂ ಕೃತಘ್ನೋ ಯಶ್ಚ ಕರ್ಷಕಃ ॥ ೧೯ ॥
ಶಿಲ್ಪಜೀವೀ ಪ್ರಮಾದೀಚ ಪಣ್ಯಜೀವೀ ಕೃತಾಽಯುಧಃ ।
ಏತಾನ್ ವಿವರ್ಜಯೇಚ್ಛ್ರಾದ್ಧೇ ಯೇಷಾಂ ನೋ ಜ್ಞಾಯತೇ ಕುಲಂ ॥
ಅಥ ಊರ್ಧ್ವಂ ಪ್ರವಕ್ಷ್ಯಾಮಿ ಯೇ ಶಸ್ತಾಃ ಶ್ರಾದ್ಧಕರ್ಮಣಿ ।
ಯೇ ಬ್ರಾಹ್ಮಣಾಃ ಪುರಾ ಖ್ಯಾತಾಃ ಪಾಪಾನಾಂ ಪಂಕ್ತಿಪಾವನಾಃ ॥ ೨೦ ॥

---

ಕರ್ಮವನ್ನು ಮಾಡುವವರು, ಶೌಚಾಚಾರಬಾಹ್ಯರು, ಬಹಳ ಉದ್ದವಾದವರು, ಕೃಶರು, ದಪ್ಪಗಿರುವವರು, ಅತಿಯಾಗಿ ಕೂದಲುಳ್ಳವರು, ಕೂದಲಿಲ್ಲದವರು, ಪರಪತ್ನೀಗಮನ ಮಾಡುವವರು, ವೃಷಲೀಪತಿ ಇವರು ಶ್ರಾದ್ಧಾನರ್ಹರು.

೧೬. ಬಂಜೆಯೂ, ಸಾಯುವ ಶಿಶುಗಳನ್ನು ಪ್ರಸವಿಸುವವಳೂ, ರಜಸ್ವಲೆಯಾದ ಕನ್ಯೆಯೂ ವೃಷಲಿಯೆನ್ನಿಸಿಕೊಳ್ಳುವಳು.

೧೭–೨೦. ನಪುಂಸಕನೂ, ಕಳ್ಳನೂ, ದಂಭವುಳ್ಳವನೂ, ರಾಜನಿಗೆ ಚಾಡಿ ಹೇಳಿ ಜೀವಿಸುವವನೂ, ಸಗೋತ್ರಿಯ ಮಗನೂ, ಒಂದೇ ಪ್ರವರವುಳ್ಳವಳ ಮಗನೂ, ಅಣ್ಣನಿಗಿಂತ ಮೊದಲು ಅಗ್ನಿಹೋತ್ರವನ್ನು ಮಾಡಿದವನೂ, ಅಣ್ಣನಿಗಿಂತ ಮೊದಲು ವಿವಾಹವಾದವನೂ, ದೀಕ್ಷೆಗೊಂಡವನೂ, ತನ್ನ ಮನೆಯಲ್ಲಿರುವವನೂ, ತಾಯಿ ತಂದೆಗಳನ್ನು ತ್ಯಜಿಸಿದವನೂ, ಗುರುಪತ್ನೀ ಸಂಗವನ್ನು ಮಾಡಿದವನೂ, ನಿರ್ದುಷ್ಟಳಾದ ಹೆಂಡತಿಯನ್ನು ತ್ಯಜಿಸಿದವನೂ, ಕೃತಘ್ನ ವ್ಯವಸಾಯಗಾರನೂ, ಶಿಲ್ಪದಿಂದ ಜೀವಿಸುವವರೂ, ಪ್ರಮಾದವುಳ್ಳವನೂ, ವಿಕ್ರೇಯ ವಸ್ತುಗಳಿಂದ ಜೀವಿಸುವವನೂ, ಆಯುಧವನ್ನು ಹಿಡಿದವನೂ, ಅಜ್ಞಾತಕುಲದವನೂ ಶ್ರಾದ್ಧಕ್ಕೆ ಅರ್ಹರಲ್ಲ.

೨೧–೨೫. ಇನ್ನು ಮುಂದೆ ಶ್ರಾದ್ಧಾರ್ಹರನ್ನು ಹೇಳುವೆನು. ಪಾಪಿಗಳ ಪಂಕ್ತಿಯನ್ನು ಶುದ್ಧಗೊಳಿಸುವ ಹಿಂದೆ ಹೇಳಿದ ಬ್ರಾಹ್ಮಣರು, ತ್ರಿಣಾಚಿಕೇತ,

ತ್ರಿಣಾಚಿಕೇತಸ್ತ್ರಿಮಧುಸ್ತ್ರಿಸುಪರ್ಣಃ ಷಡಂಗವಿತ್ ।
ಯಶ್ಚ ವಿದ್ಯಾವ್ರತಸ್ನಾತೋ ಧರ್ಮದ್ರೋಣಸ್ಯ ಪಾಠಕಃ ॥ ೨೨ ॥
ಪುರಾಣಜ್ಞಸ್ತಥಾಜ್ಞಾನೀ ವಿಜ್ಞೇಯೋ ಜ್ಯೇಷ್ಠ ಸಾಮವಿತ್ ।
ಅಥರ್ವಶಿರಸೋ ವೇತ್ತಾ ಕ್ರತುಗಾಮೀ ಸುಕರ್ಮಕೃತ್ ॥ ೨೩ ॥
ಸದ್ಯಃ ಪ್ರಕ್ಷಾಲಕೋ ಯಶ್ಚ ಶುಕ್ಲೋ ದೌಹಿತ್ರ ಏವ ಚ ।
ಜಾಮಾತಾ ಭಾಗಿನೇಯಶ್ಚ ಪರೋಪಕರಣೇ ರತಃ ॥ ೨೪ ॥
ಮೃಷ್ಟಾನ್ನಾದೋ ಮೃಷ್ಟವಾಕ್ಯಃ ಸದಾ ಜಪಪರಾಯಣಃ ।
ಏತೇಚ ಬ್ರಾಹ್ಮಣಾ ಜ್ಞೇಯಾ ನಿಃಶೇಷಾಃ ಪಂಕ್ತಿಪಾವನಾಃ ॥ ೨೫ ॥
ಏತೈರ್ವಿಮಿಶ್ರಿತಾಃ ಸರ್ವೇ ಗರ್ಹಿತಾ ಅಪಿ ಯೇ ದ್ವಿಜಾಃ ।
ಪಿತೄಣಾಂ ತೇಽಪಿ ಕುರ್ವಂತಿ ತೃಪ್ತಿಂ ಭುಕ್ತ್ವಾ ಕುಲೋದ್ಭವಾಃ ॥ ೨೬ ॥
ತಸ್ಮಾತ್ಸರ್ವಪ್ರಯತ್ನೇನ ಕುಲಂ ಜ್ಞೇಯಂ ದ್ವಿಜನ್ಮನಾಂ ।
ಶೀಲಂ ಪಶ್ಚಾದ್ವಯೋ ನಾಮ ಕನ್ಯಾದಾನಂ ತತಃ ಪರಂ ॥ ೨೭ ॥
ಶ್ರುತಶೀಲ ವಿಹೀನಾಯ ಧರ್ಮಜ್ಞಾಯಾಽಪಿ ಮಾನವಃ ।
ಶ್ರಾದ್ಧಂ ದದಾತಿ ಕನ್ಯಾಂ ಚ ಯಸ್ತೇನಾಽಗ್ನಿಂ ವಿನಾ ಹುತಂ ॥ ೨೮ ॥
ಊಷರೇವಾಽಪಿ ತಂ ಸಸ್ಯಂ ತುಷಾಣಾಂ ಕಂಡನಂ ಕೃತಂ ।
ಕುಲಾಚಾರಸಮೋಪೇತಾಂಸ್ತಸ್ಮಾಚ್ಛ್ರಾದ್ಧೇ ನಿಯೋಜಯೇತ್ ॥ ೨೯ ॥

---

ತ್ರಿಮಧು, ತ್ರಿಸುಪರ್ಣ, ಷಡಂಗಾಭಿಜ್ಞ, ವಿದ್ಯಾವ್ರತಗಳಿಂದ ಸ್ನಾತಕನಾದವನು, ಧರ್ಮಶಾಸ್ತ್ರವನ್ನು ಪಠಿಸುವವನು, ಪುರಾಣವನ್ನರಿತವನು, ಜ್ಞಾನಿ, ಜ್ಯೇಷ್ಠಸಾಮವನ್ನರಿತವನು, ಅಥರ್ವಶಿರಸ್ಸನ್ನು ತಿಳಿದವನು, ಯಾಜ್ಞಿಕ, ಸತ್ಕರ್ಮವನ್ನಾಚರಿಸುವವನು, ಆಗಲೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡವನು, ಭಿಕ್ಷಾಟನೆ ಮಾಡುವವನು, ಮಗಳ ಮಗ, ಮಗಳ ಗಂಡ, ಸಹೋದರಿಯ ಮಗ, ಪರೋಪಕಾರಿ, ಮೃಷ್ಟಾನ್ನಭೋಜನದಲ್ಲಿ ಆಶೆಯುಳ್ಳವನು, ಹಿತವಾಗಿ ಮಾತಾಡುವವನು, ಯಾವಾಗಲೂ ಜಪನಿರತನಾದವನು ಇವರು ಯಾವಾಗಲೂ ಪಂಕ್ತಿಪಾವನರು.

೨೬. ನಿಂದ್ಯರಾದ ಬ್ರಾಹ್ಮಣರೂ ಇವರೊಡನೆ ಸೇರಿ ಶ್ರಾದ್ಧದಲ್ಲಿ ಭುಂಜಿಸಿ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವರು.

೨೭. ಆದುದರಿಂದ ಮೊದಲು ಬ್ರಾಹ್ಮಣರ ಕುಲವನ್ನು ತಿಳಿಯಬೇಕು. ಅನಂತರ ನಡತೆ, ವಯಸ್ಸು, ನಾಮಧೇಯಗಳನ್ನು ತಿಳಿದು ಕನ್ಯೆಯನ್ನು ಕೊಡಬೇಕು.

೨೮–೩೩. ಶಾಸ್ತ್ರಶ್ರವಣ, ಶೀಲ ಇವುಗಳಿಲ್ಲದವನು ಧರ್ಮಜ್ಞನಾಗಿದ್ದರೂ ಅವನಿಗೆ ಶ್ರಾದ್ಧ ಮತ್ತು ಕನ್ಯೆಯರನ್ನು ಕೊಟ್ಟರೆ ಬೂದಿಯಲ್ಲಿ ಹೋಮಿಸಿದಂತಾಗುವುದು. ಮತ್ತು ಮರುಭೂಮಿಯಲ್ಲಿ ಸಸ್ಯವನ್ನು ನೆಟ್ಟಂತೆಯೂ, ಹೊಟ್ಟನ್ನು

ಬ್ರಾಹ್ಮಣಾನ್ ನೃಪಶಾರ್ದೂಲ ಮಂದವಿದ್ಯಾಧರಾನಪಿ ।
ಏವಂ ವಿಜ್ಞಾಯ ತಾನ್ ವಿಪ್ರಾನ್ ಗೃಹೀತ್ವಾ ಚರಣೌ ತತಃ ॥ ೩೦ ॥
ಪ್ರಯತ್ನೇನ ತು ಸವ್ಯೇನ ಪಾಣಿನಾ ದಕ್ಷಿಣೇನ ತು ।
ಯುಗ್ಮಾನಥ ಯಥಾ ಶಕ್ತ್ಯಾ ನಮಸ್ಕೃತ್ಯ ಪುನಃ ಪುನಃ ॥ ೩೧ ॥
ದಕ್ಷಿಣಂ ಜಾನ್ವಥಾಲಭ್ಯ ಮಂತ್ರಮೇನಮುದೀರಯೇತ್ ।
ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ॥ ೩೨ ॥
ಭಕ್ತ್ಯಾಽಽಹೂತಾ ಮಯಾ ಚೈವ ತ್ವಂ ಚಾಽಪಿ ವ್ರತಭಾಗ್ಭವ ।
ಏವಂ ಯುಗ್ಮಾನ್ ಸಮಾಮಂತ್ರ್ಯ ವಿಶ್ವೇದೇವಕೃತೇ ದ್ವಿಜಾನ್ ॥ ೩೩ ॥
ಅಪಸವ್ಯಂ ತತಃ ಕೃತ್ವಾ ಪಿತ್ರರ್ಥಂ ಚಾಽಭಿಮಂತ್ರಯೇತ್ ।
ಬ್ರಾಹ್ಮಣಾಂಸ್ತ್ರೀನ್ ಯಥಾಶಕ್ತ್ಯಾ ಏಕೈಕಸ್ಯ ಪೃಥಕ್ ಪೃಥಕ್ ॥ ೩೪ ॥
ಏಕೈಕಂ ವಾ ತ್ರಯಾಣಾಂ ವಾ ಏಕಮೇವಂ ನಿಮಂತ್ರಯೇತ್ ।
ಬ್ರಾಹ್ಮಣಾನ್ ಮಾತೃಪಕ್ಷೇ ಚ ಏಷ ಏವ ವಿಧಿಃ ಸ್ಮೃತಃ ॥ ೩೫ ॥
ತತಃ ಪಾದೌ ಪರಿಸ್ಪೃಷ್ಟ್ವಾ ದ್ವಿಜಸ್ಯೇದಮುದೀರಯೇತ್ ।
ಶ್ರದ್ಧಾಪೂತೇನ ಮನಸಾ ಪಿತೃಭಕ್ತಿಪರಾಯಣಃ ॥ ೩೬ ॥
ಪಿತಾ ಮೇ ತವಕಾಯೇಽಸ್ಮಿಂಸ್ತಥಾ ಚೈವ ಪಿತಾಮಹಃ ।
ಸ್ವಪಿತ್ರಾ ಸಹಿತಾ ಹ್ಯೇತು ತ್ವಂ ಚ ವ್ರತಪರೋಭವ ॥ ೩೭ ॥

---

ಕುಟ್ಟದಂತೆಯೂ ಆಗುವುದು. ಆದುದರಿಂದ ಅಲ್ಪ ವಿದ್ಯಾವಂತರಾಗಿದ್ದರೂ ಕುಲಶೀಲಗಳಿಂದ ಕೂಡಿದವರನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕು. ಬ್ರಾಹ್ಮಣರನ್ನು ಈ ರೀತಿ ತಿಳಿದುಕೊಂಡು ಇಬ್ಬರು ಬ್ರಾಹ್ಮಣರ ಪಾದಗಳನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು ಶಕ್ತ್ಯನುಸಾರ ನಮಸ್ಕಾರ ಮಾಡಿ ಬಲಮೊಣಕಾಲನ್ನು ಒತ್ತಿ ಈ ಮಂತ್ರವನ್ನು ಉಚ್ಚರಿಸಬೇಕು. “ಮಹಾಭಾಗ್ಯವಂತರೂ, ಅತಿ ಬಲಿಷ್ಠರೂ ಆದ ವಿಶ್ವೇದೇವತೆಗಳೆ! ಬನ್ನಿರಿ. ನಾನು ಭಕ್ತಿಯಿಂದ ನಿಮ್ಮನ್ನು ಕರೆದಿರುವೆನು. ವಿಪ್ರ! ನೀನೂ ವ್ರತಧಾರಿಯಾಗು.” ಹೀಗೆ ಇಬ್ಬರು ಬ್ರಾಹ್ಮಣರನ್ನು ವಿಶ್ವೇದೇವತೆಗಳಿಗಾಗಿ ನಿಮಂತ್ರಣಮಾಡಿ ಬಳಿಕ ಅಪಸವ್ಯದಿಂದ ಮೂರು ಜನ ಪಿತೃಗಳಿಗೆ ಪ್ರತ್ಯೇಕವಾಗಿ ಮೂವರನ್ನು ಅಥವಾ ಒಟ್ಟಿಗೆ ಮೂವರನ್ನು ಅಥವಾ ಒಬ್ಬ ಬ್ರಾಹ್ಮಣನನ್ನೋ ನಿಮಂತ್ರಿಸಬೇಕು. ಮಾತೃಪಕ್ಷದಲ್ಲಿಯೂ ಇದೇ ವಿಧಿಯಾಗಿರುವುದು.

೩೬. ಬಳಿಕ ಬ್ರಾಹ್ಮಣನ ಪಾದಗಳನ್ನು ಮುಟ್ಟಿಕೊಂಡು ಪಿತೃಭಕ್ತಿನಿರತನಾಗಿ ಶ್ರದ್ಧೆಗೊಂಡ ಮನಸ್ಸಿನಿಂದ ಹೀಗೆ ಹೇಳಬೇಕು.

೩೭. ನಿನ್ನೀ ಶರೀರದಲ್ಲಿ ನನ್ನ ಪಿತೃ, ಪಿತಾಮಹ, ಪ್ರಪಿತಾಮಹರು ಸನ್ನಿಹಿತರಾಗಲಿ, ನೀನು ವ್ರತನಿರತನಾಗು.

ಏವಂ ಪಿತ್ರೂನ್ ಸಮಾಹೂಯ ತಥಾ ಮಾತಾಮಹಾನಥ ।
ಸನ್ಮಂತ್ರಿತಾಶ್ಚ ತೇ ವಿಪ್ರಾಃ ಸಂಯತಾತ್ಮಾನ ಏವ ತೇ ॥ ೩೮ ॥
ಯಜಮಾನಃ ಶಾಂತಮನಾ ಬ್ರಹ್ಮಚರ್ಯಸಮನ್ವಿತಃ ।
ತಾಂ ರಾತ್ರಿಂ ಸಮತಿಕ್ರಮ್ಯ ಪ್ರಾತರುತ್ಥಾಯ ಮಾನವಃ ॥ ೩೯ ॥
ತದಹ್ನಿ ವರ್ಜಯೇತ್ಕೋಪಂ ಸ್ವಾಧ್ಯಾಯಂ ಕರ್ಮಕುತ್ಸಿತಂ ।
ತೈಲಾಽಭ್ಯಂಗಂ ಶ್ರಮಂ ಯಾನಂ ವಾಹನಂ ಚಾಽಥ ದೂರತಃ ॥ ೪೦ ॥
ತತೋ ಮಧ್ಯಂಗತೇ ಸೂರ್ಯೇ ಕಾಲೇ ಕುತಪಸಂಜ್ಞಿತೇ ।
ಸ್ನಾತಃ ಶುಕ್ಲಾಂಬರಧರಃ ಸಂತರ್ಪ್ಯ ಪಿತೃದೇವತಾಃ ।
ಸಂತುಷ್ಟಾಂಶ್ಚ ಸಮಾಹೂತಾಂಸ್ತಾನ್ವಿಪ್ರಾಂಛ್ರಾದ್ಧಮಾಚರೇತ್ ॥ ೪೧ ॥
ವಿವಿಕ್ತೇ ಗೃಹಮಧ್ಯಸ್ಥೇ ಮನೋಜ್ಞೇ ದಕ್ಷಿಣಾಪ್ಲವೇ ।
ನ ಯತ್ರ ಜಾಯತೇ ದೃಷ್ಟಿಃ ಪಾಪಾನಾಂ ಕ್ರೂರಕರ್ಮಿಣಾಂ ॥ ೪೨ ॥
ಯಚ್ಛ್ರಾದ್ಧಂ ವೀಕ್ಷತೇ ಶ್ವಾ ವಾ ನಾರೀ ವಾಽಥ ರಜಸ್ವಲಾ ।
ಪತಿತೋ ವಾ ವರಾಹೋ ವಾ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೩ ॥
ಅನ್ನಂ ಪರ್ಯುಷಿತಂ ಯಚ್ಚ ತೈಲಾಕ್ತಂ ವಾ ಪ್ರದೀಯತೇ ।
ಸಕೇಶಂ ವಾ ಸನಿಂದ್ಯಂ ಚ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೪ ॥

---

೩೮. ಹೀಗೆ ಪಿತೃಶ್ರಾದ್ಧದಲ್ಲಿ ಪಿತ್ರಾದಿಗಳನ್ನೂ, ಮಾತಾಮಹಶ್ರಾದ್ಧದಲ್ಲಿ ಮಾತಾಮಹಾದಿಗಳನ್ನೂ ಆಹ್ವಾನ ಮಾಡಬೇಕು. ನಿಮಂತ್ರಿತರಾದ ಆ ಬ್ರಾಹ್ಮಣರು ಜಿತೇಂದ್ರಿಯರಾಗಿರಬೇಕು.

೩೯–೪೦. ಯಜಮಾನನು ಶಾಂತಮನಸ್ಕನೂ, ಬ್ರಹ್ಮಚರ್ಯನಿರತನೂ ಆಗಿ ಆ ರಾತ್ರಿಯನ್ನು ಕಳೆದು ಬೆಳಗ್ಗೆ ಎದ್ದು ಆ ದಿನ ಕೋಪ, ವೇದಾಧ್ಯಯನ, ನಿಂದ್ಯಕಾರ್ಯ, ತೈಲಾಭ್ಯಂಗ, ಆಯಾಸದ ಕೆಲಸ, ಪ್ರಯಾಣ, ವಾಹನ ಇವುಗಳನ್ನು ತ್ಯಜಿಸಬೇಕು.

೪೧–೪೨. ಬಳಿಕ ಸೂರ್ಯನು ಆಕಾಶ ಮಧ್ಯವನ್ನು ಹೊಂದಲು ಕುತಪ ಕಾಲದಲ್ಲಿ ಮಿಂದು ಬಿಳಿ ಬಟ್ಟೆಯನ್ನುಟ್ಟು, ಪಿತೃತರ್ಪಣ ಮಾಡಿ ಸಂತುಷ್ಟರಾದ ಆ ಬ್ರಾಹ್ಮಣರನ್ನು ಕರೆಯಿಸಿ ಪಾಪಿಷ್ಠರೂ, ಕ್ರೂರಕರ್ಮಿಗಳೂ ಆದವರು ನೋಡಲಾಗದ ರಹಸ್ಯವೂ, ಮನೋಹರವೂ, ದಕ್ಷಿಣಭಾಗದಲ್ಲಿ ಕೊಳವಿರುವುದೂ ಆದ ಮನೆಯ ನಡುವೆ ಶ್ರಾದ್ಧ ಮಾಡಬೇಕು.

೪೩. ಶ್ರಾದ್ಧವನ್ನು ನಾಯಿಯಾಗಲಿ, ರಜಸ್ವಲೆಯಾದ ಹೆಂಗಸಾಗಲಿ, ಪತಿತನಾಗಲಿ, ಹಂದಿಯಾಗಲಿ ನೋಡಿದರೆ ವ್ಯರ್ಥವಾಗುವುದು.

೪೪. ತಂಗಳನ್ನ, ತೈಲಸಿಕ್ತನಾದ ಹೋಳಿಗೆ ಮೊದಲಾದ ಭಕ್ಷ್ಯ, ಕೂದಲುಳ್ಳ ಅನ್ನ, ನಿಂದ್ಯವಾದ ಅನ್ನ ಇವುಗಳನ್ನಿತ್ತರೆ ಶ್ರಾದ್ಧವು ವ್ಯರ್ಥವಾಗುವುದು.

ವಿಭಕ್ತಿರಹಿತಂ ಶ್ರಾದ್ಧಂ ತಥಾ ಮೌನವಿವರ್ಜಿತಂ ।
ದಕ್ಷಿಣಾರಹಿತಂ ಯಚ್ಚ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೫ ॥
ಘರಟ್ಟೋಲೂಖಲೋತ್ಥೌ ಚ ಯತ್ರ ಶಬ್ದೌ ವ್ಯವಸ್ಥಿತೌ ।
ಶೂರ್ಪಸ್ಯ ವಾ ವಿಶೇಷೇಣ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೬ ॥
ಯತ್ರಸಂಸ್ಕ್ರಿಯಮಾಣೇ ಚ ಕಲಹಃ ಸಂಪ್ರಜಾಯತೇ ।
ಪಂಕ್ತಿಭೇದೋ ವಿಶೇಷೇಣ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೭ ॥
ಪೂರ್ವಾಹ್ಣೇ ಕ್ರಿಯತೇ ಯಚ್ಚ ರಾತ್ರೌ ವಾ ಸಂಧ್ಯಯೋರಪಿ ।
ಪರ್ಯಾಕಾಶೇ ತಥಾ ದೇಶೇ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೪೮ ॥
ಬ್ರಾಹ್ಮಣೋ ಯಜಮಾನೋ ವಾ ಬ್ರಹ್ಮಚರ್ಯಂ ವಿನಾ ಯದಿ ।
ಭುಂಕ್ತೇ ದದ್ಯಾಚ್ಚ ಯಚ್ಛ್ರಾದ್ಧಂ ತದ್ರಾಜನ್ ವ್ಯರ್ಥತಾಂ ವ್ರಜೇತ್॥ ೪೯ ॥
ತುಷಧಾನ್ಯಂ ಸನಿಷ್ಪಾವಂ ಯಚ್ಚೋಚ್ಛಿಷ್ಟಂ ಚ ದೀಯತೇ ।
ಅರ್ಧಭುಕ್ತಂ ಘೃತಂ ಕ್ಷೀರಂ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್॥ ೫೦ ॥
ಯೇಷು ಕಾಲೇಷು ಯದ್ದತ್ತಂ ಶ್ರಾದ್ಧಮಕ್ಷಯತಾಂ ವ್ರಜೇತ್ ।
ತಾನಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥ ೫೧ ॥
ಮನ್ವಾದೀರಪಿ ತೇ ವಚ್ಮಿ ತಾಃ ಶೃಣುಷ್ವ ನರಾಧಿಪ ।
ಪಿತೄಣಾಂ ವಲ್ಲಭಾ ನಿತ್ಯಂ ಸರ್ವಪಾಪಕ್ಷಯಾವಹಾಃ ॥ ೫೨ ॥

---

೪೫. ವಿಭಕ್ತಿ, ಮೌನ, ದಕ್ಷಿಣೆಗಳಿಲ್ಲದ ಶ್ರಾದ್ಧವು ನಿಷ್ಫಲವಾಗುವುದು.

೪೬. ಬೀಸುವ ಕಲ್ಲು, ಒರಳು ಇವುಗಳ ಶಬ, ಮೊರದಧ್ವನಿ ಇವುಗಳು ಕೇಳಿಸಿದರೆ ಶ್ರಾದ್ಧವು ವ್ಯರ್ಥವಾಗುವುದು.

೪೭. ಶ್ರಾದ್ಧ ಮಾಡುವಾಗ ಜಗಳ, ಪಂಕ್ತಿಭೇದಗಳುಂಟಾದರೆ ಆ ಶ್ರಾದ್ಧವು ವ್ಯರ್ಥವಾಗುವುದು.

೪೮. ಪೂರ್ವಾಹ್ಣ, ರಾತ್ರಿ, ಸಂಧ್ಯಾಕಾಲ, ಬಯಲು ಪ್ರದೇಶ ಇವುಗಳಲ್ಲಿ ಮಾಡಿದ ಶ್ರಾದ್ಧವು ವ್ಯರ್ಥವಾಗುವುದು.

೪೯. ಬ್ರಾಹ್ಮಣನಾಗಲಿ, ಯಜಮಾನನಾಗಲಿ, ಬ್ರಹ್ಮಚರ್ಯೆಯಿಲ್ಲದೆ ಭುಂಜಿಸಿದರೆ ಅಥವಾ ಶ್ರಾದ್ಧ ಮಾಡಿದರೆ ಅದು ನಿಷ್ಫಲವಾಗುವುದು.

೫೦. ಹೊಟ್ಟನಿಂದ ಸಹಿತವಾದ ಧಾನ್ಯ, ಅವರೆ, ಉಚ್ಛಿಷ್ಟ, ಅರ್ಧಭುಂಜಿಸಿದ ಹಾಲು, ತುಪ್ಪ ಇವುಗಳನ್ನು ಶ್ರಾದ್ಧದಲ್ಲಿ ಕೊಟ್ಟರೆ ಶ್ರಾದ್ಧವು ನಿಷ್ಫಲವಾಗುವುದು.

೫೧. ದೊರೆಯೆ! ಯಾವ ಕಾಲದಲ್ಲಿ ಯಾವುದನ್ನು ಕೊಟ್ಟರೆ ಆ ಶ್ರಾದ್ಧವು ಅಕ್ಷಯವಾಗುವುದೊ, ಆ ಕಾಲಗಳನ್ನು ಹೇಳುವೆನು. ಒಮ್ಮನಸ್ಸಿನಿಂದ ಕೇಳು.

೫೨. ಪಿತೃಗಳಿಗೆ ಪ್ರೀತಿಯನ್ನುಂಟುಮಾಡುವ, ಸಕಲ ಪಾಪಗಳನ್ನು ನಿವಾರಿಸುವ ಮನ್ವಾದಿಗಳನ್ನು ಹೇಳುವೆನು ಕೇಳು.

ಯಾಸು ತೋಯಮಪಿ ಕ್ಷ್ಮಾಯಾಂ ಪ್ರದತ್ತಂ ತಿಲಮಿಶ್ರಿತಂ ।
ಪಿತೃಭ್ಯೋಽಕ್ಷಯತಾಂ ಯಾತಿ ಶ್ರದ್ಧಾಪೂತೇನ ಚೇತಸಾ ॥ ೫೩ ॥
ಅಶ್ವಯುಕ್ ಶುಕ್ಲನವಮೀ ದ್ವಾದಶೀ ಕಾರ್ತಿಕಸ್ಯ ಚ ।
ತೃತೀಯಾಽಪಿ ಚ ಮಾಘಸ್ಯ ತಥಾ ಭಾದ್ರಪದಸ್ಯ ಚ ॥ ೫೪ ॥
ಅಮಾವಾಸ್ಯಾ ತಪಸ್ಯಸ್ಯ ಪೌಷಸ್ಯೈಕಾದಶೀ ತಥಾ ।
ತಥಾಽಽಷಾಢಸ್ಯ ದಶಮೀ ಮಾಘಮಾಸಸ್ಯ ಸಪ್ತಮೀ ॥ ೫೫ ॥
ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಽಽಷಾಢೀ ಚ ಪೂರ್ಣಿಮಾ ।
ತಥಾ ಕಾರ್ತಿಕಮಾಸಸ್ಯ ಯಾ ಚಾಽನ್ಯಾ ಫಾಲ್ಗುನಸ್ಯ ಚ ॥ ೫೬ ॥
ಚೈತ್ರಸ್ಯ ಜ್ಯೈಷ್ಠಮಾಸಸ್ಯ ಪಂಚೈತಾಃ ಪೂರ್ಣಿಮಾ ನೃಪ ।
ಮನೂನಾಮಾದಯಃ ಪ್ರೋಕ್ತಾಸ್ತಿಥಯಸ್ತೇ ಮಯಾ ನೃಪ ॥ ೫೭ ॥
ಆಸು ತೋಯಮಪಿ ಸ್ನಾತ್ವಾ ತಿಲದರ್ಭವಿಮಿಶ್ರಿತಂ ।
ಪಿತೄನುದ್ದಿಶ್ಯ ಯೋ ದದ್ಯಾತ್ಸ ಯಾತಿ ಪರಮಾಂ ಗತಿಂ ॥ ೫೮ ॥
ಇಹಲೋಕೇ ಪರೇ ಚೈವ ಪಿತೄಣಾಂ ಚ ಪ್ರಸಾದತಃ ।
ಕಿಂ ಪುನರ್ವಿವಿಧೈರನ್ನೈ ರಸೈರ್ವಸ್ತ್ರೈಃ ಸದಕ್ಷಿಣೈಃ ॥ ೫೯ ॥
ಅಧುನಾ ಶೃಣು ರಾಜೇಂದ್ರ ಯುಗಾದ್ಯಾಃ ಪಿತೃವಲ್ಲಭಾಃ ।
ಯಾಸಾಂ ಸಂಕೀರ್ತನೇನಾಽಪಿ ಕ್ಷೀಯತೇ ಪಾಪಸಂಚಯಃ ॥ ೬೦ ॥
ನವಮೀ ಕಾರ್ತಿಕೇ ಶುಕ್ಲಾ ತೃತೀಯಾ ಮಾಧವೇ ಸಿತಾ ।
ಅಮಾವಾಸ್ಯಾ ಚ ತಪಸೋ ನಭಸ್ಯಸ್ಯ ತ್ರಯೋದಶೀ ॥ ೬೧ ॥

---

೫೩. ಮನ್ವಾದಿಗಳಲ್ಲಿ ಆ ಶ್ರದ್ಧೆಯುಳ್ಳ ಮನಸ್ಸಿನಿಂದ ಭೂಮಿಯಲ್ಲಿ ಕೊಟ್ಟ ಎಳ್ಳಿನಿಂದ ಸಹಿತವಾದ ತರ್ಪಣಜಲವು ಪಿತೃಗಳಿಗೆ ಅಕ್ಷಯವಾಗುವುದು.

೫೪–೫೭. ಆಶ್ವಯುಜ ಶುದ್ಧ ನವಮೀ, ಕಾರ್ತಿಕಮಾಸದ ದ್ವಾದಶೀ, ಮಾಘ ಭಾದ್ರಪದಮಾಸಗಳ ತದಿಗೆ, ಫಾಲ್ಗುನ ಬಹುಳ ಅಮಾವಾಸ್ಯೆ, ಪುಷ್ಯ ಮಾಸದ ಏಕಾದಶೀ, ಆಷಾಢಮಾಸದ ದಶಮೀ, ಮಾಘಮಾಸದ ಸಪ್ತಮೀ, ಶ್ರಾವಣ ಕೃಷ್ಣಾಷ್ಟಮೀ, ಆಷಾಢ ಶುದ್ಧ ಹುಣ್ಣಿಮೆ, ಹಾಗೆಯೇ ಕಾರ್ತಿಕ, ಫಾಲ್ಗುನ, ಚೈತ್ರ, ಜ್ಯೇಷ್ಠಮಾಸಗಳ ಹುಣ್ಣಿಮೆಗಳು ಇವು ಮನ್ವಾದಿ ತಿಥಿಗಳು.

೫೮–೫೯. ಈ ದಿನಗಳಲ್ಲಿ ಮಿಂದು ಪಿತೃಗಳನ್ನುದ್ದೇಶಿಸಿ ಎಳ್ಳು ದರ್ಭೆಗಳಿಂದ ಸಹಿತವಾದ ಜಲವನ್ನು ಕೊಟ್ಟರೇನೆ ಇಹಪರಲೋಕಗಳಲ್ಲಿ ಪಿತೃಗಳ ಅನುಗ್ರಹ ದಿಂದ ಉತ್ತಮಗತಿಯನ್ನು ಪಡೆಯುವನು. ಬಗೆ ಬಗೆಯ ಅನ್ನ, ರಸ, ವಸ್ತ್ರ, ದಕ್ಷಿಣೆಗಳನ್ನು ಕೊಡುವುದರಿಂದ ಏನು ಹೇಳತಕ್ಕದ್ದು.

೬೦. ರಾಜೇಂದ್ರ! ಈಗ ಪಿತೃಗಳಿಗೆ ಪ್ರಿಯವಾದ ಯುಗಾದಿಗಳನ್ನು ಕೇಳು. ಇವುಗಳನ್ನು ಹೇಳುವುದರಿಂದಲೇ ಪಾಪವು ನಾಶವಾಗುವುದು.

೬೧–೬೨. ಕಾರ್ತಿಕ ಶುದ್ಧ ನವಮೀ, ವೈಶಾಖ ಶುದ್ಧ ತದಿಗೆ, ಫಾಲ್ಗುನ ಮಾಸದ ಅಮಾವಾಸ್ಯೆ, ಭಾದ್ರಪದಮಾಸದ ತ್ರಯೋದಶೀ ಇವುಗಳು ಕ್ರಮವಾಗಿ

ತ್ರೇತಾ ಕೃತ ಕಲೀನಾಂ ತು ದ್ವಾಪರಸ್ಯಾದಯಃ ಕ್ರಮಾತ್ ।
ಸ್ನಾನೇ ದಾನೇ ಜಪೇ ಹೋಮೇ ವಿಶೇಷಾತ್ಪಿತೃತರ್ಪಣೇ ॥ ೬೨ ॥
ಕೃತಸ್ಯಾಕ್ಷಯಕಾರಿಣ್ಯಃ ಸುಕೃತಸ್ಯ ಮಹಾಫಲಾಃ ।
ಯದಾ ಸ್ಯಾನ್ಮೇಷಗೋ ಭಾನುಸ್ತುಲಾಂ ವಾಽಥ ಯದಾ ವ್ರಜೇತ್ ॥೬೩॥
ತದಾ ಸ್ಯಾದ್ವಿಷುವಾಖ್ಯಸ್ತು ಕಾಲಶ್ಚಾಕ್ಷಯಕಾರಕಃ ।
ಮಕರೇ ಕರ್ಕಟೇ ಚೈವ ಯದಾ ಭಾನುರ್ವ್ರಜೇನ್ನೃಪ ॥ ೬೪ ॥
ತದಾಽಯನಾಭಿಧಾನಸ್ತು ವಿಷುವೋಽಥ ವಿಶಿಷ್ಯತೇ ।
ರವೇಃ ಸಂಕ್ರಮಣಂ ರಾಶೌ ಸಂಕ್ರಾಂತಿರಿತಿ ಕಥ್ಯತೇ ॥ ೬೫ ॥
ಸ್ನಾನದಾನಜಪಶ್ರಾದ್ಧ ಹೋಮಾದಿಷು ಮಹಾಫಲಾಃ ।
ತ್ರೇತಾದ್ಯಾಃ ಕ್ರಮಶಃ ಪ್ರೋಕ್ತಾಃ ಕಾಲಾಃ ಸಂಕ್ರಾಂತಿಪೂರ್ವಕಾಃ ।
ನೈತೇಷು ವಿದ್ಯತೇ ವಿಘ್ನಂ ದತ್ತಸ್ಯಾಽಕ್ಷಯಸಂಜ್ಞಿತಾಃ ॥ ೬೬ ॥
ಅಶ್ರದ್ಧಯಾಽಪಿ ಯದ್ದತ್ತಂ ಕುಪಾತ್ರೇಭ್ಯೋಽಪಿ ಮಾನವೈಃ ।
ಅಕಾಲೇಽಪಿ ಹಿ ತತ್ಸರ್ವಂ ಸದ್ಯೋಽಹ್ಯಕ್ಷಯತಾಂ ವ್ರಜೇತ್ ॥ ೬೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧಾರ್ಹಪದಾರ್ಥಬ್ರಾಹ್ಮಣಕಾಲನಿರ್ಣಯವರ್ಣನಂ" ನಾಮ
ಸಪ್ತದಶೋತ್ತರದ್ವಿಶತತಮೋಽಧ್ಯಾಯಃ

---

ತ್ರೇತಾ, ಕೃತ, ಕಲಿ, ದ್ವಾಪರಗಳ ಯುಗಾದಿಗಳು. ಇವುಗಳಲ್ಲಿ ಸ್ನಾನ, ದಾನ, ಜಪ, ಹೋಮ, ಪಿತೃತರ್ಪಣ ಇವುಗಳನ್ನು ಮಾಡಿದರೆ ಪುಣ್ಯವು ಅಕ್ಷಯವಾಗುವುದು ಮತ್ತು ಅತಿಶಯ ಫಲಗಳುಂಟಾಗುವುವು. ಸೂರ್ಯನು ಮೇಷ ಅಥವಾ ತುಲಾರಾಶಿಯನ್ನು ಹೊಂದಲು ವಿಷುವಕಾಲವೆಂದೆನ್ನಿಸಿಕೊಳ್ಳುವುದು. ಅದರಲ್ಲಿ ಮಾಡಿದ ಕಾರ್ಯವೆಲ್ಲ ಅಕ್ಷಯವಾಗುವುವು. ಸೂರ್ಯನು ಮಕರಕರ್ಕಟಕ ರಾಶಿಯನ್ನು ಸೇರಿದರೆ ವಿಷುವಾಯನವಾಗುವುದು. ಸೂರ್ಯನು ಒಂದು ರಾಶಿಯನ್ನು ತ್ಯಜಿಸಿ ಮತ್ತೊಂದು ರಾಶಿಗೆ ಹೋದರೆ ಸಂಕ್ರಾಂತಿಯಾಗುವುದು. ಇದರಲ್ಲಿ ಮಾಡಿದ ಸ್ನಾನ, ದಾನ, ಜಪ, ಶ್ರಾದ್ಧ ಹೋಮಗಳು ಅತ್ಯಂತ ಫಲಗಳನ್ನು ಕೊಡುವುವು. ಸಂಕ್ರಾಂತಿ ಯುಗಾದಿ ಮೊದಲಾದ ಕಾಲಗಳನ್ನು ಹೇಳಿರುವೆನು. ಅಕ್ಷಯವೆಂದು ಹೆಸರುಳ್ಳ ಇವುಗಳಲ್ಲಿ ದಾನಮಾಡಿದರೆ ವಿಘ್ನವುಂಟಾಗುವುದಿಲ್ಲ.

೬೭. ಈ ದಿನಗಳಲ್ಲಿ ಮಾನವರು ಅಕಾಲ, ಕುಪಾತ್ರಗಳಲ್ಲಿ ದಾನ ಮಾಡಿದರೂ ಅವೆಲ್ಲ ಅಕ್ಷಯವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧಾರ್ಹಪದಾರ್ಥಬ್ರಾಹ್ಮಣಕಾಲನಿರ್ಣಯವರ್ಣನ"ವೆಂಬ
ಇನ್ನೂರಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಾದಶೋತ್ತರದ್ವಿಶತತಮೋಽಧ್ಯಾಯಃ

## ಶ್ರಾದ್ಧನಿಯಮವರ್ಣನಂ

ಭರ್ತೃಯಜ್ಞ ಉವಾಚ:—

ಏತತ್ಸಾಮಾನ್ಯತಃ ಪ್ರೋಕ್ತಂ ಮಯಾ ಶ್ರಾದ್ಧಂ ಯಥಾ ನರೈಃ ।
ಕರ್ತವ್ಯಂ ವಿಪ್ರಪೂರ್ವೈರ್ಯದ್ವರ್ಣೈಃ ಪಾರ್ಥಿವಸತ್ತಮ ॥ ೧ ॥
ಅತಃ ಪರಂ ಪ್ರವಕ್ಷ್ಯಾಮಿ ಸ್ವಶಾಖಾಯಾಃ ಸ್ಮೃತಂ ನೃಪ ।
ಸ್ವದೇಶವರ್ಣಜಾತೀಯಂ ಯಥಾ ಸ್ಯಾದತ್ರ ನಿರ್ವೃತಿಃ ॥ ೨ ॥
ಶ್ರಾದ್ಧೇ ಶ್ರದ್ಧಾ ಯತೋ ಮೂಲಂ ತೇನ ಶ್ರಾದ್ಧಂ ಪ್ರಕೀರ್ತಿತಂ ।
ತತ್ತಸ್ಮಿನ್ ಕ್ರಿಯಮಾಣೇತು ನ ಕಿಂಚಿದ್ವ್ಯರ್ಥತಾಂ ವ್ರಜೇತ್ ॥ ೩ ॥
ಅನಿಷ್ಟಮಪಿ ರಾಜೇಂದ್ರ ತಸ್ಮಾಚ್ಛ್ರಾದ್ಧಂ ಸಮಾಚರೇತ್ ।
ವಿಪ್ರಪಾದೋದಕಂ ಯತ್ತು ಭೂಮೌ ಪತತಿ ಪಾರ್ಥಿವ ॥ ೪ ॥
ಜಾತಾ ಯೇ ಗೋತ್ರಜಾಃ ಕೇಚಿದಪುತ್ರಾ ಮರಣಂ ಗತಾಃ ।
ತೇ ಯಾಂತಿ ಪರಮಾಂ ತೃಪ್ತಿಮಮೃತೇನ ಯಥಾ ಸುರಾಃ ॥ ೫ ॥

---

## ಕನ್ನಡದ ಅನುವಾದ

### ಶ್ರಾದ್ಧನಿಯಮವರ್ಣನ

೧. ಭರ್ತೃಯಜ್ಞನು ಹೇಳುತ್ತಾನೆ:—ಪಾರ್ಥಿವೋತ್ತಮ! ಬ್ರಾಹ್ಮಣ ಮೊದಲಾದ ಜಾತಿಯವರು ಮಾಡುವ ಶ್ರಾದ್ಧವನ್ನು ಸಾಮಾನ್ಯವಾಗಿ ಹೇಳಿರುವೆನು.

೨. ಇನ್ನುಮುಂದೆ ಆಯಾ ದೇಶದ ಬೇರೆ ಬೇರೆ ಜಾತಿಯ ಜನರು ತಮ್ಮ ಶಾಖೆಗೆ ಅನುಗುಣವಾಗುವಂತೆ ಮಾಡಬೇಕಾಗಿರುವುದೂ, ಸುಖವನ್ನುಂಟು ಮಾಡುವುದೂ ಆದ ಶ್ರಾದ್ಧವನ್ನು ಹೇಳುತ್ತೇನೆ.

೩–೫. ಶ್ರಾದ್ಧಕ್ಕೆ ಶ್ರದ್ಧೆಯೇ ಮೂಲವಾಗಿರುವುದು. ಆದುದರಿಂದಲೇ ಅದು ಶ್ರಾದ್ಧವೆನ್ನಿಸಿಕೊಳ್ಳುವುದು. ಆದುದರಿಂದ ಅದನ್ನು ಮಾಡುವಾಗ ಯಾವುದೂ ವ್ಯರ್ಥವಾಗುವುದಿಲ್ಲ. ಅನಿಷ್ಟವೂ ಉಂಟಾಗುವುದಿಲ್ಲ. ಆದಕಾರಣ ಶ್ರಾದ್ಧವನ್ನು ಮಾಡಬೇಕು. ಭೂಮಿಯಲ್ಲಿ ಬಿದ್ದ ಬ್ರಾಹ್ಮಣರ ಪಾದೋದಕದಿಂದ ಶ್ರಾದ್ಧಕರ್ತನ ಗೋತ್ರದಲ್ಲಿ ಜನಿಸಿ ಮೃತರಾದ ಅಪುತ್ರರೂ ಅಮೃತದಿಂದ ದೇವತೆಗಳು ತೃಪ್ತಿಗೊಳ್ಳುವಂತೆ ತೃಪ್ತರಾಗುವರು.

ವಿಪ್ರಪಾದೋದಕಕ್ಲಿನ್ನಾ ಯಾವತ್ತಿಷ್ಠತಿ ಮೇದಿನೀ ।
ತಾವತ್ಪುಷ್ಕರ ಪಾತ್ರೇಷು ಪಿಬಂತಿ ಪಿತರೋ ಬಲಂ ॥ ೬ ॥
ಶ್ರಾದ್ಧೇಽಥ ಕ್ರಿಯಮಾಣೇ ತು ಯತ್ಕಿಂಚಿತ್ಪತತಿ ಕ್ಷಿತೌ ।
ಪುಷ್ಪಗಂಧೋದಕಂ ಚಾನ್ನಮಪಿ ತೋಯಂ ನರೇಶ್ವರ ॥ ೭ ॥
ತೇನ ತೃಪ್ತಿಂ ಪರಾಂ ಯಾಂತಿ ಯೇ ಕೃಮಿತ್ವಮುಪಾಗತಾಃ ।
ಕೀಟತ್ವಂ ವಾಽಪಿ ತಿರ್ಯಕ್ತ್ವಂ ವಾಲತ್ವಂ ಚ ನರಾಧಿಪ ॥ ೮ ॥
ಯದುಚ್ಛಿಷ್ಟಂ ಕ್ಷಿತೌ ಯಾತಿ ಪಾತ್ರಪ್ರಕ್ಷಾಲನೋದ್ಭವಂ ।
ತೇನ ತೃಪ್ತಿಂ ಪರಾಂ ಯಾಂತಿ ಯೇ ಪ್ರೇತತ್ವಮುಪಾಗತಾಃ ॥ ೯ ॥
ಯೇ ಚಾಪಮೃತ್ಯುನಾ ಕೇಚಿನ್ಮೃತ್ಯುಂ ಪ್ರಾಪ್ತಾಃ ಸ್ವವಂಶಜಾಃ ।
ಅಸಂಸ್ಕೃತಪ್ರಮೀತಾನಾಂ ತ್ಯಾಗಿನಾಂ ಕುಲಯೋಷಿತಾಂ ॥ ೧೦ ॥
ಉಚ್ಛಿಷ್ಟಭಾಗಧೇಯಂ ಸ್ಯಾದ್ದರ್ಭೇಷು ವಿಕಿರಶ್ಚ ಯಃ ।
ವಿಕಿರೇಣ ಪ್ರದತ್ತೇನ ತೇ ತೃಪ್ತಿಂ ಯಾಂತಿ ಚಾಖಿಲಾಃ ॥ ೧೧ ॥
ಯತ್ಕಿಂಚಿನ್ಮಂತ್ರಹೀನಂ ವಾ ಕಾಲಹೀನಮಥಾಪಿ ವಾ ।
ವಿಧಿಹೀನಂ ಚ ಸಂಪೂರ್ಣಂ ದಕ್ಷಿಣಾಯಾಂ ತು ತದ್ಭವೇತ್ ॥ ೧೨ ॥
ತಸ್ಮಾನ್ನ ದಕ್ಷಿಣಾಹೀನಂ ಶ್ರಾದ್ಧಂ ಕಾರ್ಯಂ ವಿಪಶ್ಚಿತಾ ।
ಯ ಇಚ್ಛೇಚ್ಛಾಶ್ವತೀಂ ತೃಪ್ತಿಂ ಪಿತೄಣಾಮಾತ್ಮನಶ್ಚ ಯಃ . ॥ ೧೩ ॥

---

೬. ಭೂಮಿಯು ಎಷ್ಟರವರೆಗೆ ಬ್ರಾಹ್ಮಣರ ಪಾದೋದಕದಿಂದ ಒದ್ದೆಯಾಗಿರುವುದೊ ಅಷ್ಟರವರೆಗೆ ಪಿತೃಗಳು ನೀರನ್ನು ಕಮಲದ ಎಲೆಗಳಲ್ಲಿ ಕುಡಿಯುತ್ತಾರೆ.

೭–೮. ಶ್ರಾದ್ಧವನ್ನು ಮಾಡುತ್ತಿರುವಾಗ ಹೂವು, ಗಂಧೋದಕ, ಅನ್ನ, ನೀರು ಇವುಗಳಲ್ಲಿ ಯಾವುದಾದರೂ ಸ್ವಲ್ಪ ನೆಲದ ಮೇಲೆ ಬಿದ್ದರೂ ಅದರಿಂದ ಕೃಮಿ, ಕೀಟ, ಪಶುಪಕ್ಷಿ, ಸರ್ಪ ಇವುಗಳಾಗಿರುವ ಪಿತೃಗಳೂ ತೃಪ್ತಿಗೊಳ್ಳುವರು.

೯–೧೧. ಪಾತ್ರೆಗಳನ್ನು ತೊಳೆಯುವಾಗ ನೆಲದ ಮೇಲೆ ಎಂಜಲು ಬಿದ್ದರೆ ಅದರಿಂದ ಪ್ರೇತತ್ವವನ್ನು ಹೊಂದಿದವರೂ, ಅಪಮೃತ್ಯುವಿನಿಂದ ಮಡಿದವರೂ ಆದ ವಂಶದ ಪಿತೃಗಳು ತೃಪ್ತಿಗೊಳ್ಳುವರು. ಸಂಸ್ಕಾರವಿಲ್ಲದೆ ಮಡಿದ ತ್ಯಾಗಶೀಲರಾದ ಕುಲೀನ ಸ್ತ್ರೀಯರಿಗೆ ಉಚ್ಛಿಷ್ಟಭಾಗವು ಸಲ್ಲುವುದು. ಅವರು ದರ್ಭೆಗಳಲ್ಲಿ ಕೊಟ್ಟ ವಿಕಿರಾನ್ನದಿಂದ ತೃಪ್ತರಾಗುವರು.

೧೨. ಮಂತ್ರ, ಕಾಲ, ವಿಧಿ ಇವುಗಳಿಲ್ಲದೆ ಮಾಡಿದ ಶ್ರಾದ್ಧವು ದಕ್ಷಿಣೆಯಿಂದ ಪೂರ್ಣವಾಗುವುದು.

೧೩. ಆದುದರಿಂದ ಪಿತೃಗಳಿಗೂ, ತನಗೂ ಶಾಶ್ವತ ತೃಪ್ತಿಯನ್ನು ಬಯಸುವವನು ದಕ್ಷಿಣಾಹೀನವಾದ ಶ್ರಾದ್ಧವನ್ನು ಮಾಡಕೂಡದು.

ದಕ್ಷಿಣಾರಹಿತಂ ಶ್ರಾದ್ಧಂ ಯಥೈವೋಷರವರ್ಷಿತಂ ।
ಯಥಾ ತಮಸಿ ನೃತ್ಯಂ ಚ ಗೀತಂ ವಾ ಬಧಿರಸ್ಯ ಚ ॥ ೧೪ ॥
ಶ್ರಾದ್ಧಂ ದತ್ವಾ ಚ ಭುಕ್ತ್ವಾ ಚ ಶ್ರಾದ್ಧೇ ನಿಷ್ಕಾಮತಾಂ ವ್ರಜೇತ್ ।
ನ ಸ್ವಾಧ್ಯಾಯಃ ಪ್ರಕರ್ತವ್ಯೋ ನ ಗ್ರಾಮಾಂತರಕಂ ವ್ರಜೇತ್ ॥ ೧೫ ॥
ಶ್ರಾದ್ಧಭುಗ್ರಮಣೀತಲ್ಪಂ ತದಹರ್ಯೋಽಧಿಗಚ್ಛತಿ ।
ತಂ ಮಾಸಂ ಪಿತರಸ್ತಸ್ಯ ಚಾಯಂತೇ ವೀರ್ಯಭೋಜಿನಃ ॥ ೧೬ ॥
ಶ್ರಾದ್ಧಭುಕ್ಶ್ರಾದ್ಧದಾತಾ ಚ ಯಃ ಸೇವಯತಿ ಮೈಥುನಂ ।
ತಸ್ಯ ಸಂವತ್ಸರಂ ಯಾವತ್ಪಿತರಃ ಶುಕ್ರಭೋಜಿನಃ ।
ಪ್ರಭವಂತಿ ನ ಸಂದೇಹ ಇತ್ಯೇಷಾ ವೈದಿಕೀ ಶ್ರುತಿಃ ॥ ೧೭ ॥
ಶ್ರಾದ್ಧೇ ಭುಕ್ತ್ವಾಽಥ ದತ್ವಾ ವಾ ಯಃ ಶ್ರಾದ್ಧಂ ಕುರುತೇಽಲ್ಪಧೀಃ ।
ಸ್ವಾಧ್ಯಾಯಂ ಪಿತರಸ್ತಸ್ಯ ಯಾವತ್ಸಂವತ್ಸರಂ ನೃಪ ।
ವ್ಯರ್ಥಶ್ರಾದ್ಧಫಲಾಃ ಸಂತಃ ಪೀಡ್ಯಂತೇ ಕ್ಷುತ್ಪಿಪಾಸಯಾ ॥ ೧೮ ॥
ಶ್ರಾದ್ಧೇ ಭುಕ್ತ್ವಾಽಥ ದತ್ವಾ ವಾ ಯಃ ಶ್ರಾದ್ಧಂ ಮಾನವಾಽಧಮಃ ।
ಗ್ರಾಮಾಂತರಂ ಪ್ರಯಾತ್ಯತ್ರ ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೧೯ ॥

---

೧೪. ದಕ್ಷಿಣೆಯಿಲ್ಲದ ಶ್ರಾದ್ಧವು ಮರುಭೂಮಿಯಲ್ಲಿ ಸುರಿದ ಮಳೆಯಂತೆಯೂ, ಕಗ್ಗತ್ತಲೆಯಲ್ಲಿ ಮಾಡಿದ ನೃತ್ಯದಂತೆಯೂ, ಕಿವುಡನ ಮುಂದೆ ಹಾಡಿದ ಹಾಡಿನಂತೆಯೂ ಆಗುವುದು.

೧೫. ಶ್ರಾದ್ಧವನ್ನು ಮುಗಿಸಿ ಭೋಜನ ಮಾಡಿ ನಿಷ್ಕಾಮನಾಗಬೇಕು. ವೇದಾಧ್ಯಯನ ಮಾಡಕೂಡದು. ಬೇರೆ ಗ್ರಾಮಕ್ಕೂ ಹೋಗಕೂಡದು.

೧೬. ಶ್ರಾದ್ಧಭೋಜನ ಮಾಡಿದವನು ಆ ದಿನ ಪತ್ನೀಶಯ್ಯೆಯಲ್ಲಿ ಮಲಗಿದರೆ ಅವನ ಪಿತೃಗಳು ಆ ತಿಂಗಳೆಲ್ಲ ರೇತಸ್ಸನ್ನು ಭುಂಜಿಸುವರು.

೧೭. ಶ್ರಾದ್ಧಭೋಜಿಯೂ, ಶ್ರಾದ್ಧ ಮಾಡಿದವನೂ ಮೈಥುನ ನಿರತನಾದರೆ ಅವನ ಪಿತೃಗಳು ಆ ವರ್ಷವೆಲ್ಲ ರೇತಸ್ಸನ್ನು ಭುಂಜಿಸುವರೆಂದು ವೇದವಾಕ್ಯವಿರುವುದು.

೧೮. ಶ್ರಾದ್ಧದಲ್ಲಿ ಭೋಜನ ಮಾಡಿ ಅಥವಾ ಶ್ರಾದ್ಧವನ್ನು ಮಾಡಿ ವೇದಾಧ್ಯಯನ ಮಾಡುವವನ ಪಿತೃಗಳು ಒಂದು ವರ್ಷಕಾಲ ಶ್ರಾದ್ಧಫಲವಿಲ್ಲದೆ ಹಸಿವು ಬಾಯಾರಿಕೆಗಳಿಂದ ಪೀಡಿತರಾಗುವರು.

೧೯. ಶ್ರಾದ್ಧದಲ್ಲಿ ಭುಂಜಿಸಿ ಅಥವಾ ಶ್ರಾದ್ಧವನ್ನು ಮಾಡಿ ಗ್ರಾಮಾಂತರಕ್ಕೆ ಹೋದರೆ ಆ ಶ್ರಾದ್ಧವು ವ್ಯರ್ಥವಾಗುವುದು.

ಬ್ರಾಹ್ಮಣೇನ ನಭೋಕ್ತವ್ಯಂ ಸಮಾಯಾತೇ ನಿಮಂತ್ರಣೇ ।
ಅಥ ಭುಂಕ್ತೇ ಚ ಯೋ ಮೋಹಾತ್ಸ ಪ್ರಯಾತಿ ಹ್ಯಧೋಗತಿಂ ॥ ೨೦ ॥
ಯಜಮಾನೇನ ಚ ತಥಾ ನ ಕಾರ್ಯಂ ಭೋಜನಂ ಪರಂ ।
ಕುರ್ವಂತಿ ಯೇ ನರಾಃ ಸರ್ವೇ ತೇ ಯಾಂತಿ ನರಕಂ ಧ್ರುವಂ ॥ ೨೧ ॥
ಶ್ರಾದ್ಧೇ ಭುಕ್ತ್ವಾಽಥ ದತ್ವಾ ವಾ ಶ್ರಾದ್ಧಂ ಯೋ ಯುದ್ಧಮಾಚರೇತ್ ।
ಅಸಂದಿಗ್ಧಂ ಹಿ ತಚ್ಛ್ರಾದ್ಧಂ ಸ ಮಂದೋ ವ್ಯರ್ಥತಾಂ ನಯೇತ್ ॥ ೨೨ ॥
ತಸ್ಮಾತ್ಸರ್ವಪ್ರಯತ್ನೇನ ದೋಷಾನೇತಾನ್ ಪರಿತ್ಯಜೇತ್ ।
ಶ್ರಾದ್ಧಭುಗ್ಯಜಮಾನಶ್ಚ ವಿಶೇಷೇಣ ಮಹೀಪತೇ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧನಿಯಮವರ್ಣನಂ" ನಾಮ
ಅಷ್ಟಾದಶೋತ್ತರದ್ವಿಶತತಮೋಽಧ್ಯಾಯಃ

---

೨೦. ಬ್ರಾಹ್ಮಣನು ತಾನು ನಿಮಂತ್ರಿತನಾದ ಮೇಲೆ ಭೋಜನ ಮಾಡ ಕೂಡದು. ಹಾಗೆ ಅಜ್ಞಾನದಿಂದ ಭುಂಜಿಸಿದವನು ಅಧೋಗತಿಯನ್ನು ಪಡೆಯುವನು.

೨೧. ಹಾಗೆಯೇ ಯಜಮಾನನು ಮತ್ತೊಂದು ಸಾರಿ ಭೋಜನ ಮಾಡ ಬಾರದು. ಭೋಜನ ಮಾಡಿದರೆ ನರಕವನ್ನು ಸೇರುವನು.

೨೨. ಶ್ರಾದ್ಧದಲ್ಲಿ ಭುಂಜಿಸಿ ಅಥವಾ ಶ್ರಾದ್ಧವನ್ನು ಮಾಡಿ ಯುದ್ಧ ಮಾಡಿದರೆ ಅವನು ಆ ಶ್ರಾದ್ಧವನ್ನು ನಿಶ್ಚಯವಾಗಿಯೂ ನಿಷ್ಫಲಗೊಳಿಸುವನು.

೨೩. ದೊರೆಯೆ! ಆದುದರಿಂದ ಶ್ರಾದ್ಧಭೋಜಿಯೂ, ಯಜಮಾನನೂ ಪ್ರಯತ್ನಿಸಿ ಈ ದೋಷಗಳನ್ನು ತ್ಯಜಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧನಿಯಮವರ್ಣನ"ವೆಂಬ
ಇನ್ನೂರಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಏಕೋನವಿಂಶೋತ್ತರದ್ವಿಶತತಮೋಽಧ್ಯಾಯಃ

### ಕಾಮ್ಯಶ್ರಾದ್ಧವರ್ಣನಂ

ಭರ್ತೃಯಜ್ಞ ಉವಾಚ:—

ಕಾಮ್ಯಾನಿ ತೇಽಧುನಾವಚ್ಮಿ ಶ್ರಾದ್ಧಾನಿ ಪೃಥಿವೀಪತೇ ।
ಯೈಃ ಕೃತೈಃ ಸಮವಾಪ್ನೋತಿ ಮರ್ತ್ಯೋ ಹೃದಯಸಂಸ್ಥಿತಂ ॥ ೧ ॥
ಯೋ ನಾರೀಂ ವಾಂಛತೇ ಕ್ಷ್ಮಾಪ ರೂಪಾಢ್ಯಾಂ ಶೀಲಮಂಡನಾಂ ।
ಇಹಲೋಕೇ ಪರೇಚೈವ ತಸ್ಯಾಽರ್ಹಂ ಪ್ರಥಮಂ ದಿನಂ ॥ ೨ ॥
ಶ್ರಾದ್ಧೀಯ ಪ್ರೇತಪಕ್ಷಸ್ಯ ಮುಖ್ಯಭೂತಂ ಚ ಯನ್ನೃಪ ।
ಯ ಇಚ್ಛೇತ್ಕನ್ಯಕಾಂ ಶ್ರೇಷ್ಠಾಂ ಸುಶೀಲಾಂ ರೂಪಸಂಯುತಾಂ ।
ದ್ವಿತೀಯಾದಿವಸೇ ತೇನ ಶ್ರಾದ್ಧಂ ಕಾರ್ಯಂ ಮಹೀಪತೇ ॥ ೩ ॥
ಯೋ ವಾಂಛತಿ ನರೋಽಶ್ವಾಂಶ್ಚ ವಾಯುವೇಗಸಮಾಂಜವೇ ।
ತೃತೀಯಾದಿವಸೇ ಶ್ರಾದ್ಧಂ ತೇನ ಕಾರ್ಯ ವಿಪಶ್ಚಿತಾ ॥ ೪ ॥
ಯೋ ವಾಂಛತಿ ಪಶೂನ್‌ಮುಖ್ಯಾನ್ ಕುಪ್ಯಾಽಕುಪ್ಯಧನಾನಿ ಚ ।
ಚತುರ್ಥ್ಯಾಂ ತೇನ ಕರ್ತವ್ಯಂ ಶ್ರಾದ್ಧಂ ಪಿತೃಪ್ರತುಷ್ಟಯೇ ॥ ೫ ॥

---

### ಕನ್ನಡದ ಅನುವಾದ

### ಕಾಮ್ಯಶ್ರಾದ್ಧವರ್ಣನ

೧. ಭರ್ತೃಯಜ್ಞನು ಹೇಳುತ್ತಾನೆ:—ದೊರೆಯೆ! ಈಗ ನಾನು ಕಾಮ್ಯ ಶ್ರಾದ್ಧಗಳನ್ನು ಹೇಳುವೆನು. ಇವುಗಳನ್ನು ಮಾಡುವುದರಿಂದ ಮಾನವನು ಮನಸ್ಸಿನಲ್ಲಿ ಅಪೇಕ್ಷಿಸಿದ್ದನ್ನು ಪಡೆಯುವನು.

೨–೩. ಅರಸ! ಇಹಪರಲೋಕಗಳಲ್ಲಿ ಸುಂದರಿಯೂ, ಸುಶೀಲಳೂ ಆದ ಕನ್ಯೆಯನ್ನು ಅಪೇಕ್ಷಿಸುವವನು ಪ್ರೇತಪಕ್ಷದ ಮೊದಲನೆಯ ದಿನ ಶ್ರಾದ್ಧ ಮಾಡಬೇಕು. ಶ್ರೇಷ್ಠಳೂ, ಸುಂದರಿಯೂ, ಸುಶೀಲಳೂ ಆದ ಕನ್ಯೆಯನ್ನು ಬಯಸುವವನು ದ್ವಿತೀಯಾ ದಿನ ಶ್ರಾದ್ಧ ಮಾಡಬೇಕು.

೪. ವಾಯುವಿನಂತೆ ವೇಗವುಳ್ಳ ಕುದುರೆಗಳನ್ನು ಇಚ್ಛಿಸುವವನು ತದಿಗೆ ದಿನ ಶ್ರಾದ್ಧವನ್ನು ಮಾಡಬೇಕು.

೫. ಪಶುಗಳು, ತಾಮ್ರ, ಚಿನ್ನ, ಬೆಳ್ಳಿ ಮೊದಲಾದುವುಗಳನ್ನು ಅಪೇಕ್ಷಿಸುವವನು ಪಿತೃತುಷ್ಟಿಗಾಗಿ ಚತುರ್ಥೀ ದಿನ ಶ್ರಾದ್ಧ ಮಾಡಬೇಕು.

ಪುತ್ರಾನ್ ವಾಂಛತಿ ಯೋಽಭೀಷ್ಟಾನ್ ಸುಶೀಲಾನ್ ವಂಶಮಂಡನಾನ್ ।
ಪಂಚಮ್ಯಾಂ ತೇನ ಕರ್ತವ್ಯಂ ಸದಾ ಶ್ರಾದ್ಧಂ ನರಾಧಿಪ ॥ ೬ ॥
ಯಃ ಶ್ರಾದ್ಧಂ ವಂಶಜೈರ್ದತ್ತಂ ಪರಲೋಕಗತೋ ನೃಪ ।
ವಾಂಛತೇ ತೇನ ಕರ್ತವ್ಯಂ ಷಷ್ಠ್ಯಾಂ ಶ್ರಾದ್ಧಂ ವಿಪಶ್ಚಿತಾ ॥ ೭ ॥
ಕೃಷಿ ಸಿದ್ಧಿಂ ಯ ಇಚ್ಛೇತ ಗ್ರೈಷ್ಮಿಕೀಂ ಶಾರದೀಮಪಿ ।
ಸಪ್ತಮ್ಯಾಂ ಯುಜ್ಯತೇ ತಸ್ಯ ಶ್ರಾದ್ಧಂ ಕರ್ತುಂ ನ ಸಂಶಯಃ ॥ ೮ ॥
ಯ ಇಚ್ಛೇತ್ಪಣ್ಯ ಸಂಸಿದ್ಧಿಂ ವ್ಯವಹಾರ ಸಮುದ್ಭವಾಂ ।
ಅಷ್ಟಮ್ಯಾಂ ಯುಜ್ಯತೇ ಶ್ರಾದ್ಧಂ ತಸ್ಯ ಕರ್ತುಂ ನರಾಧಿಪ ॥ ೯ ॥
ನವಮ್ಯಾಂ ಶ್ರಾದ್ಧಕೃನ್ನಾನಾ ಚತುಷ್ಪದಗಣಾಂಲ್ಲಭೇತ್ ।
ಸೌಭಾಗ್ಯಂ ರೋಗನಾಶಂ ಚ ತಥಾ ವಲ್ಲಭಸಂಗಮಂ ॥ ೧೦ ॥
ದಶಮೀ ದಿವಸೇ ಶ್ರಾದ್ಧಂ ಯಃ ಕರೋತಿ ಸಮಾಹಿತಃ ।
ತಸ್ಯ ಸ್ಯಾದ್ವಾಂಛಿತಾ ಸಿದ್ಧಿಃ ಸರ್ವಕೃತ್ಯೇಷು ಸರ್ವದಾ ॥ ೧೧ ॥
ಏಕಾದಶ್ಯಾಂ ಧನಂ ಧಾನ್ಯಂ ಶ್ರಾದ್ಧಕರ್ತಾ ಲಭೇನ್ನರಃ ।
ತಥಾ ಭೂತಪ್ರಸಾದಂ ಚ ಯಚ್ಚಾನ್ಯನ್ಮನಸಿ ಸ್ಥಿತಂ ॥ ೧೨ ॥
ಯಃ ಕರೋತಿ ಚ ದ್ವಾದಶ್ಯಾಂ ಶ್ರಾದ್ಧಂ ಶ್ರದ್ಧಾ ಸಮನ್ವಿತಃ ।
ಪುತ್ರಾಂಸ್ತು ಪ್ರವರಾಂಶ್ಚೈವ ಸ ಪಶೂನ್ ವಾಂಛಿತಾಂಲ್ಲಭೇತ್ ॥ ೧೩ ॥

---

೬. ಸುಶೀಲರೂ, ಇಷ್ಟರೂ, ವಂಶಕ್ಕೆ ಅಲಂಕಾರಪ್ರಾಯರೂ ಆದ ಪುತ್ರರನ್ನು ಬಯಸುವವರು ಪಂಚಮೀ ದಿನ ಶ್ರಾದ್ಧವನ್ನು ಮಾಡಬೇಕು.

೭. ಪರಲೋಕದಲ್ಲಿ ವಂಶೀಕರು ಮಾಡುವ ಶ್ರಾದ್ಧವನ್ನು ಅಪೇಕ್ಷಿಸುವವರು ಷಷ್ಠೀ ದಿನ ಶ್ರಾದ್ಧ ಮಾಡಬೇಕು.

೮. ಗ್ರೀಷ್ಮ ಮತ್ತು ಶರತ್ಕಾಲಗಳಲ್ಲಿ ಕೃಷಿಯನ್ನು ಬಯಸುವವರು ನಿಶ್ಚಯವಾಗಿಯೂ ಸಪ್ತಮೀ ದಿನ ಶ್ರಾದ್ಧ ಮಾಡುವುದು ಉಚಿತವಾದುದು.

೯. ವ್ಯಾಪಾರದಲ್ಲಿ ಲಾಭ ಪಡೆಯಲಿಚ್ಛಿಸುವವನು ಅಷ್ಟಮೀ ದಿನ ಶ್ರಾದ್ಧ ಮಾಡತಕ್ಕದು.

೧೦. ನವಮೀದಿನ ಶ್ರಾದ್ಧಮಾಡುವವನು ನಾನಾವಿಧ ಜಾನುವಾರುಗಳನ್ನೂ, ಸೌಭಾಗ್ಯ, ರೋಗನಿವೃತ್ತಿ, ಪ್ರಿಯಸಂಗಮ ಇವುಗಳನ್ನೂ ಹೊಂದುವನು.

೧೧. ದಶಮೀ ದಿನ ಶ್ರಾದ್ಧ ಮಾಡುವವನು ಸಕಲ ಕಾರ್ಯಗಳಲ್ಲಿ ಇಷ್ಟಾರ್ಥವನ್ನು ಪಡೆಯುವನು.

೧೨. ಏಕಾದಶೀ ದಿನ ಶ್ರಾದ್ಧ ಮಾಡುವವನು ಧನ, ಧಾನ್ಯ, ರಾಜಾನುಗ್ರಹ, ಇತರ ಮನೋಭೀಷ್ಟಗಳನ್ನು ಹೊಂದುವನು.

೧೩. ದ್ವಾದಶೀ ದಿನ ಶ್ರದ್ಧೆಯಿಂದ ಶ್ರಾದ್ಧಗೈಯುವವನು ಉತ್ತಮರಾದ ಪುತ್ರರನ್ನೂ, ಇಷ್ಟವಾದ ಪಶುಗಳನ್ನೂ ಪಡೆಯುತ್ತಾನೆ.

ಯೋ ವಾಂಛತಿ ನರೋ ಮುಕ್ತಿಂ ಪಿತೃಭಿಃ ಸಹಚಾತ್ಮನಃ ।
ಅಸಂತಾನಶ್ಚ ಯಸ್ತಸ್ಯ ಶಾದ್ಧೇ ಪ್ರೋಕ್ತಾ ತ್ರಯೋದಶೀ ॥ ೧೪ ॥
ಸಂತಾನಕಾಮೋ ಯಃ ಕುರ್ಯಾತ್ತಸ್ಯ ವಂಶಕ್ಷಯೋ ಭವೇತ್ ।
ನ ಸಂತಾನವಿವೃದ್ಧ್ಯೈಚ ತಸ್ಯ ಪ್ರೋಕ್ತಾ ತ್ರಯೋದಶೀ ॥ ೧೫ ॥
ಶ್ರಾದ್ಧಕರ್ಮಣಿ ರಾಜೇಂದ್ರ ಶ್ರುತಿರೇಷಾ ಪುರಾತನೀ ।
ಅಪಿ ನಃ ಸಕುಲೇ ಭೂಯಾದ್ಯೋ ನೋದದ್ಯಾತ್ತ್ರಯೋದಶೀಂ ॥ ೧೬ ॥
ಪಾಯಸಂ ಮಧುಸರ್ಪಿರ್ಭ್ಯಾಂ ವರ್ಷಾಸುಚ ಮಘಾಸುಚ ।
ಮಘಾತ್ರಯೋದಶೀಯೋಗೇ ಪಾಯಸೇನ ಯಜೇತ್ಪಿತೄನ್ ॥ ೧೭ ॥
ಪಿತರಸ್ತಸ್ಯ ನೇಚ್ಛಂತಿ ತದ್ವರ್ಷಂ ಶ್ರಾದ್ಧಸತ್ಕ್ರಿಯಾಂ ।
ಪುಣ್ಯಾತಿಶಯಭೀತೇನ ಪಿಂಡದಾನಂ ನಿರಾಕೃತಂ ॥ ೧೮ ॥
ಶಕ್ರೇಣ ತದ್ದಿನೇ ಪುತ್ರಮರಣಂ ದರ್ಶಿತಂ ಭಯಂ ।
ಯೇಷಾಂ ಚ ಶಸ್ತ್ರಮೃತ್ಯುಃ ಸ್ಯಾದಪಮೃತ್ಯುರಥಾಪಿವಾ ॥ ೧೯ ॥
ಉಪಸರ್ಗಮೃತಾನಾಂ ಚ ವಿಷಮೃತ್ಯುಮುಪೇಯುಷಾಂ ।
ವಹ್ನಿನಾತು ಪ್ರದಗ್ಧಾನಾಂ ಜಲಮೃತ್ಯುಮುಪೇಯುಷಾಂ ॥ ೨೦ ॥
ಸರ್ಪವ್ಯಾಲಹತಾನಾಂ ಚ ಶೃಂಗೈರುದ್ಬಂಧನೈರಪಿ ।
ಏಕೋದ್ದಿಷ್ಟಂ ಪ್ರಕರ್ತವ್ಯಂ ಚತುರ್ದಶ್ಯಾಂ ನರಾಧಿಪ ॥ ೨೧ ॥

---

೧೪. ಪಿತೃಗಳೊಡನೆ ತನಗೆ ಮೋಕ್ಷವನ್ನು ಬಯಸುವ ಸಂತತಿಯಿಲ್ಲದ ನರನು ತ್ರಯೋದಶೀ ದಿನ ಶ್ರಾದ್ಧ ಮಾಡಬೇಕು.

೧೫. ಸಂತತಿಯನ್ನು ಬಯಸುವವನು ಆ ದಿನ ಶ್ರಾದ್ಧ ಮಾಡಿದರೆ ಆತನ ವಂಶವು ಹಾಳಾಗುವುದು. ತ್ರಯೋದಶೀ ಶ್ರಾದ್ಧವು ಸಂತಾನವೃದ್ಧಿಗೆ ವಿಹಿತ ವಾಗಿಲ್ಲ.

೧೬. ದೊರೆಯೆ! ಶ್ರಾದ್ಧದ ವಿಷಯದಲ್ಲಿ ಈ ರೀತಿಯಾದ ಪ್ರಾಚೀನ ಶ್ರುತಿಯಿರುವುದು. "ತ್ರಯೋದಶೀ ದಿನ ಶ್ರಾದ್ಧ ಮಾಡುವವನು ನಮ್ಮ ವಂಶದಲ್ಲಿ ಜನಿಸದಿರಲಿ."

೧೭. ವರ್ಷರ್ತು, ಮಘಾ ನಕ್ಷತ್ರಗಳಲ್ಲಿ ಪಿತೃಗಳಿಗೆ ಜೇನುತುಪ್ಪ ಆಜ್ಯ ಗಳೊಡನೆ ಪಾಯಸವನ್ನು ಸಮರ್ಪಿಸಬೇಕು. ಮಘಾ ನಕ್ಷತ್ರ ತ್ರಯೋದಶೀ ಯೋಗದಲ್ಲಿ ಪಾಯಸದಿಂದ ಶ್ರಾದ್ಧ ಮಾಡಬೇಕು.

೧೮. ಪಿತೃಗಳು ಅತಿಶಯ ಪುಣ್ಯದ ಭಯದಿಂದ ಆ ದಿನ ಪಿಂಡದಾನ ಪೂರ್ವಕವಾದ ಶ್ರಾದ್ಧವನ್ನು ಅಪೇಕ್ಷಿಸುವುದಿಲ್ಲ.

೧೯-೨೧. ಇಂದ್ರನು ಆ ದಿನ ಶ್ರಾದ್ಧ ಮಾಡಿದವನ ಪುತ್ರನು ಮಡಿಯುವ ನೆಂಬ ಭಯವನ್ನು ತೋರಿಸಿರುವನು. ಶಸ್ತ್ರ, ಅಪಮೃತ್ಯು, ಉತ್ಪಾತ, ವಿಷ,

ತೇಷಾಂ ತಸ್ಮಿನ್ ಕೃತೇ ತೃಪ್ತಿಸ್ತತಸ್ತತ್ಪಕ್ಷಜಾ ಭವೇತ್ ॥ ೨೨ ॥
ಸರ್ವೇ ಕಾಮಾಃ ಪುರಃ ಪ್ರೋಕ್ತಾ ಯುಷ್ಮಾಕಂ ಯೇ ಮಯಾ ನೃಪ ।
ಅಮಾವಾಸ್ಯಾದಿನೇ ಶ್ರಾದ್ಧಾತ್ತಾನಾಪ್ನೋತಿ ಸ ಸಂಶಯಃ ॥ ೨೩ ॥
ಏತತ್ತೇ ಸರ್ವಮಾಖ್ಯಾತಂ ಕಾಮ್ಯಶ್ರಾದ್ಧಫಲಂ ನೃಪ ।
ಯಚ್ಛ್ರುತ್ವಾ ವಾಂಛಿತಾನ್ ಕಾಮಾನ್ ಸರ್ವಾನಾಪ್ನೋತಿ ಮಾನವಃ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಾಮ್ಯಶ್ರಾದ್ಧವರ್ಣನಂ" ನಾಮ ಏಕೋನವಿಂಶೋತ್ತರದ್ವಿಶತತಮೋಽಧ್ಯಾಯಃ

---

ಅಗ್ನಿ, ನೀರು, ಸರ್ಪ, ಸಿಂಹ, ಕೊಂಬು, ನೇಣುಹಾಕಿಕೊಳ್ಳುವುದು ಇವುಗಳಿಂದ ಮಡಿದವರಿಗೆ ಚತುರ್ದಶೀ ದಿನ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು.

೨೨. ಅವರಿಗೆ ಆ ಶ್ರಾದ್ಧವನ್ನು ಮಾಡಿದರೆ ಆ ಪಕ್ಷದಲ್ಲೆಲ್ಲ ಮಾಡಿದ ಶ್ರಾದ್ಧದಿಂದಾಗುವ ತೃಪ್ತಿಯುಂಟಾಗುವುದು.

೨೩. ರಾಜನೆ! ನಾನು ಹಿಂದೆ ಹೇಳಿದ ಇಷ್ಟಾರ್ಥಗಳೆಲ್ಲ ಅಮಾವಾಸ್ಯೆ ದಿನ ಶ್ರಾದ್ಧ ಮಾಡುವುದರಿಂದ ಲಭಿಸುವುದು.

೨೪. ಈ ಕಾಮ್ಯಶ್ರಾದ್ಧದ ಫಲಗಳನ್ನೆಲ್ಲ ನಿನಗೆ ಹೇಳಿರುವೆನು. ಇದನ್ನು ಕೇಳಿದ ಮಾನವನು ಸಕಲೇಷ್ಟಾರ್ಥಗಳನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಾಮ್ಯಶ್ರಾದ್ಧವರ್ಣನ" ವೆಂಬ
ಇನ್ನೂರಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

### ಗಜಚ್ಛಾಯಾಮಾಹಾತ್ಮ್ಯವರ್ಣನಂ

ಆನರ್ತ ಉವಾಚ :—

ತ್ರಯೋದಶ್ಯಾಂ ಕೃತೇ ಶ್ರಾದ್ಧೇ ಕಸ್ಮಾದ್ವಂಶಕ್ಷಯೋ ಭವೇತ್ ।
ಏತನ್ಮೇ ಸರ್ವಮಾಚಕ್ಷ್ವ ವಿಸ್ತರಾತ್ತ್ವಂ ಮಹಾಮುನೇ ॥ ೧ ॥

ಭರ್ತೃಯಜ್ಞ ಉವಾಚ :—

ಏಷಾ ಮೇಧ್ಯತಮಾ ರಾಜನ್ ಯುಗಾದಿಃ ಕಲಿಸಂಭವಾ ।
ಸ್ನಾನೇ ದಾನೇ ಜಪೇ ಹೋಮೇ ಶ್ರಾದ್ಧೇ ಜ್ಞೇಯಾ ತಥಾಽಕ್ಷಯಾ ॥ ೨ ॥
ಅಸ್ಯಾಂ ಚೇತ್ತು ಗಜಚ್ಛಾಯಾ ತಿಥೌ ರಾಜನ್ ಪ್ರಜಾಯತೇ ।
ತದಾಽಕ್ಷಯಂ ಮಘಾಯೋಗೇ ಶ್ರಾದ್ಧಂ ಸಂಜಾಯತೇ ಧ್ರುವಂ ॥ ೩ ॥
ಯಃ ಕ್ಷೀರಂ ಮಧುನಾ ಯುಕ್ತಂ ತಸ್ಮಿನ್ನಹನಿ ಯಚ್ಛತಿ ।
ಪಿತೄನುದ್ದಿಶ್ಯ ಯೋ ಮಾಂಸಂ ದದ್ಯಾದ್ವಾಧ್ರೀಣಸಂ ಚ ಯಃ ॥ ೪ ॥
ವಾಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ।
ತ್ರಿಃ ಪಿಬಂತ್ವಿಂದ್ರಿಯಕ್ಷೀಣಂ ಶ್ವೇತಂ ವೃದ್ಧಮಜಾಪತಿಂ ॥ ೫ ॥

---

## ಕನ್ನಡದ ಅನುವಾದ

### ಗಜಚ್ಛಾಯಾಮಾಹಾತ್ಮ್ಯವರ್ಣನ

೧. ಆನರ್ತನು ಹೇಳುತ್ತಾನೆ:— ಮಹರ್ಷಿಯೆ! ತ್ರಯೋದಶೀ ದಿನ ಮಾಡಿದ ಶ್ರಾದ್ಧದಿಂದ ಏಕೆ ವಂಶಕ್ಷಯವಾಗುವುದು? ಇದನ್ನೆಲ್ಲ ವಿಸ್ತಾರವಾಗಿ ನನಗೆ ಹೇಳು.

೨. ಭರ್ತೃಯಜ್ಞನು ಹೇಳುತ್ತಾನೆ:—ದೊರೆಯೆ! ಈ ಕಲಿಯುಗಾದಿಯು ಅತ್ಯಂತ ಪವಿತ್ರವಾದುದು. ಇದರಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ಶ್ರಾದ್ಧ ಇವುಗಳು ಅಕ್ಷಯವಾಗುವುವು.

೩. ಈ ತ್ರಯೋದಶೀ ದಿನ ಮಘಾ ನಕ್ಷತ್ರವಿದ್ದು ಗಜಚ್ಛಾಯಾಯೋಗವು ಒದಗಿದರೆ ಮಾಡಿದ ಶ್ರಾದ್ಧವು ಅಕ್ಷಯವಾಗುವುದು.

೪–೬. ಆ ದಿನ ಪಿತೃಗಳನ್ನುದ್ದೇಶಿಸಿ ಮಧುಸಹಿತವಾದ ಹಾಲನ್ನೂ, ವಾಧ್ರೀಣಸದ ಮಾಂಸವನ್ನೂ ದಾನಮಾಡಿದರೆ ಪಿತೃಗಳಿಗೆ ಹನ್ನೆರಡು ವರ್ಷಕಾಲ ತೃಪ್ತಿಯುಂಟಾಗುವುದು. ಕ್ಷೀಣೇಂದ್ರಿಯವುಳ್ಳುದೂ, ಶ್ವೇತವರ್ಣವುಳ್ಳುದೂ,

ತಂ ತು ವಾಧ್ರೀಣಸಂ ವಿದ್ಯಾತ್ಸರ್ವಯೂಥಾಧಿಪಂ ತಥಾ ।
ಖಡ್ಗಮಾಂಸಂ ಚ ವಾ ದದ್ಯಾತ್ತೃಪ್ತಿರ್ದ್ವಾದಶವಾರ್ಷಿಕೀ ।
ಸಂಜಾಯತೇ ನ ಸಂದೇಹಸ್ತೇಷಾಂ ವಾಕ್ಯಂ ನ ಮೋಘವೃಷಾ ॥ ೬ ॥
ಆಸೀದ್ರಥಂತರೇ ಕಲ್ಪೇ ಪೂರ್ವಂ ಪಾರ್ಥಿವಸತ್ತಮಃ ।
ಸಿತಾಶ್ವೋ ನಾಮ ಪಾಂಚಾಲ ದೇಶೀಯಃ ಪಿತೃಭಕ್ತಿಮಾನ್ ॥ ೭ ॥
ಮಧುನಾ ಕಾಲಶಾಕೇನ ಖಡ್ಗಮಾಂಸೇನ ಕೇವಲಂ ।
ಸ ಹಿ ಶ್ರಾದ್ಧಂ ತ್ರಯೋದಶ್ಯಾಂ ಕುರುತೇ ಪಾಯಸೇನ ಚ ॥ ೮ ॥
ಸೋಮವಂಶಂ ಸಮುದ್ದಿಶ್ಯ ಶ್ರಾದ್ಧಂ ಯಚ್ಛತಿ ಭಕ್ತಿತಃ ॥ ೯ ॥
ಅಥ ತೈರ್ಬ್ರಾಹ್ಮಣೈಃ ಸರ್ವೈಃ ಸ ಭೂಪಃ ಕೌತುಕಾನ್ವಿತೈಃ ।
ಕಸ್ಯಚಿತ್ತ್ವಥ ಕಾಲಸ್ಯ ಪೃಷ್ಟೋ ಭುಕ್ತ್ವಾ ಯಥೇಚ್ಛಯಾ ॥ ೧೦ ॥
ಶ್ರಾದ್ಧಾದನಂತರಂ ರಾಜನ್ ದೃಷ್ಟ್ವಾ ತಂ ಶ್ರದ್ಧಯಾನ್ವಿತಂ ।
ಪಾದಾವಮರ್ದನಪರಂ ಪ್ರಣಿಪಾತಪುರಃಸರಂ ॥ ೧೧ ॥

ಬ್ರಾಹ್ಮಣಾ ಊಚುಃ:—

ಕೃತ್ವಾ ಶ್ರಾದ್ಧಂ ಮಹಾರಾಜ ಪ್ರದಾತವ್ಯಾಥ ದಕ್ಷಿಣಾ ।
ಬ್ರಾಹ್ಮಣೇಭ್ಯಸ್ತತಃ ಶ್ರಾದ್ಧಂ ಪಿತೄಣಾಂ ಚೋಪತಿಷ್ಠತಿ ॥ ೧೨ ॥

---

ಮುದಿಯೂ, ಸಕಲ ಹಿಂಡುಗಳಿಗೆ ಒಡೆಯನೂ ಆದ ಆಡನ್ನು ವಾಧ್ರೀಣಸವೆನ್ನುವರು. ಆ ಪಿತೃಗಳ ವಾಕ್ಯದಿಂದ ಖಡ್ಗಮೃಗದ ಮಾಂಸವನ್ನಾದರೂ ಕೊಟ್ಟರೆ ಹನ್ನೆರಡು ವರ್ಷದ ತೃಪ್ತಿಯಾಗುವುದು.

೭. ಹಿಂದೆ ರಥನ್ತರ ಕಲ್ಪದಲ್ಲಿ ಪಿತೃಭಕ್ತಿಯುಳ್ಳ ಪಾಂಚಾಲದೇಶದ ಸಿತಾಶ್ವನೆಂಬ ದೊರೆಯಿದ್ದನು.

೮–೯. ಅವನು ತ್ರಯೋದಶೀ ದಿನ ಜೇನುತುಪ್ಪ, ಕಾಲಶಾಕ, ಖಡ್ಗಮಾಂಸ, ಪಾಯಸ ಇವುಗಳಿಂದ ಸೋಮವಂಶವನ್ನುದ್ದೇಶಿಸಿ ಶ್ರಾದ್ಧವನ್ನು ಮಾಡುತ್ತಿದ್ದನು.

೧೦–೧೧. ಒಂದಾನೊಂದು ಕಾಲದಲ್ಲಿ ಕೌತೂಹಲವುಳ್ಳ ಸಕಲಬ್ರಾಹ್ಮಣರು ಭೋಜನ ಮಾಡಿ ಶ್ರಾದ್ಧವಾದ ತರುವಾಯ ಶ್ರದ್ಧೆಯುಳ್ಳವನೂ, ನಮಸ್ಕಾರ ಪೂರ್ವಕವಾಗಿ ಕಾಲುಗಳನ್ನು ಒತ್ತುತ್ತಿರುವವನೂ ಆದ ಆ ದೊರೆಯನ್ನು ನೋಡಿ ಹೀಗೆ ಪ್ರಶ್ನಿಸಿದರು.

೧೨. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ಶ್ರಾದ್ಧವನ್ನು ಮಾಡಿದ ಅನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಅನಂತರ ಆ ಶ್ರಾದ್ಧವು ಪಿತೃಗಳಿಗೆ ಸಲ್ಲುವುದು.

ಸಾ ತ್ವಯಾ ಕಲ್ಪಿತಾಽಸ್ಮಾಕಂ ವಿಶೀರ್ಣಾಽದ್ಯಾಽಪಿ ನೋ ನೃಪ ।
ಕುಪ್ಯಾಕುಪ್ಯಂ ಪರಿತ್ಯಜ್ಯ ತಾಂ ದೇಹಿ ನೃಪ ಮಾಚಿರಂ ॥ ೧೩ ॥

ಭರ್ತೃಯಜ್ಞ ಉವಾಚ :—

ತಚ್ಛ್ರುತ್ವಾ ಚ ನೃಪಃ ಪ್ರಾಹ ಸಂಪ್ರಹೃಷ್ಟೇನ ಚೇತಸಾ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ವಿಪ್ರೈರದ್ಯ ನ ಸಂಶಯಃ ॥ ೧೪ ॥
ಯೇ ವಾಂಛಂತಿ ಮನೋಽಭೀಷ್ಟಂ ಶ್ರಾದ್ಧೇ ಭುಕ್ತ್ವಾಽಥ ಪೈತೃಕೇ ।
ತಸ್ಮಾದ್ಬ್ರೂತ ಮಹಾಭಾಗಾ ಯುಷ್ಮಭ್ಯಂ ಕಿಂ ದದಾಮ್ಯಹಂ ॥ ೧೫ ॥
ವರಾನ್ನಾಗಾನ್ ಮದೋನ್ಮತ್ತಾನ್ ಭದ್ರಜಾತಿ ಸಮುದ್ಭವಾನ್ ।
ಕಿಂವಾ ಸಪ್ತಿ ಪ್ರಧಾನಾಂಶ್ಚ ಮನೋಮಾರುತರಂಹಸಃ ॥ ೧೬ ॥
ಕಿಂವಾ ಸ್ಥಾನಾನಿ ಚಿತ್ರಾಣಿ ಗ್ರಾಮಾಣಿ ನಗರಾಣಿ ಚ ।
ಪಿತೄನುದ್ದಿಶ್ಯ ಯತ್ಕಿಂಚಿನ್ನಾದೇಯಂ ವಿದ್ಯತೇ ಯತಃ ॥ ೧೭ ॥

ಬ್ರಾಹ್ಮಣಾ ಊಚುಃ :—

ನಾಽಸ್ಮಾಕಂ ವಾಜಿಭಿಃ ಕಾರ್ಯಂ ನ ರತ್ನೈರ್ನ ಚ ಹಸ್ತಿಭಿಃ ।
ನ ದೇಶೈರ್ಗ್ರಾಮಮುಖ್ಯೈರ್ವಾ ನಾಽನ್ಯೇನಾಽಪಿ ಚ ಕೇನಚಿತ್ ॥ ೧೮ ॥
ಯದರ್ಥೇನ ಮಹಾರಾಜ ಪೃಷ್ಟೋಽಸ್ಮಾಭಿರ್ಯತೋ ಭವಾನ್ ।
ತಸ್ಮಾನ್ನೋ ದಕ್ಷಿಣಾಂ ದೇಹಿ ಸಂದೇಹಘ್ನಾಂ ನೃಪೋತ್ತಮ ॥ ೧೯ ॥

---

೧೩. ದೊರೆಯೆ! ನೀನು ಈಗಲೂ ಆ ದಕ್ಷಿಣೆಯನ್ನು ನಮಗೆ ಕೊಡಲಿಲ್ಲ. ಆದುದರಿಂದ ತಾಮ್ರ, ಚಿನ್ನ ಮೊದಲಾದ ಲೋಹಗಳನ್ನು ಬಿಟ್ಟು ಶೀಘ್ರವಾಗಿ ಆ ದಕ್ಷಿಣೆಯನ್ನು ಕೊಡು.

೧೪–೧೫. ಭರ್ತೃಯಜ್ಞನು ಹೇಳುತ್ತಾನೆ:— ದೊರೆಯು ಆ ಮಾತನ್ನು ಕೇಳಿ ಹರ್ಷಗೊಂಡ ಮನಸ್ಸಿನಿಂದ ಇಂತೆಂದನು. ಶ್ರಾದ್ಧಭೋಜನ ಮಾಡಿದ ಬ್ರಾಹ್ಮಣರು ನನ್ನಿಂದ ತಮ್ಮ ಅಭೀಷ್ಟವನ್ನು ಅಪೇಕ್ಷಿಸುವುದರಿಂದ ನಾನು ಧನ್ಯನಾಗಿರುವೆನು, ಅನುಗೃಹೀತನಾಗಿರುವೆನು.

೧೬–೧೭. ಭದ್ರಜಾತಿಯ ಉತ್ತಮ ಆನೆಗಳು, ಮನಸ್ಸು ಗಾಳಿಗಳಂತೆ ವೇಗವುಳ್ಳ ಶ್ರೇಷ್ಠವಾದ ಅಶ್ವಗಳು, ಆಶ್ಚರ್ಯಕರವಾದ ಸ್ಥಾನಗಳು, ಗ್ರಾಮ ನಗರಗಳು ಇವುಗಳಲ್ಲಿ ಯಾವುದನ್ನು ಕೊಡಲಿ. ಪಿತೃಗಳಿಗಾಗಿ ಕೊಡಲನರ್ಹವಾದುದು ಯಾವುದೂ ನನ್ನಲ್ಲಿ ಇಲ್ಲ.

೧೮–೧೯. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನಮಗೆ ಕುದುರೆ, ರತ್ನ, ಆನೆ, ದೇಶ, ಗ್ರಾಮ ಇವುಗಳಿಂದಲೂ, ಇತರ ಪದಾರ್ಥಗಳಿಂದಲೂ ಪ್ರಯೋಜನವಿಲ್ಲ. ಅದಕ್ಕಾಗಿ ನಾವು ನಿನ್ನನ್ನು ಕೇಳಲಿಲ್ಲ. ಆದುದರಿಂದ ನಮಗೆ ಸಂದೇಹವನ್ನು ನಿವಾರಿಸುವ ದಕ್ಷಿಣೆಯನ್ನು ಕೊಡು.

ಯಾಂ ಪೃಚ್ಛಾಮೋ ವಯಂ ಸರ್ವೇ ಕೌತೂಹಲಸಮಾಹಿತಾಃ ॥ ೨೦ ॥

ರಾಜೋವಾಚ :—

ಉಪದೇಶಾಽಧಿಕಾರೋಽಸ್ತಿ ಬ್ರಾಹ್ಮಣಾನಾಂ ಮಹಾತ್ಮನಾಂ ।
ದಾತುರ್ನೈವ ಗ್ರಹೀತುಂ ಚ ನೀಚಜಾತ್ಯಸ್ಯ ವೈದಿಕಾಃ ॥ ೨೧ ॥
ಸೋಽಹಂ ರಾಜಾ ನ ಸರ್ವಜ್ಞೋ ಯೋ ಯಚ್ಛಾಮಿ ದ್ವಿಜೋತ್ತಮಾಃ ।
ಉಪದೇಶಂ ಹಿ ಯುಷ್ಮಭ್ಯಂ ಸರ್ವಜ್ಞೇಭ್ಯೋ ವಿಚಕ್ಷಣಾಃ ॥ ೨೨ ॥

ಬ್ರಾಹ್ಮಣಾ ಊಚುಃ :—

ಗುರುಶಿಷ್ಯ ಸಮುತ್ಥೋಽಯಮುಪದೇಶೋ ಮಹೀಪತೇ ।
ಪ್ರಾರ್ಥಯಾಮೋ ವಯಂ ಕಿಂಚಿನ್ಮಾಭಯಂ ತ್ವಂ ಸಮಾವಿಶ ॥ ೨೩ ॥
ವಯಂ ಚ ಪ್ರಶ್ನಮೇಕಂ ಹಿ ಪೃಚ್ಛಾಮೋ ಯದಿ ಭೂಪತೇ ।
ಬ್ರೂಷೇ ಕೌತುಕಯುಕ್ತಾನಾಂ ಸರ್ವೇಷಾಂ ಚ ದ್ವಿಜನ್ಮನಾಂ ॥ ೨೪ ॥
ತಸ್ಮಾದ್ವದ ಮಹಾಭಾಗ ಯದಿ ಜಾನಾಸಿ ತತ್ವತಃ ।
ನ ಚೇದ್ಗುಹ್ಯತಮಂ ಕಿಂಚಿತ್ಪೃಚ್ಛಾಮಸ್ತ್ವಾಂ ಕುತೂಹಲಾತ್ ॥ ೨೫ ॥

ರಾಜೋವಾಚ :—

ಯದಿ ವಃ ಸಂಶಯೋ ವಿಪ್ರಾ ಯುಷ್ಮತ್ಪ್ರಶ್ನಮಸಂಶಯಂ ।
ಕಥಯಿಷ್ಯಾಮಿ ಚೇದ್ಗುಹ್ಯಂ ತದ್ವದಧ್ವಂ ಗತಜ್ವರಾಃ ॥ ೨೬ ॥

---

೨೦. ನಾವೆಲ್ಲ ಕುತೂಹಲದಿಂದ ಅದನ್ನು ಕೇಳುತ್ತಿದ್ದೇವೆ.

೨೧. ರಾಜನು ಹೇಳುತ್ತಾನೆ:—ವೈದಿಕರೆ! ಉಪದೇಶಾಧಿಕಾರವು ಬ್ರಾಹ್ಮಣರಿಗೆ ಇರುವುದು. ಇತರ ಜಾತಿಯವರಿಗೆ ಕೊಡಲಧಿಕಾರವೇ ಹೊರತು ತೆಗೆದುಕೊಳ್ಳಲು ಅಧಿಕಾರವಿಲ್ಲ.

೨೨. ದ್ವಿಜವರ್ಯರೆ! ಸರ್ವಜ್ಞರಾದ ನಿಮಗೆ ಉಪದೇಶ ಮಾಡಲು ನಾನು ಸರ್ವಜ್ಞನಲ್ಲ.

೨೩. ಬ್ರಾಹ್ಮಣರು ಹೇಳುತ್ತಾರೆ :—ರಾಜನೆ! ಉಪದೇಶವೆಂಬುದು ಗುರುಶಿಷ್ಯರಿಗೆ ಸಂಬಂಧಪಟ್ಟುದು. ನಾವು ಯಾವುದೊ ಒಂದನ್ನು ಪ್ರಾರ್ಥಿಸುತ್ತೇವೆ. ಹೆದರಬೇಡ.

೨೪. ಅರಸ! ನಾವು ಒಂದು ಪ್ರಶ್ನೆಯನ್ನು ಕೇಳುತ್ತೇವೆ. ಕುತೂಹಲಿಗಳಾದ ನಮಗೆ ಅದನ್ನು ಹೇಳುವಿಯಾ?

೨೫. ನಾವು ಕುತೂಹಲದಿಂದ ಕೇಳುವ ಅದು ರಹಸ್ಯವಲ್ಲದಿದ್ದರೆ ನಿನಗೆ ತಿಳಿದಿದ್ದರೆ ನಮಗೆ ಹೇಳು.

೨೬. ರಾಜನು ಹೇಳುತ್ತಾನೆ:—ವಿಪ್ರರೆ! ನಿಮಗೆ ಸಂಶಯವುಂಟಾಗಿದ್ದರೆ ವ್ಯಥೆಯಿಲ್ಲದೆ ಅದನ್ನು ಕೇಳಿರಿ; ಗುಟ್ಟಾಗಿದ್ದರೂ ಹೇಳುತ್ತೇನೆ.

ಬ್ರಾಹ್ಮಣಾ ಊಚುಃ:—

ಅನ್ನೇಷು ಚ ವಿಚಿತ್ರೇಷು ಲೇಹ್ಯೇಷು ವಿವಿಧೇಷು ಚ ।
ಅಮೃತೇಷ್ವೇಷು ಸರ್ವೇಷು ತಥಾ ಪೇಯೇಷು ಪಾರ್ಥಿವ ॥ ೨೭ ॥
ತಸ್ಮಾದದ್ಯದಿನೇ ಬ್ರೂಹಿ ಮಧು ಯಚ್ಛಸಿ ಗರ್ಹಿತಂ ।
ವರ್ತತೇ ಚ ಯಥಾಽಭಕ್ಷ್ಯಂ ಬ್ರಾಹ್ಮಣಾನಾಂ ವಿಶೇಷತಃ ॥ ೨೮ ॥
ತಥಾ ವಿಚಿತ್ರಮಾಂಸೇಷು ಸಂಸ್ಥಿತೇಷು ನರಾಧಿಪ ।
ಖಡ್ಗಮಾಂಸಂ ನಿರಾಸ್ವಾದಂ ಕಸ್ಮಾದ್ಯಚ್ಛಸಿ ಕೇವಲಂ ॥ ೨೯ ॥
ಸಂತಿ ಶಾಕಾನಿ ರಾಜೇಂದ್ರ ಪಾವನೀಯಾನಿ ಸರ್ವಶಃ ।
ಸುಷ್ಠು ಸ್ವಾಕರಾಣ್ಯತ್ರ ವ್ಯಂಜನಾರ್ಥಂ ಮಹೀಪತೇ ॥ ೩೦ ॥
ಕಾಲಶಾಕಂ ಸ ಕಟುಕಂ ಮುಖಾಽಽಧಿಜನಕಂ ಮಹತ್ ।
ಕಸ್ಮಾದ್ಯಚ್ಛಸಿ ಚಾಽಸ್ಮಾಕಂ ಭಕ್ತ್ಯಾ ಪರಮಯಾ ಯುತಃ ।
ನ ಶ್ರಾದ್ಧೇ ಪ್ರತಿಷೇಧಶ್ಚ ಪ್ರಕರ್ತವ್ಯಃ ಕಥಂಚನ ॥ ೩೧ ॥
ನ ಚ ತ್ಯಾಜ್ಯಂ ಸಮುಚ್ಛಿಷ್ಟಂ ತೇನ ಭುಂಜಾಮಹೇ ತತಃ ।
ತದತ್ರ ಕಾರಣೇನೈವ ಗುರುಣಾ ಭಾವ್ಯಮೇವ ಹಿ ।
ಯೇನ ತ್ವಂ ಯಚ್ಛಸಿ ಪ್ರಾಯ ಏತತ್ಸಿದ್ಧಿರ್ಭವೇತ್ಸ್ಥಿತಾ ॥ ೩೨ ॥
ತಸ್ಮಾತ್ಕಥಯ ನಃ ಸರ್ವಂ ಪರಂ ಕೌತೂಹಲಂ ಹಿ ನಃ ।
ನಿಃಸ್ವಾದಿತಂ ಯಥಾ ದದ್ಯಾದೀದೃಕ್ಶ್ರಾದ್ಧೇ ವಿಗರ್ಹಿತಂ ॥ ೩೩ ॥

---

೨೭–೨೮. ಬ್ರಾಹ್ಮಣರು ಹೇಳುತ್ತಾರೆ:—ವಿಚಿತ್ರವಾದ ಅನ್ನಗಳು, ಬಗೆ ಬಗೆಯ ಲೇಹ್ಯಗಳು, ಅಮೃತದಂತಿರುವ ಪೇಯಗಳು ಇವುಗಳಿರುವಾಗ ಬ್ರಾಹ್ಮಣರಿಗೆ ಅಭಕ್ಷ್ಯವೂ, ನಿಂದ್ಯವೂ ಆದ ಜೇನುತುಪ್ಪವನ್ನು ಏಕೆ ಈ ದಿನ ಕೊಡುತ್ತಿದ್ದೀಯೆ?

೨೯. ಹಾಗೆಯೇ ನಾನಾವಿಧ ಮಾಂಸಗಳಿರುವಾಗ ರುಚಿಯಿಲ್ಲದ ಈ ಖಡ್ಗ ಮಾಂಸವನ್ನು ಏಕೆ ಕೊಡುತ್ತೀಯೆ?

೩೦–೩೧. ವ್ಯಂಜನಕ್ಕಾಗಿ ಪವಿತ್ರವೂ, ರುಚಿಕರವೂ ಆದ ಕಾಯಿಪಲ್ಯಗಳಿರುವಾಗ ಶ್ರಾದ್ಧಕ್ಕೆ ನಿಷಿದ್ಧವೂ, ಕಹಿಯೂ, ಬಾಯಿಗೆ ಹುಣ್ಣನ್ನುಂಟುಮಾಡುವುದೂ ಆದ ಕಾಲಶಾಕವನ್ನು ಏಕೆ ಕೊಡುತ್ತಿದ್ದೀಯೆ?

೩೨. ಶ್ರಾದ್ಧದಲ್ಲಿ ಕೊಟ್ಟುದನ್ನು ತ್ಯಜಿಸಬಾರದಾದುದರಿಂದ ಇದನ್ನು ತಿನ್ನುತ್ತಿದ್ದೇವೆ. ನೀನು ಇದನ್ನು ಕೊಡುತ್ತಿರುವುದರಿಂದ ಇದಕ್ಕೆ ದೊಡ್ಡ ಕಾರಣವಿರಬೇಕು. ಇದರಿಂದ ಮಹಾಸಿದ್ಧಿಯಾಗಬಹುದು.

೩೩–೩೪. ಆದುದರಿಂದ ಶ್ರಾದ್ಧದಲ್ಲಿ ಇಂತಹ ರುಚಿಯಿಲ್ಲದ ನಿಂದ್ಯವಸ್ತು

ಯಥಾ ತ್ವಂ ನೃಪಶಾರ್ದೂಲ ಶ್ರದ್ಧಯಾ ಸಂಪ್ರಯಚ್ಛಸಿ ॥ ೩೪ ॥
ತಚ್ಛ್ರುತ್ವಾ ವಚನಂ ತೇಷಾಂ ಬ್ರಾಹ್ಮಣಾನಾಂ ಮಹಾತ್ಮನಾಂ ।
ಸ ವೈಲಕ್ಷ್ಯಸ್ಮಿತಂ ಪ್ರಾಹ ಸ ಲಜ್ಜಂ ಪೃಥಿವೀಪತಿಃ ॥ ೩೫ ॥
ಗುಹ್ಯಮೇತನ್ಮಹಾಭಾಗಾ ಅಸ್ಮಾಕಂ ಯದಿ ಸಂಸ್ಥಿತಂ ।
ಅವಾಚ್ಯಮಪಿ ವಕ್ಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೩೬ ॥
ಅಹಮಾಸಂ ಪುರಾ ಪಾಪೋ ಲುಬ್ಧಕಶ್ಚಾಽನ್ಯಜನ್ಮನಿ ।
ನಿಹಂತಾ ಸರ್ವಜಂತೂನಾಂ ತಥಾ ಭಕ್ಷಯಿತಾ ಪುನಃ ॥ ೩೭ ॥
ಪರ್ಯಟಾಮಿ ತದಾರಣ್ಯೇ ಧನುಷಾ ಮೃಗಯಾರತಃ ।
ಸಿಂಹೋ ವ್ಯಾಘ್ರೋ ಗಜೇಂದ್ರೋ ವಾ ಶರಭೋ ವಾ ದ್ವಿಜೋತ್ತಮಾಃ ॥
ಮದ್ಬಾಣಗೋಚರಂ ಪ್ರಾಪ್ತೋ ನ ಜೀವತ್ಯಪಿ ಕರ್ಹಿಚಿತ್ ।
ಕಸ್ಯಚಿತ್ತ್ವಥ ಕಾಲಸ್ಯ ಭ್ರಮಮಾಣೋ ಮಹೀತಲೇ ॥ ೩೯ ॥
ಸಂಪ್ರಾಪ್ತೋಽಹಂ ಮಹಾಭಾಗಾ ಅಗ್ನಿವೇಶಸ್ಯ ಸನ್ಮುನೇಃ ।
ಆಶ್ರಮೇ ಸಮನುಪ್ರಾಪ್ತೋ ನಿಶೀಥೇ ಕ್ಷುತ್ಪಿಪಾಸಿತಃ ॥ ೪೦ ॥
ತಾವತ್ತತ್ರ ಸಶಿಷ್ಯಾಣಾಂ ಶ್ರಾದ್ಧಕರ್ಮವಿಧಿಂ ವದನ್ ।
ಸಂಸ್ಥಿತೋ ವೇಷ್ಟಿತಃ ಶಿಷ್ಯೈಃ ಸಮಂತಾದ್ದ್ವಿಜಸತ್ತಮಾಃ ॥ ೪೧ ॥

---

ವನ್ನು ಶ್ರದ್ಧೆಯಿಂದ ಕೊಡಲು ಕಾರಣವನ್ನು ಹೇಳು. ನಮಗೆ ಅತಿಶಯವಾದ ಕುತೂಹಲವುಂಟಾಗಿದೆ.

೩೫. ದೊರೆಯು ಮಹಾತ್ಮರಾದ ಆ ಬ್ರಾಹ್ಮಣರ ಮಾತನ್ನು ಕೇಳಿ ವಿಸ್ಮಯದಿಂದ ನಕ್ಕು ಲಜ್ಜೆಯಿಂದ ಹೀಗೆಂದನು.

೩೬. ಪುಣ್ಯವಂತರೆ! ಇದು ಗುಟ್ಟಾದುದೂ, ಹೇಳತಕ್ಕುದಲ್ಲದಿರುವುದೂ ಆಗಿದೆ. ಆದರೂ ಹೇಳುತ್ತೇನೆ. ಸಾವಧಾನದಿಂದ ಕೇಳಿರಿ.

೩೭. ನಾನು ಹಿಂದಿನ ಜನ್ಮದಲ್ಲಿ ಸಮಸ್ತ ಜಂತುಗಳನ್ನು ಕೊಲ್ಲುವವನೂ, ತಿನ್ನುವವನೂ ಆದ ಬೇಡನಾಗಿದ್ದೆನು.

೩೮–೪೦. ಧನುಸ್ಸನ್ನು ತೆಗೆದುಕೊಂಡು ಬೇಟೆಗಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದೆನು. ಸಿಂಹ, ಹುಲಿ, ಆನೆ, ಶರಭ ಇವುಗಳಲ್ಲಿ ಯಾವುದೂ ನನ್ನ ಬಾಣಕ್ಕೆ ತುತ್ತಾಗಿ ಬದುಕುತ್ತಿರಲಿಲ್ಲ. ಒಂದಾನೊಂದು ಕಾಲದಲ್ಲಿ ನಾನು ಭೂಮಿಯಲ್ಲಿ ಸಂಚರಿಸುತ್ತ ಅರ್ಧರಾತ್ರಿಯ ಸಮಯದಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಅಗ್ನಿವೇಶ ಮುನಿಯ ಆಶ್ರಮಕ್ಕೆ ಹೋದೆನು.

೪೧. ಆಗಲಾ ಮುನಿಯು ಶಿಷ್ಯಪರಿವೃತನಾಗಿ ಅವರಿಗೆ ಶ್ರಾದ್ಧಕರ್ಮವಿಧಿಯನ್ನು ಹೇಳುತ್ತಿದ್ದನು.

ಅಗ್ನಿವೇಶ ಉವಾಚ:—

ಋಕ್ಷೇ ಪಿತ್ರ್ಯೇ ಯದಾ ಚಂದ್ರೋ ಹಂಸಶ್ಚಾಽಪಿ ಕರೇ ವ್ರಜೇತ್ ।
ತ್ರಯೋದಶೀ ತು ಸಾ ಛಾಯಾ ವಿಜ್ಞೇಯಾ ಕುಂಜರೋದ್ಭವಾ ॥ ೪೨ ॥
ಪಿತ್ರ್ಯೇ ಯದಾಸ್ಥಿತಶ್ಚೇಂದುರ್ಹಂಸಶ್ಚಾಽಪಿ ಕರೇಸ್ಥಿತಃ ।
ತಿಥಿರ್ವೈಶ್ರವಣೀ ಯಾ ಚ ಸಾ ಛಾಯಾ ಕುಂಜರಸ್ಯ ಚ ॥ ೪೩ ॥
ಸೈಂಹಿಕೇಯೋ ಯದಾ ಚಂದ್ರಂ ಗ್ರಸತೇ ಪರ್ವಸಂಧಿಷು ।
ಹಸ್ತಿಚ್ಛಾಯಾ ತು ಸಾ ಜ್ಞೇಯಾ ತಸ್ಯಾಂ ಶ್ರಾದ್ಧಂ ಸಮಾಚರೇತ್ ॥೪೪॥
ತಸ್ಯಾಂ ಯಃ ಕುರುತೇ ಶ್ರಾದ್ಧಂ ಜಲೈರಪಿ ಪ್ರಭಕ್ತಿತಃ ।
ಯಾವದ್ದ್ವಾದಶವರ್ಷಾಣಿ ಪಿತರಸ್ತಸ್ಯ ತರ್ಪಿತಾಃ ॥ ೪೫ ॥
ವನಸ್ಪತಿಗತೇ ಸೋಮೇ ಯಾ ಛಾಯಾ ಪೂರ್ವತೋಮುಖೀ ।
ಗಜಚ್ಛಾಯಾ ತು ಸಾ ಜ್ಞೇಯಾ ಪಿತೄಣಾಂ ದತ್ತಮಕ್ಷಯಂ ॥ ೪೬ ॥
ಸಾ ಭವೇಚ್ಚ ನ ಸಂದೇಹಃ ಪುಣ್ಯದಾ ಪೈತೃಕೀ ತಿಥಿಃ ।
ತಸ್ಯಾಂ ಶ್ರಾದ್ಧಂ ಪ್ರಕರ್ತವ್ಯಂ ಸಂಭಾರಾಃ ಸಂಭೃತಾಶ್ಚಯೇ ॥ ೪೭ ॥
ಪ್ರಭಾತೇ ತು ನ ಸಂದೇಹಃ ಪಿತೄಣಾಂ ಪರಿತೃಪ್ತಯೇ ।
ಶಾಕೈಸ್ತಥೈಂಗುದೈರ್ಬಿಲ್ವೈರ್ಬದರೈರ್ಚಿರ್ಭಟೈರಪಿ ॥ ೪೮ ॥
ಯದನ್ನಂ ಪುರುಷೋಽಶ್ನಾತಿ ತದನ್ನಾಸ್ತಸ್ಯ ದೇವತಾಃ ।
ಬಾಢಮಿತ್ಯೇವ ತೇ ಪ್ರೋಚ್ಯ ಗತಾಃ ಸ್ವಂ ಸ್ವಂ ನಿಕೇತನಂ ॥ ೪೯ ॥

---

೪೨—೪೩. ಅಗ್ನಿವೇಶನು ಹೇಳುತ್ತಾನೆ:— ತ್ರಯೋದಶಿಯ ದಿನ ಮಘಾ ನಕ್ಷತ್ರದಲ್ಲಿ ಚಂದ್ರನೂ, ಹಸ್ತಾನಕ್ಷತ್ರದಲ್ಲಿ ಸೂರ್ಯನೂ ಇದ್ದರೆ ಅದು ಗಜಚ್ಛಾಯಾ ಎನ್ನಿಸಿಕೊಳ್ಳುವುದು.

೪೪. ರಾಹುವು ಪರ್ವಸಂಧಿಗಳಲ್ಲಿ ಚಂದ್ರನನ್ನು ನುಂಗುತ್ತಿದ್ದರೆ ಅದು ಗಜಚ್ಛಾಯಾ ಎನ್ನಿಸಿಕೊಳ್ಳುವುದು. ಅದರಲ್ಲಿ ಶ್ರಾದ್ಧ ಮಾಡಬೇಕು.

೪೫. ಅದರಲ್ಲಿ ಭಕ್ತಿಯಿಂದ ಸಹಿತನಾಗಿ ನೀರಿನಿಂದ ಶ್ರಾದ್ಧಗೈದರೆ ಹನ್ನೆರಡು ವರ್ಷಕಾಲ ಪಿತೃಗಳು ತೃಪ್ತಿಗೊಳ್ಳುವರು.

೪೬. ಇಂದುವು ವನಸ್ಪತಿಗತನಾಗಿ ಚ್ಛಾಯೆಯು ಪೂರ್ವಾಭಿಮುಖವಾದರೆ ಅದು ಕುಂಜರಚ್ಛಾಯಾ ಎನ್ನಿಸಿಕೊಳ್ಳುವುದು. ಅದರಲ್ಲಿ ಪಿತೃಗಳಿಗಿತ್ತುದು ಅಕ್ಷಯವಾಗುವುದು.

೪೭—೪೮. ಅದು ನಿಶ್ಚಯವಾಗಿಯೂ ಪುಣ್ಯಕರವಾದ ಪಿತೃತಿಥಿಯಾಗುವುದು. ಅದರಲ್ಲಿ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು ಬೆಳಗ್ಗೆ ಪಿತೃಗಳ ತೃಪ್ತಿನಾಗಿ ಶಾಕ, ಇಂಗಳದ ಹಣ್ಣು, ಬಿಲ್ವಪತ್ರೆ, ಎಲಚೀಹಣ್ಣು, ಚಿರ್ಭಟ ಇವುಗಳಿಂದ ಶ್ರಾದ್ಧ ಮಾಡಬೇಕು.

೪೯—೫೦. ಮನುಷ್ಯನು ತಾನು ಯಾವ ಅನ್ನವನ್ನು ಭುಂಜಿಸುವನೊ,

ಸರ್ವೇ ಶಿಷ್ಯಾ ಮಹಾಭಾಗಾ ನಾರಾಯಣಪುರೋಗಮಾಃ ।
ಅಗ್ನಿವೇಶ್ಯೋಽಪಿ ಸುಷ್ವಾಪ ಸಮಾಮಂತ್ರ್ಯ ದ್ವಿಜೋತ್ತಮಾನ್ ॥ ೫೦ ॥
ತೇನ ಸಂಕಥ್ಯಮಾನಂ ಚ ರಾತ್ರೌ ತಚ್ಚ ಶ್ರುತಂ ಮಯಾ ।
ಅಹಂ ಚಾಽಪಿ ಕರಿಷ್ಯಾಮಿ ಪ್ರಾತಃ ಶ್ರಾದ್ಧಮಸಂಶಯಂ ॥ ೫೧ ॥
ನಿಹತ್ಯ ಖಡ್ಗಮಾದಾಯ ತಸ್ಯ ಮಾಂಸಂ ಸುಪುಷ್ಕಲಂ ।
ತಥಾ ಮಧು ಸಮಾದಾಯ ಕಾಲಶಾಕಂ ವಿಶೇಷತಃ ॥ ೫೨ ॥
ಸ್ವಜಾತೀಯೇಭ್ಯ ಆದಾಯ ತರ್ಪಯಿಷ್ಯಾಮಿ ತಾನ್ ಪಿತೄನ್ ॥ ೫೩ ॥
ಏವಂ ನಿಶ್ಚಿತ್ಯ ಮನಸಾ ಪ್ರಸುಪ್ತೋಽಹಂ ದ್ವಿಜೋತ್ತಮಾಃ ।
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ॥ ೫೪ ॥
ಮಧುಜಾಲಾನಿ ಭೂರೀಣಿ ಗೃಹೀತಾನಿ ಮಯಾ ತತಃ ।
ಕಾಲಶಾಕಂ ತಥಾ ಲಬ್ಧಂ ಸ್ವೇಚ್ಛಯಾ ದ್ವಿಜಸತ್ತಮಾಃ ॥ ೫೫ ॥
ತತಃ ಸರ್ವಂ ಸಮಾದಾಯ ಶ್ರಪಿತಂ ತತ್ಕ್ಷಣಾನ್ಮಯಾ ।
ಸ್ನಾತ್ವಾ ಚ ನಿಜವರ್ಗಾಣಾಂ ಪಿತೄನುದ್ದಿಶ್ಯ ಚಾಽತ್ಮನಃ ।
ಪ್ರದತ್ತಂ ಲುಬ್ಧಕಾನಾಂ ಚ ಭಕ್ತಿಪೂರ್ವಂ ದ್ವಿಜೋತ್ತಮಾಃ ॥ ೫೬ ॥
ಏವಂ ಮಯಾ ಪುರಾದತ್ತಂ ಪಿತೄನುದ್ದಿಶ್ಯ ತಾನ್ನಿಜಾನ್ ।
ನಾಽನ್ಯತ್ಕಿಂಚಿನ್ಮಯಾದತ್ತಂ ಕದಾಚಿತ್ಕಸ್ಯಚಿದ್ದ್ವಿಜಾಃ ॥ ೫೭ ॥

---

ದೇವತೆಗಳಿಗೂ ಅದನ್ನೇ ಸಮರ್ಪಿಸಬೇಕು. ನಾರಾಯಣನೇ ಮೊದಲಾದ ಆ ಶಿಷ್ಯರು ಹಾಗೆಯೇ ಆಗಲೆಂದು ತಮ್ಮ ತಮ್ಮ ಮನೆಗೆ ಹೋದರು. ಅಗ್ನಿವೇಶ್ಯನೂ ಬ್ರಾಹ್ಮಣರನ್ನು ಕೇಳಿಕೊಂಡು ಮಲಗಿದನು.

೫೧. ನಾನು ಆ ಮುನಿಯು ರಾತ್ರಿಯಲ್ಲಿ ಹೇಳುತ್ತಿದ್ದುದನ್ನು ಕೇಳಿದೆನು. "ನಾನೂ ಬೆಳಗ್ಗೆ ನಿಶ್ಚಯವಾಗಿಯೂ ಶ್ರಾದ್ಧವನ್ನು ಮಾಡುವೆನು.

೫೨–೫೩. ಖಡ್ಗಮೃಗವನ್ನು ಕೊಂದು ಅದರ ಮಾಂಸವನ್ನೂ, ಜೇನು ತುಪ್ಪ, ಕಾಲಶಾಕವನ್ನೂ ತಂದು ಸ್ವಜಾತೀಯರಿಗೆ ಕೊಟ್ಟು ಪಿತೃಗಳನ್ನು ತೃಪ್ತಿಗೊಳಿಸುವೆನು" ಎಂದು ಯೋಚಿಸಿದೆನು.

೫೪–೫೬. ದ್ವಿಜವರ್ಯರೆ! ನಾನು ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಮಲಗಿದೆನು. ಅನಂತರ ಬೆಳಗ್ಗೆ ಶುದ್ಧವಾದ ಸೂರ್ಯಮಂಡಲವು ಉದಯಿಸಲು ಜೇನು, ಕಾಲಶಾಕ ಇವುಗಳನ್ನು ಬಹಳವಾಗಿ ತಂದು ಕೂಡಲೆ ಅಡುಗೆ ಮಾಡಿ ಮಿಂದು ನನ್ನ ಪಿತೃಗಳನ್ನುದ್ದೇಶಿಸಿ ನಮ್ಮ ಜಾತಿಯ ಬೇಡರಿಗೆ ಭಕ್ತಿಪೂರ್ವಕವಾಗಿ ಕೊಟ್ಟೆನು.

೫೭. ನಾನು ಹೀಗೆ ಹಿಂದೆ ನಮ್ಮ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಮಾಡಿರುವೆನು. ಬೇರೆ ಏನನ್ನೂ ಯಾವಾಗಲೂ ಯಾರಿಗೂ ಕೊಡಲಿಲ್ಲ.

ತತಃ ಕಾಲೇನ ಮಹತಾ ಮೃತ್ಯುಂ ಪ್ರಾಪ್ತೋಽಸ್ಮ್ಯಹಂ ದ್ವಿಜಾಃ ।
ತದ್ದಾನಸ್ಯ ಪ್ರಭಾವೇನ ಪಾರ್ಥಿವೀಂ ಯೋನಿಮಾಶ್ರಿತಃ ॥ ೫೮ ॥
ಏವಂ ಜಾತಿಸ್ಮರತ್ವಂ ಚ ಸಂಜಾತಂ ಮೇ ದ್ವಿಜೋತ್ತಮಾಃ ।
ತೇ ಚ ಮೇ ತರ್ಪಿತಾಸ್ತೇನ ಖಡ್ಗಮಾಂಸೇನ ಮಾಕ್ಷಿಕೈಃ ॥ ೫೯ ॥
ಸಂಪ್ರಾಪ್ತಾಃ ಪರಮಾಂ ಪ್ರೀತಿಂ ತತೋ ದ್ವಾದಶವಾರ್ಷಿಕೀಂ ।
ಏತಸ್ಮಾತ್ಕಾರಣಾಚ್ಛ್ರಾದ್ಧಂ ಪ್ರಕರೋಮಿ ದ್ವಿಜೋತ್ತಮಾಃ ॥ ೬೦ ॥
ಖಡ್ಗಮಾಂಸೇನ ಮಧುನಾ ಕಾಲಶಾಕೇನ ಭೂರಿಶಃ ।
ವಿಧಿಹೀನಂ ದ್ವಿಜೈರ್ಹೀನಂ ತಿಲದರ್ಭೈರ್ವಿವರ್ಜಿತಂ ॥ ೬೧ ॥
ಮಯಾ ತದ್ವಿಹಿತಂ ಶ್ರಾದ್ಧಂ ತಸ್ಯೈತತ್ಫಲಮಾಗತಂ ।
ಸಾಂಪ್ರತಂ ವಿಧಿನಾ ಸಮ್ಯಗ್ಬ್ರಾಹ್ಮಣೈರ್ವೇದಪಾರಗೈಃ ॥ ೬೨ ॥
ಉಪವಿಷ್ಟೈಃ ಕರೋಮ್ಯೇವ ಯಚ್ಛ್ರಾದ್ಧಂ ಶ್ರದ್ಧಯಾನ್ವಿತಃ ।
ದರ್ಭೈಸ್ತಿಲೈಃ ಸಮೋಪೇತಂ ಮಂತ್ರವಚ್ಚ ದ್ವಿಜೋತ್ತಮಾಃ ॥ ೬೩ ॥
ನೋ ಜಾನಾಮಿ ಫಲಂ ಕಿಂವಾ ಸಾಂಪ್ರತಂ ಚ ಭವಿಷ್ಯತಿ ।
ತಸ್ಮಾದೇವಂ ಪರಿಜ್ಞಾಯ ಯೂಯಂ ಚೈವ ದ್ವಿಜೋತ್ತಮಾಃ ॥ ೬೪ ॥
ಸಂತರ್ಪಯಧ್ವಂ ಚ ಪಿತೄನ್ ನಿಜಾನ್ ಗಜದಿನೇ ಸ್ಥಿತೇ ।
ಛಾಯಾಯಾಂ ಚೈವ ಜಾತಾಯಾಂ ಕುಂಜರಸ್ಯ ದ್ವಿಜೋತ್ತಮಾಃ ॥ ೬೫ ॥
ಯೇನ ಸಂಜಾಯತೇ ತೃಪ್ತಿಃ ಪಿತೄಣಾಂ ದ್ವಾದಶಾಬ್ದಿಕೀ ।
ಯುಷ್ಮಾಕಂ ಚ ಗತಿಃ ಶ್ರೇಷ್ಠಾ ಯಥಾ ಜಾತಾ ಮಮಾಽಧುನಾ ॥ ೬೬ ॥

---

೫೮. ಅನಂತರ ಬಹಳಕಾಲದ ಮೇಲೆ ನಾನು ಮೃತನಾಗಿ ಆ ದಾನದ ಪ್ರಭಾವದಿಂದ ರಾಜನಾದೆನು.

೫೯–೬೩. ಹೀಗೆ ನನಗೆ ಪೂರ್ವಜಾತಿಯ ಸ್ಮರಣೆಯುಂಟಾಯಿತು. ಆ ಖಡ್ಗಮೃಗಮಾಂಸ, ಜೇನುತುಪ್ಪಗಳಿಂದ ತೃಪ್ತಿಗೊಳಿಸಲ್ಪಟ್ಟ ಪಿತೃಗಳು ಹನ್ನೆರಡು ವರ್ಷಕಾಲ ಅತ್ಯಂತ ಸಂತೋಷಗೊಂಡರು. ದ್ವಿಜವರ್ಯರೆ! ನಾನು ಈ ಕಾರಣದಿಂದ ಖಡ್ಗಮಾಂಸ, ಜೇನುತುಪ್ಪ, ಕಾಲಶಾಕ ಇವುಗಳಿಂದ ಶ್ರಾದ್ಧ ಮಾಡುವೆನು. ವಿಧಿ, ದ್ವಿಜ, ಎಳ್ಳು, ದರ್ಭೆ ಇವುಗಳಿಲ್ಲದೆ ಮಾಡಿದ ಶ್ರಾದ್ಧಕ್ಕೆ ಇಂತಹ ಫಲವುಂಟಾಗಿರುವುದು. ಈಗ ನಾನು ವೇದಪಾರಂಗತರಾದ ಬ್ರಾಹ್ಮಣರನ್ನು ಕೂಡಿಸಿ ದರ್ಭೆ, ತಿಲ, ಮಂತ್ರಗಳೊಡನೆ ಶ್ರಾದ್ಧವನ್ನು ಮಾಡುವೆನು.

೬೪–೬೫. ಈಗ ಇದಕ್ಕೆ ಎಂತಹ ಫಲವು ಸಂಭವಿಸುವುದೊ ಅರಿಯೆನು. ದ್ವಿಜರೆ! ಆದುದರಿಂದ ನೀವೂ ಇದನ್ನು ತಿಳಿದು ಗಜಚ್ಛಾಯಾಯೋಗವಿರುವ ತ್ರಯೋದಶೀ ದಿನ ಪಿತೃಗಳನ್ನು ತೃಪ್ತಿಗೊಳಿಸಿರಿ.

೬೬. ಅದರಿಂದ ಪಿತೃಗಳಿಗೆ ಹನ್ನೆರಡು ವರ್ಷಕಾಲ ತೃಪ್ತಿಯುಂಟಾಗುವುದು. ನಿಮಗೂ ನನಗೆ ಆದಂತೆಯೇ ಉತ್ತಮಗತಿಯಾಗುವುದು.

ಭರ್ತೃಯಜ್ಞ ಉವಾಚ:—
ತಸ್ಯ ತದ್ವಚನಂ ಶ್ರುತ್ವಾ ಸರ್ವೇ ತೇ ಬ್ರಾಹ್ಮಣೋತ್ತಮಾಃ ।
ಸಂತುಷ್ಟಾಃ ಸಾಧುವಾದಾಂಶ್ಚ ದದುಸ್ತಸ್ಯ ಮಹೀಪತೇಃ ॥ ೬೭ ॥
ತತಃ ಪ್ರಭೃತಿ ಚಕ್ರುಸ್ತೇ ಶ್ರಾದ್ಧಾನಿ ದ್ವಿಜಸತ್ತಮಾಃ ।
ತ್ರಯೋದಶ್ಯಾಂ ನಭಸ್ಯಸ್ಯ ಕೃಷ್ಣಾಯಾಂ ಭಕ್ತಿತತ್ಪರಾಃ ॥ ೬೮ ॥
ಮಧುನಾ ಕಾಲಶಾಕೇನ ಖಡ್ಗಮಾಂಸೇನ ತರ್ಪಿತಾಃ ।
ಪ್ರಾಪ್ನುವಂತಿ ಪರಾಂ ಸಿದ್ಧಿಂ ವಿಮಾನವರಮಾಸ್ಥಿತಾಃ ॥ ೬೯ ॥
ಸ್ಪರ್ಧಂತೇ ಸಹಿತಾ ದೇವೈಃ ಪಿತರಶ್ಚ ವಿಶೇಷತಃ ।
ವಂಶಜೇನ ಪ್ರದತ್ತಸ್ಯ ಪ್ರಭಾವಾತ್ಸುರಸತ್ತಮಾಃ ॥ ೭೦ ॥
ಶ್ರಾದ್ಧಾರ್ಥಂ ಸಂಪರಿಜ್ಞಾಯ ಮಂತ್ರಂ ಚಕ್ರುಃ ಪರಸ್ಪರಂ ।
ಆದಿತ್ಯಾ ವಸವೋ ರುದ್ರಾ ನಾಸತ್ಯಾವಪಿ ಪಾರ್ಥಿವ ॥ ೭೧ ॥
ಯಥಾ ನ ಭವತಿ ಶ್ರಾದ್ಧಂ ತಸ್ಮಿನ್ನಹನಿ ಭೂತಲೇ ।
ಯತ್ಪ್ರಭಾವಾದ್ವಯಂ ಸರ್ವೇ ಮಾನುಷ್ಯೈಃ ಶ್ರಾದ್ಧಮಾಶ್ರಿತೈಃ ।
ನ ಯಾಮೋಽಭಿಭವಸ್ಥಾನಂ ತಸ್ಮಾಚ್ಛಪ್ಸ್ಯಾಮಹೇ ಚ ತಾನ್ ॥ ೭೨ ॥
ಅದ್ಯ ಪ್ರಭೃತಿ ಯಃ ಶ್ರಾದ್ಧಂ ತ್ರಯೋದಶ್ಯಾಂ ಕರಿಷ್ಯತಿ ।
ಕನ್ಯಾಸಂಸ್ಥೇ ಸಹಸ್ರಾಂಶೌ ತಸ್ಯ ಸ್ಯಾದ್ವಂಶಸಂಕ್ಷಯಃ ॥ ೭೩ ॥

---

೬೭. ಭರ್ತೃಯಜ್ಞನು ಹೇಳುತ್ತಾನೆ:—ಆ ಉತ್ತಮ ಬ್ರಾಹ್ಮಣರು ರಾಜನ ಆ ಮಾತನ್ನು ಕೇಳಿ ನಿನ್ನ ಮಾತು ಸರಿಯಾಗಿದೆ ಎಂದರು.

೬೮. ಅದು ಮೊದಲ್ಗೊಂಡು ಆ ಬ್ರಾಹ್ಮಣರು ಭಾದ್ರಪದಕೃಷ್ಣ ತ್ರಯೋದಶೀ ದಿನ ಶ್ರಾದ್ಧಗಳನ್ನು ಮಾಡಿದರು.

೬೯–೭೦. ಜೇನು, ಕಾಲಶಾಕ, ಖಡ್ಗಮಾಂಸ ಇವುಗಳಿಂದ ತೃಪ್ತಿಗೊಂಡ ಅವರ ಪಿತೃಗಳು ಉತ್ತಮವಾದ ವಿಮಾನವನ್ನೇರಿ ವಂಶಜನು ಮಾಡಿದ ಶ್ರಾದ್ಧದ ಪ್ರಭಾವದಿಂದ ದೇವತೆಗಳೊಡನೆ ಸ್ಪರ್ಧಿಸಿದರು.

೭೧. ದೊರೆಯೆ! ಆದಿತ್ಯರು, ವಸುಗಳು, ರುದ್ರರು, ಅಶ್ವಿನೀ ದೇವತೆಗಳು ಇವರು ಭೂಲೋಕದಲ್ಲಿ, ಜನರು ಮಾಡುವ ಶ್ರಾದ್ಧದ ಪ್ರಯೋಜನವನ್ನರಿತು ಪರಸ್ಪರ ಹೀಗೆ ಆಲೋಚಿಸಿದರು.

೭೨. ಆ ದಿನ ಭೂಮಿಯಲ್ಲಿ ಶ್ರಾದ್ಧವು ಹೇಗೆ ನಡೆಯಲಾರದೊ, ಅದರ ಪ್ರಭಾವದಿಂದ ಮನುಷ್ಯರು ನಮ್ಮನ್ನು ಹೇಗೆ ತಿರಸ್ಕರಿಸಲಾರರೊ, ಹಾಗೆ ಆಗುವಂತೆ ಅವರನ್ನು ಶಪಿಸೋಣ.

೭೩–೭೪. ಇದು ಮೊದಲ್ಗೊಂಡು ಸೂರ್ಯನು ಕನ್ಯಾರಾಶಿಗತನಾಗಲು ತ್ರಯೋದಶೀ ದಿನ ಯಾವನು ಶ್ರಾದ್ಧವನ್ನು ಮಾಡುವನೊ, ಅವನ ವಂಶವು

ಇತಿ ಶಾಪೇನ ದೇವಾನಾಂ ನಿರ್ದಗ್ಧೇಯಂ ಮಹಾತಿಥಿಃ ॥ ೭೪ ॥
ತತಃ ಪ್ರಭೃತಿ ನೈತಸ್ಯಾಂ ಕ್ರಿಯತೇ ಶ್ರಾದ್ಧಮುತ್ತಮಂ ।
ಯಃ ಪ್ರಮಾದೇನ ಕುರುತೇ ತಸ್ಯ ಸ್ಯಾದ್ವಂಶಸಂಕ್ಷಯಃ ॥ ೭೫ ॥
ಯೇನ ಭೀತಾ ನ ಕುರ್ವಂತಿ ಛಾಯಾಯಾಂ ಕುಂಜರಸ್ಯ ಚ ।
ವಿಶೇಷೇಣ ಗಜಚ್ಛಾಯೇ ತತ್ರ ಪಿಂಡೋಽಯಮಾಹೃತಃ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಜಚ್ಛಾಯಾಮಾಹಾತ್ಮ್ಯವರ್ಣನಂ" ನಾಮ
ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಕ್ಷಯಿಸಲಿ. ಹೀಗೆ ದೇವತೆಗಳು ಶಾಪವನ್ನಿತ್ತು ಈ ತ್ರಯೋದಶೀ ತಿಥಿಯನ್ನು ದಹಿಸಿದರು.

೭೫. ಅದು ಮೊದಲ್ಗೊಂಡು ತ್ರಯೋದಶೀ ದಿನ ಶ್ರಾದ್ಧವನ್ನು ಮಾಡುವುದಿಲ್ಲ. ಪ್ರಮಾದದಿಂದ ಮಾಡಿದವನ ವಂಶವು ಹಾಳಾಗುವುದು.

೭೬. ಈ ಶಾಪದ ಭಯದಿಂದ ಗಜಚ್ಛಾಯಾಯೋಗವಿರುವ ಆ ತ್ರಯೋದಶೀ ದಿನ ಯಾರೂ ಪಿಂಡಪ್ರದಾನವನ್ನು ಮಾಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಜಚ್ಛಾಯಾಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

## ಶ್ರಾದ್ಧಾರ್ಹವಸ್ತುಪರಿಗಣನವರ್ಣನಂ

ಭರ್ತೃಯಜ್ಞ ಉವಾಚ :—

ಏತಸ್ಮಾತ್ಕಾರಣಾತ್ಕಶ್ಚಿತ್ತಸ್ಮಿನ್ನಹನಿ ಪಾರ್ಥಿವ ।
ದದಾತಿ ನೈವ ಚ ಶ್ರಾದ್ಧಂ ಪಿತೄನುದ್ದಿಶ್ಯ ಕರ್ಹಿಚಿತ್ ।
ವಂಶಚ್ಛೇದಭಯಾದ್ರಾಜನ್ ಸತ್ಯಮೇತನ್ಮಯೋದಿತಂ ॥ ೧ ॥
ಶ್ರಾದ್ಧಂ ವಿನಾಽಪಿ ದಾತವ್ಯಂ ತದ್ದಿನೇ ಮಧುನಾ ಸಹ ।
ಪಾಯಸಂ ಬ್ರಾಹ್ಮಣಾಗ್ರ್ಯೇಭ್ಯಃ ಸ ಘೃತಂ ತೃಪ್ತಿಕಾರಣಾತ್ ॥ ೨ ॥
ಖಡ್ಗಮಾಂಸಂ ಕಾಲಶಾಕಂ ಮಾಂಸಂ ವಾಧ್ರೀಣಸೋದ್ಭವಂ ।
ಪ್ರದೇಯಂ ಬ್ರಾಹ್ಮಣೇಭ್ಯಶ್ಚ ತತ್ಸಮಂತಾದುದಾಹೃತಂ ॥ ೩ ॥
ತ್ರಿಃ ಪಿಬಶ್ಚೇಂದ್ರಿಯಕ್ಷೀಣಃ ಸರ್ವಯೂಥಾನುಗಸ್ತಥಾ ।
ಏಷ ವಾಧ್ರೀಣಸಃ ಪ್ರೋಕ್ತಃ ಪಿತೄಣಾಂ ತೃಪ್ತಿದಃ ಸದಾ ॥ ೪ ॥
ತಸ್ಯಾಽಭಾವೇಽಪಿ ದಾತವ್ಯಂ ಕ್ಷೀರೌದನಮನುತ್ತಮಂ ।
ತಸ್ಮಿನ್ನಹನಿ ವಿಪ್ರೇಭ್ಯಃ ಪಿತೄಣಾಂ ತುಷ್ಟಯೇ ನೃಪ ॥ ೫ ॥

---

## ಕನ್ನಡದ ಅನುವಾದ

### ಶ್ರಾದ್ಧಾರ್ಹವಸ್ತುಪರಿಗಣನವರ್ಣನ

೧. ಭರ್ತೃಯಜ್ಞನು ಹೇಳುತ್ತಾನೆ:—ಅರಸ! ಈ ಕಾರಣದಿಂದ ಆ ದಿನ ವಂಶನಾಶಭಯದಿಂದ ಒಬ್ಬನೂ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡುವುದಿಲ್ಲ. ನಾನು ಹೇಳಿರುವುದು ನಿಜ.

೨. ಆ ದಿನ ಶ್ರಾದ್ಧವನ್ನು ಮಾಡದೆ ಪಿತೃಗಳ ತೃಪ್ತಿಗಾಗಿ ಮಧು, ಘೃತ, ಪಾಯಸಗಳನ್ನು ಬ್ರಾಹ್ಮಣರಿಗೆ ಕೊಡಬೇಕು.

೩. ಅಗ್ನಿವೇಶ್ಯನ ಅಭಿಪ್ರಾಯದಂತೆ ಖಡ್ಗಮಾಂಸ, ಕಾಲಶಾಕ, ಮುದಿ ಆಡಿನ ಮಾಂಸ ಇವುಗಳನ್ನು ಬ್ರಾಹ್ಮಣರಿಗೆ ಕೊಡಬೇಕು.

೪. ಮೂರುಸಾರಿ ನೀರನ್ನು ಕುಡಿಯುವುದೂ, ಕ್ಷೀಣವಾದ ಇಂದ್ರಿಯಗಳುಳ್ಳುದೂ, ಸಮಸ್ತ ಹಿಂಡುಗಳನ್ನು ಹಿಂಬಾಲಿಸುವುದೂ, ಆದ ಮುದಿ ಆಡು ವಾಧ್ರೀಣಸ ಎನ್ನಿಸಿಕೊಳ್ಳುವುದು. ಇದು ಯಾವಾಗಲೂ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು.

೫. ರಾಜನೆ! ಆ ದಿನ ಅದು ಸಿಕ್ಕದಿದ್ದರೂ ಪಿತೃತೃಪ್ತಿಗಾಗಿ ಬ್ರಾಹ್ಮಣರಿಗೆ ಕ್ಷೀರಾನ್ನವನ್ನು ದಾನ ಮಾಡಬೇಕು.

ತಸ್ಯಾಽಭಾವೇಽಪಿ ದಾತವ್ಯಂ ಜಲಂ ತಿಲವಿಮಿಶ್ರಿತಂ ।
ಸದರ್ಭಂ ಸಹಿರಣ್ಯಂ ಚ ಹಿರಣ್ಯಶಕಲಾನ್ವಿತಂ ॥ ೬ ॥
ಯಚ್ಛ್ರೇಯೋ ಜಾಯತೇ ಪುಂಸಃ ಪಕ್ಷಶ್ರಾದ್ಧೇನ ಪಾರ್ಥಿವ ।
ಕೃತೇನ ತತ್ಫಲಂ ಕೃತ್ಸ್ನಂ ತಸ್ಮಿನ್ನಹನಿ ಪಾರ್ಥಿವ ॥ ೭ ॥
ಪಿತೄನುದ್ದಿಶ್ಯ ಚಾಽಜ್ಯೇನ ಮಧುನಾ ಪಾಯಸೇನ ಚ ।
ಕಾಲಶಾಕೇನ ಮಧುನಾ ಖಡ್ಗಮಾಂಸೇನ ವಾ ನೃಪ ॥ ೮ ॥
ಶ್ರಾದ್ಧಂ ವಿನಾಽಪಿ ದತ್ತೇನ ಶ್ರುತಿರೇಷಾ ಪುರಾತನೀ ।
ತಸ್ಮಾತ್ಸರ್ವಪ್ರಯತ್ನೇನ ಪಿತ್ರರ್ಕ್ಷೇ ಸಮುಪಸ್ಥಿತೇ ।
ತ್ರಯೋದಶ್ಯಾಂ ನಭಸ್ಯಸ್ಯ ಹಸ್ತಗೇ ದಿನನಾಯಕೇ ॥ ೯ ॥
ದರಿದ್ರೇಣಾಽಪಿ ದಾತವ್ಯಂ ಹಿರಣ್ಯಶಕಲಾನ್ವಿತಂ ।
ತೋಯಂ ತಿಲೈರ್ಯುತಂ ರಾಜನ್ ಪಿತೄಣಾಂ ತುಷ್ಟಿಮಿಚ್ಛತಾ ॥ ೧೦ ॥

ಆನರ್ತ ಉವಾಚ :—

ಮಾಂಸಂ ವಿಗರ್ಹಿತಂ ವಿಪ್ರ ಯತಃ ಶಾಸ್ತ್ರೇ ನಿಗದ್ಯತೇ ।
ತಸ್ಮಾತ್ತತ್ಕ್ರಿಯತೇ ತೇನ ಶ್ರಾದ್ಧಂ ಕೀರ್ತಯ ಮೇಽಖಿಲಂ ॥ ೧೧ ॥
ಸ್ವಮಾಂಸಂ ಪರಮಾಂಸೇನ ಯೋ ವರ್ಧಯತಿ ನಿರ್ದಯಃ ।
ಸ ನೂನಂ ನರಕಂ ಯಾತಿ ಪ್ರೋಕ್ತಮೇತನ್ಮಹರ್ಷಿಭಿಃ ॥ ೧೨ ॥

---

೬. ಅದು ಇಲ್ಲದಿದ್ದರೂ ದರ್ಭೆ, ಎಳ್ಳು, ಚಿನ್ನದ ಚೂರುಗಳಿಂದ ಸಹಿತವಾದ ನೀರನ್ನಾದರೂ ಕೊಡಬೇಕು.

೭–೧೦. ಆ ಒಂದು ದಿನ ಹೀಗೆ ಪಿತೃಗಳನ್ನುದ್ದೇಶಿಸಿ ಶ್ರಾದ್ಧವಿಲ್ಲದೆ ಆಜ್ಯ, ಮಧು, ಪಾಯಸ, ಕಾಲಶಾಕ, ಖಡ್ಗಮಾಂಸಗಳನ್ನು ಸಮರ್ಪಿಸಿದರೆ ಒಂದು ಪಕ್ಷ ಶ್ರಾದ್ಧ ಮಾಡಿದ ಫಲವು ದೊರೆಯುವುದು ಎಂದು ಪುರಾತನ ಶ್ರುತಿಯಿರುವುದು. ಆದುದರಿಂದ ದರಿದ್ರನಾದರೂ ಭಾದ್ರಪದ ಬಹುಳ ತ್ರಯೋದಶೀ ದಿನ ಮಘಾ ನಕ್ಷತ್ರದಲ್ಲಿ ಚಂದ್ರನೂ, ಹಸ್ತಾ ನಕ್ಷತ್ರದಲ್ಲಿ ಸೂರ್ಯನೂ ಇರುವಾಗ ಪಿತೃತೃಪ್ತಿಯನ್ನು ಅಪೇಕ್ಷಿಸುವವನು ತಿಲಹಿರಣ್ಯ ಸಹಿತವಾದ ನೀರಿನಿಂದ ತರ್ಪಣ ಮಾಡಬೇಕು.

೧೧. ಆನರ್ತನು ಹೇಳುತ್ತಾನೆ:—ದ್ವಿಜನೆ! ಮಾಂಸವು ನಿಂದ್ಯವಾದುದೆಂದು ಶಾಸ್ತ್ರವು ಸಾರುತ್ತಿದೆ. ಆದುದರಿಂದ ಆ ಮಾಂಸದಿಂದ ಏಕೆ ಶ್ರಾದ್ಧವನ್ನು ಮಾಡುತ್ತಾರೆ? ಎಲ್ಲವನ್ನೂ ನನಗೆ ಹೇಳು.

೧೨. ನಿರ್ದಯನಾಗಿ ತನ್ನ ಮಾಂಸವನ್ನು ಪರಮಾಂಸದಿಂದ ಹೆಚ್ಚಿಸಿಕೊಳ್ಳುವವನು ನಿಶ್ಚಯವಾಗಿಯೂ ನರಕಭಾಗಿಯಾಗುವನೆಂದು ಮಹರ್ಷಿಗಳು ಹೇಳುತ್ತಾರಲ್ಲವೆ?

ತ್ವಂ ಚ ತಸ್ಯ ಪ್ರಭಾವಂ ಮೇ ಪ್ರಜಲ್ಪಸಿ ದ್ವಿಜೋತ್ತಮ ।
ವಿಶೇಷಾಚ್ಛ್ರಾದ್ಧಕೃತ್ಯೇ ಚ ತದೇವಂ ಮಮ ಸಂಶಯಃ ॥ ೧೩ ॥
ಭರ್ತೃಯಜ್ಞ ಉವಾಚ :—
ಸತ್ಯಮೇತನ್ಮಹಾಭಾಗ ಮಾಂಸಂ ಸದ್ಭಿರ್ವಿಗರ್ಹಿತಂ ।
ಶ್ರಾದ್ಧೇ ಪ್ರಯುಜ್ಯತೇ ಯಸ್ಮಾತ್ತತ್ತೇಽಹಂ ವಚ್ಮಿ ಕಾರಣಂ ॥ ೧೪ ॥
ಯದಾ ಚಾಽಽರಂಭಿತಾ ಸೃಷ್ಟಿರ್ಬ್ರಹ್ಮಣಾ ಲೋಕಕಾರಿಣಾ ।
ಸಂಪೂಜ್ಯ ಚ ಪಿತೄನ್ ದೇವಾನ್ ನಾಂದೀಮುಖಪುರಸ್ಸರಾನ್ ।
ತದಾ ಖಡ್ಗಃ ಸಮುತ್ಪನ್ನಃ ಪೂರ್ವಂ ವಾಧ್ರೀಣಸಸ್ತ್ವಯಃ ॥ ೧೫ ॥
ತತೋ ಯೇ ಪಿತರೋ ದಿವ್ಯಾ ಯೇ ಚ ಮಾನುಷಸಂಭವಾಃ ।
ಜಗೃಹುಸ್ತೇ ತತಃ ಸರ್ವೇ ಬಲಿಭೂತನಿಮಾತ್ಮನಃ ॥ ೧೬ ॥
ತಾನುವಾಚ ತತೋ ಬ್ರಹ್ಮಾ ಏತೌ ತು ಪಿತರೋ ಮಯಾ ।
ಯುಷ್ಮಭ್ಯಂ ಕಲ್ಪಿತೌ ಸಮ್ಯಗ್ಬಲಿಭೂತೌ ಪ್ರಗೃಹ್ಯತಾಂ ॥ ೧೭ ॥
ಏತಾಭ್ಯಾಂ ಪರಮಾ ಪ್ರೀತಿರ್ಯುಷ್ಮಭ್ಯಂ ಸಂಭವಿಷ್ಯತಿ ।
ಮಮ ವಾಕ್ಯಾದಸಂದಿಗ್ಧಂ ಪರಮೇತೌ ನರೋ ಭುವಿ ॥ ೧೮ ॥
ನೈವ ಸಂಪ್ರಾಪ್ಸ್ಯತೇ ಪಾಪಂ ಯುಷ್ಮದರ್ಥಂ ಹನನ್ನಪಿ ।
ತಸ್ಮಾತ್ಸರ್ವಪ್ರಯತ್ನೇನ ದಾತವ್ಯಂ ಭೂತಿಮಿಚ್ಛತಾ ॥ ೧೯ ॥

---

೧೩. ನೀನು ಆ ಮಾಂಸದ ಪ್ರಭಾವವನ್ನೇ ವಿಶೇಷವಾಗಿ ಹೇಳುತ್ತಿರುವೆ. ಆದುದರಿಂದಲೇ ನನಗೆ ಸಂದೇಹವುಂಟಾಗಿರುವುದು.

೧೪. ಭರ್ತೃಯಜ್ಞನು ಹೇಳುತ್ತಾನೆ:—ಭಾಗ್ಯವಂತನೆ! ಸಜ್ಜನರು ಮಾಂಸವನ್ನು ನಿಂದಿಸಿರುವರೆಂಬುದು ನಿಜ. ಆದರೂ ಶ್ರಾದ್ಧದಲ್ಲಿ ಅದನ್ನು ಏಕೆ ಉಪಯೋಗಿಸುತ್ತಾರೆ ಎಂಬುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು.

೧೫. ಸೃಷ್ಟಿಕರ್ತನಾದ ಬ್ರಹ್ಮನು ಮನುಷ್ಯದೇವಪಿತೃಗಳನ್ನು ಆರಾಧಿಸಿ ಜಗತ್ತಿನ ಸೃಷ್ಟಿಯನ್ನಾರಂಭಿಸಲು ಮೊದಲು ಖಡ್ಗಮೃಗವೂ, ಅನಂತರ ವಾಧ್ರೀಣಸವೂ ಹುಟ್ಟಿತು.

೧೬. ಅನಂತರ ದೇವಮಾನವ ಪಿತೃಗಳು ಆ ಮೃಗಗಳನ್ನು ತಮಗೆ ಬಲಿಯಾಗುವಂತೆ ಪರಿಗ್ರಹಿಸಿದರು.

೧೭. ಬ್ರಹ್ಮನು ಆ ಪಿತೃಗಳನ್ನು ಕುರಿತು ಇವುಗಳನ್ನು ನಿಮ್ಮ ಬಲಿಗಾಗಿ ಕಲ್ಪಿಸಿರುವೆನು. ಸ್ವೀಕರಿಸಿರಿ.

೧೮—೨೦. ಇವುಗಳಿಂದ ನಿಮಗೆ ಅತಿಶಯ ತೃಪ್ತಿಯಾಗುವುದು. ನನ್ನ ಮಾತಿನಿಂದ ಮಾನವನು ಇವುಗಳನ್ನು ನಿಮಗಾಗಿ ಕೊಂದರೂ ಪಾಪವನ್ನು ಹೊಂದುವುದಿಲ್ಲ. ಆದುದರಿಂದ ಐಶ್ವರ್ಯವನ್ನು ಬಯಸುವವನು ಶ್ರಾದ್ಧದಲ್ಲಿ

ಖಡ್ಗವಾಧ್ರೀಣಸೋದ್ಭೂತಂ ಮಾಂಸಂ ಶ್ರಾದ್ಧೇ ಸುತೃಪ್ತಿದಂ ।
ತೌ ಚಾಽಪಿ ಪರಮೌ ದಿವ್ಯೌ ಸ್ವರ್ಗಂ ಲೋಕಂ ಗಮಿಷ್ಯತಃ ॥ ೨೦ ॥
ಶ್ರಾದ್ಧದಸ್ಯ ಪರಂ ಶ್ರೇಯೋ ಭವಿಷ್ಯತಿ ಸುದುರ್ಲಭಂ ।
ಪಿತೄಣಾಂ ಚಾಽಕ್ಷಯಾ ತೃಪ್ತಿರ್ಭವೇದ್ದ್ವಾದಶವಾರ್ಷಿಕೀ ॥ ೨೧ ॥
ಏತಸ್ಮಾತ್ಕಾರಣಾಚ್ಛ್ರೇಷ್ಠಂ ಮಾಂಸಮಾಭ್ಯಾಂ ಸರಾಧಿಪ ।
ತಸ್ಮಿನ್ನಹನಿ ನಾಽನ್ಯತ್ರ ವಿನಿಯೋಗೋಽಸ್ಯ ಕೀರ್ತಿತಃ ॥ ೨೨ ॥

ರೋಹಿತಾಶ್ವ ಉವಾಚ:—

ಅಪ್ರಾಪ್ತ ಖಡ್ಗಮಾಂಸಸ್ಯ ತಥಾ ವಾಧ್ರೀಣಸಸ್ಯ ಚ ।
ಕಥಂ ಶ್ರಾದ್ಧಂ ಭವೇದ್ವಿಪ್ರ ಪಿತೄಣಾಂ ತೃಪ್ತಿಕಾರಕಂ ॥ ೨೩ ॥

ಮಾರ್ಕಂಡೇಯ ಉವಾಚ:—

ಮಧುನಾ ಸಹ ದಾತವ್ಯಂ ಪಾಯಸಂ ಪಿತೃತುಷ್ಟಯೇ ।
ತೇನ ವೈ ವಾರ್ಷಿಕೀ ತೃಪ್ತಿಃ ಪಿತೄಣಾಂ ಚೋಪಜಾಯತೇ ॥ ೨೪ ॥
ಅಜಂ ಚ ಪಿಶಿತಂ ರಾಜಂಛಿಂಶುಮಾರಸಮುದ್ಭವಂ ।
ಮಾಂಸಂ ಪ್ರತುಷ್ಟಯೇ ಪ್ರೋಕ್ತಂ ವತ್ಸರಂ ವಾಸವರ್ಜಿತಂ ॥ ೨೫ ॥
ತದಭಾವೇ ವರಾಹಸ್ಯ ದಶಮಾಸ ಪ್ರತುಷ್ಟಿದಂ ।
ಮಾಂಸಂ ಪ್ರೋಕ್ತಂ ಮಹಾರಾಜ ಪಿತೄಣಾಂ ನಾಽತ್ರ ಸಂಶಯಃ ॥೨೬॥

---

ಅತ್ಯಂತ ತೃಪ್ತಿಯನ್ನೀಯುವ ಖಡ್ಗವಾಧ್ರೀಣಸಗಳ ಮಾಂಸವನ್ನು ಕೊಡಬೇಕು. ಅವೂ ಅದರಿಂದ ಸ್ವರ್ಗಲೋಕವನ್ನು ಸೇರುವುವು.

೨೧. ಶ್ರಾದ್ಧವನ್ನು ಮಾಡುವವನಿಗೆ ದುರ್ಲಭ ಶ್ರೇಯಸ್ಸೂ, ಪಿತೃಗಳಿಗೆ ಹನ್ನೆರಡು ವರ್ಷಕಾಲ ಅಕ್ಷಯತೃಪ್ತಿಯೂ ಆಗುವುದು.

೨೨. ಈ ಕಾರಣದಿಂದ ಇವುಗಳ ಮಾಂಸವು ಆ ದಿನ ಮಾತ್ರ ಶ್ರೇಷ್ಠವಾಗಿರುವುದು. ಬೇರೆ ದಿನಗಳಲ್ಲಿ ಉಪಯೋಗಿಸಬಾರದು.

೨೩. ರೋಹಿತಾಶ್ವನು ಹೇಳುತ್ತಾನೆ:—ಖಡ್ಗ, ವಾಧ್ರೀಣಸ ಮಾಂಸಗಳು ಸಿಕ್ಕದಿರುವಾಗ ಶ್ರಾದ್ಧವು ಪಿತೃಗಳಿಗೆ ಹೇಗೆ ತೃಪ್ತಿಯನ್ನುಂಟುಮಾಡುವುದು?

೨೪. ಮಾರ್ಕಂಡೇಯನು ಹೇಳುತ್ತಾನೆ:—ಆಗ ಮಧುವಿನೊಡನೆ ಪಾಯಸವನ್ನು ಪಿತೃತುಷ್ಟಿಗಾಗಿ ಕೊಡಬೇಕು. ಅದರಿಂದ ಪಿತೃಗಳಿಗೆ ಒಂದು ವರ್ಷಕಾಲ ತೃಪ್ತಿಯಾಗುವುದು.

೨೫. ಆಡು ಮತ್ತು ಶಿಂಶುಮಾರಗಳ ಮಾಂಸವು ಹನ್ನೊಂದು ತಿಂಗಳುಕಾಲ ತೃಪ್ತಿಯನ್ನುಂಟುಮಾಡುವುದು.

೨೬. ಅದು ಸಿಕ್ಕದಿದ್ದಲ್ಲಿ ಹಂದಿಯ ಮಾಂಸವು ಪಿತೃಗಳಿಗೆ ಹತ್ತು ತಿಂಗಳು ತೃಪ್ತಿಯನ್ನುಂಟುಮಾಡುವುದು.

ಆರಣ್ಯಮಹಿಷೋತ್ಥೇನ ತೃಪ್ತಿಸ್ಸ್ಯಾನ್ನವಮಾಸಿಕೀ ।
ರುರೋಶ್ಚೈವಾಷ್ಟಮಾಸೋತ್ಥಾ ಏಣಸ್ಯ ಸಪ್ತಮಾಸಿಕಾ ॥ ೨೭ ॥
ಶಂಬರೋಮಾಂಸಷಟ್ಕಂ ಚ ಶಶಕಸ್ಯ ತು ಪಂಚಕಂ ।
ಚತ್ವಾರಃ ಶಲ್ಲಕಸ್ಯೋಕ್ತಾಸ್ತ್ರಯೋ ವಾ ತೈತ್ತಿರಸ್ಯ ಚ ॥ ೨೮ ॥
ಮಾಸದ್ವಯಂ ಚ ಮತ್ಸ್ಯಸ್ಯ ಮಾಸಮೇಕಂ ಕಪಿಂಜಲೇ ।
ನಾಽನ್ಯೇಷಾಂ ಯೋಜಯೇನ್ಮಾಂಸಂ ಪಿತೃಕಾರ್ಯೇ ಕಥಂಚನ ॥ ೨೯ ॥
ಏತೇಷಾಮೇವ ಮಾಂಸಾನಿ ಪಾವನಾನಿ ನೃಪೋತ್ತಮ ॥ ೩೦ ॥

ಆನರ್ತ ಉವಾಚ:—

ಕಸ್ಮಾದೇತೇ ಪವಿತ್ರಾಸ್ಸ್ಯುರ್ಯೇಷಾಂ ಮಾಂಸಂ ಪ್ರಚೋದಿತಂ ।
ಶ್ರಾದ್ಧೇ ಚ ತನ್ಮಮಾಚಕ್ಷ್ವ ಯಥಾವದ್ದ್ವಿಜಸತ್ತಮ ॥ ೩೧ ॥

ಭರ್ತೃಯಜ್ಞ ಉವಾಚ:—

ಸೃಷ್ಟಿಂ ಪ್ರಕುರ್ವತಾ ತೇನ ಪಶವೋ ಲೋಕಕಾರಿಣಾ ।
ಖಡ್ಗವಾಧ್ರೀಣಸಾದೀನಾಂ ಪಶ್ಚಾತ್ಸೃಷ್ಟಾಃ ಸ್ವಯಂಭುವಾ ॥ ೩೨ ॥
ಏಕಾದಶಪ್ರಮಾಣೇನ ತತಶ್ಚಾಽನ್ಯೇ ನೃಪೋತ್ತಮ ।
ಅಜಶ್ಚ ಪ್ರಥಮಂ ಸೃಷ್ಟಃ ಸ ತಥಾ ಮೇಧ್ಯತಾಂ ಗತಃ ॥ ೩೩ ॥

---

೨೭–೨೯. ಕಾಡುಕೋಣದ ಮಾಂಸದಿಂದ ಒಂಬತ್ತು ತಿಂಗಳ ತೃಪ್ತಿಯೂ, ರುರುವಿನ ಮಾಂಸದಿಂದ ಎಂಟು ತಿಂಗಳ ತೃಪ್ತಿಯೂ, ಜಿಂಕೆಯ ಮಾಂಸದಿಂದ ಏಳು ತಿಂಗಳ ತೃಪ್ತಿಯೂ, ಶಂಬರ ಮಾಂಸದಿಂದ ಆರು ತಿಂಗಳ ತೃಪ್ತಿಯೂ, ಮೊಲದ ಮಾಂಸದಿಂದ ಐದು ತಿಂಗಳ ತೃಪ್ತಿಯೂ, ಶಲ್ಲಕದ ಮಾಂಸದಿಂದ ನಾಲ್ಕು ತಿಂಗಳ ತೃಪ್ತಿಯೂ, ತಿತ್ತಿರಿಪಕ್ಷಿಯ ಮಾಂಸದಿಂದ ಮೂರು ತಿಂಗಳ ತೃಪ್ತಿಯೂ, ಮೀನಿನ ಮಾಂಸದಿಂದ ಎರಡು ತಿಂಗಳ ತೃಪ್ತಿಯೂ, ಕಪಿಂಜಲದ ಮಾಂಸದಿಂದ ಒಂದು ತಿಂಗಳ ತೃಪ್ತಿಯೂ ಆಗುವುದು. ಬೇರೆ ಪ್ರಾಣಿಗಳ ಮಾಂಸವನ್ನು ಪಿತೃಕಾರ್ಯದಲ್ಲಿ ಉಪಯೋಗಿಸಬಾರದು.

೩೦. ದೊರೆಯೆ! ಇವುಗಳ ಮಾಂಸಗಳೇ ಪವಿತ್ರವಾದುವು.

೩೧. ಆನರ್ತನು ಹೇಳುತ್ತಾನೆ:—ಮುನಿಯೆ! ಇವುಗಳ ಮಾಂಸವು ಶ್ರಾದ್ಧಕ್ಕೆ ವಿಹಿತವಾಗಿರುವುದಷ್ಟೆ. ಇವು ಹೇಗೆ ಪವಿತ್ರವಾದುವು? ಅದನ್ನು ನಿಜವಾಗಿ ಹೇಳು.

೩೨–೩೩. ಭರ್ತೃಯಜ್ಞನು ಹೇಳುತ್ತಾನೆ:— ಲೋಕವನ್ನು ಸೃಷ್ಟಿಸುವ ಬ್ರಹ್ಮನು ಇತರ ಹನ್ನೊಂದು ಮೃಗಗಳನ್ನು ಖಡ್ಗ ವಾಧ್ರೀಣಸಾದಿ ಮೃಗಗಳನ್ನು ಸೃಷ್ಟಿಸಿದ ತರುವಾಯ ಸೃಷ್ಟಿ ಮಾಡಿದನು. ಆಡನ್ನು ಮೊದಲು ಸೃಷ್ಟಿಸಿದ್ದರಿಂದ ಆಡು ಪವಿತ್ರವಾಯಿತು.

ತಥೈತೇ ಪ್ರಥಮಂ ಸೃಷ್ಟಾಃ ಪಶವೋಽತ್ರ ನರಾಧಿಪ ।
ಸಸ್ಯಾನಿ ಸೃಜತಾ ತೇನ ತಿಲಾಃ ಪೂರ್ವಂ ಚ ನಿರ್ಮಿತಾಃ ॥ ೩೪ ॥
ಶ್ರಾದ್ಧಾರ್ಥಂ ವ್ರೀಹಯಃ ಸೃಷ್ಟಾ ವನ್ಯೇಷು ಚ ಪ್ರಿಯಂಗವಃ ।
ಗೋಧೂಮಾಶ್ಚ ಯವಾಶ್ಚೈವ ಮಾಷಾ ಮುದ್ಗಾಶ್ಚ ವೈ ನೃಪಂ ॥ ೩೫ ॥
ನೀವಾರಾಶ್ಚಾಽಪಿ ಶ್ಯಾಮಾಕಾಃ ಪ್ರವಕ್ಷ್ಯಾಮಿ ಯಥಾಕ್ರಮಂ ।
ತೃಪ್ತಿಂ ಮಾಂಸೇನ ವಾಂಛಂತಿ ಮಾಂಸಂ ಮಾಂಸೇನ ವರ್ಜಿತಂ ॥ ೩೬ ॥
ಪುಷ್ಪಜಾತ್ಯೋ ಯದಾ ಸೃಷ್ಟಾಸ್ತದಾ ಪ್ರಾಕ್ಪತಪತ್ರಿಕಾ ।
ಸೃಷ್ಟಾ ತೇನ ಚ ಮುಖ್ಯಾ ಸಾ ಶ್ರಾದ್ಧಕರ್ಮಣಿ ಸರ್ವದಾ ॥ ೩೭ ॥
ಧಾತೂನಿ ಸೃಜತಾ ತೇನ ರೂಪ್ಯಂ ಸೃಷ್ಟಂ ಸ್ವಯಂಭುವಾ ।
ತೇನ ತದ್ವಿಹಿತಂ ಶ್ರಾದ್ಧೇ ದಕ್ಷಿಣಾಯಾಂ ಪ್ರತೃಪ್ತಯೇ ॥ ೩೮ ॥
ರಾಜತೇಷು ಚ ಪಾತ್ರೇಷು ಯದ್ದ್ವಿಜೇಭ್ಯಃ ಪ್ರದೀಯತೇ ।
ಪಿತೃಭ್ಯಸ್ತಸ್ಯ ನೈವಾಽಂತೋ ಯುಗಾಂತೇಽಪಿ ಪ್ರಜಾಯತೇ ॥ ೩೯ ॥
ಅಭಾವೇ ರೂಪ್ಯಪಾತ್ರಾಣಾಂ ನಾಮಾಽಪಿ ಪರಿಕೀರ್ತಯೇತ್ ।
ತುಷ್ಯಂತಿ ಪಿತರೋ ರಾಜನ್ ಕೀರ್ತನಾದಪಿ ವೈ ಯತಃ ॥ ೪೦ ॥

---

೩೪. ಹಾಗೆಯೇ ಮೊದಲು ಸೃಷ್ಟಿಮಾಡಿದ ಪಶುಗಳು ಪವಿತ್ರವಾದುವು. ಆ ಬ್ರಹ್ಮನು ಸಸ್ಯಗಳನ್ನು ಸೃಷ್ಟಿಮಾಡುವಾಗ ಮೊದಲು ಎಳ್ಳಿನ ಗಿಡಗಳನ್ನು ಸೃಜಿಸಿದನು.

೩೫–೩೬. ಅವನು ಶ್ರಾದ್ಧಕ್ಕಾಗಿ ಭತ್ತಗಳನ್ನೂ, ಕಾಡಿನ ಸಸ್ಯಗಳಲ್ಲಿ ಪಿಯಂಗು, ಗೋಧಿ, ಯವ, ಉದ್ದು, ಹೆಸರು, ನೀವಾರ, ಶ್ಯಾಮಾಕಗಳನ್ನೂ ಸೃಷ್ಟಿಸಿದನು. ಪಿತೃಗಳು ಮಾಂಸಾಹಾರಿಗಳಲ್ಲದ ಪ್ರಾಣಿಗಳ ಮಾಂಸಗಳಿಂದ ತೃಪ್ತಿಗೊಳ್ಳುವರು.

೩೭. ಪುಷ್ಪಜಾತಿಯಲ್ಲಿ ಮೊದಲು ತಾವರೆಯನ್ನು ಸೃಷ್ಟಿಮಾಡಿದ್ದರಿಂದ ಅದು ಶ್ರಾದ್ಧಕ್ಕೆ ಮುಖ್ಯವಾಗಿರುವುದು.

೩೮. ಲೋಹಗಳನ್ನು ಸೃಷ್ಟಿಮಾಡುವ ಬ್ರಹ್ಮನು ಬೆಳ್ಳಿಯನ್ನು ಮೊದಲು ಸೃಷ್ಟಿಸಿದನು. ಆದುದರಿಂದ ಶ್ರಾದ್ಧದಲ್ಲಿ ಅದು ದಕ್ಷಿಣೆಗಾಗಿ ವಿಹಿತವಾಗಿರುವುದು.

೩೯. ಬೆಳ್ಳಿಯ ಪಾತ್ರೆಯಲ್ಲಿ ಬ್ರಾಹ್ಮಣರಿಗೆ ದಾನ ಮಾಡಿದ್ದರಿಂದ ಆಗುವ ತೃಪ್ತಿಯು ಯುಗಾವಸಾನದಲ್ಲಿಯೂ ಕೊನೆಗೊಳ್ಳುವುದಿಲ್ಲ.

೪೦. ಬೆಳ್ಳಿಯ ಪಾತ್ರೆಗಳು ಇಲ್ಲದಿದ್ದಲ್ಲಿ ಅದರ ಹೆಸರನ್ನಾದರೂ ಹೇಳಬೇಕು. ಹಾಗೆ ಹೇಳುವುದರಿಂದ ಪಿತೃಗಳು ತೃಪ್ತಿಗೊಳ್ಳುವರು.

ರಸಾಂಶ್ಚ ಸೃಜತಾ ತೇನ ಮಧು ಸೃಷ್ಟಂ ಸ್ವಯಂಭುವಾ ।
ತೇನ ತಚ್ಛ್ರೇಷ್ಠತಂ ಶ್ರಾದ್ಧೇ ಪಿತೄಣಾಂ ತುಷ್ಟಿದಾಯಕಂ ॥ ೪೧ ॥
ಯಚ್ಛ್ರಾದ್ಧಂ ಮಧುನಾ ಹೀನಂ ತದ್ರಸೈಃ ಸಕಲೈರಪಿ ।
ಮಿಷ್ಟಾನ್ನೈರಪಿ ಸಂಯುಕ್ತಂ ತತ್ಪಿತೄಣಾಂ ನ ತೃಪ್ತಯೇ ॥ ೪೨ ॥
ಅಣುಮಾತ್ರಮಪಿ ಶ್ರಾದ್ಧೇ ಯದಿ ನಸ್ಯಾದ್ಧಿ ಮಾಕ್ಷಿಕಂ ।
ನಾಮಾಽಪಿ ಕೀರ್ತಯೇತ್ತಸ್ಯ ಪಿತೄಣಾಂ ತುಷ್ಟಯೇ ಽಮತಃ ॥ ೪೩ ॥
ಶಾಕಾನಿ ಸೃಜತಾ ತೇನ ಬ್ರಹ್ಮಣಾ ಪರಮೇಷ್ಠಿನಾ ।
ಕಾಲಶಾಕಂ ಪುರಃಸೃಷ್ಟಂ ತೇನ ತತ್ತೃಪ್ತಿದಾಯಕಂ ॥ ೪೪ ॥
ಕಾಲಂ ಹಿ ಸೃಜತಾ ತೇನ ಕುತಪಃ ಪ್ರಾಗ್ವಿನಿರ್ಮಿತಃ ।
ತಸ್ಮಾತ್ಕುತಪಕಾಲೇ ಚ ಶ್ರಾದ್ಧಂ ಕಾರ್ಯಂ ವಿಜಾನತಾ ।
ಯ ಇಚ್ಛೇಚ್ಛಾಶ್ವತೀಂ ತೃಪ್ತಿಂ ಪಿತೄಣಾಮಾತ್ಮನಃ ಸುಖಂ ॥ ೪೫ ॥
ವೀರುಧಃ ಸೃಜತಾ ತೇನ ವಿಧಿನಾ ನೃಪಸತ್ತಮ ।
ದರ್ಭಾಸ್ತು ಪ್ರಥಮಂ ಸೃಷ್ಟಾಃ ಶ್ರಾದ್ಧಾರ್ಹಾಸ್ತೇನ ತೇ ಸ್ಮೃತಾಃ ॥ ೪೬ ॥
ಶ್ರಾದ್ಧಾರ್ಹಾನ್ ಬ್ರಾಹ್ಮಣಾಂಸ್ತೇನ ಸೃಜತಾ ಪದ್ಮಯೋನಿನಾ ।
ದೌಹಿತ್ರಾಃ ಪ್ರಥಮಂ ಸೃಷ್ಟಾಃ ಶ್ರಾದ್ಧಾರ್ಹಾಸ್ತೇನ ತೇ ಸ್ಮೃತಾಃ ॥ ೪೭ ॥

---

೪೧. ಬ್ರಹ್ಮನು ರಸಗಳನ್ನು ಸೃಷ್ಟಿಸುವಾಗ ಜೇನನ್ನು ಸೃಷ್ಟಿಸಿದನು. ಅದು ಶ್ರಾದ್ಧದಲ್ಲಿ ಪಿತೃಗಳಿಗೆ ಸಂತೋಷವನ್ನುಂಟುಮಾಡುವುದರಿಂದ ಶ್ರೇಷ್ಠವಾದುದು.

೪೨. ಶ್ರಾದ್ಧವು ಜೇನನ್ನು ಬಿಟ್ಟು ಇತರ ಸಮಸ್ತ ರಸಗಳಿಂದಲೂ, ಮಿಷ್ಟಾನ್ನಗಳಿಂದಲೂ ಸಹಿತವಾಗಿದ್ದರೂ ಅದರಿಂದ ಪಿತೃಗಳಿಗೆ ತೃಪ್ತಿಯಾಗುವುದಿಲ್ಲ.

೪೩. ಶ್ರಾದ್ಧದಲ್ಲಿ ಪರಿಮಾಣದಷ್ಟೂ ಜೇನುತುಪ್ಪವಿಲ್ಲದಿದ್ದರೆ ಅದರ ಹೆಸರನ್ನಾದರೂ ಹೇಳಬೇಕು. ಅದರಿಂದ ಪಿತೃಗಳಿಗೆ ತೃಪ್ತಿಯಾಗುವುದು.

೪೪. ಬ್ರಹ್ಮನು ಶಾಕಗಳನ್ನು ಸೃಷ್ಟಿಸುವಾಗ ಕಾಲಶಾಕವನ್ನು ಮೊದಲು ಸೃಷ್ಟಿಮಾಡಿದನು. ಆದುದರಿಂದ ಅದು ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದು.

೪೫. ಬ್ರಹ್ಮನು ಕಾಲವನ್ನು ಸೃಷ್ಟಿಸುವಾಗ ಮೊದಲು ಕುತಪಕಾಲವನ್ನು ಸೃಷ್ಟಿಮಾಡಿದನು. ಆದುದರಿಂದ ಪಿತೃಗಳಿಗೆ ಶಾಶ್ವತ ತೃಪ್ತಿಯನ್ನೂ, ತನಗೆ ಸುಖವನ್ನೂ ಬಯಸುವವನು ಕುತಪಕಾಲದಲ್ಲಿ ಶ್ರಾದ್ಧಗೈಯ್ಯಬೇಕು.

೪೬. ಬಳ್ಳಿಗಳನ್ನು ಸೃಷ್ಟಿಸುವಾಗ ಬ್ರಹ್ಮನು ಮೊದಲು ದರ್ಭೆಗಳನ್ನು ಸೃಜಿಸಿದನು. ಆದುದರಿಂದ ಅವು ಶ್ರಾದ್ಧಯೋಗ್ಯವಾಗಿರುವುವು.

೪೭. ಬ್ರಹ್ಮನು ಶ್ರಾದ್ಧಾರ್ಹರಾದ ಬ್ರಾಹ್ಮಣರನ್ನು ಸೃಷ್ಟಿಸುವಾಗ ದೌಹಿತ್ರರನ್ನು ಮೊದಲು ಸೃಷ್ಟಿಸಿದನು. ಆದುದರಿಂದ ಅವರು ಶ್ರಾದ್ಧಾರ್ಹರು.

ಅಪಿಶೌಚ ಪರಿತ್ಯಕ್ತಂ ಹೀನಾಂಗಾಧಿಕಮೇವ ವಾ ।
ದೌಹಿತ್ರಂ ಯೋಜಯೇಚ್ಛ್ರಾದ್ಧೇ ಪಿತೄಣಾಂ ಪರಿತುಷ್ಟಯೇ ॥ ೪೮ ॥
ಪಶೂನ್ ವಿಸೃಜತಾ ತೇನ ಪೂರ್ವಂ ಗಾವೋ ವಿನಿರ್ಮಿತಾಃ ।
ತೇನ ತಾಸಾಂ ಪಯಃ ಶಸ್ತಂ ಶ್ರಾದ್ಧೇ ಸರ್ಪಿರ್ವಿಶೇಷತಃ ॥ ೪೯ ॥
ತಸ್ಮಾಚ್ಛ್ರಾದ್ಧೇ ಘೃತಂ ಶಸ್ತಂ ಪ್ರದತ್ತಂ ಪಿತೃತುಷ್ಟಯೇ ॥ ೫೦ ॥
ಪ್ರಜಾಶ್ಚ ಸೃಜತಾ ತೇನ ಪೂರ್ವಂ ಸೃಷ್ಟಾ ದ್ವಿಜೋತ್ತಮಾಃ ।
ತಸ್ಮಾತ್ಪ್ರಶಸ್ತಾಸ್ತೇ ಶ್ರಾದ್ಧೇ ಪಿತೃತೃಪ್ತಿಕರಾಃ ಸದಾ ॥ ೫೧ ॥
ದೇವಾಂಶ್ಚ ಸೃಜತಾ ತೇನ ವಿಶ್ವೇದೇವಾಃ ಕೃತಾಃ ಪುರಃ ।
ತೇನ ತೇ ಪ್ರಥಮಂ ಪೂಜ್ಯಾಃ ಪ್ರವೃತ್ತೇ ಶ್ರಾದ್ಧಕರ್ಮಣಿ ॥ ೫೨ ॥
ತೇ ರಕ್ಷಂತಿ ತತಃ ಶ್ರಾದ್ಧಂ ಯಥಾವತ್ಪರಿತರ್ಪಿತಾಃ ।
ಛಿದ್ರಾಣಿ ನಾಶಯಂತಿಸ್ಮ ಶ್ರಾದ್ಧೇ ಪೂರ್ವಂ ಪ್ರಪೂಜಿತಾಃ ॥ ೫೩ ॥
ಏತೈರ್ಮುಖ್ಯತಮೈಃ ಸೃಷ್ಟೈಃ ಪುರಾ ಶ್ರಾದ್ಧಂ ವಿನಿರ್ಮಿತಂ ।
ಸ್ವಯಂ ಪಿತಾಮಹೇನೈವ ತತೋ ದೇವಾ ವಿನಿರ್ಮಿತಾಃ ॥ ೫೪ ॥
ತೇನ ತೇ ಸರ್ವಲೋಕೇಷು ಗತಾಃ ಖ್ಯಾತಿಂ ಪುರಾ ನೃಪ ॥ ೫೫ ॥

---

೪೮. ದೌಹಿತ್ರನು ಹೀನಾಂಗನಾಗಲಿ, ಅಧಿಕಾಂಗನಾಗಲಿ ಅವನನ್ನು ಪಿತೃತೃಪ್ತಿಗಾಗಿ ಶ್ರಾದ್ಧದಲ್ಲಿ ನಿಯೋಜಿಸಬೇಕು.

೪೯–೫೦. ಪಶುಗಳನ್ನು ಸೃಷ್ಟಿಸುವಾಗ ಗೋವುಗಳನ್ನು ಮೊದಲು ಸೃಷ್ಟಿ ಮಾಡಿದ್ದರಿಂದ ಅವುಗಳ ಹಾಲೂ, ವಿಶೇಷವಾಗಿ ತುಪ್ಪವೂ ಶ್ರಾದ್ಧಕ್ಕೆ ಶ್ರೇಷ್ಠ ವಾಗಿರುವುದು. ಆದುದರಿಂದ ಶ್ರಾದ್ಧದಲ್ಲಿ ಕೊಟ್ಟ ತುಪ್ಪವು ಪಿತೃಗಳಿಗೆ ತೃಪ್ತಿ ಯನ್ನುಂಟುಮಾಡುವುದು.

೫೧. ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸುವಾಗ ಬ್ರಾಹ್ಮಣರನ್ನು ಮೊದಲು ಸೃಷ್ಟಿಮಾಡಿದನು. ಆದುದರಿಂದ ಪ್ರಶಸ್ತರಾದ ಬ್ರಾಹ್ಮಣರು ಶ್ರಾದ್ಧದಲ್ಲಿ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವರು.

೫೨. ದೇವತೆಗಳನ್ನು ಸೃಷ್ಟಿಮಾಡುವಾಗ ಮೊದಲು ವಿಶ್ವೇದೇವತೆಗಳನ್ನು ಸೃಷ್ಟಿಸಿದನು. ಅದರಿಂದವರು ಮೊದಲು ಶ್ರಾದ್ಧದಲ್ಲಿ ಪೂಜ್ಯರು.

೫೩. ಶ್ರಾದ್ಧದಲ್ಲಿ ಮೊದಲು ಅವರನ್ನು ಪೂಜಿಸಿ ವಿಧಿಯಂತೆ ತೃಪ್ತಿಗೊಳಿಸಿದರೆ ಅವರು ಶ್ರಾದ್ಧವನ್ನು ರಕ್ಷಿಸುವರು. ವಿಘ್ನಗಳನ್ನು ನಿವಾರಿಸುವರು.

೫೪. ಬ್ರಹ್ಮನು ಹಿಂದೆ ಈ ಮುಖ್ಯರಾದವರಿಂದ ತಾನೇ ಶ್ರಾದ್ಧವನ್ನು ಮಾಡಿ ಅನಂತರ ದೇವತೆಗಳನ್ನು ನಿರ್ಮಿಸಿದನು.

೫೫. ಆದುದರಿಂದ ಆ ದೇವತೆಗಳು ಸಮಸ್ತ ಲೋಕಗಳಲ್ಲಿ ಪ್ರಖ್ಯಾತ ರಾದರು.

ಏತಚ್ಛ್ರಾದ್ಧಸ್ಯ ಸರ್ವಸ್ವಂ ಮಯಾ ತೇ ಪರಿಕೀರ್ತಿತಂ ।
ಪಿತೄಣಾಂ ಪರಮಂ ಗುಹ್ಯಂ ದತ್ತಸ್ಯಾಕ್ಷಯಕಾರಕಂ ॥ ೫೬ ॥
ಯಶ್ಚೈತತ್ಕೀರ್ತಯೇಚ್ಛ್ರಾದ್ಧೇ ಕ್ರಿಯಮಾಣೇ ನೃಪೋತ್ತಮ ।
ವಿಪ್ರಾಣಾಂ ಭೋಕ್ತುಕಾಮಾನಾಂ ತಚ್ಛ್ರಾದ್ಧಂ ತ್ವಕ್ಷಯಂ ಭವೇತ್ ॥ ೫೭ ॥
ಯಶ್ಚೈತಚ್ಛೃಣುಯಾದ್ರಾಜನ್ ಸಮ್ಯಕ್ಛ್ರದ್ಧಾಸಮನ್ವಿತಃ ।
ವಿಹಿತಸ್ಯ ಭವೇತ್ಪುಣ್ಯಂ ಯಚ್ಛ್ರಾದ್ಧಸ್ಯ ತದಾಪ್ನುಯಾತ್ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧಾರ್ಹವಸ್ತುಪರಿಗಣನವರ್ಣನಂ"
ನಾಮೈಕವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೫೬. ಈ ಶ್ರಾದ್ಧದ ವಿಷಯವನ್ನೆಲ್ಲ ನಿನಗೆ ನಾನು ಹೇಳಿರುವೆನು. ಪಿತೃ ಸಂಬಂಧವಾದ ಇದು ಅತಿಶಯ ರಹಸ್ಯವಾಗಿರುವುದು. ಶ್ರಾದ್ಧವನ್ನು ಮಾಡುವವನಿಗೆ ಅಕ್ಷಯ ಫಲವನ್ನು ಕೊಡುವುದು.

೫೭. ಶ್ರಾದ್ಧವನ್ನು ಮಾಡುತ್ತಿರುವಾಗ ಇದನ್ನು ಭೋಜನ ಮಾಡುವ ಬ್ರಾಹ್ಮಣರ ಮುಂದೆ ಪಠಿಸಿದರೆ ಶ್ರಾದ್ಧವು ಅಕ್ಷಯವಾಗುವುದು.

೫೮. ಇದನ್ನು ಅತಿಶಯ ಶ್ರದ್ಧೆಯಿಂದ ಕೇಳುವವನು ಶ್ರಾದ್ಧ ಮಾಡಿದ ಪುಣ್ಯವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧಾರ್ಹವಸ್ತುಪರಿಗಣನವರ್ಣನ"ವೆಂಬ
ಇನ್ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

## ಚತುರ್ದಶೀ ಶಸ್ತ್ರಹತಶ್ರಾದ್ಧನಿರ್ಣಯವರ್ಣನಂ

ಭರ್ತೃಯಜ್ಞ ಉವಾಚ:—

ಯೇಷಾಂ ಚ ಶಸ್ತ್ರಮೃತ್ಯುಃ ಸ್ಯಾದಪಮೃತ್ಯುರಥಾಽಪಿ ವಾ ।
ಉಪಸರ್ಗಾನ್ ಮೃತಾನಾಂ ಚ ವಿಷಮೃತ್ಯುಮುಪೇಯುಷಾಂ ॥ ೧ ॥
ವಹ್ನಿನಾ ಚ ಪ್ರದಗ್ಧಾನಾಂ ಜಲಮೃತ್ಯುಮುಪೇಯುಷಾಂ ।
ಸರ್ಪ ವ್ಯಾಘ್ರಹತಾನಾಂ ಚ ಶೃಂಗೈರುದ್ಬಂಧನೈರಪಿ ॥ ೨ ॥
ಶ್ರಾದ್ಧಂ ತೇಷಾಂ ಪ್ರಕರ್ತವ್ಯಂ ಚತುರ್ದಶ್ಯಾಂ ನರಾಧಿಪ ।
ತೇಷಾಂ ತಸ್ಮಿನ್ ಕೃತೇ ತೃಪ್ತಿಸ್ತತಸ್ತತ್ಪಕ್ಷಜಾ ಭವೇತ್ ॥ ೩ ॥

ಆನರ್ತ ಉವಾಚ:—

ಕಸ್ಮಾಚ್ಛಸ್ತ್ರಹತಾನಾಂ ಚ ಪ್ರೋಕ್ತಾ ಶ್ರಾದ್ಧೇ ಚತುರ್ದಶೀ ।
ನಾಽನ್ಯೇಷಾಂ ದಿವಸೇ ತತ್ರ ಸಂಶಯೋಽಯಂ ವದಸ್ವ ಮೇ ॥ ೪ ॥
ಏಕೋದ್ದಿಷ್ಟಂ ನ ಶಂಸಂತಿ ಸಪಿಂಡೀಕರಣಂ ಪರಂ ।
ಕಸ್ಮಾತ್ತತ್ರ ಪ್ರಕರ್ತವ್ಯಂ ವದೈತನ್ಮಮ ವಿಸ್ತರಾತ್ ॥ ೫ ॥
ಕಸ್ಮಾನ್ನ ಪಾರ್ವಣಂ ತತ್ರ ಕ್ರಿಯತೇ ದಿವಸೇ ಸ್ಥಿತೇ ।
ಪ್ರೇತಪಕ್ಷೇ ವಿಶೇಷೇಣ ಕೃತೇ ಶ್ರಾದ್ಧೇಽಖಿಲೇಽಪಿ ಚ ॥ ೬ ॥

---

## ಕನ್ನಡದ ಅನುವಾದ

### ಚತುರ್ದಶೀ ಶಸ್ತ್ರಹತಶ್ರಾದ್ಧನಿರ್ಣಯವರ್ಣನ

೧–೩. ಭರ್ತೃಯಜ್ಞನು ಹೇಳುತ್ತಾನೆ:—ದೊರೆಯೆ! ಆಯುಧ, ಅಪಮೃತ್ಯು, ಉತ್ಪಾತ, ವಿಷ, ಅಗ್ನಿ, ನೀರು, ಸರ್ಪ, ಹುಲಿ, ಕೊಂಬು, ನೇಣು ಇವುಗಳಿಂದ ಮೃತರಾದವರಿಗೆ ಚತುರ್ದಶೀ ದಿನ ಶ್ರಾದ್ಧ ಮಾಡಬೇಕು. ಆ ದಿನ ಶ್ರಾದ್ಧ ಮಾಡಿದವರಿಗೆ ಆ ಪಕ್ಷವೆಲ್ಲ ಶ್ರಾದ್ಧ ಮಾಡುವುದರಿಂದಾಗುವ ತೃಪ್ತಿಯುಂಟಾಗುವುದು.

೪–೫. ಆನರ್ತನು ಹೇಳುತ್ತಾನೆ:—ಶಸ್ತ್ರಹತರಾದವರಿಗೆ ಚತುರ್ದಶೀ ದಿನ ಏಕೆ ಶ್ರಾದ್ಧವು ವಿಹಿತವಾಗಿರುವುದು? ಇತರರಿಗೆ ಆ ದಿನ ಏಕೆ ಏಕೋದ್ದಿಷ್ಟ, ಸಪಿಂಡೀಕರಣವು ವಿಹಿತವಾಗಲಿಲ್ಲ? ಈ ವಿಷಯದಲ್ಲಿ ನನಗೆ ಬಹಳ ಸಂಶಯವುಂಟಾಗಿದೆ. ವಿಸ್ತಾರವಾಗಿ ನನಗೆ ಹೇಳು.

೬. ಪ್ರೇತಪಕ್ಷದಲ್ಲಿ ವಿಶೇಷವಾಗಿ ಶ್ರಾದ್ಧವು ಮಾಡಲರ್ಹವಾದ್ದರಿಂದ ಆ ದಿನ ಏಕೆ ಇತರರಿಗೆ ಪಾರ್ವಣವು ವಿಹಿತವಾಗಲಿಲ್ಲ.

ಭರ್ತೃಯಜ್ಞ ಉವಾಚ:—

ಬೃಹತ್ಕಲ್ಪೇ ಪುರಾ ರಾಜನ್ ಹಿರಣ್ಯಾಕ್ಷೋ ಮಹಾಸುರಃ ।
ಬಭೂವ ಬಲವಾಂಘೋರಃ ಸರ್ವದೇವಭಯಂಕರಃ ॥ ೭ ॥
ಬ್ರಹ್ಮಾ ಪ್ರತೋಷಿತಸ್ತೇನ ವಿಧಾಯ ವಿವಿಧಂ ತಪಃ ।
ಕೃಷ್ಣಪಕ್ಷೇ ವಿಶೇಷೇಣ ನಭಸ್ಯೇ ಮಾಸಿ ಸಂಸ್ಥಿತೇ ॥ ೮ ॥

ಬ್ರಹ್ಮೋವಾಚ:—

ಪರಿತುಷ್ಟೋಽಸ್ಮಿ ತೇ ವತ್ಸ ಪ್ರಾರ್ಥಯಸ್ವ ಯಥೇಪ್ಸಿತಂ ।
ಅದೇಯಮಪಿ ದಾಸ್ಯಾಮಿ ತಸ್ಮಾತ್ಪ್ರಾರ್ಥಯ ಮಾಚಿರಂ ॥ ೯ ॥

ಹಿರಣ್ಯಾಕ್ಷ ಉವಾಚ:—

ಭೂತಾಃ ಪ್ರೇತಾಃ ಪಿಶಾಚಾಶ್ಚ ರಾಕ್ಷಸಾ ದೈತ್ಯದಾನವಾಃ ।
ಬುಭುಕ್ಷಿತಾಃ ಪ್ರಯಾಚಂತೇ ಮಾಂ ನಿತ್ಯಂ ಪದ್ಮಸಂಭವ ॥ ೧೦ ॥
ಪ್ರೇತಪಕ್ಷೇ ಕೃತೇ ಶ್ರಾದ್ಧೇ ಕನ್ಯಾಸಂಸ್ಥೇ ದಿವಾಕರೇ ।
ಏತಸ್ಮಿನ್ನಹನಿ ಪ್ರಾಯಸ್ತೃಪ್ತಿಃ ಸ್ಯಾದ್ವರ್ಷಸಂಭವಾ ॥ ೧೧ ॥
ತತ್ತ್ವಮದ್ಯ ದಿನಂ ದೇಹಿ ತೇಭ್ಯಃ ಕಮಲಸಂಭವ ।
ತೇನ ತೃಪ್ತಿಂ ಗತಾಃ ಸರ್ವೇ ಸ್ಥಾಸ್ಯಂತ್ಯಬ್ದಂ ಪಿತಾಮಹ ॥ ೧೨ ॥

---

೭. ಭರ್ತೃಯಜ್ಞನು ಹೇಳುತ್ತಾನೆ:—ಹಿಂದೆ ಬೃಹತ್ಕಲ್ಪದಲ್ಲಿ ಬಲಿಷ್ಠನೂ, ಶೂರನೂ, ಸಮಸ್ತ ದೇವತೆಗಳಿಗೆ ಭಯಂಕರನೂ ಆದ ಹಿರಣ್ಯಾಕ್ಷನೆಂಬ ದಾನವನಿದ್ದನು.

೮. ಅವನು ನಾನಾವಿಧ ತಪಸ್ಸನ್ನು ಮಾಡಿ ಭಾದ್ರಪದ ಬಹುಳದಲ್ಲಿ ಬ್ರಹ್ಮನನ್ನು ಸಂತೋಷಗೊಳಿಸಿದನು.

೯. ಬ್ರಹ್ಮನು ಹೇಳುತ್ತಾನೆ:—ಮಗು! ಸಂತುಷ್ಟನಾಗಿರುವೆನು. ನಿನ್ನಿಷ್ಟವನ್ನು ಬೇಡಿಕೊ. ಕೊಡಲನರ್ಹವಾದುದನ್ನೂ ಕೊಡುತ್ತೇನೆ. ಆದುದರಿಂದ ಶೀಘ್ರವಾಗಿ ಬೇಡಿಕೊ.

೧೦. ಹಿರಣ್ಯಾಕ್ಷನು ಹೇಳುತ್ತಾನೆ:—ಚತುರ್ಮುಖ! ಭೂತಗಳು, ಪ್ರೇತಗಳು, ಪಿಶಾಚಗಳು, ರಾಕ್ಷಸರು, ದೈತ್ಯರು, ದಾನವರು ಇವರು ಹಸಿವುಗೊಂಡವರಾಗಿ ನಿತ್ಯವೂ ನನ್ನನ್ನು ಬೇಡುತ್ತಾರೆ.

೧೧. ದಿವಾಕರನು ಕನ್ಯಾರಾಶಿಗತನಾಗಿರಲು ಪ್ರೇತಪಕ್ಷದಲ್ಲಿ ಒಂದು ದಿನ ಶ್ರಾದ್ಧ ಮಾಡಿದರೆ ಒಂದು ವರ್ಷದ ತೃಪ್ತಿಯಾಗುವುದು.

೧೨. ಆದುದರಿಂದ ನೀನು ಆ ಭೂತಾದಿಗಳಿಗೆ ಒಂದು ದಿನವನ್ನು ಕೊಡು. ಅದರಿಂದ ಆ ಭೂತಾದಿಗಳು ಒಂದು ವರ್ಷಕಾಲ ತೃಪ್ತಿಗೊಂಡಿರುವುವು.

ಶ್ರೀ ಬ್ರಹ್ಮೋವಾಚ :—

ಯಃ ಕಶ್ಚಿನ್ಮಾನವಃ ಶ್ರಾದ್ಧಂ ಸ್ವಪಿತೃಭ್ಯಃ ಪ್ರದಾಸ್ಯತಿ ।
ಪ್ರೇತಪಕ್ಷೇ ಚತುರ್ದಶ್ಯಾಂ ನಭಸ್ಯೇ ಮಾಸಿ ಸಂಸ್ಥಿತೇ ॥ ೧೩ ॥
ಪ್ರೇತಾನಾಂ ರಾಕ್ಷಸಾನಾಂ ಚ ಭೂತಾದೀನಾಂ ಭವಿಷ್ಯತಿ ।
ಮಮ ವಾಕ್ಯಾದಸಂದಿಗ್ಧಂ ಯೇ ಚಾಽನ್ಯೇ ಕೀರ್ತಿತಾಸ್ತ್ವಯಾ ॥ ೧೪ ॥
ದುರ್ಮೃತ್ಯುನಾ ಮೃತಾ ಯೇ ಚ ಸಂಗ್ರಾಮೇಷು ಹತಾಶ್ಚ ಯೇ ।
ಏಕೋದ್ದಿಷ್ಟೇ ಸುತೈರ್ದತ್ತೇ ತೇಷಾಂ ತೃಪ್ತಿರ್ಭವಿಷ್ಯತಿ ॥ ೧೫ ॥
ಏವಮುಕ್ತ್ವಾ ತತೋ ಬ್ರಹ್ಮಾ ತತಶ್ಚಾಽದರ್ಶನಂ ಗತಃ ।
ಹಿರಣ್ಯಾಕ್ಷೋಽಪಿ ಸಂಹೃಷ್ಟಃ ಸ್ವಮೇವ ಭವನಂ ಯಯೌ ॥ ೧೬ ॥
ಯಚ್ಚ ಶಸ್ತ್ರಹತಾನಾಂ ಚ ತಸ್ಮಿನ್ನಹನಿ ದೀಯತೇ ।
ಏಕೋದ್ದಿಷ್ಟಂ ನರೈಃ ಶ್ರಾದ್ಧಂ ತತ್ತೇ ವಕ್ಷ್ಯಾಮಿ ಕಾರಣಂ ॥ ೧೭ ॥
ಸಂಖ್ಯೇ ಶಸ್ತ್ರಹತಾ ಯೇ ಚ ನಿರ್ವಿಕಲ್ಪೇನ ಚೇತಸಾ ।
ಯುಧ್ಯಮಾನಾ ನ ತೇ ಮರ್ತ್ಯೇ ಜಾಯಂತೇ ಮನುಜಾಃ ಪುನಃ ॥ ೧೮ ॥
ಪರಾಙ್ಮುಖಾಶ್ಚ ಹನ್ಯಂತೇ ಪಲಾಯನಪರಾಯಣಾಃ ।
ತೇ ಭವಂತಿ ನರಾಃ ಪ್ರೇತಾ ಏತದಾಹ ಪಿತಾಮಹಃ ॥ ೧೯ ॥

---

೧೩–೧೪. ಶ್ರೀ ಬ್ರಹ್ಮನು ಹೇಳುತ್ತಾನೆ:—ಯಾವನಾದರೂ ಒಬ್ಬ ಮನುಷ್ಯನು ಭಾದ್ರಪದ ಕೃಷ್ಣ ಪ್ರೇತಪಕ್ಷದಲ್ಲಿ ಚತುರ್ದಶೀ ದಿನ ತಮ್ಮ ಪಿತೃಗಳಿಗೆ ಶ್ರಾದ್ಧವನ್ನು ಮಾಡಿದರೆ ಅದರಿಂದ ನೀನು ಹೇಳಿದಂತೆ ನನ್ನ ಮಾತಿನಂತೆ ಪ್ರೇತಗಳು, ರಾಕ್ಷಸರು, ಭೂತಗಳು ಇವರೇ ಮೊದಲಾದವರಿಗೆ ತೃಪ್ತಿಯುಂಟಾಗುವುದು.

೧೫. ಆ ದಿನ ದುರ್ಮೃತ್ಯುವಿನಿಂದಲೂ, ಯುದ್ಧದಲ್ಲಿಯೂ, ಮೃತರಾದವರಿಗೆ ಅವರ ಮಕ್ಕಳು ಮಾಡಿದ ಏಕೋದ್ದಿಷ್ಟ ಶ್ರಾದ್ಧದಿಂದ ತೃಪ್ತಿಯುಂಟಾಗುವುದು.

೧೬. ಬ್ರಹ್ಮನು ಹೀಗೆ ಹೇಳಿ ಅದೃಶ್ಯನಾದನು. ಹಿರಣ್ಯಾಕ್ಷನೂ ಮುದಿತನಾಗಿ ತನ್ನ ಮನೆಗೆ ತೆರಳಿದನು.

೧೭. ಆ ದಿನ ಮಾನವರು ಶಸ್ತ್ರಹತರಾದವರಿಗೆ ಏಕೆ ಶ್ರಾದ್ಧವನ್ನು ಮಾಡುವರೆಂಬುದಕ್ಕೆ ಕಾರಣವನ್ನು ಹೇಳುವೆನು.

೧೮. ಯುದ್ಧದಲ್ಲಿ ಸ್ಥಿರಮನಸ್ಸಿನಿಂದ ಕಾದಾಡಿ ಶಸ್ತ್ರಗಳಿಂದ ಹತರಾದ ನರರು ಭೂಲೋಕದಲ್ಲಿ ಮರಳಿ ಹುಟ್ಟುವುದಿಲ್ಲ.

೧೯. ಯುದ್ಧದಲ್ಲಿ ಪರಾಙ್ಮುಖರಾಗಿ ಓಡುತ್ತ ಕೊಲ್ಲಲ್ಪಡುವವರು ಪ್ರೇತರಾಗುವವರು ಎಂದು ಪಿತಾಮಹನು ಹೇಳಿರುತ್ತಾನೆ.

ಸಂಮುಖಾ ಅಪಿ ಯೇ ದೈನ್ಯಂ ಹನ್ಯಮಾನಾ ವದಂತಿ ಚ ।
ಪಶ್ಚಾತ್ತಾಪಂ ಚ ವಾ ಕುರ್ಯುಃ ಪ್ರಹಾರೈರ್ಜರ್ಜರೀಕೃತಾಃ ॥ ೨೦ ॥
ತೇಽಪಿ ಪ್ರೇತಾ ಭವಂತೀಹ ಮನುಃ ಸ್ವಾಯಂಭುವೋಽಬ್ರವೀತ್ ।
ಕದಾಚಿಚ್ಚಿತ್ತಚಲನಂ ಶೂರಾಣಾಮಪಿ ಜಾಯತೇ ॥ ೨೧ ॥
ತೇಷಾಂ ಭ್ರಾಂತ್ಯಾ ದಿನೇ ತತ್ರ ಶ್ರಾದ್ಧಂ ದೇಯಂ ನಿಜೈಃ ಸುತೈಃ ।
ಅಪಮೃತ್ಯುಮೃತಾನಾಂ ಚ ಸರ್ವೇಷಾಮಪಿ ದೇಹಿನಾಂ ॥ ೨೨ ॥
ಪ್ರೇತತ್ವಂ ಜಾಯತೇ ಯಸ್ಮಾತ್ತಸ್ಮಾಚ್ಛ್ರಾದ್ಧಸ್ಯ ತದ್ದಿನಂ ।
ಶ್ರಾದ್ಧಾರ್ಹಂ ಪಾರ್ಥಿವಶ್ರೇಷ್ಠ ವಿಶೇಷೇಣ ಪ್ರಕೀರ್ತಿತಂ ॥ ೨೩ ॥
ಏಕೋದ್ದಿಷ್ಟಂ ಪ್ರಕರ್ತವ್ಯಂ ಯಸ್ಮಾತ್ತತ್ರ ದಿನೇ ನರೈಃ ।
ಸಪಿಂಡೀಕರಣಾದೂರ್ಧ್ವಂ ತತ್ತೇ ವಕ್ಷ್ಯಾಮಿ ಕಾರಣಂ ॥ ೨೪ ॥
ಯದಿ ಪ್ರೇತತ್ವಮಾಪನ್ನಃ ಕದಾಚಿತ್ಸ್ವಪಿತಾ ಭವೇತ್ ।
ತೃಪ್ತ್ಯರ್ಥಂ ತಸ್ಯ ಕರ್ತವ್ಯಂ ಶ್ರಾದ್ಧಂ ತತ್ರ ದಿನೇ ನೃಪ ॥ ೨೫ ॥
ಪಿತಾಮಹಾದ್ಯಾಸ್ತತ್ರಾಽಹ್ನಿ ಶ್ರಾದ್ಧಂ ನಾಽರ್ಹಂತಿ ಕುತ್ರಚಿತ್ ।
ಅಥ ಚೇದ್ಭ್ರಾಂತಿತೋ ದದ್ಯಾದ್ಧ್ರಿಯತೇ ರಾಕ್ಷಸೈಸ್ತು ತತ್ ॥ ೨೬ ॥
ಬ್ರಹ್ಮಣೋ ವಚನಾದ್ರಾಜನ್ ಭೂತಪ್ರೇತೈಶ್ಚ ದಾನವೈಃ ।
ತೇನೈಕೋದ್ದಿಷ್ಟಮೇವಾಽತ್ರ ಕರ್ತವ್ಯಂ ನ ತು ಪಾರ್ವಣಂ ॥ ೨೭ ॥

---

೨೦–೨೩. ಅಭಿಮುಖರಾಗಿ ಶತ್ರುಗಳ ಪ್ರಹಾರಗಳಿಂದ ಶಿಥಿಲಾಂಗರಾಗಿ ದೈನ್ಯವನ್ನಾಗಲಿ, ಪಶ್ಚಾತ್ತಾಪವನ್ನಾಗಲಿ ಪ್ರದರ್ಶಿಸುವವರೂ ಪ್ರೇತರಾಗುವರೆಂದು ಸ್ವಾಯಂಭುವಮನುವು ಹೇಳಿರುತ್ತಾನೆ. ಶೂರರಿಗೂ ಭ್ರಾಂತಿಯಿಂದ ಒಂದು ಸಾರಿ ಮನಸ್ಸು ಚಂಚಲವಾಗುವುದು. ಅವರಿಗೆ ಆ ದಿನ ಮಕ್ಕಳು ಶ್ರಾದ್ಧವನ್ನು ಮಾಡಬೇಕು. ಅಪಮೃತ್ಯುವಿನಿಂದ ಹತರಾದ ಸಮಸ್ತರಿಗೂ ಪ್ರೇತತ್ವವುಂಟಾಗುವುದು. ಆದುದರಿಂದ ಅವರಿಗೆ ಆ ದಿನವು ಶ್ರಾದ್ಧಾರ್ಹವೆಂದು ವಿಶೇಷವಾಗಿ ಉಕ್ತವಾಗಿರುವುದು.

೨೪. ಆ ದಿನ ನರರು ಸಪಿಂಡೀಕರಣವಾದ ಮೇಲೆ ಏಕೋದ್ದಿಷ್ಟವನ್ನು ಮಾಡಲು ಕಾರಣವನ್ನು ಹೇಳುವೆನು.

೨೫. ಒಂದುವೇಳೆ ತನ್ನ ತಂದೆಯು ಪ್ರೇತನಾದರೆ ಆ ದಿನ ಅವನ ತೃಪ್ತಿಗಾಗಿ ಶ್ರಾದ್ಧವನ್ನು ಮಾಡಬೇಕು.

೨೬–೨೭. ಪಿತಾಮಹಾದಿಗಳು ಆ ದಿನ ಶ್ರಾದ್ಧಾರ್ಹರಾಗುವುದಿಲ್ಲ. ಭ್ರಾಂತಿಯಿಂದ ಒಂದುವೇಳೆ ಶ್ರಾದ್ಧ ಮಾಡಿದರೆ ಬ್ರಹ್ಮನ ನೀತಿನಂತೆ ರಾಕ್ಷಸ, ದಾನವ, ಭೂತ, ಪ್ರೇತಗಳು ಅದನ್ನು ಅಪಹರಿಸುವರು. ಆದುದರಿಂದ ಆ ದಿನ ಏಕೋದ್ದಿಷ್ಟವನ್ನು ಮಾತ್ರ ಮಾಡಬೇಕು. ಪಾರ್ವಣವನ್ನು ಮಾಡಕೂಡದು.

ಪಿತೃಪಕ್ಷೇ ಚತುರ್ದಶ್ಯಾಂ ಕನ್ಯಾಸಂಸ್ಥೇ ದಿವಾಕರೇ ।
ಪಿತಾಮಹೋ ನ ಗೃಹ್ಣಾತಿ ಪಿತ್ರಾ ತೇನ ಸಮಂ ತದಾ ॥ ೨೮ ॥
ನ ಚ ತಸ್ಯ ಪಿತಾ ರಾಜಂಸ್ತಥೈವ ಪ್ರಪಿತಾಮಹಃ ॥ ೨೯ ॥
ಏತಸ್ಮಾತ್ಕಾರಣಾದ್ರಾಜನ್ ಪಾರ್ವಣಂ ನ ವಿಧೀಯತೇ ।
ತಸ್ಮಿನ್ನಹನಿ ಸಂಪ್ರಾಪ್ತೇ ವ್ಯರ್ಥಂ ಶ್ರಾದ್ಧಂ ಭವೇದ್ಯತಃ ॥ ೩೦ ॥
ನಾಽನ್ಯಸ್ಥಾನೋದ್ಭವೈರ್ವಿಪ್ರೈಃ ಶ್ರಾದ್ಧಕರ್ಮ ವ್ರತಾನಿ ಚ ।
ನಾಗರೋ ನಾಗರೈಃ ಕುರ್ಯಾದನ್ಯಥಾ ತದ್ವೃಥಾ ಭವೇತ್ ॥ ೩೧ ॥
ಅನ್ಯಸ್ಥಾನೋದ್ಭವೈರ್ವಿಪ್ರೈರ್ಯಚ್ಛ್ರಾದ್ಧಂ ಕ್ರಿಯತೇ ಧ್ರುವಂ ।
ಸಂಪೂರ್ಣಂ ವ್ಯರ್ಥತಾಂ ಯಾತಿ ನಾಗರಾಣಾಂ ಕ್ರಿಯಾಪರೈಃ ॥ ೩೨ ॥
ಅಥಾಽಽಚಾರಪರಿಭ್ರಷ್ಟಾಃ ಶ್ರಾದ್ಧಾರ್ಹಾ ಏವ ನಾಗರಾಃ ।
ಬಲೀವರ್ದಸಮಾನೋಽಪಿ ಜ್ಞಾತೀಯೋ ಯದಿ ಲಭ್ಯತೇ ।
ಕಿಮನ್ಯೈರ್ಬಹುಭಿರ್ವಿಪ್ರೈರ್ವೇದವೇದಾಂಗಪಾರಗೈಃ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚತುರ್ದಶೀ ಶಸ್ತ್ರಹತಶ್ರಾದ್ಧನಿರ್ಣಯವರ್ಣನಂ" ನಾಮ
ದ್ವಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೨೮–೩೧. ಸೂರ್ಯನು ಕನ್ಯಾರಾಶಿಯನ್ನು ಹೊಂದಲು ಪಿತೃಪಕ್ಷ ಚತುರ್ದಶೀ ದಿನ ಪಿತಾಮಹ, ಪ್ರಪಿತಾಮಹರು ತಂದೆಯೊಡನೆ ಶ್ರಾದ್ಧವನ್ನು ಸ್ವೀಕರಿಸುವುದಿಲ್ಲ. ದೊರೆಯೆ! ಆದುದರಿಂದ ಪಾರ್ವಣವನ್ನು ಮಾಡುವುದಿಲ್ಲ. ಆ ದಿನ ಇತರ ಸ್ಥಾನದ ಬ್ರಾಹ್ಮಣರಿಂದ ಮಾಡಿದ ಶ್ರಾದ್ಧಕರ್ಮವು ವ್ಯರ್ಥವಾಗುವುದು. ಆದುದರಿಂದ ನಾಗರನು ನಾಗರರಿಂದಲೇ ಶ್ರಾದ್ಧವನ್ನು ಮಾಡಬೇಕು.

೩೨. ನಾಗರರು ಇತರ ಸ್ಥಾನದ ಕ್ರಿಯಾನಿಷ್ಠರಾದ ಬ್ರಾಹ್ಮಣರಿಂದ ಶ್ರಾದ್ಧವನ್ನು ಮಾಡಿದರೆ ಆ ಶ್ರಾದ್ಧವೆಲ್ಲ ನಿಷ್ಫಲವಾಗುವುದು.

೩೩. ನಾಗರರು ಆಚಾರಭ್ರಷ್ಟರಾದರೂ ಅವರು ಶ್ರಾದ್ಧಾರ್ಹರೇ. ಎತ್ತಿನಂತಿರುವ ನಾಗರನು ದೊರಕಿದರೆ ವೇದವೇದಾಂಗಪಾರಂಗತರಾದ ಇತರ ಬ್ರಾಹ್ಮಣರಿಂದೇನು ಪ್ರಯೋಜನ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚತುರ್ದಶೀ ಶಸ್ತ್ರಹತಶ್ರಾದ್ಧನಿರ್ಣಯವರ್ಣನ" ವೆಂಬ
ಇನ್ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋಽವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

### ಶ್ರಾದ್ಧಾರ್ಹಾಽನರ್ಹಬ್ರಾಹ್ಮಣಾದಿವರ್ಣನಂ

ಭರ್ತೃಯಜ್ಞ ಉವಾಚ :—

ಶ್ರಾದ್ಧಾರ್ಹೈರ್ಬ್ರಾಹ್ಮಣೈಃ ಕಾರ್ಯಂ ಶ್ರಾದ್ಧಂ ದರ್ಶೇ ತು ಪಾರ್ವಣಂ ।
ವಿಪರೀತಂ ನ ಕರ್ತವ್ಯಂ ಶ್ರಾದ್ಧಮೇಕಂ ಕಥಂಚನ ॥ ೧ ॥
ಜಾರಜಾತಾಽಪವಿದ್ಧಾದ್ಯೈರ್ಯೋ ನರಃ ಶ್ರಾದ್ಧಮಾಚರೇತ್ ।
ಬ್ರಾಹ್ಮಣೈಸ್ತು ನ ಸಂದೇಹಸ್ತಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೨ ॥

ಆನರ್ತ ಉವಾಚ :—

ಭಯಂ ಮೇ ಸುಮಹಜ್ಜಾತಮತ್ರ ಯತ್ಪರಿಕೀರ್ತಿತಂ ।
ಜಾರಜಾತಾಽಪವಿದ್ಧೈಸ್ತು ಯಚ್ಛ್ರಾದ್ಧಂ ವ್ಯರ್ಥತಾಂ ವ್ರಜೇತ್ ॥ ೩ ॥
ಮನುನಾ ದ್ವಾದಶ ಪ್ರೋಕ್ತಾಃ ಕಿಲ ಪುತ್ರಾ ಮಹಾಮತೇ ।
ಅಪುತ್ರಾಣಾಂ ಚ ಪುತ್ರತ್ವಂ ಯೇ ಕುರ್ವಂತಿ ಸದೈವ ಹಿ ॥ ೪ ॥
ಔರಸಃ ಕ್ಷೇತ್ರಜಶ್ಚೈವ ಕ್ರಯ್ಯಃ ಕ್ರೀತಶ್ಚ ಪಾಲಿತಃ ।
ಪ್ರತಿಪನ್ನಃ ಸಹೋಢಶ್ಚ ಕಾನೀನಶ್ಚಾಽಪಿ ಸತ್ತಮ ॥ ೫ ॥
ತಥಾಽನ್ಯೌ ಕುಂಡಗೋಲೌ ಚ ಪುತ್ರಾವಪಿ ಪ್ರಕೀರ್ತಿತೌ ॥ ೬ ॥

---

### ಕನ್ನಡದ ಅನುವಾದ

#### ಶ್ರಾದ್ಧಾರ್ಹಾನರ್ಹಬ್ರಾಹ್ಮಣಾದಿವರ್ಣನ

೧. ಭರ್ತೃಯಜ್ಞನು ಹೇಳುತ್ತಾನೆ:—ಅಮಾವಾಸ್ಯೆಯ ದಿನ ಶ್ರಾದ್ಧಾರ್ಹ ಬ್ರಾಹ್ಮಣರಿಂದಲೇ ಶ್ರಾದ್ಧವನ್ನು ಮಾಡಬೇಕು. ಬೇರೆಯವರಿಂದ ಒಂದು ಶ್ರಾದ್ಧವನ್ನೂ ಮಾಡಬಾರದು.

೨. ವಿಟರಿಂದ ಹುಟ್ಟಿದವರು, ಪತಿತರು ಆದ ಬ್ರಾಹ್ಮಣರಿಂದ ನರನು ಶ್ರಾದ್ಧ ಮಾಡಿದರೆ ಅದು ವ್ಯರ್ಥವಾಗುವುದು.

೩. ಆನರ್ತನು ಹೇಳುತ್ತಾನೆ:—ಜಾರರಿಂದ ಹುಟ್ಟಿದವರು, ಪತಿತರು ಇವರಿಂದ ಮಾಡಿದ ಶ್ರಾದ್ಧವು ವ್ಯರ್ಥವಾಗುವುದೆಂದು ಹೇಳಿದ್ದರಿಂದ ನನಗೆ ಬಹಳ ಭಯವುಂಟಾಗಿದೆ.

೪. ಮಹರ್ಷಿಯೇ! ಮನುವು ಹನ್ನೆರಡುಮಂದಿ ಪುತ್ರರನ್ನು ಹೇಳಿರುವನು. ಅವರು ಅಪುತ್ರರಿಗೂ ಪುತ್ರತ್ವವನ್ನುಂಟುಮಾಡುವರು.

೫–೭. ಔರಸ, ಕ್ಷೇತ್ರಜ, ಕ್ರಯಕ್ರೀತ, ಪಾಲಿತ, ಪ್ರತಿಪನ್ನ, ಸಹೋಢ, ಕಾನೀನ, ಕುಂಡ, ಗೋಳ, ಶಿಷ್ಯ, ವೃತ್ತ್ಯುವಿನಿಂದ ರಕ್ಷಿತನಾದವ, ವನಾಂತರ

ಶಿಷ್ಯಶ್ಚ ರಕ್ಷಿತೋ ಮೃತ್ಯೋಸ್ತಥಾಽಶ್ವತ್ಥೋ ವನಾಂತಿಗಃ ।
ಕಿಮೇತೇ ನೈವ ಕಥಿತಾ ಯತ್ತ್ವಮೇವಂ ಪ್ರಜಲ್ಪಸಿ ॥ ೭ ॥

ಭರ್ತೃಯಜ್ಞ ಉವಾಚ:—

ಸತ್ಯಮೇತನ್ಮಹಾಭಾಗ ಸರ್ವೇ ತೇ ಧರ್ಮತಃ ಸುತಾಃ ।
ಪರಂ ಯುಗತ್ರಯೇ ಪ್ರೋಕ್ತಾ ನ ಕಲೌ ಕಲುಷಾಪಹಾಃ ॥ ೮ ॥
ತದರ್ಥಂ ತೇಷು ಸಂತಾನಂ ತಾವನ್ಮಾತ್ರಂ ಯುಗೇ ಯುಗೇ ।
ಸತ್ತ್ವಾಢ್ಯಾನಾಂ ಚ ಲೋಕಾನಾಂ ನ ಕಲೌ ಚಾಽಲ್ಪಮೇಧಸಾಂ ॥ ೯ ॥
ಕಲಾವೇಷ ಸಮಾಖ್ಯಾತೋ ವ್ಯವಹಾರಃ ಪ್ರಪಾತದಃ ।
ಅಲ್ಪಸತ್ತ್ವಾ ಯತೋ ಲೋಕಾಸ್ತೇನ ಚೈಷ ವಿಧಿಸ್ಸ್ಮೃತಃ ॥ ೧೦ ॥
ಅತ್ರ ಯಃ ಸಂಕರಂ ಕುರ್ಯಾದ್ಯೋನೇಸ್ತಸ್ಯ ಫಲಂ ಶೃಣು ।
ಬ್ರಾಹ್ಮಣ್ಯಾಂ ಬ್ರಾಹ್ಮಣಾತ್ಪುತ್ರೋ ಬ್ರಹ್ಮಘ್ನಃ ಸಂಪ್ರಜಾಯತೇ ॥ ೧೧ ॥
ಸರ್ವಾಽಧಮಾನಾಮಧಮೋ ಯೋ ವಾರಂಡ ಇತಿ ಸ್ಮೃತಃ ॥ ೧೨ ॥
ಕ್ಷತ್ರಿಯಾಚ್ಚ ತಥಾ ಸೂತೋ ವೈಶ್ಯಾನ್ಮಾಗಧ ಏವ ಚ ।
ಶೂದ್ರಾತ್ತಥಾಽಂತ್ಯಜಃ ಪ್ರೋಕ್ತಸ್ತೇನೈತೇ ವರ್ಜಿತಾಃ ಸುತಾಃ ॥ ೧೩ ॥

---

ದಲ್ಲಿರುವ ಅಶ್ವತ್ಥ—ಹೀಗೆ ಹನ್ನೆರಡು ಮಂದಿ ಪುತ್ರರನ್ನು ನೀನು ಹೇಳದೆ ಹೀಗೆ ಏಕೆ ಹೇಳುತ್ತಿರುವೆ?

೮. ಭರ್ತೃಯಜ್ಞನು ಹೇಳುತ್ತಾನೆ:— ಭಾಗ್ಯವಂತನೆ! ಇದು ನಿಜ. ಅವರೆಲ್ಲರೂ ಕೃತಾದಿ ಮೂರು ಯುಗಗಳಲ್ಲಿ ಧರ್ಮಪುತ್ರರು. ಕಲಿಯುಗದಲ್ಲಿ ಅವರು ಪಾಪನಿವಾರಕರಾಗುವುದಿಲ್ಲ.

೯. ಆ ಮೂರು ಯುಗಗಳಲ್ಲಿ ಸತ್ತ್ವಶಾಲಿಗಳಾದ ಜನರು ಪಾಪನಿವಾರಣೆಗಾಗಿ ಅವರಿಂದ ಸಂತತಿಯನ್ನು ವೃದ್ಧಿಗೊಳಿಸುವರು. ಕಲಿಯುಗದಲ್ಲಿ ಅಲ್ಪಬುದ್ಧಿಯುಳ್ಳವರಿಗೆ ಅವರು ಪುತ್ರರಾಗುವುದಿಲ್ಲ.

೧೦–೧೧. ಕಲಿಯುಗದಲ್ಲಿ ಮಾನವರು ಅಲ್ಪಸತ್ತ್ವರಾಗುವುದರಿಂದ ಈ ವ್ಯವಹಾರವು ಪಾತಿತ್ಯವನ್ನುಂಟುಮಾಡುವುದು. ಆದುದರಿಂದ ಈ ವಿಧಿಯು ವಿಹಿತವಾಗಿರುವುದು. ಈ ಲೋಕದಲ್ಲಿ ಜಾತಿಸಾಂಕರ್ಯವನ್ನುಂಟುಮಾಡುವವನಿಗೆ ಆಗುವ ಫಲವನ್ನು ಕೇಳು. ಬ್ರಾಹ್ಮಣ ಸ್ತ್ರೀಯಲ್ಲಿ ಬ್ರಾಹ್ಮಣನಿಂದ ವ್ಯಭಿಚಾರದಿಂದ ಹುಟ್ಟುವವನು ಬ್ರಹ್ಮಘ್ನನಾಗುವನು.

೧೨. ಇವನು ಸಕಲನೀಚರಲ್ಲಿ ನೀಚನಾಗಿ ವಾರಂಡ ಎನ್ನಿಸಿಕೊಳ್ಳುವನು.

೧೩. ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟುವವನು ಸೂತನೂ, ವೈಶ್ಯನಿಂದ ಮಾಗಧನೂ, ಶೂದ್ರನಿಂದ ಚಂಡಾಲನೂ ಆಗುವನು. ಆದುದರಿಂದ ಈ ಮಕ್ಕಳನ್ನು ತ್ಯಜಿಸಬೇಕು.

ಏತೇಷಾಮಪಿ ನಿರ್ದಿಷ್ಟಾಃ ಸಪ್ತ ರಾಜನ್ ಸುಪುತ್ರಕಾಃ ।
ಪಂಚ ವಂಶವಿನಾಶಾಯ ಪೂರ್ವೇಷಾಂ ಪಾತನಾಯ ಚ ॥ ೧೪ ॥
ಔರಸಃ ಪ್ರತಿಪನ್ನಶ್ಚ ಕ್ರೀತಃ ಪಾಲಿತ ಏವ ಚ ।
ಶಿಷ್ಯಶ್ಚ ದತ್ತಜೀವಶ್ಚ ತಥಾಽಶ್ವತ್ಥಶ್ಚ ಸಪ್ತಮಃ ॥ ೧೫ ॥
ಪುನ್ನಾಮ್ನೋ ನರಕಾದ್ಘೋರಾದ್ರಕ್ಷಂತಿ ಚ ಸದಾ ಹಿ ತೇ ।
ಪತಂತಂ ಪುರುಷಂ ತತ್ರ ತೇನ ತೇ ಶೋಭನಾಃ ಸ್ಮೃತಾಃ ॥ ೧೬ ॥
ಕ್ಷೇತ್ರಜಶ್ಚ ಸಹೋಢಶ್ಚ ಕಾನೀನಃ ಕುಂಡಗೋಲಕೌ ।
ಪಂಚೈತೇ ಪಾತಯಂತಿ ಸ್ಮ ಪಿತೄನ್ ಸ್ವರ್ಗಗತಾನಪಿ ॥ ೧೭ ॥
ಏತಸ್ಮಾತ್ಕಾರಣಾಚ್ಛ್ರಾದ್ಧಂ ಜಾರಜಾತಸ್ಯ ತದ್ವೃಥಾ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧಾರ್ಹಾऽನರ್ಹಬ್ರಾಹ್ಮಣಾದಿವರ್ಣನಂ" ನಾಮ
ತ್ರಯೋವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೧೪. ಈ ಹನ್ನೆರಡು ಮಂದಿ ಮಕ್ಕಳಲ್ಲಿ ಏಳು ಮಂದಿ ಸುಪುತ್ರರು. ಉಳಿದ ಐದು ಮಂದಿ ವಂಶವನ್ನು ಹಾಳುಮಾಡುವವರು. ಮತ್ತು ಹಿಂದಿನವರನ್ನು ಪತಿತರನ್ನಾಗಿಸುವವರು.

೧೫–೧೬. ಔರಸ, ಪ್ರತಿಪನ್ನ, ಕ್ರೀತ, ಪಾಲಿತ, ಶಿಷ್ಯ, ದತ್ತಜೀವ, ಅಶ್ವತ್ಥ ಈ ಏಳು ಮಂದಿ ಪುತ್ರರು ಪುನ್ನಾಮಕವಾದ ಘೋರ ನರಕದಲ್ಲಿ ಬೀಳುತ್ತಿರುವ ತಂದೆಯನ್ನು ರಕ್ಷಿಸುವುದರಿಂದ ಸುಪುತ್ರರು.

೧೭. ಕ್ಷೇತ್ರಜ, ಸಹೋಢ, ಕಾನೀನ, ಕುಂಡ, ಗೋಲಕ ಈ ಐದು ಮಂದಿ ಪುತ್ರರು ಸ್ವರ್ಗಗತರಾದ ಪಿತೃಗಳನ್ನೂ ಬೀಳಿಸುವರು.

೧೮. ಈ ಕಾರಣದಿಂದ ಜಾರಜಾತನಿಂದ ಮಾಡುವ ಶ್ರಾದ್ಧವು ನಿಷ್ಫಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧಾರ್ಹಾನರ್ಹಬ್ರಾಹ್ಮಣಾದಿವರ್ಣನ"ವೆಂಬ
ಇನ್ನೂರಿಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

### ಶ್ರಾದ್ಧವಿಧಿವರ್ಣನಂ

ಆನರ್ತ ಉವಾಚ :—

ಶ್ರುತಾ ಮಯಾ ಮಹಾಭಾಗ ಶ್ರಾದ್ಧಾರ್ಹಾ ಬ್ರಾಹ್ಮಣಾಶ್ಚ ಯೇ ।
ಯೇ ಚ ತ್ಯಾಜ್ಯಾಸ್ತಥಾ ಪುತ್ರಾ ಬಹವಶ್ಚೈವ ಸುವ್ರತ ॥ ೧ ॥
ಸಾಂಪ್ರತಂ ಕಥಯಾಽಸ್ಮಾಕಂ ಮಂತ್ರಪೂರ್ವಶ್ಚ ಯೋ ವಿಧಿಃ ।
ಗೃಹಸ್ಥೇನ ಸದಾ ಕಾರ್ಯಃ ಪಿತೄಣಾಂ ಪರಿತುಷ್ಟಯೇ ॥ ೨ ॥

ಭರ್ತೃಯಜ್ಞ ಉವಾಚ :—

ಪ್ರಣಮ್ಯಾಮಂತ್ರಿತಾ ಯೇ ಚ ಶ್ರಾದ್ಧಾರ್ಥಂ ಬ್ರಾಹ್ಮಣೋತ್ತಮಾಃ ।
ಆನೀಯ ಕುತಪೇ ಕಾಲೇ ತಾನ್ ಸರ್ವಾನ್ ಪ್ರಾರ್ಥಯೇದಿದಂ ॥ ೩ ॥
ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ।
ಯೇ ಅತ್ರ ವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ ॥ ೪ ॥
ಏವಮಭ್ಯರ್ಚ್ಯ ತಾನ್ ಸರ್ವಾಂಸ್ತತಃ ಕೃತ್ವಾ ಪ್ರದಕ್ಷಿಣಾಂ ।
ಜಾನುನೀ ಭೂತಲೇ ನ್ಯಸ್ಯ ತತಶ್ಚಾಽರ್ಘ್ಯಂ ಪ್ರದಾಪಯೇತ್ ॥ ೫ ॥
ಮಂತ್ರೇಣಾಽನೇನ ರಾಜೇಂದ್ರ ಸಪುಷ್ಪಾಕ್ಷತಚಂದನೈಃ ।
ಅರ್ಘ್ಯಮೇನಂ ಪ್ರಗೃಹ್ಣಂತು ಮಯಾ ದತ್ತಂ ದ್ವಿಜೋತ್ತಮಾಃ ।
ಪಾದಪ್ರಕ್ಷಾಲನಾರ್ಥಾಯ ಪ್ರಕುರ್ವಂತು ಮಮ ಪ್ರಿಯಂ ॥ ೬ ॥

---

## ಕನ್ನಡದ ಅನುವಾದ

### ಶ್ರಾದ್ಧವಿಧಿವರ್ಣನ

೧–೨. ಆನರ್ತನು ಹೇಳುತ್ತಾನೆ:— ಭಾಗ್ಯವಂತನೆ! ನಾನು ನಿನ್ನಿಂದ ಶ್ರಾದ್ಧಾರ್ಹರೂ, ಅನರ್ಹರೂ ಆದ ಬ್ರಾಹ್ಮಣರನ್ನೂ, ಬಹುಮಂದಿ ಪುತ್ರರನ್ನೂ ಕೇಳಿದೆನು. ಈಗ ಗೃಹಸ್ಥರು ಪಿತೃಗಳ ತೃಪ್ತಿಗಾಗಿ ಅನುಸರಿಸಲರ್ಹವಾದ ಮಂತ್ರಪೂರ್ವಕವಾದ ಶ್ರಾದ್ಧವಿಧಿಯನ್ನು ಹೇಳು.

೩. ಭರ್ತೃಯಜ್ಞನು ಹೇಳುತ್ತಾನೆ:—ಶ್ರಾದ್ಧಕ್ಕಾಗಿ ನಿಮಂತ್ರಿತರಾದ ಬ್ರಾಹ್ಮಣರನ್ನು ಕುತಪಕಾಲದಲ್ಲಿ ಕರೆದುಕೊಂಡು ಬಂದು ವಂದಿಸಿ ಹೀಗೆ ಪ್ರಾರ್ಥಿಸಬೇಕು.

೪. ಭಾಗ್ಯವಂತರೂ, ಅತಿ ಬಲಿಷ್ಠರೂ ಆದ ವಿಶ್ವೇದೇವತೆಗಳು ಬರಲಿ, ಈ ಶ್ರಾದ್ಧದಲ್ಲಿ ನಿಯಮಿತರಾದ ಅವರು ಸಾವಧಾನಚಿತ್ತರಾಗಲಿ.

೫–೬. ಅವರನ್ನೆಲ್ಲ ಹೀಗೆ ಅರ್ಚಿಸಿ ಪ್ರದಕ್ಷಿಣೆ ಮಾಡಿ ಮೊಣಕಾಲುಗಳನ್ನು ನೆಲದಲ್ಲಿ ಊರಿ ಈ ಮಂತ್ರವನ್ನು ಹೇಳಿ ಪುಷ್ಪ, ಅಕ್ಷತೆ, ಚಂದನಗಳಿಂದ

ಏವಮುಕ್ತ್ವಾ ಮಹೀಪೃಷ್ಠೇ ಅನುಲಿಪ್ತೇ ತತಃ ಪರಂ ।
ಸಾಕ್ಷತಾನ್ ಪ್ರಕ್ಷಿಪೇದ್ದರ್ಭಾನ್ ವಿಶ್ವೇದೇವಾನ್ ಪ್ರಕೀರ್ತಯನ್ ॥೭॥
ಅಪಸವ್ಯಂ ತತಃ ಕೃತ್ವಾ ದರ್ಭಾಂಸ್ತಿಲಸಮನ್ವಿತಾನ್ ।
ದ್ವಿಗುಣಾನ್ ಪ್ರಕ್ಷಿಪೇದ್ಭೂಮೌ ಪಿತೄನುದ್ದಿಶ್ಯ ಚಾಽಽತ್ಮನಃ ॥ ೮ ॥
ಏವಂ ಸರ್ವಾಃ ಕ್ರಿಯಾಃ ಕಾರ್ಯಾ ದೈವಿಕಾಃ ಸವ್ಯಪೂರ್ವಿಕಾಃ ।
ಪೈತೃಕಾಶ್ಚಾಽಪಸವ್ಯೇನ ಮುಕ್ತ್ವಾ ನಾಂದೀಮುಖಾನ್ ಪಿತೄನ್ ॥ ೯ ॥
ಸರ್ವೇ ಪೂರ್ವಾಮುಖಾಃ ಸ್ಥಾಪ್ಯಾ ಯುಗ್ಮಾಶ್ಚ ಶಕ್ತಿತೋ ನೃಪ ।
ಪಿತರೋ ಮಾತೃಪಕ್ಷೀಯಾಃ ಸ್ಥಾಪ್ಯಾಶ್ಚೋದಙ್ಮುಖಾಸ್ತಥಾ ॥ ೧೦ ॥
ಏಕೈಕಂ ವಾ ತ್ರಯೋ ವಾಽಪಿ ಸ್ಯುರೇಕೈಕಂ ವಾ ಪೃಥಕ್ ಪೃಥಕ್ ।
ಪೈತೃಕಾನ್ ಸ್ಥಾಪ್ಯ ಚಕ್ರೇಣ ಪಿತೄಣಾಂ ಪರಿತುಷ್ಟಯೇ ॥ ೧೧ ॥
ಷಷ್ಠ್ಯಾ ವಿಭಕ್ತ್ಯಾ ತು ತೇಷಾಮಾಸನಂ ಚ ಪ್ರದಾಪಯೇತ್ ।
ಋಜುಭಿಃ ಸಾಕ್ಷತೈರ್ದರ್ಭೈಃ ಸೋದಕೈರ್ದಕ್ಷಿಣಾಂಗತಃ ॥ ೧೨ ॥
ವಿಷಮೈರ್ದ್ವಿಗುಣೈರ್ದರ್ಭೈಃ ಸತಿಲೈರ್ವಾಮಪಾರ್ಶ್ವತಃ ।
ಪಾಣೌ ತೋಯಂ ಪರಿಕ್ಷಿಪ್ಯ ನ ದರ್ಭಾಂಸ್ತು ಕಥಂಚನ ॥ ೧೩ ॥

---

ಅರ್ಘ್ಯವನ್ನು ಕೊಡಬೇಕು. ದ್ವಿಜವರ್ಯರು ನಾನಿತ್ತ ಅರ್ಘ್ಯವನ್ನು ಪಾದ ಪ್ರಕ್ಷಾಳನೆಗಾಗಿ ಸ್ವೀಕರಿಸಲಿ. ನನಗಿಷ್ಟವನ್ನುಂಟುಮಾಡಲಿ.

೭. ಹೀಗೆ ಹೇಳಿ ಗೋಮಯಲಿಪ್ತವಾದ ನೆಲದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸುತ್ತ ಅಕ್ಷತೆಯಿಂದ ಕೂಡಿದ ದರ್ಭೆಗಳನ್ನು ಹಾಸಬೇಕು.

೮. ಅನಂತರ ಅಪಸವ್ಯವನ್ನು ಮಾಡಿಕೊಂಡು ಎಳ್ಳಿನೊಡನೆ ಇಮ್ಮಡಿ ದರ್ಭೆಗಳನ್ನು ತನ್ನ ಪಿತೃಗಳನ್ನುದ್ದೇಶಿಸಿ ಹಾಸಬೇಕು.

೯. ಹೀಗೆ ಸಮಸ್ತ ದೇವಕಾರ್ಯಗಳನ್ನು ಸವ್ಯದಿಂದಲೂ, ನಾಂದೀ ಮುಖ ಪಿತೃಗಳನ್ನುಳಿದು ಇತರ ಪಿತೃಗಳ ಕಾರ್ಯಗಳನ್ನು ಅಪಸವ್ಯದಿಂದಲೂ ಮಾಡಬೇಕು.

೧೦–೧೧. ಅರಸ! ಪಿತೃಪಕ್ಷದ ಬ್ರಾಹ್ಮಣರನ್ನೆಲ್ಲ ಜೋಡಿಯಾಗಿ ಪೂರ್ವ ಮುಖರನ್ನಾಗಿಯೂ, ಮಾತೃಪಕ್ಷದ ಪಿತೃಗಳನ್ನು ಉತ್ತರ ಮುಖರನ್ನಾಗಿಯೂ ಕುಳ್ಳಿರಿಸಬೇಕು. ಪಿತೃತುಷ್ಟಿಗಾಗಿ ಒಬ್ಬ ಪಿತೃವಿಗೆ ಒಬ್ಬೊಬ್ಬನಂತಾಗಲಿ, ಮೂವ ರಂತಾಗಲಿ, ಪಿತೃಬ್ರಾಹ್ಮಣರನ್ನು ಕುಳ್ಳಿರಿಸಬೇಕು.

೧೨–೧೩. ಅವರಿಗೆ ಷಷ್ಠೀ ವಿಭಕ್ತಿಯಿಂದ ಬಲಭಾಗದಲ್ಲಿ ನೀರು ಅಕ್ಷತೆ ಗಳಿಂದ ಕೂಡಿದ ಸಮಸಂಖ್ಯೆ ದರ್ಭೆಗಳಿಂದಲೂ, ಎಡಭಾಗದಲ್ಲಿ ನೀರು ಎಳ್ಳು ಗಳಿಂದ ಕೂಡಿದ ವಿಷಮಸಂಖ್ಯೆ ದರ್ಭೆಗಳಿಂದಲೂ ಆಸನವನ್ನು ಕೊಡಬೇಕು. ಕೈಯಲ್ಲಿ ನೀರನ್ನು ಹಾಕಿ ಯಾವಾಗಲೂ ದರ್ಭೆಗಳನ್ನು ಕೊಡಬಾರದು.

ಯೋ ಹಸ್ತೇ ಚಾಽಽಸನಂ ದದ್ಯಾಚ್ಛೇದ್ದಾರ್ಭಂ ಬುದ್ಧಿವರ್ಜಿತಃ ।
ಪಿತರೋ ನಾಽಽಸನೇ ತತ್ರ ಪ್ರಕುರ್ವಂತಿ ನಿವೇಶನಂ ॥ ೧೪ ॥
ಆವಾಹನಂ ಪ್ರಕರ್ತವ್ಯಂ ವಿಭಕ್ತ್ಯಾ ಚ ದ್ವಿತೀಯಯಾ ।
ಯೇನಾಗಚ್ಛಂತಿ ತೇ ಸರ್ವೇ ಸಮಾಹೂತಾಃ ಪೃಥಕ್ ಪೃಥಕ್ ॥ ೧೫ ॥
ಅನ್ಯಯಾ ಚ ವಿಭಕ್ತ್ಯಾ ಚೇತ್ಪಿತೄನಾವಾಹಯೇತ್ಕ್ವಚಿತ್ ।
ನಾಗಚ್ಛಂತಿ ಮಹಾಭಾಗಾ ಯದ್ಯಪಿ ಸ್ಯುರ್ಬುಭುಕ್ಷಿತಾಃ ॥ ೧೬ ॥
ವಿಶ್ವೇದೇವಾಸ ಆಗತ ಮಂತ್ರೇಣಾನೇನ ಪಾರ್ಥಿವ ।
ತೇಷಾಮಾವಾಹನಂ ಕಾರ್ಯಮಕ್ಷತೈಶ್ಚ ಶಿರೋಽಂತಿಕಾತ್ ॥ ೧೭ ॥
ಉಶಂತಸ್ತ್ವೇತಿ ಚ ತಿಲೈಃ ಪಿತೄನಾವಾಹಯೇತ್ತತಃ ।
ಆಯಂತು ನ ಇತಿ ಜಪೇತ್ತತಃ ಪಾರ್ಥಿವಸತ್ತಮ ॥ ೧೮ ॥
ಶನ್ನೋ ದೇವೀತಿ ಮಂತ್ರೇಣ ಸ್ವಾಹಾಕಾರಸಮನ್ವಿತಂ ।
ಪಿತೄಣಾಮರ್ಘ್ಯಪಾತ್ರೇಷು ತಥೈವ ಚ ಜಲಂ ಕ್ಷಿಪೇತ್ ॥ ೧೯ ॥
ಯವೋಽಸಿ ಯವಯಾಸ್ಮದ್ದ್ವೇತ್ಯಕ್ಷತಾಂಸ್ತತ್ರ ನಿಕ್ಷಿಪೇತ್ ।
ಚಂದನಂ ಗಂಧಪುಷ್ಪಾಣಿ ಧೂಪಂ ದದ್ಯಾದ್ಯಥಾ ಕ್ರಮಂ ।
ಸ ಪವಿತ್ರೇಷು ಹಸ್ತೇಷು ದದ್ಯಾದರ್ಘ್ಯಂ ಸಮಾಹಿತಃ ॥ ೨೦ ॥

---

೧೪. ಬುದ್ಧಿಯಿಲ್ಲದವನು ಕೈಯಲ್ಲಿ ದರ್ಭಾಸನವನ್ನು ಕೊಟ್ಟರೆ ಪಿತೃಗಳು ಅದರಲ್ಲಿ ಕೂತುಕೊಳ್ಳುವುದಿಲ್ಲ.

೧೫. ದ್ವಿತೀಯಾ ವಿಭಕ್ತಿಯಿಂದ ಆವಾಹನವನ್ನು ಮಾಡಿದರೆ ಆಹೂತರಾದ ಪಿತೃಗಳು ಪ್ರತ್ಯೇಕವಾಗಿ ಸನ್ನಿಹಿತರಾಗುವರು.

೧೬. ಬೇರೆ ವಿಭಕ್ತಿಗಳಿಂದ ಪಿತೃಗಳನ್ನು ಆವಾಹನ ಮಾಡಿದರೆ ಅವರು ಹಸಿವುಗೊಂಡಿದ್ದರೂ ಸನ್ನಿಹಿತರಾಗುವುದಿಲ್ಲ.

೧೭. ಅಕ್ಷತೆಗಳಿಂದ ಬ್ರಾಹ್ಮಣರ ತಲೆಯಲ್ಲಿ ವಿಶ್ವೇದೇವಾಸ ಆಗತ ಇತ್ಯಾದಿ ಮಂತ್ರದಿಂದ ವಿಶ್ವೇದೇವರನ್ನು ಆವಾಹನೆ ಮಾಡಬೇಕು.

೧೮. ಉಶಂತಸ್ತ್ವಾ ಎಂಬ ಮಂತ್ರದಿಂದ ಬಳಿಕ ಪಿತೃಗಳನ್ನು ಆವಾಹನೆ ಮಾಡಬೇಕು. ಅನಂತರ ಆಯಂತುನ ಇತ್ಯಾದಿ ಮಂತ್ರವನ್ನು ಜಪಿಸಬೇಕು.

೧೯. ಶನ್ನೋದೇವೀತಿ ಮಂತ್ರದಿಂದ ಸ್ವಾಹಾಕಾರ ಸಹಿತವಾಗಿ ಪಿತೃಗಳ ಅರ್ಘ್ಯಪಾತ್ರೆಗಳಲ್ಲಿ ನೀರನ್ನು ಹಾಕಬೇಕು.

೨೦. ಯವೋಽಸಿ, ಯವಯಾಸ್ಮದ್ವೇತ್ಯಾದಿ ಮಂತ್ರದಿಂದ ಅಕ್ಷತೆಗಳನ್ನು ಹಾಕಬೇಕು. ಚಂದನ, ಗಂಧ, ಪುಷ್ಪ, ಧೂಪಗಳನ್ನು ಕ್ರಮವಾಗಿ ಕೊಡಬೇಕು. ಮತ್ತು ಪವಿತ್ರ ಸಹಿತವಾದ ಕೈಗಳಲ್ಲಿ ಅರ್ಘ್ಯವನ್ನು ಕೊಡಬೇಕು.

ಯಾ ದಿವ್ಯಾ ಇತಿ ಮಂತ್ರೇಣ ಸ್ವಾಹಾಕಾರಸಮನ್ವಿತಂ ।
ಪಿತೄಣಾಮರ್ಘ್ಯಪಾತ್ರೇಷು ತಥೈವ ಚ ಜಲಂ ಕ್ಷಿಪೇತ್ ॥ ೨೧ ॥
ತಿಲೋಽಸಿ ಸೋಮದೈವತ್ಯೋ ಗೋಸವೇ ದೇವ ನಿರ್ಮಿತಃ ।
ಪ್ರತ್ನವದ್ಭಿಃ ಪ್ರಕ್ತಃ ಸ್ವಧಯಾ ಪಿತೃನಿಮಾಂಲ್ಲೋಕಾನ್ ।
ಪ್ರೀಣಾಹಿ ನಃ ಸ್ವಧೇತಿ ಪ್ರಕ್ಷಿಪೇತ್ತಿಲಾನ್ ॥ ೨೨ ॥
ಯಾ ದಿವ್ಯೇತಿ ಚ ಮಂತ್ರೇಣ ತತೋ ಹ್ಯರ್ಘ್ಯಂ ಪ್ರದಾಪಯೇತ್ ।
ಪಿತೃಪಾತ್ರೇ ಸಮಾದಾಯ ಅರ್ಘ್ಯಪಾತ್ರಾಣಿ ಕೃತ್ಸ್ನಶಃ ॥ ೨೩ ॥
ಅಧೋಮುಖಂ ಚ ತತ್ಪಾತ್ರಂ ಮಂತ್ರವತ್ಸ್ಥಾಪಯೇತ್ತತಃ ।
ಆಯುಷ್ಕಾಮಸ್ತು ತತ್ತೋಯಂ ಲೋಚನಾಭ್ಯಾಂ ನ ವೀಕ್ಷಯೇತ್॥ ೨೪॥
ತತಸ್ತು ಚಂದನಾದೀನಿ ದೀಪಾಂತಾನಿ ಸಮಾದದೇತ್ ।
ತತಃ ಪಾಕಂ ಸಮಾದಾಯ ಪೃಚ್ಛೇದ್ವಿಪ್ರಾನ್ ದ್ವಿಜೋತ್ತಮಾನ್ ॥ ೨೫ ॥
ಅಹಮಗ್ನೌ ಕರಿಷ್ಯಾಮಿ ಹೋಮಂ ಪಿತೃಸಮುದ್ಭವಂ ।
ಅನುಜ್ಞಾ ದೀಯತಾಂ ಮಹ್ಯಮಪಸವ್ಯಾಶ್ರಿತಸ್ಯ ಭೋಃ ॥ ೨೬ ॥
ಕುರುಷ್ವೇತಿ ಚ ತೈಃ ಪ್ರೋಕ್ತೇ ಗತ್ವಾಽಗ್ನಿಶರಣಂ ತತಃ ।
ಅಗ್ನಯೇ ಕವ್ಯವಾಹನಾಯ ಸ್ವಾಹೇತಿ ಪ್ರಥಮಾಹುತಿಃ ॥ ೨೭ ॥
ಸೋಮಾಯ ಪಿತೃಮತೇ ಸ್ವಧೇತಿ ಚ ತತಃ ಪರಂ ।
ಹುತಮನ್ನಂ ಚ ಶೇಷಂ ಚ ಶ್ರಾದ್ಧಾರ್ಹೇಭ್ಯಃ ಪ್ರದೀಯತೇ ॥ ೨೮ ॥

---

೨೧. ಯಾದಿವ್ಯಾ ಇತ್ಯಾದಿ ಮಂತ್ರದಿಂದ ಸ್ವಾಹಾಕಾರದಿಂದ ಸಹಿತವಾಗಿ ಪಿತೃಗಳ ಅರ್ಘ್ಯಪಾತ್ರೆಗಳಲ್ಲಿ ನೀರನ್ನು ಹಾಕಬೇಕು.

೨೨–೨೩. ತಿಲೋಸಿ ಸೋಮದೈವತ್ಯ ಇತ್ಯಾದಿ ಮಂತ್ರದಿಂದ ಎಳ್ಳನ್ನು ಹಾಕಬೇಕು. ಅನಂತರ ಯಾದಿವ್ಯೇತ್ಯಾದಿ ಮಂತ್ರದಿಂದ ಅರ್ಘ್ಯಪಾತ್ರೆಗಳನ್ನೆಲ್ಲ ತೆಗೆದುಕೊಂಡು ಪಿತೃಪಾತ್ರೆಯಲ್ಲಿ ಅರ್ಘ್ಯವನ್ನು ನೀಡಬೇಕು.

೨೪. ಬಳಿಕ ಆ ಪಾತ್ರೆಗಳನ್ನು ಮಂತ್ರಪೂರ್ವಕವಾಗಿ ಕೆಳಮುಖವಾಗಿಡಬೇಕು. ಆಯುಸ್ಸನ್ನು ಬಯಸುವವನು ಆ ನೀರನ್ನು ಕಣ್ಣಿನಿಂದ ನೋಡಬಾರದು.

೨೫–೨೬. ಅನಂತರ ಗಂಧ ಮೊದಲ್ಗೊಂಡು ದೀಪಾಂತವಾಗಿ ಎಲ್ಲವನ್ನೂ ಕೊಟ್ಟು ಚರುವನ್ನು ತೆಗೆದುಕೊಂಡು ಬಂದು ಬ್ರಾಹ್ಮಣರನ್ನು ಕುರಿತು, ನಾನು ಅಗ್ನಿಯಲ್ಲಿ ಪಿತೃಹೋಮವನ್ನು ಮಾಡುವೆನು. ಅಪಸವ್ಯದಿಂದಿರುವ ನನಗೆ ಅನುಜ್ಞೆಯನ್ನು ಕೊಡಿರಿ ಎಂದು ಕೇಳಬೇಕು.

೨೭–೩೦. ಅವರು ಮಾಡೆಂದು ಹೇಳಲು ಅಗ್ನಿಶಾಲೆಗೆ ಹೋಗಿ ಅಗ್ನಯೇ ಕವ್ಯವಾಹನಾಯ ಸ್ವಾಹಾ ಎಂದು ಮೊದಲಿನ ಆಹುತಿಯನ್ನೂ, ಸೋಮಾಯ ಪಿತೃಮತೇ ಸ್ವಧಾ ಎಂದು ಎರಡನೆ ಆಹುತಿಯನ್ನೂ ಕೊಟ್ಟು ಉಳಿದ ಅನ್ನವನ್ನು

ಇಷ್ಟಮನ್ನಂ ತತೋ ದತ್ವಾ ಪಾತ್ರಮಾಲಭ್ಯ ಸಂಜಪೇತ್ ।
ವಿಪ್ರಾಂಗುಷ್ಠಂ ಸಮಾದಾಯ ಪಾಕಮಧ್ಯೇ ನಿಧಾಯ ಚ ॥ ೨೯ ॥
ಪೃಥಿವೀ ತೇ ಪಾತ್ರಮಾದಾಯ ವೈಷ್ಣವ್ಯಾ ಚ ಋಚಾ ತಥಾ ।
ಸ್ವಹಸ್ತೇನ ನ ವೈ ದದ್ಯಾತ್ಪ್ರತ್ಯಕ್ಷಂ ಲವಣಂ ತಥಾ ॥ ೩೦ ॥
ಸ್ವಹಸ್ತೇನ ಚ ಯದ್ದತ್ತಂ ಪ್ರತ್ಯಕ್ಷಂ ಲವಣಂ ನೃಪ ।
ತಚ್ಛ್ರಾದ್ಧಂ ವ್ಯರ್ಥತಾಂ ಯಾತಿ ಘೃತೇ ದತ್ತೇಽರ್ಧಭುಕ್ತಕೇ ।
ತೃಪ್ತಾನ್ ಜ್ಞಾತ್ವಾ ತತೋ ವಿಪ್ರಾನಗ್ರೇ ತ್ವನ್ನಂ ಪರಿಕ್ಷಿಪೇತ್ ॥ ೩೧ ॥
ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ ।
ಭೂಮೌ ದತ್ತೇನ ತೃಪ್ಯಂತು ತೃಪ್ತಾ ಯಾಂತು ಪರಾಂ ಗತಿಂ ॥ ೩೨ ॥
ಸಕೃತ್ಸಕೃಜ್ಜಲಂ ದತ್ವಾ ಗಾಯತ್ರೀಂತ್ರಿತಯಂ ಜಪೇತ್ ।
ಮಧುವಾತೇತಿ ಸಂಕೀರ್ತ್ಯ ತತಃ ಪೃಚ್ಛೇದ್ದ್ವಿಜೋತ್ತಮಾನ್ ॥ ೩೩ ॥
ತೃಪ್ತಾಸ್ಥ ಇತಿ ರಾಜೇಂದ್ರ ಅನುಜ್ಞಾಂ ಪ್ರಾರ್ಥಯೇತ್ತತಃ ।
ಬಂಧೂನಾಂ ಭೋಜನಾರ್ಥಾಯ ಶೇಷಸ್ಯಾಽನ್ನಸ್ಯ ಭಕ್ತಿಮಾನ್ ॥ ೩೪ ॥
ಉಚ್ಛಿಷ್ಟಸನ್ನಿಧೌ ಪಶ್ಚಾತ್ಪಿತೃವೇದಿಂ ಸಮಾಚರೇತ್ ।
ಪಿತೃವಿಪ್ರಾಸನಸ್ಥಾನಾಂ ನೋಚ್ಛಿಷ್ಟಂ ದ್ವಿಜಸನ್ನಿಧೌ ॥ ೩೫ ॥
ತತೋ ವೇದಿಂ ಸಮಾದಾಯ ಪೈತೃಕೀಂ ದಕ್ಷಿಣಾಪ್ಲವಾಂ ।
ತಸ್ಯಾಂ ದರ್ಭಾನ್ ಸಮಾದಾಯ ಕುರ್ಯಾಚ್ಚೈವಾಽವನೇಜನಂ ॥ ೩೬ ॥

---

ಶ್ರಾದ್ಧಾರ್ಹ ಬ್ರಾಹ್ಮಣರಿಗೆ ಬಡಿಸಿ ಎಲೆಯನ್ನು ಹಿಡಿದುಕೊಂಡು ಬ್ರಾಹ್ಮಣರ ಅಂಗುಷ್ಠವನ್ನು ಅನ್ನದ ನಡುವೆ ಇರಿಸಿ ಪೃಥಿವೀತೇಪಾತ್ರಂ ಇತ್ಯಾದಿ ಮಂತ್ರವನ್ನೂ, ವೈಷ್ಣವ ಋಕ್ಕನ್ನೂ ಜಪಿಸಬೇಕು. ತನ್ನ ಕೈಯಿಂದ ಉಪ್ಪನ್ನು ಕೊಡಬಾರದು.

೩೧–೩೨. ಕೈಯಿಂದ ಉಪ್ಪನ್ನು ಕೊಟ್ಟರೂ, ಅರ್ಧ ಭೋಜನವಾದಮೇಲೆ ತುಪ್ಪವನ್ನು ಬಡಿಸಿದರೂ ಆ ಶ್ರಾದ್ಧವು ವ್ಯರ್ಥವಾಗುವುದು. ಬಳಿಕ ಬ್ರಾಹ್ಮಣರು ತೃಪ್ತಿಗೊಂಡಿರುವರೆಂದರಿತು ಅವರ ಮುಂದೆ ಅಗ್ನಿದಗ್ಧಾ ಇತ್ಯಾದಿ ಮಂತ್ರದಿಂದ ಅನ್ನವನ್ನು ಹಾಕಬೇಕು.

೩೩–೩೪. ಒಂದೊಂದು ಸಾರಿ ನೀರನ್ನು ಕೊಟ್ಟು ಮೂರು ಸಾರಿ ಗಾಯತ್ರಿಯನ್ನು ಜಪಿಸಿ ಮಧುವಾತೇತ್ಯಾದಿ ಮಂತ್ರವನ್ನು ಉಚ್ಚರಿಸಿ ಬ್ರಾಹ್ಮಣರನ್ನು ಕುರಿತು ತೃಪ್ತಿಗೊಂಡಿದ್ದೀರೊ? ಎಂದು ಪ್ರಶ್ನಿಸಿ ಉಳಿದ ಅನ್ನವನ್ನು ಬಂಧುಗಳು ಭುಂಜಿಸುವುದಕ್ಕೆ ಅನುಜ್ಞೆಯನ್ನು ಕೊಡಿರಿ ಎಂದು ಭಕ್ತಿಯಿಂದ ಪ್ರಾರ್ಥಿಸಬೇಕು.

೩೫. ಅನಂತರ ಉಚ್ಛಿಷ್ಟದ ಹತ್ತಿರ ಪಿತೃವೇದಿಯನ್ನು ಕಲ್ಪಿಸಬೇಕು. ಪಿತೃಸ್ಥಾನದ ಬ್ರಾಹ್ಮಣರ ಹತ್ತಿರ ಉಚ್ಛಿಷ್ಟವನ್ನಿಡಬಾರದು.

೩೬–೩೭. ಬಳಿಕ ದಕ್ಷಿಣಾಭಿಮುಖವಾಗಿ ಪಿತೃವೇದಿಯನ್ನು ರಚಿಸಿ ಅವರಲ್ಲಿ

ವಿಭಕ್ತ್ಯಾ ಪೂರ್ವಯಾ ಪಶ್ಚಾತ್ಪಿಂಡಾಂ ದದ್ಯಾದ್ಯಥಾ ಕ್ರಮಂ ।
ಭೂಯೋಽಪ್ಯತ್ರ ಜಲಂ ದದ್ಯಾತ್ಪಿತೃತೀರ್ಥೇನ ಪಾರ್ಥಿವ ।
ಸೂತ್ರಂ ಚ ಪ್ರತಿಪಿಂಡೇ ವೈ ದದ್ಯಾತ್ತೇಷು ಪೃಥಕ್ ಪೃಥಕ್ ॥ ೩೭ ॥
ಯಃ ಸೂತ್ರಂ ಪೂರ್ವಪಿಂಡೇಷು ಸತತಂ ವಿನಿಯೋಜಯೇತ್ ।
ಸ ವಿರೋಧಂ ಚರೇತ್ತೇಷಾಂ ತ್ರೋಟನಾಚ್ಚ ಪರಸ್ಪರಂ ॥ ೩೮ ॥
ತತಃ ಸಂಪೂಜಯೇತ್ಸರ್ವಾನ್ ಪಿಂಡಾನ್ ಯದ್ವದ್ದ್ವಿಜೋತ್ತಮಾನ್ ।
ಆಚಮ್ಯ ಪ್ರಕ್ಷಾಲ್ಯ ತಥಾ ಹಸ್ತೌ ಪಾದೌ ಚ ಪಾರ್ಥಿವ ॥ ೩೯ ॥
ನಮಸ್ಕೃತ್ಯ ಪಿತೄನ್ ಪಶ್ಚಾತ್ಸಂಪ್ರೋಕ್ಷಿತಂ ತತಃ ಪರಂ ।
ಕೃತ್ವಾ ಸವ್ಯೇನ ರಾಜೇಂದ್ರ ಯಾಚಯಿತ್ವಾ ವರಾಶಿಷಃ ॥ ೪೦ ॥
ಅಕ್ಷಯ್ಯಸಲಿಲಂ ದೇಯಂ ಷಷ್ಠ್ಯಾಚೈವ ತತಃ ಪರಂ ।
ಪವಿತ್ರಾಣಿ ಸಮಾದಾಯ ಊರ್ಧ್ವಗಂ ಸ್ವಧೇತಿ ಕೀರ್ತಯೇತ್ ।
ಅಸ್ತು ಸ್ವಧೇತಿ ತೈರುಕ್ತೇ ಪಿಂಡೋಪರಿ ಪರಿಕ್ಷಿಪೇತ್ ॥ ೪೧ ॥
ತತೋ ಮಧು ಸಮಾದಾಯ ಪಾಯಸಂ ಚ ತಿಲೋದಕಂ ।
ಊರ್ಜಸ್ವೇತಿ ಚ ಮಂತ್ರೇಣ ಪಿತೄಣಾಮುಪರಿ ಕ್ಷಿಪೇತ್ ॥ ೪೨ ॥
ಉತ್ತಾನಮರ್ಘ್ಯಪಾತ್ರಂ ತು ಕೃತ್ವಾ ದದ್ಯಾಚ್ಚ ದಕ್ಷಿಣಾಂ ।
ಹಿರಣ್ಯಂ ದೇವತಾನಾಂ ಚ ಪಿತೄಣಾಂ ರಜತಂ ತಥಾ ॥ ೪೩ ॥

---

ದರ್ಭೆಯನ್ನು ಹಾಸಿ ನೀರನ್ನು ಚಿಮುಕಿಸಿ ಹಿಂದೆ ಹೇಳಿದ ವಿಭಕ್ತಿಯಿಂದ ಕ್ರಮವಾಗಿ ಪಿಂಡವನ್ನು ಕೊಡಬೇಕು. ಮರಳಿ ಪಿತೃತೀರ್ಥದಿಂದ ಜಲವನ್ನಿತ್ತು ಪ್ರತಿ ಪಿಂಡದಲ್ಲಿಯೂ ಪ್ರತ್ಯೇಕವಾಗಿ ನೂಲನ್ನಿಡಬೇಕು.

೩೮. ಎಲ್ಲ ಪಿಂಡಗಳಿಗೆ ಒಟ್ಟಾಗಿ ಒಂದೇ ನೂಲನ್ನಿಟ್ಟರೆ ಆ ಪಿತೃಗಳಿಗೆ ಪರಸ್ಪರ ವಿರೋಧವುಂಟಾಗುವುದು.

೩೯–೪೧. ಅನಂತರ ಎಲ್ಲ ಪಿಂಡಗಳನ್ನೂ ಬ್ರಾಹ್ಮಣರನ್ನು ಪೂಜಿಸಿದಂತೆ ಪೂಜಿಸಬೇಕು. ಬಳಿಕ ಆಚಮನ ಮಾಡಿ ಕೈಕಾಲುಗಳನ್ನು ತೊಳೆದುಕೊಂಡು ಪಿತೃಗಳನ್ನು ನಮಸ್ಕರಿಸಿ ಪ್ರೋಕ್ಷಣೆಮಾಡಿ ಸವ್ಯದಿಂದ ಉತ್ತಮವಾದ ಆಶೀರ್ವಾದಗಳನ್ನು ಯಾಚಿಸಿ ಷಷ್ಠೀ ವಿಭಕ್ತಿಯಿಂದ ಅಕ್ಷಯ್ಯಸಲಿಲವನ್ನಿತ್ತು ಪವಿತ್ರಗಳನ್ನು ತೆಗೆದುಕೊಂಡು ಸ್ವಧಾ ಎನ್ನಬೇಕು. ಅವರು ಅಸ್ತುಸ್ವಧಾ ಎನ್ನಲು ಅವುಗಳನ್ನು ಪಿಂಡಗಳ ಮೇಲೆ ಹಾಕಬೇಕು.

೪೨. ತರುವಾಯ ಜೇನು, ಪಾಯಸ, ತಿಲೋದಕಗಳನ್ನು ತೆಗೆದುಕೊಂಡು ಊರ್ಜಸ್ವೇತ್ಯಾದಿ ಮಂತ್ರದಿಂದ ಪಿತೃಗಳ ಮೇಲೆ ಹಾಕಬೇಕು.

೪೩. ಅರ್ಘ್ಯಪಾತ್ರೆಗಳನ್ನು ಮೇಲ್ಮುಖವಾಗಿರಿಸಿ ದೇವತೆಗಳಿಗೆ ಚಿನ್ನವನ್ನೂ, ಪಿತೃಗಳಿಗೆ ರಜತವನ್ನೂ ದಕ್ಷಿಣೆಯಾಗಿ ಕೊಡಬೇಕು.

ತತಃ ಸ್ವಸ್ತ್ಯುದಕಂ ದದ್ಯಾತ್ಪಿತೃಪೂರ್ವಂ ಚ ಸವ್ಯತಃ ।
ನ ಸ್ತ್ರೀಭಿರ್ನ ಚ ಬಾಲೇನ ನಾನ್ಯೇನೈವ ಚ ಕೇನಚಿತ್ ॥ ೪೪ ॥
ಶ್ರಾದ್ಧೀಯವಿಪ್ರಪಾತ್ರಂ ಚ ಸ್ವಯಮೇವ ಪ್ರಚಾಲಯೇತ್ ॥ ೪೫ ॥
ತತಃ ಕೃತಾಂಜಲಿರ್ಭೂತ್ವಾ ಪ್ರಾರ್ಥಯೇತ್ಪಾರ್ಥಿವೋತ್ತಮ ।
ಅಘೋರಾಃ ಪಿತರಃ ಸಂತು ಅಸ್ಮದ್ಗೋತ್ರಂ ವಿವರ್ಧತಾಂ ॥ ೪೬ ॥
ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ನಃ ।
ಶ್ರದ್ಧಾ ಚ ನೋ ಮಾವ್ಯಗಮದ್ಬಹುದೇಯಂ ಚ ನೋಽಸ್ತ್ವಿತಿ ॥ ೪೭ ॥
ಅನ್ನಂ ಚ ನೋ ಬಹುಭವೇದತಿಥೀಂಶ್ಚ ಲಭೇಮಹಿ ।
ಯಾಚಿತಾರಶ್ಚ ನಃ ಸಂತು ಮಾ ಚ ಯಾಚಿಷ್ಮ ಕಂಚನ ॥ ೪೮ ॥
ಏತಾ ಏವಾಽಽಶಿಷಃ ಸಂತು ವಿಶ್ವೇದೇವಾಃ ಪ್ರೀಯಂತಾಂ ತತಃ ।
ಸ್ವಸ್ತ್ಯರ್ಥಮುದಕಂ ದದ್ಯಾತ್ಪಿತೃಪೂರ್ವಂ ಚ ಸವ್ಯತಃ ॥ ೪೯ ॥
ವಾಜೇ ವಾಜೇತಿ ಚ ಋಚಾ ವಿಸೃಜೇಚ್ಚ ತತಃ ಪರಂ ।
ಆಮಾವಾಜಸ್ಯೇತಿ ಪ್ರದಕ್ಷಿಣೀ ಕೃತ್ಯೋಪವೇಶಯೇತ್ ॥ ೫೦ ॥

---

೪೪–೪೫. ಅನಂತರ ಪಿತೃಪೂರ್ವಕವಾಗಿ ಸವ್ಯದಿಂದ ಸ್ವಸ್ತ್ಯುದಕವನ್ನು ಕೊಟ್ಟು ಶ್ರಾದ್ಧ ಬ್ರಾಹ್ಮಣರ ಭೋಜನ ಪಾತ್ರೆಗಳನ್ನು ತಾನೇ ತೆಗೆದುಹಾಕ ಬೇಕು. ಹೆಂಗಸರೂ, ಬಾಲಕರೂ, ಇತರರೂ ಭೋಜನ ಪಾತ್ರೆಗಳನ್ನು ತೆಗೆಯ ಬಾರದು.

೪೬–೪೭. ಅನಂತರ ಕೈಮುಗಿದುಕೊಂಡು ಹೀಗೆ ಪ್ರಾರ್ಥಿಸಬೇಕು. ನಮ್ಮ ಪಿತೃಗಳು ಅಘೋರರಾಗಲಿ, ನಮ್ಮ ಗೋತ್ರವು ವೃದ್ಧಿಗೊಳ್ಳಲಿ. ನಮಗೆ ದಾನ ಮಾಡುವವರು ಹೆಚ್ಚಲಿ. ನಮ್ಮ ವೇದಗಳೂ ಸಂತತಿಯೂ ವೃದ್ಧಿಯಾಗಲಿ. ನಮ್ಮ ಶ್ರದ್ಧೆಯು ಅಳಿಯದಿರಲಿ. ನಮ್ಮ ಈ ದಾನವು ಬಹಳವಾಗಲಿ.

೪೮. ನಮಗೆ ಅನ್ನವು ಬಹಳವಾಗಿ ಉಂಟಾಗಲಿ. ಅತಿಥಿಗಳು ದೊರಕಲಿ. ನಮ್ಮನ್ನು ಬಹುಮಂದಿ ಯಾಚಿಸಲಿ. ಯಾರನ್ನೂ ನಾವು ಯಾಚಿಸುವಂತಾಗ ದಿರಲಿ.

೪೯. ಈ ಆಶೀರ್ವಾದವು ನಮಗಾಗಲಿ. ವಿಶ್ವೇದೇವತೆಗಳು ಪ್ರೀತರಾಗಲಿ. ಹೀಗೆ ಹೇಳಿ ಅನಂತರ ಸವ್ಯದಿಂದ ಪಿತೃಪೂರ್ವಕವಾಗಿ ಸ್ವಸ್ತಿಗಾಗಿ ಉದಕ ವನ್ನು ಕೊಡಬೇಕು.

೫೦. ಬಳಿಕ ವಾಜೇವಾಜೇತ್ಯಾದಿ ಋಕ್ಕಿನಿಂದ ಬ್ರಾಹ್ಮಣರನ್ನು ವಿಸರ್ಜನೆ ಮಾಡಿ ಆಮಾವಾಜಸ್ಯೇತ್ಯಾದಿ ಮಂತ್ರದಿಂದ ಪ್ರದಕ್ಷಿಣೆಗೈದು ಕೂತುಕೊಳ್ಳ ಬೇಕು.

ಪಾದಾವಮರ್ದನಂ ಕೃತ್ವಾ ಆಸೀಮಾಂತಮನುವ್ರಜೇತ್ ।
ಬಲಿಂ ಚ ನಿಕ್ಷಿಪೇತ್ತಸ್ಮಾದ್ಭೋಜನಂ ಚ ಸಮಾಚರೇತ್ ॥ ೫೧ ॥
ಮೌನೇನ ದೃಶ್ಯತೇ ಸೂರ್ಯೋ ಯಾವತ್ತಾವನ್ನರಾಧಿಪ ॥ ೫೨ ॥
ಯಶ್ಚೈವಾಸ್ತಮಿತೇ ಸೂರ್ಯೇ ಭುಂಕ್ತೇ ಚ ಶ್ರಾದ್ಧಕೃನ್ನರಃ ।
ವ್ಯರ್ಥತಾಂ ಯಾತಿ ತಚ್ಛ್ರಾದ್ಧಂ ತಸ್ಮಾದ್ಭುಂಜೀತ ನೋ ನಿಶಿ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರಾದ್ಧವಿಧಿವರ್ಣನಂ" ನಾಮ
ಚತುರ್ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೫೧–೫೨. ಬ್ರಾಹ್ಮಣರ ಕಾಲುಗಳನ್ನು ಒತ್ತಿ ಎಲ್ಲೆಯವರೆಗೆ ಹಿಂಬಾಲಿಸಬೇಕು. ಅನಂತರ ಬಲಿಯನ್ನಿತ್ತು ಸೂರ್ಯಾಸ್ತಮಯದೊಳಗೆ ಮೌನದಿಂದ ಭುಂಜಿಸಬೇಕು.

೫೩. ಸೂರ್ಯನು ಮುಳುಗಿದ ಮೇಲೆ ಭೋಜನ ಮಾಡಿದರೆ ಅವನು ಮಾಡಿದ ಶ್ರಾದ್ಧವು ವ್ಯರ್ಥವಾಗುವುದು. ಆದುದರಿಂದ ರಾತ್ರಿಯಲ್ಲಿ ಭುಂಜಿಸಕೂಡದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರಾದ್ಧವಿಧಿವರ್ಣನ"ವೆಂಬ
ಇನ್ನೂರಿಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

### ಸಪಿಂಡೀಕರಣವಿಧಿವರ್ಣನಂ

ಆನರ್ತ ಉವಾಚ :—

ಏಕೋದ್ದಿಷ್ಟವಿಧಿಂ ಬ್ರೂಹಿ ಮಮ ತ್ವಂ ವದತಾಂ ವರ ।
ಪಾರ್ವಣಂ ತು ಯಥಾ ಪ್ರೋಕ್ತಂ ವಿಸ್ತರೇಣ ಮಹಾಮತೇ ॥ ೧ ॥

ಭರ್ತೃಯಜ್ಞ ಉವಾಚ :—

ತ್ರೀಣಿ ಸಂಚಯನಾದರ್ವಾಕ್ತಾನಿ ತ್ವಂ ಶೃಣು ಸಾಂಪ್ರತಂ ।
ಯಸ್ಮಿನ್ ಸ್ಥಾನೇ ಭವೇನ್ಮೃತ್ಯುಸ್ತತ್ರ ಶ್ರಾದ್ಧಂ ತು ಕಾರಯೇತ್ ॥ ೨ ॥
ಏಕೋದ್ದಿಷ್ಟಂ ತತೋ ಮಾರ್ಗೇ ವಿಶ್ರಾಮೋ ಯತ್ರ ಕಾರಿತಃ ।
ತತಃ ಸಂಚಯನಸ್ಥಾನೇ ತೃತೀಯಂ ಶ್ರಾದ್ಧಮಿಷ್ಯತೇ ॥ ೩ ॥
ಪ್ರಥಮೇಽಹ್ನಿ ದ್ವಿತೀಯೇಽಹ್ನಿ ಪಂಚಮೇ ಸಪ್ತಮೇ ತಥಾ ।
ನವಮೇ ದಶಮೇ ಚೈವ ನವಶ್ರಾದ್ಧಾನಿ ತಾನಿ ಚ ॥ ೪ ॥
ವೈತರಿಣ್ಯಾಶ್ಚ ಸಂಪ್ರಾಪ್ತೌ ಪ್ರೇತಸ್ತೃಪ್ತಿಮವಾಪ್ನುಯಾತ್ ।
ಏಕೋದ್ದಿಷ್ಟಂ ದೈವಹೀನಮೇಕಾರ್ಘ್ಯೈಕ ಪವಿತ್ರಕಂ ॥ ೫ ॥
ಆವಾಹನಪರಿತ್ಯಕ್ತಂ ಕಾರ್ಯಂ ಪಾರ್ಥಿವಸತ್ತಮ ।
ತೃಪ್ತಿಪ್ರಶ್ನಸ್ತಥಾ ಕಾರ್ಯಃ ಸ್ವದಿತಂ ಚ ಸಕೃತ್ತತಃ ॥ ೬ ॥

---

## ಕನ್ನಡದ ಅನುವಾದ

### ಸಪಿಂಡೀಕರಣವಿಧಿವರ್ಣನ

೧. ಆನರ್ತನು ಹೇಳುತ್ತಾನೆ:—ಮಹರ್ಷಿಯೆ ! ನೀನು ಪಾರ್ವಣವಿಧಿಯನ್ನು ಹೇಳಿದಂತೆಯೇ ಏಕೋದ್ದಿಷ್ಟ ವಿಧಿಯನ್ನೂ ನನಗೆ ಹೇಳುವವನಾಗು.

೨-೩. ಭರ್ತೃಯಜ್ಞನು ಹೇಳುತ್ತಾನೆ :—ಅಸ್ಥಿ ಸಂಚಯನಕ್ಕಿಂತ ಮೊದಲು ಮಾಡಬೇಕಾಗಿರುವ ಮೂರು ಶ್ರಾದ್ಧಗಳನ್ನು ಕೇಳು. ಒಂದು ಏಕೋದ್ದಿಷ್ಟ ಶ್ರಾದ್ಧವನ್ನು ಮರಣ ಹೊಂದಿದ ಸ್ಥಳದಲ್ಲಿಯೂ, ಇನ್ನೊಂದು ಶ್ರಾದ್ಧವನ್ನು ದಾರಿಯಲ್ಲಿ ವಿಶ್ರಾಂತಿಗೊಂಡ ಸ್ಥಳದಲ್ಲಿಯೂ, ಮತ್ತೊಂದನ್ನು ಅಸ್ಥಿಸಂಚಯನ ಸ್ಥಾನದಲ್ಲಿಯೂ ಮಾಡಬೇಕು.

೪. ಮತ್ತು ಪ್ರಥಮ, ದ್ವಿತೀಯ, ಪಂಚಮ, ಸಪ್ತಮ, ನವಮ, ದಶಮ ದಿನಗಳಲ್ಲಿ ಆರು ಶ್ರಾದ್ಧಗಳು ಹೀಗೆ ಒಂಬತ್ತು ಶ್ರಾದ್ಧಗಳನ್ನು ಮಾಡಬೇಕು.

೫-೬. ವೈತರಣಿಯು ಪ್ರಾಪ್ತಿಯಾದ ಕೂಡಲೆ ಪ್ರೇತವು ತೃಪ್ತಿಗೊಳ್ಳು ವುದು. ಏಕೋದ್ದಿಷ್ಟವನ್ನು ವಿಶ್ವೇದೇವತೆಗಳಿಲ್ಲದೆ, ಒಂದು ಅರ್ಘ್ಯ, ಒಂದು

ಅಭಿರಮ್ಯತಾಮಿತಿ ಮಂತ್ರೇಣ ಬ್ರಾಹ್ಮಣಸ್ಯ ವಿಸರ್ಜನಂ ।
ಅಚ್ಛಿನ್ನಾಗ್ರಮಭಿನ್ನಾಗ್ರಂ ಕುರ್ಯಾದ್ದರ್ಭತೃಣದ್ವಯಂ ।
ಪವಿತ್ರಂ ತದ್ವಿಜಾನೀಯಾದೇಕೋದ್ದಿಷ್ಟೇ ವಿಧೀಯತೇ ॥ ೭ ॥
ಸರ್ವತ್ರೈವ ಪಿತಃ ಪ್ರೋಕ್ತಂ ಪಿತಾ ತರ್ಪಣಕರ್ಮಣಿ ।
ಪಿತ್ರೇ ಸಂಕಲ್ಪಕಾಲೇ ಚ ಪಿತುರಕ್ಷಯ್ಯದಾಪನೇ ॥ ೮ ॥
ಗೋತ್ರಂ ಸ್ವರಾಂತಂ ಸರ್ವತ್ರ ಗೋತ್ರೇ ತರ್ಪಣಕರ್ಮಣಿ ।
ಗೋತ್ರಾಯ ಕಲ್ಪನವಿಧೌ ಗೋತ್ರಸ್ಯಾಕ್ಷಯ್ಯದಾಪನೇ ॥ ೯ ॥
ಶರ್ಮನ್ನರ್ಘ್ಯಾದಿ ಕರ್ತವ್ಯೇ ಶರ್ಮಾ ತರ್ಪಣಕರ್ಮಣಿ ।
ಶರ್ಮಣೇ ಸಸ್ಯದಾನೇ ಚ ಶರ್ಮಣೋಽಕ್ಷಯ್ಯಕೇ ವಿಧೌ ॥ ೧೦ ॥
ಮಾತರ್ಮಾತ್ರೇ ತಥಾ ಮಾತುರಾಸನೇ ಕಲ್ಪನೇಽಕ್ಷಯೇ ।
ಗೋತ್ರೇ ಗೋತ್ರಾಯೈ ಗೋತ್ರಾಯಾಃ ಪ್ರಥಮಾದ್ಯಾ ವಿಭಕ್ತಯಃ॥೧೧॥
ದೇವಿ ದೇವ್ಯೈ ತಥಾ ದೇವ್ಯಾ ಏವಂ ಮಾತುಶ್ಚ ಕೀರ್ತಯೇತ್ ।
ಪ್ರಥಮಾ ಚ ಚತುರ್ಥೀ ಚ ಷಷ್ಠೀಸ್ಯಾಚ್ಛ್ರಾದ್ಧಸಿದ್ಧಯೇ ॥ ೧೨ ॥

---

ಪವಿತ್ರಗಳಿಂದ ಆವಾಹನರಹಿತವಾಗಿ ಮಾಡಬೇಕು. ಮತ್ತು ಪಾರ್ವಣದಂತೆಯೇ ತೃಪ್ತಿಪ್ರಶ್ನೆಯನ್ನೂ, ಒಂದು ಸಾರಿ ಸ್ವದಿತವನ್ನೂ ಮಾಡಬೇಕು.

೭. ಈ ಏಕೋದ್ದಿಷ್ಟದಲ್ಲಿ ಅಭಿರಮ್ಯತಾಮಿತ್ಯಾದಿ ಮಂತ್ರದಿಂದ ಬ್ರಾಹ್ಮಣ ವಿಸರ್ಜನೆಯನ್ನೂ, ಕತ್ತರಿಸದೆಯೂ, ಸೀಳದೆಯೂ ಇರುವ ಅಗ್ರವುಳ್ಳ ಎರಡು ದರ್ಭೆಗಳಿಂದ ಪವಿತ್ರವನ್ನೂ ಮಾಡಬೇಕು.

೮. ಪಿತೃಶ್ರಾದ್ಧದಲ್ಲಿ ಎಲ್ಲೆಡೆಯಲ್ಲಿಯೂ ಪಿತಃ ಎಂದೂ, ತರ್ಪಣದಲ್ಲಿ ಪಿತಾ ಎಂದೂ, ಸಂಕಲ್ಪಕಾಲದಲ್ಲಿ ಪಿತ್ರೇ ಎಂದೂ, ಅಕ್ಷಯ್ಯದಾಪನದಲ್ಲಿ ಪಿತುಃ ಎಂದೂ ಉಚ್ಚರಿಸಬೇಕು.

೯. ಎಲ್ಲೆಡೆಯಲ್ಲಿಯೂ ಗೋತ್ರ ಶಬ್ದವನ್ನು ಸ್ವರಾಂತವಾಗಿಯೂ, ತರ್ಪಣದಲ್ಲಿ ಗೋತ್ರೇ ಎಂದೂ, ಸಂಕಲ್ಪದಲ್ಲಿ ಗೋತ್ರಾಯ ಎಂದೂ, ಅಕ್ಷಯ್ಯದಾಪನದಲ್ಲಿ ಗೋತ್ರಸ್ಯ ಎಂದೂ ಹೇಳಬೇಕು.

೧೦. ಅರ್ಘ್ಯಾದಿ ಕಾರ್ಯದಲ್ಲಿ ಶರ್ಮನ್ ಎಂದೂ, ತರ್ಪಣದಲ್ಲಿ ಶರ್ಮಾ ಎಂದೂ, ಸಸ್ಯದಾನದಲ್ಲಿ ಶರ್ಮಣೇ ಎಂದೂ, ಅಕ್ಷಯ್ಯವಿಧಿಯಲ್ಲಿ ಶರ್ಮಣಃ ಎಂದೂ ಉಚ್ಚರಿಸಬೇಕು.

೧೧–೧೨. ಮಾತೃಶ್ರಾದ್ಧದಲ್ಲಿ ಆಸನ, ಸಂಕಲ್ಪ, ಅಕ್ಷಯ್ಯವಿಧಿಗಳಲ್ಲಿ ಮಾತಃ, ಮಾತ್ರೇ, ಮಾತುಃ ಎಂದೂ, ಗೋತ್ರೇ, ಗೋತ್ರಾಯೈ, ಗೋತ್ರಾಯಾಃ ಎಂದೂ, ದೇವಿ, ದೇವ್ಯೈ, ದೇವ್ಯಾಃ ಎಂದೂ ಹೇಳಬೇಕು. ಹೀಗೆ ಶ್ರಾದ್ಧ ಸಿದ್ಧಿಗಾಗಿ ಪ್ರಥಮಾ, ಚತುರ್ಥೀ, ಷಷ್ಠೀ ವಿಭಕ್ತಿಗಳನ್ನು ಉಪಯೋಗಿಸಬೇಕು

ವಿಭಕ್ತಿರಹಿತಂ ಶ್ರಾದ್ಧಂ ಕ್ರಿಯತೇ ವಾ ವಿಪರ್ಯಯಾತ್ ।
ಅಕೃತಂ ತದ್ವಿಜಾನೀಯಾತ್ಪಿತೄಣಾಂ ನೋಪತಿಷ್ಠತಿ ॥ ೧೩ ॥
ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಣೇನ ವಿಜಾನತಾ ।
ವಿಭಕ್ತಿಭಿರ್ಯಥೋಕ್ತಾಭಿಃ ಶ್ರಾದ್ಧೇ ಕಾರ್ಯೋ ವಿಧಿಃ ಸದಾ ॥ ೧೪ ॥
ತತಃ ಸಪಿಂಡೀಕರಣಂ ವತ್ಸರಾದೂರ್ಧ್ವತಃ ಸ್ಥಿತಂ ।
ವೃದ್ಧಿರ್ವಾಽಽಗಾಮಿನೀ ಚೇತ್ಸ್ಯಾತ್ತದಾರ್ವಾಗಪಿ ಕಾರಯೇತ್ ॥ ೧೫ ॥
ಪಾರ್ವಣೋಕ್ತವಿಧಾನೇನ ತ್ರಿದೈವತ್ಯಮುದೈವಿಕಂ ।
ಪ್ರೇತಮುದ್ದಿಶ್ಯ ಕರ್ತವ್ಯಮೇಕೋದ್ದಿಷ್ಟಂ ಚ ಪಾರ್ಥಿವ ॥ ೧೬ ॥
ಏಕೇನೈವ ತು ಪಾಕೇನ ಮಮ ಚೈತನ್ಮತಂ ಸ್ಮೃತಂ ।
ಅರ್ಘ್ಯಪಾತ್ರಂ ಸಮಾದಾಯ ಯತ್ಪ್ರೇತಾರ್ಥಂ ಪ್ರಕಲ್ಪಿತಂ ॥ ೧೭ ॥
ಪಿತೃಪಾತ್ರೇಷು ತ್ರಿಷ್ವೇವ ತ್ರಿಧಾ ತಚ್ಚ ಪರಿಕ್ಷಿಪೇತ್ ।
ಏವಂ ಪಿಂಡಂ ತ್ರಿಧಾ ಕೃತ್ವಾ ಪಿತೃಪಿಂಡೇಷು ಚ ತ್ರಿಷು ॥ ೧೮ ॥
ಯೇ ಸಮಾನೇತಿ ಮಂತ್ರಾಭ್ಯಾಂ ನಸ್ಯಾತ್ಪ್ರೇತಸ್ತತಃ ಪರಂ ।
ಅವನೇಜನಂ ತತಃ ಕೃತ್ವಾ ಪಿತೃಪೂರ್ವಂ ಯಥಾಕ್ರಮಂ ॥ ೧೯ ॥
ಗಂಧಧೂಪಾದಿಕಂ ಸರ್ವಂ ಪುನರೇವ ಪ್ರದಾಪಯೇತ್ ।
ಪಿತೃಪೂರ್ವಂ ಸಮುಚ್ಚಾರ್ಯ ವರ್ಜಯೇಚ್ಚ ಚತುರ್ಥಕಂ ॥ ೨೦ ॥

---

೧೩. ವಿಭಕ್ತಿಯಿಲ್ಲದೆ ಅಥವಾ ವಿಭಕ್ತಿವ್ಯತ್ಯಾಸದಿಂದ ಶ್ರಾದ್ಧವನ್ನು ಮಾಡಿದರೆ ಅದು ಮಾಡದಿದ್ದಂತೆಯೇ ಎಂದು ತಿಳಿಯಬೇಕು. ಅದು ಪಿತೃಗಳಿಗೆ ಸೇರುವುದಿಲ್ಲ.

೧೪. ಆದುದರಿಂದ ಅರಿತ ಬ್ರಾಹ್ಮಣನು ಹಿಂದೆ ಹೇಳಿದ ವಿಭಕ್ತಿಗಳಿಂದ ಶ್ರಾದ್ಧವನ್ನು ಮಾಡಬೇಕು.

೧೫. ಸಪಿಂಡೀಕರಣವನ್ನು ಒಂದು ವರ್ಷವಾದ ಮೇಲೆಯೂ ಅಥವಾ ವರ್ಷವಾಗುವುದಕ್ಕಿಂತ ಮುಂಚೆಯೂ ವೃದ್ಧಿ, ಆಗಾಮಿನೀ ಎಂದು ಎರಡು ವಿಧವಾಗಿ ಮಾಡತಕ್ಕದ್ದು.

೧೬–೨೦. ಅರಸ! ಏಕೋದ್ದಿಷ್ಟವನ್ನು ಪ್ರೇತೋದ್ದೇಶ್ಯಕವಾಗಿ ತ್ರಿದೈವತ್ಯವಾಗಿಯೂ, ಅದೈವಿಕವಾಗಿಯೂ ಒಂದೇ ಪಾಕದಿಂದ ಮಾಡಬೇಕು. ಇದು ನನಗೆ ಸಮ್ಮತವಾದುದು. ಪ್ರೇತಕ್ಕಾಗಿ ಕಲ್ಪಿಸಿದ ಅರ್ಘ್ಯಪಾತ್ರೆಯನ್ನು ತೆಗೆದುಕೊಂಡು ಮೂರು ಪಿತೃಪಾತ್ರೆಗಳಲ್ಲಿಯೂ ಮೂರು ವಿಧವಾಗಿ ನೀರನ್ನು ಸೇರಿಸಬೇಕು. ಹೀಗೆಯೇ ಪಿಂಡವನ್ನೂ ಮೂರುಭಾಗ ಮಾಡಿ ಮೂರು ಪಿತೃಪಿಂಡಗಳಲ್ಲಿಯೇ ಸಮಾನೇತ್ಯಾದಿ ಮಂತ್ರಗಳಿಂದ ಸೇರಿಸಬೇಕು. ಅನಂತರ ಪ್ರೇತವಿರುವುದಿಲ್ಲ. ಬಳಿಕ ಅವನೇಜನವನ್ನು ಮಾಡಿ ಮರಳಿ ಕ್ರಮದಂತೆ ಪಿತೃ

ಕೇಚಿಚ್ಚತುರ್ಥಂ ಕುರ್ವಂತಿ ಪ್ರೇತಂ ಚ ಸ್ವಪಿತುಸ್ತತಃ ।
ಪಿತುಃ ಪೂರ್ವಂ ಭವೇಚ್ಛ್ರಾದ್ಧಂ ಪರಂ ನೈತನ್ಮತಂ ಮಮ ॥ ೨೧ ॥
ಸಪಿಂಡೀಕರಣಾದೂರ್ಧ್ವಮೇಕೋದ್ದಿಷ್ಟಂ ನ ಕಾರಯೇತ್ ।
ಕ್ಷಯಾಹಂ ಚ ಪರಿತ್ಯಜ್ಯ ಶಸ್ತ್ರಾಹತ ಚತುರ್ದಶೀಂ ॥ ೨೨ ॥
ಯಃ ಸಪಿಂಡೀಕೃತಂ ಪ್ರೇತಂ ಪೃಥಕ್ಪಿಂಡೇ ನಿಯೋಜಯೇತ್ ।
ಅಕೃತಂ ತದ್ವಿಜಾನೀಯಾತ್ಪಿತೃಹಾ ಚೋಪಜಾಯತೇ ॥ ೨೩ ॥
ಪಿತಾ ಯಸ್ಯ ತು ನಿರ್ವೃತ್ತೋ ಜೀವತೇ ಚ ಪಿತಾಮಹಃ ।
ಪಿತುಃ ಸ ನಾಮ ಸಂಕೀರ್ತ್ಯ ಕೀರ್ತಯೇತ್ಪ್ರಪಿತಾಮಹಂ ॥ ೨೪ ॥
ಪಿತಾಮಹಸ್ತು ಪ್ರತ್ಯಕ್ಷಂ ಭುಕ್ತ್ವಾ ಗೃಹ್ಣಾತಿ ಪಿಂಡಕಂ ।
ಪಿತಾಮಹಕ್ಷಯಾಹೇ ಚ ಪಾರ್ವಣಂ ಶ್ರಾದ್ಧಮಿಷ್ಯತೇ ॥ ೨೫ ॥
ಜನಕಂ ಸ್ವಂ ಪರಿತ್ಯಜ್ಯ ಕಥಂ ಚಿನ್ನಾಽಸ್ಯ ದೀಯತೇ ।
ತಸ್ಮಾತ್ಕೃತೇನ ಶ್ರಾದ್ಧೇನ ನ ಸ್ವಲ್ಪಂ ಪಿತೃತೋ ಭಯಂ ॥ ೨೬ ॥
ಅಮಾವಾಸ್ಯಾಸು ಸರ್ವಾಸು ಮೃತೇ ಪಿತರಿ ಪಾರ್ವಣಂ ।
ನಭಸ್ಯಾಽಪರಪಕ್ಷಸ್ಯ ಮಧ್ಯೇ ಚೈತದುದಾಹೃತಂ ॥ ೨೭ ॥

---

ಪೂರ್ವಕವಾಗಿ ಗಂಧ ಧೂಪಾದಿಗಳನ್ನೆಲ್ಲ ಸಮರ್ಪಿಸಬೇಕು. ನಾಲ್ಕನೆಯವನನ್ನು ತ್ಯಜಿಸಬೇಕು.

೨೧. ಕೆಲವರು ಪ್ರೇತವಾಗಿರುವ ತನ್ನ ತಂದೆಯನ್ನು ನಾಲ್ಕನೆಯವನನ್ನಾಗಿ ಮಾಡುವರು. ಶ್ರಾದ್ಧವನ್ನು ಪಿತೃಪೂರ್ವಕವಾಗಿ ಮಾಡಬೇಕಾಗಿರುವುದರಿಂದ ಇದು ನನಗೆ ಅಭಿಮತವಿಲ್ಲ.

೨೨. ಕ್ಷಯದಿನ, ಘಾತಕಚತುರ್ದಶೀ ಇವುಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ಸಪಿಂಡೀಕರಣವಾದಮೇಲೆ ಏಕೋದ್ದಿಷ್ಟವನ್ನು ಮಾಡಬಾರದು.

೨೩. ಸಪಿಂಡೀಕೃತವಾದ ಪ್ರೇತವನ್ನು ಬೇರೆ ಪಿಂಡದಲ್ಲಿ ಸೇರಿಸುವವನು ಶ್ರಾದ್ಧ ಮಾಡಿದವನಂತಾಗುವುದಿಲ್ಲ. ಮತ್ತು ಪಿತೃಘ್ನನಾಗುವನು.

೨೪. ಯಾವನ ತಂದೆಯು ಮಡಿದಿರುವನೋ, ಅಜ್ಜನು ಬದುಕಿರುವನೋ, ಅವನು ತಂದೆಯ ಮತ್ತು ಪ್ರಪಿತಾಮಹರ ನಾಮವನ್ನುಚ್ಚರಿಸಿ ಶ್ರಾದ್ಧ ಮಾಡಬೇಕು.

೨೫. ಪಿತಾಮಹನು ಪ್ರತ್ಯಕ್ಷವಾಗಿ ಭೋಜನ ಮಾಡಿ ಪಿಂಡವನ್ನು ಪರಿಗ್ರಹಿಸುವನು. ಪಿತಾಮಹನ ಕ್ಷಯದಿನದಲ್ಲಿ ಪಾರ್ವಣ ಶ್ರಾದ್ಧವನ್ನಾಚರಿಸಬೇಕು.

೨೬. ತನ್ನ ತಂದೆಯನ್ನು ತ್ಯಜಿಸಿ ಪಿತಾಮಹನಿಗೆ ಶ್ರಾದ್ಧ ಮಾಡಕೂಡದು. ಹಾಗೆ ಶ್ರಾದ್ಧ ಮಾಡದಿದ್ದರೂ ತಂದೆಯಿಂದ ಸ್ವಲ್ಪವೂ ಭಯವಿಲ್ಲ.

೨೭. ತಂದೆಯು ಮೃತನಾಗಿರಲು ಎಲ್ಲ ಅಮಾವಾಸ್ಯೆಗಳಲ್ಲಿಯೂ, ಭಾದ್ರಪದ ಕೃಷ್ಣಪಕ್ಷದ ಮಧ್ಯದಲ್ಲಿಯೂ ಈ ಪಾರ್ವಣ ಶ್ರಾದ್ಧವು ಉಕ್ತವಾಗಿರುವುದು.

ಯಾವತ್ಸಪಿಂಡತಾ ನೈವ ನ ತಾವಚ್ಛ್ರಾದ್ಧಮಾಚರೇತ್ ॥ ೨೮ ॥
ಜನಕೇ ಮೃತ್ಯುಮಾಪನ್ನೇ ಶ್ರಾದ್ಧಪಕ್ಷೇ ಸಮಾಗತೇ ।
ಪಿತಾಮಹಾದೇಃ ಕರ್ತವ್ಯಂ ಶ್ರಾದ್ಧಂ ಯನ್ನೈಕಪಿಂಡತಾ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಪಿಂಡೀಕರಣವಿಧಿವರ್ಣನಂ" ನಾಮ
ಪಂಚವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೨೮. ಸಪಿಂಡೀಕರಣವಾಗುವವರೆಗೆ ಪಾರ್ವಣಶ್ರಾದ್ಧವನ್ನು ಮಾಡಕೂಡದು.

೨೯. ತಂದೆಯು ಮೃತನಾಗಿರುವಾಗ ಶ್ರಾದ್ಧಪಕ್ಷವೊದಗಲು ಸಪಿಂಡೀಕರಣವಾಗದಿರುವುದರಿಂದ ಪಿತಾಮಹಾದಿಗಳಿಗೆ ಶ್ರಾದ್ಧವನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಪಿಂಡೀಕರಣವಿಧಿವರ್ಣನ"ವೆಂಬ
ಇನ್ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ತ್ರಿಂಶತ್ಯುತ್ತರದ್ವಿಶತತಮೋಽಧ್ಯಾಯಃ

### ಏಕವಿಂಶತಿನರಕಯಾತನಾತನ್ನಿವಾರಣೋಪಾಯವರ್ಣನಂ

ಭರ್ತೃಯಜ್ಞ ಉವಾಚ:—

ಯತಃ ಸಪಿಂಡತಾ ಪ್ರೋಕ್ತಾ ಪಿತೃಪಿಂಡೈಃ ಸಮಂತತಃ ।
ಯಾವತ್ಸಪಿಂಡತಾ ನೈವ ತಾವತ್ಪ್ರೇತಃ ಸ ತಿಷ್ಠತಿ ॥ ೧ ॥
ಅಪಿ ಧರ್ಮಸಮೋಪೇತಸ್ತಪಸಾಽಪಿ ಸಮನ್ವಿತಃ ।
ಏತಸ್ಮಾತ್ಕಾರಣಾತ್ಪ್ರೋಕ್ತಾ ಮುನಿಭಿಸ್ತು ಸಪಿಂಡತಾ ॥ ೨ ॥
ಯಸ್ಯ ಯಸ್ಯ ಚ ಯೋಽನ್ಯತ್ರ ಯೋನಿಂ ಪ್ರಾಪ್ನೋತಿ ಮಾನವಃ ।
ತತ್ರಸ್ಥಸ್ತೃಪ್ತಿಮಾಪ್ನೋತಿ ಯದ್ದತ್ತಂ ತಸ್ಯ ವಂಶಜೈಃ ॥ ೩ ॥

ಆನರ್ತ ಉವಾಚ:—

ಯೇ ದೃಶ್ಯಂತೇ ನಿಜಾಃ ಸ್ವಪ್ನೇ ಚಿರಾತ್ಪಿತೃಪಿತಾಮಹಾಃ ।
ಪ್ರಾರ್ಥಯಂತಿ ನಿಜಾನ್ ಕಾಮಾಂಸ್ತತಃ ಕಿಂ ಸ್ಯಾನ್ಮಹಾಮುನೇ ॥ ೪ ॥

ಭರ್ತೃಯಜ್ಞ ಉವಾಚ:—

ಯೇಷಾಂ ಗತಿರ್ನ ಸಂಜಾತಾ ಪ್ರೇತತ್ವೇ ಚ ವ್ಯವಸ್ಥಿತಾಃ ।
ದರ್ಶಯಂತಿ ಚ ತೇ ಸರ್ವೇ ಸ್ವಯಮಾತ್ಮಾನಮೇವ ಹಿ ॥ ೫ ॥

---

### ಕನ್ನಡದ ಅನುವಾದ

#### ಏಕವಿಂಶತಿನರಕಯಾತನಾತನ್ನಿವಾರಣೋಪಾಯವರ್ಣನ

೧–೨. ಭರ್ತೃಯಜ್ಞನು ಹೇಳುತ್ತಾನೆ:—ಅರಸ! ಪಿತೃಪಿಂಡದೊಡನೆ ಸಪಿಂಡೀಕರಣವಾಗಬೇಕೆಂದು ಹೇಳಿರುವುದರಿಂದ ಆ ಸಪಿಂಡೀಕರಣವಾಗುವ ವರೆಗೆ ಧರ್ಮಿಷ್ಠನಾಗಲಿ, ತಪಸ್ವಿಯಾಗಲಿ ಅವನು ಪ್ರೇತನಾಗಿಯೇ ಇರುವನು. ಆದುದರಿಂದ ಮುನಿಗಳು ಸಾಪಿಂಡ್ಯವನ್ನು ಹೇಳಿದ್ದಾರೆ.

೩. ಯಾವನು ಯಾವ ಯಾವ ಯೋನಿಯಲ್ಲಿ ಜನಿಸುವನೊ, ಅವನು ಅಲ್ಲಿರುವವನಾಗಿಯೇ ಅವನ ವಂಶದವರು ಮಾಡಿದ ಶ್ರಾದ್ಧದಿಂದ ತೃಪ್ತಿಗೊಳ್ಳುವನು.

೪. ಆನರ್ತನು ಹೇಳುತ್ತಾನೆ:—ಮಹರ್ಷಿಯೆ! ಪಿತೃ, ಪಿತಾಮಹರು ಬಹಳಕಾಲದ ಮೇಲೆ ಸ್ವಪ್ನದಲ್ಲಿ ಕಾಣಿಸಿಕೊಂಡು ತಮ್ಮ ಇಷ್ಟಾರ್ಥವನ್ನು ಬೇಡುವರು. ಇದು ಹೇಗೆ?

೫–೬. ಭರ್ತೃಯಜ್ಞನು ಹೇಳುತ್ತಾನೆ:— ಯಾರು ಶ್ರಾದ್ಧಾದಿಗಳಿಂದ ಉತ್ತಮಗತಿಯನ್ನು ಪಡೆಯದೆ ಪ್ರೇತರಾಗಿರುವರೊ, ಅವರು ಸ್ವಪ್ನದಲ್ಲಿ

ಸ್ವವಂಶ್ಯಾನಾಂ ಸ ಚಾಽನ್ಯೇ ತು ಸತ್ಯಮೇತನ್ಮಯೋದಿತಂ ।
ಯಥಾ ಲೋಕೇಽತ್ರ ಸಂಜಾತಾ ಯೇ ಚ ಕೃತ್ಯೈಃ ಶುಭಾಽಶುಭೈಃ ॥ ೬ ॥

ಆನರ್ತ ಉವಾಚ :—

ಯಸ್ಯ ನೋ ವಿದ್ಯತೇ ಪುತ್ರಃ ಸಪಿಂಡೀಕರಣಂ ಕಥಂ ।
ತಸ್ಯ ಕಾರ್ಯಂ ಭವೇದತ್ರ ತನ್ಮೇ ತ್ವಂ ವಕ್ತುಮರ್ಹಸಿ ॥ ೭ ॥

ಭರ್ತೃಯಜ್ಞ ಉವಾಚ :—

ಯಸ್ಯ ನೋ ವಿದ್ಯತೇ ಪುತ್ರ ಔರಸಶ್ಚ ಮಹೀಪತೇ ।
ಚತುರ್ಣಾಂ ಸ್ವ ಪಿತೄಣಾಂ ತು ಕಥಂ ಸ ಸ್ಯಾಚ್ಚತುರ್ಥಕಃ ॥ ೮ ॥
ಪ್ರಕರ್ಷೇಣ ವ್ರಜೇದ್ಯಸ್ಮಾತ್ತಸ್ಮಾತ್ಪ್ರೇತಃ ಪ್ರಕೀರ್ತಿತಃ ।
ಪುತ್ರೇಣ ಭ್ರಾತ್ರಾ ಪತ್ನ್ಯಾ ವಾ ತಸ್ಯ ಕಾರ್ಯಾ ಸಪಿಂಡತಾ ॥ ೯ ॥
ಚತುರ್ಥೋ ಯದಿ ರಾಜೇಂದ್ರ ಜಾಯತೇ ನ ಕಥಂಚನ ।
ಕ್ಷೇತ್ರಜಾದೀನ್ ಸುತಾನೇತಾನೇಕಾದಶ ಯಥೋದಿತಾನ್ ॥ ೧೦ ॥
ಪುತ್ರಪ್ರತಿನಿಧೀನಾಹುಃ ಕ್ರಿಯಾಲೋಪಾನ್ ಮನೀಷಿಣಃ ।
ಕಾಲೇ ಯದಿ ಸ ರಾಜೇಂದ್ರ ಜಾಯತೇಽಸ್ಯೋತ್ತರಕ್ರಿಯಾ ॥ ೧೧ ॥
ನಾರಾಯಣಬಲಿಃ ಕಾರ್ಯಃ ಪ್ರೇತತ್ವಸ್ಯ ವಿನಾಶಕಃ ।
ಯಥಾಽನ್ಯೇಷಾಂ ಮನುಷ್ಯಾಣಾಮಪಮೃತ್ಯುಮುಪೇಯುಷಾಂ ।
ಕಾರ್ಯಶ್ಚೈವಾಽಽತ್ಮಹಂತೄಣಾಂ ಬ್ರಾಹ್ಮಣಾನ್ ಮೃತ್ಯುಮಾಯುಷಾಂ ॥

---

ತಮ್ಮ ವಂಶದವರಿಗೆ ಕಾಣಿಸಿಕೊಳ್ಳುವರು. ಇತರರು ತಮ್ಮ ಶುಭಾಶುಭಕೃತ್ಯಗಳಿಂದ ಈ ಲೋಕದಲ್ಲಿ ಜನಿಸಿರುವರು. ನಾನು ಹೇಳಿರುವುದು ನಿಜ.

೭. ಆನರ್ತನು ಹೇಳುತ್ತಾನೆ:—ಪುತ್ರನಿಲ್ಲದವನಿಗೆ ಸಪಿಂಡೀಕರಣವನ್ನು ಹೇಗೆ ಮಾಡಬೇಕು? ಅದನ್ನು ನೀನು ನನಗೆ ಹೇಳಲರ್ಹನಾಗಿರುವೆ.

೮. ಭರ್ತೃಯಜ್ಞನು ಹೇಳುತ್ತಾನೆ:—ಔರಸಪುತ್ರನಿಲ್ಲದವನು ತನ್ನ ನಾಲ್ಕು ಮಂದಿ ಪಿತೃಗಳಿಗೆ ನಾಲ್ಕನೆಯವನು ಹೇಗಾಗುವನು?

೯. ಅತಿಶಯವಾಗಿ ಹೋಗುತ್ತಿರುವವನಾದ್ದರಿಂದ ಪ್ರೇತನೆನ್ನಿಸಿಕೊಳ್ಳುವನು. ಅಂತಹವನಿಗೆ ಸಹೋದರನ ಮಗನಾಗಲಿ, ಪತ್ನಿಯಾಗಲಿ ಸಪಿಂಡೀಕರಣವನ್ನು ಮಾಡಬೇಕು.

೧೦–೧೨. ನಾಲ್ಕನೆಯವನು ಹೇಗೂ ಹುಟ್ಟದಿದ್ದರೆ ಕ್ರಿಯೆಯು ಲೋಪವಾಗುವುದರಿಂದ ಜ್ಞಾನಿಗಳು ಕ್ಷೇತ್ರಜಾದಿ ಹನ್ನೊಂದು ವಿಧ ಪುತ್ರರನ್ನು ಪುತ್ರನಿಗೆ ಪ್ರತಿನಿಧಿಗಳೆಂದು ಹೇಳುವರು. ಇಂತಹವನಿಗೆ ಸಕಾಲದಲ್ಲಿ ಉತ್ತರಕ್ರಿಯೆಯು ಆಗದಿದ್ದರೆ ಅಪಮೃತ್ಯುವನ್ನು ಹೊಂದಿದವರಿಗೂ, ಆತ್ಮಹತ್ಯೆ ಮಾಡಿಕೊಂಡವರಿಗೂ, ಬಾಹ್ಮಣನಿಂದ ಮಡಿದವರಿಗೂ ಮಾಡುವಂತೆ ಪ್ರೇತತ್ವವು ನೀಗುವುದಕ್ಕಾಗಿ ನಾರಾಯಣಬಲಿಯನ್ನು ಮಾಡಬೇಕು.

ಆನರ್ತ ಉವಾಚ :—

ಕಥಂ ಮೃತ್ಯುಮವಾಪ್ನೋತಿ ಪುರುಷೋऽತ್ರ ಮಹಾಮತೇ ॥ ೧೩ ॥
ಸ್ವರ್ಗಂ ವಾ ನರಕಂ ವಾऽಪಿ ಕರ್ಮಣಾ ಕೇನ ಗಚ್ಛತಿ ।
ಮೋಕ್ಷಂ ವಾऽಥ ಮಹಾಭಾಗ ಸರ್ವಂ ಮೇ ವಿಸ್ತರಾದ್ವದ ॥ ೧೪ ॥

ಭರ್ತೃಯಜ್ಞ ಉವಾಚ :—

ಧರ್ಮೀ ಪಾಪೀ ತಥಾ ಜ್ಞಾನೀ ತಿಸ್ರೋऽತ್ರ ಗತಯಃ ಸ್ಮೃತಾಃ ।
ಧರ್ಮಾತ್ಸಂಪ್ರಾಪ್ಯತೇ ಸ್ವರ್ಗಃ ಪಾಪಾನ್ನರಕ ಏವ ಚ ॥ ೧೫ ॥
ಜ್ಞಾನಾತ್ಸಂಪ್ರಾಪ್ಯತೇ ಮೋಕ್ಷಃ ಸತ್ಯಮೇತನ್ಮಯೋದಿತಂ ।
ಏನಮರ್ಥಂ ಭವಿಷ್ಯಂತು ಭೀಷ್ಮಂ ಶಾಂತನವಂ ನೃಪ ॥ ೧೬ ॥
ಯುಧಿಷ್ಠಿರೋ ಮಹಾರಾಜ ಧರ್ಮಪುತ್ರೋ ನೃಪೋತ್ತಮಃ ।
ಕೃಷ್ಣೇನ ಸಹ ರಾಜೇಂದ್ರ ಪಿತಾಮಹಮಪೃಚ್ಛತ ॥ ೧೭ ॥

ಯುಧಿಷ್ಠಿರ ಉವಾಚ :—

ಕಿಯಂತೋ ನರಕಾಃ ಖ್ಯಾತಾ ಯಮಲೋಕೇ ಪಿತಾಮಹ ।
ಕೇನ ಪಾಪೇನ ಗಚ್ಛಂತಿ ತೇಷು ಸರ್ವೇಷು ಜಂತವಃ ॥ ೧೮ ॥

ಭೀಷ್ಮ ಉವಾಚ :—

ಏಕವಿಂಶತ್ಪ್ರಮಾಣಾಃ ಸ್ಯುರ್ನರಕಾ ಯಮಮಂದಿರೇ ।
ಪ್ರಾಣಿನಸ್ತೇಷು ಗಚ್ಛಂತಿ ನಿಜಕರ್ಮಾऽನುಸಾರತಃ ॥ ೧೯ ॥

---

೧೩. ಆನರ್ತನು ಹೇಳುತ್ತಾನೆ :—ಮಹರ್ಷಿಯೆ! ಈ ಲೋಕದಲ್ಲಿ ಮನುಷ್ಯನು ಹೇಗೆ ಮರಣವನ್ನು ಹೊಂದುತ್ತಾನೆ?

೧೪. ಅವನು ಸ್ವರ್ಗಕ್ಕಾಗಲಿ, ನರಕಕ್ಕಾಗಲಿ, ಮೋಕ್ಷಕ್ಕಾಗಲಿ ಯಾವ ಕರ್ಮದಿಂದ ಹೋಗುವನು. ಇದನ್ನೆಲ್ಲ ವಿಸ್ತಾರವಾಗಿ ನನಗೆ ಹೇಳು.

೧೫–೧೭. ಭರ್ತೃಯಜ್ಞನು ಹೇಳುತ್ತಾನೆ :—ಧರ್ಮಿಷ್ಠ, ಪಾಪಿಷ್ಠ, ಜ್ಞಾನಿ ಎಂದು ಮೂರು ವಿಧ ಜನರಿರುವರು. ಇವರಿಗೆ ಮೂರು ವಿಧ ಗತಿಗಳುಂಟಾಗುವುವು. ಧರ್ಮದಿಂದ ಸ್ವರ್ಗವೂ, ಪಾಪದಿಂದ ನರಕವೂ, ಜ್ಞಾನದಿಂದ ಮೋಕ್ಷವೂ ಲಭಿಸುವುದು. ನಾನು ಹೇಳಿರುವುದು ನಿಜ. ರಾಜನೆ! ಈ ಭವಿಷ್ಯ ವಿಷಯವನ್ನು ಧರ್ಮಪುತ್ರನಾದ ಯುಧಿಷ್ಠಿರ ಮಹಾರಾಜನು ಕೃಷ್ಣನೊಡನೆ ಶಂತನುತನಯನಾದ ಭೀಷ್ಮನನ್ನು ಕುರಿತು ಪ್ರಶ್ನೆಮಾಡಿರುವನು.

೧೮. ಯುಧಿಷ್ಠಿರನು ಹೇಳುತ್ತಾನೆ :—ಪಿತಾಮಹ! ಯಮಲೋಕದಲ್ಲಿ ಎಷ್ಟುವಿಧ ನರಕಗಳು ವಿಖ್ಯಾತವಾಗಿರುವುವು? ಆ ಸಮಸ್ತ ನರಕಗಳಿಗೆ ಜಂತುಗಳು ಯಾವ ಪಾಪದಿಂದ ಹೋಗುವರು.

೧೯. ಭೀಷ್ಮನು ಹೇಳುತ್ತಾನೆ :— ಯಮಾಲಯದಲ್ಲಿ ಇಪ್ಪತ್ತೊಂದು

ಖ್ಯಾತೌ ಚಿತ್ರವಿಚಿತ್ರೌ ಚ ಕಾಯಸ್ಥೌ ಯಮಮಂದಿರೇ ॥ ೨೦ ॥
ಚಿತ್ರೋಽಥ ಲಿಖಿತೇ ಧರ್ಮಂ ಸರ್ವಂ ಪ್ರಾಣಿಸಮುದ್ಭವಂ ।
ವಿಚಿತ್ರಃ ಪಾತಕಂ ಸರ್ವಂ ಪರಮಂ ಯತ್ನಮಾಸ್ಥಿತಃ ॥ ೨೧ ॥
ಯಮದೂತಾಃ ಸದೈವಾಽಷ್ಟೌ ಧರ್ಮರಾಜಸಮುದ್ಭವಾಃ ।
ಯೇ ನಯಂತಿ ನರಾನ್ಮೃತ್ಯುಲೋಕಾತ್ಸ್ವವಶಗಾನ್ ಸದಾ ॥ ೨೨ ॥
ಕರಾಲೋ ವಿಕರಾಲಶ್ಚ ವಕ್ರನಾಸೋ ಮಹೋದರಃ ।
ಸೌಮ್ಯಃ ಶಾಂತಸ್ತಥಾ ನಂದಃ ಸುವಾಕ್ಯಶ್ಚಾಷ್ಟಮಃ ಸ್ಮೃತಃ ॥ ೨೩ ॥
ಏತೇಷಾಂ ಯೇ ಪುರಾ ಪ್ರೋಕ್ತಾಶ್ಚತ್ವಾರೋ ರೌದ್ರರೂಪಿಣಃ ।
ಪಾಪಂ ಜನಂ ಚ ತೇ ಸರ್ವೇ ನಯಂತಿ ಯಾಮಸಾದನಂ ॥ ೨೪ ॥
ಚತ್ವಾರೋ ಯೇ ಪರೇ ಪ್ರೋಕ್ತಾಃ ಸೌಮ್ಯರೂಪವಪುರ್ಧರಾಃ ।
ಧರ್ಮಿಣಂ ತೇ ಜನಂ ಸರ್ವಂ ನಯಂತಿ ಯಮಸಾದನಂ ॥ ೨೫ ॥
ವಿಮಾನೇನ ಸಮಾರೂಢಮಪ್ಸರೋಗಣಸೇವಿತಂ ॥ ೨೬ ॥
ಲಿಖಿತಸ್ಯಾನುರೂಪೇಣ ಪಾಪಧರ್ಮೋದ್ಭವಸ್ಯ ಚ ।
ಏತೇಷಾಂ ಕಿಂಕರಾ ಯೇಚ ತೇಷಾಂ ಸಂಖ್ಯಾ ನ ಜಾಯತೇ ॥ ೨೭ ॥
ಅಷ್ಟೋತ್ತರಶತಂ ತೇಷಾಂ ವ್ಯಾಧೀನಾಂ ಪರಿಕಲ್ಪಿತಂ ।
ಸಹಾಯಾರ್ಥಂ ಯಮೇನಾಽತ್ರ ಜ್ವರ ಯಕ್ಷ್ಮಾಂತರ ಸ್ಥಿತಂ ॥ ೨೮ ॥

---

ನರಕಗಳಿರುವುವು. ಪ್ರಾಣಿಗಳು ತಮ್ಮ ಕರ್ಮಾನುಸಾರದಿಂದ ಅಲ್ಲಿಗೆ ಹೋಗುವುವು. ಅಲ್ಲಿ ಚಿತ್ರ ವಿಚಿತ್ರರೆಂಬ ಲೇಖಕರಿರುವರು.

೨೧. ಚಿತ್ರನು ಸಕಲ ಪ್ರಾಣಿಗಳ ಧರ್ಮವನ್ನೂ, ವಿಚಿತ್ರನು ಪಾಪವನ್ನೂ ಬರೆಯುತ್ತಾನೆ.

೨೨–೨೩. ಕರಾಳ, ವಿಕರಾಳ, ವಕ್ರನಾಸ, ಮಹೋದರ, ಸೌಮ್ಯ, ಶಾಂತ, ನಂದ, ಸುವಾಕ್ಯ ಎಂಬ ಎಂಟು ಮಂದಿ ಯಮದೂತರು ಯಾವಾಗಲೂ ತಮ್ಮ ವಶದಲ್ಲಿರುವ ಮನುಷ್ಯರನ್ನು ಯಮಲೋಕಕ್ಕೆ ಒಯ್ಯುವರು.

೨೪–೨೭. ಇವರಲ್ಲಿ ಮೊದಲು ಹೇಳಿದ ಭಯಂಕರ ರೂಪವುಳ್ಳ ನಾಲ್ವರು ಪಾಪಿಗಳನ್ನು ಅವರ ಪಾಪಾನುಸಾರವಾಗಿ ಯಮಾಲಯಕ್ಕೆ ಕರೆದುಕೊಂಡು ಹೋಗುವರು. ಉಳಿದ ನಾಲ್ಕು ಮಂದಿ ಸೌಮ್ಯರೂಪಧಾರಿಗಳು ಧರ್ಮಿಷ್ಠನೂ, ವಿಮಾನಾರೂಢನೂ, ಅಪ್ಸರೆಯರಿಂದ ಸೇವಿತನೂ ಆದವನನ್ನು ಅವನ ಧರ್ಮಾನುಸಾರವಾಗಿ ಯಮಲೋಕಕ್ಕೆ ಕರೆದುಕೊಂಡು ಹೋಗುವರು. ಇವರಿಗೆ ಲೆಕ್ಕವಿಲ್ಲದಷ್ಟು ಸೇವಕರಿರುವರು.

೨೮. ಇವರ ಸಹಾಯಕ್ಕಾಗಿ ಯಮನು ಜ್ವರ, ಕ್ಷಯ ಮೊದಲಾದ ನೂರೆಂಟು ರೋಗಗಳನ್ನು ಕಲ್ಪಿಸಿರುವನು.

ತೇ ಗತ್ವಾ ವ್ಯಾಧಯಃ ಪೂರ್ವಂ ವಶೇ ಕುರ್ವಂತಿ ಮಾನವಂ ॥ ೨೯ ॥
ಯಮದೂತಾಸ್ತತೋ ಗತ್ವಾ ನಾಭಿಮೂಲವ್ಯವಸ್ಥಿತಂ ।
ವಾಯುರೂಪಂ ಸಮಾದಾಯ ಜನ್ಯೈಃ ಸರ್ವೈರಲಕ್ಷಿತಾಃ ॥ ೩೦ ॥
ಗಚ್ಛಂತಿ ಯಮಮಾರ್ಗೇಣ ದೇಹಂ ಸಂಸ್ಥಾಪ್ಯ ಭೂತಲೇ ।
ಷಡಶೀತಿ ಸಹಸ್ರಾಣಿ ಯಮಮಾರ್ಗಃ ಪ್ರಕೀರ್ತಿತಃ ॥ ೩೧ ॥
ತತ್ರ ವೈತರಣೀನಾಮ ನದೀಪೂರ್ವಂ ಪರಿಶ್ರುತಾ ।
ಸ್ರೋತೋಭ್ಯಾಂ ಸಾ ಮಹಾಭಾಗ ತತ್ರ ಸಂಸ್ಥಾ ಸದೈವ ಹಿ ॥ ೩೨ ॥
ತತ್ರ ಶೋಣಿತಮೇಕಸ್ಮಿನ್ ಸ್ರೋತಸ್ಯಸ್ಯಾ ವಹತ್ಯಲಂ ।
ಶಸ್ತ್ರಾಣಿ ಚ ಸುತೀಕ್ಷ್ಣಾನಿ ತನ್ಮಧ್ಯೇ ಭರತರ್ಷಭ ॥ ೩೩ ॥
ಮೃತ್ಯುಕಾಲೇ ಪ್ರಯಚ್ಛಂತಿ ಯೇ ಧೇನುಂ ಬ್ರಾಹ್ಮಣಾಯ ವೈ ।
ತಸ್ಯಾಃ ಪುಚ್ಛಂ ಸಮಾಶ್ರಿತ್ಯ ತೇ ತರಂತಿ ಚ ತಾಂ ನೃಪ ॥ ೩೪ ॥
ಸ್ವಬಾಹುಭಿಸ್ತಥೈವಾನ್ಯೇ ಶತಯೋಜನವಿಸ್ತೃತಂ ।
ದ್ವಿತೀಯಂ ಚೈವ ತತ್ಸ್ರೋತೋ ವೈತರಣ್ಯಾ ವ್ಯವಸ್ಥಿತಂ ।
ತಸ್ಯಾಸ್ತತ್ಸಲಿಲಸ್ರಾವಿ ಗಮ್ಯಂ ಧರ್ಮವತಾಂ ಸದಾ ॥ ೩೫ ॥

---

೨೯. ಆ ವ್ಯಾಧಿಗಳು ಮೊದಲು ಹೋಗಿ ಮಾನವನನ್ನು ತನ್ನ ಅಧೀನನನ್ನಾಗಿ ಮಾಡುವುವು.

೩೦–೩೧. ಬಳಿಕ ಯಮದೂತರು ಜೀವನೆಡೆಗೆ ಹೋಗಿ ನಾಭಿಯ ಬುಡದಲ್ಲಿ ವಾಯು ರೂಪದಿಂದಿರುವ ಆ ಜೀವವನ್ನು ತೆಗೆದುಕೊಂಡು ದೇಹವನ್ನು ಭೂಮಿಯಲ್ಲಿಯೇ ಬಿಟ್ಟು ಯಾರೂ ಕಾಣದಂತೆ ಯಮಮಾರ್ಗದಿಂದ ಹೋಗುತ್ತಾರೆ. ಈ ಯಮಮಾರ್ಗವು ಎಂಬತ್ತಾರುಸಾವಿರ ಯೋಜನ ದೂರವಾಗಿರುವುದು.

೩೨. ಅಲ್ಲಿ ಪ್ರಸಿದ್ಧವಾದ ವೈತರಣೀ ಎಂಬ ನದಿಯಿರುವುದು. ಭಾಗ್ಯವಂತನೆ! ಆ ನದಿಯು ಎರಡು ಪ್ರವಾಹಗಳಿಂದ ಯಾವಾಗಲೂ ಕೂಡಿರುವುದು.

೩೩. ಅದರ ಒಂದು ಪ್ರವಾಹದಲ್ಲಿ ಹೆಚ್ಚಾಗಿ ರಕ್ತವು ಹರಿಯುವುದು. ಅದರ ಮಧ್ಯದಲ್ಲಿ ಹರಿತವಾದ ಶಸ್ತ್ರಗಳಿರುವುವು.

೩೪. ಮರಣಕಾಲದಲ್ಲಿ ಬ್ರಾಹ್ಮಣನಿಗೆ ಆಕಳನ್ನು ದಾನ ಮಾಡಿದವರು ಆ ಹಸುವಿನ ಬಾಲವನ್ನು ಹಿಡಿದುಕೊಂಡು ಆ ನದಿಯನ್ನು ದಾಟುವರು.

೩೫. ಇತರರು ಆ ವೈತರಣಿಯ ನೂರುಯೋಜನ ವಿಸ್ತಾರವಾದ ಎರಡನೆ ಪ್ರವಾಹವನ್ನು ತಮ್ಮ ತೋಳುಗಳಿಂದ ಈಜಿ ದಾಟುವರು. ನೀರಿನಿಂದ ತುಂಬಿರುವ ಆ ನದಿಯ ಪ್ರವಾಹವು ಧರ್ಮಮಾಡಿದವರಿಗೆ ದಾಟಲು ಶಕ್ಯವಾದುದು.

ಯೇ ನರಾ ಗೋಪ್ರದಾತಾರೋ ಮೃತ್ಯುಕಾಲೇ ವ್ಯವಸ್ಥಿತೇ ।
ತೇ ಗೋಪುಚ್ಛಂ ಸಮಾಶ್ರಿತ್ಯ ತಾಂ ತರಂತಿ ಪೃಥೂದಕಾಂ ।
ಅನ್ಯೇ ಸ್ವಬಾಹುಭಿಃ ಕೃತ್ವಾ ಗೋಪ್ರದಾನವಿವರ್ಜಿತಾಃ ॥ ೩೬ ॥
ಗೋಪ್ರದಾನಂ ಪ್ರಕರ್ತವ್ಯಂ ತಸ್ಮಾಚ್ಚೈವ ವಿಶೇಷತಃ ।
ಮೃತ್ಯುಕಾಲೇಽತ್ರ ಸಂಪ್ರಾಪ್ತೇ ಯ ಇಚ್ಛೇದ್ಗತಿಮಾತ್ಮನಃ ॥ ೩೭ ॥
ತಸ್ಯಾ ಅನಂತರಂ ಯಾಂತಿ ಪಾಪಮಾರ್ಗೇಣ ಪಾಪಿನಃ ।
ಧರ್ಮಿಷ್ಠಾ ಧರ್ಮಮಾರ್ಗೇಣ ವಿಮಾನವರಮಾಶ್ರಿತಾಃ ॥ ೩೮ ॥
ವೈತರಣ್ಯಾಃ ಪರೇ ಪಾರೇ ಪಂಚಯೋಜನಮಾಯತಂ ।
ಅಸಿಪತ್ರವನಂ ನಾಮ ಪಾಪಲೋಕಸ್ಯ ದುಃಖದಂ ॥ ೩೯ ॥
ತತ್ರ ಲೋಹಮಯಾನ್ಯೇವಾಽಸಿಪತ್ರಾಣಾಂ ಶತಾನಿ ಚ ।
ಯಾನಿ ಕೃಂತಂತಿ ಮರ್ತ್ಯಾನಾಂ ಶರೀರಾಣಿ ಸಮಂತತಃ ॥ ೪೦ ॥
ಯೈರ್ಹೃತಂ ಪರವಿತ್ತಂ ಚ ಕಲತ್ರಂ ಚ ದುರಾತ್ಮಭಿಃ ।
ನವಶ್ರಾದ್ಧಾನಿ ತೇಷಾಂ ಚೇತ್ತಸ್ಮಾನ್ಮುಕ್ತಿಃ ಪ್ರಜಾಯತೇ ॥ ೪೧ ॥
ತಸ್ಮಾತ್ಪರತರೋ ಜ್ಞೇಯೋ ವಿಖ್ಯಾತಃ ಕೂಟಶಾಲ್ಮಲಿಃ ।
ಅಧೋಮುಖಾಃ ಪ್ರಲಂಬಂತೇ ತಸ್ಮಿನ್ ಕಂಟಕ ಸಂಕುಲೇ ॥ ೪೨ ॥

---

೩೬. ಮರಣಕಾಲದಲ್ಲಿ ಗೋದಾನ ಮಾಡಿದವರು ಗೋವಿನ ಬಾಲವನ್ನು ಹಿಡಿದುಕೊಂಡು ಅತಿಶಯವಾದ ನೀರುಳ್ಳ ಆ ನದಿಯನ್ನು ದಾಟುತ್ತಾರೆ. ಗೋದಾನ ಮಾಡದವರು ತಮ್ಮ ತೋಳುಗಳಿಂದಲೇ ಆ ನದಿಯನ್ನು ದಾಟುವರು.

೩೭. ಆದುದರಿಂದ ತನಗೆ ಉತ್ತಮಗತಿಯನ್ನು ಬಯಸುವವನು ಮರಣ ಕಾಲದಲ್ಲಿ ಗೋದಾನ ಮಾಡಬೇಕು.

೩೮. ಆ ವೈತರಣಿಯ ಅನಂತರ ಪಾಪಿಗಳು ಪಾಪಮಾರ್ಗದಿಂದಲೂ, ಧರ್ಮಿಷ್ಠರು ವಿಮಾನವನ್ನೇರಿ ಧರ್ಮಮಾರ್ಗದಿಂದಲೂ ಪ್ರಯಾಣ ಮಾಡುತ್ತಾರೆ.

೩೯. ವೈತರಣಿಯ ಮತ್ತೊಂದು ದಡದಲ್ಲಿ ಐದು ಯೋಜನ ದೂರವಾದ ಪಾಪಿಗಳಿಗೆ ದುಃಖವನ್ನುಂಟುಮಾಡುವ ಅಸಿಪತ್ರವನವಿರುವುದು.

೪೦–೪೧. ಅಲ್ಲಿ ಕಬ್ಬಿಣದ ನೂರು ಖಡ್ಗಗಳಿರುವುವು. ಅವು ಪರರ ದ್ರವ್ಯ ಮತ್ತು ಪತ್ನಿಯರನ್ನು ಅಪಹರಿಸಿದ ದುಷ್ಟಮಾನವರ ಶರೀರಗಳನ್ನು ಸುತ್ತಲೂ ಕತ್ತರಿಸುತ್ತಿರುವುವು. ಅವರಿಗೆ ವಂಶಜರು ಒಂಬತ್ತು ಶ್ರಾದ್ಧಗಳನ್ನು ಮಾಡಿದರೆ ಮೋಕ್ಷವಾಗುವುದು.

೪೨–೪೩. ಅದರ ಅನಂತರ ಕೂಟಶಾಲ್ಮಲಿಯಿರುವುದು. ಮುಳ್ಳುಗಳಿಂದ ತುಂಬಿದ ಆ ಕೂಟಶಾಲ್ಮಲಿಯಲ್ಲಿ ವಿಶ್ವಾಸಘಾತಕರೂ, ಯಾವಾಗಲೂ

ಅಧಸ್ತಾದ್ವಹ್ನಿನಾ ಚೈವ ದಹ್ಯಮಾನಾ ದಿವಾನಿಶಂ ।
ವಿಶ್ವಾಸಘಾತಕಾ ಯೇ ಚ ಸರ್ವದೈವ ಸುನಿರ್ದಯಾಃ ।
ತಸ್ಮಾನ್ಮುಕ್ತಿಂ ಪ್ರಯಾಂತಿಸ್ಮ ಶ್ರಾದ್ಧೇಹ್ಯೇಕಾದಶೇ ಕೃತೇ ॥ ೪೩ ॥
ಯಂತ್ರಾತ್ಮಕಸ್ತತಃ ಪ್ರೋಕ್ತೋ ನರಕೋ ದಾರುಣಾಕೃತಿಃ ।
ಬ್ರಹ್ಮಘ್ನಾಸ್ತತ್ರ ಪೀಡ್ಯಂತೇ ಯೇ ಚಾನ್ಯೇ ಪಾಪಕರ್ಮಿಣಃ ॥ ೪೪ ॥
ಶ್ರಾದ್ಧೇನ ದ್ವಾದಶೋತ್ಥೇನ ತೇಭ್ಯೋ ದತ್ತೇನ ಪಾರ್ಥಿವ ।
ತಸ್ಮಾನ್ಮುಕ್ತಿಂ ಪ್ರಗಚ್ಛಂತಿ ಯಂತ್ರಾಖ್ಯನರಕಾತ್ ಸ್ಫುಟಂ ॥ ೪೫ ॥
ತತೋ ಲೋಹಸಮಾಃ ಸ್ತಂಭಾ ಜ್ವಲಮಾನಾ ವ್ಯವಸ್ಥಿತಾಃ ।
ಆಲಿಂಗಂತಿ ಚ ತಾನ್ ಸರ್ವಾನ್ ಪರದಾರಗತಾಶ್ಚ ಯೇ ॥ ೪೬ ॥
ಮಾಸಿಕೋತ್ಥೇ ಕೃತೇ ಶ್ರಾದ್ಧೇ ತೇಭ್ಯೋ ಮುಕ್ತಿಮವಾಪ್ನುಯುಃ ॥೪೭॥
ಲೋಹದಂಭಾಸ್ತತೋ ರೌದ್ರಾಃ ಸಾರಮೇಯಾ ವ್ಯವಸ್ಥಿತಾಃ ।
ಭಕ್ಷಯಂತಿ ಚ ತೇ ಪಾಪಾನ್ ಪೃಷ್ಠಮಾಂಸಾಶಿನೋ ನರಾನ್ ।
ತ್ರೈಪಕ್ಷಿಕೇ ಕೃತೇ ಶ್ರಾದ್ಧೇ ತೇಭ್ಯೋ ಮುಕ್ತಿಮವಾಪ್ನುಯುಃ ॥ ೪೮ ॥
ಲೋಹಚಂಚುಮಯಾಃ ಕಾಕಾಃ ಸಂಸ್ಥಿತಾಸ್ತದನಂತರಂ ।
ಸರಾಗೈರ್ಲೋಚನೈರ್ಯೈಶ್ಚ ಈಕ್ಷಿತಾಃ ಪರಯೋಷಿತಃ ॥ ೪೯ ॥

---

ನಿರ್ದಯರೂ ಆದವರು ಕೆಳಗಡೆ ಅಗ್ನಿಯಿಂದ ಹಗಲು ರಾತ್ರಿ ಸುಡಲ್ಪಡುತ್ತ ಅಧೋಮುಖರಾಗಿ ಜೋಲಾಡುತ್ತಿರುವರು. ಏಕಾದಶ ಶ್ರಾದ್ಧವನ್ನು ಮಾಡಿದರೆ ಅವರು ಮುಕ್ತರಾಗುವರು.

೪೪. ತರುವಾಯ ಯಂತ್ರರೂಪವಾದ ಭಯಂಕರ ನರಕವಿರುವುದು. ಅದರಲ್ಲಿ ಬ್ರಹ್ಮಹತ್ಯೆ ಮಾಡಿದವರೂ ಇತರ ಪಾಪಕರ್ಮವನ್ನಾಚರಿಸಿದವರೂ ದುಃಖಪಡುವರು.

೪೫. ಅರಸ! ಅವರಿಗೆ ವಂಶಜರು ದ್ವಾದಶ ಶ್ರಾದ್ಧವನ್ನು ಮಾಡುವುದರಿಂದ ಯಂತ್ರಾಖ್ಯ ನರಕದಿಂದ ಮುಕ್ತಿಯಾಗುವುದು.

೪೬. ಅನಂತರ ಜ್ವಲಿಸುತ್ತಿರುವ ಉಕ್ಕಿನ ಕಂಬಗಳಿರುವುವು. ಪರಸ್ತ್ರೀಗಮನ ಮಾಡಿದವರು ಅವುಗಳನ್ನು ಆಲಿಂಗಿಸುವರು.

೪೭. ಮಾಸಿಕ ಶ್ರಾದ್ಧವನ್ನು ಮಾಡಿದರೆ ಅವರು ಮುಕ್ತರಾಗುವರು.

೪೮. ಅನಂತರ ಉಕ್ಕಿನ ಹಲ್ಲುಗಳುಳ್ಳ ಭಯಂಕರವಾದ ನಾಯಿಗಳಿರುವುವು. ಅವು ಪಾಪಿಗಳಾದ ಮಾನವರ ಬೆನ್ನಿನ ಮಾಂಸಗಳನ್ನು ಕಚ್ಚಿ ತಿನ್ನುವುವು. ಮೂರನೆಯ ತಿಂಗಳ ಶ್ರಾದ್ಧವನ್ನು ಮಾಡಿದರೆ ಆದರಿಂದವರು ಮುಕ್ತರಾಗುವರು.

೪೯–೫೦. ತರುವಾಯ ಕಬ್ಬಿಣದ ಕೊಕ್ಕುಗಳುಳ್ಳ ಕಾಗೆಗಳು ಪರಪತ್ನಿಯರನ್ನು ಅನುರಾಗದಿಂದ ನೋಡಿದವರ ಮರಳಿ ಮರಳಿ ಹುಟ್ಟುತ್ತಿರುವ

ತೇಷಾಂ ನೇತ್ರಾಣಿ ತೇಘ್ನಂತಿ ಭೂಯೋ ಜಾತಾನಿ ಭೂರಿಶಃ ।
ದ್ವಿಮಾಸಿಕಂ ಚ ಯಚ್ಛ್ರಾದ್ಧಂ ತೇನ ಮುಕ್ತಿಃ ಪ್ರಜಾಯತೇ ॥ ೫೦ ॥
ತತಃ ಶಾಲ್ಮಲಿಕೂಟಸ್ತು ತಥಾಽನ್ಯೇ ಲೋಹಕಂಟಕಾಃ ।
ತೇಷಾಂ ಮಧ್ಯೇಽನ ನೀಯಂತೇ ಸ್ತ್ರೈಶುನ್ಯನಿರತಾ ನರಾಃ ।
ತ್ರೈಮಾಸಿಕಂ ತು ಯಚ್ಛ್ರಾದ್ಧಂ ತೇನ ಮುಕ್ತಿಃ ಪ್ರಜಾಯತೇ ॥ ೫೧ ॥
ರೌರವೋಽಥ ಸುವಿಖ್ಯಾತೋ ದಾರುಣೋ ನರಕೋ ಮಹಾನ್ ।
ಬ್ರಹ್ಮಘ್ನಾನಾಂ ಸಮಾದಿಷ್ಟಃ ಸ ಮಹಾಕ್ಲೇಶಕಾರಕಃ ॥ ೫೨ ॥
ಛಿದ್ಯಂತೇ ವಿವಿಧೈಃ ಶಸ್ತ್ರೈಸ್ತತ್ರಸ್ಥಾ ಯೇ ಮುಹುರ್ಮುಹುಃ ।
ಚತುರ್ಮಾಸಿಕ ಶ್ರಾದ್ಧೇನ ಮುಕ್ತಿಸ್ತೇಷಾಂ ಪ್ರಜಾಯತೇ ॥ ೫೩ ॥
ಅಪರಸ್ತು ಸಮಾಖ್ಯಾತಃ ಕ್ಷಾರೋದಸ್ತು ಸುದಾರುಣಃ ।
ಕೃತಘ್ನಾನಾಂ ಸಮಾದಿಷ್ಟಃ ಸದೈವ ಬಹುವೇದನಃ ॥ ೫೪ ॥
ಅಧೋಮುಖಾ ಊರ್ಧ್ವಪಾದಾಃ ಪೀಡ್ಯಂತೇ ಯತ್ರ ಲಂಬಿತಾಃ ।
ಪಂಚಮಾಸಿಕದಾನೇನ ಮುಕ್ತಿಸ್ತೇಷಾಂ ಪ್ರಜಾಯತೇ ॥ ೫೫ ॥
ಕುಂಭೀಪಾಕಸ್ತತೋ ಜ್ಞೇಯೋ ನರಕೋ ದಾರುಣಾಕೃತಿಃ ।
ತೈಲೇನ ಕ್ಷಿಪ್ಯಮಾಣಾಸ್ತು ಯತ್ರ ದಂಡಾಭಿಸಂಧಿತಾಃ ।
ದೃಶ್ಯಂತೇ ಜನಹಂತಾರೋ ಬಾಲಹಂತಾರ ಏವ ಚ ॥ ೫೬ ॥

---

ಕಣ್ಣುಗಳನ್ನು ಕುಕ್ಕುವುವು. ಎರಡನೆಯ ತಿಂಗಳ ಶ್ರಾದ್ಧವನ್ನು ಮಾಡುವುದರಿಂದ ಅವರಿಗೆ ಮೋಕ್ಷವಾಗುವುದು.

೫೧. ಬಳಿಕ ಉಕ್ಕಿನ ಮುಳ್ಳುಗಳುಳ್ಳ ಶಾಲ್ಮಲಿಕೂಟವಿರುವುದು. ಚಾಡಿ ಹೇಳುವುದರಲ್ಲಿ ಆಸಕ್ತರಾದ ನರರನ್ನು ಅದರ ನಡುವೆ ತೆಗೆದುಕೊಂಡು ಹೋಗುವರು. ತ್ರೈಮಾಸಿಕ ಶ್ರಾದ್ಧದಿಂದ ಅವರು ಮುಕ್ತರಾಗುವರು.

೫೨. ತರುವಾಯ ರೌರವವೆಂಬ ದಾರುಣ ನರಕವಿರುವುದು. ಅತ್ಯಂತ ಕ್ಲೇಶವನ್ನುಂಟುಮಾಡುವ ಅದು ಬ್ರಹ್ಮಹತ್ಯೆ ಮಾಡಿದವರಿಗೆ ನಿರ್ದಿಷ್ಟವಾಗಿದೆ.

೫೩. ಅಲ್ಲಿರುವವರು ವಿವಿಧ ಶಸ್ತ್ರಗಳಿಂದ ಸೀಳಲ್ಪಡುವರು. ನಾಲ್ಕನೆಯ ತಿಂಗಳ ಶ್ರಾದ್ಧದಿಂದ ಅವರಿಗೆ ಮುಕ್ತಿಯಾಗುವುದು.

೫೪. ಬಳಿಕ ಕೃತಘ್ನರಿಗೆ ಯಾವಾಗಲೂ ಅತ್ಯಂತ ವೇದನೆಯನ್ನುಂಟು ಮಾಡುವ ಭಯಂಕರವಾದ ಕ್ಷಾರೋದವೆಂಬ ನರಕವಿರುವುದು.

೫೫. ಅಲ್ಲಿ ಆ ಕೃತಘ್ನರು ಅಧೋಮುಖರೂ, ಊರ್ಧ್ವಪಾದರೂ ಆಗಿ ಜೋಲಾಡುತ್ತ ದುಃಖಗೊಳ್ಳುವರು. ಐದನೆಯ ಮಾಸಿಕ ಶ್ರಾದ್ಧದಿಂದ ಅವರಿಗೆ ಮೋಕ್ಷವಾಗುವುದು.

೫೬. ತರುವಾಯ ದಾರುಣವಾದ ಕುಂಭೀಪಾಕ ನರಕವಿರುವುದು. ಅಲ್ಲಿ

ಪತಂತಿ ನರಕೇ ರೌದ್ರೇ ನರಾ ವಿಶ್ವಾಸಘಾತಕಾಃ ।
ಷಾಣ್ಮಾಸಿಕಪ್ರದಾನೇನ ಮುಚ್ಯಂತೇ ತತ್ರ ಸಂಕಟಾತ್ ॥ ೫೭ ॥
ಸರ್ಪ ವೃಶ್ಚಿಕಸಂಯುಕ್ತಸ್ತಥಾಽನ್ಯೋ ನರಕಃ ಶ್ರುತಃ ।
ತತ್ರ ಯೇ ದಾಂಭಿಕಾ ಲೋಕೇ ತೇ ಗಚ್ಛಂತಿ ನರಾಧಮಾಃ ।
ಸಪ್ತಮಾಸಿಕದಾನೇನ ತೇಷಾಂ ಮುಕ್ತಿಃ ಪ್ರಜಾಯತೇ ॥ ೫೮ ॥
ತಥಾ ಸಂವರ್ತಕೋ ನಾಮ ನರಕೋಽನ್ಯಃ ಪ್ರಕೀರ್ತಿತಃ ।
ವೇದವಿಪ್ಲಾವಕಾಃ ಸಾಧುನಿಂದಕಾಶ್ಚ ದುರಾತ್ಮಕಾಃ ॥ ೫೯ ॥
ಉತ್ಪಾಟ್ಯತೇ ತತೋ ಜಿಹ್ವಾ ಸಂದಂಶೈರ್ವಹ್ನಿಸಂಭವೈಃ ।
ಸ್ವಕಾರ್ಯೇ ಯೇಽನೃತಂಬ್ರೂಯುಸ್ತದ್ಗಾತ್ರಂ ಖಾದ್ಯತೇ ಶ್ವಭಿಃ ॥ ೬೦ ॥
ಪರಾರ್ಥೇಽಪಿ ಚ ಯೇ ಬ್ರೂಯುಸ್ತೇಷಾಂ ಗಾತ್ರಾಣಿ ಕೃತ್ಸ್ನಶಃ ।
ಅಷ್ಟಮಾಸಿಕದಾನೇನ ತೇಷಾಂ ಮುಕ್ತಿಃ ಪ್ರಜಾಯತೇ ॥ ೬೧ ॥
ಅಗ್ನಿಕೂಟೋ ಮಹಾಪ್ಲಾವೋ ದಾರುಣೋ ನರಕೋ ಮಹಾನ್ ।
ತತ್ರ ತೇ ಯಾಂತಿ ವೈ ಮೂಢಾಃ ಕೂಟಸಾಕ್ಷ್ಯ ಪ್ರದಾ ನರಾಃ ॥ ೬೨ ॥
ತತ್ರಸ್ಥಾ ಯಾತನಾಂ ರೌದ್ರಾಂ ಸಹಂತೇಽತೀವ ದುಃಖಿತಾಃ ।
ನವಮಾಸಿಕದಾನಂ ಚ ತೇಷಾಮಾಹ್ಲಾದನಂ ಪರಂ ॥ ೬೩ ॥

---

ಮನುಷ್ಯರನ್ನೂ, ಬಾಲಕರನ್ನೂ ಕೊಂದವರನ್ನು ಎಣ್ಣೆಯಲ್ಲಿ ಎಸೆದು ದೊಣ್ಣೆಯಿಂದ ಹೊಡೆಯುತ್ತಿರುವುದು ಕಾಣುವುದು.

೫೭. ಆ ಭಯಂಕರ ನರಕದಲ್ಲಿ ವಿಶ್ವಾಸಘಾತಕರು ಬೀಳುವರು. ಅವರು ಆರನೆಯ ತಿಂಗಳ ಶ್ರಾದ್ಧದಿಂದ ಆ ಕಷ್ಟದಿಂದ ಪಾರಾಗುವರು.

೫೮. ಹಾಗೆಯೇ ಸರ್ಪ, ಚೇಳುಗಳಿಂದ ತುಂಬಿರುವ ಮತ್ತೊಂದು ನರಕವಿರುವುದು. ದಾಂಭಿಕರಾದ ನೀಚ ಜನರು ಆ ನರಕಕ್ಕೆ ಹೋಗುವರು. ಅವರು ಏಳನೆಯ ತಿಂಗಳ ಮಾಸಿಕದಿಂದ ಮುಕ್ತರಾಗುವರು.

೫೯–೬೧. ಹಾಗೆಯೇ ಸಂವರ್ತಕವೆಂಬ ಮತ್ತೊಂದು ನರಕವಿದೆ. ಅಲ್ಲಿ ವೇದದೂಷಕರೂ, ಸಜ್ಜನರನ್ನು ನಿಂದಿಸುವವರೂ, ದುರಾತ್ಮರೂ ಆದವರ ನಾಲಿಗೆಯನ್ನು ಬೆಂಕಿಯ ಇಕ್ಕಳಗಳಿಂದ ಕೀಳುತ್ತಾರೆ. ಮತ್ತು ಸ್ವಪರಕಾರ್ಯಕ್ಕಾಗಿ ಸುಳ್ಳು ಹೇಳಿದವರ ದೇಹವನ್ನು ನಾಯಿಗಳು ಕಚ್ಚುವುವು. ಅವರಿಗೆ ಎಂಟನೆಯ ಮಾಸಿಕ ಶ್ರಾದ್ಧದಿಂದ ಮುಕ್ತಿಯಾಗುವುದು.

೬೨–೬೩. ಬಳಿಕ ಅತ್ಯಂತ ದುಃಖಕರವಾದ ಅಗ್ನಿಕೂಟವೆಂಬ ದೊಡ್ಡ ನರಕವಿರುವುದು. ಸುಳ್ಳು ಸಾಕ್ಷಿಯನ್ನು ಹೇಳುವ ಮೂಢ ಮಾನವರು ಆ ನರಕದಲ್ಲಿ ಬೀಳುವರು. ಅವರು ಅಲ್ಲಿ ಭಯಂಕರ ಯಾತನೆಗಳನ್ನು ದುಃಖದಿಂದ ಸಹಿಸುವರು. ಒಂಬತ್ತನೆಯ ಮಾಸಿಕ ಶ್ರಾದ್ಧದಿಂದ ಅವರಿಗೆ ಸಂತೋಷವಾಗುವುದು.

ತತೋ ಲೋಹಮಯೈಃ ಕೀಲೈಃ ಸಂಚಿತೋಽನ್ಯಃ ಸಮಂತತಃ ।
ತತ್ರ ಚಾಽಗ್ನಿಪ್ರದಾತಾರಃ ಸ್ತ್ರೀಣಾಂ ಹಂತಾರ ಏವ ಚ ॥ ೬೪ ॥
ತತ್ರ ಧಾವಂತಿ ದುಃಖಾರ್ತಾಸ್ತಾಡ್ಯಮಾನಾಶ್ಚ ಕಿಂಕರೈಃ ।
ದಶಮಾಸಿಕಜಂ ದಾನಂ ತತ್ರ ತೇಷಾಂ ಪ್ರಮುಕ್ತಯೇ ॥ ೬೫ ॥
ತತೋಽಂಗಾರಮಯೈಃ ಪುಂಜೈರಾವೃತಾ ಭೂಃ ಸಮಂತತಃ ।
ಸ್ವಾಮಿದ್ರೋಹರತಾಸ್ತತ್ರ ಭ್ರಾಮ್ಯಂತೇ ಸರ್ವತೋ ದಿಶಃ ॥ ೬೬ ॥
ಏಕಾದಶೋದ್ಭವಂ ದಾನಂ ತತ್ರ ಮುಕ್ತ್ಯೈ ಪ್ರಜಾಯತೇ ।
ಸಂತಪ್ತಸಿಕತಾಪೂರ್ಣೋ ನರಕೋ ದಾರುಣಾಕೃತಿಃ ॥ ೬೭ ॥
ಸ್ವಾಮಿನಂ ಚಾಽಗತಂ ದೃಷ್ಟ್ವಾ ಪಲಾಯನಪರಾಯಣಾಃ ।
ಯೇ ಭವಂತಿ ನರಾಸ್ತತ್ರ ಪಚ್ಯಂತೇ ತೇಽಪಿ ದುಃಖಿತಾಃ ।
ತೇಷಾಂ ದ್ವಾದಶಮಾಸೀಯಂ ಶ್ರಾದ್ಧಂಚೈವೋಪತಿಷ್ಠತಿ ॥ ೬೮ ॥
ಯತ್ಕಿಂಚಿದ್ದೀಯತೇ ತೋಯಮನ್ನಂ ವಾ ವತ್ಸರಾಂತರೇ ।
ಪ್ರಭುಂಜತೇ ಚ ತನ್ಮಾರ್ಗೇ ಪ್ರದತ್ತಂ ನಿಜಬಾಂಧವೈಃ ॥ ೬೯ ॥
ತತಃ ಸಂವತ್ಸರಾದೂರ್ಧ್ವಂ ನಿಜಕರ್ಮಸಮುದ್ಭವಂ ।
ಶುಭಾಽಶುಭಂ ಪ್ರಪದ್ಯಂತೇ ಧರ್ಮರಾಜಸಮೀಪಗಾಃ ॥ ೭೦ ॥

---

೬೪–೬೫. ಬಳಿಕ ಉಕ್ಕಿನ ಮೊಳೆಗಳಿಂದ ತುಂಬಿದ ಮತ್ತೊಂದು ನರಕವಿರುವುದು. ಅಲ್ಲಿ ಬೆಂಕಿಯನ್ನು ಹಚ್ಚಿದವರೂ, ಸ್ತ್ರೀಯರನ್ನು ಕೊಂದವರೂ ಯಮಕಿಂಕರರಿಂದ ತಾಡಿತರಾಗಿ ದುಃಖದಿಂದ ಓಡುತ್ತಿರುವರು. ಹತ್ತನೆಯ ತಿಂಗಳ ಶ್ರಾದ್ಧದಿಂದ ಅವರಿಗೆ ಮುಕ್ತಿಯಾಗುವುದು.

೬೬. ಬಳಿಕ ಬೆಂಕಿಯ ಕೆಂಡಗಳ ರಾಶಿಗಳಿಂದ ತುಂಬಿರುವ ಭೂಮಿಯಿರುವುದು. ಅಲ್ಲಿ ಸ್ವಾಮಿದ್ರೋಹದಲ್ಲಿ ನಿರತರಾದವರನ್ನು ಎಲ್ಲೆಡೆಯಲ್ಲಿಯೂ ಸುತ್ತಿಸುತ್ತಾರೆ.

೬೭. ಅವರಿಗೆ ಹನ್ನೊಂದನೆಯ ಶ್ರಾದ್ಧವು ಮುಕ್ತಿಯನ್ನುಂಟುಮಾಡುವುದು. ತರುವಾಯ ಕಾದ ಮರಳಿನಿಂದ ತುಂಬಿರುವ ಭಯಂಕರ ನರಕವಿರುವುದು.

೬೮. ಸಮೀಪಕ್ಕೆ ಬಂದ ಸ್ವಾಮಿಯನ್ನು ಕಂಡು ಓಡಿದ ಮಾನವರನ್ನು ಅಲ್ಲಿ ಕಾಯಿಸುತ್ತಾರೆ. ಅದರಿಂದವರು ದುಃಖಗೊಳ್ಳುವರು. ಅವರಿಗೆ ಹನ್ನೆರಡನೆಯ ಮಾಸಿಕವು ಸೇರುವುದು.

೬೯–೭೦. ಅವರು ತಮ್ಮ ಬಂಧುಗಳು ವರ್ಷದೊಳಗೆ ಕೊಟ್ಟ ನೀರು ಅಥವಾ ಅನ್ನವನ್ನು ಮಾರ್ಗದಲ್ಲಿ ಭುಂಜಿಸುವರು. ತರುವಾಯ ಅವರು ಒಂದು ವರ್ಷವಾದ ಮೇಲೆ ಧರ್ಮರಾಜನ ಸಮೀಪವನ್ನು ಸೇರಿ ತಮ್ಮ ಕರ್ಮಾನುಸಾರ ಶುಭಾಶುಭಗಳನ್ನು ಅನುಭವಿಸುವರು.

ಏವಂ ಪಂಚದಶೈತಾನಿ ಸಂಸೇವ್ಯ ನರಕಾಣಿ ತೇ ।
ಪ್ರಾಪ್ನುವಂತಿ ತತೋ ಜನ್ಮ ಮರ್ತ್ಯಲೋಕೇ ಪುನರ್ನರಾಃ ॥ ೭೧ ॥
ಪ್ರಾಪ್ನುವಂತಿ ವಿದೇಶೇ ಚ ಜನ್ಮ ಯೇ ಹೇತುವಾದಕಾಃ ।
ನಿತ್ಯಂ ತರ್ಪಣದಾನೇನ ತೇಷಾಂ ತೃಪ್ತಿಃ ಪ್ರಜಾಯತೇ ॥ ೭೨ ॥
ಸ್ವಾಮಿದ್ರೋಹರತಾ ಯೇಚ ಕುರಾಜ್ಯೇ ಜನ್ಮಚಾಽಽಪ್ನುಯುಃ ।
ಹಂತಕಾರಪ್ರದಾನೇನ ತೇಷಾಂ ತೃಪ್ತಿಃ ಪ್ರಜಾಯತೇ ॥ ೭೩ ॥
ಅದತ್ವಾ ಯೇ ನರೋಽಶ್ನಂತಿ ಪಿತೃದೇವದ್ವಿಜಾತಿಷು ।
ದುರ್ಭಿಕ್ಷೇ ಜನ್ಮ ತೇಷಾಂ ತು ತೇನ ಪಾಪೇನ ಜಾಯತೇ ॥ ೭೪ ॥
ಕ್ಷಯಾಽಹೇ ಶ್ರಾದ್ಧಸಂಪ್ರಾಪ್ತೌ ತತಸ್ತೃಪ್ತಿಃ ಪ್ರಜಾಯತೇ ॥ ೭೫ ॥
ಯೇ ಪ್ರಕುರ್ವಂತಿ ದಂಪತ್ಯೋರ್ಭೇದಂ ನೈಸಾಽನುರಾಗಯೋಃ ।
ಪರಸ್ಪರಮಸತ್ಯಾನಿ ತೇಷಾಂ ಭಾರ್ಯಾಽಸತೀ ಭವೇತ್ ॥ ೭೬ ॥
ಏಕಸ್ಮಿನ್ವಚನೇ ಪ್ರೋಕ್ತೇ ದಶಬ್ರೂತೇ ಕ್ರುಧಾನ್ವಿತಾ ।
ವಿರೂಪಾ ಭ್ರಮಮಾಣಾ ಚ ಸರ್ವಲೋಕವಿಗರ್ಹಿತಾ ।
ಕನ್ಯಾದಾನಫಲೈಸ್ತೇಷಾಂ ತತ್ರಾಸಾಂ ಚ ಸುಖಂ ಭವೇತ್ ॥ ೭೭ ॥
ಕನ್ಯಕಾದಾನವಿಘ್ನಂ ಹಿ ವಿಕ್ರಯಂ ವಾ ಕರೋತಿ ಯಃ ।
ಸ ಕನ್ಯಾಃ ಕೇವಲಾಃ ಸೂತೇ ನ ಪುತ್ರಂ ಕೇವಲಂ ಕ್ವಚಿತ್ ॥ ೭೮ ॥

---

೭೧–೭೨. ಮೃತರಾದ ಪಾಪಿಗಳು ಹೀಗೆ ಹದಿನೈದು ನರಕಗಳನ್ನು ಸೇವಿಸಿ ಬಳಿಕ ಭೂಲೋಕದಲ್ಲಿ ಜನಿಸುವರು. ಯುಕ್ತಿವಾದಿಗಳು ವಿದೇಶದಲ್ಲಿ ಹುಟ್ಟುವರು. ಅವರಿಗೆ ನಿತ್ಯವೂ ತರ್ಪಣಮಾಡುವುದರಿಂದ ತೃಪ್ತಿಯಾಗುವುದು.

೭೩. ಸ್ವಾಮಿದ್ರೋಹಿಗಳು ದುಷ್ಟರಾಜ್ಯದಲ್ಲಿ ಜನಿಸುವರು. ಹಂತಕಾರ ಭಿಕ್ಷಾದಾನದಿಂದ ಅವರಿಗೆ ತೃಪ್ತಿಯಾಗುವುದು.

೭೪. ಪಿತೃದೇವ ಬ್ರಾಹ್ಮಣರಿಗೆ ದಾನ ಮಾಡದೆ ಭುಂಜಿಸುವ ಮಾನವರು ಆ ಪಾಪದಿಂದ ದುರ್ಭಿಕ್ಷೆಯುಳ್ಳ ದೇಶದಲ್ಲಿ ಜನಿಸುವರು.

೭೫. ಮೃತದಿನ ಶ್ರಾದ್ಧ ಮಾಡುವುದರಿಂದ ಅವರಿಗೆ ತೃಪ್ತಿಯಾಗುವುದು.

೭೬. ಪರಸ್ಪರವಾಗಿ ಅನುರಾಗವುಳ್ಳ ದಂಪತಿಗಳಿಗೆ ಸುಳ್ಳನ್ನಾಡಿ ಒಡಕನ್ನುಂಟುಮಾಡುವವರ ಪತ್ನಿಯು ಅಸಾಧ್ವಿಯಾಗುವಳು.

೭೭. ಆ ಭಾರ್ಯೆಯು ಪತಿಯು ಒಂದು ಮಾತನ್ನಾಡಿದರೆ ಕೋಪದಿಂದ ಹತ್ತು ಮಾತನ್ನಾಡುವಳು. ಮತ್ತು ಕುರೂಪಿಣಿಯೂ, ಯಾವಾಗಲೂ ಅಲೆಯುತ್ತಿರುವವಳೂ, ಸಮಸ್ತ ಜನನಿಂದ್ಯಳೂ ಆಗುವಳು. ಕನ್ಯಾದಾನದ ಪುಣ್ಯದಿಂದ ಆ ಪುರುಷರಿಗೂ ಆ ಸ್ತ್ರೀಯರಿಗೂ ಸೌಖ್ಯವುಂಟಾಗುವುದು.

೭೮. ಕನ್ಯಾದಾನಕ್ಕೆ ವಿಘ್ನವನ್ನಾಗಲಿ, ಕನ್ಯಾವಿಕ್ರಯವನ್ನಾಗಲಿ ಮಾಡುವವನಿಗೆ ಕೇವಲ ಕನ್ಯೆಯರೇ ಹುಟ್ಟುವರು. ಪುತ್ರರು ಜನಿಸುವುದೇ ಇಲ್ಲ.

ಜಾಯಂತೇ ತಾಶ್ಚ ಬಂಧಕ್ಯೋ ವಿಧವಾ ದುರ್ಭಗಾಸ್ತಥಾ ।
ಕನ್ಯಾದಾನಫಲಪ್ರಾಪ್ತ್ಯಾ ತಾಸಾಂ ಸೌಖ್ಯಂ ಪ್ರಜಾಯತೇ ॥ ೭೯ ॥
ಯೈರ್ಹೃತಾನಿ ಚ ರತ್ನಾನಿ ತಥಾ ಶಾಸ್ತ್ರಾಂತರಾಣಿ ಚ ।
ತೇ ದರಿದ್ರಾಃ ಪ್ರಜಾಯಂತೇ ಮೂಕಾಃ ಖಂಜಾ ವಿಚಕ್ಷುಷಃ ।
ತೇಷಾಂ ಶಾಸ್ತ್ರಪ್ರದಾನೇನ ಇಹ ಸೌಖ್ಯಂ ಪ್ರಜಾಯತೇ ॥ ೮೦ ॥
ಏತೇ ತು ನರಕಾಃ ಪ್ರೋಕ್ತಾ ಮರ್ತ್ಯಲೋಕಸಮುದ್ಭವಾಃ ।
ಏತೈರ್ವಿಜ್ಞಾಯತೇ ಸರ್ವಂ ಕೃತಂ ಕರ್ಮ ಶುಭಾಽಶುಭಂ ॥ ೮೧ ॥
ತೀರ್ಥಯಾತ್ರಾಫಲೈಸ್ತಸ್ಯ ತತಃ ಶುದ್ಧಿಃ ಪ್ರಜಾಯತೇ ॥ ೮೨ ॥

ಭೀಷ್ಮ ಉವಾಚ:—

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರಾಧಿಪ ।
ಏಕವಿಂಶತ್ಪ್ರಮಾಣಂ ಚ ನರಕಾಣಾಂ ಯಥಾ ಸ್ಥಿತಂ ॥ ೮೩ ॥
ಭೂಯಶ್ಚ ಪೃಚ್ಛ ರಾಜೇಂದ್ರ ಸಂದೇಹೋ ಯೋ ಹೃದಿ ಸ್ಥಿತಃ ॥ ೮೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಏಕವಿಂಶತಿನರಕಯಾತನಾತನ್ನಿವಾರಣೋಪಾಯವರ್ಣನಂ" ನಾಮ
ಷಡ್ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೭೯. ಆ ಕನ್ಯೆಯರು ವ್ಯಭಿಚಾರಿಣಿಯರೂ, ವಿಧವೆಯರೂ, ದೌರ್ಭಾಗ್ಯವುಳ್ಳವರೂ ಆಗುವರು. ಕನ್ಯಾದಾನ ಮಾಡುವುದರಿಂದ ಅವರಿಗೆ ಸೌಖ್ಯವುಂಟಾಗುವುದು.

೮೦—೮೧. ರತ್ನ, ಶಾಸ್ತ್ರಗಳನ್ನು ಅಪಹರಿಸಿದವರು ಬಡವರೂ, ಮೂಕರೂ, ಕುಂಟರೂ, ಕುರುಡರೂ ಆಗುವರು. ಶಾಸ್ತ್ರದಾನದಿಂದ ಅವರಿಗೆ ಸೌಖ್ಯವುಂಟಾಗುವುದು. ಹೀಗೆ ಭೂಲೋಕದ ನರಕಗಳನ್ನು ಹೇಳಿರುವೆನು. ಇವುಗಳಿಂದ ಮಾಡಿದ ಶುಭಾಶುಭ ಕರ್ಮಗಳು ತಿಳಿಯುವುವು.

೮೨. ತೀರ್ಥಯಾತ್ರೆಗಳ ಫಲಗಳಿಂದ ಈ ಪಾಪವು ಪರಿಹಾರವಾಗಿ ಶುದ್ಧಿಯಾಗುವುದು.

೮೩. ಭೀಷ್ಮನು ಹೇಳುತ್ತಾನೆ:—ಧರ್ಮರಾಜ! ನೀನು ಕೇಳಿದ ಇಪ್ಪತ್ತೊಂದು ನರಕಗಳನ್ನು ಹೇಳಿರುವೆನು.

೮೪. ಮರಳಿ ನಿನ್ನ ಹೃದಯದಲ್ಲಿರುವ ಸಂದೇಹವನ್ನು ಪ್ರಶ್ನೆಮಾಡು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಏಕವಿಂಶತಿನರಕಯಾತನಾತನ್ನಿವಾರಣೋಪಾಯವರ್ಣನ"ವೆಂಬ
ಇನ್ನೂರಿಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

## ನರಕಯಾತನಾನಿರಸನೋಪಾಯವರ್ಣನಂ

ಯುಧಿಷ್ಠಿರ ಉವಾಚ :—

ನರಕಾಣಾಂ ಸ್ವರೂಪಂ ಚ ಶ್ರುತ್ವಾ ಮೇ ಭಯಮಾಗತಂ ।
ಕಥಂ ಮುಕ್ತಿರ್ಭವೇತ್ತೇಷಾಂ ಪಾಪಾನಾಮಪಿ ಪಾರ್ಥಿವ ।
ವ್ರತೈರ್ವಾ ನಿಯಮೈರ್ವಾಽಪಿ ಹೋಮೈರ್ವಾ ತೀರ್ಥಸಂಶ್ರಯೈಃ ॥ ೧ ॥

ಭೀಷ್ಮ ಉವಾಚ :—

ಗಂಗಾಯಾಮಸ್ಥಿಪಾತೋಽತ್ರ ಯೇಷಾಂ ಸಂಜಾಯತೇ ನೃಣಾಂ ।
ನ ತೇಷಾಂ ನಾರಕೋ ವಹ್ನಿಃ ಪ್ರಭವೇನ್ಮೃತ್ಯುವರ್ತಿನಾಂ ॥ ೨ ॥
ಗಂಗಾಯಾಂ ಕ್ರಿಯತೇ ಶ್ರಾದ್ಧಂ ಯೇಷಾಂ ನಾಮ್ನಾ ಸ್ವಕೈಃ ಸುತೈಃ ।
ತೇ ವಿಮಾನಂ ಸಮಾಶ್ರಿತ್ಯ ಪ್ರಯಾಂತಿ ನರಕೋಪರಿ ॥ ೩ ॥
ಪಾಪಂ ಕೃತ್ವಾ ಪ್ರಕುರ್ವಂತಿ ಪ್ರಾಯಶ್ಚಿತ್ತಂ ಯಥೋದಿತಂ ।
ಹೇಮ ಯಚ್ಛಂತಿ ವಾ ಭೂಪ ನ ತೇಷಾಂ ನರಕೋಭವೇತ್ ॥ ೪ ॥
ಶೇಷಾಃ ಸ್ವಕರ್ಮಣಃ ಪ್ರಾಪ್ತ್ಯಾ ಸೇವಂತೇ ಚ ಯಥೋಚಿತಂ ।
ಸ್ವರ್ಗಂ ವಾ ನರಕಂ ವಾಽಪಿ ಸೇವಂತೇ ತೇ ನರಾಧಿಪ ॥ ೫ ॥

---

## ಕನ್ನಡದ ಅನುವಾದ

### ನರಕಯಾತನಾನಿರಸನೋಪಾಯವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ :—ಪಿತಾಮಹ! ನರಕಗಳ ಸ್ವರೂಪವನ್ನು ಕೇಳಿ ನನಗೆ ಭಯವುಂಟಾಗಿದೆ. ಆ ಪಾಪಗಳು ಹೇಗೆ ಪರಿಹಾರವಾಗುವುವು? ವ್ರತಗಳಿಂದಲೊ? ನಿಯಮಗಳಿಂದಲೊ? ಹೋಮಗಳಿಂದಲೊ? ಅಥವಾ ತೀರ್ಥಸೇವನೆಯಿಂದಲೊ?

೨. ಭೀಷ್ಮನು ಹೇಳುತ್ತಾನೆ:—ಯಾರ ಅಸ್ಥಿಗಳು ಗಂಗೆಯಲ್ಲಿ ಬೀಳುವುವೊ ಅವರಿಗೆ ನರಕವಹ್ನಿಯಿಂದ ಪೀಡೆಯುಂಟಾಗುವುದಿಲ್ಲ.

೩. ಯಾರ ಮಕ್ಕಳು ತಂದೆಯ ಹೆಸರಿನಿಂದ ಗಂಗೆಯಲ್ಲಿ ಶ್ರಾದ್ಧಗೈಯ್ಯುವರೊ, ಅವರು ವಿಮಾನವನ್ನೇರಿ ನರಕದ ಮೇಲೆ ಪ್ರಯಾಣ ಮಾಡುವರು.

೪. ಪಾಪವನ್ನೆಸಗಿದವರು ಯಥಾವಿಧಿಯಾಗಿ ಪ್ರಾಯಶ್ಚಿತ್ತವನ್ನು ಮಾಡಿದರೆ ಅಥವಾ ಸುವರ್ಣವನ್ನು ದಾನಮಾಡಿದರೆ ಅವರಿಗೆ ನರಕಭಯವುಂಟಾಗುವುದಿಲ್ಲ.

೫. ಮಹಾರಾಜ! ಉಳಿದವರು ತಮ್ಮ ಕರ್ಮಾನುಸಾರವಾಗಿ ಸ್ವರ್ಗವನ್ನಾಗಲಿ, ನರಕವನ್ನಾಗಲಿ ಸೇವಿಸುವರು.

ಧಾರಾತೀರ್ಥೇ ಮ್ರಿಯಂತೇ ಯೇ ಸ್ವಾಮಿನಃ ಪುರತಃ ಸ್ಥಿತಾಃ ।
ತೇ ಗಚ್ಛಂತಿ ಪರಂ ಸ್ಥಾನಂ ನರಕಾಣಾಂ ಸುದೂರತಃ ॥ ೬ ॥

ವಾರಾಣಸ್ಯಾಂ ಕುರುಕ್ಷೇತ್ರೇ ನೈಮಿಷೇ ನಾಗರೇ ಪುರೇ ।
ಪ್ರಯಾಗೇ ವಾ ಪ್ರಭಾಸೇ ವಾ ಯಸ್ತ್ಯಜೇತ್ತಸುಮಾತ್ಮನಃ ।
ಮಹಾಪಾತಕಯುಕ್ತೋಽಪಿ ನರಕಂ ನ ಸ ಪಶ್ಯತಿ ॥ ೭ ॥

ನೀಲೋ ವಾ ವೃಷಭೋ ವಿವಾಹೇ ಸನ್ನಿಯುಜ್ಯತೇ ।
ಸ್ವಪುತ್ರೇಣ ಸ ಸಂಪಶ್ಯೇನ್ನರಕಂ ಬ್ರಹ್ಮಹಾಽಪಿ ಸಃ ॥ ೮ ॥

ಪ್ರಾಯೋಪವೇಶನಂ ಕೃತ್ವಾ ಹೃದಯಸ್ಥೇ ಜನಾರ್ದನೇ ।
ಯಸ್ತ್ಯಜೇತ್ಪುರುಷಃ ಪ್ರಾಣಾನ್ನರಕಂ ನ ಸ ಪಶ್ಯತಿ ॥ ೯ ॥

ಪ್ರಾಯೋಪವೇಶನಂ ಯೇಚ ಚಿತ್ರೇಶ್ವರನಿವೇಶನೇ ।
ಕುರ್ವಂತಿ ನರಕಂ ನೈವ ತೇ ಗಚ್ಛಂತಿ ಕದಾಚನ ॥ ೧೦ ॥

ದೀನಾಂಧ ಕೃಪಣಾನಾಂ ಚ ಪಥಿ ಶ್ರಮಮುಪೇಯುಷಾಂ ।
ತೀರ್ಥಯಾತ್ರಾಪರಾಣಾಂ ಚ ಯೋ ಯಚ್ಛತಿ ಸದಾಽಶನಂ ।
ಕಾಲೇ ವಾ ಯದಿವಾಽಕಾಲೇ ನರಕಂ ನ ಸ ಪಶ್ಯತಿ ॥ ೧೧ ॥

---

೬. ಪ್ರಭುವಿನ ಮುಂದೆ ರಣಾಂಗಣದಲ್ಲಿ ಮಡಿಯುವವರು ನರಕಗಳಿಗಿಂತ ದೂರವಾದ ಉತ್ತಮ ಸ್ಥಾನವನ್ನು ಸೇರುವರು.

೭. ಕಾಶಿ, ಕುರುಕ್ಷೇತ್ರ, ನೈಮಿಷಾರಣ್ಯ, ನಾಗರಪುರ, ಪ್ರಯಾಗ, ಪ್ರಭಾಸ—ಇವುಗಳಲ್ಲಿ ಯಾವುದರಲ್ಲಾಗಲಿ ಮೃತನಾದವನು ಅತ್ಯಂತ ಪಾತಕಿಯಾಗಿದ್ದರೂ ನರಕವನ್ನು ಸೇರುವುದಿಲ್ಲ.

೮. ಪುತ್ರನಾದವನು ನೀಲವೃಷೋತ್ಸರ್ಗವನ್ನು ಮಾಡಿದರೆ ಬ್ರಹ್ಮಹತ್ಯೆ ಮಾಡಿದ್ದರೂ ನರಕವನ್ನು ಕಾಣುವುದಿಲ್ಲ.

೯. ನಾರಾಯಣನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಪ್ರಾಯೋಪವೇಶನವನ್ನು ಮಾಡಿ ಮಡಿದವನು ನರಕವನ್ನು ನೋಡುವುದಿಲ್ಲ.

೧೦. ಚಿತ್ರೇಶ್ವರನ ದೇವಾಲಯದಲ್ಲಿ ಪ್ರಾಯೋಪವೇಶಮಾಡಿದವನು ಯಾವಾಗಲೂ ನರಕವನ್ನು ಸೇರುವುದಿಲ್ಲ.

೧೧. ದೀನರು, ಕುರುಡರು, ಕೃಪಣರು, ಮಾರ್ಗಾಯಾಸವನ್ನು ಹೊಂದಿದವರು, ತೀರ್ಥಯಾತ್ರಾನಿರತರು—ಇವರಿಗೆ ಕಾಲದಲ್ಲಿ ಅಥವಾ ಅಕಾಲದಲ್ಲಿ ಭೋಜನವನ್ನು ಮಾಡಿಸಿದವನು ನರಕ ದರ್ಶನವನ್ನು ಮಾಡುವುದಿಲ್ಲ.

॥ ಶ್ರೀಃ ॥

# ಅಥಾಷ್ಟಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

## ಅಂಧಕಾಸುರಕೃತ ಶಂಕರಾವಮಾನನವರ್ಣನಂ

ಸೂತ ಉವಾಚ :—

ತಥಾಽನ್ಯಚ್ಚ ಬಿಲದ್ವಾರಿ ಶಯನಾರ್ಥೇ ವ್ಯವಸ್ಥಿತಂ ।
ದೃಷ್ಟ್ವಾ ಪ್ರಮುಚ್ಯತೇ ಪಾಪೀ ದೇವಂ ಚ ಜಲಶಾಯಿನಂ ॥ ೧ ॥
ಸ್ನಾತ್ವಾ ತಸ್ಮಿನ್ ಬಿಲದ್ವಾರೇ ಪವಿತ್ರೇ ಲೋಕಸಂಶ್ರಯೇ ।
ಯಸ್ತಂ ಪೂಜಯತೇ ಭಕ್ತ್ಯಾ ಶೇಷಪರ್ಯಂಕಶಾಯಿನಂ ।
ಆಜನ್ಮಮರಣಾತ್ಪಾಪಾತ್ಸ ಚ ಮುಕ್ತಿಮವಾಪ್ನುಯಾತ್ ॥ ೨ ॥
ಚತುರೋ ವಾರ್ಷಿಕಾನ್ ಮಾಸಾನ್ ಸುಪ್ರಸುಪ್ತಂ ಸುರೇಶ್ವರಂ ।
ಸಂಪೂಜಯತಿ ಯೋ ಭಕ್ತ್ಯಾ ನ ಸ ಭೂಯೋಽತ್ರ ಜಾಯತೇ ॥ ೩ ॥
ತತ್ರ ಪೂರ್ವಂ ಮಹಾಭಾಗಾ ಮುನಯಃ ಸೇವ್ಯ ತಂ ಪ್ರಭುಂ ।
ಮೃತ್ತಿಕಾಗ್ರಹಣಂ ಕೃತ್ವಾ ತಸ್ಯ ಚಾಽಯತನೇ ಶುಭೇ ॥ ೪ ॥
ಸಂಪ್ರಾಪ್ತಾಃ ಪರಮಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ ।
ಯತ್ಫಲಂ ಸರ್ವತೀರ್ಥೇಷು ಸರ್ವಯಜ್ಞೇಷು ಯತ್ಫಲಂ ।
ತತ್ಫಲಂ ತಸ್ಯ ಪೂಜಾಯಾಂ ಚಾತುರ್ಮಾಸ್ಯಾಂ ಪ್ರಜಾಯತೇ ॥ ೫ ॥

---

## ಕನ್ನಡದ ಅನುವಾದ

### ಅಂಧಕಾಸುರಕೃತ ಶಂಕರಾವಮಾನನವರ್ಣನ

೧—೨. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ಪಾಪಿಯಾದವನೂ ಹಾಟಕೇಶ್ವರಕ್ಷೇತ್ರದಲ್ಲಿರುವ ಬಿಲದ್ವಾರದಲ್ಲಿ ಶಯನಕ್ಕಾಗಿ ಸಜ್ಜುಗೊಳ್ಳುತ್ತಿರುವ ಶ್ರೀಮನ್ನಾರಾಯಣನನ್ನು ನೋಡಿದಲ್ಲಿ ಪಾಪವಿಮುಕ್ತನಾಗುವನು. ಲೋಕಗಳಿಗೆ ಆಶ್ರಯವಾದ ಆ ಪವಿತ್ರ ಬಿಲದ್ವಾರದಲ್ಲಿ ಶೇಷಪರ್ಯಂಕದಲ್ಲಿ ಮಲಗಿರುವ ಆ ನಾರಾಯಣನನ್ನು ಪೂಜಿಸಿದವನು ಜನನ ಕಾಲದಿಂದ ಮರಣ ಕಾಲದವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೩. ಚಾತುರ್ಮಾಸ್ಯದಲ್ಲಿ ಮಲಗಿರುವ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಪೂಜಿಸಿದವನು ಮರಳಿ ಹುಟ್ಟುವುದಿಲ್ಲ.

೪—೫. ಅಲ್ಲಿ ಹಿಂದೆ ಭಾಗ್ಯಶಾಲಿಗಳಾದ ಮುನಿಗಳು ಆ ನಾರಾಯಣನನ್ನು ಸೇವಿಸಿ ಅವನ ದೇವಾಲಯದ ಮೃತ್ತಿಕೆಯನ್ನು ಸ್ವೀಕರಿಸಿ, ಆತನ ಉತ್ತಮ ಸ್ಥಾನವನ್ನು ಪಡೆದರು. ಸರ್ವತೀರ್ಥಗಳಲ್ಲಿಯೂ, ಸಮಸ್ತ ಯಜ್ಞಗಳಲ್ಲಿಯೂ ದೊರೆಯುವ ಫಲವು ಚಾತುರ್ಮಾಸ್ಯದಲ್ಲಿ ಆ ನಾರಾಯಣನನ್ನು ಪೂಜಿಸುವುದರಿಂದ ಉಂಟಾಗುವುದು.

ಯತ್ಫಲಂ ಗೋಗ್ರಹೇ ಮೃತ್ಯುಂ ಸಂಪ್ರಾಪ್ತಾ ಯಾಂತಿ ಮಾನವಾಃ ।
ತತ್ಫಲಂ ಚತುರೋ ಮಾಸಾನ್ ಪೂಜಯಾ ಜಲಶಾಯಿನಃ ॥ ೬ ॥
ಅಪಿ ಪಾಪಸಮಾಚಾರಃ ಪರದಾರರತೋಽಪಿ ವಾ ।
ಬ್ರಹ್ಮಘ್ನೋಽಪಿ ಸುರಾಪೋಽಪಿ ಸ್ತ್ರೀಹಂತಾಽಪಿ ವಿಗರ್ಹಿತಃ ।
ಪೂಜಯಾ ಚತುರೋ ಮಾಸಾಂಸ್ತಸ್ಯ ದೇವಸ್ಯ ಮುಚ್ಯತೇ ॥ ೭ ॥

ಋಷಯ ಊಚುಃ :—

ಯದೇತದ್ಭವತಾ ಪ್ರೋಕ್ತಂ ತತ್ರಸ್ಥಂ ಜಲಶಾಯಿನಂ ।
ಬಿಲದ್ವಾರೇ ಕಥಂ ಸೂತ ತತ್ರ ನಃ ಸಂಶಯೋ ಮಹಾನ್ ॥ ೮ ॥
ಸ ಕಿಲ ಶ್ರೂಯತೇ ದೇವಃ ಕ್ಷೀರಾಬ್ಧೌ ಮಧುಸೂದನಃ
ಸದೈವ ಭಗವಾಂಛೇತೇ ಯೋಗನಿದ್ರಾಂ ಸಮಾಶ್ರಿತಃ ॥ ೯ ॥
ಕಥಂ ಸ ಭಗವಾಂಛೇತೇ ಬಿಲದ್ವಾರೇ ವ್ಯವಸ್ಥಿತಃ ।
ಏತತ್ಕೀರ್ತಯ ಕಾರ್ತ್ಸ್ನ್ಯೇನ ಪರಂ ಕೌತೂಹಲಂ ಹಿ ನಃ ॥ ೧೦ ॥

ಸೂತ ಉವಾಚ :—

ಸತ್ಯಮೇತನ್ಮಹಾಭಾಗಾಃ ಕ್ಷೀರಾಬ್ಧೌ ಮಧುಸೂದನಃ ।
ಯೋಗನಿದ್ರಾಂ ಗತಃ ಶೇತೇ ಶೇಷಪರ್ಯಂಕಶಾಯಕಃ ॥ ೧೧ ॥

---

೬. ಗೋಗ್ರಹಣಸ್ಥಾನದಲ್ಲಿ ಮಡಿದ ಮಾನವರು ಪಡೆಯುವ ಫಲವು ವಿಷ್ಣುವನ್ನು ನಾಲ್ಕು ತಿಂಗಳು ಪೂಜಿಸುವುದರಿಂದ ಲಭಿಸುವುದು.

೭. ಪಾಪಿಷ್ಠನೂ, ಪರಪತ್ನೀಗಮನಮಾಡಿದವನೂ, ಬ್ರಹ್ಮಘ್ನನೂ, ಸುರಾಪಾಯಿಯೂ, ಸ್ತ್ರೀಹತ್ಯೆಮಾಡಿದವನೂ, ನಿಂದಿತನೂ ಆ ಜಲಶಾಯಿಯನ್ನು ನಾಲ್ಕು ತಿಂಗಳುಗಳಕಾಲ ಪೂಜಿಸುವುದರಿಂದ ಪಾಪಮುಕ್ತನಾಗುವನು.

೮. ಋಷಿಗಳು ಹೇಳುತ್ತಾರೆ:—ಸೂತ! ನೀನು ಜಲಶಾಯಿಯ ವಿಷಯವನ್ನು ಹೇಳಿದೆಯಷ್ಟೆ. ಅವನು ಬಿಲದ್ವಾರದಲ್ಲಿ ಹೇಗೆ ನೆಲೆಸಿದನು? ಈ ಬಗ್ಗೆ ನಮಗೆ ಬಹಳ ಸಂಶಯವುಂಟಾಗಿದೆ.

೯. ಆ ಮಧುಸೂದನನಾದರೊ ಕ್ಷೀರಸಮುದ್ರದಲ್ಲಿ ಯೋಗನಿದ್ರೆಯನ್ನಾಶ್ರಯಿಸಿ ಯಾವಾಗಲೂ ಮಲಗಿರುವನೆಂದು ಕೇಳಿದ್ದೇವೆ.

೧೦. ಅಂಥವನು ಬಿಲದ್ವಾರದಲ್ಲಿ ಹೇಗೆ ಮಲಗಿದನು? ಇದನ್ನು ಸಂಪೂರ್ಣವಾಗಿ ನಮಗೆ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

೧೧. ಸೂತನು ಹೇಳುತ್ತಾನೆ:—ಭಾಗ್ಯವಂತರೆ! ಶ್ರೀಮನ್ನಾರಾಯಣನು ಕ್ಷೀರಸಮುದ್ರದಲ್ಲಿ ಶೇಷಪರ್ಯಂಕದಲ್ಲಿ ಯೋಗನಿದ್ರೆಯನ್ನು ಮಾಡುತ್ತ ಮಲಗಿರುವನೆಂಬುದು ನಿಜ.

ಶಕ್ರೋಽಪಿ ಚ ಸಮಾರಾಧ್ಯ ಶಂಕರಂ ಲೋಕಶಂಕರಂ ।
ಸರ್ವದೇವಸಮೋಪೇತೋ ಭೃತ್ಯವತ್ಪರಿವರ್ತತೇ ॥ ೨೭ ॥
ತತಃ ಕಾಲೇನ ಮಹತಾ ತಸ್ಯ ತುಷ್ಟಃ ಪಿನಾಕಧೃಕ್
ತಂ ಪ್ರಾಹ ವರದೋಽಸ್ಮೀತಿ ವದ ಶಕ್ರ ಕರೋಮಿ ಕಿಂ ॥ ೨೮ ॥

ಇಂದ್ರ ಉವಾಚ :—

ಅಂಧಕೇನ ಹೃತಂ ರಾಜ್ಯಂ ಮಮ ವೀರ್ಯಾತ್ಸುರೇಶ್ವರ ।
ಯಜ್ಞಭಾಗೈಃ ಸಮೋಪೇತಂ ಹೃತ್ವಾಽಽಶು ತತ್ಪ್ರಯಚ್ಛ ಮೇ ॥ ೨೯ ॥
ತಚ್ಛ್ರುತ್ವಾ ತಸ್ಯ ದೀನಸ್ಯ ಭಗವಾಂಛಶಿಶೇಖರಃ ।
ಪ್ರೋವಾಚ ತವ ದಾಸ್ಯಾಮಿ ರಾಜ್ಯಂ ತ್ರೈಲೋಕ್ಯಸಂಭವಂ ॥ ೩೦ ॥
ತತಃ ಸಂಪ್ರೇಷಯಾಮಾಸ ದೂತಂ ತಸ್ಯ ವಿಚಕ್ಷಣಂ ।
ಗಣೇಶಂ ವೀರಭದ್ರಾಖ್ಯಂ ಗತ್ವಾ ತಂ ಬ್ರೂಹಿ ಚಾಂಧಕಂ ॥ ೩೧ ॥
ಮಮಾದೇಶಾತ್ಪರಿತ್ಯಜ್ಯ ಸ್ವರ್ಗಂ ಗಚ್ಛ ಧರಾತಲಂ ।
ಪಿತೃಪೈತಾಮಹಂ ಸ್ಥಾನಂ ರಾಜ್ಯಂ ತತ್ರ ಸಮಾಚರ ॥ ೩೨ ॥
ಪರಿತ್ಯಜಸ್ವ ಯಜ್ಞಾಂಶಾನ್ನೋಚೇದ್ಧಂತಾಽಸ್ಮಿ ಸತ್ವರಂ ।
ಸ ಗತ್ವಾಚಾಽಂಧಕಂ ಪ್ರಾಹ ಯಥೋಕ್ತಂ ಶಂಭುನಾ ಸ್ಫುಟಂ ॥ ೩೩ ॥

---

೨೭. ಇಂದ್ರನೂ ಸಮಸ್ತ ದೇವತೆಗಳೊಡನೆ ಜಗನ್ಮಂಗಳಕರನಾದ ಶಂಕರನನ್ನು ಆರಾಧಿಸಿ ಸೇವಕನಂತಿದ್ದನು.

೨೮. ಅನಂತರ ಬಹುಕಾಲದ ಮೇಲೆ ಶಂಕರನು ಅವನಲ್ಲಿ ಸಂತುಷ್ಟನಾಗಿ ಇಂದ್ರ! ನಿನಗೆ ವರವನ್ನು ಕೊಡುವೆನು. ನಿನಗಾಗಿ ಏನನ್ನು ಮಾಡಲಿ ಹೇಳೆಂದನು.

೨೯. ಇಂದ್ರನು ಹೇಳುತ್ತಾನೆ:—ಶಂಕರ! ಅಂಧಕನು ಯಜ್ಞಭಾಗಗಳೊಡನೆ ನನ್ನ ರಾಜ್ಯವನ್ನು ಅಪಹರಿಸಿರುವನು. ನೀನು ಅದನ್ನು ಅವನಿಂದ ಕಿತ್ತು ನನಗೆ ಕೊಡು.

೩೦. ಪೂಜ್ಯನಾದ ಚಂದ್ರಶೇಖರನು ದೀನನಾದ ಇಂದ್ರನ ಆ ಮಾತನ್ನು ಕೇಳಿ ತ್ರೈಲೋಕ್ಯರಾಜ್ಯವನ್ನು ನಿನಗೆ ಕೊಡಿಸುವೆನೆಂದನು.

೩೧-೩೪. ತರುವಾಯ ಮಹೇಶನು ಕುಶಲನೂ, ಗಣಾಧ್ಯಕ್ಷನೂ ಆದ ವೀರಭದ್ರನನ್ನು ಕರೆದು ನೀನು ಅಂಧಕನೆಡೆಗೆ ಹೋಗಿ ಅವನನ್ನು ಕುರಿತು, "ನನ್ನ ಅಪ್ಪಣೆಯಂತೆ ಸ್ವರ್ಗವನ್ನು ತ್ಯಜಿಸಿ ಭೂಮಿಗೆ ಹೋಗು. ನಿನ್ನ ಪಿತೃಪಿತಾಮಹರಿಂದ ಬಂದ ರಾಜ್ಯವನ್ನಾಳು. ಯಜ್ಞಾಂಶಗಳನ್ನು ತ್ಯಜಿಸು. ಹಾಗೆ ಮಾಡದಿದ್ದರೆ ಶೀಘ್ರವಾಗಿ ನಿನ್ನನ್ನು ಕೊಲ್ಲುವೆನು" ಎಂದು ಹೇಳು ಎಂದು ಕಳುಹಿಸಿದನು. ಅತಿ ಬುದ್ಧಿವಂತನಾದ ಆ ವೀರಭದ್ರನು ಸ್ವಾಮಿಕಾರ್ಯ

ಸ ವಿಶೇಷಮಹಾಬುದ್ಧಿಃ ಸ್ವಾಮಿಕಾರ್ಯಪ್ರಸಿದ್ಧಯೇ ।
ಅಥ ತಂ ಚಾಂಧಕಃ ಪ್ರಾಹ ಪ್ರವಿಹಸ್ಯ ಮಹಾಬಲಃ ॥ ೩೪ ॥
ಅವಧ್ಯೋऽಹಿ ಯಥಾ ದೂತಸ್ತೇನ ತ್ವಾಂ ನ ನಿಹನ್ಮ್ಯಹಂ ।
ಕಃ ಸ್ಯಾದ್ವೈ ಶಂಕರೋ ನಾಮ ಯೋ ಮಾಮೇವಂ ಪ್ರಭಾಷತೇ ॥ ೩೫ ॥
ನ ಮಾಂ ವೇತ್ತಿ ಸ ಕಿಂ ಮೂಢಃ ಕಿಂ ವಾ ಮೃತ್ಯುಮಭೀಪ್ಸತೇ ॥ ೩೬ ॥
ಅಥವಾ ಸತ್ಯಮೇವೈತನ್ನಿರ್ವಿಣ್ಣೋ ಜೀವಿತಾಚ್ಚ ಸಃ ।
ದರಿದ್ರೋऽಪಹತೋ ನಿತ್ಯಂ ಸರ್ವಭೋಗವಿವರ್ಜಿತಃ ॥ ೩೭ ॥
ಸ್ಮಶಾನೇ ಕ್ರೀಡನಂ ಯಸ್ಯ ಭಸ್ಮ ಗಾತ್ರವಿಲೇಪನಂ ।
ಭೂಷಣಾನ್ಯಹಯೋ ವಸ್ತ್ರಂ ದಿಶೋ ಯಸ್ಯ ಜಟಾಲಕಾ ॥ ೩೮ ॥
ಕಸ್ತಸ್ಯ ಜೀವಿತೇನಾರ್ಥಸ್ತೇನೇದಂ ಮಾಂ ಬ್ರವೀತಿ ಸಃ ।
ತಸ್ಮಾದ್ಗತ್ವಾ ದ್ರುತಂ ಬ್ರೂಹಿ ಮದ್ವಾಕ್ಯಂ ದೂತ ಸಸ್ಫುಟಂ ॥ ೩೯ ॥
ತ್ಯಕ್ತ್ವಾ ಕೈಲಾಸಮೇನಂ ತ್ವಂ ವಾರಾಣಸ್ಯಾಂ ತಪಃ ಕುರು ।
ಮಯಾ ಸ್ಥಾನಮಿದಂ ದತ್ತಂ ಕೈಲಾಸಂ ಸ್ವಸುತಸ್ಯ ಚ ॥ ೪೦ ॥
ವೃಕಸ್ಯಾऽಪಿ ನ ಸಂದೇಹೋ ವಿಭವೇನ ಸಮನ್ವಿತಂ ।
ನೋ ಚೇತ್ಪ್ರಾಣಾನ್ ಹರಿಷ್ಯಾಮಿ ಸೇಂದ್ರಸ್ಯ ತವ ಶಂಕರ ॥ ೪೧ ॥

---

ಸಿದ್ಧಿಗಾಗಿ ಅಂಧಕನ ಬಳಿಗೆ ಹೋಗಿ ಶಂಕರನು ಹೇಳಿದ ಮಾತನ್ನು ಸ್ಪಷ್ಟವಾಗಿ ಹೇಳಿದನು. ಅನಂತರ ಆ ಅಂಧಕನು ನಕ್ಕು ಇಂತೆಂದನು.

೩೫–೩೬. "ದೂತನನ್ನು ಕೊಲ್ಲಬಾರದಾದುದರಿಂದ ನಾನು ನಿನ್ನನ್ನು ಕೊಲ್ಲುವುದಿಲ್ಲ. ನನಗೆ ಹೀಗೆ ಹೇಳಿಕಳುಹಿಸಿದ ಆ ಶಂಕರನಾರು? ಮೂಢನಾದ ಅವನು ನನ್ನನ್ನರಿಯನೊ? ಅಥವಾ ಅವನು ಸಾಯಬಯಸುತ್ತಿರುವನೊ?

೩೭. ಅಥವಾ ನಿಜವಾಗಿಯೂ ದಾರಿದ್ರ್ಯಪೀಡಿತನೂ, ಸಕಲ ಭೋಗ ವರ್ಜಿತನೂ ಆದ ಅವನು ಈ ಬದುಕಿನಿಂದ ವೈರಾಗ್ಯಗೊಂಡಿರಬೇಕು.

೩೮. ಅವನು ಶ್ಮಶಾನದಲ್ಲಿ ವಿಹರಿಸುವನು. ಬೂದಿಯನ್ನು ದೇಹಕ್ಕೆ ಮೆತ್ತಿಕೊಳ್ಳುವನು. ಸರ್ಪಗಳಿಂದ ಅಲಂಕಾರಗೊಳ್ಳುವನು. ದಿಕ್ಕುಗಳನ್ನು ವಸ್ತ್ರವಾಗಿ ಮಾಡಿಕೊಂಡಿರುವನು. ಜಟೆಯನ್ನು ಮುಂಗೂದಲಾಗಿರಿಸಿಕೊಂಡಿರುವನು.

೩೯. ಅವನಿಗೆ ಬದುಕಿನಿಂದೇನು ಪ್ರಯೋಜನ? ಆದುದರಿಂದ ನನ್ನನ್ನು ಕುರಿತು ಹೀಗೆ ನುಡಿಯುವನು. ದೂತ! ಆದುದರಿಂದ ಶೀಘ್ರವಾಗಿ ಹೋಗಿ ನನ್ನ ಈ ಮಾತನ್ನು ಅವನಿಗೆ ಸ್ಪಷ್ಟವಾಗಿ ವಿವರಿಸು.

೪೦–೪೧. 'ಶಂಕರ! ನೀನು ಈ ಕೈಲಾಸವನ್ನು ತ್ಯಜಿಸಿ ಕಾಶಿಯಲ್ಲಿ ತಪವನ್ನಾಚರಿಸು. ನಾನು ಈ ಕೈಲಾಸವನ್ನು ನನ್ನ ಮಗನಾದ ವೃಕನಿಗೆ ಐಶ್ವರ್ಯದೊಡನೆ ಕೊಟ್ಟಿರುವೆನು. ಹಾಗೆ ಮಾಡದಿದ್ದರೆ ಇಂದ್ರನೊಡನೆ ನಿನ್ನ ಪ್ರಾಣವನ್ನು ನೀಗಿಸುವೆನು.'"

ತಚ್ಛ್ರುತ್ವಾ ವೀರಭದ್ರಸ್ತು ನಿರ್ಭರ್ತ್ಸ್ಯ ಚ ಮುಹುರ್ಮುಹುಃ ।
ಕ್ರೋಧೇನ ಮಹತಾವಿಷ್ಟಃ ಕೈಲಾಸಂ ಸಮುಪಾವಿಶತ್ ॥ ೪೨ ॥
ತತಃ ಸ ಕಥಯಾಮಾಸ ತದ್ವಾಕ್ಯಂ ಚ ಪಿನಾಕಿನಃ ।
ಅತಿಕ್ರೂರಂ ವಿಶೇಷೇಣ ತತಃ ಕ್ರುದ್ಧಃ ಪಿನಾಕಧೃಕ್ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಂಧಕಾಸುರಕೃತ ಶಂಕರಾವಮಾನನವರ್ಣನಂ" ನಾಮ
ಅಷ್ಟಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೪೨. ವೀರಭದ್ರನು ಆ ಮಾತನ್ನು ಕೇಳಿ ಅತ್ಯಂತ ಕುಪಿತನಾಗಿ ಬಹುವಾಗಿ ಅವನನ್ನು ಹೆದರಿಸಿ ಕೈಲಾಸಕ್ಕೆ ಮರಳಿದನು.

೪೩. ತರುವಾಯ ಅವನು ವಿಶೇಷವಾಗಿ ಕ್ರೂರವಾದ ಅಂಧಕನ ಆ ಮಾತನ್ನು ಶಂಕರನಿಗೆ ಹೇಳಿದನು. ಅದರಿಂದ ಶಂಕರನು ಕುಪಿತನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಂಧಕಾಸುರಕೃತ ಶಂಕರಾವಮಾನನವರ್ಣನ" ವೆಂಬ
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ಭೃಂಗೀರಿಟ್ಯುತ್ಪತ್ತಿವರ್ಣನಂ

ಸೂತ ಉವಾಚ :—

ಏತಸ್ಮಿನ್ನಂತರೇ ಶಂಭುರ್ಗಣೈಃ ಸರ್ವೈಃ ಸಮಾವೃತಃ ।
ಇಂದ್ರಾದ್ಯೈಶ್ಚ ಸುರೈಃ ಸರ್ವೈಃ ಕ್ರೋಧಸಂರಕ್ತಲೋಚನಃ ।
ಜಗಾಮ ವೃಷಮಾರುಹ್ಯ ಪುರೀಂ ಚೈವಾಽಮರಾವತೀಂ ॥ ೧ ॥
ಅಂಧಕೋಽಪಿ ಸಮಾಲೋಕ್ಯ ಸಂಪ್ರಾಪ್ತಾಂ ದೇವವಾಹಿನೀಂ ।
ಸಗಣಾಂ ಚ ಮಹಾದೇವಂ ಪರಿತೋಷಂ ಪರಂ ಗತಃ ॥ ೨ ॥
ನಿಶ್ಚಕ್ರಾಮಾಽಥ ಯುದ್ಧಾಯ ಬಲೇನ ಚತುರಂಗಿಣಾ ।
ವರಂ ಸ್ಯಂದನಮಾರುಹ್ಯ ಸುಶ್ವೇತಾಽಶ್ವವಹಂ ಶುಭಂ ॥ ೩ ॥
ತತಃ ಸಮಭವದ್ಯುದ್ಧಂ ದೇವಾನಾಂ ದಾನವೈಃ ಸಹ ।
ಗಣೈಶ್ಚ ವಿಕೃತಾಕಾರೈರ್ನೃತ್ಯಂ ಕೃತ್ವಾ ನಿವರ್ತನಂ ॥ ೪ ॥
ಏಕವರ್ಷಸಹಸ್ರಾಂತಂ ಯಾವದ್ಯುದ್ಧಮವರ್ತತ ।
ದಿನೇ ದಿನೇ ಕ್ಷಯಂ ಯಾಂತಿ ತತ್ರ ದೇವಾ ನ ದಾನವಾಃ ॥ ೫ ॥

---

### ಕನ್ನಡದ ಅನುವಾದ

### ಭೃಂಗೀರಿಟ್ಯುತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಇಷ್ಟರಲ್ಲಿ ಸಮಸ್ತ ಶಿವಗಣಗಳೊಡನೆಯೂ, ಇಂದ್ರಾದಿ ದೇವತೆಗಳೊಡನೆಯೂ ಶಿವನು ವೃಷಭವನ್ನೇರಿ ಕೋಪದಿಂದ ಅಮರಾವತಿಗೆ ಹೋದನು.

೨. ಅಂಧಕನೂ ಗಣಗಳೊಡನೆ ಬಂದಿರುವ ದೇವಸೈನ್ಯವನ್ನೂ ಮಹೇಶ್ವರನನ್ನೂ ಕಂಡು ಅತ್ಯಂತ ಸಂತೋಷಗೊಂಡನು.

೩. ಬಳಿಕ ಶ್ವೇತಾಶ್ವಗಳನ್ನು ಕಟ್ಟಿರುವ ರಥವನ್ನೇರಿ ಚತುರಂಗ ಸೈನ್ಯದೊಡನೆ ಯುದ್ಧಕ್ಕೆ ಹೊರಟನು.

೪. ತರುವಾಯ ದೇವತೆಗಳಿಗೂ, ವಿಕಾರರೂಪಗಳುಳ್ಳ ಶಿವಗಣಗಳಿಗೂ ಯುದ್ಧವಾಯಿತು. ಅವರು ಮರಣವನ್ನು ಹೊಂದದೆ ಹಿಂದಿರುಗುತ್ತಿರಲಿಲ್ಲ.

೫. ಹೀಗೆ ಒಂದು ಸಾವಿರ ವರ್ಷಕಾಲ ಯುದ್ಧ ನಡೆಯುತ್ತಿರಲು ದಿನೇ ದಿನೇ ದೇವತೆಗಳು ನಾಶವಾಗುತ್ತಿದ್ದರಾಗಲಿ ದಾನವರು ಮಡಿಯುತ್ತಿರಲಿಲ್ಲ.

ತತೋ ವರ್ಷಸಹಸ್ರಾಂತೇ ಸಂಕ್ರುದ್ಧಃ ಶಶಿಶೇಖರಃ ।
ತ್ರಿಶೂಲೇನ ಸಮುದ್ಯಮ್ಯ ಸ್ವಹಸ್ತೇನ ವ್ಯಭೇದಯತ್ ॥ ೬ ॥
ಸ ವಿದ್ಧೋಽಪಿ ಸ್ವಯಂ ತೇನ ತ್ರಿಶೂಲೇನ ಮಹಾಸುರಃ ।
ಬ್ರಹ್ಮಣೋ ವರಮಾಹಾತ್ಮ್ಯಾನ್ನೈವ ಪ್ರಾಣೈರ್ವಿಯುಜ್ಯತೇ ॥ ೭ ॥
ತತೋ ಭೂಯೋಽಪಿ ಚೋತ್ಥಾಯ ಚಕ್ರೇ ಯುದ್ಧಂ ಮಹಾತ್ಮನಾ ।
ಜಘಾನ ಚ ಸ ಸಂಕ್ರುದ್ಧೋ ವಿಶೇಷೇಣ ಬಹೂನ್‌ಗಣಾನ್ ॥ ೮ ॥
ಶಂಕರಂ ತಾಡಯಾಮಾಸ ಗದಾಘಾತೈರ್ಮುಹುರ್ಮುಹುಃ ॥ ೯ ॥
ಏವಂ ವರ್ಷಸಹಸ್ರಾಂತಮಭೂತ್ಸಾರ್ಧಂ ಪಿನಾಕಿನಾ ।
ರೌದ್ರಂ ಯುದ್ಧಮಂಧಕಸ್ಯ ಸರ್ವಲೋಕಭಯಾವಹಂ ॥ ೧೦ ॥
ತ್ರಿಶೂಲಭಿನ್ನೋ ದೈತ್ಯಃ ಸ ಯದಾ ಮೃತ್ಯುಂ ನ ಗಚ್ಛತಿ ।
ಉತ್ಥಾಯೋತ್ಥಾಯ ಕುರುತೇ ಪ್ರಹಾರಾನ್ ಗದಯಾ ಬಲೀ ॥ ೧೧ ॥
ತಥಾ ತಂ ಶಂಕರೋ ಜ್ಞಾತ್ವಾ ಮೃತ್ಯುನಾ ಪರಿವರ್ಜಿತಂ ।
ಬ್ರಹ್ಮಣೋ ವರದಾನೇನ ಸರ್ವೇಷಾಂ ಚ ದಿವೌಕಸಾಂ ॥ ೧೨ ॥
ತತೋ ನಿರ್ಭಿದ್ಯ ಶೂಲಾಗ್ರೈಃ ಪ್ರೋತ್ಕ್ಷಿಪ್ಯ ಗಗನಾಂಗಣೇ ।
ಛತ್ರವದ್ಧಾರಯಾಮಾಸ ಲಂಬಮಾನಮಧೋಮುಖಂ ।
ಅಕ್ಷರದ್ರುಧಿರಂ ಭೂಮೌ ಗಾತ್ರೇಭ್ಯೋ ವರ್ಷ್ಮಸಂಭವಂ ॥ ೧೩ ॥

---

೬. ಅನಂತರ ಒಂದು ಸಾವಿರ ವರ್ಷವಾದ ಮೇಲೆ ಶಶಿಶೇಖರನು ಕುಪಿತನಾಗಿ ಕೈಯಿಂದ ತ್ರಿಶೂಲವನ್ನೆತ್ತಿ ಹೊಡೆದನು.

೭. ಹಾಗೆ ತ್ರಿಶೂಲದಿಂದ ಹೊಡೆದರೂ ಆ ದೈತ್ಯನು ಬ್ರಹ್ಮನ ವರಪ್ರಭಾವದಿಂದ ಸಾಯಲಿಲ್ಲ.

೮. ಆ ಅಂಧಕನು ಮರಳಿ ಮೇಲಕ್ಕೆದ್ದು ಶಂಕರನೊಡನೆ ಕಾಳಗವಾಡಿ ಕ್ರೋಧದಿಂದ ಅನೇಕ ಗಣಗಳನ್ನು ಕೊಂದನು.

೯. ಮತ್ತು ಅನೇಕಬಾರಿ ಶಂಕರನನ್ನು ಗದೆಯಿಂದ ಅಪ್ಪಳಿಸಿದನು.

೧೦. ಹೀಗೆ ಅಂಧಕನಿಗೆ ಶಂಕರನೊಡನೆ ಒಂದು ಸಾವಿರ ವರ್ಷಕಾಲ ಸಮಸ್ತಲೋಕಭಯಂಕರವಾದ ಯುದ್ಧವು ನಡೆಯಿತು.

೧೧. ಶಂಕರನು ಆ ಅಂಧಕನನ್ನು ತ್ರಿಶೂಲದಿಂದ ಹೊಡೆದರೂ ಅವನು ಸಾಯದೆ ಮತ್ತೆ ಮತ್ತೆ ಎದ್ದು ನಿಂತು ಶಿವನನ್ನು ಗದೆಯಿಂದ ಹೊಡೆಯುತ್ತಿದ್ದನು.

೧೨-೧೩. ಆಗ ಶಂಕರನು ಬ್ರಹ್ಮನ ವರದಿಂದ ಆ ಅಂಧಕನು ಸಮಸ್ತ ದೇವತೆಗಳಿಗೂ ಅವಧ್ಯನೆಂದರಿತು ಅವನನ್ನು ತ್ರಿಶೂಲದ ಅಗ್ರದಿಂದ ಸೀಳಿ ಆಕಾಶದಲ್ಲಿ ಕೊಡೆಯಂತೆ ಮೇಲಕ್ಕೆತ್ತಿ ಕೆಳಮುಖವಾಗಿ ಜೋಲಾಡುತ್ತಿರುವಂತೆ ಹಿಡಿದುಕೊಂಡನು. ಆಗ ಅವನ ಶರೀರದಿಂದ ರಕ್ತವು ನೆಲದಮೇಲೆ ಸುರಿಯಿತು.

ಯಾವದ್ವರ್ಷಸಹಸ್ರಾಂತೇ ಚರ್ಮಾऽಸ್ಥಿಸ್ನಾಯುರೇವ ಚ ।
ಧಾತುತ್ರಯಂ ಸ್ಥಿತಂ ತಸ್ಯ ನಷ್ಟಮನ್ಯಚ್ಚತುಷ್ಟಯಂ ॥ ೧೪ ॥
ಸ ಜ್ಞಾತ್ವಾ ಬಲಸಂಹೀನಮಾತ್ಮಾನಂ ಧಾತುಸಂಕ್ಷಯಾತ್ ।
ಸಾಮೋಪಾಯಂ ತತಶ್ಚಕ್ರೇ ಸ್ತುತ್ವಾ ಸಾರ್ಧಂ ಪಿನಾಕಿನಾ ॥ ೧೫ ॥

ಅಂಧಕ ಉವಾಚ :—

ನ ತ್ವಂ ದೇವೋ ಮಯಾ ಜ್ಞಾತೋ ನಾಗ್ದುಷ್ಟೇನ ದುರಾತ್ಮನಾ ।
ಈದೃಗ್ವೀರ್ಯಸಮೋಪೇತಸ್ತದ್ಯುಕ್ತಂ ಭವತಾ ಕೃತಂ ॥ ೧೬ ॥
ಅನುರೂಪಂ ಮದಾಂಧಸ್ಯಾऽವಿವೇಕಸ್ಯ ಸುರೋತ್ತಮ ।
ಸ್ವವೀರ್ಯಮದಯುಕ್ತಸ್ಯ ವಿವೇಕರಹಿತಸ್ಯ ಚ ॥ ೧೭ ॥
ದುರ್ವಿನೀತಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ಚ ।
ನ ತಿಷ್ಠತಿ ಚಿರಂ ಕಾಲಂ ಯಥಾऽಹಂ ಮದಗರ್ವಿತಃ ॥ ೧೮ ॥
ಪಾಪೋऽಹಂ ಪಾಪಕರ್ಮಾऽಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ದೇವ ಈಶಾನ ಸರ್ವಪಾಪಹರೋ ಭವ ॥ ೧೯ ॥
ದುಃಖಿತೋऽಹಂ ವರಾಕೋऽಹಂ ದೀನೋऽಹಂ ಶಕ್ತಿವರ್ಜಿತಃ ।
ತ್ರಾತುಮರ್ಹಸಿ ಮಾಂ ದೇವ ಪ್ರಸನ್ನಂ ಶರಣಂ ವಿಭೋ ॥ ೨೦ ॥

---

೧೪. ಹೀಗೆ ಒಂದು ಸಾವಿರ ವರ್ಷವಾಗಲು ಅವನ ಶರೀರದಲ್ಲಿ ಚರ್ಮ, ಮೂಳೆ, ನಾಡಿಗಳೆಂಬ ಮೂರು ಧಾತುಗಳು ಮಾತ್ರ ಉಳಿದುವು. ಇನ್ನುಳಿದ ನಾಲ್ಕು ಧಾತುಗಳೂ ನಾಶವಾದುವು.

೧೫. ಆಗ ಅಂಧಕನು ಧಾತು ನಾಶದಿಂದ ತಾನು ಬಲಹೀನನಾಗಿರುವುದನ್ನರಿತು ಶಂಕರನನ್ನು ಸ್ತುತಿಸಿ ಅವನೊಡನೆ ಸಾಮೋಪಾಯವನ್ನು ಮಾಡಿದನು.

೧೬. ಅಂಧಕನು ಹೇಳುತ್ತಾನೆ:—ಶಂಕರ! ದುರಾತ್ಮನೂ, ಮಾತಿನಿಂದ ದುಷ್ಟನೂ ಆದ ನಾನು ಇಂತಹ ಬಲವುಳ್ಳ ನಿನ್ನನ್ನು ದೇವತೆಯೆಂದರಿಯಲಿಲ್ಲ. ಅದಕ್ಕೋಸ್ಕರ ನೀನು ಯುಕ್ತವಾದ ಕಾರ್ಯವನ್ನು ಮಾಡಿರುವೆ.

೧೭. ಇದು ಮದಾಂಧನೂ, ಅವಿವೇಕಿಯೂ ಆದವನಿಗೆ ಸರಿಯಾದುದು.

೧೮. ಅವಿನೀತನು ಸಂಪತ್ತು, ವಿದ್ಯೆ, ಐಶ್ವರ್ಯಗಳನ್ನು ಹೊಂದಿ ಮತ್ತನಾದ ನನ್ನಂತೆ ಬಹುಕಾಲ ಇರುವುದಿಲ್ಲ.

೧೯. ಶಂಕರ! ನಾನು ಪಾಪಿಯೂ, ಪಾಪಕರ್ಮವನ್ನಾಚರಿಸಿದವನೂ, ಪಾಪಸ್ವರೂಪನೂ, ಪಾಪದಿಂದ ಹುಟ್ಟಿದವನೂ ಆಗಿದ್ದೇನೆ. ನನ್ನನ್ನು ರಕ್ಷಿಸು. ಸಮಸ್ತ ಪಾಪಗಳನ್ನು ಪರಿಹರಿಸು.

೨೦. ನಾನು ದುಃಖಿತನೂ, ದೀನನೂ, ಕೃಪಣನೂ, ಶಕ್ತಿಯಿಲ್ಲದವನೂ ಆಗಿರುವೆನು. ಸ್ವಾಮಿ! ಶರಣಾಗತನಾದ ನನ್ನನ್ನು ರಕ್ಷಿಸಲರ್ಹನಾಗಿರುವೆ.

ದುಷ್ಟೋಽಹಂ ಪಾಪಯುಕ್ತೋಽಹಂ ಸಾಂಪ್ರತಂ ಪರಮೇಶ್ವರ ।
ತೇನ ಬುದ್ಧಿರಿಯಂ ಜಾತಾ ತವೋಪರಿ ಮಮಾಽನಘ ॥ ೨೧ ॥
ಸರ್ವಪಾಪಕ್ಷಯೇ ಜಾತೇ ಶಿವೇ ಭವತಿ ಭಾವನಾ ॥ ೨೨ ॥
ನಾಮಮಾತ್ರಮಪಿ ತ್ರ್ಯಕ್ಷ ಯಸ್ತೇ ಕೀರ್ತಯತಿ ಪ್ರಭೋ ।
ಸೋಽಪಿ ಮುಕ್ತಿಮವಾಪ್ನೋತಿ ಕಿಂಪುನಃ ಪೂಜನೇ ರತಃ ॥ ೨೩ ॥
ತವ ಪೂಜಾವಿಹೀನಾನಾಂ ದಿನಾನ್ಯಾಯಾಂತಿ ಯಾಂತಿ ಚ ।
ಯಾನಿ ದೇವ ಮೃತಾನಾಂ ಚ ತಾನಿ ಯಾಂತಿ ನ ಜೀವತಾಂ ॥ ೨೪ ॥
ಕುಷ್ಠೀ ವಾ ರೋಗಯುಕ್ತೋ ವಾ ಪಂಗುರ್ವಾ ಬಧಿರೋಽಪಿ ವಾ ।
ಮಾ ಭೂತ್ತಸ್ಯ ಕುಲೇ ಜನ್ಮ ಶಂಭುರ್ಯತ್ರ ನ ದೇವತಾ ॥ ೨೫ ॥
ತಸ್ಮಾನ್ಮೋಚಯ ಮಾಂ ದೇವ ಸ್ವಾಗತಂ ಕುರು ಸಾಂಪ್ರತಂ ।
ಗತೋ ಮೇ ದಾನವೋ ಭಾವಸ್ತ್ಯಕ್ತಂ ರಾಜ್ಯಂ ತಥಾ ವಿಭೋ ॥ ೨೬ ॥
ತ್ಯಕ್ತಾಃ ಪುತ್ರಾಶ್ಚ ಪೌತ್ರಾಶ್ಚ ಪತ್ನ್ಯಶ್ಚ ವಿಭವೈಃ ಸಹ ।
ತ್ರಿಃ ಸತ್ಯೇನ ಸುರಶ್ರೇಷ್ಠ ತವ ಪಾದೌ ಸ್ಪೃಶಾಮ್ಯಹಂ ॥ ೨೭ ॥
ತಸ್ಯ ತದ್ವಚನಂ ಶ್ರುತ್ವಾ ಜ್ಞಾತ್ವಾ ತಂ ಗತಕಲ್ಮಷಂ ।
ಉತ್ತಾರ್ಯ ಶನಕೈಃ ಶೂಲಾದ್ವಿನಯಾಽವನತಂ ಸ್ಥಿತಂ ॥ ೨೮ ॥

---

೨೧. ಪರಮೇಶ್ವರ! ನಾನು ದುಷ್ಟನೂ, ಪಾಪಿಯೂ ಆಗಿರುವೆನು. ಆದುದರಿಂದಲೇ ನನಗೆ ನಿನ್ನ ಮೇಲೆ ಇಂತಹ ಸದ್ಬುದ್ಧಿಯುಂಟಾಗಿರುವುದು.

೨೨. ಸಕಲ ಪಾಪಗಳೂ ಕ್ಷಯಿಸಲು ಮಾನವನಿಗೆ ಶಿವನಲ್ಲಿ ಭಾವನೆ ಯುಂಟಾಗುವುದು.

೨೩. ತ್ರ್ಯಂಬಕ! ನಿನ್ನ ಹೆಸರನ್ನು ಮಾತ್ರ ಹೇಳುವವನೂ ಮುಕ್ತನಾಗುವನು. ನಿನ್ನ ಪೂಜೆಯಲ್ಲಿ ನಿರತನಾದವನ ವಿಷಯವಿನ್ನೇನು.

೨೪. ನಿನ್ನನ್ನು ಪೂಜಿಸದವರಿಗೆ ದಿವಸಗಳು ಬರುತ್ತವೆ, ಹೋಗುತ್ತವೆ. ಮೃತರಾದವರಿಗೆ ಆ ದಿನಗಳು ಕಳೆಯುವಂತೆ ಬದುಕಿರುವವರಿಗೆ ಕಳೆಯುವುದಿಲ್ಲ.

೨೫. ಶಂಭುವನ್ನಾರಾಧಿಸದ ಕುಷ್ಠಿ, ರೋಗಿ, ಕುಂಟ, ಕಿವುಡ ಇವರಲ್ಲಿ ಯಾರ ಕುಲದಲ್ಲಾಗಲಿ ನನಗೆ ಜನ್ಮವಾಗದಿರಲಿ.

೨೬. ಸ್ವಾಮಿ! ಆದುದರಿಂದ ನನ್ನನ್ನು ಬಿಡಿಸು. ಸ್ವಾಗತವನ್ನು ಕೊಡು. ನನ್ನ ದಾನವಭಾವವು ಹೋಯಿತು. ನಾನು ರಾಜ್ಯವನ್ನು ತ್ಯಜಿಸಿರುವೆನು.

೨೭. ನಾನು ಐಶ್ವರ್ಯದೊಡನೆ ಪುತ್ರ, ಪೌತ್ರ, ಪತ್ನಿಯರನ್ನು ತ್ಯಜಿಸಿರುವೆನು. ಸುರೇಶ್ವರ! ಮೂರುಸಾರಿ ಸತ್ಯವಾಗಿ ನಿನ್ನ ಪಾದಗಳನ್ನು ಮುಟ್ಟುವೆನು.

೨೮–೩೦. ಆ ಅಂಧಕನ ಆ ಮಾತನ್ನು ಕೇಳಿ ಅವನು ಪಾಪರಹಿತನಾಗಿರುವ ನೆಂದರಿತು ಮೆಲ್ಲನೆ ಶೂಲದಿಂದ ಇಳಿಸಿ ವಿನಯದಿಂದ ನಮ್ರನಾದ ಅವನಿಗೆ

ತತೋ ನಾಮ ಸ್ವಯಂ ಚಕ್ರೇ ಭೃಂಗೀರಿಟಿರಿತಿ ಪ್ರಭುಃ ।
ಅಬ್ರವೀಚ್ಚ ಸದಾ ಮೇ ತ್ವಂ ವಲ್ಲಭಃ ಸಂಭವಿಷ್ಯಸಿ ॥ ೨೯ ॥
ನಂದಿನೋಽಪಿ ಗಜಾಸ್ಯಸ್ಯ ಮಹಾಕಾಲಸ್ಯ ಪುತ್ರಕ ।
ತಿಷ್ಠ ಸೌಮ್ಯ ಮಯಾ ಸೌಖ್ಯಂ ನ ಸ್ಮರಿಷ್ಯಸಿ ಬಾಂಧವಾನ್ ॥ ೩೦ ॥
ಸ ತಥೇತಿ ಪ್ರತಿಜ್ಞಾಯ ಪ್ರಣಮ್ಯ ಶಶಿಶೇಖರಂ ।
ತಸ್ಥೌ ಸರ್ವಗಣೈರ್ಯುಕ್ತಃ ಪ್ರಭುಸಂಶ್ರಯ ಸಂಯುತಃ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಭೃಂಗೀರಿಟ್ಯುತ್ಪತ್ತಿವರ್ಣನಂ"
ನಾಮೈಕೋನತ್ರಿಂಶದುತ್ತರಶತತಮೋಽಧ್ಯಾಯಃ

---

ಭೃಂಗೀರಿಟಯೆಂದು ಹೆಸನ್ನಿಟ್ಟು, "ಮಗು! ನೀನು ನನಗೂ, ನಂದಿಗೂ, ಗಣೇಶನಿಗೂ, ಮಹಾಕಾಲನಿಗೂ ಪ್ರಿಯನಾಗುವೆ. ನನ್ನೊಡನೆ ಸೌಖ್ಯವಾಗಿರು. ನೀನು ಬಂಧುಗಳನ್ನು ಸ್ಮರಿಸುವುದಿಲ್ಲ" ಎಂದನು.

೩೧. ಅಂಧಕನು ಹಾಗೆಯೇ ಆಗಲೆಂದು ಹೇಳಿ ಶಂಕರನನ್ನು ವಂದಿಸಿ ಸಮಸ್ತ ಗಣಗಳಿಂದ ಸಹಿತನಾಗಿ ಆ ಪ್ರಭುವಿನ ಆಶ್ರಯದಲ್ಲಿ ನೆಲೆಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭೃಂಗೀರಿಟ್ಯುತ್ಪತ್ತಿವರ್ಣನ"ವೆಂಬ
ಇನ್ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ವೃಕೇಂದ್ರರಾಜ್ಯಲಂಭನವರ್ಣನಂ

**ಸೂತ ಉವಾಚ:—**

ಏವಂ ಗಣತ್ವಮಾಪನ್ನೇ ಹ್ಯಂಧಕೇ ದಾನವೋತ್ತಮೇ ।
ತಸ್ಯ ಪುತ್ರೋ ವೃಕೋನಾಮ ನಿರುತ್ಸಾಹೋ ದ್ವಿಷಜ್ಜಯೇ ॥ ೧ ॥
ಭಯೇನ ಮಹತಾ ಯುಕ್ತೋ ಹತಶೇಷೈಶ್ಚ ದಾನವೈಃ ।
ಪ್ರವಿವೇಶ ಸಮುದ್ರಾಂತಂ ಸುದುರ್ಗಂ ಬ್ರಾಹ್ಮಣೋತ್ತಮಾಃ ॥ ೨ ॥
ತತಃ ಶಕ್ರಃ ಪ್ರಹೃಷ್ಟಾತ್ಮಾ ಪ್ರಣಮ್ಯ ವೃಷಭಧ್ವಜಂ ।
ತಸ್ಯಾಽದೇಶಂ ಸಮಾಸಾಧ್ಯ ಪ್ರವಿವೇಶಾಽಮರಾವತೀಂ ॥ ೩ ॥
ಚಕಾರ ಚ ಸುಖೀ ರಾಜ್ಯಂ ತ್ರೈಲೋಕ್ಯೇಽಪಿ ದ್ವಿಜೋತ್ತಮಾಃ ।
ಯಜ್ಞಭಾಗಾನ್ ಪುನರ್ಲೇಭೇ ಯಥಾರ್ಥಂ ಚ ಧರಾತಲೇ ॥ ೪ ॥
ಏತಸ್ಮಿನ್ನೇವ ಕಾಲೇತು ಹ್ಯಂಧಕಸ್ಯ ಸುತೋ ವೃಕಃ ।
ನಿಷ್ಕ್ರಮ್ಯ ಸಾಗರಾತ್ತೂರ್ಣಂ ಜಂಬೂದ್ವೀಪಂ ಸಮಾಗತಃ ॥ ೫ ॥

---

### ಕನ್ನಡದ ಅನುವಾದ

### ವೃಕೇಂದ್ರರಾಜ್ಯಲಂಭನವರ್ಣನ

೧–೨. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮರೆ! ದಾನವಶ್ರೇಷ್ಠನಾದ ಅಂಧಕನು ಹೀಗೆ ಗಣತ್ವವನ್ನು ಪಡೆಯಲು ಅವನ ತನಯನಾದ ವೃಕನು ಶತ್ರುಗಳನ್ನು ಜಯಿಸುವುದರಲ್ಲಿ ನಿರುತ್ಸಾಹನಾಗಿ ಅತಿ ಭಯದಿಂದ ಹತಶೇಷರಾದ ದಾನವರೊಡನೆ ಅತಿ ದುರ್ಗಮವಾದ ಸಮುದ್ರದ ಮಧ್ಯವನ್ನು ಹೊಕ್ಕನು.

೩. ಬಳಿಕ ಅಮರನಾಥನು ಸಂತೋಷಗೊಂಡು ಶಂಕರನನ್ನು ವಂದಿಸಿ ಅವನ ಆದೇಶವನ್ನು ಪಡೆದು ಅಮರಾವತಿಯನ್ನು ಸೇರಿದನು.

೪. ತ್ರೈಲೋಕ್ಯರಾಜ್ಯವನ್ನಾಳುತ್ತ ಮರಳಿ ಆ ಸುರೇಶ್ವರನು ಯಜ್ಞಭಾಗಗಳನ್ನು ಪಡೆದನು.

೫. ಈ ಸಮಯದಲ್ಲಿಯೇ ಅಂಧಕಪುತ್ರನಾದ ವೃಕನು ಶೀಘ್ರವಾಗಿ ಸಮುದ್ರದಿಂದ ಹೊರಟು ಜಂಬೂದ್ವೀಪಕ್ಕೆ ಬಂದನು.

ಹಾಟಕೇಶ್ವರಜಂ ಕ್ಷೇತ್ರಂ ಮತ್ವಾ ಪುಣ್ಯಂ ಸುಸಿದ್ಧಿದಂ ।
ಪಿತ್ರಾ ಯತ್ರ ತಪಸ್ತಪ್ತಮಂಧಕೇನ ದುರಾತ್ಮನಾ ॥ ೬ ॥
ಸ ಗುಪ್ತಸ್ತು ತಪಸ್ತೇಪೇ ಯಥಾವೇತ್ತಿ ನ ಕಶ್ಚನ ।
ಧ್ಯಾಯಮಾನಃ ಸುರಶ್ರೇಷ್ಠಂ ಭಕ್ತ್ಯಾ ಕಮಲಸಂಭವಂ ॥ ೭ ॥
ಯಾವದ್ವರ್ಷ ಸಹಸ್ರಾಂತಂ ಜಲಾಹಾರೋ ದ್ವಿತೀಯಕಂ ।
ತಪಸ್ತೇಪೇ ಸ ದೈತ್ಯೇಂದ್ರೋ ಧ್ಯಾಯಮಾನಃ ಪಿತಾಮಹಂ ॥ ೮ ॥
ವಾಯುಭಕ್ತಸ್ತತೋ ಜಾತಸ್ತಾವತ್ಕಾಲಂ ದ್ವಿಜೋತ್ತಮಾಃ ।
ಅಂಗುಷ್ಠಾಗ್ರೇಣ ಭೂಪೃಷ್ಠಂ ಸ್ಪರ್ಶಮಾನೋ ಜಿತೇಂದ್ರಿಯಃ ॥ ೯ ॥
ಏವಂ ಚ ಪಂಚಮೇ ಪ್ರಾಪ್ತೇ ಸಹಸ್ರೇ ದ್ವಿಜಸತ್ತಮಾಃ ।
ಬ್ರಹ್ಮಾ ತಸ್ಯ ಗತಸ್ತುಷ್ಟಿಂ ದೃಷ್ಟ್ವಾ ತಸ್ಯ ತಪೋ ಮಹತ್ ॥ ೧೦ ॥
ತತೋಽಬ್ರವೀತ್ತಮಾಗತ್ಯ ತಾಂ ಗರ್ತಾಂ ಬ್ರಾಹ್ಮಣೋತ್ತಮಾಃ ।
ಭೋ ಭೋ ವೃಕ ನಿವರ್ತಸ್ವ ತಪಸೋಽಸ್ಮಾತ್ಸುದಾರುಣಾತ್ ॥ ೧೧ ॥
ವರಂ ವರಯ ಭದ್ರಂತೇ ಯೋ ನಿತ್ಯಂ ಮನಸಿ ಸ್ಥಿತಃ ॥ ೧೨ ॥

ವೃಕ ಉವಾಚ:—

ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಜರಾಮರಣಹೀನಂ ಮಾಂ ತತ್ಕುರುಷ್ವ ಪಿತಾಮಹ ॥ ೧೩ ॥

---

೬–೯. ಅವನು ದುರಾತ್ಮನಾದ ತನ್ನ ತಂದೆ ಅಂಧಕನು ತಪಸ್ಸನ್ನು ಮಾಡಿದ ಹಾಟಕೇಶ್ವರಜಕ್ಷೇತ್ರವನ್ನು ಸಿದ್ಧಿಯನ್ನೀಯುವ ಪುಣ್ಯಕ್ಷೇತ್ರ ವೆಂದರಿತು ಯಾರೂ ತಿಳಿಯದಂತೆ ಚತುರ್ಮುಖನನ್ನು ಧ್ಯಾನಿಸುತ್ತ ಒಂದು ಸಾವಿರ ವರ್ಷ ಗುಟ್ಟಾಗಿ ತಪಸ್ಸನ್ನು ಮಾಡಿದನು. ಹಾಗೆಯೇ ಜಲಪಾನ ಮಾಡುತ್ತ ಇನ್ನೊಂದು ಸಾವಿರ ವರ್ಷ ಕಾಲವೂ, ವಾಯುಭಕ್ಷಕನಾಗಿ ಮತ್ತೊಂದು ಸಾವಿರ ವರ್ಷ ಕಾಲವೂ, ಅಂಗುಷ್ಠಾಗ್ರದಿಂದ ಭೂಮಿಯನ್ನು ಮುಟ್ಟನಿಂತು ಜಿತೇಂದ್ರಿಯನಾಗಿ ಇನ್ನೊಂದು ಸಾವಿರ ವರ್ಷಕಾಲವೂ ತಪಸ್ಸ ನ್ನಾಚರಿಸಿದನು.

೧೦–೧೨. ದ್ವಿಜವರ್ಯರೆ! ಹೀಗೆ ಐದನೆಯ ಸಾವಿರ ವರ್ಷವು ಬರಲು ಬ್ರಹ್ಮನು ಅವನ ಮಹಾ ತಪಸ್ಸನ್ನು ನೋಡಿ ಸಂತುಷ್ಟನಾಗಿ ಆ ಕುಣಿಯಲ್ಲಿರುವ ಅವನೆಡೆಗೆ ಬಂದು ಎಲೈ ವೃಕನೆ! ಈ ದಾರುಣ ತಪಸ್ಸಿನಿಂದ ಹಿಂದಿರುಗು. ನಿನ್ನ ಮನದಲ್ಲಿರುವುದನ್ನು ಕೇಳಿಕೊ ಎಂದನು.

೧೩. ವೃಕನು ಹೇಳುತ್ತಾನೆ:—ಪಿತಾಮಹ! ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನೀಯುವುದಾದರೆ ನನ್ನನ್ನು ಮುಪ್ಪು ಮರಣವಿಲ್ಲದವನನ್ನಾಗಿಸು.

ಬ್ರಹ್ಮೋವಾಚ :—
ಮಮ ಪ್ರಸಾದತೋ ವತ್ಸ ಜರಾಮರಣವರ್ಜಿತಃ ।
ಭವಿಷ್ಯಸಿ ನ ಸಂದೇಹಃ ಸತ್ಯಮೇತನ್ಮಯೋದಿತಂ ॥ ೧೪ ॥
ಏವಮುಕ್ತ್ವಾ ತತೋ ಬ್ರಹ್ಮಾ ತತ್ರೈವಾಂತರಧೀಯತ ।
ವೃಕೋಽಪಿ ಕೃತಕೃತ್ಯಸ್ತ್ವಾಗತಶ್ಚ ಸ್ವಗೃಹಂ ಪಿತುಃ ॥ ೧೫ ॥
ಗಿರಿಂ ರೈವತಕಂ ನಾಮ ಸರ್ವರ್ತುಕುಸುಮೋಜ್ವಲಂ ।
ತತ್ರ ಗತ್ವಾ ನಿಜಾಽಮಾತ್ಯೈಃ ಸಮಂ ಮಂತ್ರ್ಯ ಚ ಸತ್ವರಂ ।
ಇಂದ್ರೋಪರಿ ತತಶ್ಚಕ್ರೇ ಯಾನಂ ಯುದ್ಧಪರೀಪ್ಸಯಾ ॥ ೧೬ ॥
ಇಂದ್ರೋಽಪಿ ಚ ಪರಿಜ್ಞಾಯ ದಾನವಂ ತಂ ಮಹಾಬಲಂ ।
ಜರಾಮೃತ್ಯುಪರಿತ್ಯಕ್ತಂ ಪ್ರಭಾವಾತ್ಪರಮೇಷ್ಠಿನಃ ॥ ೧೭ ॥
ಪರಿತ್ಯಜ್ಯ ಭಯಾಚ್ಚೈವ ಪುರೀಂ ಚೈವಾಽಮರಾವತೀಂ ।
ಬ್ರಹ್ಮಲೋಕಂ ಗತಸ್ತೂರ್ಣಂ ದೇವೈಃ ಸರ್ವೈಃ ಸಮನ್ವಿತಃ ॥ ೧೮ ॥
ಏತಸ್ಮಿನ್ನಂತರೇ ಪ್ರಾಪ್ತೋ ವೃಕಶ್ಚ ತ್ರಿದಶಾಲಯೇ ।
ಸಸೈನ್ಯಪರಿವಾರೇಣ ಪ್ರಹೃಷ್ಟೇನ ಸಮನ್ವಿತಃ ॥ ೧೯ ॥
ತತಶ್ಚೇಂದ್ರಪದೇ ತಸ್ಮಿನ್ ಸ್ವಯಮೇವ ವ್ಯವಸ್ಥಿತಃ ।
ಶುಕ್ರಾತ್ಪ್ರಾಪ್ಯಾಽಭಿಷೇಕಂ ಚ ಪುಷ್ಪಸ್ನಾನಸಮುದ್ಭವಂ ॥ ೨೦ ॥

---

೧೪. ಬ್ರಹ್ಮನು ಹೇಳುತ್ತಾನೆ:—ಮಗು! ನನ್ನ ಅನುಗ್ರಹದಿಂದ ನೀನು ಜರಾಮರಣವಿಲ್ಲದವನಾಗುವೆ. ನಾನು ಹೇಳಿರುವುದು ನಿಜ.

೧೫. ಬ್ರಹ್ಮನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನವಾದನು. ವೃಕನೂ ಧನ್ಯನಾಗಿ ತಂದೆಯ ಮನೆಗೆ ಬಂದನು.

೧೬. ಬಳಿಕ ಅವನು ಎಲ್ಲಾ ಋತುಗಳಲ್ಲಿಯೂ ಹೂವುಗಳಿಂದ ಉಜ್ವಲವಾದ ರೈವತಕಪರ್ವತಕ್ಕೆ ಹೋಗಿ ಮಂತ್ರಿಗಳೊಡನೆ ಆಲೋಚಿಸಿ ಶೀಘ್ರವಾಗಿ ಇಂದ್ರನ ಮೇಲೆ ಯುದ್ಧಮಾಡಲಿಚ್ಛೆಯಿಂದ ಪ್ರಯಾಣ ಮಾಡಿದನು.

೧೭–೧೮. ಇಂದ್ರನು ಆ ವೃಕನು ಪರಮೇಷ್ಠಿಯ ಪ್ರಭಾವದಿಂದ ಜರಾಮರಣವಿಲ್ಲದೆ ಅತಿ ಬಲಿಷ್ಠನಾಗಿರುವುದನ್ನರಿತು ಭಯದಿಂದ ಅಮರಾವತಿಯನ್ನು ತ್ಯಜಿಸಿ ದೇವತೆಗಳೊಡನೆ ಬ್ರಹ್ಮಲೋಕಕ್ಕೆ ತೆರಳಿದನು.

೧೯–೨೦. ಇಷ್ಟರಲ್ಲಿ ವೃಕನು ಸಂತೋಷಗೊಂಡ ಸೈನ್ಯ ಪರಿವಾರದೊಡನೆ ಅಮರಾವತಿಗೆ ಬಂದು ಇಂದ್ರನ ಸ್ಥಾನದಲ್ಲಿ ಕುಳಿತು ಶುಕ್ರಾಚಾರ್ಯನಿಂದ ಅಭಿಷೇಕ ಮಾಡಿಸಿಕೊಂಡನು.

ಸೋಽಭಿಷಿಕ್ತಸ್ತು ಶುಕ್ರೇಣ ದೇವರಾಜ್ಯಪದೇ ವೃಕಃ ।
ಸ್ಥಾಪಯಾಮಾಸ ದೈತೇಯಾನ್ ದೇವತಾನಾಂ ಪದೇಷು ಚ ॥ ೨೧ ॥
ಆದಿತ್ಯಾನಾಂ ವಸೂನಾಂ ಚ ರುದ್ರಾಣಾಂ ಮರುತಾಮಪಿ ।
ಯಜ್ಞಭಾಗಕೃತೇ ವಿಪ್ರಾಃ ಶುಕ್ರಶಾಸನಮಾಶ್ರಿತಾಃ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವೃಕೇಂದ್ರರಾಜ್ಯಲಂಭನವರ್ಣನಂ" ನಾಮ
ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೧-೨೨. ಶುಕ್ರನಿಂದ ಇಂದ್ರಪದವಿಯಲ್ಲಿ ಪಟ್ಟಾಭಿಷಿಕ್ತನಾದ ವೃಕನು ಆ ಶುಕ್ರನ ಆಜ್ಞೆಯಂತೆ ಆದಿತ್ಯರು, ವಸುಗಳು, ರುದ್ರರು, ಮರುತ್ತುಗಳು ಇವರೇ ಮೊದಲಾದ ದೇವತೆಗಳ ಸ್ಥಾನಗಳಲ್ಲಿ ಯಜ್ಞಭಾಗಕ್ಕಾಗಿ ದೈತ್ಯರನ್ನು ಸ್ಥಾಪಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವೃಕೇಂದ್ರರಾಜ್ಯಲಂಭನವರ್ಣನ"ವೆಂಬ
ಇನ್ನೂರ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶದುತ್ತರದ್ವಿಶತತಮೋಽಧ್ಯಾಯಃ

## ಏಕಾದಶೀವ್ರತಮಾಹಾತ್ಮ್ಯವರ್ಣನಂ

ಸೂತ ಉವಾಚ:—

ವೃಕೋಽಪಿ ತತ್ಸಮಾಸಾದ್ಯ ರಾಜ್ಯಂ ತ್ರೈಲೋಕ್ಯಸಂಭವಂ ।
ಯದೃಚ್ಛಯಾ ಜಗತ್ಸರ್ವಂ ಸ ಸಮಾಜ್ಞಾಪಯತ್ತದಾ ॥ ೧ ॥
ಸೋಽಂಧಕಸ್ಯ ಬಲೇ ವೀರ್ಯೇ ಧೈರ್ಯೇ ಕೋಪೇ ಚ ದಾನವಃ ।
ಸಹಸ್ರಗುಣಿತಶ್ಚಾಸೀದ್ರೌದ್ರಃ ಪರಮದಾರುಣಃ ॥ ೨ ॥
ಏತಸ್ಮಿನ್ನಂತರೇ ಕಶ್ಚಿನ್ನ ಮರ್ತ್ಯೋ ಯಜತಿ ಕ್ಷಿತೌ ।
ನ ಹೋಮಂ ನೈವ ಜಾಪ್ಯಂ ಚ ದೈತ್ಯಾಂಜ್ಞಾತ್ವಾ ಸುರಾಸ್ಪದೇ ॥ ೩ ॥
ಅಥ ಯಃ ಕುರುತೇ ಧರ್ಮಂ ಹೋಮಂ ವಾ ಜಪಮೇವ ವಾ ।
ಸುಗುಪ್ತಸ್ಥಾನಮಾಸಾದ್ಯ ಕರೋತ್ಯಮರತುಷ್ಟಯೇ ॥ ೪ ॥
ಅಥ ಸ್ವರ್ಗಸ್ಥಿತಾ ದೈತ್ಯಾ ಯಜ್ಞಭಾಗವಿವರ್ಜಿತಾಃ ।
ತಥಾ ಮರ್ತ್ಯೋದ್ಭವೈರ್ಭಾಗೈಃ ಸಂದೇಹಂ ಪರಮಂ ಗತಾಃ ॥ ೫ ॥

---

## ಕನ್ನಡದ ಅನುವಾದ

### ಏಕಾದಶೀವ್ರತಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ವೃಕನು ತ್ರೈಲೋಕ್ಯರಾಜ್ಯವನ್ನು ಪಡೆದು ಸ್ವೇಚ್ಛೆಯಾಗಿ ಜಗತ್ತನ್ನೆಲ್ಲ ಆಜ್ಞೆಮಾಡಿದನು.

೨. ಅವನು ಬಲ, ವೀರ್ಯ, ಧೈರ್ಯ, ಕೋಪಗಳಲ್ಲಿ ತಂದೆಯಾದ ಅಂಧಕನಿಗಿಂತ ಸಾವಿರಮಡಿ ಹೆಚ್ಚಾಗಿ ಭಯಂಕರನೂ, ಅತಿ ದಾರುಣನೂ ಆಗಿದ್ದನು.

೩. ಈ ಸಮಯದಲ್ಲಿ ಭೂಮಿಯಲ್ಲಿರುವ ಒಬ್ಬ ಮನುಷ್ಯನೂ ದೇವತೆಗಳ ಸ್ಥಾನದಲ್ಲಿ ದೈತ್ಯರು ಇರುವುದನ್ನರಿತು ಹೋಮ ಜಪಗಳನ್ನು ಮಾಡಲಿಲ್ಲ.

೪. ಯಾವನಾದರೂ ಧರ್ಮವನ್ನಾಗಲಿ, ಹೋಮವನ್ನಾಗಲಿ, ಜಪವನ್ನಾಗಲಿ ಮಾಡುವುದಾದರೂ ದೇವತುಷ್ಟಿಗಾಗಿ ಯಾರೂ ಕಾಣದ ಕಡೆ ಗುಟ್ಟಾಗಿ ಮಾಡುತ್ತಿದ್ದನು.

೫. ಬಳಿಕ ಸ್ವರ್ಗವಾಸಿಗಳಾದ ದಾನವರು ಮಾನವರ ಯಜ್ಞಭಾಗಗಳಿಲ್ಲದೆ ಅತ್ಯಂತವಾಗಿ ಪ್ರಾಣಸಂಶಯವನ್ನು ಹೊಂದಿದರು.

ತತಃ ಕೋಪಪರೀತಾತ್ಮಾ ಪ್ರೇಷಯಾಮಾಸ ದಾನವಃ ।
ಮರ್ತ್ಯಲೋಕೇ ಚರಾನ್ ಗುಪ್ತಾನ್ನಿಪುಣಾಂಶ್ಚಾಬ್ರವೀತ್ತತಃ ॥ ೭ ॥
ಯಃ ಕಶ್ಚಿದ್ದೇವತಾನಾಂ ಚ ಪ್ರಗೃಹ್ಣಾತಿ ಕರೋತಿ ಚ ।
ತದರ್ಥಂ ಯಜನಂ ಹೋಮಂ ದಾನಂ ವಾ ಪೃಥಿವೀತಲೇ ।
ಸ ಚ ವಧ್ಯಶ್ಚ ಯುಷ್ಮಾಭಿರ್ಮಮ ವಾಕ್ಯಾದಸಂಶಯಂ ॥ ೭ ॥
ಅಥ ತೇ ತದ್ವಚಃ ಶ್ರುತ್ವಾ ದಾನವಾ ಬಲವತ್ತರಾಃ ।
ಗತ್ವಾ ಚ ಮೇದಿನೀ ಪೃಷ್ಠಂ ಗುಪ್ತಾಃ ಸರ್ಪಂತಿ ಸರ್ವತಃ ॥ ೮ ॥
ಯಂ ಕಂಚಿದ್ವೀಕ್ಷ್ಯಯಂತಿಸ್ಮ ಜಪಹೋಮಪರಾಯಣಂ ।
ಸ್ವಾಧ್ಯಾಯಂ ವಾ ಪ್ರಕುರ್ವಾಣಂ ತಂ ನಿಘ್ನಂತಿ ಶಿತಾಽಸಿಭಿಃ ॥ ೯ ॥
ಏತಸ್ಮಿನ್ನೇವ ಕಾಲೇತು ಸಾಂಕೃತಿರ್ಮುನಿಸತ್ತಮಃ ।
ಗುಪ್ತಶ್ಚಕ್ರೇ ತತಸ್ತಸ್ಯಾಂ ಗರ್ತಾಯಾಂ ಛನ್ನವರ್ಷ್ಮಕಃ ।
ಯತ್ರ ಪೂರ್ವಂ ತಪಸ್ತಪ್ತಂ ವೃಕೇಣ ಚ ದ್ವಿಜಾಃ ಪುರಾ ॥ ೧೦ ॥
ಅಥ ತೇ ತಂ ತದಾ ದೃಷ್ಟ್ವಾ ತದ್ಗುಹಾಯಾಂ ವ್ಯವಸ್ಥಿತಂ ।
ಭರ್ತ್ಸಮಾನಾಸ್ತಪಸ್ತಶ್ಚ ಪ್ರೋಚುಶ್ಚ ಪರುಷಾಕ್ಷರೈಃ ॥ ೧೧ ॥
ದೃಷ್ಟ್ವಾ ತಸ್ಯಾಗ್ರತಃ ಸಂಸ್ಥಾಂ ಗಂಧಪುಷ್ಪೈಶ್ಚ ಪೂಜಿತಾಂ ।
ವಾಸುದೇವಾತ್ಮಿಕಾಂ ಮೂರ್ತಿಂ ಚತುರ್ಹಸ್ತಾಂ ದ್ವಿಜೋತ್ತಮಾಃ ॥ ೧೨ ॥

---

೭. ಆದರಿಂದ ಕುಪಿತನಾದ ವೃಕದಾನವನು ಕುಶಲರಾದ ಗುಪ್ತಚಾರರನ್ನು ಹೀಗೆ ಹೇಳಿ ಭೂಲೋಕಕ್ಕೆ ಕಳುಹಿಸಿದನು.

೭. "ನೀವು ನನ್ನ ಮಾತಿನಿಂದ ಭೂಮಿಯಲ್ಲಿ ದೇವತೆಗಳ ಮಧ್ಯದಲ್ಲಿ ಯಾವನಾದರೂ ಹವಿರ್ಭಾಗವನ್ನು ತೆಗೆದುಕೊಂಡರೂ, ಅವರಿಗೋಸ್ಕರ ಯಾವನಾದರೂ ಯಜನ, ಹೋಮ, ದಾನ ಇವುಗಳನ್ನು ಮಾಡಿದರೂ ಅವರನ್ನು ಕೊಲ್ಲಿರಿ."

೮. ಬಳಿಕ ಬಲಿಷ್ಠರಾದ ಆ ದಾನವರು ವೃಕನ ಆ ಮಾತನ್ನು ಕೇಳಿ ಭೂಮಿಗೆ ತೆರಳಿ ಗುಟ್ಟಾಗಿ ಎಲ್ಲೆಡೆಯಲ್ಲಿಯೂ ಸಂಚರಿಸಿದರು.

೯. ಜಪ ಹೋಮ ನಿರತನನ್ನಾಗಲಿ, ವೇದಾಧ್ಯಯನ ಮಾಡುವವನ್ನಾಗಲಿ ನೋಡಿದರೆ ಅವನನ್ನು ಹರಿತವಾದ ಕತ್ತಿಗಳಿಂದ ಕೊಲ್ಲುತ್ತಿದ್ದರು.

೧೦. ಈ ಸಮಯದಲ್ಲಿ ಸಾಂಕೃತಿಯೆಂಬ ಓರ್ವ ಮುನಿವರ್ಯನು ಹಿಂದೆ ವೃಕನು ತಪಸ್ಸನ್ನು ಮಾಡಿದ ಕುಣಿಯಲ್ಲಿ ಶರೀರವು ಕಾಣದಂತೆ ಕುಳಿತು ಗುಟ್ಟಾಗಿ ತಪಸ್ಸನ್ನಾಚರಿಸುತ್ತಿದ್ದನು.

೧೧. ವೃಕನ ಗುಪ್ತಚಾರರು ಗುಹೆಯಲ್ಲಿ ತಪವನ್ನಾಚರಿಸುತ್ತಿರುವ ಸಾಂಕೃತಿಯನ್ನು ನೋಡಿ ಕಠಿನವಾದ ಮಾತುಗಳಿಂದ ಗದರಿಸಿದರು.

೧೨–೧೩. ಆ ಮುನಿಯ ಮುಂದೆ ಗಂಧಪುಷ್ಪಗಳಿಂದ ಪೂಜಿತವಾದ ನಾಲ್ಕು ತೋಳುಗಳುಳ್ಳ ವಾಸುದೇವ ಮೂರ್ತಿಯನ್ನು ನೋಡಿ ಕೋಪದಿಂದ

ತತಸ್ತೇ ಶಸ್ತ್ರಮುದ್ಯಮ್ಯ ನಿರ್ಜಘ್ನುಸ್ತಂ ಕ್ರುಧಾನ್ವಿತಾಃ ।
ನ ಶೇಕುಸ್ತೇ ಯದಾ ಹಂತುಂ ಸಂವೃತಂ ವಿಷ್ಣುತೇಜಸಾ ।
ಕುಂಠತಾಂ ಸರ್ವಶಸ್ತ್ರಾಣಿ ಗತಾನಿ ವಿಮಲಾನ್ಯಪಿ ॥ ೧೩ ॥
ಅಥ ವೈಲಕ್ಷ್ಯಮಾಪನ್ನಾ ನಿರ್ವಿಣ್ಣಾಃ ಸರ್ವ ಏವ ತೇ ।
ತಾಂ ವಾರ್ತಾಂ ದಾನವೇಂದ್ರಾಯ ವೃಕಾಯೋಚುಶ್ಚ ತೇ ತದಾ ॥ ೧೪ ॥
ಕಶ್ಚಿದ್ವಿಪ್ರಃ ಸಮಾಧಾಯ ವೈಷ್ಣವೀಂ ಪ್ರತಿಮಾಂ ಪುರಃ ।
ತಪಸ್ತೇಪೇ ಮಹಾಭಾಗ ಕ್ಷೇತ್ರೇ ವೈ ಹಾಟಕೇಶ್ವರೇ ॥ ೧೫ ॥
ಯತ್ರ ತ್ವಯಾ ತಪಸ್ತಪ್ತಂ ಭೀತ್ಯಾ ಸರ್ವದಿವೌಕಸಾಂ ।
ಅಪಿ ಚೌರ್ಯೇಣ ಚಾಽಸ್ಮಾಕಂ ತಪಸ್ತಪತಿ ತಾದೃಶಂ ॥ ೧೬ ॥
ಯೇನ ಸರ್ವಾಣಿ ಶಸ್ತ್ರಾಣಿ ಕುಂಠತಾಂ ಪ್ರಗತಾನಿ ಚ ।
ತಸ್ಯ ಗಾತ್ರೇ ಪ್ರಹಾರೈಶ್ಚ ತಸ್ಮಾತ್ಕುರು ಯಥೋಚಿತಂ ॥ ೧೭ ॥
ತೇಷಾಂ ತದ್ವಚನಂ ಶ್ರುತ್ವಾ ವೃಕಃ ಕೋಪ ಸಮನ್ವಿತಃ ।
ಜಗಾಮ ಸತ್ವರಂ ತತ್ರ ಯತ್ರಾಽಸೌ ಸಾಂಕೃತಿಃ ಸ್ಥಿತಃ ॥ ೧೮ ॥
ಸ ಗತ್ವಾ ವೈಷ್ಣವೀಂ ಮೂರ್ತಿಂ ತಾಮುತ್ಕ್ಷಿಪ್ಯ ಸುದೂರತಃ ।
ಶ್ವಭ್ರಾದ್ಬಹಿಃ ಪ್ರಚಿಕ್ಷೇಪ ಭರ್ತ್ಸಯಮಾನಃ ಪುನಃ ಪುನಃ ॥ ೧೯ ॥

---

ಅದನ್ನು ಶಸ್ತ್ರದಿಂದ ಹೊಡೆದರು. ಆದರೆ ವಿಷ್ಣುತೇಜಸ್ಸಿನಿಂದ ಆವೃತವಾದ ಆ ಮೂರ್ತಿಯನ್ನು ಹೊಡೆಯಲು ಶಕ್ತರಾಗಲಿಲ್ಲ. ಅವರ ಸಮಸ್ತ ಶಸ್ತ್ರಗಳೂ ಮೊಂಡಾದುವು.

೧೪. ಬಳಿಕ ಲಜ್ಜಿತರೂ, ವೈರಾಗ್ಯಗೊಂಡವರೂ ಆದ ಅವರೆಲ್ಲರೂ ಆ ಸಮಾಚಾರವನ್ನು ದಾನವ ರಾಜನಾದ ವೃಕನಿಗೆ ಹೀಗೆ ಹೇಳಿದರು.

೧೫–೧೬. ಹಾಟಕೇಶ್ವರಕ್ಷೇತ್ರದಲ್ಲಿ ನೀನು ದೇವತೆಗಳ ಭಯದಿಂದ ತಪಸ್ಸನ್ನು ಮಾಡಿದ ಸ್ಥಳದಲ್ಲಿ ಒಬ್ಬ ಬ್ರಾಹ್ಮಣನು ತನ್ನ ಮುಂದೆ ವಿಷ್ಣುಪ್ರತಿಮೆಯನ್ನಿಟ್ಟುಕೊಂಡು ನಮಗೆ ತಿಳಿಯದಂತೆ ಕಳ್ಳತನದಿಂದ ಘೋರತಪಸ್ಸನ್ನು ಮಾಡುತ್ತಿರುವನು.

೧೭. ಅವನ ಶರೀರಕ್ಕೆ ಪ್ರಯೋಗಿಸಿದ ನಮ್ಮ ಸಮಸ್ತ ಶಸ್ತ್ರಗಳೂ ಮೊಂಡಾದುವು. ಆದುದರಿಂದ ಈ ವಿಷಯದಲ್ಲಿ ನೀನೇ ಉಚಿತವಾದುದನ್ನು ಮಾಡುವವನಾಗು.

೧೮. ಗುಪ್ತಚಾರರ ಆ ಮಾತನ್ನು ಕೇಳಿ ವೃಕನು ಕೋಪಗೊಂಡು ಬೇಗನೆ ಸಾಂಕೃತಿಯಿರುವ ಸ್ಥಳಕ್ಕೆ ಹೋದನು.

೧೯–೨೧. ಅವನು ಆ ವಿಷ್ಣು ಮೂರ್ತಿಯನ್ನು ಎತ್ತಿ ಕುಣಿಯ ಹೊರಗೆ ದೂರದಲ್ಲಿ ಎಸೆದು ಪುನಃ ಪುನಃ ಗದರಿಸುತ್ತ ಎರಡು ಕಾಲುಗಳಿಂದ ಒದೆದು

ಜಘಾನ ಪಾದಘಾತೇನ ದಕ್ಷಿಣೇನೇತರೇಣ ತಂ ।
ಅಬ್ರವೀನ್ಮಮ ವಧ್ಯಸ್ತ್ವಂ ಯನ್ಮಚ್ಛತ್ರುಂ ಜನಾರ್ದನಂ ॥ ೨೦ ॥
ಸಂಪೂಜಯಸಿ ಚೌರ್ಯೇಣ ತೇನ ಪ್ರಾಣಾನ್ ಹರಾಮ್ಯಹಂ ।
ಏವಮುಕ್ತ್ವಾಽಥ ಖಡ್ಗೇನ ತಂ ಜಘಾನ ಸ ದೈತ್ಯಪಃ ॥ ೨೧ ॥
ತತಸ್ತಸ್ಯ ಸ ಖಡ್ಗಸ್ತು ತೀಕ್ಷ್ಣೋಽಪಿ ದ್ವಿಜಸತ್ತಮಾಃ ।
ತಸ್ಯ ಕಾಯೇ ಪ್ರಹೀಣಸ್ತು ಶತಧಾ ಸಮಪದ್ಯತ ॥ ೨೨ ॥
ತತಃ ಕೋಪಪರೀತಾತ್ಮಾ ತಂ ಶಶಾಪ ಸ ಸಾಂಕೃತಿಃ ॥ ೨೩ ॥
ಯಸ್ಮಾತ್ಪಾಪ ತ್ವಯಾಽಹಂ ಚ ಪಾದಘಾತೈಃ ಪ್ರತಾಡಿತಃ ।
ತಸ್ಮಾತ್ತೇ ಪತತಾಂ ಪಾದೌ ಸದ್ಯ ಏವ ಧರಾತಲೇ ॥ ೨೪ ॥

ಸೂತ ಉವಾಚ:—

ಉಕ್ತಮಾತ್ರೇ ತತಸ್ತೇನ ಪಾದೌ ತಸ್ಯ ದ್ವಿಜೋತ್ತಮಾಃ ।
ಪತಿತೌ ಮೇದಿನೀಪೃಷ್ಠೇ ಪಂಚಶೀರ್ಷಾವಿವೋರಗೌ ॥ ೨೫ ॥
ಏತಸ್ಮಿನ್ನೇವ ಕಾಲೇತು ಆಕ್ರಂದಃ ಸುಮಹಾನಭೂತ್ ।
ವೃಕಸ್ಯ ಸೈನಿಕಾನಾಂ ಚ ನಾರೀಣಾಂ ಚ ವಿಶೇಷತಃ ॥ ೨೬ ॥
ಅಥ ದೇವಾಃ ಪರಿಜ್ಞಾಯ ತಂ ಪದಾ ಪಂಗುತಾಂ ಗತಂ ।
ಆಗತ್ಯ ಮೇರುಪೃಷ್ಠಂ ಚ ನಿಜಘ್ನುಸ್ತತ್ಪರಿಗ್ರಹಂ ॥ ೨೭ ॥

---

ನೀನು ನನ್ನ ಶತ್ರುವಾದ ಜನಾರ್ದನನನ್ನು ಕಳ್ಳತನದಿಂದ ಪೂಜಿಸುತ್ತಿರುವುದರಿಂದ ನಿನ್ನನ್ನು ಕೊಲ್ಲುವೆನು ಎಂದು ಹೇಳಿ ಖಡ್ಗದಿಂದ ಹೊಡೆದನು.

೨೨. ಬಳಿಕ ಆ ಮುನಿಯ ಶರೀರದಲ್ಲಿ ಪ್ರಯೋಗಿಸಿದ ಆ ವೃಕನ ಕತ್ತಿಯು ತೀಕ್ಷ್ಣವಾಗಿದ್ದರೂ ನೂರು ಚೂರಾಯಿತು.

೨೩. ಅದರಿಂದ ಕ್ರುದ್ಧನಾದ ಸಾಂಕೃತಿಯು ಆ ದಾನವನನ್ನು ಹೀಗೆ ಶಪಿಸಿದನು.

೨೪. "ಎಲೈ ಪಾಪಿಯೆ! ನೀನು ನನ್ನನ್ನು ಕಾಲುಗಳಿಂದ ಒದೆದುದರಿಂದ ನಿನ್ನ ಕಾಲುಗಳು ಕೂಡಲೆ ಭೂಮಿಯಲ್ಲಿ ಬೀಳಲಿ."

೨೫. ಸೂತನು ಹೇಳುತ್ತಾನೆ:—ಸಾಂಕೃತಿಯು ಹೀಗೆ ಹೇಳಿದ ಕೂಡಲೆ ಆ ವೃಕನ ಕಾಲುಗಳು ಐದು ತಲೆಗಳುಳ್ಳ ಹಾವುಗಳಂತೆ ಭೂಮಿಯಲ್ಲಿ ಬಿದ್ದುವು.

೨೬. ಈ ಸಮಯದಲ್ಲಿ ವೃಕನ ಸೈನಿಕರು ಮತ್ತು ಸ್ತ್ರೀಯರು ಬಹಳವಾಗಿ ಕೂಗಿಕೊಂಡರು.

೨೭. ತರುವಾಯ ದೇವತೆಗಳು ವೃಕನು ಕುಂಟನಾಗಿರುವುದನ್ನು ತಿಳಿದು ಮೇರುಪರ್ವತದ ತಪ್ಪಲಿಗೆ ಬಂದು. ಅವನ ಪರಿವಾರದವರನ್ನು ಕೊಂದರು.

ಬ್ರಹ್ಮೋವಾಚ:—
ಪ್ರಾವೃಟ್‌ಕಾಲೇ ತು ಸಂಜಾತೇ ಯಾನಂ ಕರ್ತುಂ ನ ಯುಜ್ಯತೇ ।
ವಿಜಿಗೀಷೋರ್ವಿಶೇಷೇಣ ಮುಕ್ತ್ವಾ ಶೀತಾತಪಾಗಮಂ ॥ ೪೩ ॥
ತಸ್ಮಾಚ್ಚ ಚತುರೋ ಮಾಸಾನ್ ವಾರ್ಷಿಕಾನ್ ಪಾದಸಂಯುತಃ ।
ಅಗಮ್ಯಃ ಸರ್ವಲೋಕಾನಾಂ ಕುರ್ಯಾತ್ಕರ್ಮಾಣಿ ಧೈರ್ಯತಃ ॥ ೪೪ ॥
ತದ್ಭೂಯಾತ್ಪಾದಸಂಯುಕ್ತಃ ಸ ವೃಕೋ ದಾನವೋತ್ತಮಃ ।
ಯೇನ ಕ್ಷೇಮಂ ಚ ದೇವಾನಾಂ ದ್ವಿಜಾನಾಂ ಜಾಯತೇ ದ್ವಿಜ ॥ ೪೫ ॥
ಏವಂ ಕೃತಂ ನ ಮಿಥ್ಯಾ ತೇ ವಾಕ್ಯಂ ವಿಪ್ರ ಭವಿಷ್ಯತಿ ।
ಫಲಂ ಚ ತಪಸಸ್ತಸ್ಯ ನ ವೃಥಾ ಸಂಭವಿಷ್ಯತಿ ॥ ೪೬ ॥
ಸೂತ ಉವಾಚ:—
ಬಾಢಮಿತ್ಯೇವ ತೇನೋಕ್ತೇ ಸಾಂಕೃತೇನ ಮಹಾತ್ಮನಾ ।
ಉತ್ಥಿತೌ ಸಹಸಾ ಪಾದೌ ಗಾತ್ರಾತ್ಪ್ರಸರ್ಣವೌ ॥ ೪೭ ॥
ಪುನಶ್ಚ ದಾನವೋ ರೌದ್ರಃ ಪಂಗುತ್ವಂ ಸಮುಪದ್ಯತ ।
ತಸ್ಯಾಮೇವ ತು ಗರ್ತಾಯಾಂ ಸಂತಿಷ್ಠತಿ ದ್ವಿಜೋತ್ತಮಾಃ ॥ ೪೮ ॥
ಮಾಸಾನಷ್ಟೌ ಸ ದುಃಖೇನ ಸಕಲತ್ರಃ ಸ ಬಾಂಧವಃ ।
ಸ್ಮರಮಾಣೋ ಮಹದ್ವೈರಂ ದೇವೈಃ ಸಾರ್ಧಂ ದಿವಾನಿಶಂ ॥ ೪೯ ॥

---

೪೩. ಬ್ರಹ್ಮನು ಹೇಳುತ್ತಾನೆ:—ವಿಜಿಗೀಷುವು ಚಳಿ ಮತ್ತು ಉಷ್ಣಕಾಲಗಳನ್ನು ಬಿಟ್ಟು ಮಳೆಗಾಲದಲ್ಲಿ ಪ್ರಯಾಣಮಾಡುವುದು ಉಚಿತವಲ್ಲ.

೪೪. ಆದುದರಿಂದ ಇವನು ಮಳೆಗಾಲದ ನಾಲ್ಕು ತಿಂಗಳು ಪಾದಗಳುಳ್ಳವನೂ, ಸಮಸ್ತ ಜನರಿಗೆ ಅಗಮ್ಯನೂ ಆಗಿ ಕಾರ್ಯಗಳನ್ನು ಧೈರ್ಯದಿಂದೆಸಗಲಿ.

೪೫. ಆದುದರಿಂದ ಈ ವೃಕನು ಪಾದಗಳುಳ್ಳವನಾಗಲಿ. ಅದರಿಂದ ದೇವದ್ವಿಜರಿಗೆ ಕ್ಷೇಮವುಂಟಾಗುವುದು.

೪೬. ದ್ವಿಜವರ್ಯನೆ! ಹೀಗೆ ಮಾಡಿದರೆ ನಿನ್ನ ಮಾತೂ ಸುಳ್ಳಾಗುವುದಿಲ್ಲ. ಅವನ ತಪಸ್ಸೂ ವ್ಯರ್ಥವಾಗುವುದಿಲ್ಲ.

೪೭. ಸೂತನು ಹೇಳುತ್ತಾನೆ:—ಮಹಾತ್ಮನಾದ ಸಾಂಕೃತಿಯು ಹಾಗೆಯೇ ಆಗಲೆನ್ನಲು ಕೂಡಲೆ ಅವನ ಶರೀರದಿಂದ ಹೊಸ ಪಾದಗಳು ಉಂಟಾದುವು.

೪೮–೪೯. ಮಳೆಗಾಲವು ಕಳೆದ ಕೂಡಲೆ ಆ ದಾರುಣ ದಾನವನು ಮತ್ತೆ ಕುಂಟನಾದನು. ಅವನು ಎಂಟು ತಿಂಗಳಕಾಲ ಪತ್ನೀ ಬಂಧುಗಳೊಡನೆ ಹಗಲು ರಾತ್ರಿ ದೇವತೆಗಳೊಡನೆ ತನಗಿರುವ ಮಹಾ ವೈರವನ್ನು ಸ್ಮರಿಸುತ್ತ ಆ ಕುಣಿಯಲ್ಲಿಯೇ ಇರುವನು.

ಅನ್ಯಾಂಶ್ಚ ಚತುರೋ ಮಾಸಾನ್ನಿಷ್ಕ್ರಮ್ಯ ಸ ರುಷಾನ್ವಿತಃ ।
ಸದಾ ಪೀಡಯತೇ ದೇವಾನ್ ಸಹೇಂದ್ರಾನ್ ಮಾನುಷಾನಪಿ ॥ ೫೦ ॥
ವಿಧ್ವಂಸಯತಿ ಸರ್ವಾಣಿ ಧರ್ಮಸ್ಥಾನಾನಿ ಯಾನಿ ಚ ॥ ೫೧ ॥
ವಿಧ್ವಂಸಯತಿ ದೇವಾನಾಂ ಸ್ತ್ರಿಯೋ ಮಾಸ ಚತುಷ್ಟಯಂ ।
ಉದ್ಯಾನಾನಿ ಚ ಸರ್ವಾಣಿ ಸಪುರಾಣಿ ಗೃಹಾಣಿ ಚ ॥ ೫೨ ॥
ತತೋ ದೇವಾಃ ಸಮಭ್ಯೇತ್ಯ ದೇವದೇವಂ ಜನಾರ್ದನಂ ।
ಕ್ಷೀರಾಬ್ಧೌ ಸಂಸ್ಥಿತಂ ನಿತ್ಯಂ ಶೇಷಪರ್ಯಂಕಶಾಯಿನಂ ॥ ೫೩ ॥
ಚತುರೋ ವಾರ್ಷಿಕಾನ್‌ಮಾಸಾಂಸ್ತತ್ರ ಸ್ಥಿತ್ವಾ ತದಂತಿಕೇ ।
ಮಾಸಾನಷ್ಟೌ ಪುನರ್ಜಗ್ಮುಸ್ತ್ರಿದಿವಂ ಪ್ರತಿ ನಿರ್ಭಯಾಃ ॥ ೫೪ ॥
ತಸ್ಮಿನ್ ಪಂಗುತ್ವಮಾಪನ್ನೇ ದೈತ್ಯೇ ಪರಮದಾರುಣೇ ।
ಕಸ್ಯಚಿತ್ತ್ವಥಕಾಲಸ್ಯ ದೇವರಾಜೋ ಬೃಹಸ್ಪತಿಂ ।
ಪ್ರೋವಾಚ ದುಃಖಸಂತಪ್ತ ಆಷಾಢಾಂತೇ ಸುರೋತ್ತಮಃ ॥ ೫೫ ॥
ಗುರೋ ಸ ಮಾಸಃ ಸಂಪ್ರಾಪ್ತಃ ಪ್ರಾವೃಟ್ಕಾಲೋ ಭಯಾವಹಃ ।
ಆಗಮಿಷ್ಯತಿ ಯತ್ರಾಸೌ ಲಬ್ಧಪಾದೋ ವೃಕಾಸುರಃ ॥ ೫೬ ॥
ಗಂತವ್ಯಂ ಚ ತತೋಽಸ್ಮಾಭಿಃ ಕ್ಷೀರೋದೇ ಕೇಶವಾಲಯೇ ।
ನೈವಂ ದೀನೈಸ್ತಥಾ ಭಾವ್ಯಂ ಪರಾಶ್ರಯನಿವಾಸಿಭಿಃ ॥ ೫೭ ॥

---

೫೦. ಅವನು ಉಳಿದ ನಾಲ್ಕು ತಿಂಗಳುಕಾಲ ಅಲ್ಲಿಂದ ಹೊರಟು ಕೋಪದಿಂದ ಯಾವಾಗಲೂ ಇಂದ್ರಾದಿದೇವತೆಗಳನ್ನೂ, ಮನುಷ್ಯರನ್ನೂ ಪೀಡಿಸುತ್ತಿದ್ದನು.

೫೧. ಧರ್ಮಸ್ಥಳಗಳನ್ನೆಲ್ಲ ಧ್ವಂಸಮಾಡುತ್ತಿದ್ದನು.

೫೨. ದೇವಸ್ತ್ರೀಯರನ್ನೂ, ಸಕಲೋದ್ಯಾನಗಳನ್ನೂ, ಪಟ್ಟಣ, ಮನೆಗಳನ್ನೂ ನಾಶಗೊಳಿಸುತ್ತಿದ್ದನು.

೫೩–೫೫. ಬಳಿಕ ದೇವತೆಗಳು ಮಳೆಗಾಲದ ನಾಲ್ಕು ತಿಂಗಳು ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿರುವ ಶ್ರೀ ನಾರಾಯಣನೆಡೆಗೆ ಬಂದು ಅವನ ಹತ್ತಿರ ವಾಸಿಸಿ ಉಳಿದ ಎಂಟು ತಿಂಗಳು ಆ ಭಯಂಕರ ದಾನವನು ಕುಂಟನಾಗಲು ನಿರ್ಭಯರಾಗಿ ದೇವಲೋಕಕ್ಕೆ ಹೋಗುತ್ತಿದ್ದರು. ಒಂದಾನೊಂದು ಕಾಲದಲ್ಲಿ ಸುರೋತ್ತಮನಾದ ದೇವರಾಜನು ಆಷಾಢಮಾಸದ ಕೊನೆಯಲ್ಲಿ ದುಃಖದಿಂದ ಬೃಹಸ್ಪತಿಯನ್ನು ಕುರಿತು ಇಂತೆಂದನು.

೫೬. "ಬೃಹಸ್ಪತಿಯೆ! ಭಯಂಕರವಾದ ಆ ಮಳೆಗಾಲವು ಬಂದಿತು. ಈಗ ವೃಕಾಸುರನು ಕಾಲುಗಳನ್ನು ಪಡೆದು ಇಲ್ಲಿಗೆ ಬರುತ್ತಾನೆ.

೫೭–೫೮. ಆದುದರಿಂದ ನಾವು ಶ್ರೀಮನ್ನಾರಾಯಣನ ಆಲಯವಾದ ಕ್ಷೀರಸಮುದ್ರಕ್ಕೆ ಹೋಗಬೇಕು. ನಾವು ಹೀಗೆ ನಮ್ಮ ಮನೆ, ಶಯನ, ಆಸನ,

ಸ್ವಗೃಹಾಣಿ ಪರಿತ್ಯಜ್ಯ ಶಯನಾನ್ಯಾಸನಾನಿ ಚ ।
ವಾಹನಾನಿ ವಿಚಿತ್ರಾಣಿ ಯಚ್ಚಾಽನ್ಯದ್ದಯಿತಂ ಗೃಹೇ ॥ ೫೮ ॥
ತಸ್ಮಾತ್ಕಥಯ ಚಾಽಸ್ಮಾಕಮುಪಾಯಂ ಕಂಚಿದೇವ ಹಿ ।
ವ್ರತಂ ವಾ ನಿಯಮಂ ವಾಽಥ ಹೋಮಂ ವಾ ಮುನಿಸತ್ತಮ ॥ ೫೯ ॥
ಅಶೂನ್ಯಂ ಶಯನಂ ಯೇನ ಸ್ವಕಲತ್ರೇಣ ಜಾಯತೇ ।
ತಥಾ ನ ಗೃಹಸಂತ್ಯಾಗಃ ಸ್ವಕೀಯಸ್ಯ ಪ್ರಜಾಯತೇ ॥ ೬೦ ॥
ನಿರ್ವಿಣ್ಣೋಽಹಂ ನಿಜಸ್ಥಾನಭ್ರಂಶಾದ್ದ್ವಿಜವರೋತ್ತಮ ।
ವರ್ಷೇ ವರ್ಷೇ ಚ ಸಂಪ್ರಾಪ್ತೇ ಸ್ಥಾನಕಸ್ಯ ಚ್ಯುತಿರ್ಭವೇತ್ ॥ ೬೧ ॥
ಪುನರ್ಭೂಮೌ ಶಯಿಷ್ಯಾಮಿ ಯಾವನ್ಮಾಸಚತುಷ್ಟಯಂ ।
ನಿಷ್ಕಲತ್ರೋ ಭಯೋದ್ವಿಗ್ನೋ ಬ್ರಹ್ಮಚರ್ಯಪರಾಯಣಃ ॥ ೬೨ ॥
ತಸ್ಯ ತದ್ವಚನಂ ಶ್ರುತ್ವಾ ಭಯಾರ್ತಸ್ಯ ಬೃಹಸ್ಪತಿಃ ।
ಪ್ರೋವಾಚ ಸುಚಿರಂ ಧ್ಯಾತ್ವಾ ತತೋ ದೇವಂ ಶತಕ್ರತುಂ ॥ ೬೩ ॥
ಅಶೂನ್ಯಶಯನಂ ನಾಮ ವ್ರತಮಸ್ತಿ ಮಹತ್ತಪಃ ।
ವಿಷ್ಣೋರಾರಾಧನಾರ್ಥಾಯ ತತ್ಕುರುಷ್ವ ಸಮಾಹಿತಃ ॥ ೬೪ ॥
ದೇವೋ ಯತ್ರಾಽಸ್ತಿ ವಿಷ್ಣುಃ ಸ ಕ್ಷೀರಾಬ್ಧೌ ಮಧುಸೂದನಃ ।
ಜಲಶಾಯೀ ಜಗದ್ಯೋನಿಃ ಸ ದಾಸ್ಯತಿ ಹಿತಂ ಚ ತೇ ॥ ೬೫ ॥

---

ವಿಚಿತ್ರವಾದ ವಾಹನ, ಇತರ ಇಷ್ಟವಸ್ತುಗಳು ಇವುಗಳನ್ನು ತ್ಯಜಿಸಿ ದೈನ್ಯದಿಂದ ಪರಾಶ್ರಯದಲ್ಲಿ ವಾಸಮಾಡಕೂಡದು.

೫೯–೬೦. ಆದುದರಿಂದ ನಮ್ಮ ಶಯನವು ಪತ್ನೀರಹಿತವಾಗದಂತೆಯೂ, ನಮ್ಮ ಮನೆಗಳ ವಿಯೋಗವಾಗದಂತೆಯೂ ವ್ರತ, ನಿಯಮ, ಹೋಮಗಳಲ್ಲಿ ಯಾವುದಾದರೊಂದು ಉಪಾಯವನ್ನು ನಮಗೆ ಹೇಳು.

೬೧. ದ್ವಿಜವರ್ಯನೆ! ನಾನು ಸ್ಥಾನಭ್ರಂಶದಿಂದ ನಿರ್ವಿಣ್ಣನಾಗಿದ್ದೇನೆ. ಪ್ರತಿವರ್ಷವೂ ನನಗೆ ಸ್ಥಾನಭ್ರಂಶವಾಗುತ್ತಿರುವುದು.

೬೨. ಮರಳಿ ನಾಲ್ಕು ತಿಂಗಳು ಪತ್ನಿಯಿಲ್ಲದವನೂ, ಭಯಗೊಂಡವನೂ, ಬ್ರಹ್ಮಚಾರಿಯೂ ಆಗಿ ಭೂಮಿಯಲ್ಲಿ ಮಲಗುವೆನು.''

೬೩. ಬೃಹಸ್ಪತಿಯು ಭಯಪೀಡಿತನಾದ ಇಂದ್ರನ ಆ ಮಾತನ್ನು ಕೇಳಿ ಬಹಳ ಹೊತ್ತು ಚಿಂತಿಸಿ ಅವನನ್ನು ಕುರಿತು ಹೀಗೆಂದನು.

೬೪–೬೬. ''ಅಯ್ಯಾ ಇಂದ್ರನೆ! ವಿಷ್ಣುವಿನ ಆರಾಧನೆಗಾಗಿ ಅಶೂನ್ಯಶಯನ ವೆಂಬ ಮಹಾ ತಪೋರೂಪವಾದ ಒಂದು ವ್ರತವಿದೆ. ವಿಷ್ಣುವು ವಾಸವಾಗಿರುವ ಕ್ಷೀರಸಮುದ್ರದಲ್ಲಿ ಸಾವಧಾನಮನಸ್ಸಿನಿಂದ ಅದನ್ನಾಚರಿಸು. ಜಲಶಾಯಿಯೂ, ಜಗತ್ಕಾರಣನೂ ಆದ ಆ ವಿಷ್ಣುವು ನಿನಗೆ ಶಯನವು ಶೂನ್ಯವಾಗದಂತೆಯೂ,

ಯಥಾ ನ ಶೂನ್ಯಂ ಶಯನಂ ಗೃಹಭಂಗಃ ಪ್ರಜಾಯತೇ ।
ಸರ್ವಶತ್ರುವಿನಾಶಶ್ಚ ತತ್ಪ್ರಸಾದೇನ ವಾಸವ ॥ ೬೬ ॥
ಸೂತ ಉವಾಚ :—
ತಸ್ಮಿನ್ ವ್ರತೇ ತತಶ್ಚೀರ್ಣೇಽಹ್ಯಶೂನ್ಯಶಯನಾತ್ಮಕೇ ।
ತುತೋಷ ಭಗವಾನ್ ವಿಷ್ಣುಸ್ತತಃ ಪ್ರೋವಾಚ ದೇವಪಂ ॥ ೬೭ ॥
ಶಕ್ರ ತುಷ್ಟೋಽಸ್ಮಿ ಭದ್ರಂ ತೇ ವರಂ ವರಯ ಸುವ್ರತ ।
ವ್ರತೇನಾಽನೇನ ಚೀರ್ಣೇನ ಚಾತುರ್ಮಾಸ್ಯೋದ್ಭವೇನ ಚ ।
ತಸ್ಮಾತ್ಪ್ರಾರ್ಥಯ ದೇವೇಂದ್ರ ನಿತ್ಯಂ ಯನ್ಮನಸಿ ಸ್ಥಿತಂ ॥ ೬೮ ॥
ಇಂದ್ರ ಉವಾಚ :—
ಕೃಷ್ಣ ಜಾನಾಸಿ ತ್ವಂ ಚಾಽಪಿ ಯಶ್ಚ ಮೇಽತ್ರ ಪರಾಭವಃ ।
ಕ್ರಿಯತೇ ದಾನವೇಂದ್ರೇಣ ವೃಕೇಣ ಸುದುರಾತ್ಮನಾ ॥ ೬೯ ॥
ಮಮಾಷ್ಟಮಾಸಿಕಂ ರಾಜ್ಯಂ ತ್ರೈಲೋಕ್ಯೇಽಪಿ ವ್ಯವಸ್ಥಿತಂ ।
ಶೇಷಾಂಶ್ಚ ಚತುರೋ ಮಾಸಾನ್ ವರ್ಷೇ ವರ್ಷೇ ಸಮೇತಿ ಸಃ ॥ ೭೦ ॥
ಏವಂ ಜ್ಞಾತ್ವಾ ಸುರಶ್ರೇಷ್ಠ ದಯಾಂ ಕೃತ್ವಾ ಮಮೋಪರಿ ।
ತಥಾ ಕುರು ಯಥಾ ರಾಜ್ಯಂ ಮಮ ಸ್ಯಾತ್ಸಾರ್ವಕಾಲಿಕಂ ॥ ೭೧ ॥

---

ಗೃಹನಾಶವಾಗದಂತೆಯೂ, ಸಕಲ ಶತ್ರುನಾಶವಾಗುವಂತೆಯೂ ಅನುಗ್ರಹಿಸಿ ಹಿತವನ್ನುಂಟುಮಾಡುವನು.

೬೭. ಸೂತನು ಹೇಳುತ್ತಾನೆ:—ತರುವಾಯ ಇಂದ್ರನು ಆ ಅಶೂನ್ಯಶಯನ ವೆಂಬ ವ್ರತವನ್ನಾಚರಿಸಲು ಪೂಜ್ಯನಾದ ವಿಷ್ಣುವು ಸಂತುಷ್ಟನಾಗಿ ಅವನನ್ನು ಕುರಿತು ಇಂತೆಂದನು.

೬೮. "ಇಂದ್ರ! ನೀನು ಈ ಚಾತುರ್ಮಾಸ್ಯ ವ್ರತವನ್ನಾಚರಿಸಿದ್ದರಿಂದ ನಾನು ಸಂತುಷ್ಟನಾಗಿದ್ದೇನೆ. ಆದುದರಿಂದ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ."

೬೯. ಇಂದ್ರನು ಹೇಳುತ್ತಾನೆ:—ಕೃಷ್ಣ! ದುರಾತ್ಮನಾದ ವೃಕಾಸುರನು ನನಗೆ ಎಂತಹ ಪರಾಭವವನ್ನುಂಟುಮಾಡುತ್ತಿರುವನೆಂಬುದನ್ನು ನೀನೇ ತಿಳಿದಿರುವೆ.

೭೦. ನಾನು ಎಂಟು ತಿಂಗಳಕಾಲ ತ್ರೈಲೋಕ್ಯರಾಜ್ಯವನ್ನಾಳುವೆನು. ಉಳಿದ ನಾಲ್ಕು ತಿಂಗಳಕಾಲ ಆ ವೃಕನು ಪ್ರತಿವರ್ಷವೂ ನನ್ನ ಪದವಿಗೆ ಬರುವನು.

೭೧. ಸುರೋತ್ತಮನಾದ ನಾರಾಯಣ! ನೀನು ಇದನ್ನರಿತು ನನ್ನಲ್ಲಿ ದಯೆಯಿಟ್ಟು ನಾನು ಯಾವಾಗಲೂ ರಾಜ್ಯವನ್ನಾಳುವಂತೆ ಏರ್ಪಡಿಸು.

ವಿಷ್ಣುರುವಾಚ :—
ಅಜರಶ್ಚಾಽಮರಶ್ಚಾಽಪಿ ಸ ಕೃತಃ ಪದ್ಮಯೋನಿನಾ ।
ತತ್ಕಥಂ ಜೀವಮಾನೇನ ತೇನ ರಾಜ್ಯಂ ಭವೇತ್ತವ ॥ ೭೨ ॥
ಪರಂ ತಥಾಽಪಿ ದೇವೇಂದ್ರ ಕರಿಷ್ಯಾಮಿ ಹಿತಂ ತವ ॥ ೭೩ ॥
ಕ್ಷೀರಾರ್ಣವಂ ಪರಿತ್ಯಜ್ಯ ಹಾಟಕೇಶ್ವರ ಸಂಜ್ಞಿತೇ ।
ಕ್ಷೇತ್ರೇ ಗತ್ವಾ ಸಮಂ ಲಕ್ಷ್ಮ್ಯಾ ತಸ್ಯೋಪರಿ ತತಃಪರಂ ॥ ೭೪ ॥
ಕರಿಷ್ಯಾಮಿ ತ್ವಹಂ ಶಕ್ರ ಶಯನಂ ಯತ್ನಮಾಸ್ಥಿತಃ ।
ಯಾವಚ್ಚ ಚತುರೋ ಮಾಸಾನ್ ಯಥಾ ಸ ನ ಚಲಿಷ್ಯತಿ ॥ ೭೫ ॥
ತಸ್ಮಾತ್ಸ್ಥಾನಾತ್ಸಹಸ್ರಾಕ್ಷ ಮದ್ಭಾರೇಣ ಪ್ರಪೀಡಿತಃ ।
ವರ್ಷೇ ವರ್ಷೇ ಸದಾಕಾರ್ಯಂ ಮಯಾ ತತ್ಸುಹಿತಂ ತವ ॥ ೭೬ ॥
ತಸ್ಮಾದ್ಗಚ್ಛಾಽಧುನಾ ಸ್ವರ್ಗೇ ಕುರು ರಾಜ್ಯಮಕಂಟಕಂ ।
ಪ್ರಾವೃಟ್ಕಾಲೇ ತು ಸಂಪ್ರಾಪ್ತೇ ನ ಭೀಃ ಕಾರ್ಯಾ ತದುದ್ಭವಾ ॥ ೭೭ ॥
ಯೋ ಮಾಂ ತತ್ರ ಶಯಾನಂತು ವ್ರತೇನಾಽನೇನ ದೇವಪ ।
ಪೂಜಯಿಷ್ಯತಿ ಸದ್ಭಕ್ತ್ಯಾ ತಸ್ಯ ದಾಸ್ಯಾಮಿ ವಾಂಛಿತಂ ॥ ೭೮ ॥
ಸೂತ ಉವಾಚ :—
ಏವಮುಕ್ತ್ವಾ ಹೃಷೀಕೇಶೋ ವಿಸಸರ್ಜ ಶತಕ್ರತುಂ ।
ನಿಃಶೇಷಭಯನಿರ್ಮುಕ್ತಂ ಸ್ವರಾಜ್ಯ ಪರಿವೃದ್ಧಯೇ ॥ ೭೯ ॥

---

೭೨. ವಿಷ್ಣುವು ಹೇಳುತ್ತಾನೆ:—ಬ್ರಹ್ಮನು ಆ ವೃಕಾಸುರನನ್ನು ಜರಾಮರಣವಿಲ್ಲದವನನ್ನಾಗಿ ಮಾಡಿದ್ದಾನೆ. ಆದುದರಿಂದ ಅವನು ಬದುಕಿರುವಾಗ ನಿನಗೆ ರಾಜ್ಯವು ಹೇಗೆ ಸಿಕ್ಕುವುದು?

೭೩. ದೇವೇಂದ್ರ! ಆದರೂ ನಾನು ನಿನಗೆ ಹಿತವನ್ನುಂಟುಮಾಡುವೆನು.

೭೪–೭೬. ನಾನು ಕ್ಷೀರಸಮುದ್ರವನ್ನು ತ್ಯಜಿಸಿ ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಲಕ್ಷ್ಮಿಯೊಡನೆ ಆ ವೃಕನ ಮೇಲೆ ಪ್ರಯತ್ನದಿಂದ ನನ್ನ ಭಾರದಿಂದ ಪೀಡಿತನಾಗಿ ಅವನು ಆ ಸ್ಥಳದಿಂದ ಚಲಿಸದಂತೆ ನಾಲ್ಕು ತಿಂಗಳಕಾಲ ಮಲಗುವೆನು. ಹೀಗೆ ಪ್ರತಿವರ್ಷವೂ ನಾನು ನಿನಗೆ ಹಿತವನ್ನುಂಟುಮಾಡುತ್ತೇನೆ.

೭೭. ಆದುದರಿಂದ ಈಗ ನೀನು ಸ್ವರ್ಗದಲ್ಲಿ ನಿಷ್ಕಂಟಕವಾಗಿ ರಾಜ್ಯವನ್ನಾಳು. ಮಳೆಗಾಲದಲ್ಲಿ ನೀನು ಅವನಿಗೆ ಹೆದರಬೇಕಾಗಿಲ್ಲ.

೭೮. ಈ ವ್ರತವನ್ನಾಚರಿಸಿ ಭಕ್ತಿಯಿಂದ ಅಲ್ಲಿ ಮಲಗಿರುವ ನನ್ನನ್ನು ಪೂಜಿಸುವವನಿಗೆ ನಾನು ಇಷ್ಟಾರ್ಥವನ್ನು ನೀಡುವೆನು.

೭೯. ಸೂತನು ಹೇಳುತ್ತಾನೆ:—ವಿಷ್ಣುವು ಹೀಗೆ ನುಡಿದು ಸಂಪೂರ್ಣ ಭಯರಹಿತನಾದ ಇಂದ್ರನನ್ನು ದೇವರಾಜ್ಯಾಭಿವೃದ್ಧಿಗಾಗಿ ಕಳುಹಿಸಿದನು.

ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾ ದಿನೇ ಸದಾ ।
ಹಾಟಕೇಶ್ವರಜೇ ಕ್ಷೇತ್ರೇ ತತ್ರಾಗತ್ಯ ಸ್ವಯಂ ವಿಭುಃ ॥ ೮೦ ॥
ವೃಕೋಪರಿ ತತಶ್ಚಕ್ರೇ ಶಯನಂ ಯತ್ನಮಾಸ್ಥಿತಃ ।
ತೇನಾಽಽಕ್ರಾಂತಸ್ತತಃ ಸೋಽಪಿ ಶಕ್ನೋತಿ ಚಲಿತುಂ ನ ಹಿ ॥ ೮೧ ॥
ಮೃತಪ್ರಾಯಸ್ತತೋ ನಿತ್ಯಂ ತದ್ಭಾರೇಣ ಪ್ರಪೀಡಿತಃ ।
ಕಾರ್ತಿಕಸ್ಯ ಸಿತೇ ಪಕ್ಷೇ ಏಕಾದಶ್ಯಾ ದಿನೇ ಸ್ಥಿತೇ ॥ ೮೨ ॥
ಉತ್ಥಾನಂ ಕುರುತೇ ವಿಷ್ಣುಃ ಕ್ಷೀರೋದಂ ಪ್ರತಿಗಚ್ಛತಿ ।
ಸೋಽಪಿ ಸಾಂಕೃತಿಶಾಪೇನ ವೃಕಃ ಪಂಗುತ್ವಮಾಪ್ನುಯಾತ್ ॥ ೮೩ ॥
ಏವಂ ಚ ಚತುರೋ ಮಾಸಾನ್ನಿತ್ಯಜೇಚ್ಛಯನಂ ಹರಿಃ ।
ಭಯಾತ್ತಸ್ಯಾಽಸುರೇಂದ್ರಸ್ಯ ದಾನವಸ್ಯ ದುರಾತ್ಮನಃ ॥ ೮೪ ॥
ತತ್ರ ಮರ್ತ್ಯೈರ್ನ ಕ್ರಿಯಾಃ ಸರ್ವಾಃ ಕ್ರಿಯಂತೇ ನ ಮಖೋದ್ಭವಾಃ ।
ಯಸ್ಮಾತ್ಸ ಯಜ್ಞಪುರುಷೋ ನ ಸುಪ್ತೋ ಭಾಗಮಶ್ನುತೇ ॥ ೮೫ ॥
ತಥಾ ಯಜ್ಞಾಶ್ಚ ಯೇ ಸರ್ವೇ ಕನ್ಯಾದಾನಾದಿಕಾಃ ಶುಭಾಃ ।
ತೇ ಸರ್ವೇ ನ ಕ್ರಿಯಂತೇ ಚ ಚೂಡಾಕರಣಪೂರ್ವಕಾಃ ॥ ೮೬ ॥
ಮುಕ್ತ್ವಾಽನ್ನಪ್ರಾಶನಂ ನಾಮ ಸೀಮಂತೋನ್ನಯನಂ ತಥಾ ।
ತಸ್ಮಾತ್ಸುಪ್ತೇ ಜಗನ್ನಾಥೇ ತಾಃ ಸರ್ವಾಃ ಸ್ಯುರ್ವೃಥಾ ದ್ವಿಜಾಃ ॥ ೮೭ ॥

---

೮೦–೮೩. ಆ ವಿಷ್ಣುವು ತನ್ನ ಮಾತಿನಂತೆ ಆಷಾಢ ಶುಕ್ಲಪಕ್ಷದ ಏಕಾದಶೀ ದಿನ ಹಾಟಕೇಶ್ವರಜಕ್ಷೇತ್ರಕ್ಕೆ ಬಂದು ಆ ವೃಕನ ಮೇಲೆ ಮಲಗುತ್ತಿದ್ದನು. ಹೀಗೆ ವಿಷ್ಣುವಿನಿಂದ ಆಕ್ರಾಂತನಾದ ಆ ವೃಕನು ಅವನ ಭಾರದಿಂದ ಪೀಡಿತನಾಗಿ ಸತ್ತವನಂತೆ ಚಲಿಸಲು ಸಮರ್ಥನಾಗುತ್ತಿರಲಿಲ್ಲ. ವಿಷ್ಣುವು ಕಾರ್ತಿಕ ಶುಕ್ಲ ಪಕ್ಷದ ಏಕಾದಶೀ ದಿನ ಎದ್ದು ಕ್ಷೀರಸಮುದ್ರಕ್ಕೆ ಹೋಗುತ್ತಿದ್ದನು. ಅನಂತರ ಆ ವೃಕನೂ ಸಾಂಕೃತಿಶಾಪದಿಂದ ಕುಂಟನಾಗುತ್ತಿದ್ದನು.

೮೪. ಹೀಗೆ ಆ ವಿಷ್ಣುವು ನಾಲ್ಕು ತಿಂಗಳಕಾಲ ದುರಾತ್ಮನಾದ ಆ ವೃಕಾಸುರನ ಭಯದಿಂದ ಮಲಗುತ್ತಿರುವನು.

೮೫. ಯಜ್ಞಪುರುಷನಾದ ವಿಷ್ಣುವು ಮಲಗಿ ಯಜ್ಞಭಾಗವನ್ನು ಸ್ವೀಕರಿಸದಿರುವುದರಿಂದ ಮಾನವರು ಯಜ್ಞಸಂಬಂಧವಾದ ಯಾವ ಕಾರ್ಯಗಳನ್ನೂ ಮಾಡುವುದಿಲ್ಲ.

೮೬–೮೭. ಅನ್ನಪ್ರಾಶನ ಸೀಮಂತೋನ್ನಯನಗಳನ್ನು ಬಿಟ್ಟು ಕನ್ಯಾದಾನ ಚೂಡಾಕರ್ಮ ಮೊದಲಾದ ಶುಭಕಾರ್ಯಗಳನ್ನೂ ಹಾಗೆಯೇ ಮಾಡುವುದಿಲ್ಲ. ಜಗನ್ನಾಥನು ಮಲಗಿರಲು ಆ ಶುಭಕಾರ್ಯಗಳನ್ನು ಮಾಡಿದರೆ ಅವು ನಿಷ್ಫಲವಾಗುವುವು.

ವ್ರತಂ ವಾ ನಿಯಮಂ ವಾಽಥ ತಸ್ಮಿನ್ ಯಃ ಕುರುತೇ ನರಃ ।
ಪ್ರಸುಪ್ತೇ ದೇವದೇವೇಶೇ ತತ್ಸರ್ವಂ ನಿಷ್ಫಲಂ ಭವೇತ್ ॥ ೮೮ ॥
ತಸ್ಮಾತ್ಸರ್ವಪ್ರಯತ್ನೇನ ಸಂಪ್ರಸುಪ್ತೇ ಜನಾರ್ದನೇ ।
ವ್ರತಸ್ಥೈರ್ಮಾನವೈರ್ಭಾವ್ಯಂ ತಸ್ಯ ದೇವಸ್ಯ ತುಷ್ಟಯೇ ॥ ೮೯ ॥
ಏಕಾದಶ್ಯಾಂ ದಿನೇ ಪ್ರಾಪ್ತೇ ಶಯನೇ ಬೋಧನೇ ಹರೇಃ ।
ಯತ್ಕಿಂಚತ್ಕ್ರಿಯತೇ ಕರ್ಮ ಶ್ರೇಷ್ಠಂ ತಚ್ಚಾಽಕ್ಷಯಂ ಭವೇತ್ ॥ ೯೦ ॥
ಕಿಂ ವಾಽತ್ರ ಬಹುನೋಕ್ತೇನ ಕ್ರಿಯತೇ ಯದ್ವ್ರತಂ ನರೈಃ ।
ತೇನ ತುಷ್ಟಿಂ ಪರಾಂ ಯಾತಿ ದೈತ್ಯೋಪರಿ ಸ್ಥಿತೋ ಹರಿಃ ॥ ೯೧ ॥
ಏವಂ ಸ ಭಗವಾನ್ ಪ್ರಾಹ ಸುಪ್ತಸ್ತತ್ರ ಜನಾರ್ದನಃ ।
ಕಿಂ ವಾ ತಸ್ಯ ಜ್ವರೋ ಜಾತೋ ಮಹತೀ ವೇದನಾಽಪಿ ಚ ॥ ೯೨ ॥
ತಸ್ಮಿನ್ನಹನಿ ಪಾಪಾತ್ಮಾ ಯೋಽನ್ನಮಶ್ನಾತಿ ಮಾನವಃ ।
ತಸ್ಮಾತ್ಸರ್ವಪ್ರಯತ್ನೇನ ಸಂಪ್ರಾಪ್ತೇ ಹರಿವಾಸರೇ ॥ ೯೩ ॥
ಅನ್ಯಸ್ಮಿನ್ನಪಿ ಭೋಕ್ತವ್ಯಂ ನ ನರೇಣ ವಿಜಾನತಾ ।
ಕಿಂ ಪುನಃ ಶಯನಂ ಯತ್ರ ಕುರುತೇ ಯತ್ರ ಬೋಧನಂ ॥ ೯೪ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಹಾಟಕೇಶ್ವರಜೇ ಕ್ಷೇತ್ರೇ ಯಸ್ಮಾಚ್ಛೇತೇ ಜನಾರ್ದನಃ ॥ ೯೫ ॥

---

೮೮. ವಿಷ್ಣುವು ಮಲಗಿರಲು ಮಾನವನು ವ್ರತನಿಯಮಗಳನ್ನು ಮಾಡಿದರೆ ಅವು ನಿಷ್ಫಲವಾಗುವುವು.

೮೯. ಆದುದರಿಂದ ವಿಷ್ಣುವು ಮಲಗಿದಾಗ ಅವನ ಸಂತೋಷಕ್ಕಾಗಿ ಮಾನವರು ಚಾತುರ್ಮಾಸ್ಯ ವ್ರತಸ್ಥರಾಗಬೇಕು.

೯೦. ವಿಷ್ಣುವಿನ ಶಯನ ಮತ್ತು ಉತ್ಥಾನಗಳ ಏಕಾದಶೀ ದಿನಗಳಲ್ಲಿ ಮಾಡಿದ ಕರ್ಮವು ಶ್ರೇಷ್ಠವೂ, ಅಕ್ಷಯವೂ ಆಗುವುದು.

೯೧. ಈ ವಿಷಯದಲ್ಲಿ ಬಹುವಾಗಿ ಹೇಳಿ ಪ್ರಯೋಜನವೇನು? ಮನುಷ್ಯನು ಆಗ ಯಾವ ವ್ರತವನ್ನಾಚರಿಸುವನೊ ಆದರಿಂದ ದೈತ್ಯನ ಮೇಲೆ ಮಲಗಿರುವ ವಿಷ್ಣುವು ಅತ್ಯಂತ ತೃಪ್ತಿಗೊಳ್ಳುವನು.

೯೨–೯೪. ಆ ದಿನದಲ್ಲಿ ಭೋಜನಮಾಡುವ ಪಾಪಿಗೆ ಜ್ವರವುಂಟಾಯಿತೆ? ಅಥವಾ ಅತ್ಯಂತ ವೇದನೆಯುಂಟಾಯಿತೆ? ಎಂದು ಅಲ್ಲಿ ಮಲಗಿರುವ ವಿಷ್ಣುವು ಕೇಳುವನು. ಆದುದರಿಂದ ಇತರ ಹರಿದಿನದಲ್ಲಿಯೂ ಪ್ರಾಜ್ಞನಾದ ಮಾನವನು ಭುಂಜಿಸಬಾರದು. ಶಯನೋತ್ಥಾನೈಕಾದಶಿಗಳಲ್ಲಿನ್ನೇನು.

೯೫–೯೬. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ನೀವು ಕೇಳಿದ ಜನಾರ್ದನನು ಕ್ಷೀರಸಮುದ್ರವನ್ನು ತ್ಯಜಿಸಿ ನಾಲ್ಕು ತಿಂಗಳಕಾಲ ಹಾಟಕೇಶ್ವರ

ಕ್ಷೀರಾಬ್ಧಿಂ ಸಂಪರಿತ್ಯಜ್ಯ ಸದಾ ಮಾಸಚತುಷ್ಟಯಂ ।
ಶ್ರೂಯತಾಂ ಚ ಫಲಂ ಯತ್ಸ್ಯಾತ್ತಸ್ಮಿನ್ನಾರಾಧಿತೇ ವಿಭೋ ॥ ೯೬ ॥
ಚತುರೋ ವಾರ್ಷಿಕಾನ್ ಮಾಸಾನ್ ಯಸ್ತಂ ಪೂಜಯತೇ ವಿಭುಂ ।
ವ್ರತಸ್ಥಃ ಸ ನರೋ ಯಾತಿ ಯತ್ರ ದೇವಃ ಸ ಸಂಸ್ಥಿತಃ ॥ ೯೭ ॥
ಕಿಂ ದಾನೈರ್ಬಹುಭಿರ್ದತ್ತೈಃ ಕಿಂ ವ್ರತೈಃ ಕಿಮುಪೋಷಿತೈಃ ।
ತತ್ರ ಯಃ ಪುಂಡರೀಕಾಕ್ಷಂ ಸುಪ್ತಂ ಪೂಜಯತಿ ಧ್ರುವಂ ॥ ೯೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಏಕಾದಶೀವ್ರತಮಾಹಾತ್ಮ್ಯವರ್ಣನಂ" ನಾಮ
ಏಕತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

ಕ್ಷೇತ್ರದಲ್ಲಿ ಏಕೆ ಮಲಗಿದ್ದಾನೆ ಎಂಬುದನ್ನು ಸಂಪೂರ್ಣವಾಗಿ ಹೇಳಿರುವೆನು. ಆ ವಿಷ್ಣುವನ್ನು ಆರಾಧಿಸಿದರೆ ಸಿಕ್ಕುವ ಫಲವನ್ನು ಕೇಳಿರಿ.

೯೭. ನಾಲ್ಕು ತಿಂಗಳು ವ್ರತವನ್ನು ಮಾಡುತ್ತ ಆ ವಿಷ್ಣುವನ್ನು ಪೂಜಿಸಿದವನು ಅವನಿರುವ ವೈಕುಂಠಲೋಕಕ್ಕೆ ಹೋಗುವನು.

೯೮. ಮಲಗಿರುವ ವಿಷ್ಣುವನ್ನು ಪೂಜಿಸಿದವನಿಗೆ ಬಹು ದಾನಗಳಿಂದಲೂ, ವ್ರತಗಳಿಂದಲೂ, ಉಪವಾಸಗಳಿಂದಲೂ ಏನು ಪ್ರಯೋಜನ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಏಕಾದಶೀವ್ರತಮಾಹಾತ್ಮ್ಯವರ್ಣನ"ವೆಂಬ
ಇನ್ನೂರ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ಚಾತುರ್ಮಾಸ್ಯವ್ರತನಿಯಮವರ್ಣನಂ

ಋಷಯ ಊಚುಃ:—

ಪ್ರಸುಪ್ತೇ ದೇವದೇವೇಶೇ ಶಂಖಚಕ್ರಗದಾಧರೇ ।
ಯಚ್ಚಾನ್ಯದಪಿ ಕರ್ತವ್ಯಂ ನಿಯಮೋ ವ್ರತಮೇವ ವಾ ।
ಹೋಮೋ ವಾಽಥ ಜಪೋ ವಾಽಥ ದಾನಂ ವಾ ತದ್ವದಸ್ವ ನಃ ॥ ೧ ॥

ಸೂತ ಉವಾಚ:—

ಯಃ ಕಶ್ಚಿನ್ನಿಯಮೋ ವಿಪ್ರಾಃ ಪ್ರಸುಪ್ತೇ ಗರುಡಧ್ವಜೇ ॥ ೨ ॥
ಅನಂತ ಫಲದಃ ಸಃ ಸ್ಯಾದಿತ್ಯುವಾಚ ಪಿತಾಮಹಃ ।
ತಸ್ಮಾತ್ಸರ್ವಪ್ರಯತ್ನೇನ ಕಶ್ಚಿದ್ಗ್ರಾಹ್ಯೋ ವಿಜಾನತಾ ॥ ೩ ॥
ನಿಯಮೋ ವಾ ಜಪೋ ಹೋಮಃ ಸ್ವಾಧ್ಯಾಯೋ ವ್ರತಮೇವ ವಾ ।
ಕರ್ತವ್ಯಂ ಬ್ರಾಹ್ಮಣಶ್ರೇಷ್ಠಾಸ್ತುಷ್ಟ್ಯರ್ಥಂ ಚಕ್ರಪಾಣಿನಃ ॥ ೪ ॥
ಚತುರೋ ವಾರ್ಷಿಕಾನ್ ಮಾಸಾನೇಕ ಭಕ್ತೇನ ಯೋ ನಯೇತ್ ।
ವಾಸುದೇವಂ ಸಮುದ್ದಿಶ್ಯ ಸ ಧನೀ ಜಾಯತೇ ನರಃ ॥ ೫ ॥

---

### ಕನ್ನಡದ ಅನುವಾದ

#### ಚಾತುರ್ಮಾಸ್ಯವ್ರತನಿಯಮವರ್ಣನ

೧. ಋಷಿಗಳು ಹೇಳುತ್ತಾರೆ:—ಶ್ರೀ ಮಹಾವಿಷ್ಣುವು ಮಲಗಿರಲು ಬೇರೆ ನಿಯಮ, ವ್ರತ, ಹೋಮ, ಜಪ, ದಾನ ಇವುಗಳಲ್ಲಿ ಯಾವುದನ್ನು ಮಾಡಬೇಕು. ಅದನ್ನು ನಮಗೆ ಹೇಳು.

೨–೪. ಸೂತನು ಹೇಳುತ್ತಾನೆ:—ವಿಷ್ಣುವು ಮಲಗಿರುವಾಗ ಮಾಡಿದ ಯಾವ ನಿಯಮವೇ ಆಗಲಿ, ಅತಿಶಯ ಫಲವನ್ನು ಕೊಡುವುದೆಂದು ಬ್ರಹ್ಮನು ಹೇಳಿರುತ್ತಾನೆ. ಆದುದರಿಂದ ಇದನ್ನರಿತವನು ನಿಯಮ, ಜಪ, ಹೋಮ, ಸ್ವಾಧ್ಯಾಯ, ವ್ರತ ಇವುಗಳಲ್ಲಿ ಯಾವುದಾದರೊಂದನ್ನು ವಿಷ್ಣುವಿನ ಸಂತೋಷಕ್ಕಾಗಿ ಮಾಡಬೇಕು.

೫. ಚಾತುರ್ಮಾಸ್ಯದಲ್ಲಿ ವಿಷ್ಣುವನ್ನುದ್ದೇಶಿಸಿ ದಿನಕ್ಕೆ ಒಂದೇ ಭೋಜನವನ್ನು ಮಾಡುವವನು ಧನಿಕನಾಗುವನು.

ನಕ್ಷತ್ರೈರ್ಭೋಜನಂ ಕುರ್ಯಾದ್ಯಃ ಪ್ರಸುಪ್ತೇ ಜನಾರ್ದನೇ ।
ಸ ಧನೀ ರೂಪಸಂಪನ್ನಃ ಸುಮತಿಶ್ಚ ಪ್ರಜಾಯತೇ ॥ ೬ ॥
ಏಕಾಂತರೋಪವಾಸೈಶ್ಚ ಯೋ ನಯೇದ್ದ್ವಿಜಸತ್ತಮಾಃ ।
ಚತುರೋ ವಾರ್ಷಿಕಾನ್ ಮಾಸಾನ್ ವೈಕುಂಠೇ ಸ ತದಾ ವಸೇತ್ ॥ ೭ ॥
ಷಷ್ಠಾನ್ನ ಕಾಲಭೋಜೀಸ್ಯಾದ್ಯಃ ಪ್ರಸುಪ್ತೇ ಜನಾರ್ದನೇ ।
ರಾಜಸೂಯಾಶ್ವಮೇಧಾಭ್ಯಾಂ ಸ ಕೃತ್ಸ್ನಂ ಫಲಮಾಪ್ನುಯಾತ್ ॥ ೮ ॥
ತ್ರಿರಾತ್ರೋಪೋಷಿತೋ ಯಸ್ತು ಚತುರ್ಮಾಸಾನ್ ಸದಾ ನಯೇತ್ ।
ನ ಸ ಭೂಯೋಽಪಿ ಜಾಯೇತ ಸಂಸಾರೇಽತ್ರ ಕಥಂಚನ ॥ ೯ ॥
ಸಾಯಂ ಪ್ರಾತಃ ಪರೋ ಭೂತ್ವಾ ಚತುರ್ಮಾಸಾನ್ ಸದಾ ನಯೇತ್ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಸ ಫಲಂ ಲಭತೇ ನರಃ ॥ ೧೦ ॥
ಅಯಾಚಿತಂ ಚರೇದ್ಯಸ್ತು ಪ್ರಸುಪ್ತೇ ಮಧುಸೂದನೇ ।
ಸ ವಿಚ್ಛೇದೋ ಭವೇತ್ತಸ್ಯ ಕದಾಚಿತ್ಸಹ ಬಂಧುಭಿಃ ॥ ೧೧ ॥
ತೈಲಾಭ್ಯಂಗಂ ಚ ಯೋ ಜಹ್ಯಾದ್ಘೃತಾಭ್ಯಂಗಂ ವಿಶೇಷತಃ ।
ಚತುರೋ ವಾರ್ಷಿಕಾನ್ ಮಾಸಾನ್ ಸ ಸ್ವರ್ಗೇ ಭೋಗಭಾಗ್ಭವೇತ್ ॥

---

೬. ವಿಷ್ಣುವು ಮಲಗಿರುವಾಗ ಒಂದೊಂದು ನಕ್ಷತ್ರದಲ್ಲಿ ಒಂದುಸಾರಿ ಭೋಜನಮಾಡುವವನು ಹಣಗಾರನೂ, ಸುಂದರನೂ, ಬುದ್ಧಿವಂತನೂ ಆಗುವನು.

೭. ಎರಡು ದಿವಸಗಳಿಗೊಮ್ಮೆ ಭೋಜನಮಾಡುತ್ತ ನಾಲ್ಕು ತಿಂಗಳುಗಳನ್ನು ಕಳೆಯುವವನು ಯಾವಾಗಲೂ ವೈಕುಂಠದಲ್ಲಿ ವಾಸಮಾಡುವನು.

೮. ಚಾತುರ್ಮಾಸ್ಯದಲ್ಲಿ ಷಷ್ಠಾನ್ನಕಾಲ ಭೋಜಿಯಾದವನು ರಾಜಸೂಯ ಅಶ್ವಮೇಧಯಾಗಗಳ ಫಲವನ್ನು ಪಡೆಯುವನು.

೯. ಮೂರು ರಾತ್ರಿ ಉಪವಾಸಮಾಡಿ ಚಾತುರ್ಮಾಸ್ಯವನ್ನು ಕಳೆಯುವವನು ಈ ಸಂಸಾರದಲ್ಲಿ ಮರಳಿ ಜನಿಸುವುದಿಲ್ಲ.

೧೦. ಒಂದು ದಿನ ಸಾಯಂಕಾಲವೂ, ಒಂದು ದಿನ ಬೆಳಗ್ಗೆಯೂ ಭೋಜನ ಮಾಡುತ್ತ ನಾಲ್ಕು ತಿಂಗಳು ಕಳೆಯುವವನು ಅಗ್ನಿಷ್ಟೋಮ ಯಜ್ಞದ ಫಲವನ್ನು ಪಡೆಯುವನು.

೧೧. ವಿಷ್ಣುವು ಮಲಗಿರುವಾಗ ಅಯಾಚಿತ ವ್ರತವನ್ನಾಚರಿಸುವವನಿಗೆ ಯಾವಾಗಲೂ ಬಂಧುಗಳ ವಿಯೋಗವುಂಟಾಗುವುದಿಲ್ಲ.

೧೨. ನಾಲ್ಕು ತಿಂಗಳು ತೈಲಾಭ್ಯಂಗವನ್ನೂ, ಘೃತಾಭ್ಯಂಗವನ್ನೂ ತ್ಯಜಿಸುವವನು ಸ್ವರ್ಗಭೋಗಿಯಾಗುವನು.

ಬ್ರಹ್ಮಚರ್ಯೇಣ ಯೋ ಮಾಸಾಂಶ್ಚತುರೋಽಪಿ ನಯೇನ್ನರಃ ।
ವಿಮಾನವರಮಾರೂಢಃ ಸ ಸ್ವರ್ಗೇ ಸ್ವೇಚ್ಛಯಾ ವಸೇತ್ ॥ ೧೩ ॥
ಯಃ ಸ್ನಾನಂ ಚತುರೋ ಮಾಸಾನ್ಕುರುತೇ ತೈಲವರ್ಜಿತಂ ।
ಮಧುಮಾಂಸಪರಿತ್ಯಾಗೀ ಸ ಭವೇನ್ಮುಕ್ತಿಭಾಕ್ಸದಾ ॥ ೧೪ ॥
ವರ್ಜಯೇಚ್ಛ್ರಾವಣೇ ಶಾಕಂ ದಧಿ ಭಾದ್ರಪದೇ ಚ ಯಃ ।
ಕ್ಷೀರಮಾಶ್ವಯುಜೇ ಮಾಸಿ ಕಾರ್ತಿಕೇ ಚ ಸದಾಮಿಷಂ ॥ ೧೫ ॥
ನ ಸ ಪಾಪೇನ ಲಿಪ್ಯೇತ ಸಂವತ್ಸರಕೃತೇ ಪುನಃ ।
ಏತತ್ಪ್ರಾಹ ದ್ವಿಜಶ್ರೇಷ್ಠಾ ಮನುಃ ಸ್ವಾಯಂಭುವೋ ವಚಃ ॥ ೧೬ ॥
ಶಾಕೇ ಸಂಕ್ರಮತೇ ಬ್ರಹ್ಮಾ ಶ್ರಾವಣೇ ಮಾಸಿ ಸಂಸ್ಥಿತೇ ।
ದಧ್ನಿ ಭಾದ್ರಪದೇ ವಿಷ್ಣುಃ ಕ್ಷೀರೇ ಚಾಽಽಶ್ವಯುಜೇ ಹರಃ ॥ ೧೭ ॥
ತ್ರಯೋಽಪಿ ಕಾರ್ತಿಕೇ ಮಾಸಿ ಸಂಕ್ರಮಂತಿ ತಥಾಮಿಷೇ ।
ತಸ್ಮಾದೇತಾನ್ ಸದೈವೇಷು ಸರ್ವಥಾ ಪರಿವರ್ಜಯೇತ್ ॥ ೧೮ ॥
ಯಃ ಕಾಂಸ್ಯಂ ವರ್ಜಯೇನ್ಮರ್ತ್ಯಃ ಪ್ರಸುಪ್ತೇ ಗರುಡಧ್ವಜೇ ।
ಸ ಫಲಂ ಪ್ರಾಪ್ನುಯಾತ್ಕೃತ್ಸ್ನಂ ವಾಜಪೇಯಾತಿರಾತ್ರಯೋಃ ॥ ೧೯ ॥
ಅಕ್ಷಾರ ಲವಣಾಽಽಶೀ ಚ ಯೋ ಭವೇದ್ಬ್ರಾಹ್ಮಣೋತ್ತಮಃ ।
ತಸ್ಯಾಽಪಿ ಸಕಲಾಃ ಪೂರ್ತಾಃ ಪ್ರಭವಂತಿ ಸದಾ ತತಃ ॥ ೨೦ ॥

---

೧೩. ಬ್ರಹ್ಮಚರ್ಯದಿಂದ ನಾಲ್ಕು ತಿಂಗಳನ್ನು ಕಳೆಯುವವನು ಉತ್ತಮವಾದ ವಿಮಾನವನ್ನೇರಿ ಸ್ವರ್ಗದಲ್ಲಿ ಸ್ವೇಚ್ಛೆಯಾಗಿ ವಾಸಿಸುವನು.

೧೪. ಎಣ್ಣೆಯಿಲ್ಲದೆ ನಾಲ್ಕು ತಿಂಗಳು ಸ್ನಾನಮಾಡುವವನೂ, ಮಧುಮಾಂಸಗಳನ್ನು ತ್ಯಜಿಸುವವನೂ ಮುಕ್ತಿಯನ್ನು ಹೊಂದುವನು.

೧೫–೧೬. ಶ್ರಾವಣ ಮಾಸದಲ್ಲಿ ತರಕಾರಿಯನ್ನೂ, ಭಾದ್ರಪದ ಮಾಸದಲ್ಲಿ ಮೊಸರನ್ನೂ, ಆಶ್ವಯುಜ ಮಾಸದಲ್ಲಿ ಹಾಲನ್ನೂ, ಕಾರ್ತಿಕ ಮಾಸದಲ್ಲಿ ಮಾಂಸವನ್ನೂ ತ್ಯಜಿಸುವವನು ಒಂದು ವರ್ಷ ಮಾಡಿದ ಪಾಪದಿಂದ ಲಿಪ್ತನಾಗುವುದಿಲ್ಲ. ದ್ವಿಜವರ್ಯರೆ! ಇದನ್ನು ಸ್ವಾಯಂಭುವ ಮನುವು ಹೇಳಿರುತ್ತಾನೆ.

೧೭–೧೮. ಶ್ರಾವಣ ಮಾಸದಲ್ಲಿ ತರಕಾರಿಯಲ್ಲಿ ಬ್ರಹ್ಮನೂ, ಭಾದ್ರಪದ ಮಾಸದಲ್ಲಿ ಮೊಸರಿನಲ್ಲಿ ವಿಷ್ಣುವೂ, ಆಶ್ವಯುಜ ಮಾಸದಲ್ಲಿ ಹಾಲಿನಲ್ಲಿ ಶಂಕರನೂ, ಕಾರ್ತಿಕ ಮಾಸದಲ್ಲಿ ಮಾಂಸದಲ್ಲಿ ಈ ಮೂವರೂ ಸನ್ನಿಹಿತರಾಗಿರುವುದರಿಂದ ಇವುಗಳನ್ನು ಪೂರ್ಣವಾಗಿ ಬಿಡಬೇಕು.

೧೯. ವಿಷ್ಣುವು ಸುಪ್ತನಾಗಿರುವಾಗ ಕಂಚಿನ ಪಾತ್ರೆಯನ್ನು ತ್ಯಜಿಸುವವನು ವಾಜಪೇಯಾತಿರಾತ್ರಯಾಗಗಳ ಫಲವನ್ನು ಸಂಪೂರ್ಣವಾಗಿ ಪಡೆಯುವನು.

೨೦. ಉಪ್ಪು ವಗರುಗಳನ್ನು ತಿನ್ನದಿರುವವನಿಗೆ ತಟಾಕಾದಿಗಳನ್ನು ನಿರ್ಮಿಸಿದ ಫಲವು ದೊರೆಯುವುದು.

ಯೋ ಹೋಮಂ ಚತುರೋ ಮಾಸಾನ್ ಪ್ರಕರೋತಿ ತಿಲಾಕ್ಷತೈಃ ।
ಸ್ವಾಹಾಂತೈರ್ವೈಷ್ಣವೈರ್ಮಂತ್ರೈರ್ನ ಸ ರೋಗೇಣ ಯುಜ್ಯತೇ ॥ ೨೧ ॥
ಯೋ ಜಪೇತ್ಪೌರುಷಂ ಸೂಕ್ತಂ ಸ್ನಾತ್ವಾ ವಿಷ್ಣೋಃ ಸ್ಥಿತೋಽಗ್ರತಃ ।
ಮತಿಸ್ತಸ್ಯ ವಿವರ್ಧೇತ ಶುಕ್ಲಪಕ್ಷೇ ಯಥೋಡುರಾಟ್ ॥ ೨೨ ॥
ಶತಮಷ್ಟೋತ್ತರಂ ಯಾವತ್ಫಲಹಸ್ತಃ ಪ್ರದಕ್ಷಿಣಾಂ ।
ಕರೋತಿ ವಿಷ್ಣೋರ್ಮೌನೇನ ನ ಸ ಪಾಪೇನ ಲಿಪ್ಯತೇ ॥ ೨೩ ॥
ಮಿಷ್ಟಾನ್ನಂ ಬ್ರಾಹ್ಮಣೇಂದ್ರಾಣಾಂ ಯೋ ದದಾತಿ ಸ್ವಶಕ್ತಿತಃ ।
ವಿಶೇಷಾತ್ಕಾರ್ತಿಕೇ ಮಾಸಿ ಸೋಽಗ್ನಿಷ್ಟೋಮಫಲಂ ಲಭೇತ್ ॥ ೨೪ ॥
ಯಃ ಸ್ವಾಧ್ಯಾಯಂ ಚತುರ್ವೇದೈರ್ವಿಷ್ಣೋರಾಯತನೇ ಚರೇತ್ ।
ಚತುರೋ ವಾರ್ಷಿಕಾನ್ ಮಾಸಾನ್ ಸ ವಿದ್ವಾನ್ ಸರ್ವದಾ ಭವೇತ್ ॥
ನೃತ್ಯಗೀತಾದಿಕಂ ಯಚ್ಚ ಕುರ್ಯಾದ್ವಿಷ್ಣೋಃ ಸದಾ ಗೃಹೇ ।
ಅಪ್ಸರಸೋಽಸ್ಯ ಕುರ್ವಂತಿ ಪುರತಃ ಸ್ವರ್ಗತಸ್ಯ ಚ ॥ ೨೬ ॥
ಯಸ್ತು ರಾತ್ರಿದಿವಂ ವಿಪ್ರೋ ನೃತ್ಯಗೀತಾದಿಕಂ ದದೇತ್ ।
ಚತುರೋ ವಾರ್ಷಿಕಾನ್ ಮಾಸಾನ್ ಸ ಗಂಧರ್ವತ್ವಮಾಪ್ನುಯಾತ್॥೨೭॥

---

೨೧. ನಾಲ್ಕು ತಿಂಗಳು ತಿಲಾಕ್ಷತೆಗಳಿಂದ ಸ್ವಾಹಾಂತವಾದ ವೈಷ್ಣವ ಮಂತ್ರಗಳಿಂದ ಹೋಮವನ್ನು ಮಾಡುವವನು ರೋಗಿಯಾಗುವುದಿಲ್ಲ.

೨೨. ಸ್ನಾನಮಾಡಿ ವಿಷ್ಣುವಿನ ಮುಂದೆ ಪುರುಷಸೂಕ್ತವನ್ನು ಜಪಿಸುವವನ ಬುದ್ಧಿಯು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಗೊಳ್ಳುವುದು.

೨೩. ಕೈಯಲ್ಲಿ ಫಲವನ್ನು ಹಿಡಿದುಕೊಂಡು ಮೌನದಿಂದ ನೂರೆಂಟುಸಾರಿ ವಿಷ್ಣುವಿಗೆ ಪ್ರದಕ್ಷಿಣೆಗೈಯ್ಯುವವನು ಪಾಪಲಿಪ್ತನಾಗುವುದಿಲ್ಲ.

೨೪. ಕಾರ್ತಿಕ ಮಾಸದಲ್ಲಿ ವಿಶೇಷವಾಗಿ ಬ್ರಾಹ್ಮಣೋತ್ತಮರಿಗೆ ತನ್ನ ಶಕ್ತ್ಯನುಸಾರ ಮಿಷ್ಟಾನ್ನ ಭೋಜನ ಮಾಡಿಸುವವನು ಅಗ್ನಿಷ್ಟೋಮದ ಫಲವನ್ನು ಪಡೆಯುವನು.

೨೫. ನಾಲ್ಕು ತಿಂಗಳ ಕಾಲ ವಿಷ್ಣುದೇವಾಲಯದಲ್ಲಿ ನಾಲ್ಕು ವೇದಗಳನ್ನು ಅಧ್ಯಯನಮಾಡುವವನು ಯಾವಾಗಲೂ ವಿದ್ವಾಂಸನಾಗುವನು.

೨೬. ವಿಷ್ಣುದೇವಾಲಯದಲ್ಲಿ ನೃತ್ಯಗೀತಾದಿಗಳನ್ನು ಮಾಡುವವನು ಸ್ವರ್ಗವನ್ನು ಸೇರುವನು. ಅಲ್ಲಿ ಇವನ ಮುಂದೆ ಅಪ್ಸರೆಯರು ನೃತ್ಯಗೀತಗಳನ್ನು ಮಾಡುವರು.

೨೭. ನಾಲ್ಕು ತಿಂಗಳು ರಾತ್ರಿ ಹಗಲು ನೃತ್ಯಗೀತಾದಿಗಳನ್ನು ಮಾಡುವ ಬ್ರಾಹ್ಮಣನು ಗಂಧರ್ವನಾಗುವನು.

ಏತೇ ಚ ನಿಯಮಾಃ ಸರ್ವೇ ಶಕ್ಯಂತೇ ಯದಿ ಭೋ ದ್ವಿಜಾಃ ।
ಕರ್ತುಂ ಚ ಚತುರೋ ಮಾಸಾನೇಕಸ್ಮಿನ್ ವಾಽಪಿ ಕಾರ್ತಿಕೇ ॥ ೨೮ ॥
ತಥಾಽಪಿ ಚೈವ ಕರ್ತವ್ಯಂ ಲೋಕದ್ವಯಮಭೀಪ್ಸತಾ ।
ಕಾರ್ತಿಕ್ಯಾಂ ಬ್ರಾಹ್ಮಣ ಶ್ರೇಷ್ಠಾ ವೈಷ್ಣವೈಃ ಪುರುಷೈರಿಹ ॥ ೨೯ ॥
ಕಾಂಸ್ಯಂ ಮಾಂಸಂ ಕ್ಷುರಂ ಕ್ಷೌದ್ರಂ ಪುನರ್ಭೋಜನ ಮೈಥುನೇ ।
ಕಾರ್ತಿಕೇ ವರ್ಜಯೇದ್ಯಸ್ತು ಯ ಏತಾನ್ ಬ್ರಾಹ್ಮಣಃ ಸದಾ ॥ ೩೦ ॥
ಪೂರ್ವೋಕ್ತಾನಾಂ ತು ಸರ್ವೇಷಾಂ ನಿಯಮಾನಾಂ ಫಲಂ ಲಭೇತ್॥೩೧॥
ಅಥ ಯಃ ಕಾರ್ತಿಕೇ ಮಾಸಿ ಪ್ರಸಾದಸ್ಯೋಪರಿ ದ್ವಿಜಾಃ ।
ಜಲಶಾಯ್ಯಾಖ್ಯದೇವಸ್ಯ ಕಲಶೇ ದೀಪಕಂ ದದೇತ್ ।
ಪೂರ್ವೋಕ್ತನಿಯಮಾನಾಂ ಚ ಸ ಷಣ್ಣಾಂ ಫಲಭಾಗ್ಭವೇತ್ ॥ ೩೨ ॥
ಯದ್ಯದಿಷ್ಟತಮಂ ಕಿಂಚಿತ್ಸುಪ್ರಾಪ್ಯಂ ಚೈವ ಯದ್ಭವೇತ್ ।
ನಿಯಮಸ್ತಸ್ಯ ಕರ್ತವ್ಯಶ್ಚಾತುರ್ಮಾಸ್ಯೇ ಶುಭಾರ್ಥಿಭಿಃ ॥ ೩೩ ॥
ನಿಯಮೇ ಚ ಕೃತೇ ದದ್ಯಾದ್ಬ್ರಾಹ್ಮಣಾಯ ತದೇವ ಹಿ ।
ನಿಯಮಸ್ತು ಕೃತೋ ಯಸ್ಯ ಸ್ವಶಕ್ತ್ಯಾ ಸ್ಯಾತ್ಫಲಂ ತತಃ ॥ ೩೪ ॥
ಯೋ ವಿನಾ ನಿಯಮಂ ಮರ್ತ್ಯೋ ವ್ರತಂ ವಾ ಜಾಪ್ಯಮೇವ ವಾ ।
ಚತುರ್ಮಾಸಾನ್ನಯೇನ್ಮೂರ್ಖೋ ಜೀವನ್ನಪಿ ಮೃತೋ ಹಿ ಸಃ ॥ ೩೫ ॥

---

೨೮–೨೯. ಬ್ರಾಹ್ಮಣೋತ್ತಮರೆ! ಇಹಪರಗಳ ಶ್ರೇಯಸ್ಸನ್ನು ಬಯಸುವ ವೈಷ್ಣವರು ಈ ಎಲ್ಲಾ ನಿಯಮಗಳನ್ನು ಸಾಧ್ಯವಾದರೆ ನಾಲ್ಕು ತಿಂಗಳೂ ಮಾಡಬೇಕು. ಅಥವಾ ಕಾರ್ತಿಕ ಮಾಸದಲ್ಲಾದರೂ ಅನುಷ್ಠಾನ ಮಾಡಬೇಕು.

೩೦–೩೧. ಕಾರ್ತಿಕ ಮಾಸದಲ್ಲಿ ಕಂಚು, ಮಾಂಸ, ಕ್ಷೌರ, ಜೇನು, ಪುನರ್ಭೋಜನ, ಮೈಥುನಗಳನ್ನು ತ್ಯಜಿಸಿದ ಬ್ರಾಹ್ಮಣನು ಹಿಂದೆ ಹೇಳಿದ ಸಮಸ್ತ ನಿಯಮಗಳ ಫಲವನ್ನೂ ಪಡೆಯುವನು.

೩೨. ಕಾರ್ತಿಕ ಮಾಸದಲ್ಲಿ ಜಲಶಾಯಿಯಾದ ವಿಷ್ಣುವಿನ ಪ್ರಾಸಾದದ ಮೇಲಿನ ಕಲಶದಲ್ಲಿ ದೀಪವನ್ನು ಹೊತ್ತಿಸುವವನು ಹಿಂದೆ ಹೇಳಿದ ಆರು ನಿಯಮಗಳ ಫಲವನ್ನು ಹೊಂದುವನು.

೩೩. ಚಾತುರ್ಮಾಸ್ಯದಲ್ಲಿ ಶುಭವನ್ನು ಬಯಸುವವರು ಅತ್ಯಂತ ಇಷ್ಟವೂ, ಸುಖಪ್ರಾಪ್ಯವೂ ಆದ ಫಲಕ್ಕೆ ಅನುಗುಣವಾದ ನಿಯಮವನ್ನು ಮಾಡಬೇಕು.

೩೪. ನಿಯಮವನ್ನು ಮಾಡಿದರೆ ಬ್ರಾಹ್ಮಣನಿಗೆ ಅದೇ ಫಲವನ್ನು ಕೊಡುವುದು. ಯಾವ ಫಲಕ್ಕಾಗಿ ಶಕ್ತ್ಯನುಸಾರ ನಿಯಮವನ್ನು ಮಾಡುವನೊ ಅದರಿಂದ ಆ ಫಲವೇ ಉಂಟಾಗುವುದು.

೩೫. ನಿಯಮ, ವ್ರತ, ಜಪಗಳಿಲ್ಲದೆ ನಾಲ್ಕು ತಿಂಗಳನ್ನು ಕಳೆಯುವ ಮೂರ್ಖನು ಬದುಕಿದ್ದರೂ ಮೃತನಾದವನಂತೆಯೇ ಆಗುವನು.

ಯಥಾ ಕಾಕಯವಾಃ ಪ್ರೋಕ್ತಾ ಯಥಾಽರಣ್ಯಾಸ್ತಿಲೋದ್ಭವಾಃ ।
ನಾಮಮಾತ್ರಪ್ರಸಿದ್ಧಾಶ್ಚ ತಥಾ ತೇ ಮಾನವಾ ಭುವಿ ॥ ೩೬ ॥
ತಸ್ಮಾತ್ಸರ್ವಪ್ರಯತ್ನೇನ ಕಾರ್ಯೋ ಯತ್ನೇನ ಕಾರ್ತಿಕೇ ।
ಏಕೋಽಪಿ ನಿಯಮಃ ಕಶ್ಚಿತ್ಸುಸೂಕ್ಷ್ಮೋಽಪಿ ದ್ವಿಜೋತ್ತಮಾಃ ॥ ೩೭ ॥
ಏತದ್ವಃ ಸರ್ವಮಾಖ್ಯಾತಂ ಚಾತುರ್ಮಾಸೀಸಮುದ್ಭವಂ ।
ವ್ರತಾನಾಂ ನಿಯಮಾನಾಂ ಚ ಮಾಹಾತ್ಮ್ಯಂ ವಿಸ್ತರಾದ್ದ್ವಿಜಾಃ ॥ ೩೮ ॥
ಯಶ್ಚೈತಚ್ಛೃಣುಯಾನ್ನಿತ್ಯಂ ಪಠೇದ್ವಾಽಪಿ ಸಮಾಹಿತಃ ।
ಚಾತುರ್ಮಾಸೀ ಕೃತಾತ್ಪಾಪಾತ್ಸೋಽಪಿ ಮುಕ್ತಿಮವಾಪ್ನುಯಾತ್॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಾತುರ್ಮಾಸ್ಯವ್ರತನಿಯಮವರ್ಣನಂ" ನಾಮ
ದ್ವಾತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೩೬. ಕಾಕಯವದಂತೆಯೂ, ಕಾಡಿನ ಎಳ್ಳಿನಂತೆಯೂ, ಅವರು ಭೂಮಿಯಲ್ಲಿ ನಾಮ ಮಾತ್ರದಿಂದ ಮನುಷ್ಯರೆನ್ನಿಸಿಕೊಳ್ಳುವರು.

೩೭. ದ್ವಿಜವರ್ಯರೆ! ಆದುದರಿಂದ ಕಾರ್ತಿಕ ಮಾಸದಲ್ಲಿ ಪ್ರಯತ್ನಿಸಿ ಸೂಕ್ಷ್ಮವಾದ ಒಂದು ನಿಯಮವನ್ನಾದರೂ ಮಾಡಬೇಕು.

೩೮. ದ್ವಿಜರೆ! ನಿಮಗೆ ಈ ಚಾತುರ್ಮಾಸ್ಯದ ವ್ರತನಿಯಮಗಳ ಮಾಹಾತ್ಮ್ಯವನ್ನೆಲ್ಲ ವಿಸ್ತಾರವಾಗಿ ಹೇಳಿರುವೆನು.

೩೯. ಸಾವಧಾನಮನಸ್ಸಿನಿಂದ ಈ ಚಾತುರ್ಮಾಸ್ಯ ಮಾಹಾತ್ಮ್ಯವನ್ನು ಕೇಳಿದವನಾಗಲಿ, ಪಠಿಸಿದವನಾಗಲಿ ತಾನು ಮಾಡಿದ ಪಾಪದಿಂದ ಮುಕ್ತನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಾತುರ್ಮಾಸ್ಯವ್ರತನಿಯಮವರ್ಣನ"ವೆಂಬ
ಇನ್ನೂರ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ಗಂಗೋದಕಸ್ನಾನಫಲಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಸೂತ ಸೂತ ಮಹಾಭಾಗ ಶ್ರೋತುಮಿಚ್ಛಾಮಹೇ ವಯಂ ।
ಚಾತುರ್ಮಾಸ್ಯ ವ್ರತಾನಾಂ ಹಿ ತ್ವತ್ತೋ ಮಾಹಾತ್ಮ್ಯವಿಸ್ತರಂ ॥ ೧ ॥
ತದಸ್ಮಾಕಂ ಮಹಾಭಾಗ ಕೃಪಾಂ ಕೃತ್ವಾಽಧುನಾ ವದ ।
ತ್ವದ್ವಚೋಽಮೃತಪಾನೇನ ಭೂಯಃ ಶ್ರದ್ಧಾಽಭಿವರ್ಧತೇ ॥ ೨ ॥

ಸೂತ ಉವಾಚ :—

ಶೃಣುಧ್ವಂ ಮುನಯಃ ಸರ್ವೇ ಚಾತುರ್ಮಾಸ್ಯವ್ರತೋದ್ಭವಂ ।
ಮಾಹಾತ್ಮ್ಯಂ ವಿಸ್ತರೇಣೈವ ಕಥಯಿಷ್ಯಾಮಿ ವೋಽಗ್ರತಃ ॥ ೩ ॥
ಪುರಾ ಬ್ರಹ್ಮಮುಖಾಚ್ಛ್ರುತ್ವಾ ನಾನಾವ್ರತವಿಧಾನಕಂ ।
ನಾರದಃ ಪರಿಪಪ್ರಚ್ಛ ಭೂಯೋ ಬ್ರಹ್ಮಾಣಮಾದರಾತ್ ॥ ೪ ॥

ನಾರದ ಉವಾಚ :—

ದೇವದೇವ ಮಹಾಭಾಗ ವ್ರತಾನಿ ಸುಬಹೂನ್ಯಪಿ ।
ಶ್ರುತಾನಿ ತ್ವನ್ಮುಖಾದ್ಬ್ರಹ್ಮನ್ನತೃಪ್ತಿಮಧಿಗಚ್ಛತಿ ॥ ೫ ॥
ಅಧುನಾ ಶ್ರೋತುಮಿಚ್ಛಾಮಿ ಚಾತುರ್ಮಾಸ್ಯವ್ರತಂ ಶುಭಂ ॥ ೬ ॥

---

## ಕನ್ನಡದ ಅನುವಾದ

### ಗಂಗೋದಕಸ್ನಾನಫಲಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:— ಭಾಗ್ಯವಂತನಾದ ಸೂತನೆ! ನಾವು ನಿನ್ನಿಂದ ಚಾತುರ್ಮಾಸ್ಯವ್ರತಗಳ ವಿಸ್ತಾರವಾದ ಮಾಹಾತ್ಮ್ಯೆಯನ್ನು ಕೇಳ ಬಯಸುವೆವು.

೨. ಈಗ ಅದನ್ನು ನಮ್ಮಲ್ಲಿ ದಯೆಮಾಡಿ ಹೇಳು. ನಮಗೆ ನಿನ್ನ ಮಾತೆಂಬ ಅಮೃತಪಾನದಿಂದ ಮರಳಿ ಶ್ರದ್ಧೆಯು ಹೆಚ್ಚುವುದು.

೩. ಸೂತನು ಹೇಳುತ್ತಾನೆ:—ಎಲೈ ಮುನಿಗಳೆ! ಚಾತುರ್ಮಾಸ್ಯವ್ರತದ ಮಾಹಾತ್ಮ್ಯವನ್ನು ವಿಸ್ತಾರವಾಗಿ ನಿಮ್ಮ ಮುಂದೆ ಹೇಳುವೆನು ಕೇಳಿರಿ.

೪. ಹಿಂದೆ ನಾರದನು ಬ್ರಹ್ಮನ ಮುಖದಿಂದ ನಾನಾ ವ್ರತಗಳ ವಿಧಿಯನ್ನು ಕೇಳಿ ಮರಳಿ ಆತನನ್ನು ಹೀಗೆ ಆದರದಿಂದ ಪ್ರಶ್ನೆಮಾಡಿದನು.

೫. ನಾರದನು ಹೇಳುತ್ತಾನೆ:— ಭಾಗ್ಯವಂತನೆ! ನಿನ್ನ ಮುಖದಿಂದ ಬಹುವಾಗಿ ವ್ರತಗಳನ್ನು ಕೇಳಿದರೂ ಮನಸ್ಸು ತೃಪ್ತಿಗೊಳ್ಳುವುದಿಲ್ಲ.

೬. ಈಗ ಶುಭಕರವಾದ ಚಾತುರ್ಮಾಸ್ಯವ್ರತವನ್ನು ಕೇಳಬಯಸುವೆನು.

ಬ್ರಹ್ಮೋವಾಚ :—
ಶೃಣು ದೇವಮುನೇ ಮತ್ತಶ್ಚಾತುರ್ಮಾಸ್ಯವ್ರತಂ ಶುಭಂ ।
ಯಚ್ಛ್ರುತ್ವಾ ಭಾರತೇ ಖಂಡೇ ನೃಣಾಂ ಮುಕ್ತಿರ್ನ ದುರ್ಲಭಾ ॥ ೭ ॥
ಮುಕ್ತಿಪ್ರದೋಽಯಂ ಭಗವಾನ್ ಸಂಸಾರೋತ್ತಾರಕಾರಣಂ ।
ಯಸ್ಯ ಸ್ಮರಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೮ ॥
ಮಾನುಷ್ಯಂ ದುರ್ಲಭಂ ಲೋಕೇ ತತ್ರಾಽಪಿ ಚ ಕುಲೀನತಾ ।
ತತ್ರಾಪಿ ಸದಯತ್ವಂ ಚ ತತ್ರ ಸತ್ಸಂಗಮಃ ಶುಭಃ ॥ ೯ ॥
ಸತ್ಸಂಗಮೋ ನ ಯತ್ರಾಽಸ್ತಿ ವಿಷ್ಣುಭಕ್ತಿರ್ವ್ರತಾನಿ ಚ ।
ಚಾತುರ್ಮಾಸ್ಯೇ ವಿಶೇಷೇಣ ವಿಷ್ಣುವ್ರತಕರಃ ಶುಭಃ ॥ ೧೦ ॥
ಚಾತುರ್ಮಾಸ್ಯೇಽವ್ರತೀ ಯಸ್ತು ತಸ್ಯ ಪುಣ್ಯಂ ನಿರರ್ಥಕಂ ।
ಸರ್ವತೀರ್ಥಾನಿ ದಾನಾನಿ ಪುಣ್ಯಾನ್ಯಾಯತನಾನಿ ಚ ॥ ೧೧ ॥
ವಿಷ್ಣುಮಾಶ್ರಿತ್ಯ ತಿಷ್ಠಂತಿ ಚಾತುರ್ಮಾಸ್ಯೇ ಸಮಾಗತೇ ।
ಸುಪುಷ್ಟೇನಾಽಪಿ ದೇಹೇನ ಜೀವಿತಂ ತಸ್ಯ ಶೋಭನಂ ॥ ೧೨ ॥

---

೭. ಬ್ರಹ್ಮನು ಹೇಳುತ್ತಾನೆ:—ದೇವರ್ಷಿಯೆ! ನನ್ನಿಂದ ಚಾತುರ್ಮಾಸ್ಯ ವ್ರತವಿಚಾರವನ್ನು ಕೇಳು. ಭರತಖಂಡದಲ್ಲಿ ಇದನ್ನು ಕೇಳಿದ ಮಾನವರಿಗೆ ಮುಕ್ತಿಯು ದುರ್ಲಭವಾಗುವುದಿಲ್ಲ.

೮. ಪೂಜ್ಯನಾದ ವಿಷ್ಣುವು ಮುಕ್ತಿದಾಯಕನೂ, ಸಂಸಾರತಾರಕನೂ ಆಗಿರುವನು. ಇವನ ಸ್ಮರಣೆಯಿಂದ ನರನು ಸಕಲಪಾಪಗಳಿಂದಲೂ ಮುಕ್ತನಾಗುವನು.

೯. ಲೋಕದಲ್ಲಿ ಮನುಷ್ಯಜನ್ಮವು ದುರ್ಲಭವಾದುದು. ಅದರಲ್ಲಿಯೂ ಸತ್ಕುಲದಲ್ಲಿ ಜನಿಸುವಿಕೆಯು ದುರ್ಲಭ. ಅದರಲ್ಲಿಯೂ ದಯೆಯುಳ್ಳವನಾಗಿರುವುದು ದುರ್ಲಭವಾದುದು. ಅದರಲ್ಲಿಯೂ ಶುಭಕರವಾದ ಸಜ್ಜನ ಸಹವಾಸವು, ದುರ್ಲಭ.

೧೦. ಚಾತುರ್ಮಾಸ್ಯದಲ್ಲಿ ಸತ್ಸಂಗಮವೂ, ವಿಷ್ಣುಭಕ್ತಿಯೂ, ವ್ರತಗಳೂ ಯಾವನಲ್ಲಿ ಇಲ್ಲವೊ ಅವನು ಪಾಪಿಯು. ವಿಷ್ಣುವ್ರತವನ್ನಾಚರಿಸುವವನೇ ಪುಣ್ಯವಂತನು.

೧೧—೧೨. ಚಾತುರ್ಮಾಸ್ಯದಲ್ಲಿ ವ್ರತಮಾಡದವನ ಪುಣ್ಯವು ನಿಷ್ಫಲವು. ಚಾತುರ್ಮಾಸ್ಯ ಬರಲು ಸಕಲತೀರ್ಥಗಳೂ, ದಾನಗಳೂ, ಪುಣ್ಯಕರಗಳಾದ ದೇವಾಲಯಗಳೂ ವಿಷ್ಣುವನ್ನಾಶ್ರಯಿಸಿರುವುವು. ಚಾತುರ್ಮಾಸ್ಯ ಬರಲು ಪುಷ್ಟವಾದ ಶರೀರದಿಂದ ವಿಷ್ಣುವನ್ನು ವಂದಿಸಿದ ವಿದ್ವಾಂಸನ ಬದುಕು ಮಂಗಳ

ಚಾತುರ್ಮಾಸ್ಯೇ ಸಮಾಯಾತೇ ಹರಿಂ ಯಃ ಪ್ರಣಮೇದ್ಬುಧಃ ।
ಕೃತಾರ್ಥಾಸ್ತಸ್ಯ ವಿಬುಧಾ ಯಾವಜ್ಜೀವಂ ವರಪ್ರದಾಃ ॥ ೧೩ ॥
ಸಂಪ್ರಾಪ್ಯ ಮಾನುಷಂ ಜನ್ಮ ಚಾತುರ್ಮಾಸ್ಯಪರಾಙ್ಮುಖಃ ।
ತಸ್ಯ ಪಾಪಶತಾನ್ಯಾಹುರ್ದೇಹಸ್ಥಾನಿ ನ ಸಂಶಯಃ ॥ ೧೪ ॥
ಮಾನುಷ್ಯಂ ದುರ್ಲಭಂ ಲೋಕೇ ಹರಿಭಕ್ತಿಶ್ಚ ದುರ್ಲಭಾ ।
ಚಾತುರ್ಮಾಸ್ಯೇ ವಿಶೇಷೇಣ ಸುಪ್ತೇ ದೇವೇ ಜನಾರ್ದನೇ ॥ ೧೫ ॥
ಚಾತುರ್ಮಾಸ್ಯೇ ನರಃ ಸ್ನಾನಂ ಪ್ರಾತರೇವ ಸಮಾಚರೇತ್ ।
ಸರ್ವಕ್ರತುಫಲಂ ಪ್ರಾಪ್ಯ ದೇವವದ್ದಿವಿ ಮೋದತೇ ॥ ೧೬ ॥
ಚಾತುರ್ಮಾಸ್ಯೇ ತು ಯಃ ಸ್ನಾನಂ ಕುರ್ಯಾತ್ಸಿದ್ಧಿಮವಾಪ್ನುಯಾತ್ ।
ತಥಾ ನಿರ್ಝರಣೇ ಸ್ನಾತಿ ತಡಾಗೇ ಕೂಪಿಕಾಸು ಚ ॥ ೧೭ ॥
ತಸ್ಯ ಪಾಪಸಹಸ್ರಾಣಿ ವಿಲಯಂ ಯಾಂತಿ ತತ್ಕ್ಷಣಾತ್ ।
ಪುಷ್ಕರೇ ಚ ಪ್ರಯಾಗೇ ವಾ ಯತ್ರ ಕ್ವಾಽಪಿ ಮಹಾಜಲೇ ।
ಚಾತುರ್ಮಾಸ್ಯೇಷು ಯಃ ಸ್ನಾತಿ ಪುಣ್ಯಸಂಖ್ಯಾ ನ ವಿದ್ಯತೇ ॥ ೧೮ ॥
ರೇವಾಯಾಂ ಭಾಸ್ಕರಕ್ಷೇತ್ರೇ ಪ್ರಾಚ್ಯಾಂ ಸಾಗರಸಂಗಮೇ ।
ಏಕಾಽಹಮಪಿ ಯಃ ಸ್ನಾತಶ್ಚಾತುರ್ಮಾಸ್ಯೇ ನ ದೋಷಭಾಕ್ ॥ ೧೯ ॥

---

ಕರವಾದುದು. ದೇವತೆಗಳು ಕೃತಾರ್ಥರಾಗಿ ಅವನಿಗೆ ಬದುಕಿರುವವರೆಗೂ ವರವನ್ನು ನೀಡುವರು.

೧೪. ಮನುಷ್ಯಜನ್ಮವನ್ನು ಪಡೆದು ಚಾತುರ್ಮಾಸ್ಯವ್ರತವನ್ನಾಚರಿಸದವನ ಶರೀರದಲ್ಲಿ ನಿಶ್ಚಯವಾಗಿಯೂ ಅನೇಕ ಪಾಪಗಳು ನೆಲೆಸಿರುವುವು.

೧೫. ಲೋಕದಲ್ಲಿ ಚಾತುರ್ಮಾಸ್ಯದಲ್ಲಿ ವಿಷ್ಣುವು ಮಲಗಿರಲು ಮನುಷ್ಯ ಜನ್ಮವೂ, ಹರಿಭಕ್ತಿಯೂ ದುರ್ಲಭವಾದುದು.

೧೬. ಚಾತುರ್ಮಾಸ್ಯದಲ್ಲಿ ನರನು ಪ್ರಾತಃಕಾಲದಲ್ಲಿಯೇ ಸ್ನಾನಮಾಡಿದರೆ ಸಕಲ ಯಜ್ಞಗಳ ಫಲವನ್ನು ಪಡೆದು ಸ್ವರ್ಗದಲ್ಲಿ ದೇವತೆಗಳಂತೆ ಆನಂದ ಗೊಳ್ಳುವನು.

೧೭–೧೮. ಚಾತುರ್ಮಾಸ್ಯದಲ್ಲಿ ಮಿಂದವನು ಇಷ್ಟಸಿದ್ಧಿಯನ್ನು ಪಡೆಯು ವನು. ಹಾಗೆಯೇ ಗಿರಿನದಿಗಳಲ್ಲಾಗಲಿ, ಕೆರೆ ಬಾವಿಗಳಲ್ಲಾಗಲಿ ಮಿಂದವನ ಸಾವಿರಾರು ಪಾಪಗಳು ಕೂಡಲೆ ನಾಶವಾಗುವುವು. ಪುಷ್ಕರ, ಪ್ರಯಾಗ, ಅಥವಾ ಯಾವುದಾದರೂ ಒಂದು ಕೆರೆ ಇವುಗಳಲ್ಲಿ ಮಿಂದವನ ಪುಣ್ಯವು ಅಪರಿ ಮಿತವಾಗುವುದು.

೧೯. ಚಾತುರ್ಮಾಸ್ಯದಲ್ಲಿ ನರ್ಮದಾ, ಭಾಸ್ಕರಕ್ಷೇತ್ರ, ಪ್ರಾಚೀಸರಸ್ವತಿ, ಸಾಗರಸಂಗಮ ಇವುಗಳಲ್ಲಿ ಒಂದು ದಿನ ಮಿಂದವನು ಸಹ ದೋಷಭಾಗಿಯಾಗನು.

ದಿನತ್ರಯಂ ಚ ಯಃ ಸ್ನಾತಿ ನರ್ಮದಾಯಾಂ ಸಮಾಹಿತಃ ।
ಸುಪ್ತೇ ದೇವೇ ಜಗನ್ನಾಥೇ ಪಾಪಂ ಯಾತಿ ಸಹಸ್ರಧಾ ॥ ೨೦ ॥
ಪಕ್ಷಮೇಕಂ ತು ಯಃ ಸ್ನಾತಿ ಗೋದಾವರ್ಯಾಂ ದಿನೋದಯೇ ।
ಸ ಭಿತ್ವಾ ಕರ್ಮಜಂ ದೇಹಂ ಯಾತಿ ವಿಷ್ಣೋಃ ಸಲೋಕತಾಂ ॥ ೨೧ ॥
ತಿಲೋದಕೇನ ಯಃ ಸ್ನಾತಿ ತಥಾ ಚೈವಾಽಮಲೋದಕೈಃ ।
ಬಿಲ್ವಪತ್ರೋದಕೈಶ್ಚೈವ ಚಾತುರ್ಮಾಸ್ಯೇನ ದೋಷಭಾಕ್ ॥ ೨೨ ॥
ಗಂಗಾಂ ಸ್ಮರತಿ ಯೋ ನಿತ್ಯಮುದಪಾತ್ರಸಮೀಪತಃ ।
ತದ್ಗಾಂಗೇಯಂ ಜಲಂ ಜಾತಂ ತೇನ ಸ್ನಾನಂ ಸಮಾಚರೇತ್ ॥ ೨೩ ॥
ಗಂಗಾಽಪಿ ದೇವದೇವಸ್ಯ ಚರಣಾಂಗುಷ್ಠವಾಹಿನೀ ।
ಪಾಪಘ್ನೀ ಸಾ ಸದಾ ಪ್ರೋಕ್ತಾ ಚಾತುರ್ಮಾಸ್ಯೇ ವಿಶೇಷತಃ ॥ ೨೪ ॥
ಯತಃ ಪಾಪಸಹಸ್ರಾಣಿ ವಿಷ್ಣುರ್ದಹತಿ ಸಂಸ್ಮೃತಃ ।
ತಸ್ಮಾತ್ಪಾದೋದಕಂ ಶೀರ್ಷೇ ಚಾತುರ್ಮಾಸ್ಯೇ ಧೃತಂ ಶಿವಂ ॥ ೨೫ ॥
ಚಾತುರ್ಮಾಸ್ಯೇ ಜಲಗತೋ ದೇವೋ ನಾರಾಯಣೋ ಭವೇತ್ ।
ಸರ್ವತೀರ್ಥಾಧಿಕಂ ಸ್ನಾನಂ ವಿಷ್ಣುತೇಜೋಂಶಸಂಗತಂ ॥ ೨೬ ॥

---

೨೦. ಜಗನ್ನಾಥನು ಮಲಗಿರಲು ನರ್ಮದಾನದಿಯಲ್ಲಿ ಮೂರು ದಿನ ಸಾವಧಾನ ಮನಸ್ಸಿನಿಂದ ಮಿಂದವನ ಸಾವಿರಾರು ಪಾಪಗಳು ನೀಗುವುವು.

೨೧. ಗೋದಾವರೀನದಿಯಲ್ಲಿ ಸೂರ್ಯೋದಯಕಾಲದಲ್ಲಿ ಒಂದು ಪಕ್ಷಕಾಲ ಸ್ನಾನ ಮಾಡಿದವನು ಕರ್ಮದೇಹವನ್ನು ತ್ಯಜಿಸಿ ವಿಷ್ಣುಲೋಕಕ್ಕೆ ಹೋಗುವನು.

೨೨. ಚಾತುರ್ಮಾಸ್ಯದಲ್ಲಿ ತಿಲೋದಕ, ನೆಲ್ಲಿಕಾಯಿಯ ನೀರು, ಬಿಲ್ವ ದೆಳೆಯ ನೀರು ಇವುಗಳಿಂದ ಮಿಂದವನು ದೋಷಭಾಗಿಯಾಗುವುದಿಲ್ಲ.

೨೩. ಯಾವುದಾದರೂ ತೀರ್ಥದ ಬಳಿ ಗಂಗೆಯನ್ನು ಸ್ಮರಿಸಿದರೆ ಆ ನೀರು ಗಂಗಾಜಲವಾಗುವುದು. ಅದರಿಂದ ಸ್ನಾನಮಾಡಬೇಕು.

೨೪. ವಿಷ್ಣುವಿನ ಪಾದಾಂಗುಷ್ಠದಿಂದ ಹುಟ್ಟಿದ ಗಂಗೆಯೂ ಚಾತುರ್ಮಾಸ್ಯ ದಲ್ಲಿ ವಿಶೇಷವಾಗಿ ಪಾಪ ಪರಿಹಾರಕಳಾಗುವಳು.

೨೫. ಸ್ಮರಣೆಮಾಡಲ್ಪಟ್ಟ ವಿಷ್ಣುವು ಅನೇಕ ಪಾಪಗಳನ್ನು ಪರಿಹರಿಸುವುದ ರಿಂದ ಚಾತುರ್ಮಾಸ್ಯದಲ್ಲಿ ಅವನ ಪಾದೋದಕವನ್ನು ಮಸ್ತಕದಲ್ಲಿ ಧರಿಸಿದರೆ ಮಂಗಳವಾಗುವುದು.

೨೬. ಚಾತುರ್ಮಾಸ್ಯದಲ್ಲಿ ಶ್ರೀ ನಾರಾಯಣನು ಜಲಗತನಾಗುವನು. ವಿಷ್ಣುವಿನ ತೇಜಸ್ಸಿನಿಂದ ಸೇರಿದ ನೀರಿನಲ್ಲಿ ಸ್ನಾನಮಾಡುವುದರಿಂದ ಸಕಲ ತೀರ್ಥಗಳಲ್ಲಿ ಸ್ನಾನಮಾಡುವುದಕ್ಕಿಂತ ಅಧಿಕ ಫಲವುಂಟಾಗುವುದು.

ಸ್ನಾನಂ ದಶವಿಧಂ ಕಾರ್ಯಂ ವಿಷ್ಣುನಾಮ ಮಹಾಫಲಂ ।
ಸುಪ್ತೇ ದೇವೇ ವಿಶೇಷೇಣ ನರೋ ದೇವತ್ವಮಾಪ್ನುಯಾತ್ ॥ ೨೭ ॥
ವಿನಾ ಸ್ನಾನಂ ತು ಯತ್ಕರ್ಮ ಪುಣ್ಯಕಾರ್ಯಮಯಂ ಶುಭಂ ।
ಕ್ರಿಯತೇ ನಿಷ್ಫಲಂ ಬ್ರಹ್ಮಂಸ್ತತ್ಪ್ರಗೃಹ್ಣಂತಿ ರಾಕ್ಷಸಾಃ ॥ ೨೮ ॥
ಸ್ನಾನೇನ ಸತ್ಯಮಾಪ್ನೋತಿ ಸ್ನಾನಂ ಧರ್ಮಃ ಸನಾತನಃ ।
ಧರ್ಮಾನ್ಮೋಕ್ಷಫಲಂ ಪ್ರಾಪ್ಯ ಪುನರ್ನೈವಾವಸೀದತಿ ॥ ೨೯ ॥
ಯೇಚಾಧ್ಯಾತ್ಮವಿದಃ ಪುಣ್ಯಾ ಯೇ ಚ ವೇದಾಂಗ ಪಾರಗಾಃ ।
ಸರ್ವದಾನ ಪ್ರದಾ ಯೇ ಚ ತೇಷಾಂ ಸ್ನಾನೇನ ಶುದ್ಧತಾ ॥ ೩೦ ॥
ಕೃತಸ್ನಾನಸ್ಯ ಚ ಹರಿರ್ದೇಹಮಾಶ್ರಿತ್ಯ ತಿಷ್ಠತಿ ।
ಸರ್ವಕ್ರಿಯಾ ಕಲಾಪೇಷು ಸಂಪೂರ್ಣಫಲದೋ ಭವೇತ್ ॥ ೩೧ ॥
ಸರ್ವಪಾಪವಿನಾಶಾಯ ದೇವತಾತೋಷಣಾಯ ಚ ।
ಚಾತುರ್ಮಾಸ್ಯೇ ಜಲಸ್ನಾನಂ ಸರ್ವಪಾಪಕ್ಷಯಾವಹಂ ॥ ೩೨ ॥
ನಿಶಾಯಾಂ ಚೈವ ನ ಸ್ನಾಯಾತ್ಸಂಧ್ಯಾಯಾಂ ಗ್ರಹಣಂ ವಿನಾ ।
ಉಷ್ಣೋದಕೇನ ನ ಸ್ನಾನಂ ರಾತ್ರೌ ಶುದ್ಧಿರ್ನಜಾಯತೇ ॥ ೩೩ ॥

---

೨೭. ವಿಷ್ಣುವು ಮಲಗಿರಲು ಅವನ ನಾಮಸ್ಮರಣೆಯಿಂದ ಮಹಾಫಲವನ್ನೀಯುವ ದಶವಿಧಸ್ನಾನವನ್ನು ಮಾಡಬೇಕು. ಅದರಿಂದ ನರನು ದೇವತ್ವವನ್ನು ಹೊಂದುವನು.

೨೮. ಸ್ನಾನಮಾಡದೆ ಶುಭಕರವಾದ ಪುಣ್ಯಕಾರ್ಯವನ್ನು ಮಾಡಿದರೆ ಅದು ನಿಷ್ಫಲವಾಗುವುದು. ಅದನ್ನು ರಾಕ್ಷಸರು ಸ್ವೀಕರಿಸುವರು.

೨೯. ಸ್ನಾನದಿಂದ ಸತ್ಯವನ್ನು ಹೊಂದುತ್ತಾನೆ. ಸ್ನಾನವು ಸನಾತನ ಧರ್ಮವಾಗಿರುವುದು. ನರನು ಧರ್ಮದಿಂದ ಮೋಕ್ಷವನ್ನು ಹೊಂದಿ ಮರಳಿ ದುಃಖಗೊಳ್ಳುವುದಿಲ್ಲ.

೩೦–೩೧. ಅಧ್ಯಾತ್ಮಜ್ಞಾನವನ್ನು ಹೊಂದಿ ಪುಣ್ಯವಂತರಾದವರೂ, ವೇದ ವೇದಾಂಗ ಪಾರಂಗತರೂ, ಸಮಸ್ತ ದಾನವನ್ನು ಕೊಡುವವರೂ ಸ್ನಾನದಿಂದ ಶುದ್ಧರಾಗುವರು. ವಿಷ್ಣುವು ಸ್ನಾನಮಾಡಿದವನ ಶರೀರದಲ್ಲಿ ಇರುವನು. ಅವನು ಸಮಸ್ತ ಕಾರ್ಯಕಲಾಪಗಳಲ್ಲಿ ಸಂಪೂರ್ಣ ಫಲವನ್ನು ನೀಡುವನು.

೩೨. ಚಾತುರ್ಮಾಸ್ಯದಲ್ಲಿ ಸಕಲ ಪಾಪನಾಶಕ್ಕಾಗಿಯೂ, ದೇವತೆಗಳ ಸಂತೋಷಕ್ಕಾಗಿಯೂ ಜಲದಲ್ಲಿ ಸ್ನಾನಮಾಡಬೇಕು.

೩೩. ಗ್ರಹಣಕಾಲವಲ್ಲದೆ ರಾತ್ರಿ ಕಾಲದಲ್ಲಿಯೂ, ಸಂಧ್ಯಾಕಾಲದಲ್ಲಿಯೂ ರಾತ್ರಿವೇಳೆ ಬಿಸಿನೀರಿನಿಂದಲೂ ಸ್ನಾನಮಾಡಬಾರದು. ಅದರಿಂದ ಶುದ್ಧಿಯುಂಟಾಗುವುದಿಲ್ಲ.

ಭಾನುಸಂದರ್ಶನಾಚ್ಛುದ್ಧಿರ್ವಿಹಿತಾ ಸರ್ವಕರ್ಮಸು ।
ಚಾತುರ್ಮಾಸ್ಯೇ ವಿಶೇಷೇಣ ಜಲಶುದ್ಧಿಸ್ತು ಭಾವಿನೀ ॥ ೩೪ ॥
ಅಶಕ್ತ್ಯಾ ತು ಶರೀರಸ್ಯ ಭಸ್ಮಸ್ನಾನೇನ ಶುಧ್ಯತಿ ।
ಮಂತ್ರಸ್ನಾನೇನ ವಿಪ್ರೇಂದ್ರ ವಿಷ್ಣುಪಾದೋದಕೇನ ವಾ ॥ ೩೫ ॥
ನಾರಾಯಣಾಗ್ರತಃ ಸ್ನಾನಂ ಕ್ಷೇತ್ರತೀರ್ಥನದೀಷು ಚ ।
ಯಃ ಕರೋತಿ ವಿಶುದ್ಧಾತ್ಮಾ ಚಾತುರ್ಮಾಸ್ಯೇ ವಿಶೇಷತಃ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಂಗೋದಕಸ್ನಾನಫಲಮಾಹಾತ್ಮ್ಯವರ್ಣನಂ" ನಾಮ
ತ್ರಯಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೩೪. ಸೂರ್ಯದರ್ಶನದಿಂದ ಜಲವು ಶುದ್ಧಿಯಾಗಿ ಸಮಸ್ತ ಕಾರ್ಯಗಳಲ್ಲಿ ಅರ್ಹವಾಗುವುದು. ಆದರೆ ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ನೀರು ಶುದ್ಧವಾಗುವುದು.

೩೫. ದೇಹಾಲಸ್ಯವುಳ್ಳವನು ಭಸ್ಮಸ್ನಾನದಿಂದಾಗಲಿ, ಮಂತ್ರಸ್ನಾನದಿಂದಾಗಲಿ, ವಿಷ್ಣುಪಾದೋದಕದಿಂದಾಗಲಿ ಶುದ್ಧನಾಗುವನು.

೩೬. ಚಾತುರ್ಮಾಸ್ಯದಲ್ಲಿ ನಾರಾಯಣನ ಮುಂದೆ ಕ್ಷೇತ್ರ, ತೀರ್ಥ, ನದಿಗಳಲ್ಲಿ ಮಿಂದವನು ಪರಿಶುದ್ಧನಾಗುವನು. .

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಂಗೋದಕಸ್ನಾನಫಲಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ಚಾತುರ್ಮಾಸ್ಯನಿಯಮವಿಧಿಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

ಪಿತೄಣಾಂ ತರ್ಪಣಂ ಕುರ್ಯಾಚ್ಛ್ರದ್ಧಾಯುಕ್ತೇನ ಚೇತಸಾ ।
ಸ್ನಾನಾಽವಸಾನೇ ನಿತ್ಯಂ ಚ ಗುಪ್ತೇ ದೇವೇ ಮಹಾಫಲಂ ॥ ೧ ॥
ಸಂಗಮೇ ಸರಿತೋಽಸ್ತತ್ರ ಪಿತೄನ್ ಸಂತರ್ಪ್ಯ ದೇವತಾಃ ।
ಜಪಹೋಮಾದಿಕರ್ಮಾಣಿ ಕೃತ್ವಾಫಲಮನಂತಕಂ ॥ ೨ ॥
ಗೋವಿಂದಸ್ಮರಣಂ ಕೃತ್ವಾ ಪಶ್ಚಾತ್ಕಾರ್ಯಾಃ ಶುಭಾಃ ಕ್ರಿಯಾಃ ।
ಏಷ ಏವ ಪಿತೃದೇವಮನುಷ್ಯಾದಿಷು ತೃಪ್ತಿದಃ ॥ ೩ ॥
ಶ್ರದ್ಧಾಂ ಧರ್ಮಯುತಾಂ ನಾಮ ಸ್ಮೃತಿಪೂತಾನಿ ಕಾರಯೇತ್ ।
ಕರ್ಮಾಣಿ ಸಕಲಾನೀಹ ಚಾತುರ್ಮಾಸ್ಯೇ ಗುಣೋತ್ತರೇ ॥ ೪ ॥
ಸತ್ಸಂಗೋ ದ್ವಿಜಭಕ್ತಿಶ್ಚ ಗುರುದೇವಾಗ್ನಿತರ್ಪಣಂ ।
ಗೋಪ್ರದಾನಂ ವೇದಪಾಠಃ ಸತ್ಕ್ರಿಯಾ ಸತ್ಯಭಾಷಣಂ ॥ ೫ ॥

---

## ಕನ್ನಡದ ಅನುವಾದ

### ಚಾತುರ್ಮಾಸ್ಯನಿಯಮವಿಧಿಮಾಹಾತ್ಮ್ಯವರ್ಣನ

೧. ಬ್ರಹ್ಮನು ಹೇಳುತ್ತಾನೆ:—ನಾರಾಯಣನು ಮಲಗಿರಲು ಸ್ನಾನಾವಸಾನದಲ್ಲಿ ಪಿತೃಗಳಿಗೆ ಶ್ರದ್ಧೆಯಿಂದ ತರ್ಪಣ ಮಾಡಿದರೆ ಅತಿಶಯ ಫಲವುಂಟಾಗುವುದು.

೨. ಚಾತುರ್ಮಾಸ್ಯದಲ್ಲಿ ನದಿಗಳ ಸಂಗಮದಲ್ಲಿ ಪಿತೃಗಳಿಗೂ, ದೇವತೆಗಳಿಗೂ ತರ್ಪಣ ಮಾಡಿ ಜಪಹೋಮಾದಿಗಳನ್ನು ಮಾಡಿದರೆ ಅತಿಶಯ ಫಲವುಂಟಾಗುವುದು.

೩. ಗೋವಿಂದನ ಸ್ಮರಣೆ ಮಾಡಿ ಅನಂತರ ಶುಭಕಾರ್ಯಗಳನ್ನೆಸಗಬೇಕು. ಇದೇ ಪಿತೃ, ದೇವ, ಮನುಷ್ಯಾದಿಗಳಿಗೆ ತೃಪ್ತಿಯನ್ನುಂಟುಮಾಡುವುದು.

೪. ಅತಿಶಯ ಗುಣವುಳ್ಳ ಈ ಚಾತುರ್ಮಾಸ್ಯದಲ್ಲಿ ಧರ್ಮಶ್ರದ್ಧೆಯಿಂದ ನಾರಾಯಣ ನಾಮಸ್ಮರಣೆಯಿಂದ ಪವಿತ್ರವಾದ ಸಕಲ ಕರ್ಮಗಳನ್ನು ಮಾಡಬೇಕು.

೫-೬. ಸಜ್ಜನಸಂಗ, ಬ್ರಾಹ್ಮಣರಲ್ಲಿ ಭಕ್ತಿ, ಗುರು, ದೇವ, ಅಗ್ನಿಗಳನ್ನು ತೃಪ್ತಿಗೊಳಿಸುವುದು, ಗೋದಾನ, ವೇದಾಧ್ಯಯನ, ಸತ್ಕರ್ಮ, ಸತ್ಯವಾಕ್ಯ,

ಗೋಭಕ್ತಿರ್ದಾನಭಕ್ತಿಶ್ಚ ಸದಾ ಧರ್ಮಸ್ಯ ಸಾಧನಂ ।
ಕೃಷ್ಣೇ ಸುಪ್ತೇ ವಿಶೇಷೇಣ ನಿಯಮೋಽಪಿ ಮಹಾಫಲಃ ॥ ೬ ॥

ನಾರದ ಉವಾಚ:—

ನಿಯಮಃ ಕೀದೃಶೋ ಬ್ರಹ್ಮನ್ ಫಲಂ ಚ ನಿಯಮೇನ ಕಿಂ ।
ನಿಯಮೇನ ಹರಿಸ್ತುಷ್ಟೋ ಯಥಾ ಭವತಿ ತದ್ವದ ॥ ೭ ॥

ಬ್ರಹ್ಮೋವಾಚ :—

ನಿಯಮಶ್ಚ ಕ್ಷುರಾದೀನಾಂ ಕ್ರಿಯಾಸು ವಿವಿಧಾಸು ಚ ।
ಕಾರ್ಯೋ ವಿದ್ಯಾವತಾ ಪುಂಸಾ ತತ್ಪ್ರಯೋಗಾನ್ಮಹಾಸುಖಂ ॥ ೮ ॥
ಏತತ್ಷಡ್ವರ್ಗಹರಣಂ ರಿಪುನಿಗ್ರಹಣಂ ಪರಂ ।
ಅಧ್ಯಾತ್ಮಮೂಲಮೇತದ್ಧಿ ಪರಮಂ ಸೌಖ್ಯಕಾರಣಂ ॥ ೯ ॥
ತತ್ರ ತಿಷ್ಠಂತಿ ನಿಯತಂ ಕ್ಷಮಾ ಸತ್ಯಾದಯೋ ಗುಣಾಃ ।
ವಿವೇಕರೂಪಿಣಃ ಸರ್ವೇ ತದ್ವಿಷ್ಣೋಃ ಪರಮಂ ಪದಂ ॥ ೧೦ ॥
ಕೃತ್ವಾ ಭವತಿ ಯಜ್ಜ್ಞಾನ್ಯತ್ಯತಕೃತ್ಯತ್ವಮತ್ರ ತತ್ ।
ಸ್ಯಾತ್ತಸ್ಯ ತತ್ಪೂರ್ವಜಾನಾಂ ಯೇನ ಜ್ಞಾತಮಿದಂ ಪದಂ ॥ ೧೧ ॥
ತನ್ಮುಹೂರ್ತಮಪಿ ಧ್ಯಾತ್ವಾ ಪಾಪಂ ಜನ್ಮಶತೋದ್ಭವಂ ।
ಭಸ್ಮಸಾದ್ಯಾತಿ ವಿಹಿತಂ ನಿರಂಜನನಿಷೇವಣಾತ್ ॥ ೧೨ ॥

---

ಗೋಭಕ್ತಿ, ದಾನಭಕ್ತಿ, ಯಾವಾಗಲೂ ಧರ್ಮವನ್ನು ಸಾಧಿಸುವುದು, ನಿಯಮ ಇವುಗಳು ಚಾತುರ್ಮಾಸ್ಯದಲ್ಲಿ ಅತ್ಯಂತ ಫಲವನ್ನು ಕೊಡುವುವು.

೭. ನಾರದನು ಹೇಳುತ್ತಾನೆ:—ಎಲೈ ಬ್ರಹ್ಮನೆ! ನಿಯಮವು ಎಂತಹದು? ಅದರಿಂದಾಗುವ ಫಲವೇನು? ಆ ನಿಯಮದಿಂದ ವಿಷ್ಣುವು ಹೇಗೆ ಸಂತುಷ್ಟನಾಗುವನು. ಅದನ್ನು ನನಗೆ ಹೇಳು.

೮. ಬ್ರಹ್ಮನು ಹೇಳುತ್ತಾನೆ:—ಜ್ಞಾನಿಯಾದವನು ಚಕ್ಷುರಾದೀಂದ್ರಿಯಗಳ ವಿವಿಧ ಕಾರ್ಯಗಳಲ್ಲಿ ನಿಯಮವನ್ನು ಮಾಡಬೇಕು. ಅದನ್ನು ಮಾಡುವುದರಿಂದ ಅತ್ಯಂತ ಸುಖವುಂಟಾಗುವುದು.

೯. ಇದು ಅತಿಶಯವಾಗಿ ಅರಿಷಡ್ವರ್ಗಗಳ ನಾಶಕ್ಕೆ ಮೂಲವಾದುದು. ಅಧ್ಯಾತ್ಮ ಜ್ಞಾನಕ್ಕೂ, ಉತ್ತಮ ಸೌಖ್ಯಕ್ಕೂ ಕಾರಣವಾದುದು.

೧೦. ಆ ನಿಯಮದಲ್ಲಿ ವಿವೇಕ ರೂಪಗಳಾದ ಕ್ಷಮಾ ಸತ್ಯಾದಿಗುಣಗಳು ನೆಲಸಿರುವುವು. ಅದು ವಿಷ್ಣುವಿನ ಉತ್ತಮ ಪದವಿಗೆ ಕಾರಣವಾದುದು.

೧೧. ನರನು ಈ ನಿಯಮಾನುಷ್ಠಾನದಿಂದ ಜ್ಞಾನಿಯೂ, ಕೃತಕೃತ್ಯನೂ ಆಗುವನು. ಇದರಿಂದ ಪೂರ್ವಿಕರ ಸ್ಥಾನವು ತಿಳಿಯುವುದು.

೧೨. ವಿಷ್ಣುವನ್ನು ಸ್ವಲ್ಪ ಹೊತ್ತು ಧ್ಯಾನಿಸಿ ಸೇವಿಸುವುದರಿಂದ ಅನೇಕ ಜನ್ಮಗಳಲ್ಲಿ ಮಾಡಿದ ಪಾಪವು ಬೂದಿಯಾಗುವುದು.

ಪ್ರತ್ಯಹಂ ಸಂಕುಚತ್ಯಸ್ಯ ಕ್ಷುತ್ತಿಪಾಸಾದಿಕಃ ಶ್ರಮಃ ।
ಸ ಯೋಗೀ ನಿಯಮೀ ನಿತ್ಯಂ ಹತಾ ಸುಪ್ತೇ ವಿಶಿಷ್ಯತೇ ॥ ೧೩ ॥
ಚಾತುರ್ಮಾಸ್ಯೇ ನರೋ ಭಕ್ತ್ಯಾ ಯೋಗಾಭ್ಯಾಸರತೋ ನ ಚೇತ್ ।
ತಸ್ಯ ಹಸ್ತಾತ್ಪ್ರತಿಭ್ರಷ್ಟಮಮೃತಂ ನಾತ್ರ ಸಂಶಯಃ ॥ ೧೪ ॥
ಮನೋ ನಿಯಮಿತಂ ಯೇನ ಸರ್ವೇಚ್ಛಾಸು ಸದಾಗತಂ ।
ತಸ್ಯ ಜ್ಞಾನೇ ಚ ಮೋಕ್ಷೇ ಚ ಕಾರಣಂ ಮನ ಏವ ಹಿ ॥ ೧೫ ॥
ಮನೋ ನಿಯಮನೇ ಯತ್ನಃ ಕಾರ್ಯಃ ಪ್ರಜ್ಞಾವತಾ ಸದಾ ।
ಮನಸಾ ಸುಗೃಹೀತೇನ ಜ್ಞಾನಾಪ್ತಿರಖಿಲಾ ಧ್ರುವಂ ॥ ೧೬ ॥
ತನ್ಮನಃ ಕ್ಷಮಯಾ ಗ್ರಾಹ್ಯಂ ಯಥಾವಹ್ನಿಶ್ಚ ವಾರಿಣಾ ।
ಏಕಯಾ ಕ್ಷಮಯಾ ಸರ್ವೋ ನಿಯಮಃ ಕಥಿತೋ ಬುಧೈಃ ॥ ೧೭ ॥
ಸತ್ಯಮೇಕಂ ಪರೋ ಧರ್ಮಃ ಸತ್ಯಮೇಕಂ ಪರಂ ತಪಃ ।
ಸತ್ಯಮೇಕಂ ಪರಂ ಜ್ಞಾನಂ ಸತ್ಯೇ ಧರ್ಮಃ ಪ್ರತಿಷ್ಠಿತಃ ॥ ೧೮ ॥
ಧರ್ಮಮೂಲಮಹಿಂಸಾ ಚ ಮನಸಾ ತಾಂ ಚ ಚಿಂತಯನ್ ।
ಕರ್ಮಣಾ ಚ ತಥಾ ವಾಚಾ ತತ ಏತಾಂ ಸಮಾಚರೇತ್ ॥ ೧೯ ॥

---

೧೩. ಇವನ ಹಸಿವು ಬಾಯಾರಿಕೆ ಮೊದಲಾದುವುಗಳಿಂದಾಗುವ ಶ್ರಮವು ಪ್ರತಿದಿನವೂ ಕಡಿಮೆಯಾಗುವುದು. ಯಾವಾಗಲೂ ನಿಯಮವುಳ್ಳ ಯೋಗಿಯು ಚಾತುರ್ಮಾಸ್ಯದಲ್ಲಿ ಶ್ರೇಷ್ಠನಾಗುವನು.

೧೪–೧೫. ಚಾತುರ್ಮಾಸ್ಯದಲ್ಲಿ ಮನುಷ್ಯನು ಭಕ್ತಿಯಿಂದ ಯೋಗಾಭ್ಯಾಸ ನಿರತನಾಗದಿದ್ದರೆ ಅವನ ಕೈಯಿಂದ ಅಮೃತವು ನಿಶ್ಚಯವಾಗಿಯೂ ಜಾರಿ ಹೋದಂತಾಗುವುದು. ಯಾವಾಗಲೂ ಸಮಸ್ತೇಚ್ಛೆಗಳಲ್ಲಿಯೂ ಪ್ರವರ್ತಿಸಿದ ಮನಸ್ಸನ್ನು ತಡೆದವನಿಗೆ ಜ್ಞಾನ ಮೋಕ್ಷಗಳಲ್ಲಿ ಆ ಮನಸ್ಸೆ ಕಾರಣವಾದುದು.

೧೬. ವಿದ್ವಾಂಸನು ಯಾವಾಗಲೂ ಮನಸ್ಸನ್ನು ತಡೆಯುವುದರಲ್ಲಿ ಪ್ರಯತ್ನಿಸಬೇಕು. ಮನಸ್ಸನ್ನು ತಡೆದರೆ ನಿಶ್ಚಯವಾಗಿಯೂ ಸಮಸ್ತ ಜ್ಞಾನಗಳೂ ಉಂಟಾಗುವುವು.

೧೭. ನೀರಿನಿಂದ ಬೆಂಕಿಯನ್ನು ತಡೆಯುವಂತೆ ಕ್ಷಮೆಯಿಂದ ಮನಸ್ಸನ್ನು ವಶಮಾಡಿಕೊಳ್ಳಬೇಕು. ಕ್ಷಮೆಯೊಂದರಿಂದಲೇ ಸಮಸ್ತ ನಿಯಮವೂ ಉಂಟಾಗುವುದೆಂದು ವಿದ್ವಾಂಸರು ಹೇಳುವರು.

೧೮. ಸತ್ಯವೇ ಉತ್ತಮ ಧರ್ಮವೂ, ಉತ್ತಮ ತಪಸ್ಸೂ, ಉತ್ತಮ ಜ್ಞಾನವೂ ಆಗಿರುವುದು. ಸತ್ಯದಲ್ಲಿಯೇ ಧರ್ಮವು ನೆಲೆಸಿರುವುದು.

೧೯. ಅಹಿಂಸೆಯು ಧರ್ಮಮೂಲವಾದುದು. ಅಹಿಂಸೆಯನ್ನು ಮನಸ್ಸಿನಿಂದ ಆಲೋಚಿಸುತ್ತ ವಾಕ್ಕರ್ಮಗಳಿಂದ ಆ ಅಹಿಂಸೆಯನ್ನೇ ಆಚರಿಸಬೇಕು.

ಪರಸ್ವಗ್ರಹಣಂ ಚೌರ್ಯಂ ಸರ್ವದಾ ಸರ್ವಮಾನುಷೈಃ ।
ಚಾತುರ್ಮಾಸ್ಯೇ ವಿಶೇಷೇಣ ಬ್ರಹ್ಮದೇವಸ್ವವರ್ಜನಂ ॥ ೨೦ ॥
ಅಕೃತ್ಯಕರಣಂ ಚೈವ ವರ್ಜನೀಯಂ ಸದಾ ಬುಧೈಃ ।
ಅಹೀನಃ ಸರ್ವಕಾರ್ಯೇಷು ಯಃ ಸದಾ ವಿಪ್ರವರ್ತತೇ ॥ ೨೧ ॥
ಸ ಚ ಯೋಗೀ ಮಹಾಪ್ರಾಜ್ಞಃ ಪ್ರಜ್ಞಾಚಕ್ಷುರಹಂ ನ ಧೀಃ ।
ಅಹಂಕಾರೋ ವಿಷಮಿದಂ ಶರೀರೇ ವರ್ತತೇ ನೃಣಾಂ ॥ ೨೨ ॥
ತಸ್ಮಾತ್ಸ ಸರ್ವದಾ ತ್ಯಾಜ್ಯಃ ಸುಪ್ತೇ ದೇವೇ ವಿಶೇಷತಃ ।
ಅನೀಹಯಾ ಜಿತಕ್ರೋಧೋ ಜಿತಲೋಭೋ ಭವೇನ್ನರಃ ॥ ೨೩ ॥
ತಸ್ಯ ಪಾಪಸಹಸ್ರಾಣಿ ದೇಹಾದ್ಯಾಂತಿ ಸಹಸ್ರಧಾ ।
ಮೋಹಂ ಮಾನಂ ಪರಾಜಿತ್ಯ ಶಮರೂಪೇಣ ಶತ್ರುಣಾ ॥ ೨೪ ॥
ವಿಚಾರೇಣ ಶಮೋ ಗ್ರಾಹ್ಯಃ ಸಂತೋಷೇಣ ತಥಾ ಹಿ ಸಃ ।
ಮಾತ್ಸರ್ಯಮೃಜುಭಾವೇನ ನಿಯಚ್ಛೇಸ್ಸಮುನೀಶ್ವರಃ ॥ ೨೫ ॥
ಚಾತುರ್ಮಾಸ್ಯೇ ದಯಾಧರ್ಮೋ ನ ಧರ್ಮೋ ಭೂತವಿದ್ರುಹಾಂ ।
ಸರ್ವದಾ ಸರ್ವದಾನೇಷು ಭೂತದ್ರೋಹಂ ವಿವರ್ಜಯೇತ್ ॥ ೨೬ ॥

---

೨೦—೨೫. ಪರರ ವಸ್ತುವನ್ನು ಕದಿಯುವುದು ಕಳ್ಳತನವೆನಿಸಿಕೊಳ್ಳುವುದು. ಇದನ್ನು ಯಾವಾಗಲೂ ಯಾರೂ ಮಾಡಕೂಡದು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ವಿದ್ವಾಂಸರು ಬ್ರಹ್ಮಸ್ವ, ದೇವಸ್ವಗಳನ್ನೂ, ಅಕಾರ್ಯಕರಣ ವನ್ನೂ ತ್ಯಜಿಸಬೇಕು. ಸಮಸ್ತ ಕಾರ್ಯಗಳಲ್ಲಿಯೂ ಫಲದ ಆಸೆಯಿಲ್ಲದ ವಿಪ್ರನು ಯೋಗಿಯೂ, ಅತ್ಯಂತ ಪ್ರಾಜ್ಞನೂ, ಜ್ಞಾನಚಕ್ಷುವೂ, ಅಹಂಕಾರ ರಹಿತನೂ ಆಗುವನು. ಅಹಂಕಾರವೆಂಬ ವಿಷವು ಸಮಸ್ತ ಮಾನವರ ಶರೀರ ದಲ್ಲಿರುವುದು. ಆದುದರಿಂದ ಚಾತುರ್ಮಾಸ್ಯದಲ್ಲಿ ಅದನ್ನು ವಿಶೇಷವಾಗಿ ತ್ಯಜಿಸಬೇಕು. ನರನು ಆಶೆಯಿಲ್ಲದಿರುವುದರಿಂದ ಕೋಪ, ಲೋಭಗಳನ್ನು ಬಿಡಬೇಕು. ಅಂತಹ ಮನುಷ್ಯನ ಶರೀರದಿಂದ ಅನೇಕ ಪಾಪಗಳು ತೊಲಗು ವುವು. ಶಮರೂಪವಾದ ಶತ್ರುವಿನಿಂದ ಮೋಹ, ಮಾನಗಳನ್ನು ಸೋಲಿಸ ಬೇಕು. ವಿಚಾರದಿಂದ ಶಮವನ್ನೂ, ಸಂತೋಷದಿಂದ ವಿಚಾರವನ್ನೂ ವಶ ಮಾಡಿಕೊಳ್ಳಬೇಕು. ಆರ್ಜವದಿಂದ ಮಾತ್ಸರ್ಯವನ್ನು ನಿಗ್ರಹಿಸಿದವನು ಮುನೀಶ್ವರನಾಗುವನು.

೨೬. ಚಾತುರ್ಮಾಸ್ಯದಲ್ಲಿ ದಯೆಯೇ ಧರ್ಮವಾಗಿರುವುದು. ಭೂತ ದ್ರೋಹದಿಂದ ಧರ್ಮವುಂಟಾಗುವುದಿಲ್ಲ. ಯಾವಾಗಲೂ ಸಮಸ್ತ ದಾನ ಗಳಲ್ಲಿಯೂ ಭೂತ ದ್ರೋಹವನ್ನು ತ್ಯಜಿಸಬೇಕು.

ಏತತ್ಪಾಪಸಹಸ್ರಾಣಾಂ ಮೂಲಂ ಪ್ರಾಹುರ್ಮನೀಷಿಣಃ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಾ ಭೂತದಯಾ ನೃಭಿಃ ॥ ೨೭ ॥
ಸರ್ವೇಷಾಮೇವ ಭೂತಾನಾಂ ಹರಿರ್ನಿತ್ಯಂ ಹೃದಿ ಸ್ಥಿತಃ ।
ಸ ಏವ ಹಿ ಪರಾಭೂತಃ ಯೋ ಭೂತದ್ರೋಹಕಾರಕಃ ॥ ೨೮ ॥
ಯಸ್ಮಿನ್ ಧರ್ಮೇ ದಯಾ ನೈವ ಸ ಧರ್ಮೋ ದೂಷಿತೋ ಮತಃ ।
ದಯಾಂ ವಿನಾ ನ ವಿಜ್ಞಾನಂ ನ ಧರ್ಮೋ ಜ್ಞಾನಮೇವ ಚ ॥ ೨೯ ॥
ತಸ್ಮಾತ್ಸರ್ವಾತ್ಮಭಾವೇನ ದಯಾಧರ್ಮಃ ಸನಾತನಃ ।
ಸೇವ್ಯಃ ಸ ಪುರುಷೈರ್ನಿತ್ಯಂ ಚಾತುರ್ಮಾಸ್ಯೇ ವಿಶೇಷತಃ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಾತುರ್ಮಾಸ್ಯನಿಯಮವಿಧಿಮಾಹಾತ್ಮ್ಯವರ್ಣನಂ" ನಾಮ
ಚತುಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೭. ಈ ಭೂತದ್ರೋಹವು ಅನೇಕ ಪಾಪಗಳಿಗೆ ಕಾರಣವಾದುದು. ಆದುದರಿಂದ ಮಾನವರು ಪ್ರಾಣಿಗಳಲ್ಲಿ ದಯೆಯನ್ನು ಮಾಡಬೇಕು.

೨೮. ಹರಿಯು ಸಮಸ್ತ ಪ್ರಾಣಿಗಳ ಹೃದಯದಲ್ಲಿರುವನು. ಭೂತದ್ರೋಹ ಮಾಡುವವನು ತಿರಸ್ಕಾರಕ್ಕೆ ವಿಷಯನಾಗುವನು.

೨೯. ದಯಾರಹಿತವಾದ ಧರ್ಮವು ದುಷ್ಟಧರ್ಮವಾಗಿರುವುದು. ದಯೆಯಿಲ್ಲದಿದ್ದಲ್ಲಿ, ವಿಜ್ಞಾನ, ಧರ್ಮ, ಜ್ಞಾನಗಳಿರುವುದಿಲ್ಲ.

೩೦. ಆದುದರಿಂದ ಚಾತುರ್ಮಾಸ್ಯದಲ್ಲಿ ನರರು ಯಾವಾಗಲೂ ಸನಾತನವಾದ ದಯಾಧರ್ಮವನ್ನು ವಿಶೇಷವಾಗಿ ಸೇವಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಾತುರ್ಮಾಸ್ಯನಿಯಮವಿಧಿಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ಚಾತುರ್ಮಾಸ್ಯದಾನಮಹಿಮವರ್ಣನಂ.

ಬ್ರಹ್ಮೋವಾಚ:—

ದಾನಧರ್ಮಂ ಪ್ರಶಂಸಂತಿ ಸರ್ವಧರ್ಮೇಷು ಸರ್ವದಾ ।
ಹರೌ ಸುಪ್ತೇ ವಿಶೇಷೇಣ ದಾನಂ ಬ್ರಹ್ಮತ್ವಕಾರಣಂ ॥ ೧ ॥
ಅನ್ನಂ ಬ್ರಹ್ಮ ಇತಿ ಪ್ರೋಕ್ತಂ ಅನ್ನೇ ಪ್ರಾಣಾಃ ಪ್ರತಿಷ್ಠಿತಾಃ ।
ತಸ್ಮಾದನ್ನಪ್ರದೋ ನಿತ್ಯಂ ವಾರಿದಶ್ಚ ಭವೇನ್ನರಃ ॥ ೨ ॥
ವಾರಿದಸ್ತೃಪ್ತಿಮಾಯಾತಿ ಸುಖಮಕ್ಷಯ್ಯಮನ್ನದಃ ।
ವಾರ್ಯನ್ನಯೋಃ ಸಮಂ ದಾನಂ ನ ಭೂತಂ ನ ಭವಿಷ್ಯತಿ ॥ ೩ ॥
ಮಣಿರತ್ನಪ್ರವಾಲಾನಾಂ ರೂಪ್ಯಹಾಟಕವಾಸಸಾಂ ।
ಅನ್ಯೇಷಾಮಪಿ ದಾನಾನಾಂ ಅನ್ನದಾನಂ ವಿಶಿಷ್ಯತೇ ॥ ೪ ॥
ಅನ್ನೋದಕಪ್ರದಾನಂ ಚ ಗೋಪ್ರದಾನಂ ಚ ನಿತ್ಯದಾ ।
ವೇದಪಾಠೋ ವಹ್ನಿಹೋಮಶ್ಚಾತುರ್ಮಾಸ್ಯೇ ಮಹಾಫಲಂ ॥ ೫ ॥

---

### ಕನ್ನಡದ ಅನುವಾದ

#### ಚಾತುರ್ಮಾಸ್ಯದಾನಮಹಿಮವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಚಾತುರ್ಮಾಸ್ಯದಲ್ಲಿ ದಾನರೂಪ ಧರ್ಮವನ್ನು ಸಕಲಧರ್ಮಗಳಲ್ಲಿ ಉತ್ತಮವಾದುದೆಂದು ಹೊಗಳುತ್ತಾರೆ. ದಾನವು ಬ್ರಹ್ಮತ್ವಕ್ಕೆ ಕಾರಣವಾಗುವುದು.

೨. ಅನ್ನವನ್ನು ಬ್ರಹ್ಮವೆನ್ನುವರು. ಅನ್ನದಲ್ಲಿ ಪ್ರಾಣಗಳು ನೆಲೆಸಿರುವುವು. ಆದುದರಿಂದ ಮಾನವನು ಅನ್ನ ನೀರುಗಳನ್ನು ದಾನಮಾಡಬೇಕು.

೩. ನೀರನ್ನು ದಾನಮಾಡಿದವನು ತೃಪ್ತಿಯನ್ನೂ, ಅನ್ನವನ್ನು ನೀಡಿದವನು ಶಾಶ್ವತ ಸುಖವನ್ನೂ ಪಡೆಯುವನು. ಅನ್ನ ನೀರುಗಳಿಗೆ ಸಮಾನವಾದ ದಾನವು ಹಿಂದಿರಲಿಲ್ಲ. ಮುಂದೆಯೂ ಇರುವುದಿಲ್ಲ.

೪. ಮಣಿ, ರತ್ನ, ಹವಳ, ಬೆಳ್ಳಿ, ಚಿನ್ನ, ವಸ್ತ್ರ ಇವುಗಳು ಇತರ ವಸ್ತುಗಳು. ಇವುಗಳ ದಾನಕ್ಕಿಂತ ಅನ್ನದಾನವು ಶ್ರೇಷ್ಠವಾದುದು.

೫. ಅನ್ನ, ನೀರು, ಗೋವು ಇವುಗಳ ದಾನವೂ, ವೇದಾಧ್ಯಯನ, ಹೋಮಗಳೂ ಚಾತುರ್ಮಾಸ್ಯದಲ್ಲಿ ಅತಿಶಯ ಫಲವನ್ನು ಕೊಡುವುವು.

ವೈಕುಂಠಪದವಾಂಛಾ ಚೇದ್ವಿಷ್ಣುನಾ ಸಹ ಸಂಗಮೇ ।
ಸರ್ವಪಾಪಕ್ಷಯಾರ್ಥಾಯ ಚಾತುರ್ಮಾಸ್ಯೇಽನ್ನದೋ ಭವೇತ್ ॥ ೬ ॥
ಸತ್ಯಂ ಸತ್ಯಂ ಹಿ ದೇವರ್ಷೇ ಮಯೋಕ್ತಂ ತವ ನಾರದ ।
ಜನ್ಮಾಂತರ ಸಹಸ್ರೇಷು ನಾದತ್ತಮುಪತಿಷ್ಠತೇ ॥ ೭ ॥
ತಸ್ಮಾದನ್ನಪ್ರದಾನೇನ ಸರ್ವೇಹೃಷ್ಯಂತಿ ಜಂತವಃ ।
ದೇವಾಶ್ಚ ಸ್ಪೃಹಯಂತ್ಯೇನಮನ್ನದಾನಪ್ರದಾಯಿನಂ ॥ ೮ ॥
ಆಜ್ಯಂ ದೇಯಂ ಚ ಪಾತ್ರೇಷು ಶ್ರದ್ಧಯಾ ವಜ್ರಮಿಶ್ರಿತಂ ।
ವಜ್ರದಾನಕರೋ ಮರ್ತ್ಯಶ್ಚಾತುರ್ಮಾಸ್ಯೇ ನ ಮಾನವಃ ॥ ೯ ॥
ಭೋಜನಂ ಗುರುವಿಪ್ರಾಣಾಂ ಘೃತದಾನಂ ಚ ಸತ್ಕ್ರಿಯಾ ।
ಏತಾನಿ ಯಸ್ಯ ತಿಷ್ಠಂತಿ ಚಾತುರ್ಮಾಸ್ಯೇ ನ ಮಾನವಃ ॥ ೧೦ ॥
ಸದ್ಧರ್ಮಃ ಸತ್ಕಥಾಚೈವ ಸತ್ಸೇವಾ ದರ್ಶನಂ ಸತಾಂ ।
ವಿಷ್ಣುಪೂಜಾ ರತಿರ್ದಾನೇ ಚಾತುರ್ಮಾಸ್ಯೇಷು ದುರ್ಲಭಾಃ ॥ ೧೧ ॥
ಪಿತೄನುದ್ದಿಶ್ಯ ಯೋ ಮರ್ತ್ಯಶ್ಚಾತುರ್ಮಾಸ್ಯೇಽನ್ನದೋ ಭವೇತ್ ।
ಸರ್ವಪಾಪವಿಶುದ್ಧಾತ್ಮಾ ಪಿತೃಲೋಕಮವಾಪ್ನುಯಾತ್ ॥ ೧೨ ॥
ದೇವಾಃ ಸರ್ವೇಽನ್ನದಾನೇನ ತೃಪ್ತಾ ಯಚ್ಛಂತಿ ವಾಂಛಿತಂ ।
ಪಿಪೀಲಿಕಾಽಪಿ ಯದ್ಗೇಹಾದ್ಭಕ್ಷ್ಯಮಾದಾಯ ಗಚ್ಛತಿ ॥ ೧೩ ॥

---

೬. ವೈಕುಂಠದಲ್ಲಿ ವಿಷ್ಣುವಿನೊಡನೆ ವಾಸಿಸಲು ಇಷ್ಟವಿದ್ದರೆ ಸಕಲ ಪಾಪಪರಿಹಾರಕ್ಕಾಗಿ ಚಾತುರ್ಮಾಸ್ಯದಲ್ಲಿ ಅನ್ನದಾನ ಮಾಡಬೇಕು.

೭. ದೇವರ್ಷಿಯಾದ ನಾರದನೆ! ನಾನು ಹೇಳಿರುವುದು ನಿಜ. ಅನೇಕ ಜನ್ಮಗಳಲ್ಲಿ ದಾನಮಾಡದಿರುವ ವಸ್ತುವು ಸನ್ನಿಹಿತವಾಗುವುದಿಲ್ಲ.

೮–೯. ಆದುದರಿಂದ ಅನ್ನದಾನಮಾಡುವುದರಿಂದ ಸಕಲ ಪ್ರಾಣಿಗಳು ಸಂತೋಷಗೊಳ್ಳುವುವು. ಅನ್ನದಾನ ಮಾಡುವವನನ್ನು ದೇವತೆಗಳೂ ಅಪೇಕ್ಷಿಸುತ್ತಾರೆ. ಚಾತುರ್ಮಾಸ್ಯದಲ್ಲಿ ಸತ್ಪಾತ್ರರಲ್ಲಿ ಶ್ರದ್ಧೆಯಿಂದ ವಜ್ರದೊಡನೆ ಆಜ್ಯವನ್ನು ದಾನಮಾಡಬೇಕು. ವಜ್ರದಾನ ಮಾಡುವವನು ಮನುಷ್ಯನಾಗಿರುವುದಿಲ್ಲ.

೧೦–೧೧. ಚಾತುರ್ಮಾಸ್ಯದಲ್ಲಿ ಯಾವನ ಮನೆಯಲ್ಲಿ ಗುರು, ವಿಪ್ರರಿಗೆ ಭೋಜನ, ಘೃತದಾನ, ಸನ್ಮಾನಗಳು ನಡೆಯುವುವೊ, ಅವನು ಮನುಷ್ಯನಾಗಿರುವುದಿಲ್ಲ. ಚಾತುರ್ಮಾಸ್ಯದಲ್ಲಿ ಸದ್ಧರ್ಮ, ಸತ್ಕಥಾ, ಸತ್ಸೇವಾ, ಸಜ್ಜನ ದರ್ಶನ, ವಿಷ್ಣುಪೂಜೆಯಲ್ಲಿಯೂ, ದಾನದಲ್ಲಿಯೂ ಆಸಕ್ತಿ ಇವು ದುರ್ಲಭಗಳು.

೧೨–೧೩. ಚಾತುರ್ಮಾಸ್ಯದಲ್ಲಿ ಪಿತೃಗಳನ್ನುದ್ದೇಶಿಸಿ ಅನ್ನದಾನ ಮಾಡುವ ಮಾನವನು ಸಕಲ ಪಾಪಮುಕ್ತನಾಗಿ ಪಿತೃಲೋಕವನ್ನು ಹೊಂದುವನು. ದೇವತೆಗಳೂ ಅನ್ನದಾನದಿಂದ ತೃಪ್ತಿಗೊಂಡು ಇಷ್ಟಾರ್ಥವನ್ನು ಕೊಡುವರು. ಇರುವೆಯೂ ಯಾವನ ಮನೆಯಿಂದ ಭಕ್ಷ್ಯವನ್ನು ತೆಗೆದುಕೊಂಡು ಹೋಗುವುದೊ ಅದೂ ಅನ್ನದಾನವೆನ್ನಿಸುವುದು.

ರಾತ್ರೌ ದಿವಾಽನಿಷಿದ್ಧಾನ್ನೋ ಹ್ಯನ್ನದಾನಮನುತ್ತಮಂ ।
ಹರೌ ಸುಪ್ತೇ ಹಿ ಪಾಪಘ್ನಂ ಸ ದಾರ್ಯಮಪಿ ಶತ್ರುಷು ॥ ೧೪ ॥
ಚಾತುರ್ಮಾಸ್ಯೇ ದುಗ್ಧದಾನಂ ದಧಿ ತಕ್ರಂ ಮಹಾಫಲಂ ।
ಜನ್ಮಕಾಲೇ ಯೇನ ಬದ್ಧಃ ಪಿಂಡಸ್ತದ್ದಾನಮುತ್ತಮಂ ॥ ೧೫ ॥
ಶಾಕಪ್ರದಾತಾ ನರಕಂ ಯಮಲೋಕಂ ನ ಪಶ್ಯತಿ ।
ವಸ್ತ್ರದಃ ಸೋಮಲೋಕಂ ಚ ವಸೇದಾಭೂತಸಂಪ್ಲವಂ ॥ ೧೬ ॥
ಸುಪ್ತೇ ದೇವೇ ಯಥಾಶಕ್ತಿ ಹ್ಯನ್ಯಾಸು ಪ್ರತಿಮಾಸು ಚ ।
ಪುಷ್ಪವಸ್ತ್ರಪ್ರದಾನೇನ ಸಂತಾನಂ ನೈವ ಹೀಯತೇ ॥ ೧೭ ॥
ಚಂದನಾಗರುಧೂಪಂ ಚ ಚಾತುರ್ಮಾಸ್ಯೇ ಪ್ರಯಚ್ಛತಿ ।
ಪುತ್ರಪೌತ್ರ ಸಮಾಯುಕ್ತೋ ವಿಷ್ಣುರೂಪೋ ಭವೇನ್ನರಃ ॥ ೧೮ ॥
ಸುಪ್ತೇ ದೇವೇ ಜಗನ್ನಾಥೇ ಫಲದಾನಂ ಪ್ರಯಚ್ಛತಿ ।
ವಿಪ್ರಾಯ ವೇದವಿದುಷೇ ಯಮಲೋಕಂ ನ ಪಶ್ಯತಿ ॥ ೧೯ ॥
ವಿದ್ಯಾದಾನಂ ಚ ಗೋದಾನಂ ಭೂಮಿದಾನಂ ಪ್ರಯಚ್ಛತಿ ।
ವಿಷ್ಣುಪ್ರೀತ್ಯರ್ಥಮೇವೇಹ ಸ ತಾರಯತಿ ಪೂರ್ವಜಾನ್ ॥ ೨೦ ॥

---

೧೪. ಉತ್ತಮವಾದ ಅನ್ನದಾನವು ಚಾತುರ್ಮಾಸ್ಯದಲ್ಲಿ ರಾತ್ರಿ ಹಗಲೂ ನಿಷಿದ್ಧವಲ್ಲ. ಆ ಅನ್ನದಾನವನ್ನು ಶತ್ರುಗಳಿಗೂ ಮಾಡಬಹುದು.

೧೫. ಚಾತುರ್ಮಾಸ್ಯದಲ್ಲಿ ಹಾಲು, ಮೊಸರು, ಮಜ್ಜಿಗೆ ಇವುಗಳನ್ನು ದಾನಮಾಡುವುದರಿಂದ ಅತಿಶಯ ಫಲವುಂಟಾಗುವುದು. ನರನು ಜನ್ಮಕಾಲದಲ್ಲಿ ಪಿತೃಋಣದಿಂದ ಬದ್ಧನಾಗಿರುವನು. ಆ ಪಿತೃಗಳಿಗಾಗಿ ಮಾಡುವ ಪಿಂಡ ದಾನವು ಉತ್ತಮವಾದುದು.

೧೬. ಶಾಕದಾನ ಮಾಡುವವನು ನರಕ ಮತ್ತು ಯಮಲೋಕಗಳನ್ನು ನೋಡುವುದಿಲ್ಲ. ವಸ್ತ್ರದಾನ ಮಾಡುವವನು ಪ್ರಳಯಕಾಲದವರೆಗೆ ಚಂದ್ರ ಲೋಕದಲ್ಲಿ ವಾಸಿಸುವನು.

೧೭. ವಿಷ್ಣುವು ಮಲಗಿರುವಾಗ ಇತರ ಪ್ರತಿಮೆಗಳಿಗೆ ಪುಷ್ಪ, ವಸ್ತ್ರಗಳನ್ನು ಸಮರ್ಪಿಸುವುದರಿಂದ ಸಂತತಿಹೀನವಾಗುವುದಿಲ್ಲ.

೧೮. ಚಾತುರ್ಮಾಸ್ಯದಲ್ಲಿ ಚಂದನ, ಅಗುರು, ಧೂಪಗಳನ್ನು ದಾನ ಮಾಡುವವನು ಪುತ್ರಪೌತ್ರರಿಂದ ಸಹಿತನಾಗಿ ವಿಷ್ಣುರೂಪನಾಗುವನು.

೧೯. ಶ್ರೀಮನ್ನಾರಾಯಣನು ಮಲಗಿರುವಾಗ ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ಫಲದಾನ ಮಾಡಿದವನು ಯಮಲೋಕವನ್ನು ನೋಡುವುದಿಲ್ಲ.

೨೦. ಈ ಚಾತುರ್ಮಾಸ್ಯದಲ್ಲಿ ವಿಷ್ಣು ಪ್ರೀತಿಗಾಗಿ ವಿದ್ಯೆ, ಗೋವು, ಭೂಮಿ ಗಳನ್ನು ದಾನಮಾಡಿದವನು ತನ್ನ ಪೂರ್ವಿಕರನ್ನು ಉದ್ಧಾರಮಾಡುವನು.

ಗುಡಸೈಂಧವತೈಲಾದಿ ಮಧುತಿಕ್ತತಿಲಾಽನ್ನದಃ ।
ದೇವತಾಯಾಃ ಸಮುದ್ದಿಶ್ಯ ತಾಸಾಂ ಲೋಕಂ ಪ್ರಯಾತಿ ಹಿ ॥ ೨೧ ॥
ಚಾತುರ್ಮಾಸ್ಯೇ ತಿಲಾನ್ ದತ್ವಾ ನ ಭೂಯಃ ಸ್ತನಪೋ ಭವೇತ್ ।
ಯವಪ್ರದಾತಾ ವಸತೇ ವಾಸವಂ ಲೋಕಮಕ್ಷಯಂ ॥ ೨೨ ॥
ಹೂಯೇತ ಹವ್ಯಂ ವಹ್ನೌ ಚ ದಾನಂ ದದ್ಯಾದ್ದ್ವಿಜಾತಯೇ ।
ಗಾವಃ ಸುಪೂಜಿತಾಃ ಕಾರ್ಯಾಶ್ಚಾತುರ್ಮಾಸ್ಯೇ ವಿಶೇಷತಃ ॥ ೨೩ ॥
ಯತ್ಕಿಂಚಿತ್ಸುಕೃತಂ ಕರ್ಮ ಜನ್ಮಾವಧಿ ಸುಸಂಚಿತಂ ।
ಚಾತುರ್ಮಾಸ್ಯೇ ಗತೇ ಪಾತ್ರೇ ವಿಮುಖೇ ಯನ್ನದೀಯತೇ ॥ ೨೪ ॥
ಪ್ರಣಶ್ಯತಿ ಕ್ಷಣಾದೇವ ವಚನಾದ್ಯಸ್ತು ಪ್ರಚ್ಯುತಃ ।
ದಿವಸೇ ದಿವಸೇ ತಸ್ಯ ವರ್ಧತೇ ಚ ಪ್ರತಿಶ್ರುತಂ ॥ ೨೫ ॥
ತಸ್ಮಾನ್ನೈವ ಪ್ರತಿಶ್ರಾವ್ಯಂ ಸ್ವಲ್ಪಮಪ್ಯಾಶು ದೀಯತೇ ।
ತಾವದ್ವಿವರ್ಧತೇ ದಾನಂ ಯಾವತ್ತನ್ನಪ್ರಯಚ್ಛತಿ ॥ ೨೬ ॥
ಯೋ ಮೋಹಾನ್ನಸುಜೋ ಲೋಕೇ ಯಾವತ್ಕೋಟಿಗುಣಂ ಭವೇತ್ ।
ತತೋ ದಶಗುಣಾ ವೃದ್ಧಿಶ್ಚಾತುರ್ಮಾಸ್ಯೇ ಪ್ರದಾತರಿ ॥ ೨೭ ॥
ನರಕೇ ಪತನಂ ತಸ್ಯ ಯಾವದಿಂದ್ರಾಶ್ಚತುರ್ದಶ ।
ಹತಸ್ತು ಸರ್ವದಾ ದೇಯಂ ನರೈರ್ಯತ್ತು ಪ್ರತಿಶ್ರುತಂ ॥ ೨೮ ॥

---

೨೧-೨೨. ದೇವತೆಯನ್ನುದ್ದೇಶಿಸಿ ಬೆಲ್ಲ, ಉಪ್ಪು, ತೈಲ, ಜೇನು, ತಿಲ ಇವುಗಳಿಂದ ಮಿಶ್ರವಾದ ಅನ್ನವನ್ನು ದಾನಮಾಡುವವನು ಆ ದೇವತೆಯ ಲೋಕಕ್ಕೆ ತೆರಳುವನು. ಚಾತುರ್ಮಾಸ್ಯದಲ್ಲಿ ತಿಲದಾನ ಮಾಡಿದವನು ಮರಳಿ ಜನಿಸುವುದಿಲ್ಲ. ಯವೆಯನ್ನು ದಾನಮಾಡಿದವನು ಅಕ್ಷಯವಾದ ಇಂದ್ರಲೋಕದಲ್ಲಿ ವಾಸಿಸುವನು.

೨೩. ಚಾತುರ್ಮಾಸ್ಯದಲ್ಲಿ ಅಗ್ನಿಯಲ್ಲಿ ಹವಿಸ್ಸಿನಿಂದ ಹೋಮ ಮಾಡಬೇಕು. ಬ್ರಾಹ್ಮಣರಿಗೆ ದಾನವನ್ನೀಯಬೇಕು. ಗೋವುಗಳನ್ನು ಪೂಜಿಸಬೇಕು.

೨೪-೨೬. ಚಾತುರ್ಮಾಸ್ಯದಲ್ಲಿ ಸತ್ಪಾತ್ರನು ದಾನವನ್ನು ಪಡೆಯದೆ ವಿಮುಖನಾದರೆ ಯಜಮಾನನು ಜನ್ಮಾವಧಿ ಮಾಡಿದ ಪುಣ್ಯವು ನಾಶವಾಗುವುದು. ಮಾತು ಕೊಟ್ಟುದನ್ನು ತಪ್ಪಿದರೆ ಮಾನವನು ತಕ್ಷಣವೇ ನಾಶವಾಗುತ್ತಾನೆ. ಪ್ರತಿಜ್ಞೆ ಮಾಡಿದುದು ಪ್ರತಿದಿನವೂ ವೃದ್ಧಿಯಾಗುವುದು. ಆದುದರಿಂದ ಪ್ರತಿಜ್ಞೆ ಮಾಡಬಾರದು. ಸ್ವಲ್ಪವಾಗಿದ್ದರೂ ಕೂಡಲೇ ಕೊಡಬೇಕು. ದಾನವು ಕೊಡುವವರೆಗೆ ವೃದ್ಧಿಯಾಗುತ್ತಿರುವುದು.

೨೭-೨೮. ಭ್ರಾಂತಿಯಿಂದ ಪ್ರತಿಜ್ಞೆ ಮಾಡಿದ್ದನ್ನು ಕೊಡದಿದ್ದರೆ ಅದು ಕೋಟಿ ಮಡಿಯಷ್ಟು ಹೆಚ್ಚುವುದು. ಕೂಡಲೆ ದಾನಮಾಡಿದರೆ ಅದರ ಫಲವು ಅದಕ್ಕಿಂತ ಹತ್ತರಷ್ಟು ವೃದ್ಧಿಯಾಗುವುದು. ದಾನಮಾಡದವನು ಹದಿನಾಲ್ಕು ಮಂದಿ ಇಂದ್ರರ ಕಾಲದವರೆಗೆ ನರಕವಾಸಿಯಾಗುವನು. ಆದುದರಿಂದ ನರರು ಪ್ರತಿಜ್ಞೆ ಮಾಡಿದ್ದನ್ನು ಕೊಡಬೇಕು.

ಅನ್ಯಸ್ಮೈ ನ ಪ್ರದಾತವ್ಯಂ ಪ್ರದತ್ತಂ ನಾಪಹಾರಯೇತ್ ।
ಚಾತುರ್ಮಾಸ್ಯೇಷು ಯಃ ಶಯ್ಯಾಂ ದ್ವಿಜಾಗ್ರ್ಯಾಯ ಪ್ರಯಚ್ಛತಿ ॥ ೨೯ ॥
ವೇದೋಕ್ತೇನ ವಿಧಾನೇನ ನ ಸ ಯಾತಿ ಯಮಾಲಯಂ ।
ಆಸನಂ ವಾರಿಪಾತ್ರಂ ಚ ಭಾಜನಂ ತಾಮ್ರಭಾಜನಂ ॥ ೩೦ ॥
ಚಾತುರ್ಮಾಸ್ಯೇ ಪ್ರಯತ್ನೇನ ದೇಯಂ ವಿತ್ತಾನುಸಾರತಃ ।
ಸರ್ವದಾನಾನಿ ವಿಪ್ರೇಭ್ಯೋ ದದತ್ಸುಪ್ತೇ ಜಗದ್ಗುರೌ ॥ ೩೧ ॥
ಆತ್ಮಾನಂ ಪೂರ್ವಜೈಃ ಸಾರ್ಧಂ ಸಮೋಚಯತಿ ಪಾತಕಾತ್ ।
ಗೌರ್ಭೂರ್ಮಿಶ್ಚ ತಿಲಪಾತ್ರಂ ಚ ದೀಪದಾನಮನುತ್ತಮಂ ॥ ೩೨ ॥
ದದದ್ದ್ವಿಜಾತಯೇ ಮುಕ್ತೋ ಜಾಯತೇ ಸ ಋಣತ್ರಯಾತ್ ॥ ೩೩ ॥

ಸ ವಿಶ್ವಕರ್ತಾ ಭುವನೇಷು ಗೋಪ್ತಾ
ಸ ಯಜ್ಞಭುಕ್ಸರ್ವಫಲಪ್ರದಶ್ಚ ।
ದಾನಾನಿ ವಸ್ತುಷ್ವಧಿದೈವತಂ ಚ
ಯಸ್ಮಿನ್ ಸಮುದ್ದಿಶ್ಯ ದದಾತಿ ಮುಕ್ತಃ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಾತುರ್ಮಾಸ್ಯದಾನಮಹಿಮವರ್ಣನಂ" ನಾಮ
ಪಂಚತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೯–೩೩. ಮತ್ತು ಯಾರಿಗೆ ದಾನ ಕೊಡುವುದಾಗಿ ಪ್ರತಿಜ್ಞೆ ಮಾಡಿರುವನೊ ಅವನಿಗೇ ಕೊಡಬೇಕು. ಇತರರಿಗೆ ಕೊಡಕೂಡದು. ಕೊಟ್ಟುದನ್ನು ಅಪಹರಿಸ ಬಾರದು. ಚಾತುರ್ಮಾಸ್ಯದಲ್ಲಿ ವೇದೋಕ್ತ ವಿಧಿಯಿಂದ ಬ್ರಾಹ್ಮಣೋತ್ತಮನಿಗೆ ಹಾಸಿಗೆಯನ್ನು ದಾನಮಾಡಿದವನು ಯಮಪುರಿಗೆ ಹೋಗುವುದಿಲ್ಲ. ಚಾತುರ್ಮಾಸ್ಯ ದಲ್ಲಿ ತನ್ನಲ್ಲಿರುವ ದ್ರವ್ಯವನ್ನನುಸರಿಸಿ ಆಸನ, ಜಲಪಾತ್ರೆ, ತಾಮ್ರಪಾತ್ರೆ ಇವುಗಳನ್ನು ದಾನಮಾಡಬೇಕು. ವಿಷ್ಣುವು ಮಲಗಿರುವಾಗ ಬ್ರಾಹ್ಮಣರಿಗೆ ಸಕಲ ದಾನಗಳನ್ನು ಮಾಡುವವನು ತನ್ನನ್ನು ಪೂರ್ವಿಕರೊಡನೆ ಪಾತಕದಿಂದ ಪಾರುಮಾಡುವನು. ಗೋವು, ಭೂಮಿ, ಎಳ್ಳಿನಪಾತ್ರೆ, ಉತ್ತಮವಾದ ದೀಪ ಇವುಗಳನ್ನು ಬ್ರಾಹ್ಮಣರಿಗೆ ಕೊಡುವವನು ಋಣತ್ರಯದಿಂದ ಮುಕ್ತನಾಗುವನು.

೩೪. ವಿಷ್ಣುವು ವಿಶ್ವಕರ್ತನೂ ಲೋಕರಕ್ಷಕನೂ, ಯಜ್ಞಭೋಗಿಯೂ, ಸಕಲ ಫಲಪ್ರದನೂ, ವಸ್ತುಗಳ ಅಧಿದೇವತೆಯೂ ಆಗಿರುವನು. ಅವನನ್ನು ಉದ್ದೇಶಿಸಿ ದಾನಗಳನ್ನಿತ್ತವನು ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಾತುರ್ಮಾಸ್ಯದಾನಮಹಿಮವರ್ಣನ" ವೆಂಬ
ಇನ್ನೂರ ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

## ಇಷ್ಟವಸ್ತುಪರಿತ್ಯಾಗನುಹಿಮವರ್ಣನಂ

ಬ್ರಹ್ಮೋವಾಚ :—

ಇಷ್ಟವಸ್ತುಪ್ರದೋ ವಿಷ್ಣುರ್ಲೋಕಶ್ಚೇಷ್ಟರುಚಿಃ ಸದಾ ।
ತಸ್ಮಾತ್ಸರ್ವಪ್ರಯತ್ನೇನ ಚಾತುರ್ಮಾಸ್ಯೇ ತ್ಯಜೇಚ್ಚ ತತ್ ॥ ೧ ॥
ನಾರಾಯಣಸ್ಯ ಪ್ರೀತ್ಯರ್ಥಂ ತದೇವಾಕ್ಷಯ್ಯಮಾಪ್ಯತೇ ।
ಮರ್ತ್ಯಸ್ತ್ಯಜತಿ ಶ್ರದ್ಧಾವಾನ್ ಸೋಽನಂತಫಲಭಾಗ್ಭವೇತ್ ॥ ೨ ॥
ಕಾಂಸ್ಯಭಾಜನಸಂತ್ಯಾಗಾದ್ರಾಜಾಯತೇ ಭೂಪತಿರ್ಭುವಿ ।
ಪಾಲಾಶಪತ್ರೇ ಭುಂಜಾನೋ ಬ್ರಹ್ಮಭೂಯಸ್ತ್ವಮಶ್ನುತೇ ॥ ೩ ॥
ತಾಮ್ರಪಾತ್ರೇ ನ ಭುಂಜೀತ ಕದಾಚಿದ್ವಾ ಗೃಹೀ ನರಃ ।
ಚಾತುರ್ಮಾಸ್ಯೇ ವಿಶೇಷೇಣ ತಾಮ್ರಪಾತ್ರಂ ವಿವರ್ಜಯೇತ್ ॥ ೪ ॥
ಅರ್ಕಪತ್ರೇಷು ಭುಂಜಾನೋಽನುಪಮಂ ಲಭತೇ ಫಲಂ ।
ವಟಪತ್ರೇಷು ಭೋಕ್ತವ್ಯಂ ಚಾತುರ್ಮಾಸ್ಯೇ ವಿಶೇಷತಃ ॥ ೫ ॥

---

## ಕನ್ನಡದ ಅನುವಾದ

### ಇಷ್ಟವಸ್ತುಪರಿತ್ಯಾಗನುಹಿಮವರ್ಣನ

೧–೨. ಬ್ರಹ್ಮನು ಹೇಳುತ್ತಾನೆ:—ವಿಷ್ಣುವು ಯಾವಾಗಲೂ ಇಷ್ಟವಸ್ತುಗಳನ್ನು ಕೊಡುವವನು. ಜನರು ಇಷ್ಟವಸ್ತುಗಳಲ್ಲಿ ಅಭಿಲಾಷೆಯುಳ್ಳವರು. ಆದುದರಿಂದ ಚಾತುರ್ಮಾಸ್ಯದಲ್ಲಿ ಇಷ್ಟವಸ್ತುವನ್ನು ನಾರಾಯಣನ ಪ್ರೀತಿಗಾಗಿ ಶ್ರದ್ಧೆಯಿಂದ ತ್ಯಜಿಸಬೇಕು. ಅದರಿಂದ ನರನು ಅಕ್ಷಯ ಲೋಕವನ್ನು ಪಡೆಯುವನು. ಅನಂತ ಫಲವನ್ನೂ ಹೊಂದುವನು.

೩. ಮಾನವನು ಕಂಚಿನ ಪಾತ್ರೆಯನ್ನು ತ್ಯಜಿಸುವುದರಿಂದ ರಾಜನಾಗುವನು. ಮುತ್ತುಗದ ಎಲೆಯಲ್ಲಿ ಭುಂಜಿಸುವವನು ಬ್ರಹ್ಮತ್ವವನ್ನು ಹೊಂದುವನು.

೪. ಗೃಹಸ್ಥನು ಯಾವಾಗಲೂ ತಾಮ್ರಪಾತ್ರೆಯಲ್ಲಿ ಊಟಮಾಡಕೂಡದು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ತಾಮ್ರಪಾತ್ರೆಯನ್ನು ತ್ಯಜಿಸಬೇಕು.

೫. ಎಕ್ಕದ ಎಲೆಯಲ್ಲಿ ಭುಜಿಸುವವನು ಉತ್ತಮ ಫಲವನ್ನು ಪಡೆಯುವನು. ಚಾತುರ್ಮಾಸ್ಯದಲ್ಲಿ ಆಲದೆಲೆಯಲ್ಲಿ ಭುಂಜಿಸಬೇಕು.

ಅಶ್ವತ್ಥಪತ್ರಸಂಭೋಗಃ ಕಾರ್ಯೋ ಬುಧಜನೈಃ ಸದಾ ।
ಏಕಾಽನ್ನಭೋಜೀ ರಾಜಾಸ್ಯಾತ್ಸಕಲೇ ಭೂಮಿಮಂಡಲೇ ॥ ೬ ॥
ತಥಾ ಚ ಲವಣ ತ್ಯಾಗಾತ್ಸುಭಗೋ ಜಾಯತೇ ನರಃ ।
ಗೋಧೂಮಾಽನ್ನಪರಿತ್ಯಾಗಾಜ್ಜಾಯತೇ ಜನವಲ್ಲಭಃ ॥ ೭ ॥
ಅಶಾಕಭೋಜೀ ದೀರ್ಘಾಯುಶ್ಚಾತುರ್ಮಾಸ್ಯೇಽಭಿಜಾಯತೇ ।
ರಸತ್ಯಾಗಾನ್ಮಹಾಪ್ರಾಣೀ ಮಧುತ್ಯಾಗಾತ್ಸುಲೋಚನಃ ॥ ೮ ॥
ಮುದ್ಗತ್ಯಾಗಾದ್ರಿಪುಮ್ಮೃತೀ ರಾಜಮಾಷಾದ್ಧನಾಢ್ಯತಾ ।
ಅಶ್ವಾಪ್ತಿಸ್ತಂಡುಲತ್ಯಾಗಾಚ್ಚಾತುರ್ಮಾಸ್ಯೇಽಭಿಜಾಯತೇ ॥ ೯ ॥
ಫಲತ್ಯಾಗಾದ್ಬಹುಸುತಸ್ತೈಲತ್ಯಾಗಾತ್ಸುರೂಪತಾ ।
ಜ್ಞಾನೀತುವರಿಸಂತ್ಯಾಗಾದ್ಬಲಂ ವೀರ್ಯಂ ಸದೈವ ಹಿ ॥ ೧೦ ॥
ಮಾರ್ಗಮಾಂಸಪರಿತ್ಯಾಗಾನ್ನರಕಂ ನ ಚ ಪಶ್ಯತಿ ।
ಶೌಕರಸ್ಯ ಪರಿತ್ಯಾಗಾದ್ಬ್ರಹ್ಮವಾಸಮವಾಪ್ನುಯಾತ್ ॥ ೧೧ ॥
ಜ್ಞಾನಂ ಲಾವಕ ಸಂತ್ಯಾಗಾದಾಜ್ಯತ್ಯಾಗೇ ಮಹತ್ಸುಖಂ ।
ಆಸವಂ ಸಂಪರಿತ್ಯಜ್ಯ ಮುಕ್ತಿಸ್ತಸ್ಯ ನ ದುರ್ಲಭಾ ॥ ೧೨ ॥

---

೬–೭. ವಿದ್ವಾಂಸರು ಯಾವಾಗಲೂ ಅಶ್ವತ್ಥದೆಲೆಯಲ್ಲಿ ಭೋಜನಮಾಡಬೇಕು. ದಿನಕ್ಕೆ ಒಂದುಸಾರಿ ಭೋಜನಮಾಡುವವನು ಸಮಸ್ತ ಭೂಮಂಡಲಕ್ಕೆ ರಾಜನಾಗುವನು. ಹಾಗೆಯೇ ಮನುಷ್ಯನು ಉಪ್ಪನ್ನು ತ್ಯಜಿಸುವುದರಿಂದ ಸೌಭಾಗ್ಯವುಳ್ಳವನೂ, ಗೋಧಿಯನ್ನು ಬಿಡುವುದರಿಂದ ಜನರಿಗೆ ಪ್ರಿಯನೂ ಆಗುವನು.

೮. ಚಾತುರ್ಮಾಸ್ಯದಲ್ಲಿ ತರಕಾರಿಯನ್ನು ತಿನ್ನದವನು ದೀರ್ಘಾಯುಷ್ಮಂತನೂ, ರಸವಸ್ತುವನ್ನು ತ್ಯಜಿಸುವುದರಿಂದ ಅತಿ ಬಲವಂತನೂ, ಜೇನನ್ನು ಬಿಡುವುದರಿಂದ ಒಳ್ಳೆ ಕಣ್ಣುಗಳುಳ್ಳವನೂ ಆಗುವನು.

೯. ಹೆಸರನ್ನು ತ್ಯಜಿಸುವುದರಿಂದ ಶತ್ರುಗಳನ್ನು ಜಯಿಸುವವನೂ, ಅಲಸಂದಿಯನ್ನು ಬಿಡುವುದರಿಂದ ಧನವಂತನೂ ಆಗುವನು. ಅಕ್ಕಿಯನ್ನು ಬಿಡುವುದರಿಂದ ಅಶ್ವಲಾಭವುಂಟಾಗುವುದು.

೧೦. ಫಲತ್ಯಾಗದಿಂದ ಅನೇಕ ಮಕ್ಕಳುಳ್ಳವನೂ, ತೈಲತ್ಯಾಗದಿಂದ ಸುಂದರನೂ, ತೊಗರಿಯನ್ನು ಬಿಡುವುದರಿಂದ ಜ್ಞಾನಿಯೂ ಆಗುವನಲ್ಲದೆ ಯಾವಾಗಲೂ ಬಲವೀರ್ಯಗಳುಂಟಾಗುವುವು.

೧೧. ಜಿಂಕೆಯ ಮಾಂಸವನ್ನು ಬಿಡುವುದರಿಂದ ನರಕವನ್ನು ನೋಡುವುದಿಲ್ಲ. ಹಂದಿಯ ಮಾಂಸವನ್ನು ಬಿಡುವುದರಿಂದ ಬ್ರಹ್ಮಲೋಕವನ್ನು ಹೊಂದುವನು.

೧೨. ತಿತ್ತಿರಿಪಕ್ಷಿಯ ಮಾಂಸತ್ಯಾಗದಿಂದ ಜ್ಞಾನವೂ, ತುಪ್ಪವನ್ನು ತ್ಯಜಿಸುವುದರಿಂದ ಅತ್ಯಂತ ಸೌಖ್ಯವೂ ಉಂಟಾಗುವುದು. ಆಸವಗಳನ್ನು ತ್ಯಜಿಸಿದವನಿಗೆ ಮುಕ್ತಿಯು ದುರ್ಲಭವಾಗುವುದಿಲ್ಲ.

ಸಬಲಃ ಕನಕತ್ಯಾಗಾದ್ರೂಪ್ಯತ್ಯಾಗೇನ ಮಾನುಷಃ ।
ದಧಿ ದುಗ್ಧ ಪರಿತ್ಯಾಗೀ ಗೋಲೋಕೇ ಸುಖಭಾಗ್ಭವೇತ್ ॥ ೧೩ ॥
ಬ್ರಹ್ಮಾ ಪಾಯಸಸಂತ್ಯಾಗಾತ್ಕ್ಷಿಪ್ರಾತ್ಯಾಗಾನ್ಮಹೇಶ್ವರಃ ।
ಕಂದರ್ಪೋಽಪೂಪ ಸಂತ್ಯಾಗಾನ್ಮೋದಕತ್ಯಾಜಕಃ ಸುಖೀ ॥ ೧೪ ॥
ಗೃಹಾಶ್ರಮ ಪರಿತ್ಯಾಗೀ ಚಾಹ್ಯಾಶ್ರಮ ನಿಷೇವಕಃ ।
ಚಾತುರ್ಮಾಸ್ಯಂ ಹರಿಪ್ರೀತ್ಯೈ ನ ಮಾತುರ್ಜಠರೇ ಶಿಶುಃ ॥ ೧೫ ॥
ನೃಪೋ ಮರೀಚ ಸಂತ್ಯಾಗಾಚ್ಛುಂಠೀ ತ್ಯಾಗೇನ ಸತ್ಕವಿಃ ।
ಶರ್ಕರಾಯಾಃ ಪರಿತ್ಯಾಗಾಜ್ಜಾಯತೇ ರಾಜಪೂಜಿತಃ ॥ ೧೬ ॥
ಗುಡತ್ಯಾಗಾನ್ಮಹಾಭೂತಿಸ್ತಥಾ ದಾಡಿಮವರ್ಜನಾತ್ ।
ರಕ್ತವಸ್ತ್ರ ಪರಿತ್ಯಾಗಾಜ್ಜಾಯತೇ ಜನವಲ್ಲಭಃ ॥ ೧೭ ॥
ಪಟ್ಟಕೂಲಪರಿತ್ಯಾಗಾದಕ್ಷಯ್ಯಂ ಸ್ವರ್ಗಮಾಪ್ನುಯಾತ್ ।
ಮಾಷಾನ್ನ ಚಣಕಾನ್ನಸ್ಯ ತ್ಯಾಗಾನ್ನೈವ ಪುನರ್ಭವಃ ॥ ೧೮ ॥
ಕೃಷ್ಣವಸ್ತ್ರಂ ಸದಾ ತ್ಯಾಜ್ಯಂ ಚಾತುರ್ಮಾಸ್ಯೇ ವಿಶೇಷತಃ ।
ಸೂರ್ಯಸಂದರ್ಶನಾಚ್ಛುದ್ಧಿರ್ನೀಲವಸ್ತ್ರಸ್ಯ ದರ್ಶನಾತ್ ॥ ೧೯ ॥

---

೧೩. ಚಿನ್ನವನ್ನು ತ್ಯಜಿಸುವುದರಿಂದ ಬಲಿಷ್ಠನೂ ಬೆಳ್ಳಿಯನ್ನು ಬಿಡುವುದರಿಂದ ಮನುಷ್ಯನೂ ಆಗುವನು. ಮೊಸರು, ಹಾಲನ್ನು ತ್ಯಜಿಸುವವನು ಗೋಲೋಕದಲ್ಲಿ ಸುಖವನ್ನು ಪಡೆಯುವನು.

೧೪–೧೫. ಪಾಯಸವನ್ನು ತ್ಯಜಿಸುವುದರಿಂದ ಬ್ರಹ್ಮನೂ, ಕ್ಷಿಪ್ರಾ ತ್ಯಾಗದಿಂದ ಮಹೇಶ್ವರನೂ, ಅಪೂಪವನ್ನು ಬಿಡುವುದರಿಂದ ಮನ್ಮಥನೂ, ಮೋದಕ ತ್ಯಾಗದಿಂದ ಸುಖಿಯೂ ಆಗುವನು. ಚಾತುರ್ಮಾಸ್ಯದಲ್ಲಿ ಗೃಹಸ್ಥಾಶ್ರಮವನ್ನು ತ್ಯಜಿಸಿ ಸನ್ನ್ಯಾಸಾಶ್ರಮವನ್ನು ಹರಿಪ್ರೀತಿಗಾಗಿ ಆಶ್ರಯಿಸುವವನು ಮರಳಿ ತಾಯಿಯ ಹೊಟ್ಟೆಯಲ್ಲಿ ಜನಿಸುವುದಿಲ್ಲ.

೧೬. ಮೆಣಸಿನ ಕಾಯಿಯನ್ನು ಬಿಡುವುದರಿಂದ ದೊರೆಯೂ, ಶುಂಠಿಯನ್ನು ಬಿಡುವುದರಿಂದ ಸತ್ಕವಿಯೂ, ಸಕ್ಕರೆಯ ತ್ಯಾಗದಿಂದ ರಾಜಪೂಜಿತನೂ ಆಗುವನು.

೧೭. ಬೆಲ್ಲವನ್ನೂ ದಾಳಿಂಬರೆ ಹಣ್ಣನ್ನೂ ಬಿಡುವುದರಿಂದ ಅಧಿಕೈಶ್ವರ್ಯವು ಉಂಟಾಗುವುದು. ಕೆಂಪು ಬಟ್ಟೆಯನ್ನು ಬಿಡುವುದರಿಂದ ಜನಪ್ರಿಯನಾಗುವನು.

೧೮. ರೇಷ್ಮೆವಸ್ತ್ರವನ್ನು ತ್ಯಜಿಸುವುದರಿಂದ ಅಕ್ಷಯವಾದ ಸ್ವರ್ಗವನ್ನೂ, ಉದ್ದು ಕಡಲೆಗಳ ಅನ್ನವನ್ನು ಬಿಡುವುದರಿಂದ ಪುನರ್ಜನ್ಮವಿಲ್ಲದವನೂ ಆಗುವನು.

೧೯. ಕೃಷ್ಣವಸ್ತ್ರವನ್ನು ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ತ್ಯಜಿಸಬೇಕು. ನೀಲವಸ್ತ್ರವನ್ನುಟ್ಟವನ ದರ್ಶನದಿಂದುಂಟಾಗುವ ದೋಷವು ಸೂರ್ಯದರ್ಶನದಿಂದ ಪರಿಹಾರವಾಗುವುದು.

ಚಂದನಸ್ಯ ಪರಿತ್ಯಾಗಾದ್ಗಾಂಧರ್ವಂ ಲೋಕಮಶ್ನುತೇ ।
ಕರ್ಪೂರರಸ್ಯ ಪರಿತ್ಯಾಗಾದ್ಯಾವಜ್ಜೀವಂ ಮಹಾಧನೀ ॥ ೨೦ ॥
ಕುಸುಂಭಸ್ಯ ಪರಿತ್ಯಾಗಾನ್ನೈವ ಪಶ್ಯೇದ್ಯಮಾಲಯಂ ।
ಕೇಶರಸ್ಯ ಪರಿತ್ಯಾಗಾನ್ಮನುಷ್ಯೋ ರಾಜವಲ್ಲಭಃ ॥ ೨೧ ॥
ಯಕ್ಷಕರ್ದಮಸಂತ್ಯಾಗಾದ್ಬ್ರಹ್ಮಲೋಕೇ ಮಹೀಯತೇ ।
ಜ್ಞಾನೀ ಪುಷ್ಪಪರಿತ್ಯಾಗಾಚ್ಛಯ್ಯಾತ್ಯಾಗೇ ಮಹತ್ಸುಖಂ ॥ ೨೨ ॥
ಭಾರ್ಯಾವಿಯೋಗಂ ನಾಪ್ನೋತಿ ಚಾತುರ್ಮಾಸ್ಯೇ ನ ಸಂಶಯಃ ।
ಅಲೀಕವಾದಸಂತ್ಯಾಗಾನ್ಮೋಕ್ಷದ್ವಾರಮಪಾವೃತಂ ॥ ೨೩ ॥
ಪರಮರ್ಮಪ್ರಕಾಶಶ್ಚ ಸದ್ಯಃ ಪಾಪಸಮಾಗಮಃ ।
ಚಾತುರ್ಮಾಸ್ಯೇ ಹರೌ ಸುಪ್ತೇ ಪರನಿಂದಾಂ ವಿವರ್ಜಯೇತ್ ॥ ೨೪ ॥
ಪರನಿಂದಾ ಮಹಾಪಾಪಂ ಪರನಿಂದಾ ಮಹಾಭಯಂ ।
ಪರನಿಂದಾ ಮಹದ್ದುಃಖಂ ನ ತಸ್ಯಾಃ ಪಾತಕಂ ಪರಂ ॥ ೨೫ ॥
ಕೇವಲಂ ನಿಂದನೇ ಚೈವ ತತ್ಪಾಪಂ ಲಭತೇ ಗುರು ।
ಯಥಾ ಶೃಣ್ವನ ಏವ ಸ್ಯಾತ್ಪಾತಕೀ ನ ತತಃ ಪರಃ ॥ ೨೬ ॥

---

೨೦. ಚಂದನತ್ಯಾಗದಿಂದ ಗಂಧರ್ವಲೋಕಕ್ಕೆ ತೆರಳುವನು. ಕರ್ಪೂರವನ್ನು ತ್ಯಜಿಸುವುದರಿಂದ ಬದುಕಿರುವವರೆಗೆ ಅತ್ಯಂತ ಧನಿಕನಾಗುವನು.

೨೧. ಕುಸುಂಭವನ್ನು ತ್ಯಜಿಸುವುದರಿಂದ ಯಮಲೋಕವನ್ನು ನೋಡುವುದಿಲ್ಲ. ಕೇಸರವನ್ನು ಬಿಡುವುದರಿಂದ ರಾಜಪ್ರಿಯನಾಗುವನು.

೨೨–೨೩. ಗಂಧ ಮೊದಲಾದುವುಗಳಿಂದ ಸುವಾಸನೆಯಾದ ವಸ್ತುವನ್ನು ತ್ಯಜಿಸುವುದರಿಂದ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು. ಪುಷ್ಪತ್ಯಾಗದಿಂದ ಜ್ಞಾನಿಯೂ, ಹಾಸಿಗೆಯನ್ನು ಬಿಡುವುದರಿಂದ ಅತಿಶಯ ಸುಖಿಯೂ ಆಗುವನು. ಮತ್ತು ಭಾರ್ಯಾವಿಯೋಗವನ್ನು ಹೊಂದುವುದಿಲ್ಲ. ಸುಳ್ಳಾಡದೆ ಇರುವವನಿಗೆ ಮೋಕ್ಷದ್ವಾರವು ತೆರೆದಿರುವುದು.

೨೪. ಪರರ ಮರ್ಮವನ್ನು ಪ್ರಕಾಶಗೊಳಿಸಿದರೆ ಕೂಡಲೆ ಪಾಪವು ಸಂಭವಿಸುವುದು. ಚಾತುರ್ಮಾಸ್ಯದಲ್ಲಿ ಹರಿಯು ಮಲಗಿರಲು ಪರನಿಂದೆಯನ್ನು ಬಿಡಬೇಕು.

೨೫. ಪರನಿಂದೆಯು ಅತಿಶಯಪಾಪಕರವೂ, ಅತಿಭಯಂಕರವೂ, ಅತಿ ದುಃಖದಾಯಕವೂ ಆಗಿರುವುದು. ಅದಕ್ಕಿಂತ ಹೆಚ್ಚಾದ ಪಾಪವಿಲ್ಲ.

೨೬. ಪರರ ನಿಂದೆಯನ್ನು ಕೇಳುವವನಿಗಿಂತ ನಿಂದಿಸುವವನು ಹೆಚ್ಚು ಪಾಪವನ್ನು ಹೊಂದುವನು.

ಕೇಶಸಂಸ್ಕಾರ ಸಂತ್ಯಾಗಾತ್ತಾಪತ್ರಯವಿವರ್ಜಿತಃ ।
ನಖರೋಮಧರೋ ಯಸ್ತು ಹರೌ ಸುಪ್ತೇ ವಿಶೇಷತಃ ॥ ೨೭ ॥
ದಿವಸೇ ದಿವಸೇ ತಸ್ಯ ಗಂಗಾಸ್ನಾನಫಲಂ ಭವೇತ್ ॥ ೨೮ ॥
ಸರ್ವೋಪಾಯೈರ್ವಿಷ್ಣುರೇವ ಪ್ರಸಾದ್ಯೋ
ಯೋಗಿಧ್ಯೇಯಃ ಪ್ರವರೈಃ ಸರ್ವವರ್ಣೈಃ ।
ವಿಷ್ಣೋರ್ನಾಮ್ನಾ ಮುಚ್ಯತೇ ಘೋರಬಂಧಾ
ಚ್ಚಾತುರ್ಮಾಸ್ಯೇ ಸ್ಮರ್ಯತೇಽಸೌ ವಿಶೇಷಾತ್ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಇಷ್ಟವಸ್ತುಪರಿತ್ಯಾಗಮಹಿಮವರ್ಣನಂ" ನಾಮ
ಷಟ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೭–೨೮. ತಲೆಗೂದಲುಗಳನ್ನು ಬಾಚದೆ ಇರುವುದರಿಂದ ತಾಪತ್ರಯವಿಲ್ಲದವನಾಗುವನು. ಉಗುರು, ರೋಮಗಳನ್ನು ಧರಿಸಿರುವವನು ಪ್ರತಿದಿನವೂ ಗಂಗಾಸ್ನಾನದ ಫಲವನ್ನು ಪಡೆಯುವನು.

೨೯. ಸಮಸ್ತವರ್ಣೋತ್ತಮರೂ ಯೋಗಿಧ್ಯೇಯನಾದ ವಿಷ್ಣುವನ್ನು ಸಕಲೋಪಾಯಗಳಿಂದಲೂ ಸಂತೋಷಗೊಳಿಸಬೇಕು. ಚಾತುರ್ಮಾಸ್ಯದಲ್ಲಿ ವಿಷ್ಣುವಿನ ನಾಮಸ್ಮರಣೆಮಾಡುವುದರಿಂದ ಮಾನವನು ಘೋರ ಬಂಧನದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಇಷ್ಟವಸ್ತುಪರಿತ್ಯಾಗಮಹಿಮವರ್ಣನ" ವೆಂಬ
ಇನ್ನೂರ ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ವ್ರತಮಹಿಮವರ್ಣನಂ

ನಾರದ ಉವಾಚ:—

ಕದಾ ವಿಧಿನಿಷೇಧೌ ಚ ಕರ್ತವ್ಯೌ ವಿಷ್ಣುಸನ್ನಿಧೌ ।
ಯುಷ್ಮದ್ವಾಕ್ಯಾಮೃತಂ ಪೀತ್ವಾ ತೃಪ್ತಿರ್ಮಮ ನ ವಿದ್ಯತೇ ॥ ೧ ॥

ಬ್ರಹ್ಮೋವಾಚ:—

ಕರ್ಕಸಂಕ್ರಾಂತಿ ದಿವಸೇ ವಿಷ್ಣುಂ ಸಂಪೂಜ್ಯ ಭಕ್ತಿತಃ ।
ಫಲೈರರ್ಘ್ಯಃ ಪ್ರದಾತವ್ಯಃ ಶಸ್ತಜಂಬೂಫಲೈಃ ಶುಭೈಃ ॥ ೨ ॥
ಜಂಬೂದ್ವೀಪಸ್ಯ ಸಂಜ್ಞೇಯಂ ಫಲೇನ ಚ ವಿಜಾಯತೇ ।
ಮಂತ್ರೇಣಾನೇನ ವಿಪ್ರೇಂದ್ರ ಶ್ರದ್ಧಾಧರ್ಮಸುಸಂಯುತೈಃ ॥ ೩ ॥
ಷಣ್ಮಾಸಾಭ್ಯಂತರೇ ಮೃತ್ಯುರ್ಯತ್ರ ಕ್ವಾಽಪಿ ಭವೇನ್ಮಮ ।
ತಸ್ಮಯಾ ವಾಸುದೇವಾಯ ಸ್ವಯಮಾತ್ಮಾ ನಿವೇದಿತಃ ॥ ೪ ॥

॥ ಇತಿ ಮಂತ್ರೇಣಾರ್ಘ್ಯಂ ॥

ತತೋ ವಿಧಿ ನಿಷೇಧೌ ಚ ಗ್ರಾಹ್ಯೌ ಭಕ್ತ್ಯಾ ಹರೇಃ ಪುರಃ ।
ಚಾತುರ್ಮಾಸ್ಯೇ ಸಮಾಯಾತೇ ಸರ್ವಲೋಕ ಮಹಾಸುಖೇ ॥ ೫ ॥

---

## ಕನ್ನಡದ ಅನುವಾದ

### ವ್ರತಮಹಿಮವರ್ಣನ

೧. ನಾರದನು ಹೇಳುತ್ತಾನೆ:—ವಿಷ್ಣುವಿನ ಸನ್ನಿಧಿಯಲ್ಲಿ ಯಾವಾಗಲೂ ವಿಧಿನಿಷೇಧಗಳನ್ನು ಮಾಡಬೇಕು. ನಿಮ್ಮ ವಾಕ್ಯವೆಂಬ ಅಮೃತವನ್ನು ಪಾನಮಾಡಿದರೆ ನನಗೆ ತೃಪ್ತಿಯೇ ಆಗುವುದಿಲ್ಲ.

೨--೩. ಬ್ರಹ್ಮನು ಹೇಳುತ್ತಾನೆ:—ಮುನಿಯೆ! ಶ್ರದ್ಧಾಧರ್ಮಗಳಿಂದ ಕೂಡಿದ ಮಾನವರು ಕರ್ಕಟಕ ಸಂಕ್ರಾಂತಿ ದಿವಸ ವಿಷ್ಣುವನ್ನು ಭಕ್ತಿಯಿಂದ ಆರಾಧಿಸಿ ಮಂಗಳಕರವೂ ಉತ್ತಮವೂ ಆದ ನೇರಳೆ ಹಣ್ಣುಗಳಿಂದ ಈ ಮಂತ್ರವನ್ನು ಹೇಳಿಕೊಂಡು ಅರ್ಘ್ಯವನ್ನು ಕೊಡಬೇಕು. ಜಂಬೂ ಫಲದಿಂದ ಜಂಬೂದ್ವೀಪವೆಂಬ ಹೆಸರು ಬಂದಿರುವುದು.

೪. ಇನ್ನು ಆರು ತಿಂಗಳೊಳಗೆ ನನಗೆ ಮರಣವಾಗಲಿ. ನಾನು ನನ್ನ ಶರೀರವನ್ನು ವಿಷ್ಣುವಿಗೆ ಸಮರ್ಪಿಸಿರುವೆನು. ಈ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

೫. ಬಳಿಕ ಸಕಲ ಜನರಿಗೆ ಸುಖವನ್ನುಂಟುಮಾಡುವ ಚಾತುರ್ಮಾಸ್ಯವು ಬರಲು ವಿಷ್ಣುವಿನ ಮುಂದೆ ವಿಧಿನಿಷೇಧಗಳನ್ನು ಸ್ವೀಕರಿಸಬೇಕು.

ವಿಧಿರ್ವೇದವಿಧಿಃಕಾರ್ಯೋ ನಿಷೇಧೋ ನಿಯಮೋ ಮತಃ ।
ವಿಧಿಶ್ಚೈವ ನಿಷೇಧಶ್ಚ ದ್ವಾವೇತೌ ವಿಷ್ಣುರೇವ ಹಿ ॥ ೬ ॥
ತಸ್ಮಾತ್ಸರ್ವಪ್ರಯತ್ನೇನ ಸೇವ್ಯ ಏವ ಜನಾರ್ದನಃ ।
ವಿಷ್ಣೋಃ ಕಥಾ ವಿಷ್ಣುಪೂಜಾ ಧ್ಯಾನಂ ವಿಷ್ಣೋರ್ನತಿಸ್ತಥಾ ॥ ೭ ॥
ಸರ್ವಮೇವ ಹರಿಪ್ರೀತ್ಯಾ ಯಃ ಕರೋತಿ ಸ ಮುಕ್ತಿಭಾಕ್ ।
ವರ್ಣಾಶ್ರಮವಿಧೇರ್ಮೂರ್ತಿಃ ಸತ್ಯೋ ವಿಷ್ಣುಃ ಸನಾತನಃ ॥ ೮ ॥
ಚಾತುರ್ಮಾಸ್ಯೇ ವಿಶೇಷೇಣ ಜನ್ಮಕಷ್ಟಾದಿನಾಶನಂ ।
ಹರಿರೇವ ವ್ರತಾದ್ಗ್ರಾಹ್ಯೋ ವ್ರತಂ ದೇಹೇನ ಕಾರಯೇತ್ ।
ದೇಹೋಽಯಂ ತಪಸಾ ಶೋಧ್ಯಃ ಸುಪ್ತೇ ದೇವೇ ತಪೋನಿಧೌ ॥ ೯ ॥

ನಾರದ ಉವಾಚ :—

ಕಿಂ ವ್ರತಂ ಕಿಂ ತಪಃ ಪ್ರೋಕ್ತಂ ಬ್ರಹ್ಮನ್ ಬ್ರೂಹಿ ಸವಿಸ್ತರಂ ।
ಸುಪ್ತೇ ದೇವೇ ಮಯಾ ಕಾರ್ಯಂ ಕೃತಂ ಯಚ್ಚ ಮಹಾಫಲಂ ॥ ೧೦ ॥

ಬ್ರಹ್ಮೋವಾಚ :—

ವ್ರತಂ ವಿಷ್ಣುವ್ರತಂ ವಿದ್ಧಿ ವಿಷ್ಣುಭಕ್ತಿಸಮನ್ವಿತಂ ।
ತಪಶ್ಚ ಧರ್ಮವರ್ತಿತ್ವಂ ಕೃಚ್ಛ್ರಾದಿಕಮಥಾಽಪಿ ವಾ ॥ ೧೧ ॥

---

೬. ವೇದೋಕ್ತವಿಧಿಯು ವಿಧಿಯೆನ್ನಿಸಿಕೊಳ್ಳುವುದು. ನಿಷೇಧವು ನಿಯಮವಾಗಿರುವುದು. ಈ ವಿಧಿನಿಷೇಧಗಳು ವಿಷ್ಣುವೇ ಆಗಿರುವನು.

೭–೯. ಆದುದರಿಂದ ಪ್ರಯತ್ನಿಸಿ ವಿಷ್ಣುವನ್ನೇ ಸೇವಿಸಬೇಕು. ವಿಷ್ಣುವಿನ ಕಥೆ, ಪೂಜೆ, ಧ್ಯಾನ, ನಮಸ್ಕಾರ ಇವೆಲ್ಲವನ್ನೂ ವಿಷ್ಣುಪ್ರೀತಿಗಾಗಿ ಮಾಡುವವನು ಮೋಕ್ಷವನ್ನು ಪಡೆಯುವನು. ವರ್ಣಾಶ್ರಮ ವಿಧಿರೂಪನೂ, ಸತ್ಯನೂ, ಸನಾತನನೂ, ಜನ್ಮ, ಕಷ್ಟಾದಿಗಳನ್ನು ಪರಿಹರಿಸುವವನೂ ಆದ ವಿಷ್ಣುವನ್ನು ಉದ್ದೇಶಿಸಿ ಚಾತುರ್ಮಾಸ್ಯದಲ್ಲಿ ವ್ರತವನ್ನಾಚರಿಸಬೇಕು. ಆ ವ್ರತವನ್ನು ದೇಹದಿಂದ ಮಾಡಬೇಕು. ಈ ದೇಹವನ್ನು ತಪಸ್ಸಿನಿಂದ ಶೋಧಿಸಬೇಕು.

೧೦. ನಾರದನು ಹೇಳುತ್ತಾನೆ:—ಎಲೈ ಬ್ರಹ್ಮನೆ! ವಿಷ್ಣುವು ಮಲಗಿರಲು ನಾನು ಮಾಡಬೇಕಾಗಿರುವ ಅತಿಶಯ ಫಲವನ್ನೀಯುವ ವ್ರತ, ತಪಸ್ಸುಗಳಾವುವು? ನನಗೆ ವಿಸ್ತಾರವಾಗಿ ಅದನ್ನು ಹೇಳು.

೧೧. ಬ್ರಹ್ಮನು ಹೇಳುತ್ತಾನೆ:—ವಿಷ್ಣುಭಕ್ತಿಯಿಂದ ಕೂಡಿರುವ ವಿಷ್ಣುವ್ರತವನ್ನೇ ವ್ರತವೆಂದು ತಿಳಿ. ಧರ್ಮವರ್ತನೆಯೇ ತಪಸ್ಸು. ಅಥವಾ ಕೃಚ್ಛ್ರ ಚಾಂದ್ರಾಯಣಾದಿಗಳು.

ಶೃಣು ವ್ರತಸ್ಯ ಮಾಹಾತ್ಮ್ಯಂ ವಕ್ಷ್ಯಾಮಿ ಪ್ರಥಮಂ ತವ ।
ಬ್ರಹ್ಮಚರ್ಯವ್ರತಂ ಸಾರಂ ವ್ರತಾನಾಮುತ್ತಮಂ ವ್ರತಂ ॥ ೧೨ ॥
ಬ್ರಹ್ಮಚರ್ಯಂ ತಪಃಸಾರಂ ಬ್ರಹ್ಮಚರ್ಯಂ ಮಹತ್ಫಲಂ ।
ಕ್ರಿಯಾಸು ಸಕಲಾಸ್ವೇವ ಬ್ರಹ್ಮಚರ್ಯಂ ವಿವರ್ಧಯೇತ್ ॥ ೧೩ ॥
ಬ್ರಹ್ಮಚರ್ಯ ಪ್ರಭಾವೇಣ ತಪ ಉಗ್ರಂ ಪ್ರವರ್ತತೇ ।
ಬ್ರಹ್ಮಚರ್ಯಾತ್ಪರಂ ನಾಸ್ತಿ ಧರ್ಮಸಾಧನಮುತ್ತಮಂ ॥ ೧೪ ॥
ಚಾತುರ್ಮಾಸ್ಯೇ ವಿಶೇಷೇಣ ಸುಪ್ತೇ ದೇವೇ ಗುಣೋತ್ತರಂ ।
ಮಹಾವ್ರತಮಿದಂ ಲೋಕೇ ತನ್ನಿಬೋಧ ಸದಾ ದ್ವಿಜ ॥ ೧೫ ॥
ನಾರಾಯಣಮಿದಂ ಕರ್ಮ ಯಃ ಕರೋತಿ ನ ಲಿಪ್ಯತೇ ।
ಶತತ್ರಯಂ ಷಷ್ಟಿಯುತಂ ದಿನಮಾಹುಶ್ಚ ವತ್ಸರೇ ॥ ೧೬ ॥
ತತ್ರ ನಾರಾಯಣೋ ದೇವಃ ಪೂಜ್ಯತೇ ವ್ರತಕಾರಿಭಿಃ ।
ಸತ್ಕ್ರಿಯಾಮಮುಕೀಂ ದೇವ ಕಾರಯಿಷ್ಯಾಮಿ ನಿಶ್ಚಯಃ ॥ ೧೭ ॥
ಕುರುತೇ ತದ್ವ್ರತಂ ಪ್ರಾಹುಃ ಸುಪ್ತೇ ದೇವೇ ಗುಣೋತ್ತರಂ ।
ವಹ್ನಿಹೋಮೋ ವಿಪ್ರಭಕ್ತಿಃ ಶ್ರದ್ಧಾ ಧರ್ಮೇ ಮತಿಃ ಶುಭಾ ॥ ೧೮ ॥
ಸತ್ಸಂಗೋ ವಿಷ್ಣುಪೂಜಾ ಚ ಸತ್ಯವಾದೋ ದಯಾ ಹೃದಿ ।
ಆರ್ಜವಂ ಮಧುರಾ ವಾಣೀ ಸಚ್ಚರಿತ್ರೇ ಸದಾ ರತಿಃ ॥ ೧೯ ॥

---

೧೨. ವ್ರತದ ಮಾಹಾತ್ಮ್ಯವನ್ನು ಮೊದಲು ಹೇಳುತ್ತೇನೆ. ಅದನ್ನು ಕೇಳು. ಬ್ರಹ್ಮಚರ್ಯವ್ರತವು ಎಲ್ಲ ವ್ರತಗಳಲ್ಲಿ ಶ್ರೇಷ್ಠವಾದುದು.

೧೩. ಬ್ರಹ್ಮಚರ್ಯೆಯು ತಪಸ್ಸಿನ ಸಾರವೂ, ಮಹಾ ಫಲದಾಯಕವೂ ಆಗಿರುವುದು. ಸಕಲಕಾರ್ಯಗಳಲ್ಲಿಯೂ ಬ್ರಹ್ಮಚರ್ಯೆಯನ್ನು ಅಭಿವೃದ್ಧಿಗೊಳಿಸಬೇಕು.

೧೪. ಬ್ರಹ್ಮಚರ್ಯೆಯ ಪ್ರಭಾವದಿಂದ ತಪಸ್ಸು ಕಠಿನವಾಗುವುದು. ಬ್ರಹ್ಮಚರ್ಯೆಗಿಂತ ಉತ್ತಮವಾದ ಧರ್ಮಸಾಧನವಿಲ್ಲ.

೧೫. ಚಾತುರ್ಮಾಸ್ಯದಲ್ಲಿ ವಿಷ್ಣುವು ಮಲಗಿರಲು ಈ ಬ್ರಹ್ಮಚರ್ಯವ್ರತವು ಅತಿಶಯಗುಣಗಳುಳ್ಳ ಮಹಾವ್ರತವೆಂದು ತಿಳಿ.

೧೬–೧೭. ಇಂಥ ನಾರಾಯಣವ್ರತವನ್ನಾಚರಿಸಿದವನು ದೋಷದಿಂದ ಲಿಪ್ತನಾಗುವುದಿಲ್ಲ. ಒಂದು ವರ್ಷಕ್ಕೆ ಮುನ್ನೂರು ಅರುವತ್ತುದಿನಗಳಿರುವುವೆಂದು ಹೇಳುತ್ತಾರೆ. ಆ ವರ್ಷದಲ್ಲಿ ವ್ರತಿಗಳು ನಾರಾಯಣನನ್ನು ಪೂಜಿಸುತ್ತಾರೆ. ಅದರಲ್ಲಿಯೆ ಪರಲೋಕಕ್ಕೆ ಸಾಧನವಾದ ಸತ್ಕಾರ್ಯವನ್ನುಮಾಡಿಸುವೆನು.

೧೮–೨೪. ನಾರಾಯಣನು ಮಲಗಿರಲು ಆ ವ್ರತವನ್ನಾಚರಿಸಿದರೆ ಅತಿಶಯ ಗುಣವುಂಟಾಗುವುದೆಂದು ಹೇಳುತ್ತಾರೆ. ಅಗ್ನಿಯಲ್ಲಿ ಹೋಮಿಸುವುದು,

ವೇದಪಾಠಸ್ತಥಾಽಸ್ತೇಯಮಹಿಂಸಾ ಹ್ರೀಃ ಕ್ಷಮಾ ದಮಃ ।
ನಿರ್ಲೋಭತಾಽಕ್ರೋಧತಾ ಚ ನಿರ್ಮೋಹೋಽಮಮತಾಽರತಿಃ ॥ ೨೦ ॥
ಶ್ರುತಿಕ್ರಿಯಾಪರಂ ಜ್ಞಾನಂ ಕೃಷ್ಣಾರ್ಪಿತಮನೋಗತಿಃ ।
ಏತಾನಿ ಯಸ್ಯ ತಿಷ್ಠಂತಿ ವ್ರತಾನಿ ಬ್ರಹ್ಮವಿತ್ತಮ ॥ ೨೧ ॥
ಜೀವನ್ಮುಕ್ತೋ ನರಃ ಪ್ರೋಕ್ತೋ ನೈವ ಲಿಪ್ಯತಿ ಪಾತಕೈಃ ।
ವ್ರತಂ ಕೃತಂ ಸಕೃದಪಿ ಸದ್ಯೈವ ಹಿ ಮಹಾಫಲಂ ॥ ೨೨ ॥
ಚಾತುರ್ಮಾಸ್ಯೇ ವಿಶೇಷೇಣ ಬ್ರಹ್ಮಚರ್ಯಾದಿಸೇವನಂ ।
ಅವ್ರತೇನ ಗತಂ ಯೇಷಾಂ ಚಾತುರ್ಮಾಸ್ಯಂ ಸದಾ ನೃಣಾಂ ॥ ೨೩ ॥
ಧರ್ಮಸ್ತೇಷಾಂ ವೃಥಾ ಸದ್ಭಿಸ್ತತ್ವಜ್ಞೈಃ ಪರಿಕೀರ್ತಿತಃ ।
ಸರ್ವೇಷಾಮೇವ ವರ್ಣಾನಾಂ ವ್ರತಚರ್ಯಾ ಮಹಾಫಲಂ ॥ ೨೪ ॥
ಸ್ವಲ್ಪಾಽಪಿ ವಿಹಿತಾ ವತ್ಸ ಚಾತುರ್ಮಾಸ್ಯೇ ಸುಖಪ್ರದಾ ।
ಸರ್ವತ್ರ ದೃಶ್ಯತೇ ವಿಷ್ಣುರ್ವ್ರತಸೇವಾಪರೈರ್ನೃಭಿಃ ॥ ೨೫ ॥
ಚಾತುರ್ಮಾಸ್ಯೇ ಸಮಾಯಾತೇ ಪಾಲಯೇತ್ತತ್ಪ್ರಯತ್ನತಃ ॥ ೨೬ ॥

---

ಬ್ರಾಹ್ಮಣರಲ್ಲಿ ಭಕ್ತಿ, ಧರ್ಮದಲ್ಲಿ ಶ್ರದ್ಧೆ, ಶುಭಕರವಾದ ಬುದ್ಧಿ, ಸಜ್ಜನ, ವಿಷ್ಣುಪೂಜೆ, ಸತ್ಯವಚನ, ಮನಸ್ಸಿನಲ್ಲಿ ದಯೆ, ಋಜುತ್ವ, ಸವಿನುಡಿ, ಒಳ್ಳೆ ನಡತೆಯಲ್ಲಿ ಯಾವಾಗಲೂ ಪ್ರೀತಿ, ವೇದಾಧ್ಯಯನ, ಕಳ್ಳತನಮಾಡದಿರುವುದು, ಅಹಿಂಸೆ, ಲಜ್ಜೆ, ಸಹನೆ, ಇಂದ್ರಿಯನಿಗ್ರಹ, ಆಶೆಯಿಲ್ಲದಿರುವುದು, ಕೋಪ ವಿಲ್ಲದಿರುವುದು, ಭ್ರಾಂತಿಯಿಲ್ಲದಿರುವುದು, ಮಮತೆಯಿಲ್ಲದಿರುವುದು, ಆಸಕ್ತಿ ಯಿಲ್ಲದಿರುವುದು, ವೇದಾಧ್ಯಯನ ವಿಷಯಕಜ್ಞಾನ, ಕೃಷ್ಣಾರ್ಪಿತವಾದ ಚಿತ್ತ ವೃತ್ತಿ ಇವುಗಳಿರುವ ಮಾನವನು ಜೀವನ್ಮುಕ್ತನು. ಅವನು ಪಾಪಲಿಪ್ತನಾಗು ವುದಿಲ್ಲ. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಒಂದುಸಾರಿ ಬ್ರಹ್ಮಚರ್ಯಾದಿ ವ್ರತಾನುಷ್ಠಾನವು ಅತಿಶಯ ಫಲವನ್ನುಂಟುಮಾಡುವುದು. ಈ ವ್ರತವನ್ನಾಚರಿ ಸದೆ ಚಾತುರ್ಮಾಸ್ಯವನ್ನು ಕಳೆಯುವ ಮಾನವರು ಮಾಡಿದ ಧರ್ಮವು ವ್ಯರ್ಥ ವಾಗುವುದೆಂದು ತತ್ವಜ್ಞರು ಹೇಳಿದ್ದಾರೆ. ಸಕಲಜಾತಿಯವರಿಗೂ ವ್ರತಾನು ಷ್ಠಾನವು ಅತಿಶಯ ಫಲವನ್ನುಂಟುಮಾಡುವುದು.

೨೫. ಚಾತುರ್ಮಾಸ್ಯದಲ್ಲಿ ಇದನ್ನು ಸ್ವಲ್ಪವಾಗಿ ಮಾಡಿದರೂ ಸುಖ ವುಂಟಾಗುವುದು. ವ್ರತ ಸೇವಾನಿರತರಾದವರು ಎಲ್ಲೆಡೆಯಲ್ಲಿಯೂ ವಿಷ್ಣುವನ್ನು ನೋಡುತ್ತಾರೆ.

೨೬. ಚಾತುರ್ಮಾಸ್ಯವು ಬರಲು ಆ ವ್ರತವನ್ನು ಪ್ರಯತ್ನದಿಂದ ಪಾಲಿಸಬೇಕು.

ಭಜಸ್ವ ವಿಷ್ಣುಂ ದ್ವಿಜವಹ್ನಿತೀರ್ಥ
ವೇದಪ್ರಭೇದಮಯಮೂರ್ತಿಮಜಂ ವಿರಾಜಂ ।
ಯತ್ಪ್ರಸಾದಾದ್ಭವತಿ ಮೋಕ್ಷಮಹಾತರುಸ್ಥ
ಸ್ತಾಪಂ ನ ಯಾಸ್ಯತಿ ಭವಾರ್ಕ ಸಮುದ್ಭವಂ ತಂ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವ್ರತಮಹಿಮವರ್ಣನಂ" ನಾಮ
ಸಪ್ತತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೭. ದ್ವಿಜ, ಅಗ್ನಿ, ತೀರ್ಥ ಮತ್ತು ವೇದಗಳ ಸ್ವರೂಪನೂ, ಉತ್ಪತ್ತಿ ರಹಿತನೂ, ವಿರಾಡ್ರೂಪಿಯೂ ಆದ ವಿಷ್ಣುವನ್ನು ಸೇವಿಸು. ಅವನ ಅನುಗ್ರಹ ದಿಂದ ನರನು ಮೋಕ್ಷವೆಂಬ ಮಹಾ ವೃಕ್ಷದಲ್ಲಿರುವವನಾಗಿ ಸಂಸಾರವೆಂಬ ಸೂರ್ಯನಿಂದುಂಟಾದ ತಾಪವನ್ನು ಹೊಂದುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವ್ರತಮಹಿಮವರ್ಣನ"ವೆಂಬ
ಇನ್ನೂರ ಮೂವತ್ತೇಳನೆಯ ಅಧ್ಯಾಯವು ಮುಗಿದುದು

 

॥ ಶ್ರೀಃ ॥

## ಅಥಾಷ್ಟತ್ರಿಂಶದುತ್ತರದ್ವಿಶತತಮೋಽಧ್ಯಾಯಃ

### ತಪೋಮಹಿಮವರ್ಣನಂ

ಬ್ರಹ್ಮೋವಾಚ:—

ತತಃ ಶೃಣುಷ್ವ ವಿಪ್ರೇಂದ್ರ ವಿಸ್ತರೇಣ ಮಹಾಮತೇ ।
ಯಸ್ಯ ಶ್ರವಣಮಾತ್ರೇಣ ಚಾತುರ್ಮಾಸ್ಯೇಽಘನಾಶನಂ ॥ ೧ ॥
ಷೋಡಶೈರುಪಚಾರೈಶ್ಚ ವಿಷ್ಣೋಃ ಪೂಜಾ ಸದಾ ತಪಃ ।
ತತಃ ಸುಪ್ತೇ ಜಗನ್ನಾಥೇ ಮಹತ್ತಪ ಉದಾಹೃತಂ ॥ ೨ ॥
ಕರಣಂ ಪಂಚಯಜ್ಞಾನಾಂ ಸತತಂ ತಪ ಏವ ಹಿ ।
ತನ್ನಿವೇದ್ಯ ಹರೌ ಚೈವ ಚಾತುರ್ಮಾಸ್ಯೇ ಮಹತ್ತಪಃ ॥ ೩ ॥
ಋತುಯಾನಂ ಗೃಹಸ್ಥಸ್ಯ ತಪ ಏವ ಸದೈವ ಹಿ ।
ಚಾತುರ್ಮಾಸ್ಯೇ ಹರಿಪ್ರೀತ್ಯೈ ತನ್ನಿಷೇವ್ಯಂ ಮಹತ್ತಪಃ ॥ ೪ ॥
ಸತ್ಯವಾದಸ್ತಪೋ ನಿತ್ಯಂ ಪ್ರಾಣಿನಾಂ ಭುವಿ ದುರ್ಲಭಂ ।
ಸುಪ್ತೇ ದೇವಪತೌ ಕುರ್ವನ್ನನಂತಫಲಭಾಗ್ಭವೇತ್ ॥ ೫ ॥

---

### ಕನ್ನಡದ ಅನುವಾದ

#### ತಪೋಮಹಿಮವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಎಲೈ ವಿಪ್ರವರ್ಯನೆ! ತಪಸ್ಸನ್ನು ವಿಸ್ತಾರವಾಗಿ ಕೇಳು. ಚಾತುರ್ಮಾಸ್ಯದಲ್ಲಿ ಇದನ್ನು ಕೇಳುವುದರಿಂದಲೆ ಪಾಪವು ನಾಶವಾಗುವುದು.

೨. ಯಾವಾಗಲೂ ವಿಷ್ಣುವನ್ನು ಷೋಡಶೋಪಚಾರಗಳಿಂದ ಪೂಜಿಸುವುದು ತಪಸ್ಸು. ವಿಷ್ಣುವು ಮಲಗಿರಲು ಇದು ಮಹಾ ತಪಸ್ಸೆನ್ನಿಸಿಕೊಳ್ಳುವುದು.

೩. ಯಾವಾಗಲೂ ಪಂಚಮಹಾಯಜ್ಞಗಳನ್ನಾಚರಿಸುವುದು ತಪಸ್ಸು. ಅದನ್ನು ಚಾತುರ್ಮಾಸ್ಯದಲ್ಲಿ ವಿಷ್ಣುವಿಗೆ ಸಮರ್ಪಿಸಿದರೆ ಮಹಾ ತಪಸ್ಸಾಗುವುದು.

೪. ಗೃಹಸ್ಥನಿಗೆ ಯಾವಾಗಲೂ ಋತುಕಾಲದಲ್ಲಿ ಪತ್ನೀ ಗಮನವು ತಪಸ್ಸು. ಚಾತುರ್ಮಾಸ್ಯದಲ್ಲಿ ಹರಿಪ್ರೀತಿಗಾಗಿ ಆ ಮಹಾ ತಪಸ್ಸನ್ನು ಸೇವಿಸಬೇಕು.

೫. ಪ್ರಾಣಿಗಳಿಗೆ ಭೂಮಿಯಲ್ಲಿ ಸತ್ಯವಾಕ್ಯವು ದುರ್ಲಭವಾದ ತಪಸ್ಸು. ವಿಷ್ಣುವು ಮಲಗಿರುವಾಗ ಅದನ್ನು ಮಾಡುವವನು ಅನಂತ ಫಲವನ್ನು ಪಡೆಯುವನು.

ಅಹಿಂಸಾದಿ ಗುಣಾನಾಂ ಚ ಪಾಲನಂ ಸತತಂ ತಪಃ ।
ಚಾತುರ್ಮಾಸ್ಯೇ ತ್ಯಕ್ತವೈರಂ ಮಹತ್ತಪ ಉದಾರಧೀಃ ॥ ೬ ॥
ತಪ ಏವ ಮಹನ್ಮರ್ತ್ಯಾಃ ಪಂಚಾಯತನ ಪೂಜನಂ ।
ಚಾತುರ್ಮಾಸ್ಯೇ ವಿಶೇಷೇಣ ಹರಿಪ್ರೀತ್ಯಾ ಸಮಾಚರೇತ್ ॥ ೭ ॥

ನಾರದ ಉವಾಚ :—

ಪಂಚಾಯತನ ಸಂಜ್ಞೇಯಂ ಕಸ್ಯೋಕ್ತಾ ಸಾ ಕಥಂ ಭವೇತ್ ।
ಕಥಂ ಪೂಜಾ ಚ ಕರ್ತವ್ಯಾ ವಿಸ್ತರೇಣಾಽಽಶು ತದ್ವದ ॥ ೮ ॥

ಬ್ರಹ್ಮೋವಾಚ :—

ಪ್ರಾತರ್ಮಧ್ಯಾಹ್ನ ಪೂಜಾಯಾಂ ಮಧ್ಯೇ ಪೂಜ್ಯೋ ರವಿಃ ಸದಾ ।
ರಾತ್ರೌ ಮಧ್ಯೇ ಭವೇಚ್ಚಂದ್ರಸ್ತದ್ವರ್ಣಕುಸುಮೈಃ ಶುಭೈಃ ॥ ೯ ॥
ವಹ್ನಿಕೋಣೇ ತು ಹೇರಂಬಂ ಸರ್ವವಿಘ್ನೋಪಶಾಂತಯೇ ।
ರಕ್ತಚಂದನಪುಷ್ಪೈಶ್ಚ ಚಾತುರ್ಮಾಸ್ಯೇ ವಿಶೇಷತಃ ॥ ೧೦ ॥
ನೈರ್ಋತಂ ದಲಮಾಸ್ಥಾಯ ಭಗವಾನ್ ದುಷ್ಟದರ್ಪಹಾ ।
ಗೃಹಸ್ಥಸ್ಯ ಸದಾ ಶತ್ರುವಿನಾಶಂ ವಿದಧಾತಿ ಸಃ ॥ ೧೧ ॥
ನೈರ್ಋತ್ಯ ಕೋಣಗಂ ವಿಷ್ಣುಂ ಪೂಜಯೇತ್ಸರ್ವದಾ ಬುಧಃ ।
ಸುಗಂಧಚಂದನೈಃ ಪುಷ್ಪೈರ್ನೈವೇದ್ಯೈಶ್ಚಾಽತಿಶೋಭನೈಃ ॥ ೧೨ ॥

---

೬. ಯಾವಾಗಲೂ ಅಹಿಂಸಾದಿಗುಣಗಳ ಪಾಲನೆಯು ತಪಸ್ಸು. ಚಾತುರ್ಮಾಸ್ಯದಲ್ಲಿ ವೈರತ್ಯಾಗವೆಂಬ ಮಹಾ ತಪಸ್ಸನ್ನು ಮಾಡಬೇಕು.

೭. ಪಂಚಾಯತನಪೂಜೆಯು ಮಹಾ ತಪಸ್ಸು. ಚಾತುರ್ಮಾಸ್ಯದಲ್ಲಿ ಹರಿಪ್ರೀತಿಗಾಗಿ ಅದನ್ನು ವಿಶೇಷವಾಗಿ ಆಚರಿಸಬೇಕು.

೮. ನಾರದನು ಹೇಳುತ್ತಾನೆ:—ಪಂಚಾಯತನವೆಂದು ಯಾವ ಪೂಜೆಗೆ ಹೆಸರು? ಅದು ಹೇಗೆ ಸಾಧ್ಯವಾಗುವುದು? ಅದನ್ನು ಹೇಗೆ ಮಾಡಬೇಕು? ಆ ವಿಚಾರವನ್ನು ವಿಸ್ತಾರವಾಗಿ ಹೇಳು.

೯. ಬ್ರಹ್ಮನು ಹೇಳುತ್ತಾನೆ:—ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲಗಳ ನಡುವೆ ಸೂರ್ಯನನ್ನು ಪ್ರತಿಷ್ಠಿಸಿ ಪೂಜಿಸಬೇಕು. ರಾತ್ರಿಯ ಮಧ್ಯಕಾಲದಲ್ಲಿ ಚಂದ್ರನನ್ನಿರಿಸಿ ಚಂದ್ರವರ್ಣದ ಹೂವುಗಳಿಂದ ಅವನನ್ನು ಪೂಜಿಸಬೇಕು.

೧೦. ಚಾತುರ್ಮಾಸ್ಯದಲ್ಲಿ ಗಣಪತಿಯನ್ನು ಆಗ್ನೇಯದಿಕ್ಕಿನಲ್ಲಿರಿಸಿ ಸಕಲ ವಿಘ್ನಗಳ ಪರಿಹಾರಕ್ಕಾಗಿ ಕೆಂಪು ಗಂಧ ಪುಷ್ಪಗಳಿಂದ ಅರ್ಚಿಸಬೇಕು.

೧೧. ದುಷ್ಟದರ್ಪಾಂತಕನಾದ ವಿಷ್ಣುವು ನೈರ್ಋತ್ಯದಲ್ಲಿದ್ದು ಯಾವಾಗಲೂ ಗೃಹಸ್ಥನ ಶತ್ರುವನ್ನು ನಾಶಗೊಳಿಸುವನು.

೧೨. ನೈರ್ಋತ್ಯದಲ್ಲಿರುವ ವಿಷ್ಣುವನ್ನು ಯಾವಾಗಲೂ ಸುಗಂಧ ಚಂದನ, ಪುಷ್ಪ, ಮನೋಹರವಾದ ನೈವೇದ್ಯ ಇವುಗಳಿಂದ ಆರಾಧಿಸಬೇಕು.

ಗೋತ್ರಜಾ ವಾಯುಕೋಣೇ ತು ಪೂಜನೀಯಾ ಸದಾ ಬುಧೈಃ ।
ಪುತ್ರಪೌತ್ರಪ್ರವೃದ್ಧ್ಯರ್ಥಂ ಸುಮನೋಭಿರ್ಮನೋಹರೈಃ ॥ ೧೩ ॥
ಐಶಾನೇ ಭಗವಾನ್ ರುದ್ರಃ ಶ್ವೇತಪುಷ್ಪೈಃ ಸದಾಽರ್ಚಿತಃ ।
ಅಪಮೃತ್ಯುವಿನಾಶಾಯ ಸರ್ವದೋಷಾಪಸುತ್ತಯೇ ॥ ೧೪ ॥
ಜಾಗರ್ತಿ ಮಹಿಮಾ ಯಸ್ಯ ಬ್ರಹ್ಮಾದ್ಯೈರ್ನೈವ ಲಿಖ್ಯತೇ ।
ಪಂಚಾಯತನಮೇತದ್ಧಿ ಪೂಜ್ಯತೇ ಗೃಹಮೇಧಿಭಿಃ ॥ ೧೫ ॥
ತಪ ಏತತ್ಸದಾ ಕಾರ್ಯಂ ಚಾತುರ್ಮಾಸ್ಯೇ ಮಹಾಫಲಂ ।
ಪರ್ವಕಾಲೇಷು ಸರ್ವೇಷು ದಾನಂ ದೇಯಂ ತಪಃ ಸದಾ ।
ಚಾತುರ್ಮಾಸ್ಯೇ ವಿಶೇಷೇಣ ತದನಂತಂ ಪ್ರಜಾಯತೇ ॥ ೧೬ ॥
ಶೌಚಂ ತು ದ್ವಿವಿಧಂ ಗ್ರಾಹ್ಯಂ ಬಾಹ್ಯಮಾಭ್ಯಂತರಂ ಸದಾ ।
ಜಲಶೌಚಂ ತಥಾ ಬಾಹ್ಯಂ ಶ್ರದ್ಧಯಾ ಚಾಂತರಂ ಭವೇತ್ ॥ ೧೭ ॥
ಇಂದ್ರಿಯಾಣಾಂ ಗ್ರಹಃ ಕಾರ್ಯಸ್ತಪಸೋ ಲಕ್ಷಣಂ ಪರಂ ।
ನಿವೃತ್ಯೇಂದ್ರಿಯಲೌಲ್ಯಂ ಚ ಚಾತುರ್ಮಾಸ್ಯೇ ಮಹತ್ತಪಃ ॥ ೧೮ ॥

---

೧೩. ವಾಯವ್ಯಮೂಲೆಯಲ್ಲಿ ಪಾರ್ವತಿಯನ್ನು ಪುತ್ರ ಪೌತ್ರ ವೃದ್ಧಿಗಾಗಿ ಮನೋಹರವಾದ ಪುಷ್ಪಗಳಿಂದ ಯಾವಾಗಲೂ ಪೂಜಿಸಬೇಕು.

೧೪. ಈಶಾನ್ಯದಿಕ್ಕಿನಲ್ಲಿ ಪೂಜ್ಯನಾದ ರುದ್ರನನ್ನು ಶ್ವೇತಪುಷ್ಪಗಳಿಂದ ಅಪಮೃತ್ಯುನಾಶಕ್ಕಾಗಿಯೂ, ಸಮಸ್ತ ದೋಷಗಳ ಪರಿಹಾರಕ್ಕಾಗಿಯೂ ಯಾವಾಗಲೂ ಅರ್ಚಿಸಬೇಕು.

೧೫. ಈ ರುದ್ರನ ಮಹಿಮೆಯನ್ನು ಬ್ರಹ್ಮಾದಿಗಳೂ ಬರೆಯಲಾರರು. ಗೃಹಸ್ಥರು ಈ ಪಂಚಾಯತನ ಪೂಜೆಯನ್ನು ಮಾಡಬೇಕು.

೧೬. ಚಾತುರ್ಮಾಸ್ಯದಲ್ಲಿ ಮಹಾ ಫಲವನ್ನೀಯುವ ಈ ತಪಸ್ಸನ್ನು ಯಾವಾಗಲೂ ಮಾಡಬೇಕು. ಸಕಲಪರ್ವಕಾಲಗಳಲ್ಲಿಯೂ ದಾನವನ್ನು ಮಾಡಬೇಕು. ಇದು ತಪಸ್ಸೆನ್ನಿಸಿಕೊಳ್ಳುವುದು. ಇದರಿಂದ ಚಾತುರ್ಮಾಸ್ಯದಲ್ಲಿ ಅತಿಶಯ ಫಲವುಂಟಾಗುವುದು.

೧೭. ಜಲ ಮತ್ತು ಶ್ರದ್ಧೆಯೆಂಬ ಎರಡು ವಿಧವಾದ ಬಾಹ್ಯಾಭ್ಯಂತರ ಶೌಚಗಳನ್ನು ಮಾಡಬೇಕು.

೧೮. ತಪಸ್ಸಿನ ಉತ್ತಮ ಲಕ್ಷಣ ರೂಪವಾದ ಇಂದ್ರಿಯ ನಿಗ್ರಹವನ್ನು ಮಾಡಬೇಕು. ಚಾತುರ್ಮಾಸ್ಯದಲ್ಲಿ ಇಂದ್ರಿಯ ಚಾಪಲ್ಯವನ್ನು ತ್ಯಜಿಸುವುದು ಮಹಾ ತಪಸ್ಸೆನ್ನಿಸಿಕೊಳ್ಳುವುದು.

ಇಂದ್ರಿಯಾಶ್ವಾನ್ ಸನ್ನಿಯಮ್ಯ ಸತತಂ ಸುಖಮೇಧತೇ ।
ನರಕೇ ಪಾತ್ಯತೇ ಪ್ರಾಣ್ಯೈಸ್ತೈರೇವೋತ್ಪಥಗಾಮಿಭಿಃ ॥ ೧೯ ॥
ಮಮತಾರೂಪಿಣೀಂ ಗ್ರಾಹೀಂ ದುಷ್ಟಾಂ ನಿರ್ಭರ್ತ್ಸ್ಯ ನಿಗ್ರಹೇತ್ ।
ತಪ ಏವ ಸದಾ ಪುಂಸಾಂ ಚಾತುರ್ಮಾಸ್ಯೇಽಧಿಗೌರವಂ ॥ ೨೦ ॥
ಕಾಮ ಏಷ ಮಹಾಶತ್ರುಸ್ತಮೇಕಂ ನಿರ್ಜಯೇದ್ದೃಢಂ ।
ಜಿತಕಾಮಾ ಮಹಾತ್ಮಾನಸ್ತೈರ್ಜಿತಂ ನಿಖಿಲಂ ಜಗತ್ ॥ ೨೧ ॥
ಏಕಂಚ ತಪಸೋ ಮೂಲಂ ತಪಸೋ ಮೂಲಮೇವ ತತ್ ।
ಸರ್ವದಾ ಕಾಮವಿಜಯಃ ಸಂಕಲ್ಪ ವಿಜಯಸ್ತಥಾ ॥ ೨೨ ॥
ತದೇವ ಹಿ ಪರಂ ಜ್ಞಾನಂ ಕಾಮೋ ಯೇನ ಪ್ರಜಾಯತೇ ।
ಮಹತ್ತಪಸ್ತದೇವಾಹುಶ್ಚಾತುರ್ಮಾಸ್ಯೇ ಫಲೋತ್ತಮಂ ॥ ೨೩ ॥
ಲೋಭಃ ಸದಾ ಪರಿತ್ಯಾಜ್ಯಃ ಪಾಪಂ ಲೋಭೇ ಸಮಾಸ್ಥಿತಂ ।
ತಪಸ್ತಸ್ಯೈವ ವಿಜಯಶ್ಚಾತುರ್ಮಾಸ್ಯೇ ವಿಶೇಷತಃ ॥ ೨೪ ॥
ಮೋಹಃ ಸದಾಽವಿವೇಕಶ್ಚ ವರ್ಜನೀಯಃ ಪ್ರಯತ್ನತಃ ।
ತೇನ ತ್ಯಕ್ತೋ ನರೋ ಜ್ಞಾನೀ ಮೋಹಸಂಶ್ರಯಾತ್ ॥ ೨೫ ॥

---

೧೯. ಇಂದ್ರಿಯವೆಂಬ ಅಶ್ವಗಳನ್ನು ತಡೆದವನು ಯಾವಾಗಲೂ ಸುಖಿಯಾಗುವನು. ದುರ್ಮಾರ್ಗಗಾಮಿಗಳಾದ ಇಂದ್ರಿಯಗಳಿಂದ ನರಕಭಾಗಿಯಾಗುವನು.

೨೦. ಮಮತಾ ರೂಪವಾದ ದುಷ್ಟಗ್ರಹವನ್ನು ಧಿಕ್ಕರಿಸಿ ನಿಗ್ರಹಿಸಬೇಕು. ಚಾತುರ್ಮಾಸ್ಯದಲ್ಲಿ ಈ ತಪಸ್ಸು ಯಾವಾಗಲೂ ಮಾನವರಿಗೆ ಅಧಿಕ ಗೌರವವನ್ನುಂಟುಮಾಡುವುದು.

೨೧. ಕಾಮವೆಂಬ ಮಹಾಶತ್ರುವನ್ನು ಜಯಿಸಬೇಕು. ಕಾಮವನ್ನು ಜಯಿಸಿದ ಮಹಾತ್ಮರು ನಿಖಿಲ ಜಗತ್ತನ್ನೂ ಜಯಿಸುವರು.

೨೨. ಯಾವಾಗಲೂ ಕಾಮ ಸಂಕಲ್ಪಗಳನ್ನು ಜಯಿಸುವುದು ತಪಸ್ಸಿಗೆ ಮೂಲವಾದುದು.

೨೩. ಕಾಮಜಯವೇ ಉತ್ತಮ ಜ್ಞಾನವು. ಅದೇ ಮಹಾ ತಪಸ್ಸು. ಚಾತುರ್ಮಾಸ್ಯದಲ್ಲಿ ಅದು ಉತ್ತಮ ಫಲವನ್ನೀಯುವುದು.

೨೪. ಲೋಭವನ್ನು ಯಾವಾಗಲೂ ತ್ಯಜಿಸಬೇಕು. ಲೋಭದಲ್ಲಿ ಪಾಪವು ನೆಲೆಸಿರುವುದು. ಚಾತುರ್ಮಾಸ್ಯದಲ್ಲಿ ಲೋಭಜಯವೇ ತಪಸ್ಸು.

೨೫. ಮೋಹ ಮತ್ತು ಅವಿವೇಕಗಳನ್ನು ಪ್ರಯತ್ನಿಸಿ ಬಿಡಬೇಕು. ಹಾಗೆ ಬಿಟ್ಟವನೇ ಜ್ಞಾನಿಯು. ಮೋಹವುಳ್ಳವನು ಜ್ಞಾನಿಯಲ್ಲ.

ಮದ ಏವ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ ।
ಸದಾ ಸ ಏವ ನಿಗ್ರಾಹ್ಯಃ ಸುಪ್ತೇ ದೇವೇ ವಿಶೇಷತಃ ॥ ೨೬ ॥
ಮಾನಃ ಸರ್ವೇಷು ಭೂತೇಷು ವಸತ್ಯೇವ ಭಯಾವಹಃ ।
ಕ್ಷಮಯಾ ತಂ ವಿನಿರ್ಜಿತ್ಯ ಚಾತುರ್ಮಾಸ್ಯೇ ಗುಣಾಧಿಕಃ ॥ ೨೭ ॥
ಮಾತ್ಸರ್ಯಂ ನಿರ್ಜಯೇತ್ಪ್ರಾಜ್ಞೋ ಮಹಾಪಾತಕಕಾರಣಂ ।
ಚಾತುರ್ಮಾಸ್ಯೇ ಜಿತಂ ತೇನ ತ್ರೈಲೋಕ್ಯಮಮರೈಃ ಸಹ ॥ ೨೮ ॥
ಅಹಂಕಾರಸಮಾಕ್ರಾಂತಾ ಮುನಯೋ ವಿಜಿತೇಂದ್ರಿಯಾಃ ।
ಧರ್ಮಮಾರ್ಗಂ ಪರಿತ್ಯಜ್ಯ ಕುರ್ವಂತ್ಯುನ್ಮಾರ್ಗಜಾಂ ಕ್ರಿಯಾಂ ॥ ೨೯ ॥
ಅಹಂಕಾರಂ ಪರಿತ್ಯಜ್ಯ ಸತತಂ ಸುಖಮಾಪ್ನುಯಾತ್ ।
ಚಾತುರ್ಮಾಸ್ಯೇ ವಿಶೇಷೇಣ ತಸ್ಯ ತ್ಯಾಗೇ ಮಹಾಫಲಂ ॥ ೩೦ ॥
ಏತದ್ಧಿ ತಪಸೋ ಮೂಲಂ ಯದೇತನ್ಮನಸಸ್ತ್ಯಜೇತ್ ।
ತ್ಯಕ್ತೇಷ್ವೇತೇಷು ಸರ್ವೇಷು ಪರಬ್ರಹ್ಮಮಯೋ ಭವೇತ್ ॥ ೩೧ ॥
ಪ್ರಥಮಂ ಕಾಯಶುದ್ಧ್ಯರ್ಥಂ ಪ್ರಾಜಾಪತ್ಯಂ ಸಮಾಚರೇತ್ ।
ಶಯನೇ ದೇವದೇವಸ್ಯ ವಿಶೇಷೇಣ ಮಹತ್ತಪಃ ॥ ೩೨ ॥

---

೨೬. ಮದವೇ ಮನುಷ್ಯರಿಗೆ ಶರೀರನಿಷ್ಠವಾದ ದೊಡ್ಡ ಶತ್ರುವು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಅದನ್ನು ತ್ಯಜಿಸಬೇಕು.

೨೭. ಸಮಸ್ತ ಪ್ರಾಣಿಗಳಲ್ಲಿಯೂ ಭಯವನ್ನುಂಟುಮಾಡುವ ಮಾನ (ಅಹಂಕಾರ) ವಿರುವುದು. ಚಾತುರ್ಮಾಸ್ಯದಲ್ಲಿ ಕ್ಷಮೆಯಿಂದ ಅದನ್ನು ತ್ಯಜಿಸಿದವನು ಅಧಿಕಗುಣವುಳ್ಳವನಾಗುವನು.

೨೮. ಚಾತುರ್ಮಾಸ್ಯದಲ್ಲಿ ಮಹಾ ಪಾಪಕ್ಕೆ ಕಾರಣವಾದ ಮಾತ್ಸರ್ಯವನ್ನು ಜಯಿಸಬೇಕು. ಜಯಿಸಿದವನು ಮೂರು ಲೋಕಗಳನ್ನು ದೇವತೆಗಳೊಡನೆ ಜಯಿಸಿದವನಾಗುವನು.

೨೯. ಜಿತೇಂದ್ರಿಯರಾದ ಮುನಿಗಳೂ ಅಹಂಕಾರಗೊಂಡು ಧರ್ಮಮಾರ್ಗವನ್ನು ತ್ಯಜಿಸಿ ದುರ್ಮಾರ್ಗಗಾಮಿಗಳಾಗುವರು.

೩೦. ಅಹಂಕಾರವನ್ನು ತ್ಯಜಿಸಿದವನು ಯಾವಾಗಲೂ ಸುಖಗೊಳ್ಳುವನು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಅದನ್ನು ಬಿಡುವುದರಿಂದ ಅಧಿಕ ಫಲವುಂಟಾಗುವುದು.

೩೧. ಮನಸ್ಸಿನಿಂದ ಅಹಂಕಾರವನ್ನು ತ್ಯಜಿಸುವುದು ತಪಸ್ಸಿಗೆ ಕಾರಣವಾಗುವುದು. ಇವುಗಳನ್ನೆಲ್ಲ ಬಿಡುವವನು ಪರಬ್ರಹ್ಮನಿಗೆ ಸಮನಾಗುವನು.

೩೨. ಚಾತುರ್ಮಾಸ್ಯದಲ್ಲಿ ಮೊದಲು ಕಾಯಶುದ್ಧಿಗಾಗಿ ಪ್ರಾಜಾಪತ್ಯವನ್ನಾಚರಿಸಬೇಕು. ಅದು ಮಹಾ ತಪಸ್ಸಾಗುವುದು.

ಹರೇಸ್ತು ಶಯನೇ ನಿತ್ಯಮೇಕಾಂತರಮುಪೋಷಣಂ ।
ಯಃ ಕರೋತಿ ನರೋ ಭಕ್ತ್ಯಾ ನ ಸ ಗಚ್ಛೇದ್ಯಮಾಲಯಂ ॥ ೩೩ ॥
ಹರಿಸ್ವಾಪೇ ನರೋ ನಿತ್ಯಮೇಕಭಕ್ತಂ ಸಮಾಚರೇತ್ ।
ದಿವಸೇ ದಿವಸೇ ತಸ್ಯ ದ್ವಾದಶಾಹಫಲಂ ಲಭೇತ್ ॥ ೩೪ ॥
ಚಾತುರ್ಮಾಸ್ಯೇ ನರೋ ಯಸ್ತು ಶಾಕಾಹಾರಪರೋ ಯದಿ ।
ಪುಣ್ಯಂ ಕ್ರತುಸಹಸ್ರಾಣಾಂ ಜಾಯತೇ ನಾಽತ್ರ ಸಂಶಯಃ ॥ ೩೫ ॥
ಚಾತುರ್ಮಾಸ್ಯೇ ನರೋ ನಿತ್ಯಂ ಚಾಂದ್ರಾಯಣವ್ರತಂ ಚರೇತ್ ।
ಏಕೈಕಮಾಸೇ ತತ್ಪುಣ್ಯಂ ವರ್ಣಿತುಂ ನೈವ ಶಕ್ಯತೇ ॥ ೩೬ ॥
ಸುಪ್ತೇ ದೇವೇ ಚ ಪಾರಾಕಂ ಯಃ ಕರೋತಿ ವಿಶುದ್ಧಧೀಃ ।
ನಾರೀ ವಾ ಶ್ರದ್ಧಯಾ ಯುಕ್ತಾ ಶತಜನ್ಮಾಘನಾಶನಂ ॥ ೩೭ ॥
ಕೃಚ್ಛ್ರಸೇವೀ ಭವೇದ್ಯಸ್ತು ಸುಪ್ತೇ ದೇವೇ ಜನಾರ್ದನೇ ।
ಪಾಪರಾಶಿಂ ವಿನಿರ್ಧೂಯ ವೈಕುಂಠೇ ಗಣತಾಂ ವ್ರಜೇತ್ ॥ ೩೮ ॥
ತಪ್ತಕೃಚ್ಛ್ರಪರೋ ಯಸ್ತು ಸುಪ್ತೇ ದೇವೇ ಜನಾರ್ದನೇ ।
ಕೀರ್ತಿಂ ಸಂಪ್ರಾಪ್ಯ ವಾ ಪುತ್ರಂ ವಿಷ್ಣುಸಾಯುಜ್ಯತಾಂ ವ್ರಜೇತ್ ॥ ೩೯ ॥

---

೩೩. ಈ ಚಾತುರ್ಮಾಸ್ಯದಲ್ಲಿ ಎರಡು ದಿವಸಗಳಿಗೊಮ್ಮೆ ಭಕ್ತಿಯಿಂದ ಭುಂಜಿಸುವವನು ಯಮನಗರಿಗೆ ಹೋಗುವುದಿಲ್ಲ.

೩೪. ಚಾತುರ್ಮಾಸ್ಯದಲ್ಲಿ ಮನುಷ್ಯನು ನಿತ್ಯವೂ ಒಂದು ಭೋಜನವನ್ನು ಮಾಡಿದರೆ ಒಂದೊಂದು ದಿವಸಕ್ಕೂ ಹನ್ನೆರಡು ದಿನಗಳ ಫಲ ದೊರೆಯುವುದು.

೩೫. ಚಾತುರ್ಮಾಸ್ಯದಲ್ಲಿ ಮಾನವನು ಶಾಕಾಹಾರಿಯಾದರೆ ನಿಜವಾಗಿಯೂ ಸಾವಿರ ಯಜ್ಞಗಳನ್ನು ಮಾಡಿದ ಫಲವು ದೊರೆಯುವುದು.

೩೬. ಚಾತುರ್ಮಾಸ್ಯದಲ್ಲಿ ಮನುಷ್ಯನು ಯಾವಾಗಲೂ ಚಾಂದ್ರಾಯಣ ವ್ರತವನ್ನಾಚರಿಸಬೇಕು. ಹಾಗೆ ವ್ರತವನ್ನಾಚರಿಸಿದ ಒಂದೊಂದು ತಿಂಗಳ ಪುಣ್ಯವನ್ನು ವರ್ಣಿಸಲು ಸಹ ಸಾಧ್ಯವಿಲ್ಲ.

೩೭. ಚಾತುರ್ಮಾಸ್ಯದಲ್ಲಿ ಹೆಂಗಸಾಗಲಿ, ಗಂಡಸಾಗಲಿ ಶ್ರದ್ಧೆಯಿಂದ ಪಾರಾಕವನ್ನಾಚರಿಸಿದರೆ ನೂರು ಜನ್ಮಗಳ ಪಾಪವು ನಾಶವಾಗುವುದು.

೩೮. ಚಾತುರ್ಮಾಸ್ಯದಲ್ಲಿ ಕೃಚ್ಛ್ರವನ್ನಾಚರಿಸುವವನು ಪಾಪರಾಶಿಯನ್ನು ಪರಿಹರಿಸಿಕೊಂಡು ವೈಕುಂಠದಲ್ಲಿ ಗಣತ್ವವನ್ನು ಹೊಂದುವನು.

೩೯. ಚಾತುರ್ಮಾಸ್ಯದಲ್ಲಿ ತಪ್ತಕೃಚ್ಛ್ರವನ್ನಾಚರಿಸುವವನು ಕೀರ್ತಿಯನ್ನಾಗಲಿ, ಪುತ್ರನನ್ನಾಗಲಿ ಪಡೆದು ವಿಷ್ಣುಸಾಯುಜ್ಯವನ್ನು ಹೊಂದುವನು.

ಪಯೋಗ್ಧಾಹಾರಪರೋ ಯಸ್ತು ಚಾತುರ್ಮಾಸ್ಯೇಽಭಿಜಾಯತೇ ।
ತಸ್ಯ ಪಾಪಸಹಸ್ರಾಣಿ ವಿಲಯಂ ಯಾಂತಿ ದೇಹಿನಃ ॥ ೪೦ ॥
ಮಿತಾನ್ನಾಶನಕೃದ್ಧೀರಶ್ಚಾತುರ್ಮಾಸ್ಯೇ ನರೋ ಯದಿ ।
ನಿರ್ಧೂಯ ಸಕಲಂ ಪಾಪಂ ವೈಕುಂಠಪದಮಾಪ್ನುಯಾತ್ ॥ ೪೧ ॥
ಏಕಾಽನ್ನಾಽಶನಕೃನ್ಮರ್ತ್ಯೋ ನ ರೋಗೈರಭಿಭೂಯತೇ ।
ಅಕ್ಷಾರಲವಣಾಶೀ ಚ ಚಾತುರ್ಮಾಸ್ಯೇ ನ ಪಾಪಭಾಕ್ ॥ ೪೨ ॥
ಕೃತಹಾರೋ ಮಹಾಪಾಪೈರ್ನಿರ್ಮುಕ್ತೋ ಜಾಯತೇ ಧ್ರುವಂ ।
ಹರಿಮುದ್ದಿಶ್ಯ ಮಾಸೇಷು ಚತುರ್ಷು ಚ ನ ಸಂಶಯಃ ॥ ೪೩ ॥
ಕಂದಮೂಲಾಶನಕರಃ ಪೂರ್ವಜಾನ್ ಸಹ ಚಾತ್ಮನಾ ।
ಉದ್ಧೃತ್ಯ ನರಕಾದ್ಘೋರಾದ್ಯಾತಿ ವಿಷ್ಣುಸಲೋಕತಾಂ ॥ ೪೪ ॥
ನಿತ್ಯಾಂಬುಪ್ರಾಶನಕರಶ್ಚಾತುರ್ಮಾಸ್ಯೇ ಯದಾ ಭವೇತ್ ।
ದಿನೇ ದಿನೇಽಶ್ವಮೇಧಸ್ಯ ಫಲಮಾಪ್ನೋತ್ಯಸಂಶಯಂ ॥ ೪೫ ॥
ಶೀತವೃಷ್ಟಿಸಹೋ ಯಸ್ತು ಚಾತುರ್ಮಾಸ್ಯೇ ನರೋ ಭವೇತ್ ।
ಹರಿಪ್ರೀತ್ಯೈ ಜಗನ್ನಾಥಸ್ತಸ್ಯಾತ್ಮಾನಂ ಪ್ರಯಚ್ಛತಿ ॥ ೪೬ ॥
ಮಹಾಪಾರಾಕಸಂಜ್ಞಂ ತು ಮಹತ್ತಪ ಉದಾಹೃತಂ ।
ಮಾಸೈಕಮುಪವಾಸೇನ ಸರ್ವಂ ಪೂರ್ಣಂ ಪ್ರಜಾಯತೇ ॥ ೪೭ ॥

---

೪೦–೪೧. ಚಾತುರ್ಮಾಸ್ಯದಲ್ಲಿ ಹಾಲನ್ನು ಮಾತ್ರ ಸೇವಿಸಿಕೊಂಡಿರುವವನ ಪಾಪಗಳೆಲ್ಲ ನಾಶವಾಗುವುವು. ಮಾನವನು ಚಾತುರ್ಮಾಸ್ಯದಲ್ಲಿ ಮಿತವಾಗಿ ಅನ್ನ ವನ್ನು ಭುಂಜಿಸುವವನಾದರೆ ಸಕಲ ಪಾಪಗಳೂ ನೀಗಿ ವೈಕುಂಠವನ್ನು ಸೇರುವನು.

೪೨. ಒಂದೇ ವಿಧವಾದ ಅನ್ನವನ್ನು ಭುಂಜಿಸುವ ಮಾನವನು ರೋಗಿ ಯಾಗುವುದಿಲ್ಲ. ಒಗರು ಉಪ್ಪುಗಳನ್ನು ತಿನ್ನದವನು ಪಾಪಿಯಾಗುವುದಿಲ್ಲ.

೪೩. ಚಾತುರ್ಮಾಸ್ಯದಲ್ಲಿ ವಿಷ್ಣುವನ್ನು ಉದ್ದೇಶಿಸಿ ಆಹಾರವನ್ನು ಬೇಯಿಸಿ ನಿವೇದಿಸಿ ಭುಂಜಿಸುವವನು ಮಹಾ ಪಾಪಗಳಿಂದ ಮುಕ್ತನಾಗುವನು.

೪೪. ಕಂದಮೂಲಗಳನ್ನು ಭುಂಜಿಸುವವನು ತನ್ನೊಡನೆ ಪೂರ್ವಿಕರನ್ನು ಘೋರ ನರಕದಿಂದ ಉದ್ಧರಿಸಿ ವಿಷ್ಣುಲೋಕವನ್ನು ಹೊಂದುವನು.

೪೫. ಚಾತುರ್ಮಾಸ್ಯದಲ್ಲಿ ಯಾವಾಗಲೂ ಜಲಪಾನವನ್ನು ಮಾತ್ರ ಮಾಡು ವವನು ಪ್ರತಿದಿನವೂ ಅಶ್ವಮೇಧಯಾಗದ ಫಲವನ್ನು ಪಡೆಯುವನು.

೪೬. ಚಾತುರ್ಮಾಸ್ಯದಲ್ಲಿ ಹರಿಪ್ರೀತಿಗಾಗಿ ಶೀತಮಳೆಗಳನ್ನು ಸಹಿಸುವವ ನಿಗೆ ಜಗನ್ನಾಥನು ತನ್ನನ್ನೇ ಅರ್ಪಿಸುವನು.

೪೭. ಮಹಾಪಾರಾಕವೆಂಬುದು ಮಹಾತಪಸ್ಸು. ಅದು ಒಂದು ತಿಂಗಳು ಉಪವಾಸಮಾಡುವುದರಿಂದ ಸಂಪೂರ್ಣವಾಗುವುದು.

ದೇವಸ್ವಾಪನಿನಾದೌ ತು ಯಾವತ್ಪವಿತ್ರ ದ್ವಾದಶೀ ।
ಪವಿತ್ರ ದ್ವಾದಶೀಪೂರ್ವಂ ಯಾವಚ್ಛ್ರವಣದ್ವಾದಶೀ ॥ ೪೮ ॥
ಮಹಾಪಾರಾಕಮೇತದ್ಧಿ ದ್ವಿತೀಯಂ ಪರಿಕೀರ್ತಿತಂ
ಶ್ರವಣದ್ವಾದಶೀಪೂರ್ವಂ ಪ್ರಾಪ್ತಾ ಚಾಽಶ್ವಿನದ್ವಾದಶೀ ॥ ೪೯ ॥
ಮಹಾಪಾರಾಕಂ ತೃತೀಯಂ ಪ್ರಾಜ್ಞೈಶ್ಚ ಸಮುದಾಹೃತಂ ।
ಆಶ್ವಿನದ್ವಾದಶೀ ಚಾದೌ ಪ್ರಾಪ್ತಾ ದೇವಸುಬೋಧಿನೀ ॥ ೫೦ ॥
ಮಹಾಪಾರಾಕಮೇತದ್ಧಿ ಚತುರ್ಥಂ ಪರಿಕಥ್ಯತೇ ।
ಏತೇಷಾಮೇಕಮಪಿ ಚ ನಾರೀ ವಾ ಪುರುಷೋಽಪಿ ವಾ ॥ ೫೧ ॥
ಯಃ ಕರೋತಿ ನರೋ ಭಕ್ತ್ಯಾ ಸ ಚ ವಿಷ್ಣುಃ ಸನಾತನಃ ।
ಇದಂ ಚ ಸರ್ವತಪಸಾಂ ಮಹತ್ತಪ ಉದಾಹೃತಂ ॥ ೫೨ ॥
ದುಷ್ಕರಂ ದುರ್ಲಭಂ ಲೋಕೇ ಚಾತುರ್ಮಾಸ್ಯೇ ಮಖಾಧಿಕಂ ।
ದಿವಸೇ ದಿವಸೇ ತಸ್ಯ ಯಜ್ಞಾಽಯುತಫಲಂ ಸ್ಮೃತಂ ॥ ೫೩ ॥
ಮಹತ್ತಪ ಇದಂ ಯೇನ ಕೃತಂ ಜಗತಿ ದುರ್ಲಭಂ ।
ಇದಮೇವ ಮಹಾಪುಣ್ಯಮಿದಮೇವ ಮಹತ್ಸುಖಂ ।
ಇದಮೇವ ಪರಂ ಶ್ರೇಯೋ ಮಹಾಪಾರಾಕಸೇವನಂ ॥ ೫೪ ॥
ನಾರಾಯಣೋ ವಸೇದ್ದೇಹೇ ಜ್ಞಾನಂ ತಸ್ಯ ಪ್ರಜಾಯತೇ ।
ಜೀವನ್ಮುಕ್ತಃ ಸ ಭವತಿ ಮಹಾಪಾತಕಕಾರಕಃ ॥ ೫೫ ॥

---

೪೮–೫೨. ವಿಷ್ಣುವಿನ ಶಯನ ದಿನದಿಂದ ಪವಿತ್ರದ್ವಾದಶೀವರೆಗೆ ಮೊದಲಿನ ಪಾರಾಕವೂ, ಪವಿತ್ರದ್ವಾದಶಿಯಿಂದ ಶ್ರವಣದ್ವಾದಶೀವರೆಗೆ ಎರಡನೆ ಪಾರಾಕವೂ, ಶ್ರವಣದ್ವಾದಶಿಯಿಂದ ಆಶ್ವಿನದ್ವಾದಶೀವರೆಗೆ ಮೂರನೆ ಮಹಾಪಾರಾಕವೂ, ಆಶ್ವಿನದ್ವಾದಶಿಯಿಂದ ಉತ್ಥಾನದ್ವಾದಶೀವರೆಗೆ ನಾಲ್ಕನೆ ಪಾರಾಕವೂ ಆಗಿರುವುದು. ಇವುಗಳಲ್ಲಿ ಯಾವುದಾದರೊಂದು ಪಾರಾಕವನ್ನು ಹೆಂಗಸಾಗಲಿ, ಗಂಡಸಾಗಲಿ ಭಕ್ತಿಯಿಂದ ಮಾಡಿದರೆ ಅವರು ವಿಷ್ಣುವೇ ಆಗುವರು. ಇದನ್ನು ಸಕಲ ತಪಸ್ಸುಗಳಲ್ಲಿಯೂ ಮಹಾ ತಪಸ್ಸೆನ್ನುವರು.

೫೩–೫೪. ಲೋಕದಲ್ಲಿ ಇದು ದುಷ್ಕರವೂ, ದುರ್ಲಭವೂ, ಯಜ್ಞಕ್ಕಿಂತ ಅಧಿಕವೂ ಆಗಿರುವುದು. ಒಂದೊಂದು ದಿವಸದಲ್ಲಿಯೂ ಹತ್ತುಸಾವಿರ ಯಜ್ಞಗಳ ಫಲವು ಲಭಿಸುವುದು. ಜಗತ್ತಿನಲ್ಲಿ ಇದನ್ನು ಮಾಡಿದವರು ಸಿಕ್ಕುವುದು ಕಷ್ಟ. ಈ ಪಾರಾಕಾನುಷ್ಠಾನವೇ ಅತಿ ಪುಣ್ಯವೂ, ಅತಿ ಸುಖವೂ, ಉತ್ತಮ ಶ್ರೇಯಸ್ಸೂ ಆಗಿರುವುದು.

೫೫. ಮಹಾ ಪಾಪವನ್ನು ಮಾಡಿದ್ದರೂ ಇದನ್ನು ಮಾಡಿದವನ ಶರೀರದಲ್ಲಿ ನಾರಾಯಣನು ವಾಸಿಸುವನು. ಅವನಿಗೆ ಜ್ಞಾನವುಂಟಾಗುವುದು. ಅವನು ಜೀವನ್ಮುಕ್ತನಾಗುವನು.

ತಾವದ್ಗರ್ಜಂತಿ ಪಾಪಾನಿ ನರಕಾಸ್ತಾವದೇವ ಹಿ ।
ತಾವನ್ಮಾಯಾಸಹಸ್ರಾಣಿ ಯಾವನ್ಮಾಸೋಪವಾಸಕಃ ॥ ೫೬ ॥
ಚಾತುರ್ಮಾಸ್ಯೋಪವಾಸೀ ಯೋ ಯಸ್ಯ ಪ್ರಾಂಗಣಿಕೋ ಭವೇತ್ ।
ಸೋಽಪಿ ಹತ್ಯಾಸಹಸ್ರಾಣಿ ತ್ಯಕ್ತ್ವಾ ನಿಷ್ಕಲ್ಮಷೋ ಭವೇತ್ ॥ ೫೭ ॥
ಯ ಇದಂ ಶ್ರಾವಯೇಸ್ಮರ್ತ್ಯೋ ಯಃ ಪಠೇತ್ಸತತಂ ಸ್ವಯಂ ॥ ೫೮ ॥
ಸೋಽಪಿ ವಾಚಸ್ಪತಿಸಮಃ ಫಲಂ ಪ್ರಾಪ್ನೋತ್ಯಸಂಶಯಂ ॥ ೫೯ ॥

ಇದಂ ಪುರಾಣಂ ಪರಮಂ ಪವಿತ್ರಂ
ಶೃಣ್ವನ್ ಗೃಣನ್ ಪಾಪವಿಶುದ್ಧಿಹೇತು ।
ನಾರಾಯಣಂ ತಂ ಮನಸಾ ವಿಚಿಂತ್ಯ
ಮೃತೋಽಭಿಗಚ್ಛತ್ಯಮೃತಂ ಸುರಾಧಿಕಂ ॥ ೬೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತಪೋಮಹಿಮವರ್ಣನಂ" ನಾಮ
ಅಥಾಷ್ಟತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

೫೬. ಒಂದು ತಿಂಗಳು ಉಪವಾಸಮಾಡುವವರೆಗೆ ಪಾಪಗಳೂ, ನರಕಗಳೂ, ಅನೇಕ ಮಾಯೆಗಳೂ ಇರುವುವು.

೫೭. ಯಾವನಿಗೆ ಚಾತುರ್ಮಾಸ್ಯದಲ್ಲಿ ಉಪವಾಸಮಾಡುವವನು ಅತಿಥಿಯಾಗುವನೋ, ಅವನು ಅನೇಕ ಹತ್ಯಾದೋಷದಿಂದ ಮುಕ್ತನಾಗಿ ಪಾಪರಹಿತನಾಗುವನು.

೫೮–೫೯. ಇದನ್ನು ಕೇಳುವವನೂ, ಹೇಳುವವನೂ ಬೃಹಸ್ಪತಿಗೆ ಸಮನಾಗಿ ಉತ್ತಮ ಫಲವನ್ನು ಪಡೆಯುವನು.

೬೦. ಪಾಪವನ್ನು ನೀಗಿಸುವ ಈ ಪರಮ ಪವಿತ್ರ ಪುರಾಣವನ್ನು ನಾರಾಯಣನನ್ನು ಚಿಂತಿಸುತ್ತ ಕೇಳುವವನೂ, ಹೇಳುವವನೂ ದೇಹವನ್ನು ತೊರೆದ ಬಳಿಕ ದೇವತೆಗಳಿಗಿಂತಲೂ ಅಧಿಕವಾದ ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತಪೋಮಹಿಮವರ್ಣನ" ವೆಂಬ
ಇನ್ನೂರ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ಷೋಡಶೋಪಚಾರದೀಪಮಹಿಮವರ್ಣನಂ

ನಾರದ ಉವಾಚ:—

ಉಪಚಾರೈಃ ಷೋಡಶಭಿಃ ಪೂಜನಂ ಕ್ರಿಯತೇ ಕಥಂ ।
ತೇ ಕೇ ಷೋಡಶಭಾವಾಃ ಸ್ಯುರ್ನಿತ್ಯಂ ಯೇ ಶಯನೇ ಹರೇಃ ॥ ೧ ॥
ಏತದ್ವಿಸ್ತರತೋ ಬ್ರೂಹಿ ಪೃಚ್ಛತೋ ಮೇ ಪ್ರಜಾಪತೇ ।
ತವ ಪ್ರಸಾದಮಾಸಾದ್ಯ ಜಗತ್ಪೂಜ್ಯೋ ಭವಾಮ್ಯಹಂ ॥ ೨ ॥

ಬ್ರಹ್ಮೋವಾಚ:—

ವಿಷ್ಣುಭಕ್ತಿರ್ದೃಢಾ ಕಾರ್ಯಾ ವೇದಶಾಸ್ತ್ರವಿಧಾನತಃ ।
ವೇದಮೂಲಮಿದಂ ಸರ್ವಂ ವೇದೋ ವಿಷ್ಣುಃ ಸನಾತನಃ ॥ ೩ ॥
ತೇ ವೇದಾ ಬ್ರಾಹ್ಮಣಾಧಾರಾ ಬ್ರಾಹ್ಮಣಾಶ್ಚಾಽಗ್ನಿದೈವತಾಃ ।
ಅಗ್ನೌ ಪ್ರಾಸ್ತಾಹುತಿರ್ವಿಪ್ರೋ ಯಜ್ಞೇ ದೇವಂ ಯಜನ್ ಸದಾ ॥ ೪ ॥

---

## ಕನ್ನಡದ ಅನುವಾದ

### ಷೋಡಶೋಪಚಾರದೀಪಮಹಿಮವರ್ಣನ

೧. ನಾರದನು ಹೇಳುತ್ತಾನೆ:—ಷೋಡಶೋಪಚಾರಗಳಿಂದ ಪೂಜೆಮಾಡುವುದು ಹೇಗೆ? ಚಾತುರ್ಮಾಸ್ಯದಲ್ಲಿ ಆ ಷೋಡಶ ಉಪಚಾರಗಳಾವುವು?

೨. ಎಲೈ ಬ್ರಹ್ಮನೆ! ಕೇಳುತ್ತಿರುವ ನನಗೆ ಇದನ್ನು ವಿಸ್ತಾರವಾಗಿ ಹೇಳು. ನಿನ್ನ ಅನುಗ್ರಹವನ್ನು ಪಡೆದು ನಾನು ಜಗತ್ಪೂಜ್ಯನಾಗುವೆನು.

೩. ಬ್ರಹ್ಮನು ಹೇಳುತ್ತಾನೆ:—ವೇದಶಾಸ್ತ್ರವಿಧಾನದಿಂದ ವಿಷ್ಣುವಿನಲ್ಲಿ ದೃಢವಾದ ಭಕ್ತಿಯನ್ನಿಡಬೇಕು. ಇದೆಲ್ಲವೂ ವೇದ ಮೂಲಕವಾದುವು. ಅನಾದಿಯಾದ ವಿಷ್ಣುವೇ ವೇದವು.

೪–೬. ಆ ವೇದಗಳಿಗೆ ಬ್ರಾಹ್ಮಣರು ಆಶ್ರಯರು. ಬ್ರಾಹ್ಮಣರಿಗೆ ಅಗ್ನಿಯು ದೇವತೆಯು. ಬ್ರಾಹ್ಮಣನು ಅಗ್ನಿಯಲ್ಲಿ ಆಹುತಿಗಳನ್ನಿತ್ತು ಯಜ್ಞದಲ್ಲಿ ವಿಷ್ಣುವನ್ನು ಯಾವಾಗಲೂ ಪೂಜಿಸುತ್ತ ಸಮಸ್ತ ಜಗತ್ತನ್ನು ರಕ್ಷಿಸುವನು.

ಜಗತ್ಸಂಧಾರಯೇತ್ಸರ್ವಂ ವಿಷ್ಣುಪೂಜಾರತಃ ಸದಾ ।
ನಾರಾಯಣಃ ಸ್ಮೃತೋ ಧ್ಯಾತಃ ಕ್ಲೇಶದುಃಖಾದಿನಾಶನಃ ॥ ೫ ॥
ಚಾತುರ್ಮಾಸ್ಯೇ ವಿಶೇಷೇಣ ಜಲರೂಪ ಗತೋ ಹರಿಃ ।
ಜಲಾದನ್ನಾನಿ ಜಾಯಂತೇ ಜಗತಾಂ ತೃಪ್ತಿಹೇತವೇ ॥ ೬ ॥
ವಿಷ್ಣುದೇಹಾಂಶಸಂಭೂತಂ ತದನ್ನಂ ಬ್ರಹ್ಮ ಇಷ್ಯತೇ ।
ತದನ್ನಂ ವಿಷ್ಣವೇ ದತ್ವಾ ಹ್ಯಾವಾಹನಪುರಸ್ಸರಂ ॥ ೭ ॥
ಪುನರ್ಜನ್ಮ ಜರಾಕ್ಲೇಶ ಸಂಸ್ಕಾರೈರ್ನಾಭಿಭೂಯತೇ ।
ಆಕಾಶಸಂಭವೋ ವೇದ ಏಕ ಏವ ಪುರಾಽಭವತ್ ॥ ೮ ॥
ತತೋ ಯಜುಃ ಸಾಮಸಂಜ್ಞಾವೃಗ್ವೇದಃ ಪ್ರಾಪ ಭೂತಯೇ ।
ಋಗ್ವೇದೋಽಭಿಹಿತಃ ಪೂರ್ವಂ ಯಜುಃ ಸಹಸ್ರಶೀರ್ಷೇತಿ ಚ ॥ ೯ ॥
ಷೋಡಶರ್ಚಂ ಮಹಾಸೂಕ್ತಂ ನಾರಾಯಣಮಯಂ ಪರಂ ।
ತಸ್ಯಾಽಪಿ ಪಾಠಮಾತ್ರೇಣ ಬ್ರಹ್ಮಹತ್ಯಾ ನಿವರ್ತತೇ ॥ ೧೦ ॥
ವಿಪ್ರಃ ಪೂರ್ವಂ ನ್ಯಸೇದ್ದೇಹೇ ಸ್ಮೃತ್ಯುಕ್ತೇನ ನಿಜೇ ಬುಧಃ ।
ತತಸ್ತು ಪ್ರತಿಮಾಯಾಂ ಚ ಶಾಲಿಗ್ರಾಮೇ ವಿಶೇಷತಃ ॥ ೧೧ ॥
ಕ್ರಮೇಣ ಚ ತತಃ ಕುರ್ಯಾತ್ಸಲ್ಯಾ ದಾವಾಹನಾದಿಕಂ ।
ಆವಾಹ್ಯ ಸಕಲಂ ರೂಪಂ ವೈಕುಂಠಸ್ಥಾನಸಂಸ್ಥಿತಂ ॥ ೧೨ ॥

---

ಚಾತುರ್ಮಾಸ್ಯದಲ್ಲಿ ಜಲರೂಪವನ್ನು ಹೊಂದಿದ ನಾರಾಯಣನನ್ನು ಸ್ಮರಿಸಿ ಧ್ಯಾನಿಸಿದರೆ ಅವನು ಕ್ಲೇಶಾದಿಗಳನ್ನು ನಾಶಗೊಳಿಸುವನು. ಜಗತ್ತುಗಳ ತೃಪ್ತಿಗಾಗಿ ಜಲದಿಂದ ಅನ್ನಗಳುಂಟಾಗುವುವು.

೭–೮. ವಿಷ್ಣುದೇಹದಿಂದ ಹುಟ್ಟಿದ ಆ ಅನ್ನವು ಬ್ರಹ್ಮವೆನ್ನಿಸಿಕೊಳ್ಳುವುದು. ಆವಾಹನಪುರಸ್ಸರವಾಗಿ ಆ ಅನ್ನವನ್ನು ವಿಷ್ಣುವಿಗೆ ದಾನಮಾಡಿದವನು ಪುನರ್ಜನ್ಮ, ಮುಪ್ಪು, ಕ್ಲೇಶ ಸಂಸ್ಕಾರಗಳಿಂದ ತಿರಸ್ಕೃತನಾಗುವುದಿಲ್ಲ. ಹಿಂದೆ ಆಕಾಶದಿಂದ ಹುಟ್ಟಿದ ಒಂದೇ ವೇದವು ಇದ್ದಿತು.

೯–೧೦. ಅನಂತರ ಋಗ್ವೇದ ಯಜುರ್ವೇದ, ಸಾಮವೇದ ಎಂಬ ಹೆಸರನ್ನು ಲೋಕಾಭಿವೃದ್ಧಿಗಾಗಿ ಹೊಂದಿತು. ಋಗ್ವೇದವು ಮೊದಲು ಯಜುಸ್ಸಹಸ್ರಶೀರ್ಷವೆಂಬ ಹದಿನಾರು ಋಕ್ಕುಗಳುಳ್ಳುದಾಗಿ, ನಾರಾಯಣನನ್ನು ಪ್ರತಿಪಾದಿಸುವ ಮಹಾ ಸೂಕ್ತರೂಪವಾಗಿದ್ದಿತು. ಅವನ್ನು ಪಠಿಸುವುದರಿಂದಲೇ ಬ್ರಹ್ಮಹತ್ಯೆಯು ನೀಗುವುದು.

೧೧–೧೨. ಬ್ರಾಹ್ಮಣನು ಮೊದಲು ಸ್ಮೃತ್ಯುಕ್ತಕ್ರಮದಿಂದ ತನ್ನ ದೇಹದಲ್ಲಿ ನಾರಾಯಣನು ಸನ್ನಿಹಿತನಾಗುವಂತೆ ಮಾಡಿ ಅನಂತರ ಕ್ರಮವಾಗಿ ಪ್ರತಿಮೆ, ಶಾಲಿಗ್ರಾಮ ಇವುಗಳಲ್ಲಿ ಆವಾಹನಾದಿಗಳನ್ನು ಮಾಡಬೇಕು. ವೈಕುಂಠದಲ್ಲಿರುವ

ಕೌಸ್ತುಭೇನ ವಿರಾಜಂತಂ ಸೂರ್ಯಕೋಟಿ ಸಮಪ್ರಭಂ ।
ದಂಡಹಸ್ತಂ ಶಿಖಾಸೂತ್ರಸಹಿತಂ ಪೀತವಾಸಸಂ ॥ ೧೩ ॥
ಮಹಾ ಸನ್ಯಾಸಿನಂ ಧ್ಯಾಯೇಚ್ಚಾತುರ್ವರ್ಣ್ಯೇ ವಿಶೇಷತಃ ।
ಏವಂ ರೂಪಮಯಂ ವಿಷ್ಣುಂ ಸರ್ವಪಾಪೌಘಹಾರಿಣಂ ॥ ೧೪ ॥
ಆವಾಹಯೇಚ್ಚ ಪುರತೋ ಧ್ಯಾನಸಂಸ್ಥಂ ದ್ವಿಜೋತ್ತಮ ।
ಋಚಾ ಪ್ರಥಮಯಾ ಚಾಸ್ಯೋಂಕಾರಾದಿಸಮುದೀರ್ಣಯಾ ॥ ೧೫ ॥
ದ್ವಿತೀಯಯಾ ಚಾಽಽಸನಂ ಚ ಪಾರ್ಷದೈಶ್ಚ ಸಮನ್ವಿತಂ ।
ಸೌವರ್ಣಾನ್ಯಾಸನಾನ್ಯೇಷಾಂ ಮನಸಾ ಪರಿಚಿಂತಯೇತ್ ॥ ೧೬ ॥
ಚಿಂತನೈರ್ಭಕ್ತಿಯೋಗೇನ ಪರಿಪೂರ್ಣಂ ಚ ತದ್ಭವೇತ್ ।
ಪಾದ್ಯಂ ತೃತೀಯಯಾ ಕಾರ್ಯಂ ಗಂಗಾಂ ತತ್ರ ಸ್ಮರೇದ್ಬುಧಃ ॥ ೧೭ ॥
ಅರ್ಘ್ಯಃ ಕಾರ್ಯಸ್ತತೋ ವಿಷ್ಣೋಃ ಸರಿದ್ಭಿಃ ಸಪ್ತಸಾಗರೈಃ ।
ಪುನರಾಚಮನಂ ಕಾರ್ಯಮಮೃತೇನ ಜಗತ್ಪತೇಃ ॥ ೧೮ ॥
ತ್ರಿಭಿರಾಚಮನೈಃ ಶುದ್ಧಿರ್ಬ್ರಾಹ್ಮಣಸ್ಯ ನಿಗದ್ಯತೇ ।
ಅದ್ಭಿಸ್ತು ಪ್ರಕೃತಿಸ್ಥಾಭಿರ್ಹೀನಾಭಿಃ ಫೇನಬುದ್ಬುದೈಃ ॥ ೧೯ ॥

---

ಕೌಸ್ತುಭದಿಂದ ವಿರಾಜಿಸುವವನೂ, ಕೋಟಿಸೂರ್ಯರಿಗೆ ಸಮವಾದ ಕಾಂತಿಯುಳ್ಳವನೂ, ಕೈಯಲ್ಲಿ ದಂಡವನ್ನು ಹಿಡಿದಿರುವವನೂ, ಶಿಖಾಯಜ್ಞೋಪವೀತಗಳಿಂದ ಕೂಡಿರುವವನೂ, ಪೀತಾಂಬರಧಾರಿಯೂ, ಮಹಾ ಸನ್ಯಾಸಿಯೂ ಆದ ಮಹಾವಿಷ್ಣುವನ್ನು ಧ್ಯಾನಮಾಡಬೇಕು. ಇಂತಹ ರೂಪವುಳ್ಳವನೂ, ಸಕಲ ಪಾಪ ಪರಿಹಾರಕನೂ ಆದ ವಿಷ್ಣುವನ್ನು ತನ್ನ ಮುಂದಿರುವ ಪ್ರತಿಮೆಯಲ್ಲಿ ಓಂಕಾರಾದಿಗಳಿಂದ ಸಹಿತವಾದ ಮೊದಲಿನ ಋಕ್ಕಿನಿಂದ ಆವಾಹನ ಮಾಡಬೇಕು.

೧೬–೧೭. ಎರಡನೆಯ ಋಕ್ಕಿನಿಂದ ಪರಿವಾರದಿಂದ ಸಹಿತನಾದ ವಿಷ್ಣುವಿಗೆ ಮನಸ್ಸಿನಿಂದ ಸುವರ್ಣಮಯವಾದ ಆಸನಗಳನ್ನು ಆಲೋಚಿಸುತ್ತ ಆಸನವನ್ನು ಕೊಡಬೇಕು. ಭಕ್ತಿಯಿಂದ ಚಿಂತಿಸುವುದರಿಂದ ಅದು ಪರಿಪೂರ್ಣವಾಗುವುದು. ಗಂಗೆಯನ್ನು ಸ್ಮರಿಸುತ್ತ ಮೂರನೆಯ ಋಕ್ಕಿನಿಂದ ಪಾದ್ಯವನ್ನು ನೀಡಬೇಕು.

೧೮. ಅನಂತರ ನಾಲ್ಕನೆಯ ಋಕ್ಕಿನಿಂದ ವಿಷ್ಣುವಿಗೆ ಸಪ್ತಸಮುದ್ರಗಳ ಜಲದಿಂದ ಅರ್ಘ್ಯವನ್ನು ಸಮರ್ಪಿಸಿ ಅಮೃತದಿಂದ ಆಚಮನವನ್ನು ಅರ್ಪಿಸಬೇಕು.

೧೯–೨೦. ನೊರೆ, ಗುಳ್ಳೆಗಳಿಲ್ಲದಿರುವುದೂ, ಬ್ರಾಹ್ಮಣಾದಿ ತ್ರಿವರ್ಣವನ್ನನುಸರಿಸಿ ಹೃದಯ, ಕಂಠ, ಕಪೋಲಗಳನ್ನು ಮುಟ್ಟುವುದೂ ಆದ ನೀರಿನಿಂದ ಮೂರುಸಾರಿ ಆಚಮನ ಮಾಡುವುದರಿಂದ ಬ್ರಾಹ್ಮಣಾದಿ ತ್ರಿವರ್ಣದವರು

ಹೃತ್ಕಂಠ ತಾಲುಗಾಭಿಶ್ಚ ಯಥಾವರ್ಣಂ ದ್ವಿಜಾತಯಃ ।
ಶುದ್ಧ್ಯೇರನ್ ಸ್ತ್ರೀ ಚ ಶೂದ್ರಶ್ಚ ಸಕೃತ್ ಸ್ಪೃಷ್ಟಾಭಿರಂತತಃ ॥ ೨೦ ॥
ಪಂಚಮ್ಯಾಚಮನಂ ಕಾರ್ಯಂ ಭಕ್ತಿಯುಕ್ತೇನ ಚೇತಸಾ ।
ಭಕ್ತಿಗ್ರಾಹ್ಯೋ ಹೃಷೀಕೇಶೋ ಭಕ್ತ್ಯಾಽಽತ್ಮಾನಂ ಪ್ರಯಚ್ಛತಿ ॥ ೨೧ ॥
ತತಃ ಸುವಾಸಿತೈಸ್ತೋಯೈಃ ಸರ್ವೌಷಧಿಸಮನ್ವಿತೈಃ ।
ಶೇಷೋದಕೈಃ ಸ್ವರ್ಣಘಟೈಃ ಸ್ನಾನಂ ದೇವಸ್ಯ ಕಾರಯೇತ್ ॥ ೨೨ ॥
ತೀರ್ಥೋಽದಕೈಃ ಶ್ರದ್ಧಯಾ ಚ ಮನಸಾ ಸಮುಪಾಹೃತೈಃ ।
ಅಶ್ರದ್ಧಯಾ ರತ್ನರಾಶಿಃ ಪ್ರದತ್ತೋ ನಿಷ್ಫಲೋ ಭವೇತ್ ॥ ೨೩ ॥
ನಾರ್ಯಪಿ ಶ್ರದ್ಧಯಾ ದತ್ತಮನಂತತ್ವಾಯ ಕಲ್ಪತೇ ।
ಚಾತುರ್ಮಾಸ್ಯೇ ವಿಶೇಷೇಣ ಶ್ರದ್ಧಯಾ ಪೂಯತೇ ನರಃ ॥ ೨೪ ॥
ಷಷ್ಠ್ಯಾ ಸ್ನಾನಂ ತತಃ ಕಾರ್ಯಂ ಪುನರಾಚಮನಂ ಭವೇತ್ ।
ವರಾಚ್ಚ ವಾಸಸೀ ಸ್ವರ್ಣಸಹಿತೇ ಭಕ್ತಿಶಕ್ತಿತಃ ॥ ೨೫ ॥
ಆಚ್ಛಾದಿತಂ ಜಗತ್ಸರ್ವಂ ವಸ್ತ್ರೇಣಾಚ್ಛಾದಿತೋ ಹರಿಃ ।
ಚಾತುರ್ಮಾಸ್ಯೇ ವಿಶೇಷೇಣ ವಸ್ತ್ರದಾನಂ ಮಹಾಫಲಂ ॥ ೨೬ ॥

---

ಶುದ್ಧರಾಗುವರು. ಸ್ತ್ರೀ ಶೂದ್ರರು ಒಂದು ಸಾರಿ ಆಚಮನ ಮಾಡುವುದರಿಂದಲೇ ಶುದ್ಧರಾಗುವರು.

೨೧. ಐದನೆಯ ಋಕ್ಕಿನಿಂದ ಭಕ್ತಿಯಿಂದ ಸಹಿತವಾಗಿ ಮನಸ್ಸಿನಿಂದ ಆಚಮನ ಮಾಡಬೇಕು. ವಿಷ್ಣುವು ಭಕ್ತಿಗೆ ವಶನಾಗುವನು. ಅವನು ಭಕ್ತಿಯನ್ನಿಟ್ಟರೆ ತನ್ನನ್ನೂ ಅರ್ಪಿಸಿಕೊಳ್ಳುವನು.

೨೨–೨೩. ಬಳಿಕ ಸುವಾಸನೆಗೊಂಡುದೂ, ಸಮಸ್ತೌಷಧಿಗಳಿಂದ ಕೂಡಿರುವುದೂ, ಶ್ರದ್ಧೆಗೊಂಡ ಮನಸ್ಸಿನಿಂದ ತಂದಿರುವುದೂ ಆದ ತೀರ್ಥೋದಕಗಳಿಂದ ತುಂಬಿದ ಸುವರ್ಣಘಟಗಳಿಂದ ವಿಷ್ಣುವಿಗೆ ಅಭಿಷೇಕ ಮಾಡಬೇಕು. ಅಶ್ರದ್ಧೆಯಿಂದ ರತ್ನರಾಶಿಯನ್ನಿತ್ತರೂ ಅದು ನಿಷ್ಫಲವಾಗುವುದು.

೨೪. ಶ್ರದ್ಧೆಯಿಂದ ನೀರನ್ನು ಕೊಟ್ಟರೂ ಅದು ಅನಂತವಾಗುವುದು. ಚಾತುರ್ಮಾಸ್ಯದಲ್ಲಿ ಮನುಷ್ಯನು ಶ್ರದ್ಧೆಯಿಂದ ಪವಿತ್ರನಾಗುವನು.

೨೫. ಆರನೆಯ ಋಕ್ಕಿನಿಂದ ಅಭಿಷೇಕಮಾಡಿ ಪುನರಾಚಮನವನ್ನು ಸಮರ್ಪಿಸಬೇಕು. ಅನಂತರ ಭಕ್ತಿಯಿಂದ ಶಕ್ತ್ಯನುಸಾರ ಸ್ವರ್ಣಸಹಿತವಾದ ವಸ್ತ್ರಗಳನ್ನು ದಾನಮಾಡಬೇಕು.

೨೬. ಜಗತ್ತೆಲ್ಲ ವಿಷ್ಣುವಿನಿಂದ ಆವೃತವಾಗಿರುವುದು. ಆ ಹರಿಯು ವಸ್ತ್ರದಿಂದ ಆಚ್ಛಾದಿತನಾಗುವನು. ಚಾತುರ್ಮಾಸ್ಯದಲ್ಲಿ ವಸ್ತ್ರದಾನವು ಅತಿಶಯ ಫಲವನ್ನೀಯುವುದು.

ಪುನರಾಚಮನಂ ದೇಯಂ ಯತಯೇ ವಿಷ್ಣುರೂಪಿಣೇ ।
ವಸ್ತ್ರದಾನಂ ಚ ಸಪ್ತಮ್ಯಾ ಕಾರ್ಯಂ ವಿಷ್ಣೋರ್ಮುನೀಶ್ವರ ॥ ೨೭ ॥
ಯಜ್ಞೋಪವೀತಮಷ್ಟಮ್ಯಾ ತಚ್ಚಾಽಧ್ಯಾತ್ಮತಯಾ ಶೃಣು ।
ಸೂರ್ಯಕೋಟಿಸಮಸ್ಪರ್ಶಂ ತೇಜಸಾ ಭಾಸ್ವರಂ ತಥಾ ॥ ೨೮ ॥
ಕ್ರೋಧಾಭಿಭೂತೇ ವಿಪ್ರೇ ತು ತಡಿತ್ಕೋಟಿಸಮಪ್ರಭಂ ।
ಸೂರ್ಯೇಂದು ವಹ್ನಿಸಂಯೋಗಾದ್ಗುಣತ್ರಯಸಮನ್ವಿತಂ ॥ ೨೯ ॥
ತ್ರಯೀಮಯಂ ಬ್ರಹ್ಮವಿಷ್ಣುರುದ್ರರೂಪಂ ತ್ರಿವಿಷ್ಟಪಂ ।
ಯಸ್ಯ ಪ್ರಭಾವಾದ್ವಿಪ್ರೇಂದ್ರ ಮಾನವೋ ದ್ವಿಜ ಉಚ್ಯತೇ ॥ ೩೦ ॥
ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾದ್ದ್ವಿಜ ಉಚ್ಯತೇ ।
ಶಾಪಾಽನುಗ್ರಹಸಾಮರ್ಥ್ಯಂ ತಥಾ ಕ್ರೋಧಃ ಪ್ರಸನ್ನತಾ ॥ ೩೧ ॥
ತ್ರೈಲೋಕ್ಯಪ್ರವರತ್ವಂ ಚ ಬ್ರಾಹ್ಮಣಾದೇವ ಜಾಯತೇ ।
ನ ಬ್ರಾಹ್ಮಣಸಮೋ ಬಂಧುರ್ನ ಬ್ರಾಹ್ಮಣಸಮಾ ಗತಿಃ ॥ ೩೨ ॥
ನ ಬ್ರಾಹ್ಮಣಸಮಃ ಕಶ್ಚಿತ್ತ್ರೈಲೋಕ್ಯೇ ಸ ಚರಾಚರೇ ।
ದತ್ತೋಪವೀತೇ ಬ್ರಹ್ಮಣ್ಯೇ ಸುಪ್ತೇ ದೇವೇ ಜನಾರ್ದನೇ ॥ ೩೩ ॥

---

೨೭. ಸನ್ಯಾಸಿಯ ರೂಪವನ್ನು ಧರಿಸಿದ ವಿಷ್ಣುವಿಗೆ ಪುನರಾಚಮನವನ್ನು ಕೊಡಬೇಕು. ಏಳನೆಯ ಋಕ್ಕಿನಿಂದ ವಿಷ್ಣುವಿಗೆ ವಸ್ತ್ರವನ್ನರ್ಪಿಸಬೇಕು.

೨೮–೩೦. ಎಂಟನೆಯ ಋಕ್ಕಿನಿಂದ ಯಜ್ಞೋಪವೀತವನ್ನು ಕೊಡಬೇಕು. ಅದರ ಸ್ವರೂಪವನ್ನು ಪಾರಮಾರ್ಥಿಕರೂಪದಿಂದ ಕೇಳು. ಆ ಯಜ್ಞೋಪವೀತವು ಕೋಟಿ ಸೂರ್ಯರಿಗೆ ಸಮವಾದ ಸ್ಪರ್ಶವುಳ್ಳುದೂ, ತೇಜಸ್ಸಿನಿಂದ ಪ್ರಕಾಶಮಾನವಾದುದೂ, ವಿಪ್ರನು ಕುಪಿತನಾಗಲು ಕೋಟಿ ಮಿಂಚುಗಳಂತೆ ಕಾಂತಿಯುಳ್ಳುದೂ, ಸೂರ್ಯ, ಚಂದ್ರ, ಅಗ್ನಿಗಳ ಸಂಬಂಧವುಳ್ಳ ಮೂರು ದಾರಗಳಿಂದ ಕೂಡಿರುವುದೂ, ವೇದಸ್ವರೂಪವುಳ್ಳುದೂ, ಬ್ರಹ್ಮ, ವಿಷ್ಣು, ರುದ್ರರೂಪವಾದುದೂ ಆಗಿರುವುದು. ಇದರ ಪ್ರಭಾವದಿಂದ ಮನುಷ್ಯನು ದ್ವಿಜನೆನ್ನಿಸಿಕೊಳ್ಳುವನು.

೩೧–೩೨. ಹುಟ್ಟುವಾಗ ಶೂದ್ರನಾಗಿ ಜನಿಸಿದ ಮಾನವನು ಸಂಸ್ಕಾರದಿಂದ ದ್ವಿಜನೆನ್ನಿಸಿಕೊಳ್ಳುವನು. ಈ ಬ್ರಾಹ್ಮಣ್ಯದಿಂದಲೇ ನರನು ಶಾಪಾನುಗ್ರಹ ಸಾಮರ್ಥ್ಯವನ್ನೂ, ಕ್ರೋಧ ಪ್ರಸನ್ನತೆಗಳನ್ನೂ, ತ್ರೈಲೋಕ್ಯಶ್ರೈಷ್ಠ್ಯವನ್ನೂ ಹೊಂದುವನು. ಬ್ರಾಹ್ಮಣನಿಗೆ ಸಮನಾದ ಬಂಧುವೂ, ಗತಿಯೂ ಇಲ್ಲ.

೩೩–೩೪. ಮೂರು ಲೋಕಗಳಲ್ಲಿ ಬ್ರಾಹ್ಮಣನಿಗೆ ಸಮಾನನಾದವನು ಯಾವನೂ ಇಲ್ಲ. ಚಾತುರ್ಮಾಸ್ಯದಲ್ಲಿ ವಿಷ್ಣುವಿಗೆ ಯಜ್ಞೋಪವೀತವನ್ನರ್ಪಿಸಲು

ಸರ್ವಂ ಜಗದ್ಬ್ರಹ್ಮಮಯಂ ಸಂಜಾತಂ ನಾಽತ್ರ ಸಂಶಯಃ ।
ನವಮ್ಯಾ ಚ ಸುಲೇಪಶ್ಚ ಕರ್ತವ್ಯೋ ಯಜ್ಞಮೂರ್ತಯೇ ॥ ೩೪ ॥
ಸುಯಕ್ಷಕರ್ದಮೈರ್ಲಿಪ್ತೋ ವಿಷ್ಣುರ್ಯೇನ ಜಗದ್ಗುರುಃ ।
ತೇನಾಪ್ಯಾಯಿತಮೇತದ್ಧಿ ವಾಸಿತಂ ಯಶಸಾ ಜಗತ್ ॥ ೩೫ ॥
ತೇಜಸಾ ಭಾಸ್ಕರೋ ಲೋಕೇ ದೇವತ್ವಂ ಪ್ರಾಪ್ಯ ಮಾನವಃ ।
ಬ್ರಹ್ಮಲೋಕಾದಿಕೇ ಲೋಕೇ ಮೋದತೇ ಚಂದನಪ್ರದಃ ॥ ೩೬ ॥
ಚಂದನಾಲೇಪ ಸುಭಗಂ ವಿಷ್ಣುಂ ಪಶ್ಯಂತಿ ಮಾನವಾಃ ।
ನ ತೇ ಯಮಪುರಂ ಯಾಂತಿ ಚಾತುರ್ಮಾಸ್ಯೇ ವಿಶೇಷತಃ ॥ ೩೭ ॥
ದಶಮ್ಯಾ ಪುಷ್ಪಪೂಜಾ ಚ ಭಕ್ತಿಪೂಜಾ ತಥೈವ ಚ ।
ಪುಷ್ಪೇ ಚೈವ ಸದಾ ಲಕ್ಷ್ಮೀರ್ವಸತ್ಯೇವ ನಿರಂತರಂ ॥ ೩೮ ॥
ಲಕ್ಷ್ಮ್ಯಾಃ ಸರ್ವತ್ರಗಾಮಿನ್ಯಾ ದೋಷೋ ನೈವ ಪ್ರಜಾಯತೇ ।
ಯಥಾ ಸರ್ವಮಯೋ ವಿಷ್ಣುರ್ನದೋಷೈರನುಭೂಯತೇ ॥ ೩೯ ॥
ತಥಾ ಸರ್ವಮಯೀ ಲಕ್ಷ್ಮೀಃ ಸತೀತ್ವಾನ್ನೈವ ಹೀಯತೇ ।
ಪ್ರತಿಮಾಸು ಚ ಸರ್ವಾಸು ಸರ್ವಭೂತೇಷು ನಿತ್ಯದಾ ॥ ೪೦ ॥
ಮನುಷ್ಯದೇವಪಿತೃಷು ಪುಷ್ಪಪೂಜಾ ವಿಧೀಯತೇ ।
ಪುಷ್ಪೈಃ ಸಂಪೂಜಿತೋ ಯೇನ ಹರಿರೇಕಃ ಶ್ರಿಯಾ ಸಹ ॥ ೪೧ ॥

---

ಸಕಲಜಗತ್ತು ಬ್ರಹ್ಮರೂಪವಾಯಿತು. ಒಂಬತ್ತನೆಯ ಋಕ್ಕಿನಿಂದ ಯಜ್ಞಮೂರ್ತಿಯಾದ ವಿಷ್ಣುವಿಗೆ ಲೇಪನದ್ರವ್ಯವನ್ನು ಕೊಡಬೇಕು.

೩೫. ಜಗದ್ಗುರುವಾದ ವಿಷ್ಣುವಿಗೆ ಗಂಧಾದಿಗಳಿಂದ ಸುವಾಸನೆಗೊಂಡ ಪರಿಮಳದ್ರವ್ಯವನ್ನು ಲೇಪಿಸುವವನು ಈ ಜಗತ್ತನ್ನು ಯಶಸ್ಸಿನಿಂದ ಬೆಳಗಿಸಿ ಸಂತೋಷಗೊಳಿಸುವನು.

೩೬. ವಿಷ್ಣುವಿಗೆ ಚಂದನವನ್ನರ್ಪಿಸುವವನು ತೇಜಸ್ಸಿನಿಂದ ಸೂರ್ಯನಂತಾಗಿ ದೇವತ್ವವನ್ನು ಹೊಂದಿ ಬ್ರಹ್ಮಾದಿಲೋಕಗಳಲ್ಲಿ ಆನಂದಪಡುವನು.

೩೭. ಚಾತುರ್ಮಾಸ್ಯದಲ್ಲಿ ಚಂದನಲೇಪನದಿಂದ ಮನೋಹರನಾದ ವಿಷ್ಣುವನ್ನು ನೋಡುವವರು ಯಮಪುರಿಗೆ ತೆರಳುವುದಿಲ್ಲ.

೩೮. ಹತ್ತನೆಯ ಋಕ್ಕಿನಿಂದ ಪುಷ್ಪಪೂಜೆಯನ್ನೂ, ಭಕ್ತಿಪೂಜೆಯನ್ನೂ ಮಾಡಬೇಕು. ಪುಷ್ಪದಲ್ಲಿ ಯಾವಾಗಲೂ ಲಕ್ಷ್ಮಿಯು ವಾಸಿಸುವಳು.

೩೯–೪೫. ಸರ್ವವ್ಯಾಪಿಯಾದ ವಿಷ್ಣುವು ದೋಷಗ್ರಸ್ತನಾಗದಿರುವಂತೆ ಎಲ್ಲೆಡೆಯಲ್ಲಿಯೂ ಇರುವ ಲಕ್ಷ್ಮಿಯು ದುಷ್ಟಳಾಗುವುದಿಲ್ಲ. ಅವಳ ಸತೀತ್ವವು ನಷ್ಟವಾಗುವುದಿಲ್ಲ. ಪುಷ್ಪಪೂಜೆಯು ಸಕಲ ಪ್ರತಿಮೆಗಳಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ, ಮನುಷ್ಯ ದೇವ ಪಿತೃಗಳಲ್ಲಿಯೂ ವಿಹಿತವಾಗಿರುವುದು. ವಿಷ್ಣು

ಆಬ್ರಹ್ಮಸ್ತಂಬಪರ್ಯಂತಂ ಪೂಜಿತಂ ತೇನ ವೈ ಜಗತ್ ।
ಅತಃ ಸುಶ್ವೇತಕುಸುಮೈರ್ವಿಷ್ಣುಂ ಸಂಪೂಜಯೇತ್ಸದಾ ॥ ೪೨ ॥
ಚಾತುರ್ಮಾಸ್ಯೇ ವಿಶೇಷೇಣ ಭಕ್ತಿಯುಕ್ತಃ ಸದಾ ಶುಚಿಃ ।
ಭಕ್ತ್ಯಾ ಸುವಿಹಿತಾ ಬ್ರಹ್ಮನ್ ಪುಷ್ಪಪೂಜಾ ಸರ್ವೈರ್ಯದಿ ॥ ೪೩ ॥
ಯಂ ಯಂ ಕಾಮಮಭಿಧ್ಯಾಯೇತ್ತಸ್ಯ ಸಿದ್ಧಿರ್ನಿರಂತರಾ ।
ಪುಷ್ಪೈರುಪಚಿತಂ ವಿಷ್ಣುಂ ಯದ್ಯನ್ಯೇ ಪ್ರಣಮಂತಿ ಚ ॥ ೪೪ ॥
ತೇಷಾಮಪ್ಯಕ್ಷಯಾ ಲೋಕಾಶ್ಚಾತುರ್ಮಾಸ್ಯೇಽಧಿಕಂ ಫಲಂ ।
ಏಕಾದಶ್ಯಾಂ ಧೂಪದಾನಂ ಕರ್ತವ್ಯಂ ಯತಯೋ ಹರೌ ॥ ೪೫ ॥
ವನಸ್ಪತಿರಸೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ॥ ೪೬ ॥
ಇಮಂ ಮಂತ್ರಂ ಸಮುಚ್ಚಾರ್ಯ ಧೂಪಮಾಗುರುಜಂ ಶುಭಂ ।
ದದ್ಯಾದ್ಭಗವತೇ ನಿತ್ಯಂ ಚಾತುರ್ಮಾಸ್ಯೇ ಮಹಾಫಲಂ ॥ ೪೭ ॥
ಕರ್ಪೂರ ಚಂದನದಲೈಃ ಸಿತಾಮಧುಸಮನ್ವಿತಂ ।
ಮಾಂಸೀ ಜಲಾಭಿಃ ಸಹಿತಂ ಸುಪ್ತೇ ದೇವೇಽಥ ಸತ್ತಮ ॥ ೪೮ ॥
ದೇವಾಘ್ರಾಣೇನ ತುಷ್ಯಂತಿ ಧೂಪಂ ಘ್ರಾಣಹರಂ ಶುಭಂ ।
ದ್ವಾದಶ್ಯಾ ದೀಪದಾನಂ ತು ಕರ್ತವ್ಯಂ ಮುಕ್ತಿಮಿಚ್ಛುಭಿಃ ॥ ೪೯ ॥

---

ವನ್ನು ಲಕ್ಷ್ಮಿಯೊಡನೆ ಪೂಜಿಸಿದರೆ ಬ್ರಹ್ಮನಿಂದ ತೃಣದವರೆಗೆ ಸಮಸ್ತವನ್ನೂ ಪೂಜಿಸಿದಂತಾಗುವುದು. ಆದುದರಿಂದ ಚಾತುರ್ಮಾಸ್ಯದಲ್ಲಿ ಭಕ್ತಿಪೂರ್ವಕವಾಗಿ ಶ್ವೇತಪುಷ್ಪಗಳಿಂದ ವಿಷ್ಣುವನ್ನು ಸತತವೂ ಪೂಜಿಸಬೇಕು. ಭಕ್ತಿಯಿಂದ ವಿಷ್ಣುವಿಗೆ ಪುಷ್ಪಪೂಜೆಯನ್ನು ಮಾಡಿದ ಮಾನವರಿಗೆ ಚಿಂತಿಸಿದ ಇಷ್ಟಾರ್ಥವು ಸಿದ್ಧಿಸುವುದು. ಪುಷ್ಪಗಳಿಂದ ಪೂಜಿಸಿದ ವಿಷ್ಣುವನ್ನು ವಂದಿಸಿದ ಇತರ ಮಾನವರಿಗೆ ಅಕ್ಷಯಲೋಕಗಳು ಲಭಿಸುವುವು. ಚಾತುರ್ಮಾಸ್ಯದಲ್ಲಿ ಅಧಿಕ ಫಲವುಂಟಾಗುವುದು. ಹನ್ನೊಂದನೆಯ ಶುಕ್ಕಿನಿಂದ ವಿಷ್ಣುವಿಗೆ ಧೂಪವನ್ನರ್ಪಿಸಬೇಕು.

೪೬–೪೮. ವನಸ್ಪತಿಯ ರಸವೂ, ದಿವ್ಯಗಂಧದಿಂದ ಕೂಡಿರುವುದೂ, ಸಕಲ ದೇವತೆಗಳಿಗೆ ಆಘ್ರಾಣಿಸಲು ಯೋಗ್ಯವೂ ಆದ ಈ ಧೂಪವನ್ನು ಸ್ವೀಕರಿಸು. ಎಂಬ ಮಂತ್ರದಿಂದ ವಿಷ್ಣುವಿಗೆ ಕರ್ಪೂರ, ಚಂದನದಲ, ಕಲ್ಲುಸಕ್ಕರೆ, ಜೇನು, ಜಟಾಮಾಂಸೀ ಇವುಗಳೊಡನೆ ಅಗುರುಧೂಪವನ್ನು ಸಮರ್ಪಿಸಿದವನಿಗೆ ಅಧಿಕ ಫಲವುಂಟಾಗುವುದು.

೪೯. ದೇವತೆಗಳು ಮೂಗಿನಿಂದ ತೃಪ್ತಿಗೊಳ್ಳುವರು. ಧೂಪವು ಮೂಗನ್ನು ವಶಪಡಿಸಿಕೊಳ್ಳುವುದು. ಮುಕ್ತಿಯನ್ನು ಬಯಸುವವರು ಹನ್ನೆರಡನೆಯ ಶುಕ್ಕಿನಿಂದ ದೀಪವನ್ನು ಅರ್ಪಿಸಬೇಕು.

ದೀಪಃ ಸರ್ವೇಷು ಕಾರ್ಯೇಷು ಪ್ರಥಮಸ್ತೇಜಸಾಂ ಪತಿಃ ।
ದೀಪಸ್ತಮೌಘನಾಶಾಯ ದೀಪಃ ಕಾಂತಿಂ ಪ್ರಯಚ್ಛತಿ ॥ ೫೦ ॥
ತಸ್ಮಾದ್ದೀಪಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ।
ಅಯಂ ಪೌರಾಣಜೋ ಮಂತ್ರೋ ವೇದರ್ಚೇನ ಸಮನ್ವಿತಃ ।
ದೀಪಪ್ರದಾನೇ ಸಕಲಃ ಪ್ರಯುಕ್ತೋ ನಾಶಯೇದಘಂ ॥ ೫೧ ॥
ಚಾತುರ್ಮಾಸ್ಯೇ ದೀಪದಾನಂ ಕುರುತೇ ಯೋ ಹರೇಃ ಪುರಃ ।
ತಸ್ಯ ಪಾಪಮಯೋ ರಾಶಿರ್ನಿಮೇಷಾದಪಿ ದಹ್ಯತೇ ॥ ೫೨ ॥
ತಾವತ್ಪಾಪಾನಿ ಗರ್ಜಂತಿ ತಾವದ್ಬಿಭೇತಿ ಪಾತಕೀ ।
ಯಾವನ್ನ ವಿಹಿತೋ ಭಾಸ್ವಾನ್ದೀಪೋ ನಾರಾಯಣಾಲಯೇ ॥ ೫೩ ॥
ದರ್ಶನಾದಪಿ ದೀಪಸ್ಯ ಸರ್ವಸಿದ್ಧಿರ್ನೃಣಾಂ ಭವೇತ್ ॥ ೫೪ ॥
ಕಾಮನಾಂ ಯಾಂ ಸಮುದ್ದಿಶ್ಯ ದೀಪಂ ಕಾರಯತೇ ಹರೌ ।
ಸಾ ಸಾ ಸಿಧ್ಯತಿ ನಿರ್ವಿಘ್ನಾ ಸುಪ್ತೇಽನಂತೇ ಗುಣೋತ್ತರಂ ॥ ೫೫ ॥
ಪಂಚಾಯತನ ಸಂಸ್ಥೇಷು ತಥಾ ದೇವೇಷು ಪಂಚಸು ।
ವಿಹಿತಂ ದೀಪದಾನಂ ಚ ಚಾತುರ್ಮಾಸ್ಯೇ ಮಹಾಫಲಂ ॥ ೫೬ ॥

---

೫೦. ದೀಪವು ಸಕಲ ಕಾರ್ಯಗಳಲ್ಲಿ ಮೊದಲನೆಯದೂ, ತೇಜಸ್ಸಿಗೆ ಮೂಲವಾದುದೂ, ಕತ್ತಲೆಯ ಸಮೂಹವನ್ನು ನಾಶಗೊಳಿಸುವುದೂ, ಕಾಂತಿಯನ್ನೀಯುವುದೂ ಆಗಿರುವುದು.

೫೧. ಆದುದರಿಂದ ದೀಪವನ್ನು ಅರ್ಪಿಸುವುದರಿಂದ ಹರಿಯು ಪ್ರೀತನಾಗಲಿ ಎಂಬ ಈ ಪೌರಾಣಿಕ ಮಂತ್ರವನ್ನು ವೇದಋಕ್ಕಿನೊಡನೆ ದೀಪದಾನದಲ್ಲಿ ಸಂಪೂರ್ಣವಾಗಿ ಹೇಳಿದರೆ ಪಾಪವನ್ನು ಪರಿಹರಿಸುವುದು.

೫೨. ಚಾತುರ್ಮಾಸ್ಯದಲ್ಲಿ ವಿಷ್ಣುವಿನ ಮುಂದೆ ದೀಪದಾನವನ್ನು ಮಾಡುವವನ ಪಾಪರಾಶಿಯು ಒಂದು ನಿಮಿಷದಲ್ಲಿ ಪರಿಹಾರವಾಗುವುದು.

೫೩. ವಿಷ್ಣುದೇವಾಲಯದಲ್ಲಿ ದೀಪವನ್ನು ಹೊತ್ತಿಸುವವರೆಗೆ ಪಾಪಗಳು ಗರ್ಜಿಸುವುವು. ಪಾತಕಿಯು ಹೆದರುವನು.

೫೪. ದೀಪದರ್ಶನದಿಂದಲೇ ನರರಿಗೆ ಸಕಲೇಷ್ಟಾರ್ಥಗಳು ಸಿದ್ಧಿಸುವುವು.

೫೫. ಚಾತುರ್ಮಾಸ್ಯದಲ್ಲಿ ಯಾವ ಇಷ್ಟಾರ್ಥವನ್ನು ಉದ್ದೇಶಿಸಿ ವಿಷ್ಣುವಿನ ಹತ್ತಿರ ದೀಪವನ್ನು ಹೊತ್ತಿಸುವನೊ ಆ ಇಷ್ಟಾರ್ಥವು ನಿರ್ವಿಘ್ನವಾಗಿ ಸಿದ್ಧಿಸುವುದು.

೫೬. ಪಂಚಾಯತನ ಪೂಜೆಯಲ್ಲಿ ದೇವತೆಗಳ ಮುಂದೆ ದೀಪವನ್ನು ಹೊತ್ತಿಸುವುದರಿಂದ ಅತಿಶಯ ಫಲವುಂಟಾಗುವುದು.

ಏಕೋ ವಿಷ್ಣುಸ್ತುಷ್ಯತೇ ಮುಕ್ತಿದಾತಾ
ನಿತ್ಯಂ ಧ್ಯಾತಃ ಪೂಜಿತಃ ಸಂಸ್ತುತಶ್ಚ ।
ಯಚ್ಚಾಽಭೀಷ್ಟಂ ಯಚ್ಚ ಗೇಹೇ ಶುಭಂ ವಾ
ತತ್ತದ್ದೇಯಂ ಮುಕ್ತಿಹೇತೋರ್ನೃವರ್ಯೈಃ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಷೋಡಶೋಪಚಾರದೀಪಮಹಿಮವರ್ಣನಂ" ನಾಮ
ಏಕೋನಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

೫೭. ಮಾನವೋತ್ತಮರು ಮುಕ್ತಿಗಾಗಿ ಮುಕ್ತಿದಾತನಾದ ವಿಷ್ಣುವನ್ನು ನಿತ್ಯವೂ ಧ್ಯಾನಮಾಡಿ, ಪೂಜಿಸಿ ಸ್ತುತಿಸಿ ಸಂತೋಷಗೊಳಿಸಿದರೆ ಅವನು ಅವರ ಇಷ್ಟಾರ್ಥವನ್ನೂ, ಶುಭವನ್ನೂ ಈಡೇರಿಸಿ ಕೊಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಷೋಡಶೋಪಚಾರದೀಪಮಹಿಮವರ್ಣನ" ವೆಂಬ
ಇನ್ನೂರ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ಭಕ್ತಿನಿರೂಪಣವರ್ಣನಂ

ಬ್ರಹ್ಮೋವಾಚ:—

ಹರೇರ್ದೀಪಸ್ತು ಮದ್ದೀಪಾದಧಿಕೋಽಯಂ ಪ್ರಕುರ್ವತಃ ।
ವೈಕುಂಠವಾಸ ಏವ ಸ್ಯಾನ್ಮಮೈಶ್ವರ್ಯಮಪಾಂಛಿತಂ ॥ ೧ ॥

ನಾರದ ಉವಾಚ:—

ದೀಪೋಽಯಂ ವಿಷ್ಣುಭವನೇ ಮಂತ್ರವದ್ವಿಹಿತೋ ನರೈಃ ।
ಸದಾ ವಿಶೇಷ ಫಲದಶ್ಚಾತುರ್ಮಾಸ್ಯೇಽಧಿಕಃ ಕಥಂ ॥ ೨ ॥

ಬ್ರಹ್ಮೋವಾಚ:—

ವಿಷ್ಣುರ್ನಿತ್ಯಾಧಿದೈವಂ ಮೇ ವಿಷ್ಣುಃ ಪೂಜ್ಯಃ ಸದಾ ಮಮ ।
ವಿಷ್ಣುಮೇನಂ ಸದಾ ಧ್ಯಾಯೇ ವಿಷ್ಣುರ್ಮತ್ತಃ ಪರೋ ಹಿ ಸಃ ॥ ೩ ॥
ಸ ವಿಷ್ಣುವಲ್ಲಭೋ ದೀಪಃ ಸರ್ವದಾ ಪಾಪಹಾರಕಃ ।
ಚಾತುರ್ಮಾಸ್ಯೇ ವಿಶೇಷೇಣ ಕಾಮನಾಸಿದ್ಧಿಕಾರಕಃ ॥ ೪ ॥

---

## ಕನ್ನಡದ ಅನುವಾದ

### ಭಕ್ತಿನಿರೂಪಣವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಹರಿಯ ಮುಂದೆ ಹೊತ್ತಿಸುವ ದೀಪವು ನನ್ನ ದೀಪಕ್ಕಿಂತ ಅಧಿಕವಾದುದು. ಅದರಿಂದ ವೈಕುಂಠವಾಸವು ಲಭಿಸುವುದು. ನನ್ನ ಐಶ್ವರ್ಯವನ್ನು ಯಾರೂ ಬಯಸುವುದಿಲ್ಲ.

೨. ನಾರದನು ಹೇಳುತ್ತಾನೆ:—ಮಾನವರು ವಿಷ್ಣುದೇವಾಲಯದಲ್ಲಿ ಮಂತ್ರಸಹಿತವಾಗಿ ಹೊತ್ತಿಸುವ ದೀಪವು ಯಾವಾಗಲೂ ಅತಿಶಯ ಫಲವನ್ನೀಯುವುದು. ಅದು ಚಾತುರ್ಮಾಸ್ಯದಲ್ಲಿ ಹೇಗೆ ಅಧಿಕ ಫಲವನ್ನು ಕೊಡುವುದು?

೩. ಬ್ರಹ್ಮನು ಹೇಳುತ್ತಾನೆ:—ವಿಷ್ಣುವು ನನಗೆ ಯಾವಾಗಲೂ ದೇವತೆಯೂ, ಪೂಜ್ಯನೂ ಆಗಿರುವನು. ನಾನು ಅವನನ್ನು ಯಾವಾಗಲೂ ಧ್ಯಾನಿಸುತ್ತೇನೆ. ಅವನು ನನಗಿಂತಲೂ ಅಧಿಕನು.

೪. ವಿಷ್ಣುವಿಗೆ ಪ್ರಿಯವಾದ ಆ ದೀಪವು ಯಾವಾಗಲೂ ಪಾಪವನ್ನು ಪರಿಹರಿಸುವುದು. ಅದು ಚಾತುರ್ಮಾಸ್ಯದಲ್ಲಿ ಅತಿಶಯವಾಗಿ ಇಷ್ಟಾರ್ಥವನ್ನು ಕೊಡುವುದು.

ವಿಷ್ಣುರ್ದೀಪೇನ ಸಂತುಷ್ಟೋ ಯಥಾ ಭವತಿ ಪುತ್ರಕ ।
ತಥಾ ಯಜ್ಞಸಹಸ್ರೈಶ್ಚ ವರಂ ನೈವ ಪ್ರಯಚ್ಛತಿ ॥ ೫ ॥
ಸ್ವಲ್ಪವ್ಯಯೇನ ದೀಪಸ್ಯ ಫಲಮಾನಂತಕಂ ನೃಣಾಂ ।
ಅನಂತಶಯನೇ ಪ್ರಾಪ್ತೇ ಪುಣ್ಯಸಂಖ್ಯಾ ನ ವಿದ್ಯತೇ ॥ ೬ ॥
ತಸ್ಮಾತ್ಸರ್ವಾತ್ಮಭಾವೇನ ಶ್ರದ್ಧಯಾ ಸಂಯುತೇನ ಚ ॥
ದೀಪಪ್ರದಾನಂ ಕುರುತೇ ಹರೇಃ ಪಾಪೈರ್ನಲಿಪ್ಯತೇ ॥ ೭ ॥
ಉಪಚಾರೈಃ ಷೋಡಶಕೈರ್ಯತಿರೂಪೇ ಹರೌ ಪುನಃ ।
ದೀಪಪ್ರದಾನೇ ವಿಹಿತೇ ಸರ್ವಮುದ್ಯೋತಿತಂ ಜಗತ್ ॥ ೮ ॥
ದೀಪಾದನಂತರಂ ಬ್ರಹ್ಮನ್ನನ್ನಸ್ಯ ಚ ನಿವೇದನಂ
ತ್ರಯೋದಶ್ಯಾ ಭಕ್ತಿಯುಕ್ತೈಃ ಕಾರ್ಯಂ ಮೋಕ್ಷಪದಸ್ಥಿತೈಃ ॥ ೯ ॥
ಅಮೃತಂ ಸಂಪರಿತ್ಯಜ್ಯ ಯದನ್ನಂ ದೇವತಾ ಅಪಿ
ಸ್ಪೃಹಯಂತಿ ಗೃಹಸ್ಥಸ್ಯ ಗೃಹದ್ವಾರಗತಾಃ ಸದಾ ॥ ೧೦ ॥
ಹರೌ ಸುಪ್ತೇ ವಿಶೇಷೇಣ ಪ್ರದೇಯಃ ಪ್ರತ್ಯಹಂ ನರೈಃ ।
ಫಲೈರರ್ಘ್ಯೋ ವಿಷ್ಣುತುಷ್ಟ್ಯೈ ತತ್ಕಾಲಸಮುದಾಹೃತೈಃ ॥ ೧೧ ॥
ತಾಂಬೂಲವಲ್ಲೀಪತ್ರೈಶ್ಚ ತಥಾ ಪೂಗಫಲೈಃ ಶುಭೈಃ ।
ದ್ರಾಕ್ಷಾ ಜಂಬ್ವಾಮ್ರಜಫಲೈರಕ್ಷೋಡೈರ್ದಾಡಿಮೈರಪಿ ॥ ೧೨ ॥

---

೫. ಮಗು! ವಿಷ್ಣುವು ದೀಪದಿಂದ ಸಂತುಷ್ಟನಾದಂತೆ ಅನೇಕ ಯಜ್ಞಗಳಿಂದಲೂ ಸಂತುಷ್ಟನಾಗಿ ವರವನ್ನು ಕೊಡುವುದಿಲ್ಲ.

೬–೭. ಮಾನವರಿಗೆ ಸ್ವಲ್ಪ ವೆಚ್ಚದಿಂದಲೇ ಹೊತ್ತಿಸುವ ದೀಪವು ಅನಂತ ಫಲವನ್ನು ಕೊಡುವುದು. ಚಾತುರ್ಮಾಸ್ಯದಲ್ಲಿ ಅದರಿಂದುಂಟಾಗುವ ಪುಣ್ಯವು ಅಪರಿಮಿತವಾದುದು. ಆದುದರಿಂದ ಒಮ್ಮನಸ್ಸಿನಿಂದಲೂ, ಶ್ರದ್ಧೆಯಿಂದಲೂ ವಿಷ್ಣುವಿಗೆ ದೀಪವನ್ನರ್ಪಿಸುವವನು ಪಾಪಲಿಪ್ತನಾಗುವುದಿಲ್ಲ.

೮. ಷೋಡಶೋಪಚಾರಗಳಿಂದ ಯತಿರೂಪನಾದ ವಿಷ್ಣುವಿಗೆ ದೀಪವನ್ನಿತ್ತರೆ ಜಗತ್ತೆಲ್ಲ ಪ್ರಕಾಶಗೊಳ್ಳುವುದು.

೯. ದೀಪವನ್ನಿತ್ತ ತರುವಾಯ ಮೋಕ್ಷಸ್ಥಾನದಲ್ಲಿರುವ ನರರು ಭಕ್ತಿಯಿಂದ ಹದಿಮೂರನೆಯ ಋಕ್ಕಿನಿಂದ ಅನ್ನವನ್ನು ನಿವೇದಿಸಬೇಕು.

೧೦. ದೇವತೆಗಳು ಅಮೃತವನ್ನು ತ್ಯಜಿಸಿ ಗೃಹಸ್ಥನ ಮನೆಯ ಬಾಗಿಲಿನಲ್ಲಿ ನಿಂತು ಆ ನಿವೇದಿತಾನ್ನವನ್ನು ಅಪೇಕ್ಷಿಸುತ್ತಾರೆ.

೧೧. ಚಾತುರ್ಮಾಸ್ಯದಲ್ಲಿ ಮಾನವರು ಪ್ರತಿದಿನವೂ ಆ ಕಾಲದಲ್ಲಿ ಹೇಳಿದ ಫಲಗಳಿಂದ ವಿಷ್ಣುತುಷ್ಟಿಗಾಗಿ ಅರ್ಘ್ಯವನ್ನು ಕೊಡಬೇಕು.

೧೨–೧೪. ವೀಳೆಯದೆಲೆ, ಅಡಿಕೆ, ದ್ರಾಕ್ಷೆಹಣ್ಣು, ನೇರಳೆಹಣ್ಣು, ಮಾವಿನ

ಬೀಜಪೂರಫಲೈಶ್ಚೈವ ದದ್ಯಾದರ್ಘ್ಯಂ ಸುಭಕ್ತಿತಃ ।
ಶಂಖತೋಯಂ ಸಮಾದಾಯ ತಸ್ಯೋಪರಿ ಫಲಂ ಶುಭಂ ॥ ೧೩ ॥
ಮಂತ್ರೇಣಾನೇನ ವಿಪ್ರೇಂದ್ರ ಕೇಶವಾಯ ನಿವೇದಯೇತ್ ।
ಪುನರಾಚಮನಂ ದೇಯಮನ್ನದಾನಾದನಂತರಂ ॥ ೧೪ ॥
ಆರ್ತಿಕ್ಯಂ ಚ ತತಃ ಕುರ್ಯಾತ್ಸರ್ವಪಾಪವಿನಾಶನಂ ।
ಚತುರ್ದಶ್ಯಾ ನಮಸ್ಕುರ್ಯಾದ್ವಿಷ್ಣವೇ ಯತಿರೂಪಿಣೇ ॥ ೧೫ ॥
ಪಂಚದಶ್ಯಾ ಭ್ರಮಃ ಕಾರ್ಯಃ ಸರ್ವದಿಕ್ಷು ದ್ವಿಜೈಃ ಸಹ ।
ಸಪ್ತಸಾಗರಜೈಸ್ತೋಯೈರ್ದತ್ತೈರ್ಯತ್ಫಲಮಾಪ್ಯತೇ ॥ ೧೬ ॥
ತತ್ತೋಯದಾನಾಚ್ಚ ಹರೇಃ ಪ್ರಾಪ್ಯತೇ ವಿಷ್ಣುವಲ್ಲಭೈಃ ।
ಚತುರ್ವಾರಭ್ರಮೀಭಿಶ್ಚ ಜಗತ್ಸರ್ವಂ ಚರಾಚರಂ ॥ ೧೭ ॥
ಕ್ರಾಂತಂ ಭವತಿ ವಿಪ್ರಾಗ್ರ್ಯ ತತ್ತೀರ್ಥಗಮನಾದಿಕಂ ।
ಷೋಡಶ್ಯಾ ದೇವಸಾಯುಜ್ಯಂ ಚಿಂತಯೇದ್ಯೋಗವಿತ್ತಮಃ ॥ ೧೮ ॥
ಆತ್ಮನಶ್ಚ ಹರೇರ್ನಿತ್ಯಂ ನ ಮೂರ್ತಿಂ ಭಾವಯೇತ್ತದಾ ।
ಮೂರ್ತಾಮೂರ್ತಸ್ವರೂಪತ್ವಾದ್ದೃಶ್ಯೋ ಭವತಿ ಯೋಗವಿತ್ ॥ ೧೯ ॥

---

ಹಣ್ಣು ಇವುಗಳಿಂದಲೂ ಅಕ್ರೋಡ, ದಾಳಿಂಬ, ಸೀಬೆ ಹಣ್ಣುಗಳಿಂದಲೂ ಅರ್ಘ್ಯವನ್ನು ಭಕ್ತಿಯಿಂದ ಕೊಡಬೇಕು. ಶಂಖದಲ್ಲಿ ನೀರನ್ನು ಇಟ್ಟುಕೊಂಡು ಅದರ ಮೇಲೆ ಫಲವನ್ನು ಇರಿಸಿ ವಿಷ್ಣುವಿಗೆ ಈ ಮಂತ್ರದಿಂದ ನಿವೇದಿಸಬೇಕು. ಅನ್ನವನ್ನು ಕೊಟ್ಟಮೇಲೆ ಮರಳಿ ಆಚಮನವನ್ನು ಕೊಡಬೇಕು.

೧೫. ಹದಿನಾಲ್ಕನೆಯ ಋಕ್ಕಿನಿಂದ ಸಕಲ ಪಾಪಗಳನ್ನು ನಿವಾರಿಸುವ ಆರತಿಯನ್ನು ಮಾಡಬೇಕು. ಮತ್ತು ಯತಿರೂಪಿಯಾದ ವಿಷ್ಣುವಿಗೆ ನಮಸ್ಕಾರ ಮಾಡಬೇಕು.

೧೬-೧೮. ಹದಿನೈದನೆಯ ಋಕ್ಕಿನಿಂದ ಬ್ರಾಹ್ಮಣರೊಡನೆ ಸಕಲ ದಿಕ್ಕುಗಳಲ್ಲಿ ಪ್ರದಕ್ಷಿಣೆಗೈಯ್ಯಬೇಕು. ವಿಷ್ಣುಭಕ್ತರು ಏಳು ಸಮುದ್ರಗಳ ನೀರನ್ನು ದಾನ ಮಾಡಿದ ಫಲವನ್ನು ಶಂಖೋದಕ ದಾನದಿಂದ ಪಡೆಯುವರು. ನಾಲ್ಕುಸಾರಿ ಪ್ರದಕ್ಷಿಣೆ ಮಾಡುವುದರಿಂದ ಸಕಲ ಜಗತ್ತುಗಳನ್ನು ಸಂಚರಿಸಿದಂತಾಗುವುದು. ಮತ್ತು ಅಲ್ಲಿರುವ ತೀರ್ಥಗಳಿಗೆ ಹೋದಂತಾಗುವುದು. ಹದಿನಾರನೆಯ ಋಕ್ಕಿನಿಂದ ಯೋಗಜ್ಞನು ವಿಷ್ಣುಸಾಯುಜ್ಯವನ್ನು ಆಲೋಚಿಸಬೇಕು.

೧೯. ತನಗೂ ಹರಿಯ ಮೂರ್ತಿಗೂ ಭೇದವನ್ನು ಚಿಂತಿಸಿಕೂಡದು. ಆಗ ಯೋಗಿಯು ಮೂರ್ತಾಮೂರ್ತ ಸ್ವರೂಪದಿಂದ ದೃಶ್ಯನಾಗುವನು.

ತಸ್ಮಿನ್ ದೃಷ್ಟೇ ನಿವರ್ತೇತ ಸದಸದ್ರೂಪಜಾ ಕ್ರಿಯಾ ।
ಆತ್ಮಾನಂ ತೇಜಸಾಂ ಮಧ್ಯೇ ಚಿಂತಯೇತ್ಸೂರ್ಯವರ್ಚಸಂ ॥ ೨೦ ॥
ಅಹಮೇವ ಸದಾ ವಿಷ್ಣುರಿತ್ಯಾತ್ಮನಿ ವಿಚಾರಯನ್ ।
ಲಭತೇ ವೈಷ್ಣವಂ ದೇಹಂ ಜೀವನ್ಮುಕ್ತೋ ದ್ವಿಜೋ ಭವೇತ್ ॥ ೨೧ ॥
ಚಾತುರ್ಮಾಸ್ಯೇ ವಿಶೇಷೇಣ ಯೋಗಯುಕ್ತೋ ದ್ವಿಜೋ ಭವೇತ್ ।
ಇಯಂ ಭಕ್ತಿಃ ಸಮಾದಿಷ್ಟಾ ಮೋಕ್ಷಮಾರ್ಗಪ್ರದೇ ಹರೌ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಭಕ್ತಿನಿರೂಪಣವರ್ಣನಂ" ನಾಮ
ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

೨೦. ವಿಷ್ಣುದರ್ಶನವಾದಕೂಡಲೆ ಸದಸದ್ರೂಪಕ್ರಿಯೆಯು ಮಾಯವಾಗುವುದು. ತನ್ನನ್ನು ತೇಜಸ್ಸುಗಳ ನಡುವೆ ಸೂರ್ಯನಂತೆ ಕಾಂತಿಯುಳ್ಳವನಾಗಿರುವೆನೆಂದು ಭಾವಿಸಬೇಕು.

೨೧. ದ್ವಿಜನು ನಾನೇ ವಿಷ್ಣುವೆಂದು ತಿಳಿಯುತ್ತ ವಿಷ್ಣುದೇಹವನ್ನು ಪಡೆದು ಜೀವನ್ಮುಕ್ತನಾಗುವನು.

೨೨. ಚಾತುರ್ಮಾಸ್ಯದಲ್ಲಿ ದ್ವಿಜನು ವಿಶೇಷವಾಗಿ ಯೋಗದಿಂದ ಸಹಿತನಾಗಬೇಕು. ಇದೇ ಮೋಕ್ಷಮಾರ್ಗವನ್ನೀಯುವ ವಿಷ್ಣುವಿನಲ್ಲಿ ಭಕ್ತಿಯೆನ್ನಿಸಿಕೊಳ್ಳುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭಕ್ತಿನಿರೂಪಣವರ್ಣನ"ವೆಂಬ
ಇನ್ನೂರ ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

## ಸಚ್ಛೂದ್ರಕಥನವರ್ಣನಂ

ಈಶ್ವರ ಉವಾಚ :—

ಏತತ್ತೇ ಪೂಜನಂ ವಿಷ್ಣೋಃ ಷೋಡಶೋಪಾಯ ಸಂಭವಂ ।
ಕಥಿತಂ ಯದ್ದ್ವಿಜಃ ಕೃತ್ವಾ ಪ್ರಾಪ್ನೋತಿ ಪರಮಂಪದಂ ॥ ೧ ॥
ತಥಾ ಚ ಕ್ಷತ್ರಿಯವಿಶಾಂ ಕರಣಾನ್ಮುಕ್ತಿರುತ್ತಮಾ ।
ಶೂದ್ರಾಣಾಂ ನಾಽಧಿಕಾರೋಽಸ್ಮಿನ್ ಸ್ತ್ರೀಣಾಂ ನೈವ ಕಥಾಚನ ॥ ೨ ॥

ಕಾರ್ತಿಕೇಯ ಉವಾಚ :—

ಶೂದ್ರಾಣಾಂ ಚ ತಥಾ ಸ್ತ್ರೀಣಾಂ ಧರ್ಮಂ ವಿಸ್ತರತೋ ವದ ।
ಕೇನ ಮುಕ್ತಿರ್ಭವೇತ್ತೇಷಾಂ ಕೃಷ್ಣಸ್ಯಾರಾಧನಂ ವಿನಾ ॥ ೩ ॥

ಈಶ್ವರ ಉವಾಚ :—

ಸಚ್ಛೂದ್ರೈರಪಿ ನೋ ಕಾರ್ಯಾ ವೇದಾಕ್ಷರವಿಚಾರಣಾ ।
ನ ಶ್ರೋತವ್ಯಾ ನ ಪಠ್ಯಾ ಚ ಪಠನ್ನರಕಭಾಗ್ಭವೇತ್ ॥ ೪ ॥

---

## ಕನ್ನಡದ ಅನುವಾದ

### ಸಚ್ಛೂದ್ರಕಥನವರ್ಣನ

೧. ಈಶ್ವರನು ಹೇಳುತ್ತಾನೆ:—ನಿನಗೆ ಈ ವಿಷ್ಣುವಿನ ಷೋಡಶೋಪಚಾರ ಪೂಜೆಯನ್ನು ಹೇಳಿದ್ದೇನೆ. ಇದನ್ನು ಮಾಡಿದ ದ್ವಿಜನು ಉತ್ತಮ ಸ್ಥಾನವನ್ನು ಪಡೆಯುವನು.

೨. ಕ್ಷತ್ರಿಯರೂ ವೈಶ್ಯರೂ ಇದನ್ನು ಮಾಡುವುದರಿಂದ ಉತ್ತಮ ಮುಕ್ತಿಯುಂಟಾಗುವುದು. ಶೂದ್ರರಿಗೂ, ಹೆಂಗಸರಿಗೂ ಈ ಪೂಜೆಯಲ್ಲಿ ಅಧಿಕಾರವಿಲ್ಲ.

೩. ಕಾರ್ತಿಕೇಯನು ಹೇಳುತ್ತಾನೆ:—ಶೂದ್ರರ ಮತ್ತು ಸ್ತ್ರೀಯರ ಧರ್ಮವನ್ನು ವಿಸ್ತಾರವಾಗಿ ಹೇಳು. ವಿಷ್ಣುವಿನ ಪೂಜೆಯಿಲ್ಲದೆ ಅವರಿಗೆ ಯಾವುದರಿಂದ ಮೋಕ್ಷವಾಗುವುದು?

೪. ಈಶ್ವರನು ಹೇಳುತ್ತಾನೆ:— ಸಚ್ಛೂದ್ರರು ವೇದಾಕ್ಷರವಿಚಾರವನ್ನು ಮಾಡಬಾರದು. ಮತ್ತು ಕೇಳಬಾರದು. ಹೇಳಬಾರದು. ವೇದವನ್ನು ಪಠಿಸುವ ಶೂದ್ರನು ನರಕಭಾಗಿಯಾಗುವನು.

ಪುರಾಣಾನಾಂ ನೈವ ಪಾಠಃ ಶ್ರವಣಂ ಕಾರಯೇತ್ಸದಾ ।
ಸ್ಮೃತ್ಯುಕ್ತಂ ಸುಗುರೋರ್ಗ್ರಾಹ್ಯಂ ಸ ಪಾಠಃ ಶ್ರವಣಾದಿಕಂ ॥ ೫ ॥

ಸ್ಕಂದ ಉವಾಚ:—

ಸಚ್ಛೂದ್ರಾಃ ಕೇ ಸಮಾಖ್ಯಾತಾಸ್ತಾಂಶ್ಚ ವಿಸ್ತರತೋ ವದ ।
ಕೇ ಸಂತಃ ಕೇ ಚ ಶೂದ್ರಾಶ್ಚ ಸಚ್ಛೂದ್ರಾ ನಾಮತಶ್ಚ ಕೇ ॥ ೬ ॥

ಈಶ್ವರ ಉವಾಚ:—

ಧರ್ಮೋಢಾ ಯಸ್ಯ ಪತ್ನೀಸ್ಯಾತ್ಸ ಸಚ್ಛೂದ್ರ ಉದಾಹೃತಃ ।
ಸಮಾನಕುಲರೂಪಾ ಚ ದಶದೋಷವಿವರ್ಜಿತಾ ॥ ೭ ॥
ಉದ್ವೋಢಾ ವೇದವಿಧಿನಾ ಸ ಸಚ್ಛೂದ್ರಃ ಪ್ರಕೀರ್ತಿತಃ ।
ಅಕ್ಲೀಬಾಽವ್ಯಂಗಿನೀ ಶಸ್ತಾ ಮಹಾರೋಗಾದ್ಯದೂಷಿತಾ ॥ ೮ ॥
ಅನಿಂದಿತಾ ಶುಭಕಲಾ ಚಕ್ಷೂರೋಗವಿವರ್ಜಿತಾ ।
ಬಾಧಿರ್ಯಹೀನಾ ಚಪಲಾ ಕನ್ಯಾ ಮಧುರಭಾಷಿಣೀ ॥ ೯ ॥
ದೂಷಣೈರ್ದಶಭಿರ್ಹೀನಾ ವೇದೋಕ್ತವಿಧಿನಾ ನರೈಃ ।
ವಿವಾಹಿತಾ ಚ ಸಾ ಪತ್ನೀ ಗೃಹಿಣೀ ಯಸ್ಯ ಸರ್ವದಾ ॥ ೧೦ ॥
ಸಚ್ಛೂದ್ರಃ ಸ ತು ವಿಜ್ಞೇಯೋ ದೇವಾದೀನಾಂ ವಿಭಾಗಕೃತ್ ।
ಪುಣ್ಯಕಾರ್ಯೇಷು ಸರ್ವೇಷು ಪ್ರಥಮಾಂ ಸಾ ಪ್ರಕೀರ್ತಿತಾ ॥ ೧೧ ॥

---

೫. ಶೂದ್ರರು ಪುರಾಣಗಳನ್ನು ಪಠಿಸಬಾರದು. ಯಾವಾಗಲೂ ಶ್ರವಣ ಮಾಡಬೇಕು. ಸ್ಮೃತ್ಯುಕ್ತ ವಿಷಯವನ್ನು ಗುರುವಿನಿಂದ ತಿಳಿಯಬೇಕು. ಪಾಠ ಶ್ರವಣಗಳನ್ನು ಮಾಡಬಾರದು.

೬. ಸ್ಕಂದನು ಹೇಳುತ್ತಾನೆ:—ಸಚ್ಛೂದ್ರರು ಯಾರು? ಸಜ್ಜನರಾರು? ಶೂದ್ರರಾರು? ಸಚ್ಛೂದ್ರರೆಂದು ಹೆಸರನ್ನಾಂತವರಾರು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೭–೧೧. ಈಶ್ವರನು ಹೇಳುತ್ತಾನೆ:—ಧರ್ಮದಿಂದ ಪತ್ನಿಯನ್ನು ವಿವಾಹ ಮಾಡಿಕೊಂಡವನು ಸಚ್ಛೂದ್ರನು. ಸಮಾನವಂಶರೂಪಗಳುಳ್ಳವಳೂ, ಹತ್ತು ದೋಷಗಳಿಲ್ಲದವಳೂ ಆದ ಕನ್ಯೆಯನ್ನು ವೇದೋಕ್ತವಿಧಿಯಿಂದ ವಿವಾಹ ಮಾಡಿಕೊಂಡವನು ಸಚ್ಛೂದ್ರನು. ಕ್ಲೀಬಳಲ್ಲದವಳೂ, ಅಂಗವಿಕಲಳಲ್ಲದವಳೂ, ಶ್ರೇಷ್ಠಳೂ, ಮಹಾರೋಗಾದಿಗಳಿಂದ ದೂಷಿತಳಲ್ಲದವಳೂ, ಅನಿಂದಿತಳೂ, ಶುಭಕಲೆಗಳುಳ್ಳವಳೂ, ಕಣ್ಣಿನ ಬೇನೆಯಿಲ್ಲದವಳೂ, ಕಿವುಡಿಲ್ಲದವಳೂ, ಸ್ಥಿರ ಮನಸ್ಕಳೂ, ಇಂಪಾಗಿ ಮಾತಾಡುವವಳೂ, ದಶ ದೋಷಗಳಿಲ್ಲದವಳೂ ಆದ ಕನ್ಯೆಯನ್ನು ವೇದೋಕ್ತವಿಧಿಯಿಂದ ವಿವಾಹ ಮಾಡಿಕೊಂಡವನು ಸಚ್ಛೂದ್ರನು. ಅವನು ದೇವಾದಿಗಳಿಗೆ ಹವಿರ್ಭಾಗವನ್ನು ಕೊಡುವನು. ಅಂತಹ ಪತ್ನಿಯು ಸಕಲ ಪುಣ್ಯಕಾರ್ಯಗಳಲ್ಲಿಯೂ ಮೊದಲನೆಯವಳೆನ್ನಿಸಿಕೊಳ್ಳುವಳು.

ತಯಾ ಸುವಿಹಿತೋ ಧರ್ಮಃ ಸಂಪೂರ್ಣಫಲದಾಯಕಃ ।
ಚಾತುರ್ಮಾಸ್ಯೇ ವಿಶೇಷೇಣ ತಯಾ ಸಹ ಗುಣಾಧಿಕಃ ॥ ೧೨ ॥
ಭಾರ್ಯಾರತಿಃ ಶುಚಿರ್ಭೃತ್ಯಾದೀನಾಂ ಪೋಷಣತತ್ಪರಃ ।
ಶ್ರಾದ್ಧಾದಿಕಾರಕೋ ನಿತ್ಯಮಿಷ್ಟಾಪೂರ್ತಪ್ರಸಾಧಕಃ ॥ ೧೩ ॥
ನಮಸ್ಕಾರಾಂತಮಂತ್ರೇಣ ನಾಮಸಂಕೀರ್ತನೇನ ಚ ।
ದೇವಾಸ್ತಸ್ಯ ಚ ತುಷ್ಯಂತಿ ಪಂಚ ಯಜ್ಞಾದಿಕೈಃ ಶುಭೈಃ ॥ ೧೪ ॥
ಸ್ನಾನಂ ಚ ತರ್ಪಣಂ ಚೈವ ವಹ್ನಿಹೋಮೋಽಪ್ಯಮಂತ್ರಕಃ ।
ಬ್ರಹ್ಮಯಜ್ಞೋಽತಿಥೇಃ ಪೂಜಾ ಪಂಚಯಜ್ಞಾನ್ನಸಂತ್ಯಜೇತ್ ॥ ೧೫ ॥
ಕಾರ್ಯಂ ಸ್ತ್ರೀಭಿಶ್ಚ ಶೂದ್ರೈಶ್ಚ ಹ್ಯಮಂತ್ರಂ ಪಂಚಯಜ್ಞಕಂ ।
ಪಂಚಯಜ್ಞೈಶ್ಚ ಸಂತುಷ್ಟಾ ಯಥೈಷಾಂ ಪಿತೃದೇವತಾಃ ॥ ೧೬ ॥
ತಥಾ ಪತಿವ್ರತಾಯಾಶ್ಚ ಪತಿಶುಶ್ರೂಷಯಾ ಸದಾ ।
ಪತಿವ್ರತಾಯಾ ದೇಹೇ ತು ಸರ್ವೇ ದೇವಾ ವಸಂತಿ ಹಿ ॥ ೧೭ ॥
ಅತಸ್ತಾಭ್ಯಾಂ ಸಮೇತಾಭ್ಯಾಂ ಧರ್ಮಾದೀನಾಂ ಸಮಾಗಮಃ ।
ಯದೋಭಯೋರ್ಮತೇ ಪೃಷ್ಟೇ ಸಂತುಷ್ಟಾಃ ಪಿತೃದೇವತಾಃ ॥ ೧೮ ॥

---

೧೨. ಅವಳೊಡನೆ ಮಾಡಿದ ಧರ್ಮವು ಸಂಪೂರ್ಣ ಫಲವನ್ನು ಕೊಡುವುದು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಅಧಿಕ ಗುಣವುಳ್ಳದಾಗುವುದು.

೧೩–೧೪. ಪತ್ನಿಯಲ್ಲಿ ಮಾತ್ರ ರತಿಯುಳ್ಳವನೂ, ಶುದ್ಧನೂ, ಭೃತ್ಯನೇ ಮೊದಲಾದವರನ್ನು ಪೋಷಣೆ ಮಾಡುವವನೂ, ಶ್ರಾದ್ಧಾದಿಗಳನ್ನು ಮಾಡುವವನೂ, ಯಾಗಗಳನ್ನು ಮಾಡುವವನೂ, ಕೆರೆ ಮೊದಲಾದುವುಗಳನ್ನು ನಿರ್ಮಿಸುವವನೂ ಆದ ಸಚ್ಛೂದ್ರನ ನಮಸ್ಕಾರವೆಂಬ ಪದವು ಕೊನೆಯಲ್ಲುಳ್ಳ ಮಂತ್ರದಿಂದಲೂ, ನಾಮಸಂಕೀರ್ತನೆಯಿಂದಲೂ, ಪಂಚಯಜ್ಞಾದಿಗಳಿಂದಲೂ ದೇವತೆಗಳು ಸಂತುಷ್ಟರಾಗುತ್ತಾರೆ.

೧೫. ಆ ಸಚ್ಛೂದ್ರನು ಸ್ನಾನ, ತರ್ಪಣ, ಹೋಮ, ಬ್ರಹ್ಮಯಜ್ಞ, ಅತಿಥಿಪೂಜೆ ಎಂಬ ಪಂಚಯಜ್ಞಗಳನ್ನು ಅಮಂತ್ರಕವಾಗಿ ಮಾಡಬೇಕು. ಬಿಡಬಾರದು.

೧೬–೧೭. ಸ್ತ್ರೀಯರೂ, ಶೂದ್ರರೂ ಮಂತ್ರವಿಲ್ಲದೆ ಪಂಚಯಜ್ಞಗಳನ್ನು ಮಾಡಬೇಕು. ಇವರಿಗೆ ಪಂಚಯಜ್ಞಗಳಿಂದ ಪಿತೃದೇವತೆಗಳು ತೃಪ್ತಿಗೊಳ್ಳುವಂತೆ ಪತಿವ್ರತೆಯ ಪತಿಸೇವೆಯಿಂದ ಪಿತೃದೇವತೆಗಳು ತೃಪ್ತರಾಗುವರು. ಪತಿವ್ರತೆಯ ದೇಹದಲ್ಲಿ ಸಮಸ್ತ ದೇವತೆಗಳೂ ವಾಸಿಸುವರು.

೧೮. ಆದುದರಿಂದ ದಂಪತಿಗಳು ಸೇರಿ ಮಾಡಿದ ಧರ್ಮಾದಿಗಳು ಫಲಿಸುವುವು. ಇವರಿಬ್ಬರೂ ಒಟ್ಟಿಗೆ ಒಮ್ಮತದಿಂದ ಮಾಡಿದ ಶುಭ ಕಾರ್ಯದಿಂದ ಪಿತೃದೇವತೆಗಳು ಸಂತೋಷಗೊಳ್ಳುವರು.

ಕಾರ್ಯಾದೀನಾಂ ಚ ಸರ್ವೇಷಾಂ ಸಂಗಮಸ್ತತ್ರ ನಿತ್ಯದಾ ।
ಚಾತುರ್ಮಾಸ್ಯೇ ಸಮಾಯಾತೇ ವಿಷ್ಣುಭಕ್ತ್ಯಾ ತಯೋಃ ಶಿವಂ ॥ ೧೯ ॥
ಸಮಾನಜಾತಿಸಂಭೂತಾ ಪತ್ನೀ ಯಸ್ಯ ಧೃತಾ ಭವೇತ್ ।
ಪೂರ್ವೋ ಭರ್ತಾಽರ್ಧಭಾಗೀಸ್ಯಾದ್ದ್ವಿತೀಯಸ್ಯ ನ ಕಿಂಚನ ॥ ೨೦ ॥
ಅರ್ಧಕಾರ್ಯಾಧಿಕಾರೋಽಸ್ಯಾಸ್ತೇನ ಧರ್ಮಾರ್ಧಧಾರಿಣೀ ।
ಸ್ವಂ ಸ್ವಂ ಕೃತಂ ಸದೈವ ಸ್ಯಾತ್ತಯೋಃ ಕರ್ಮ ಶುಭಾಽಶುಭಂ ॥ ೨೧ ॥
ಯಾನುಗಚ್ಛತಿ ಭರ್ತಾರಂ ಮೃತಂ ಸುತಪಸಾ ದ್ವಿಜ ।
ಸಾಧ್ವೀ ಸಾ ಹಿ ಪರಿಜ್ಞೇಯಾ ತಯಾ ಚೋದ್ಧ್ರಿಯತೇ ಕುಲಂ ॥ ೨೨ ॥
ಅನ್ಯಜಾತೇರ್ಮೃತಸ್ಯಾಽಥ ಧೃತಾವಾಽಪಿ ವಿವಾಹಿತಾ ।
ವೈಶ್ವಾನರಸ್ಯ ಮಾರ್ಗೇಣ ಸಾ ತಮುದ್ಧರತೇ ಪತಿಂ ॥ ೨೩ ॥
ಯಥಾ ಜಲಾಚ್ಚ ಜಂಬಾಲಃ ಕೃಷ್ಯತೇ ಧಾರ್ಮಿಕೈರ್ನೃಭಿಃ ।
ಏವಮುದ್ಧರತೇ ಸಾಧ್ವೀ ಭರ್ತಾರಂ ಯಾಽನುಗಚ್ಛತಿ ॥ ೨೪ ॥
ಅನ್ಯಜಾತಿಸಮುದ್ಭೂತಾ ಅನ್ಯೇನ ವಿಧೃತಾ ಯದಿ ।
ತಾವುಭೌ ಧರ್ಮಕಾರ್ಯೇಷು ಸಂತ್ಯಾಜ್ಯೌ ನಿತ್ಯದೌ ಮತೌ ॥ ೨೫ ॥

---

೧೯. ಅವರಿಬ್ಬರಲ್ಲಿ ಯಾವಾಗಲೂ ಸಕಲಕಾರ್ಯಗಳೂ ಕೈಸೇರಿರುವುವು. ಚಾತುರ್ಮಾಸ್ಯದಲ್ಲಿ ಅವರಿಬ್ಬರೂ ವಿಷ್ಣುಭಕ್ತಿಯನ್ನು ಮಾಡುವುದರಿಂದ ಮಂಗಳವಾಗುವುದು.

೨೦. ಸಮಾನಜಾತಿಯ ಕನ್ಯೆಯನ್ನು ವಿವಾಹ ಮಾಡಿಕೊಂಡರೆ ಗಂಡನು ಕಾರ್ಯದ ಅರ್ಧಭಾಗಕ್ಕೆ ಮಾತ್ರ ಅಧಿಕಾರಿಯಾಗುವನು. ಇನ್ನೊಂದು ಅರ್ಧಭಾಗದ ಸಂಬಂಧವು ಅವನಿಗಿರುವುದಿಲ್ಲ.

೨೧. ಪತ್ನಿಯು ಅರ್ಧಕಾರ್ಯಾಧಿಕಾರಿಣಿಯಾಗಿರುವುದರಿಂದ ಧರ್ಮಾರ್ಧಧಾರಿಣಿಯೂ ಆಗಿರುವಳು. ಅವರವರು ಮಾಡಿದ ಶುಭಾಶುಭ ಕಾರ್ಯಗಳು ಅವರವರಿಗೆ ಸಲ್ಲುವುವು.

೨೨. ಮೃತನಾದ ಪತಿಯನ್ನು ತಪಸ್ಸಿನಿಂದ ಸಹಗಮನ ಮಾಡುವವಳು ಪತಿವ್ರತೆಯು. ಅವಳು ಕುಲವನ್ನು ಉದ್ಧರಿಸುವಳು.

೨೩. ಸೇರಿಸಿಕೊಂಡ ಅಥವಾ ವಿವಾಹ ಮಾಡಿಕೊಂಡ ಪತ್ನಿಯು ಮೃತನಾದ ಇತರ ಜಾತಿಯ ಪತಿಯನ್ನು ಅಗ್ನಿಮಾರ್ಗದಿಂದ ಉದ್ಧರಿಸುವಳು.

೨೪. ಧಾರ್ಮಿಕರಾದ ನರರು ನೀರಿನಿಂದ ಕೆಸರನ್ನು ಬೇರೆ ಮಾಡುವಂತೆ ಸಹಗಮನ ಮಾಡುವ ಸಾಧ್ವಿಯು ಪತಿಯನ್ನು ಉದ್ಧರಿಸುವಳು.

೨೫. ಇತರ ಜಾತಿಯ ಕನ್ಯೆಯನ್ನು ಅದಕ್ಕಿಂತ ಬೇರೆ ಜಾತಿಯವನು ಸೇರಿಸಿಕೊಂಡರೆ ಅವರಿಬ್ಬರೂ ಧರ್ಮಕಾರ್ಯದಲ್ಲಿ ಯಾವಾಗಲೂ ಬಾಹ್ಯರಾಗುವರು.

ಸ್ವಂ ಸ್ವಂ ಕರ್ಮ ಪ್ರಕುರುತಃ ಸತ್ಕರ್ಮಜಂ ಸ್ವಕಂ ಫಲಂ ।
ತಸ್ಮಾದ್ವರಿಷ್ಠಾ ಹೀನಾ ವಾ ಸತ್ಕುಲ್ಯಾ ಶೂದ್ರಸಂಭವೈಃ ॥ ೨೬ ॥
ಧೃತಾ ನ ಕಾರ್ಯಾ ಸಾ ಪತ್ನೀ ಯತ್ಕರೋತಿ ನ ವರ್ಧತೇ ।
ತಯಾ ಸಹ ಕೃತಂ ಪುಣ್ಯಂ ವರ್ಧತೇ ದಶಧೋತ್ತರಂ ॥ ೨೭ ॥
ಅನಂತತೃಪ್ತಿದಂ ನೈವ ತತ್ಸುತೈರಪಿ ಸಾ ತಥಾ ।
ಕ್ರಯಕ್ರೀತಾ ಚ ಯಾ ಕನ್ಯಾ ದಾಸೀ ಸಾ ಪರಿಕೀರ್ತಿತಾ ॥ ೨೮ ॥
ಸಚ್ಛೂದ್ರಸ್ಯಾಧಿಕಾರೇ ಸಾ ಕದಾಚಿನ್ನೈವ ಜಾಯತೇ
ಯಾ ಕನ್ಯಾ ಸ್ವಯಮುದ್ಯಮ್ಯ ಪಿತ್ರಾ ದತ್ತಾ ವರಾಯ ಚ ॥ ೨೯ ॥
ವಿವಾಹವಿಧಿನೋದೂಢಾ ಪಿತೃದೇವಾರ್ಥಸಾಧಿನೀ ।
ಸುಲಕ್ಷಣಾ ವಿನೀತಾ ಯಾ ವಿವೇಕಾದಿಗುಣಾ ಶುಭಾ ॥ ೩೦ ॥
ಸಚ್ಚರಿತ್ರಾ ಪತಿಪರಾ ಸಾ ತೇಭ್ಯೋ ದಾತುಮರ್ಹತಿ ।
ವಿಶುದ್ಧಕುಲಜಾ ಕನ್ಯಾ ಧರ್ಮೋಢಾ ಧರ್ಮಚಾರಿಣೀ ॥ ೩೧ ॥
ಸಾ ಪುನಾತಿ ಕುಲಂ ಸರ್ವಂ ಮಾತೃತಃ ಪಿತೃತಸ್ತಥಾ ।
ಏಷ ಏವ ಮಯಾ ಪ್ರೋಕ್ತಃ ಸಚ್ಛೂದ್ರಾಣಾಂ ಪರೋ ವಿಧಿಃ ॥ ೩೨ ॥

---

೨೬–೩೨. ಅವರು ತಮ್ಮ ತಮ್ಮ ಜಾತಿಗುಚಿತವಾದ ಕರ್ಮವನ್ನಾಚರಿಸಿ ಆ ಕರ್ಮದ ಫಲವನ್ನು ತಾವೇ ಪಡೆಯುವರು. ಆದುದರಿಂದ ಶೂದ್ರನು ತನಗಿಂತ ಉತ್ತಮ ಜಾತಿಯ ಅಥವಾ ನೀಚಜಾತಿಯ ಕನ್ಯೆಯನ್ನು ಪತ್ನಿಯಾಗಿರಿಸಿಕೊಳ್ಳಬಾರದು. ಅವಳು ಮಾಡಿದುದು ವೃದ್ಧಿಯಾಗುವುದಿಲ್ಲ. ಅವಳಾಗಲಿ, ಅವಳ ಮಕ್ಕಳಾಗಲಿ ಮಾಡಿದ ಪುಣ್ಯವು ಹತ್ತು ಪ್ರಕಾರ ವೃದ್ಧಿಗೊಂಡು ಅನಂತ ಫಲಗಳನ್ನೀಯುವುದಿಲ್ಲ. ಕ್ರಯಕ್ಕೆ ಕೊಂಡುಕೊಂಡ ಆ ಕನ್ಯೆಯು ದಾಸಿಯೆನಿಸಿಕೊಳ್ಳುವಳು. ಅವಳು ಸಚ್ಛೂದ್ರನ ಕರ್ಮದಲ್ಲಿ ಅಧಿಕಾರವನ್ನು ಹೊಂದುವುದಿಲ್ಲ. ತಂದೆಯಿಂದ ಕೊಡಲ್ಪಟ್ಟು ವಿವಾಹವಿಧಿಯಿಂದ ಪರಿಣೀತಳಾದ ಕನ್ಯೆಯು ಪಿತೃದೇವತೆಗಳ ಕಾರ್ಯಕ್ಕೆ ಸಹಾಯಕಳಾಗುವಳು. ಒಳ್ಳೆಯ ಲಕ್ಷಣಗಳುಳ್ಳವಳೂ, ವಿನೀತಳೂ, ವಿವೇಕವೇ ಮೊದಲಾದ ಗುಣಗಳುಳ್ಳವಳೂ, ಸಚ್ಚರಿತ್ರಳೂ, ಸಾಧ್ವಿಯೂ ಆದ ಕನ್ಯೆಯು ದೇವಪಿತೃಕಾರ್ಯಗಳಿಗರ್ಹಳಾಗುವಳು. ಶುದ್ಧಕುಲದಲ್ಲಿ ಜನಿಸಿದವಳೂ, ಧರ್ಮದಿಂದ ವಿವಾಹಿತಳೂ, ಧರ್ಮವನ್ನನುಷ್ಠಾನ ಮಾಡುವವಳೂ ಆದ ಕನ್ಯೆಯು ಮಾತಾಪಿತೃಗಳ ಕುಲವನ್ನು ಪವಿತ್ರಗೊಳಿಸುವಳು. ನಾನು ನಿನಗೆ ಈ ಸಚ್ಛೂದ್ರರ ಉತ್ತಮ ವಿಧಿಯನ್ನು ಹೇಳಿರುವೆನು.

ಅಧೋಽಜಾತಿಸಮುದ್ಭೂತಾ ಸಚ್ಛೂದ್ರಾತ್ಕ್ರಮಹೀನಜಾ ।
ವಿವಾಹೋ ದಶಧಾ ತೇಷಾಂ ದಶಧಾ ಪುತ್ರತಾ ಭವೇತ್ ॥ ೩೩ ॥
ಚತ್ವಾರ ಉತ್ತಮಾಃ ಪ್ರೋಕ್ತಾ ವಿವಾಹಾ ಮುನಿಸತ್ತಮ ।
ಶೇಷಾಃ ಸರ್ವಪ್ರಕೃತಿಷು ಕಥಿತಾಶ್ಚ ಪುರಾವಿದೈಃ ॥ ೩೪ ॥
ಪ್ರಾಜಾಪತ್ಯಸ್ತಥಾ ಬ್ರಾಹ್ಮೋ ದೈವಾರ್ಷೌ ಚಾಽತಿಶೋಭನಾಃ ।
ಗಾಂಧರ್ವಶ್ಚಾಽಸುರಶ್ಚೈವ ರಾಕ್ಷಸಶ್ಚ ಪಿಶಾಚಕಃ ॥ ೩೫ ॥
ಪ್ರಾತಿಭೋ ಘಾತನಶ್ಚೇತಿ ವಿವಾಹಾಃ ಕಥಿತಾ ದಶ ।
ಏತೇಹಿ ಹೀನಜಾತೀನಾಂ ವಿವಾಹಾಃ ಪರಿಕೀರ್ತಿತಾಃ ॥ ೩೬ ॥
ಔರಸಃ ಕ್ಷೇತ್ರಜಶ್ಚೈವ ದತ್ತಃ ಕೃತ್ರಿಮ ಏವ ಚ ।
ಗೂಢೋತ್ಪನ್ನೋಽಪವಿದ್ಧಶ್ಚ ಕಾನೀನಶ್ಚ ಸಹೋಢಜಃ ॥ ೩೭ ॥
ಕ್ರೀತಃ ಪೌನರ್ಭವಶ್ಚಾಽಪಿ ಪುತ್ರಾ ದಶವಿಧಾಃ ಸ್ಮೃತಾಃ ।
ಔರಸಾದಪಿ ಹೀನಾಶ್ಚ ತೇಽಪಿ ತೇಷಾಂ ಶುಭಾವಹಾಃ ॥ ೩೮ ॥
ಅಷ್ಟಾದಶಮಿತಾ ನೀಚಾಃ ಪ್ರಕೃತೀನಾಂ ಯಥಾ ತಥಾ ।
ವಿಧಿರ್ನೈವ ಕ್ರಿಯಾ ನೈವ ಸ್ಮೃತಿಮಾರ್ಗೋಽಪಿ ನೈವ ಚ ॥ ೩೯ ॥
ತಾಸಾಂ ಬ್ರಾಹ್ಮಣಶುಶ್ರೂಷಾ ವಿಷ್ಣುಧ್ಯಾನಂ ಶಿವಾರ್ಚನಂ ।
ಅಮಂತ್ರಾತ್ಪುಣ್ಯಕರಣಂ ದಾನಂ ದೇಯಂ ಚ ವೈ ಸದಾ ॥ ೪೦ ॥

---

೩೩. ಸಚ್ಛೂದ್ರನಿಗಿಂತ ಕಡಮೆ ಜಾತಿಯಲ್ಲಿ ಜನಿಸಿದವಳೂ, ಪ್ರತಿಲೋಮ ಜಾತಿಯವಳೂ ಆದ ಕನ್ಯೆಯ ವಿವಾಹವು ಹತ್ತು ತೆರನಾಗಿರುವುದು. ಅವಳಲ್ಲಿ ಜನಿಸಿದ ಪುತ್ರರು ಹತ್ತು ಬಗೆಯಾಗಿರುವರು.

೩೪. ಹತ್ತುಬಗೆಯ ವಿವಾಹಗಳಲ್ಲಿ ನಾಲ್ಕು ಉತ್ತಮವಾದುವು. ಉಳಿದುವು ಸಕಲ ಜಾತಿಯವರಿಗೆ ವಿಹಿತವಾಗಿರುವುದೆಂದು ಪ್ರಾಜ್ಞರು ಹೇಳಿರುವರು.

೩೫–೩೬. ಪ್ರಾಜಾಪತ್ಯ, ಬ್ರಾಹ್ಮ, ದೇವ, ಆರ್ಷ, ಗಾಂಧರ್ವ, ಆಸುರ, ರಾಕ್ಷಸ, ಪಿಶಾಚಕ, ಪ್ರಾತಿಭ, ಘಾತನ ಎಂದು ಹತ್ತು ವಿಧ ವಿವಾಹಗಳು. ಇವುಗಳಲ್ಲಿ ಮೊದಲಿನ ನಾಲ್ಕು ವಿವಾಹಗಳು ಉತ್ತಮವಾದುವು. ಉಳಿದ ಆರು ವಿವಾಹಗಳು ಹೀನಜಾತಿಯವರಿಗೆ ವಿಹಿತವಾಗಿರುವುವು.

೩೭–೩೯. ಔರಸ, ಕ್ಷೇತ್ರಜ, ದತ್ತ, ಕೃತ್ರಿಮ, ಗೂಢೋತ್ಪನ್ನ, ಅಪವಿದ್ಧ, ಕಾನೀನ, ಸಹೋಢಜ, ಕ್ರೀತ, ಪೌನರ್ಭವ ಎಂದು ಪುತ್ರರು ಹತ್ತು ವಿಧವಾಗಿರುವರು. ಅವರಲ್ಲಿ ಔರಸಪುತ್ರನಿಗಿಂತ ಉಳಿದವರು ಹೀನರು ಮತ್ತು ಅವರಿಗೆ ಶುಭಕರರು. ಪ್ರಕೃತಿಯನ್ನನುಸರಿಸಿ ಹದಿನೆಂಟು ಮಂದಿ ನೀಚರಿರುವರು. ಇವರು ವಿಧಿ, ಕ್ರಿಯಾ, ಸ್ಮೃತಿಮಾರ್ಗಗಳಿಂದ ಬಹಿಷ್ಕೃತರು.

೪೦. ಅವರಿಗೆ ಬ್ರಾಹ್ಮಣಸೇವೆ, ವಿಷ್ಣುಧ್ಯಾನ, ಶಿವಪೂಜೆ, ಮಂತ್ರವಿಲ್ಲದೆ ಪುಣ್ಯಮಾಡುವುದು, ದಾನ ಇವುಗಳು ವಿಹಿತವಾಗಿರುವುವು.

ನ ದಾನಸ್ಯ ಕ್ಷಯೋ ಲೋಕೇ ಶ್ರದ್ಧಯಾ ಯತ್ಪ್ರದೀಯತೇ ।
ಅಶ್ರದ್ಧಯಾಽಶುಚಿತಯಾ ದಾನಂ ವೈರಸ್ಯ ಕಾರಣಂ ॥ ೪೧ ॥
ಅಹಿಂಸಾದಿಃ ಸಮಾದಿಷ್ಟೋ ಧರ್ಮಸ್ತಾಸಾಂ ಮಹಾಫಲಃ ।
ಚಾತುರ್ಮಾಸ್ಯೇ ವಿಶೇಷೇಣ ತ್ರಿದಿವೇಶಾದಿ ಸೇವಯಾ ॥ ೪೨ ॥
ಸುದರ್ಶನೈಸ್ತಥಾ ಧರ್ಮಃ ಸೇವ್ಯತೇ ಹ್ಯವಿರೋಧಿಭಿಃ ।
ಸಚ್ಛೂದ್ರೈರ್ದಾನಪುಣ್ಯೈಶ್ಚ ದ್ವಿಜಶುಶ್ರೂಷಣಾದಿಭಿಃ ॥ ೪೩ ॥
ವೃತ್ತಿಶ್ಚ ಸತ್ಯಾಽನೃತಜಾ ವಾಣಿಜ್ಯವ್ಯವಹಾರಜಾ ।
ಅಶೀತಿಭಾಗಮಾದದ್ಯಾದ್ವ್ಯಾಜಾದ್ವಾರ್ಧುಷಿಕಃ ಶತೇ ॥ ೪೪ ॥
ಸಪಾದಭಾಗವೃದ್ಧಿಸ್ತು ಕ್ಷತ್ರಿಯಾದಿಷು ಗೃಹ್ಯತೇ ।
ಏವಂ ನ ಬಂಧೋ ಭವತಿ ಪಾತಕಸ್ಯ ಕದಾಚನ ॥ ೪೫ ॥
ಪ್ರಾತಃಕರ್ಮ ಸುರೇಶಾನಾಂ ಮಧ್ಯಾಹ್ನೇ ದ್ವಿಜಸೇವನಂ ।
ಅಪರಾಹ್ಣೇಽಥ ಕಾರ್ಯಾಣಿ ಕುರ್ವನ್ಮರ್ತ್ಯಃ ಸುಖೀ ಭವೇತ್ ॥ ೪೬ ॥
ಗೃಹಸ್ಥೈಶ್ಚ ಸದಾ ಭಾವ್ಯಂ ಯಾವಜ್ಜೀವಂ ಕ್ರಿಯಾಪರೈಃ ।
ಪಂಚಯಜ್ಞರತೈಶ್ಚೈವಾಽತಿಥಿದ್ವಿಜಸುಪೂಜಕೈಃ ॥ ೪೭ ॥
ವಿಷ್ಣುಭಕ್ತಿಶ್ಚತೈಶ್ಚೈವ ವೇದಮಂತ್ರ ವಿಪಾಠಕೈಃ ।
ಸತತಂ ದಾನಶೀಲೈಶ್ಚ ದೀನಾರ್ತಜನವತ್ಸಲೈಃ ॥ ೪೮ ॥

---

೪೧. ಶ್ರದ್ಧೆಯಿಂದ ಕೊಡುವ ದಾನವು ಹಾಳಾಗುವುದಿಲ್ಲ. ಅಶ್ರದ್ಧೆಯಿಂದಲೂ, ಅಶುಚಿಯಿಂದಲೂ ಮಾಡಿದ ದಾನವು ನಿಷ್ಫಲವಾಗುವುದು.

೪೨–೪೩. ಅವರಿಗೆ ಅತಿಶಯ ಫಲವನ್ನೀಯುವ ಅಹಿಂಸಾದಿಗಳು ಧರ್ಮವಾಗಿರುವುವು. ಚಾತುರ್ಮಾಸ್ಯದಲ್ಲಿ ಸಚ್ಛೂದ್ರರು ದೇವತೆಗಳ ಸೇವೆ, ದರ್ಶನ, ದಾನ, ಪುಣ್ಯಕರಣ, ಬ್ರಾಹ್ಮಣಸೇವೆ ಮೊದಲಾದ ಧರ್ಮಗಳನ್ನು ವಿರೋಧವಿಲ್ಲದೆ ಸೇವಿಸಬೇಕು.

೪೪. ಅವರಿಗೆ ವ್ಯಾಪಾರವು ವೃತ್ತಿಯಾಗಿರುವುದು. ಬಡ್ಡಿಯಿಂದ ಜೀವಿಸುವವನು ನೂರರಲ್ಲಿ ಎಂಬತ್ತು ಭಾಗಗಳನ್ನು ತೆಗೆದುಕೊಳ್ಳಬೇಕು.

೪೫. ಕ್ಷತ್ರಿಯಾದಿಗಳಲ್ಲಿ ಒಂದೂಕಾಲು ಭಾಗದಷ್ಟು ಹೆಚ್ಚು ಬಡ್ಡಿಯನ್ನು ತೆಗೆದುಕೊಳ್ಳಬೇಕು. ಹೀಗೆ ಮಾಡಿದರೆ ಪಾಪವು ಸಂಬಂಧಿಸುವುದಿಲ್ಲ.

೪೬. ಬೆಳಗ್ಗೆ ದೇವಪೂಜೆಯನ್ನೂ, ಮಧ್ಯಾಹ್ನ ಬ್ರಾಹ್ಮಣ ಸೇವೆಯನ್ನೂ, ಅಪರಾಹ್ಣದಲ್ಲಿ ಇತರ ಕಾರ್ಯಗಳನ್ನೂ ಮಾಡುವ ಮನುಷ್ಯನು ಸುಖಿಯಾಗುವನು.

೪೭–೫೦. ಗೃಹಸ್ಥರು ಯಾವಾಗಲೂ ಕ್ರಿಯಾನಿಷ್ಠರೂ, ಪಂಚಯಜ್ಞದಲ್ಲಿ ಆಸಕ್ತರೂ, ಅತಿಥಿ, ಬ್ರಾಹ್ಮಣರನ್ನು ಪೂಜಿಸುವವರೂ, ವಿಷ್ಣುಭಕ್ತಿನಿರತರೂ, ವೇದಮಂತ್ರಗಳನ್ನು ಪಠಿಸದವರೂ, ಯಾವಾಗಲೂ ದಾನಮಾಡುವವರೂ,

ಕ್ಷಮಾದಿಗುಣಸಂಯುಕ್ತೈರ್ದ್ವಾದಶಾಕ್ಷರಪೂಜಕೈಃ ।
ಷಡಕ್ಷರಮಹೋದ್ಗಾರ ಪರಮಾನಂದಪೂರಿತೈಃ ॥ ೪೯ ॥
ಸದಪತ್ಯೈಃ ಸದಾ ಚಾರೈಃ ಸತಾಂಶುಶ್ರೂಷಣೈರಪಿ ।
ವಿಮತ್ಸರೈಃ ಸದಾ ಸ್ಥೇಯಂ ತಾಪಕ್ಲೇಶವಿವರ್ಜಿತೈಃ ॥ ೫೦ ॥
ಪ್ರವ್ರಜ್ಯಾವರ್ಜನೈರೇವಂ ಸಚ್ಛೂದ್ರೈರ್ಧರ್ಮತತ್ಪರೈಃ ।
ತೋಷಣಂ ಸರ್ವಭೂತಾನಾಂ ಕಾರ್ಯಂ ವಿತ್ತಾನುಸಾರತಃ ॥ ೫೧ ॥
ಸದಾ ವಿಷ್ಣುಶಿವಾದೀನಾಂ ಯೇ ಭಕ್ತಾಸ್ತೇ ನರಾಃ ಸದಾ ।
ದೇವವದ್ದಿವಿ ದೀವ್ಯಂತಿ ಚಾತುರ್ಮಾಸ್ಯೇ ವಿಶೇಷತಃ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಚ್ಛೂದ್ರಕಥನವರ್ಣನಂ" ನಾಮ
ಏಕಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

ದೀನರು, ದುಃಖಗೊಂಡವರು ಇವರಲ್ಲಿ ಪ್ರೀತಿಯುಳ್ಳವರೂ, ಕ್ಷಮೆ ಮೊದಲಾದ ಗುಣವುಳ್ಳವರೂ, ಹನ್ನೆರಡು ಅಕ್ಷರವುಳ್ಳ ವಿಷ್ಣುಮಂತ್ರದಿಂದ ಪೂಜಿಸುವವರೂ, ಆರು ಅಕ್ಷರಗಳುಳ್ಳ ಶಿವಮಂತ್ರೋಚ್ಚಾರಣೆಯಿಂದುಂಟಾದ ಆನಂದದಿಂದ ತುಂಬಿದವರೂ, ಒಳ್ಳೆಯ ಮಕ್ಕಳುಳ್ಳವರೂ, ಒಳ್ಳೆಯ ನಡತೆಯುಳ್ಳವರೂ, ಸಜ್ಜನರನ್ನು ಸೇವಿಸುವವರೂ, ಮಾತ್ಸರ್ಯವಿಲ್ಲದವರೂ, ತಾಪತ್ರಯವಿಲ್ಲದವರೂ ಆಗಿರಬೇಕು.

೫೧. ಸಚ್ಛೂದ್ರರು ಸನ್ಯಾಸವನ್ನು ಬಿಟ್ಟವರೂ, ಹೀಗೆ ಧರ್ಮನಿರತರೂ ಆಗಿ ವಿತ್ತಾನುಸಾರ ಸಕಲ ಪ್ರಾಣಿಗಳನ್ನು ಸಂತೋಷಗೊಳಿಸಬೇಕು.

೫೨. ಚಾತುರ್ಮಾಸ್ಯದಲ್ಲಿ ಯಾವಾಗಲೂ ವಿಷ್ಣು ಶಿವಾದಿ ದೇವತೆಗಳಲ್ಲಿ ಭಕ್ತಿಯುಳ್ಳ ಆ ಮನುಷ್ಯರು ದೇವತೆಗಳಂತೆ ದೇವಲೋಕದಲ್ಲಿ ವಿನೋದಗೊಳ್ಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಚ್ಛೂದ್ರಕಥನವರ್ಣನ"ವೆಂಬ
ಇನ್ನೂರ ನಲವತ್ತೊಂದನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ದ್ವಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

## ಅಷ್ಟಾದಶಪ್ರಕೃತಿಕಥನವರ್ಣನಂ

ನಾರದ ಉವಾಚ:—

ಅಷ್ಟಾದಶ ಪ್ರಕೃತಯಃ ಕಾ ವದಸ್ವ ಪಿತಾಮಹ ।
ವೃತ್ತಿಸ್ತಾಸಾಂ ಚ ಕೋ ಧರ್ಮಃ ಸರ್ವಂ ವಿಸ್ತರತೋ ಮಮ ॥ ೧ ॥

ಬ್ರಹ್ಮೋವಾಚ:—

ಮಜ್ಜನ್ಮಾಽಭೂದ್ಭಗವತೋ ನಾಭಿಪಂಕಜಕೋಶತಃ ।
ಸ್ವಕಾಲ ಪರಿಮಾಣೇನ ಪ್ರಬುದ್ಧಸ್ಯ ಜಗತ್ಪತೇಃ ॥ ೨ ॥
ತತೋ ಬಹುತಿಥೇ ಕಾಲೇ ಕೇಶವೇನ ಪುರಾ ಸ್ಮೃತಃ ।
ಸ್ರಷ್ಟುಕಾಮೇನ ವಿವಿಧಾಃ ಪ್ರಜಾಮನಸಿ ರಾಜಸೀಃ ॥ ೩ ॥
ಅಹಂ ಕಮಲಜಸ್ತತ್ರ ಜಾತಃ ಪುತ್ರಶ್ಚತುರ್ಮುಖಃ ।
ಉದರಂ ನಾಭಿನಾಲೇನ ಪ್ರವಿಶ್ಯಾಽಥ ವ್ಯಲೋಕಯಂ ॥ ೪ ॥
ತತ್ರ ಬ್ರಹ್ಮಾಂಡ ಕೋಟೀನಾಂ ದರ್ಶನಂ ಮೇಽಭವತ್ಪುನಃ ।
ವಿಸ್ಮಯಾಚ್ಚಿಂತಯಾನಸ್ಯ ಸೃಷ್ಟ್ಯರ್ಥಮಭಿಧಾವತಾ ॥ ೫ ॥

---

## ಕನ್ನಡದ ಅನುವಾದ

### ಅಷ್ಟಾದಶಪ್ರಕೃತಿಕಥನವರ್ಣನ

೧. ನಾರದನು ಹೇಳುತ್ತಾನೆ:—ಪಿತಾಮಹ! ಹದಿನೆಂಟು ಪ್ರಕೃತಿಗಳು ಯಾವುವು? ಅವನ್ನೂ, ಅವುಗಳ ಧರ್ಮ ಮತ್ತು ವೃತ್ತಿಗಳನ್ನೂ ವಿಸ್ತಾರವಾಗಿ ನನಗೆ ಹೇಳು.

೨. ಬ್ರಹ್ಮನು ಹೇಳುತ್ತಾನೆ:— ತನ್ನ ಕಾಲಪರಿಮಾಣದಿಂದ ಎಚ್ಚರಗೊಂಡ ನಾರಾಯಣನ ನಾಭಿಕಮಲದಿಂದ ನಾನು ಹುಟ್ಟಿದೆನು.

೩. ಅನಂತರ ಬಹುಕಾಲ ಕಳೆಯಲು ನಾನಾ ಬಗೆಯ ರಾಜಸ ಪ್ರಜೆಗಳನ್ನು ಸೃಷ್ಟಿಸಲಿಚ್ಛಿಸುವ ವಿಷ್ಣುವು ನನ್ನನ್ನು ಸ್ಮರಿಸಿದನು.

೪. ಅಲ್ಲಿ ಜನಿಸಿದ ಚತುರ್ಮುಖಬ್ರಹ್ಮನಾದ ನಾನು ನಾಭಿನಾಳದಿಂದ ವಿಷ್ಣುವಿನ ಹೊಟ್ಟೆಯನ್ನು ಹೊಕ್ಕು ನೋಡಿದೆನು.

೫. ಸೃಷ್ಟಿಗಾಗಿ ಧಾವಿಸುತ್ತ ಆಶ್ಚರ್ಯದಿಂದ ಚಿಂತಿಸುತ್ತಿರುವ ನನಗೆ ಅಲ್ಲಿ ಕೋಟಿ ಬ್ರಹ್ಮಾಂಡಗಳ ದರ್ಶನವಾಯಿತು.

ನಿರ್ಗಮ್ಯ ಪುನರೇವಾಽಹಂ ಪದ್ಮನಾಲೇನ ಯಾವತಾ ।
ಬಹಿರಾಗಾಂ ವಿಸ್ಮೃತಂ ತತ್ಸರ್ವಂ ಸೃಷ್ಟ್ಯರ್ಥಕಾರಣಂ ॥ ೬ ॥
ಪುನರೇವ ತತೋ ಗತ್ವಾ ಪ್ರಜಾಃ ಸೃಷ್ಟ್ವಾ ಚತುರ್ವಿಧಾಃ ।
ನಾಭಿನಾಲೇನ ನಿರ್ಗತ್ಯ ವಿಸ್ಮೃತೇನಾಂತರಾತ್ಮನಾ ॥ ೭ ॥
ತದಾಽಹಂ ಜಡವಜ್ಜಾತೋ ವಾಗುವಾಚಾಽಶರೀರಿಣೀ ।
ತಪಸ್ತಪ ಮಹಾಬುದ್ಧೇ ಜಡತ್ವಂ ನೋಚಿತಂ ತವ ॥ ೮ ॥
ದಶವರ್ಷಸಹಸ್ರಾಣಿ ತತೋಽಹಂ ತಪ ಆಸ್ಥಿತಃ ।
ಪುನರಾಕಾಶಜಾ ವಾಣೀ ಮಾಮುವಾಚಾಽವಿನಶ್ವರಾ ॥ ೯ ॥
ವೇದರೂಪಾಶ್ರಿತಾ ಪೂರ್ವಮಾವಿರ್ಭೂತಾ ತಪೋಬಲಾತ್ ।
ತತೋ ಭಗವತಾಽಽದಿಷ್ಟಃ ಸೃಜ ತ್ವಂ ಬಹುಧಾ ಪ್ರಜಾಃ ॥ ೧೦ ॥
ರಾಜಸಂ ಗುಣಮಾಶ್ರಿತ್ಯ ಭೂತಸರ್ಗಮಕಲ್ಮಷಂ ।
ಮನಸಾ ಮಾನಸೀ ಸೃಷ್ಟಿಃ ಪ್ರಥಮಂ ಚಿಂತಿತಾ ಮಯಾ ॥ ೧೧ ॥
ತತೋ ವೈ ಬ್ರಾಹ್ಮಣಾ ಜಾತಾ ಮರೀಚ್ಯಾದಿ ಮುನೀಶ್ವರಾಃ ।
ತೇಷಾಂ ಕನೀಯಾಂಸ್ತ್ವಂ ಜಾತೋ ಜ್ಞಾನವೇದಾಂಗಪಾರಗಃ ॥ ೧೨ ॥
ಕರ್ಮನಿಷ್ಠಾಶ್ಚ ತೇ ನಿತ್ಯಂ ಸೃಷ್ಟ್ಯರ್ಥಂ ಸತತೋದ್ಯತಾಃ ।
ನಿರ್ವ್ಯಾಪಾರೋ ವಿಷ್ಣುಭಕ್ತ ಏಕಾಂತಬ್ರಹ್ಮಸೇವಕಃ ॥ ೧೩ ॥

---

೬. ಬಳಿಕ ಪದ್ಮನಾಳದಿಂದ ಹೊರಟು ನಾನು ಹೊರಗೆ ಬರಲು ಆ ಸೃಷ್ಟಿಗೆ ಕಾರಣವಾದ ವಸ್ತುಗಳು ಮರೆತುಹೋದುವು.

೭–೮. ಮರಳಿ ನಾಭಿನಾಳದಿಂದ ಒಳಗೆಹೋಗಿ ನಾಲ್ಕು ವಿಧಗಳಾದ ಪ್ರಜೆಗಳನ್ನು ಸೃಷ್ಟಿಸಿ ಹೊರಗೆ ಬಂದು ವಿಸ್ಮೃತಿಗೊಂಡು ಜಡನಂತಾದೆನು. ಆಗ "ಪ್ರಾಜ್ಞನೆ! ನಿನಗೆ ಜಡತ್ವವು ಉಚಿತವಲ್ಲ. ತಪಸ್ಸನ್ನಾಚರಿಸು" ಎಂದು ಅಶರೀರವಾಣಿಯಾಯಿತು.

೯–೧೧. ಅನಂತರ ನಾನು ಹತ್ತುಸಾವಿರ ವರ್ಷಕಾಲ ತಪವನ್ನಾಚರಿಸಿದೆನು. ಮರಳಿ ಆಕಾಶವಾಣಿಯು ಶಾಶ್ವತವೇದರೂಪವನ್ನಾಶ್ರಯಿಸಿ ಆವಿರ್ಭವಿಸಿ ನನ್ನನ್ನು ಕುರಿತು, "ನೀನು ತಪೋಬಲದಿಂದ ಭಗವಂತನ ಆದೇಶದಂತೆ ರಾಜಸಗುಣವನ್ನಾಶ್ರಯಿಸಿ ಬಹುವಿಧಗಳಾದ ಪ್ರಜೆಗಳನ್ನು ಸೃಜಿಸು" ಎಂದಿತು. ನಾನು ಮೊದಲು ಮಾನಸಸೃಷ್ಟಿಯನ್ನಾಲೋಚಿಸಿದೆನು.

೧೨. ಅನಂತರ ಬ್ರಾಹ್ಮಣರಾದ ಮರೀಚ್ಯಾದಿ ಮುನಿವರ್ಯರು ಜನಿಸಿದರು. ವೇದವೇದಾಂಗಪಾರಂಗತನಾದ ನೀನು ಅವರಲ್ಲಿ ಕನಿಷ್ಠನಾಗಿ ಜನಿಸಿದೆ.

೧೩–೧೫. ಆ ಮರೀಚ್ಯಾದಿಗಳು ಯಾವಾಗಲೂ ಕರ್ಮನಿಷ್ಠರೂ, ಸೃಷ್ಟಿನಾಗಿ ಉದ್ಯುಕ್ತರೂ ಆದರು. ನೀನುಮಾತ್ರ ವ್ಯಾಪಾರರಹಿತನೂ, ವಿಷ್ಣುಭಕ್ತನೂ,

ನಿರ್ಮಮೋ ನಿರಹಂಕಾರೋ ಮಮ ತ್ವಂ ಮಾನಸಃ ಸುತಃ ।
ಕ್ರಮಾನ್ಮಯಾತು ತೇಷಾಂ ವೈ ವೇದ ರಕ್ಷಾರ್ಥಮೇವ ಚ ॥ ೧೪ ॥
ಪ್ರಥಮಾ ಮಾನಸೀ ಸೃಷ್ಟಿರ್ದ್ವಿಜಾತ್ಯಾದಿರ್ವಿನಿರ್ಮಿತಾ ।
ತತೋಽಹಮಾಂಗಿಕೀಂ ಸೃಷ್ಟಿಂ ಸೃಷ್ಟವಾಂಸ್ತತ್ರ ನಾರದ ॥ ೧೫ ॥
ಮುಖಾಚ್ಚ ಬ್ರಾಹ್ಮಣಾ ಜಾತಾ ಬಾಹುಭ್ಯಃ ಕ್ಷತ್ರಿಯಾ ಮಮ ।
ವೈಶ್ಯಾ ಊರುಸಮುದ್ಭೂತಾಃ ಪದ್ಭ್ಯಾಂ ಶೂದ್ರಾ ಬಭೂವಿರೇ ॥ ೧೬ ॥
ಅನುಲೋಮವಿಲೋಮಾಭ್ಯಾಂ ಕ್ರಮಾಚ್ಚ ಕ್ರಮಯೋಗತಃ ।
ಶೂದ್ರಾದಧೋಽಧೋ ಜಾತಾಶ್ಚ ಸರ್ವೇ ಪಾದತಲೋದ್ಭವಾಃ ॥ ೧೭ ॥
ತಾಃ ಸರ್ವಾಸ್ತು ಪ್ರಕೃತಯೋ ಮಮ ದೇಹಾಂಶಸಂಭವಾಃ ।
ನಾರದ ತ್ವಂ ವಿಜಾನೀಹಿ ತಾಸಾಂ ನಾಮಾನಿ ವಚ್ಮಿತೇ ॥ ೧೮ ॥
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತ್ರಯ ಏವ ದ್ವಿಜಾತಯಃ ।
ವೇದಾಸ್ತಪೋಽಧ್ಯಯನಂ ಚ ಯಜನಂ ದಾನಮೇವ ಚ ॥ ೧೯ ॥
ವೃತ್ತಿರಧ್ಯಾಪನಾಚ್ಚೈವ ತಥಾ ಸ್ವಲ್ಪ ಪ್ರತಿಗ್ರಹಾತ್ ।
ವಿಪ್ರಃ ಸಮರ್ಥಸ್ತಪಸಾ ಯದ್ಯಪಿ ಸ್ಯಾತ್ಪ್ರತಿಗ್ರಹೇ ॥ ೨೦ ॥
ತಥಾಽಪಿ ನೈವ ಗೃಹ್ಣೀಯಾತ್ತಪೋ ರಕ್ಷಾ ಯತಃ ಸದಾ ।
ವೇದಪಾಠೋ ವಿಷ್ಣುಪೂಜಾ ಬ್ರಹ್ಮಧ್ಯಾನಮಲೋಭತಾ ॥ ೨೧ ॥

---

ಅತಿಶಯವಾಗಿ ಬ್ರಹ್ಮಸೇವಕನೂ, ಮಮತೆಯಿಲ್ಲದವನೂ, ಅಹಂಕಾರರಹಿತನೂ ಆದ ನನ್ನ ಮಾನಸ ಸುತನು. ಕ್ರಮವಾಗಿ ನಾನು ಆ ವೇದರಕ್ಷಣೆಗಾಗಿ ಮಾನಸ ಸೃಷ್ಟಿರೂಪರಾದ ಬ್ರಾಹ್ಮಣಾದಿಗಳನ್ನು ಸೃಷ್ಟಿಮಾಡಿ ಆಂಗಿಕ ಸೃಷ್ಟಿಮಾಡಿದೆನು.

೧೬. ನನ್ನ ಮುಖದಿಂದ ಬ್ರಾಹ್ಮಣರೂ, ತೋಳುಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಸಂಭವಿಸಿದರು.

೧೭. ನನ್ನ ಪಾದತಲದಿಂದ ಶೂದ್ರರಿಗಿಂತ ಕೆಳಗಿನ ಅನುಲೋಮ ವಿಲೋಮ ಜಾತಿಗಳು ಹುಟ್ಟಿದುವು.

೧೮. ಆ ಸಮಸ್ತ ಪ್ರಜೆಗಳು ನನ್ನ ದೇಹಭಾಗದಿಂದ ಹುಟ್ಟಿದರು. ನಾರದ! ಅವರ ನಾಮಗಳನ್ನು ಹೇಳುತ್ತೇನೆ, ನೀನು ತಿಳಿದುಕೊ.

೧೯. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ಜಾತಿಯವರೇ ದ್ವಿಜರು. ವೇದಾಧ್ಯಯನ, ತಪಸ್ಸು, ಯಜನ, ದಾನ ಇವು ಇವರ ಕರ್ಮಗಳು.

೨೦–೨೫. ಬ್ರಾಹ್ಮಣನು ತಪಸ್ಸಿನಿಂದ ಅಧ್ಯಾಪನ ಮತ್ತು ಪ್ರತಿಗ್ರಹಗಳಿಂದ ಜೀವನ ಮಾಡಲು ಸಮರ್ಥನಾಗಿದ್ದರೂ, ಅವನು ತಪಸ್ಸನ್ನು ರಕ್ಷಿಸಿಕೊಳ್ಳ ಬೇಕಾಗಿರುವುದರಿಂದ ಪ್ರತಿಗ್ರಹ ಮಾಡಕೂಡದು. ವೇದಾಧ್ಯಯನ, ವಿಷ್ಣುಪೂಜೆ, ಬ್ರಹ್ಮಧ್ಯಾನ, ಆಶೆಯಿಲ್ಲದಿರುವುದು, ಕೋಪವಿಲ್ಲದಿರುವುದು, ಶುಚಿ, ಸಹನೆ,

ಅಕ್ರೋಧತಾ ನಿರ್ಮಲತ್ವಂ ಕ್ಷಮಾಸಾರತ್ವಮಾರ್ಯತಾ ।
ಕ್ರಿಯಾತತ್ಪರತಾ ದಾನಕ್ರಿಯಾಸತ್ಯಾದಿಭಿರ್ಗುಣೈಃ ॥ ೨೨ ॥
ಭೂಷಿತೋ ಯೋ ಭವೇನ್ನಿತ್ಯಂ ಸ ವಿಪ್ರ ಇತಿ ಕಥ್ಯತೇ ।
ಕ್ಷತ್ರಿಯೇಣ ತಪಃ ಕಾರ್ಯಂ ಯಜನಂ ದಾನಮೇವ ಚ ॥ ೨೩ ॥
ವೇದಪಾಠೋ ವಿಪ್ರಭಕ್ತಿರೇಷಾಂ ಶಸ್ತ್ರೇಣ ಜೀವನಂ ।
ಸ್ತ್ರೀಬಾಲಗೋಬ್ರಾಹ್ಮಣಾರ್ಥೇ ಭೂಮ್ಯರ್ಥೇ ಸ್ವಾಮಿಸಂಕಟೇ ॥ ೨೪ ॥
ಸಂಪ್ರಾಪ್ತೇ ಶರಣಂ ಚೈವ ಪೀಡಿತಾನಾಂ ಚ ಶಬ್ದಿತೇ ।
ಆರ್ತ ತ್ರಾಣಪರಾ ಯೇ ಚ ಕ್ಷತ್ರಿಯಾ ಬ್ರಹ್ಮಣಾ ಕೃತಾಃ ॥ ೨೫ ॥
ಧನವೃದ್ಧಿಕರೋ ವೈಶ್ಯಃ ಪಶುಪಾಲಃ ಕೃಷೀವಲಃ ।
ರಸಾದೀನಾಂ ಚ ವಿಕ್ರೇತಾ ದೇವಬ್ರಾಹ್ಮಣಪೂಜಕಃ ॥ ೨೬ ॥
ಅರ್ಥವೃದ್ಧಿಕರೋ ಯಾಜ್ಯಾದ್ಯಜ್ಞಕರ್ಮಾದಿಕಾರಕಃ ।
ದಾನಮಧ್ಯಯನಂ ಚೇತಿ ವೈಶ್ಯವೃತ್ತಿರುದಾಹೃತಾ ॥ ೨೭ ॥
ಏತಾನ್ಯೇವ ಹ್ಯಮಂತ್ರಾಣಿ ಶೂದ್ರಃ ಕಾರಯತೇ ಸದಾ
ನಿತ್ಯಂ ಷಡ್ದೈವತಂ ಶ್ರಾದ್ಧಂ ಹಂತಕಾರೋಽಗ್ನಿತರ್ಪಣಂ ॥ ೨೮ ॥
ದೇವದ್ವಿಜಾತಿಭಕ್ತಿಶ್ಚ ನಮಸ್ಕಾರೇಣ ಸಿದ್ಧ್ಯತಿ ।
ಶೂದ್ರೋಽಪಿ ಪ್ರಾತರುತ್ಥಾಯ ಕೃತ್ವಾ ಪಾದಾಭಿವಂದನಂ ॥ ೨೯ ॥

---

ಪೂಜ್ಯತೆ, ಕ್ರಿಯಾತತ್ಪರತೆ, ದಾನ, ಸತ್ಯಾದಿಗಳು ಇವುಗಳಿಂದ ಅಲಂಕೃತನಾದವನು ವಿಪ್ರನು. ತಪಸ್ಸು, ಯಜನ, ದಾನ, ವೇದಪಾಠ, ವಿಪ್ರಭಕ್ತಿ, ಸ್ತ್ರೀ, ಬಾಲಕ, ಗೋವು, ಬ್ರಾಹ್ಮಣ, ಭೂಮಿ ಇವುಗಳಿಗಾಗಿಯೂ, ಸ್ವಾಮಿಸಂಕಟ, ಶರಣಾಗತರಕ್ಷಣೆ, ಪೀಡಿತರ ಆರ್ತನಾದ ಈ ಸಮಯಗಳಲ್ಲಿ ಶಸ್ತ್ರಗ್ರಹಣ ಮಾಡುವವನೂ, ಆರ್ತರನ್ನು ಕಾಪಾಡುವವನೂ ಕ್ಷತ್ರಿಯನು.

೨೬–೨೭. ಹಣವನ್ನು ಬಡ್ಡಿಯಿಂದ ಹೆಚ್ಚಿಸುವವನೂ, ಪಶುಪಾಲಕನೂ, ವ್ಯವಸಾಯ ಮಾಡುವವನೂ, ರಸಾದಿ ಪದಾರ್ಥಗಳನ್ನು ಮಾರುವವನೂ, ಯಜ್ಞಾದಿ ಕರ್ಮಗಳನ್ನು ಮಾಡುವವನೂ, ದಾನಾಧ್ಯಯನ ಮಾಡುವವನೂ ವೈಶ್ಯನು.

೨೮–೩೧. ಇವುಗಳನ್ನೆಲ್ಲ ಶೂದ್ರನು ಮಂತ್ರವಿಲ್ಲದೆ ಮಾಡುವನು. ಷಡ್ದೈವತ ಶ್ರಾದ್ಧ, ಹಂತಕಾರ, ಅಗ್ನಿತರ್ಪಣ, ದೇವ, ದ್ವಿಜಭಕ್ತಿ, ನಮಸ್ಕಾರ ಇವುಗಳಿಂದ ಶೂದ್ರನು ಸಿದ್ಧಿಯನ್ನು ಹೊಂದುವನು. ಶೂದ್ರನು ಬೆಳಗ್ಗೆ ಎದ್ದು ಬ್ರಾಹ್ಮಣನಿಗೆ ವಂದಿಸಿ ವಿಷ್ಣುಭಕ್ತಿಮಯವಾದ ಶ್ಲೋಕಗಳನ್ನು ಪಠಿಸಿದರೆ ವಿಷ್ಣುತ್ವವನ್ನು ಪಡೆಯುವನು. ಮಳೆಗಾಲದ ವ್ರತವನ್ನಾಚರಿಸುವವನೂ, ತಿಥಿವಾರಾಧಿದೇವತೆಯೇ

ವಿಷ್ಣುಭಕ್ತಿಮಯಾಂಭೋಃ ಲೋಕಾನ್ಪತನ್ನಿಷ್ಣುತ್ವಮಾಪ್ನುಯಾತ್ ।
ವಾರ್ಷಿಕವ್ರತಕೃನ್ನಿತ್ಯಂ ತಿಥಿವಾರಾಧಿದೈವತಃ ॥ ೩೦ ॥
ಅನ್ನದಃ ಸರ್ವಜೀವಾನಾಂ ಗೃಹಸ್ಥಃ ಶೂದ್ರ ಈರಿತಃ ।
ಅಮಂತ್ರಾಣ್ಯಪಿ ಕರ್ಮಾಣಿ ಕುರ್ವನ್ನೇವ ಹಿ ಮುಚ್ಯತೇ ॥ ೩೧ ॥
ಚಾತುರ್ಮಾಸ್ಯವ್ರತಕರಃ ಶೂದ್ರೋಽಪಿ ಹರಿತಾಂ ವ್ರಜೇತ್ ॥
ಶಿಲ್ಪೀ ಚ ನರ್ತಕಶ್ಚೈವ ಕಾಷ್ಠಕಾರಃ ಪ್ರಜಾಪತಿಃ ॥ ೩೨ ॥
ವರ್ಧಕಿಶ್ಚಿತ್ರಕಶ್ಚೈವ ಸೂತ್ರಕೋ ರಜಕಸ್ತಥಾ ।
ಗಚ್ಛಕಸ್ತಂತುಕಾರಶ್ಚ ಚಕ್ರಿಕಶ್ಚರ್ಮಕಾರಕಃ ॥ ೩೩ ॥
ಸೂನಿಕೋ ಧ್ವನಿಕಶ್ಚೈವ ಕೌಲ್ಹಿಕೋ ಮತ್ಸ್ಯಘಾತಕಃ ।
ಔನಾಮಿಕಸ್ತು ಚಂಡಾಲಃ ಪ್ರಕೃತ್ಯಾಷ್ಟಾದಶೈವ ತೇ ॥ ೩೪ ॥
ಶಿಲ್ಪಿಕಃ ಸ್ವರ್ಣಕಾರಶ್ಚ ದಾರುಕಃ ಕಾಂಸ್ಯಕಾರಕಃ ।
ಕಾಡುಕಃ ಕುಂಭಕಾರಶ್ಚ ಪ್ರಕೃತ್ಯಾ ಉತ್ತಮಾಶ್ಚ ಷಟ್ ॥ ೩೫ ॥
ಖರವಾಹ್ಯುಷ್ಟ್ರವಾಹೀ ಚ ಹಯವಾಹೀ ತಥೈವ ಚ ।
ಗೋಪಾಲ ಇಷ್ಟಿಕಾಕಾರೋ ಅಧಮಾಧಮಪಂಚಕಂ ॥ ೩೬ ॥
ರಜಕಶ್ಚರ್ಮಕಾರಶ್ಚ ನಟೋ ಬುರುಡ ಏವ ಚ ।
ಕೈವರ್ತಮೇದಭಿಲ್ಲಾಶ್ಚ ಸಪ್ತೈತೇ ಅಂತ್ಯಜಾಃ ಸ್ಮೃತಾಃ ॥ ೩೭ ॥

---

ದೇವತೆಯಾಗುಳ್ಳವನೂ, ಸಮಸ್ತ ಪ್ರಾಣಿಗಳಿಗೆ ಅನ್ನವನ್ನು ನೀಡುವವನೂ, ಗೃಹಸ್ಥನೂ ಶೂದ್ರನೆನ್ನಿಸಿಕೊಳ್ಳುವನು. ಶೂದ್ರನು ಮಂತ್ರವಿಲ್ಲದೆ ಕರ್ಮಗಳನ್ನಾಚರಿಸಿದರೂ ಮುಕ್ತನಾಗುವನು.

೩೨–೩೪. ಚಾತುರ್ಮಾಸ್ಯ ವ್ರತವನ್ನಾಚರಿಸುವ ಶೂದ್ರನು ಹರಿತ್ವವನ್ನು ಪಡೆಯುವನು. ಶಿಲ್ಪಿ, ನರ್ತಕ, ಕಾಷ್ಠಕಾರ, ಪ್ರಜಾಪತಿ, ಬಡಗಿ, ಚಿತ್ರಕಾರ, ಸೂತ್ರಕ, ಅಗಸ, ಗಚ್ಛಕ, ನೇಯ್ಗೆಯವ, ಚಕ್ರಿಕ, ಚರ್ಮಕಾರ, ಕಟುಕ, ಧ್ವನಿಕ, ಕೌಲ್ಹಿಕ, ಬೆಸ್ತ, ಔನಾಮಿಕ, ಚಂಡಾಲ ಈ ಹದಿನೆಂಟು ಜನ ಪ್ರಕೃತಿಗಳು.

೩೫. ಶಿಲ್ಪಿಕ, ಸ್ವರ್ಣಕಾರ, ದಾರುಕ, ಕಾಂಸ್ಯಕಾರಕ, ಕಾಡುಕ, ಕುಂಬಾರ ಈ ಆರುಮಂದಿ ಉತ್ತಮರು.

೩೬. ಕತ್ತೆ, ಒಂಟೆ, ಕುದುರೆ ಸವಾರರೂ, ಗೊಲ್ಲ, ಇಟ್ಟಿಗೆ ಮಾಡುವವರೂ ಅತಿ ನೀಚರು.

೩೭. ಅಗಸ, ಚರ್ಮಕಾರ, ನಟ, ಬುರುಡ, ಧೀವರ, ಮೇದ, ಭಿಲ್ಲ ಇವರು ಅಂತ್ಯಜರು.

ಯೋ ಯಸ್ಯ ಹೀನೋ ವರ್ಣೇನ ಸ ಚಾಽಷ್ಟಾದಶಮೋ ನರಃ ।
ಸರ್ವಾಸಾಂ ಪ್ರಕೃತೀನಾಂ ಚ ಉತ್ತಮಾ ಮಧ್ಯಮಾಃ ಸಮಾಃ ॥ ೩೮ ॥
ಭೇದಾಸ್ತ್ರಯಃ ಸಮಾಖ್ಯಾತಾ ವಿಜ್ಞೇಯಾಃ ಸ್ಮೃತಿನಿರ್ಣಯಾತ್ ।
ಶಿಲ್ಪಿನಃ ಸಪ್ತ ವಿಜ್ಞೇಯಾ ಉತ್ತಮಾಃ ಸಮುದಾಹೃತಾಃ ॥ ೩೯ ॥
ಸ್ವರ್ಣಕೃತ್ಕಂಬುಕಶ್ಚೈವ ತಂಡುಲೀ ಪುಷ್ಪಲಾವಕಃ ।
ತಾಂಬೂಲೀ ನಾಪಿತಶ್ಚೈವ ಮಣಿಕಾರಶ್ಚ ಸಪ್ತಧಾ ॥ ೪೦ ॥
ನ ಸ್ನಾನಂ ದೇವತಾಹೋಮಸ್ತಪೋ ನಿಯಮ ಏವ ಚ ।
ನ ಸ್ವಾಧ್ಯಾಯ ವಷಟ್ಕಾರೌ ನ ಚ ಶುದ್ಧಿರ್ವಿವಾಹಿತಾ ॥ ೪೧ ॥
ಏತಾಸಾಂ ಪ್ರಕೃತೀನಾಂ ಚ ಗುರುಪೂಜಾ ಸದೋದಿತಾ ।
ವಿಪ್ರಾಣಾಂ ಪ್ರಾಕೃತೋ ನಿತ್ಯಂ ದಾನಮೇವ ಪರೋ ವಿಧಿಃ ॥ ೪೨ ॥
ಸರ್ವೇಷಾಮೇವ ವರ್ಣಾನಾಮಾಶ್ರಮಾಣಾಂ ಮಹಾಮುನೇ ।
ಸರ್ವಾಸಾಂ ಪ್ರಕೃತೀನಾಂ ಚ ವಿಷ್ಣುಭಕ್ತಿಃ ಸದಾ ಶುಭಾ ॥ ೪೩ ॥
ಇತಿ ತೇ ಕಥಿತಂ ಸರ್ವಂ ಯಥಾ ಪ್ರಕೃತಿ ಸಂಭವಂ ।
ಕಥಾಂ ಶೃಣು ಮಹಾಪುಣ್ಯಾಂ ಶೂದ್ರಃ ಶುದ್ಧಿಮಗಾದ್ಯಥಾ ॥ ೪೪ ॥

---

೩೮—೪೧. ಯಾವನು ಜಾತಿಯಿಂದ ಹೀನನೋ ಅವನು ಹದಿನೆಂಟನೆಯವನು. ಸ್ಮೃತಿನಿರ್ಣಯದಿಂದ ಉತ್ತಮ, ಮಧ್ಯಮ, ಸಮ ಎಂದು ಎಲ್ಲ ಪ್ರಕೃತಿಗಳಲ್ಲಿಯೂ ಮೂರು ಭೇದಗಳುಂಟು. ಸ್ವರ್ಣಕಾರ, ಕಂಬುಕ, ತಂಡುಲೀ, ಪುಷ್ಪಲಾವಕ, ತಾಂಬೂಲೀ, ನಾಪಿತ, ಮಣಿಕಾರ ಎಂಬ ಏಳು ವಿಧ ಶಿಲ್ಪಿಗಳು ಉತ್ತಮರು. ಇವರಿಗೆ ಸ್ನಾನ, ದೇವತಾ ಹೋಮ, ತಪಸ್ಸು, ನಿಯಮ, ವೇದಾಧ್ಯಯನ, ವಷಟ್ಕಾರ, ಶುದ್ಧಿ, ವಿವಾಹ ಇವುಗಳಿಲ್ಲ.

೪೨. ಈ ಪ್ರಕೃತಿಗಳಿಗೆ ಗುರುಪೂಜೆಯು ಯಾವಾಗಲೂ ವಿಹಿತವಾಗಿರುವುದು. ವಿಪ್ರರಿಗೆ ಯಾವಾಗಲೂ ದಾನ ಮಾಡುವುದು ಪ್ರಕೃತಿಸಿದ್ಧವಾದ ವಿಧಿಯು.

೪೩. ಮಹರ್ಷಿಯೆ! ಸಕಲ ವರ್ಣಾಶ್ರಮದವರಿಗೂ, ಸಕಲ ಪ್ರಕೃತಿಗಳಿಗೂ ವಿಷ್ಣುಭಕ್ತಿಯು ಶುಭಕರವಾದುದು.

೪೪. ಹೀಗೆ ನಿನಗೆ ಪ್ರಕೃತಿಗಳ ಸಂಬಂಧವಾದ ಎಲ್ಲವನ್ನೂ ಹೇಳಿರುವೆನು. ಶೂದ್ರನು ಹೇಗೆ ಶುದ್ಧನಾದನೆಂಬ ವಿಷಯದಲ್ಲಿ ಪುಣ್ಯಕರವಾದ ಒಂದು ಕಥೆಯನ್ನು ಹೇಳುವೆನು ಕೇಳು.

ಇದಂ ಪುರಾಣಂ ಪರಮಂ ಪವಿತ್ರಂ
ವಿಶುದ್ಧಧೀರ್ಯಸ್ತು ಶೃಣೋತಿ ವಾ ಪಠೇತ್ ।
ವಿಧೂಯ ಪಾಪಾನಿ ಪುರಾರ್ಜಿತಾನಿ .
ಸ ಯಾತಿ ವಿಷ್ಣೋರ್ಭವನಂ ಕ್ರಿಯಾಪರಃ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಷ್ಟಾದಶಪ್ರಕೃತಿಕಥನವರ್ಣನಂ"ನಾಮ
ದ್ವಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

೪೫. ಶುದ್ಧಮನಸ್ಸಿನಿಂದ ಈ ಪವಿತ್ರ ಪುರಾಣವನ್ನು ಕೇಳುವವನಾಗಲಿ, ಹೇಳುವವನಾಗಲಿ ಪೂರ್ವಾರ್ಜಿತ ಪಾಪಗಳನ್ನು ಪರಿಹರಿಸಿಕೊಂಡು ವೈಕುಂಠಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಷ್ಟಾದಶಪ್ರಕೃತಿಕಥನವರ್ಣನ"ವೆಂಬ
ಇನ್ನೂರ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ಪೈಜವನೋಪಾಖ್ಯಾನೇ ಶಾಲಿಗ್ರಾಮಪೂಜನ ಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

ಶೂದ್ರಃ ಪೈಜವನೋ ನಾಮ ಗಾರ್ಹಸ್ಥ್ಯಾಚ್ಛುದ್ಧಿಮಾಪ್ತವಾನ್ ।
ಧರ್ಮಮಾರ್ಗಾವಿರೋಧೇನ ತನ್ನಿಬೋಧ ಮಹಾಮತೇ ॥ ೧ ॥
ಆಸೀತ್ಪೈಜವನಃ ಶೂದ್ರಃ ಪುರಾ ತ್ರೇತಾಯುಗೇ ಕಿಲ ।
ಸ್ವಧರ್ಮನಿರತಃ ಖ್ಯಾತೋ ವಿಷ್ಣುಬ್ರಾಹ್ಮಣಪೂಜಕಃ ॥ ೨ ॥
ನ್ಯಾಯಾಗತಧನೋ ನಿತ್ಯಂ ಶಾಂತಃ ಸರ್ವಜನಪ್ರಿಯಃ
ಸತ್ಯವಾದೀ ವಿವೇಕಜ್ಞಸ್ತಸ್ಯ ಭಾರ್ಯಾ ಚ ಸುಂದರೀ ॥ ೩ ॥
ಧರ್ಮೋಢಾ ವೇದವಿಧಿನಾ ಸಮಾನಕುಲಜಾ ಶುಭಾ ।
ಪತಿವ್ರತಾ ಮಹಾಭಾಗಾ ದೇವದ್ವಿಜಹಿತೇ ರತಾ ॥ ೪ ॥
ಕಾಶ್ಯಾಂ ಸಂಬಂಧಿತಾ ಬಾಲಾ ವೈಜಯಂತ್ಯಾಂ ವಿವಾಹಿತಾ ।
ಸಾ ಧರ್ಮಾಚರಣೇ ದಕ್ಷಾ ವೈಷ್ಣವವ್ರತಚಾರಿಣೀ ॥ ೫ ॥

---

### ಕನ್ನಡದ ಅನುವಾದ

#### ಪೈಜವನೋಪಾಖ್ಯಾನ – ಶಾಲಿಗ್ರಾಮಪೂಜನ ಮಾಹಾತ್ಮ್ಯವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಪೈಜವನನೆಂಬ ಒಬ್ಬ ಶೂದ್ರನು ಧರ್ಮಮಾರ್ಗಕ್ಕೆ ವಿರೋಧವಿಲ್ಲದೆ ಗೃಹಸ್ಥಧರ್ಮವನ್ನನುಷ್ಠಾನ ಮಾಡಿದುದರಿಂದ ಶುದ್ಧನಾದನು. ಎಲೈ ಮಹಾಮತಿಯೆ! ಅದನ್ನು ತಿಳಿದುಕೊ.

೨–೬. ಹಿಂದೆ ತ್ರೇತಾಯುಗದಲ್ಲಿ ಸ್ವಧರ್ಮನಿರತನೂ, ಪ್ರಸಿದ್ಧನೂ, ವಿಷ್ಣು ಬ್ರಾಹ್ಮಣರನ್ನು ಪೂಜಿಸುವವನೂ, ನ್ಯಾಯದಿಂದ ಸಂಪಾದಿಸಿದ ಹಣವುಳ್ಳವನೂ, ಶಾಂತನೂ, ಸಕಲಜನರಿಗೆ ಪ್ರಿಯನೂ, ಸತ್ಯವಂತನೂ, ವಿವೇಕಜ್ಞನೂ ಆದ ಪೈಜವನನೆಂಬ ಶೂದ್ರನಿದ್ದನು. ಅವನಿಗೆ ಸುಂದರಿಯೂ, ವೈಜಯಂತಿಯಲ್ಲಿ ವೇದೋಕ್ತವಿಧಿಯಿಂದ ವಿವಾಹ ಮಾಡಿಕೊಂಡವಳೂ, ಸಮಾನವಂಶದಲ್ಲಿ ಜನಿಸಿದವಳೂ, ಪತಿವ್ರತೆಯೂ, ಮಹಾಭಾಗ್ಯವಂತಳೂ, ದೇವದ್ವಿಜರ ಹಿತದಲ್ಲಿ ಆಸಕ್ತಳೂ, ಕಾಶೀನಗರದವಳೂ ಆದ ಓರ್ವ ಪತ್ನಿಯಿದ್ದಳು. ಧರ್ಮಾಚರಣೆ

ಭರ್ತ್ರಾ ಸಹ ತಥಾ ಸಮ್ಯಕ್ ಕ್ರೀಡೇ ಸುವಿನೀತವತ್ ।
ಸೋಽಪಿ ರೇಮೇ ತಯಾ ಕಾಲೇ ಹಸ್ತಿನ್ಯೇವ ಮಹಾಗಜಃ ॥ ೬ ॥
ಅರ್ಥಾಪ್ತಿಃ ಪೂರ್ವಪುಣ್ಯೇನ ಜಾತಾ ತಸ್ಯ ಮಹಾತ್ಮನಃ ।
ವಾಣಿಜ್ಯಂ ಸ್ವಜನೈರ್ನಿತ್ಯಂ ಸ್ವದೇಶಪರದೇಶಜಂ ॥ ೭ ॥
ಕಾರಯತ್ಯರ್ಥಜಾತ್ರೈಶ್ಚ ಪರಕೀಯಸ್ವಕೀಯಜೈಃ ।
ಏವಮರ್ಥಶ್ಚ ಬಹುಧಾ ಸಂಜಾತೋ ಧರ್ಮದರ್ಶಿನಃ ॥ ೮ ॥
ಪುತ್ರತ್ರಯಂ ಚ ಸಂಜಾತಂ ಪಿತುಃ ಶುಶ್ರೂಷಣೇ ರತಂ ।
ತಸ್ಯ ಪುತ್ರಾಃ ಪಿತೃಭಕ್ತಾ ದ್ರವ್ಯಾದಿ ಮದವರ್ಜಿತಾಃ ॥ ೯ ॥
ಪಿತೃವಾಕ್ಯರತಾಃ ಶ್ರೇಷ್ಠಾಃ ಸ್ವಧರ್ಮಾಚಾರಶೋಭನಾಃ ।
ಪಿತ್ರೋಃ ಶುಶ್ರೂಷಣಾದನ್ಯಾನ್ನಾಭಿನಂದಂತಿ ಕಿಂಚನ ॥ ೧೦ ॥
ತೇ ಸಂಬಂಧೈಃ ಸುಸಂಬದ್ಧಾಃ ಪಿತ್ರಾ ಧರ್ಮಾರ್ಥದರ್ಶಿನಾ ।
ತತ್ಪತ್ನ್ಯೋ ಮಾತೃಪಿತ್ರರ್ಚಾಂ ಕಾರಯಂತ್ಯನಿವಾರಿತಂ ॥ ೧೧ ॥
ಋದ್ಧಿಮದ್ಭವನಂ ತಸ್ಯ ಧನಧಾನ್ಯಸಮನ್ವಿತಂ ।
ಸೋಽಪಿ ಧರ್ಮರತೋ ನಿತ್ಯಂ ದೇವತಾಽತಿಥಿಪೂಜಕಃ ॥ ೧೨ ॥

---

ಯಲ್ಲಿ ದಕ್ಷಳೂ, ವಿಷ್ಣುವ್ರತವನ್ನಾಚರಿಸುವವಳೂ ಆದ ಅವಳು ಪತಿಯೊಡನೆ ವಿಧೇಯತೆಯಿಂದ ಚೆನ್ನಾಗಿ ವಿನೋದಗೊಳ್ಳುತ್ತಿದ್ದಳು. ಅವನೂ ಸಕಾಲದಲ್ಲಿ ಅವಳೊಡನೆ ಸಲಗವು ಹೆಣ್ಣಾನೆಯೊಡನೆ ವಿಹರಿಸುವಂತೆ ವಿಹರಿಸಿದನು.

೭–೮. ಮಹಾತ್ಮನಾದ ಅವನಿಗೆ ಪೂರ್ವಪುಣ್ಯದಿಂದ ದ್ರವ್ಯವು ಪ್ರಾಪ್ತವಾಯಿತು. ಅವನು ತನ್ನ ಮತ್ತು ಇತರರ ದ್ರವ್ಯಗಳಿಂದ ಸ್ವದೇಶ ಪರದೇಶಗಳಲ್ಲಿ ಬಂಧುಗಳೊಡನೆ ವ್ಯಾಪಾರ ಮಾಡಿದನು. ಧರ್ಮಿಷ್ಠನಾದ ಅವನಿಗೆ ಹೀಗೆ ಬಹಳ ದ್ರವ್ಯವು ದೊರಕಿತು.

೯–೧೧. ಅವನಿಗೆ ತಂದೆಯ ಸೇವೆಯಲ್ಲಿ ಆಸಕ್ತರಾದ ಮೂರು ಮಂದಿ ಪುತ್ರರು ಹುಟ್ಟಿದರು. ಆ ಪುತ್ರರು ತಂದೆಯಲ್ಲಿ ಭಕ್ತಿಯುಳ್ಳವರೂ, ದ್ರವ್ಯಮದವಿಲ್ಲದವರೂ, ತಂದೆಯ ಮಾತಿನಂತೆ ನಡೆಯುವವರೂ, ಶ್ರೇಷ್ಠರೂ, ಸ್ವಧರ್ಮಾಚಾರಗಳಿಂದ ಮಂಗಳಕರರೂ ಆಗಿದ್ದರು. ಅವರು ತಂದೆ ತಾಯಿಗಳ ಸೇವೆಗಿಂತ ಬೇರಾವುದನ್ನೂ ಬಯಸುತ್ತಿರಲಿಲ್ಲ. ಧರ್ಮಿಷ್ಠನಾದ ತಂದೆಯಲ್ಲಿಯೂ, ಸಂಬಂಧಿಕರಲ್ಲಿಯೂ ಸ್ನೇಹವುಳ್ಳವರಾಗಿದ್ದರು. ಅವರ ಪತ್ನಿಯರು ಅತ್ತೆ ಮಾವಂದಿರ ಪೂಜೆಯನ್ನು ತಡೆಯಿಲ್ಲದೆ ಮಾಡುತ್ತಿದ್ದರು.

೧೨. ಅವನ ಮನೆಯು ಧನಧಾನ್ಯಗಳಿಂದ ಸಹಿತವಾಗಿ ಸಮೃದ್ಧಿಗೊಂಡಿದ್ದಿತು. ಅವನೂ ಧರ್ಮನಿರತನಾಗಿ ದೇವತಾತಿಥಿಗಳನ್ನು ಪೂಜಿಸುತ್ತಿದ್ದನು.

ಗೃಹಾಽಽಗತೋ ನ ವಿಮುಖೋ ಯಸ್ಯ ಜಾತು ಕದಾಚನ ।
ಶೀತಕಾಲೇ ಧನಂ ಪ್ರಾದಾದುಷ್ಣಕಾಲೇ ಜಲಾನ್ನದಃ ॥ ೧೩ ॥
ವರ್ಷಾಕಾಲೇ ವಸ್ತ್ರದಶ್ಚ ಬಭೂವಾಽನ್ನಪ್ರದಃ ಸದಾ ।
ವಾಪೀ ಕೂಪ ತಡಾಗಾದಿ ಪ್ರಪಾ ದೇವಗೃಹಾಣಿ ಚ ॥ ೧೪ ॥
ಕಾರಯತ್ಯುಚಿತೇ ಕಾಲೇ ಶಿವವಿಷ್ಣುವ್ರತಸ್ಥಿತಃ ।
ಇಷ್ಟಧರ್ಮಸ್ತುವರ್ಣಾನಾಂ ಸಮಾಚೀರ್ಣೋ ಮಹಾಫಲಃ ॥ ೧೫ ॥
ಅನ್ಯೇಷಾಂ ಪೂರ್ತಧರ್ಮಾಣಾಂ ತೇಷಾಂ ಪೂರ್ತಕರಃ ಸದಾ ।
ಸ ಬಭೂವ ಧನಾಢ್ಯೋಽಪಿ ವ್ಯಸನೈರ್ನ ಸಮಾಶ್ರಿತಃ ॥ ೧೬ ॥
ವಿಷ್ಣುಭಕ್ತಿರತೋ ನಿತ್ಯಂ ಚಾತುರ್ಮಾಸ್ಯೇ ವಿಶೇಷತಃ ।
ಏಕದಾ ಗಾಲವಮುನಿಃ ಶಿಷ್ಯೈರ್ಬಹುಭಿರಾವೃತಃ ॥ ೧೭ ॥
ಬ್ರಹ್ಮಜ್ಞಾನರತಃ ಶಾಂತಸ್ತಪೋನಿಷ್ಠೋ ಮಹಾವಶೀ ।
ಅಭ್ಯಾಜಗಾಮ ಶೂದ್ರಸ್ಯ ಗೇಹೇ ಪೈಜವನಸ್ಯ ಸಃ ॥ ೧೮ ॥
ಸ ವಾಗ್ಭಿರ್ಮಧುಭಿಸ್ತಸ್ಯ ಅಭ್ಯುತ್ಥಾನಾಽಽಸನಾದಿಭಿಃ ।
ಉಪಚಾರೈಃ ಪುನರ್ಯುಕ್ತೈಃ ಕೃತಾರ್ಥ ಇವ ಮಾನಯನ್ ॥ ೧೯ ॥
ಅದ್ಯ ಮೇ ಸಫಲಂ ಜನ್ಮ ಜಾತಂ ಜೀವಿತಮುತ್ತಮಂ ।
ಅದ್ಯ ಮೇ ಸಫಲೋ ಧರ್ಮಃ ಕುಶಲಶ್ಚೋದ್ಧೃತಸ್ತ್ವಯಾ ॥ ೨೦ ॥

---

೧೩-೧೫. ಅವನ ಮನೆಗೆ ಬಂದ ಅತಿಥಿಯು ಯಾವಾಗಲೂ ವಿಮುಖನಾಗಲಿಲ್ಲ. ಅವನು ಅತಿಥಿಗಳಿಗೆ ಚಳಿಗಾಲದಲ್ಲಿ ಹಣವನ್ನೂ, ಉಷ್ಣಕಾಲದಲ್ಲಿ ನೀರು, ಅನ್ನಗಳನ್ನೂ, ಮಳೆಗಾಲದಲ್ಲಿ ವಸ್ತ್ರ, ಅನ್ನಗಳನ್ನೂ ಕೊಡುತ್ತಿದ್ದನು. ಶಿವವಿಷ್ಣು ವ್ರತನಿರತನಾಗಿ ಉಚಿತಕಾಲದಲ್ಲಿ ವಾಪೀ, ಕೂಪ, ತಡಾಗ, ಅರವಟ್ಟಿಗೆ, ದೇವಾಲಯಗಳನ್ನು ಕಟ್ಟಿಸುತ್ತಿದ್ದನು. ಹೀಗೆ ಅವನು ಮಹಾಫಲಗಳನ್ನೀಯುವ ವರ್ಣಧರ್ಮಗಳನ್ನು ಅನುಷ್ಠಾನ ಮಾಡಿದನು.

೧೬. 'ಇತರ ಪೂರ್ತ ಧರ್ಮಗಳನ್ನೂ ಅವನು ಆಚರಿಸಿದನು. ಧನಿಕನಾಗಿದ್ದರೂ ದ್ಯೂತಾದಿ ವ್ಯಸನಗಳಲ್ಲಿ ನಿರತನಾಗಲಿಲ್ಲ.

೧೭-೧೮. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ನಿತ್ಯವೂ ವಿಷ್ಣುಭಕ್ತಿನಿರತನಾಗಿದ್ದನು. ಒಂದಾನೊಂದು ದಿನ ಬ್ರಹ್ಮಜ್ಞಾನಿಯೂ, ಶಾಂತನೂ, ತಪೋನಿರತನೂ, ಜಿತೇಂದ್ರಿಯನೂ ಆದ ಗಾಲವನೆಂಬ ಮುನಿಯು ಅನೇಕ ಮಂದಿ ಶಿಷ್ಯರೊಡನೆ ಆ ಪೈಜವನ ಮನೆಗೆ ಬಂದನು.

೧೯-೨೧. ಆ ಪೈಜವನನು ಮಧುರವಾಣಿಗಳಿಂದಲೂ, ಅಭ್ಯುತ್ಥಾನ, ಆಸನ ದಾನಾದಿಗಳಿಂದಲೂ ಆ ಗಾಲವನನ್ನು ಉಪಚರಿಸಿ, ಧನ್ಯನಾದವನಂತೆ ಆತನನ್ನು ಸನ್ಮಾನಿಸುತ್ತ, "ನಿನ್ನಿಂದ ಉದ್ಧೃತನಾದ ನನ್ನೀ ಜನ್ಮವು ಈಗ ಸಫಲವಾಯಿತು. ನನ್ನ ಜೀವನವು ಉತ್ತಮಗೊಂಡಿತು. ಧರ್ಮವು ಸಫಲವೂ

ಮಮ ಪಾಪಸಹಸ್ರಾಣಿ ದೃಷ್ಟ್ವಾತ್ಯ ದಗ್ಧಾನಿ ತೇ ಮುನೇ ।
ಗೃಹಂ ಮಮ ಗೃಹಸ್ಥಸ್ಯ ಸಕಲಂ ಪಾವಿತಂ ತ್ವಯಾ ॥ ೨೧ ॥
ತಸ್ಯ ಭಕ್ತ್ಯಾ ಪ್ರಸನ್ನೋಽಭೂದ್ಗತಮಾರ್ಗಪರಿಶ್ರಮಃ ।
ಉವಾಚ ಮುನಿಶಾರ್ದೂಲಃ ಸಚ್ಛೂದ್ರಂ ತಂ ಕೃತಾಂಜಲಿಂ ॥ ೨೨ ॥
ಕಚ್ಚಿತ್ತೇ ಕುಶಲಂ ಸೌಮ್ಯ ಮನೋ ಧರ್ಮೇ ಪ್ರವರ್ತತೇ ।
ಅರ್ಥಾನುಬಂಧಾಃ ಸತತಂ ಬಂಧು ದಾರ ಸುತಾದಯಃ ॥ ೨೩ ॥
ಗೋವಿಂದೇ ಸತತಂ ಭಕ್ತಿಸ್ತಥಾ ದಾನೇ ಪ್ರವರ್ತತೇ ।
ಧರ್ಮಾಽರ್ಥಕಾಮಕಾರ್ಯೇಷು ಸಪ್ರಭಾವಂ ಮನಸ್ತವ ॥ ೨೪ ॥
ವಿಷ್ಣುಪಾದೋದಕಂ ನಿತ್ಯಂ ಶಿರಸಾ ಧಾರ್ಯತೇ ನ ವಾ ।
ಪಾದೋದ್ಭವಂ ಚ ಗಂಗೋದಂ ದ್ವಾದಶಾಽಬ್ದ ಫಲಪ್ರದಂ ॥ ೨೫ ॥
ಚಾತುರ್ಮಾಸ್ಯೇ ವಿಶೇಷೇಣ ತತ್ಫಲಂ ದ್ವಿಗುಣಂ ಭವೇತ್ ।
ಹರಿಭಕ್ತಿರ್ಹರಿಕಥಾ ಹರಿಸ್ತೋತ್ರಂ ಹರೇರ್ನತಿಃ ॥ ೨೬ ॥
ಹರಿಧ್ಯಾನಂ ಹರೇಃ ಪೂಜಾ ಸುಪ್ತೇ ದೇವೇ ಚ ಮೋಕ್ಷಕೃತ್ ॥
ಏವಂ ಬ್ರುವಾಣಂ ಸ ಮುನಿಂ ಪುನರಾಹ ನತಿಂಗತಃ ॥ ೨೭ ॥

---

ಸಮರ್ಥವೂ ಆಯಿತು. ನಿನ್ನ ದೃಷ್ಟಿಮಾತ್ರದಿಂದಲೇ ನನ್ನ ಅನೇಕ ಪಾಪಗಳು ಭಸ್ಮವಾದುವು. ಗೃಹಸ್ಥನಾದ ನನ್ನ ಮನೆಯೆಲ್ಲ ನಿನ್ನಿಂದ ಪವಿತ್ರವಾಯಿತು" ಎಂದು ಮುನಿಯನ್ನು ಕುರಿತು ಹೇಳಿದನು.

೨೨. ಮುನಿಯು ಅವನ ಭಕ್ತಿಯಿಂದ ಪ್ರಸನ್ನನೂ, ಮಾರ್ಗಾಯಾಸವಿಲ್ಲದವನೂ ಆಗಿ ಕೈಜೋಡಿಸಿಕೊಂಡಿರುವ ಆ ಸಚ್ಛೂದ್ರನನ್ನು ಕುರಿತು ಇಂತೆಂದನು.

೨೩. "ಸಾಧುವೆ! ನಿನಗೆ ಕ್ಷೇಮವೆ? ನಿನ್ನ ಮನಸ್ಸು ಧರ್ಮದಲ್ಲಿ ಆಸಕ್ತವಾಗಿರುವುದಷ್ಟೆ? ಬಂಧುಗಳು, ಪತ್ನಿ, ಸುತ ಮೊದಲಾದವರು ದ್ರವ್ಯವನ್ನನುಸರಿಸಿರುತ್ತಾರೆ.

೨೪. ಮನಸ್ಸು ವಿಷ್ಣುಭಕ್ತಿ, ದಾನಗಳಲ್ಲಿ ನಿರತವಾಗಿ ಧರ್ಮ, ಅರ್ಥ, ಕಾಮಗಳ ಕಾರ್ಯಗಳಲ್ಲಿ ಪ್ರಭಾವಗೊಂಡಿರುವುದೆ?

೨೫. ವಿಷ್ಣುಪಾದೋದಕವನ್ನು ಯಾವಾಗಲೂ ಮಸ್ತಕದಿಂದ ಧರಿಸುವೆಯಷ್ಟೆ? ವಿಷ್ಣುವಿನ ಪಾದದಿಂದ ಹುಟ್ಟಿದ ಗಂಗೋದಕವು ಹನ್ನೆರಡು ವರ್ಷಗಳ ಫಲವನ್ನು ಕೊಡುವುದು.

೨೬-೨೭. ಚಾತುರ್ಮಾಸ್ಯದಲ್ಲಿ ಅದರ ಫಲವು ಇಮ್ಮಡಿಯಾಗುವುದು. ವಿಷ್ಣುವು ಮಲಗಿರಲು ಹರಿಭಕ್ತಿ, ಹರಿಕಥಾ, ಹರಿಸ್ತೋತ್ರ, ಹರಿವಂದನೆ, ಹರಿಧ್ಯಾನ, ಹರಿಪೂಜೆ ಇವುಗಳು ಮೋಕ್ಷವನ್ನು ನೀಡುವುವು." ಮುನಿಯು ಹೀಗೆ ಹೇಳುತ್ತಿರಲು, ಪೈಜವನನು ಮರಳಿ ವಂದಿಸಿ ಇಂತೆಂದನು.

ಭವದ್ದೃಷ್ಟ್ಯಾಽಽಶ್ರಮಫಲಮೇತಜ್ಜಾತಂ ನ ಸಂಶಯಃ ।
ತಥಾಽಪಿ ಶ್ರೋತುಮಿಚ್ಛಾಮಿ ತವ ವಾಣೀಮನಾಮಯೀಂ ॥ ೨೮ ॥
ಭವಾದೃಶಾನಾಂ ಗಮನಂ ಸರ್ವಾರ್ಥೇಷು ಪ್ರಕಲ್ಪತೇ ।
ತತಸ್ತೌ ಸಮುದಾ ಯುಕ್ತೌ ಸಂಜಾತೌ ಹೃಷ್ಟಚೇತಸೌ ॥ ೨೯ ॥
ಮುನಿಂ ಪೈಜವನೋ ನಾಮ ಸಚ್ಛೂದ್ರಃ ಪ್ರಾಹ ಸಮ್ಮತಃ ।
ಕಿಮಾಗಮನಕೃತ್ಯಂ ತೇ ಕಥಯಸ್ವ ಪ್ರಸಾದತಃ ॥ ೩೦ ॥
ಕೋ ವಾ ತೀರ್ಥಪ್ರಸಂಗಶ್ಚ ಚಾತುರ್ಮಾಸ್ಯೇ ಸಮೀಪಗೇ ।
ಗಾಲವಃ ಪ್ರಾಹ ಸಚ್ಛೂದ್ರಂ ಧಾರ್ಮಿಕಂ ಸತ್ಯವಾದಿನಂ ॥ ೩೧ ॥
ಮಮ ತೀರ್ಥಾಽವಸಿಕ್ತಸ್ಯ ಮಾಸಾ ಬಹುತರಾ ಗತಾಃ ।
ಇದಾನೀಮಾಶ್ರಮಂ ಯಾಸ್ಯೇ ಚಾತುರ್ಮಾಸ್ಯೇ ಸಮಾಗತೇ ॥ ೩೨ ॥
ಆಷಾಢ ಶುಕ್ಲೈಕಾದಶ್ಯಾಂ ಕರಿಷ್ಯೇ ನಿಯಮಂ ಗೃಹೇ ।
ನಾರಾಯಣಸ್ಯ ಪ್ರೀತ್ಯರ್ಥಂ ಶ್ರೇಯೋಽರ್ಥಂ ಚಾಽಽತ್ಮನಸ್ತಥಾ ।
ಪ್ರತ್ಯುವಾಚ ಮುನಿರ್ಧರ್ಮಾನ್ವಿನಯಾನತಕಂಧರಂ ॥ ೩೩ ॥

ಪೈಜವನ ಉವಾಚ:–

ಮಾಮನುಗ್ರಹಜಾಂ ಬುದ್ಧಿಂ ಬ್ರೂಹಿ ತ್ವಂ ದ್ವಿಜಪುಂಗವ ।
ವೇದೇಽಧಿಕಾರೋ ನೈವಾಽಸ್ತಿ ವೇದಸಾರಜಪಸ್ಯ ವಾ ॥ ೩೪ ॥

---

೨೮–೨೯. "ನಿನ್ನ ದರ್ಶನದಿಂದ ನನ್ನೀ ಗೃಹಸ್ಥಾಶ್ರಮಧರ್ಮವು ನಿಶ್ಚಯವಾಗಿಯೂ ಸಫಲವಾಯಿತು. ಆದರೂ ನಿನ್ನ ನಿರ್ದುಷ್ಟವಾದ ನುಡಿಯನ್ನು ಕೇಳ ಬಯಸುವೆನು. ನಿನ್ನ ಗಮನವು ಸರ್ವವಿಷಯಗಳಲ್ಲಿಯೂ ಸಮರ್ಥವಾಗುವುದು" ಎಂದನು. ತರುವಾಯ ಅವರೀರ್ವರೂ ಪರಸ್ಪರವಾಗಿ ಸಂತೋಷಗೊಂಡರು.

೩೦. ಪೈಜವನನು ಮುನಿಯನ್ನು ಕುರಿತು ಮರಳಿ ಹೀಗೆ ಕೇಳಿದನು. "ನೀನು ಇಲ್ಲಿಗೆ ಬರಲು ಕಾರಣವೇನು? ಅನುಗ್ರಹಿಸಿ ಹೇಳು.

೩೧. ಚಾತುರ್ಮಾಸ್ಯವು ಸಮೀಪಿಸುತ್ತಿರಲು ತೀರ್ಥಯಾತ್ರಾಪ್ರಸಂಗವು ಯಾವುದು?" ಗಾಲವನು ಧಾರ್ಮಿಕನೂ, ಸತ್ಯವಾದಿಯೂ ಆದ ಆ ಸಚ್ಛೂದ್ರನನ್ನು ಕುರಿತು ಇಂತೆಂದನು.

೩೨–೩೩. "ನಾನು ತೀರ್ಥಸ್ನಾನಮಾಡಿ ಬಹಳ ತಿಂಗಳಾದುವು. ಈಗ ಆಶ್ರಮಕ್ಕೆ ತೆರಳುವೆನು. ಚಾತುರ್ಮಾಸ್ಯವು ಬರಲು ಆಷಾಢ ಶುಕ್ಲೈಕಾದಶೀ ದಿನ ನಾರಾಯಣನ ಪ್ರೀತಿಗಾಗಿಯೂ, ನನ್ನ ಶ್ರೇಯಸ್ಸಿಗಾಗಿಯೂ ಮನೆಯಲ್ಲಿ ನಿಯಮವನ್ನು ಅನುಷ್ಠಾನ ಮಾಡುವೆನು" ಎಂದನು.

೩೪–೩೬. ಪೈಜವನನು ಹೇಳುತ್ತಾನೆ:— ದ್ವಿಜವರ್ಯನೆ! ಅನುಗ್ರಹಿಸಿ ನನಗೆ ಬುದ್ಧಿಯನ್ನು ಹೇಳು. ನನಗೆ ವೇದದಲ್ಲಿಯೂ, ಗಾಯತ್ರೀಜಪದಲ್ಲಿಯೂ,

ಪುರಾಣಸ್ಮೃತಿಪಾಠಸ್ಯ ತಸ್ಮಾತ್ಕಿಂಚಿದ್ವದಸ್ವ ಮೇ ।
ತತ್ಪಾತ್ಮಸದೃಶಂ ಕಿಂಚಿದ್ಭಾತಿ ರೂಪಂ ಮಹಾಫಲಂ ॥ ೩೫ ॥
ಚಾತುರ್ಮಾಸ್ಯೇ ವಿಶೇಷೇಣ ಮುಕ್ತಿಸಂಸಾಧಕಂ ವದ ॥ ೩೬ ॥

ಗಾಲವ ಉವಾಚ:—

ಶಾಲಿಗ್ರಾಮಗತಂ ವಿಷ್ಣುಂ ಚಕ್ರಾಂಕಿತಪುಟಂ ಸದಾ ।
ಯೇಽರ್ಚಯಂತಿ ನರಾ ನಿತ್ಯಂ ತೇಷಾಂ ಭುಕ್ತಿಸ್ತ್ವದೂರತಃ ॥ ೩೭ ॥
ಶಾಲಿಗ್ರಾಮೇ ಮನೋ ಯಸ್ಯ ಯತ್ಕಿಂಚಿತ್ಕ್ರಿಯತೇ ಶುಭಂ ।
ಅಕ್ಷಯ್ಯಂ ತದ್ಭವೇನ್ನಿತ್ಯಂ ಚಾತುರ್ಮಾಸ್ಯೇ ವಿಶೇಷತಃ ॥ ೩೮ ॥
ಶಾಲಿಗ್ರಾಮಶಿಲಾ ಯತ್ರ ಯತ್ರ ದ್ವಾರಾವತೀ ಶಿಲಾ ।
ಉಭಯೋಃ ಸಂಗಮಃ ಪ್ರಾಪ್ತೋ ಮುಕ್ತಿಸ್ತಸ್ಯ ನ ದುರ್ಲಭಾ ॥ ೩೯ ॥
ಶಾಲಿಗ್ರಾಮಶಿಲಾ ಯಸ್ಯಾಂ ಭೂಮೌ ಸಂಪೂಜ್ಯತೇ ನೃಭಿಃ ।
ಪಂಚಕ್ರೋಶಂ ಪುನಾತ್ಯೇಷಾ ಅಪಿ ಪಾಪಶತಾನ್ವಿತೈಃ ॥ ೪೦ ॥
ತೈಜಸಂ ಪಿಂಡಮೇತದ್ಧಿ ಬ್ರಹ್ಮರೂಪಮಿದಂ ಶುಭಂ ।
ಯಸ್ಯಾಃ ಸಂದರ್ಶನಾದೇವ ಸದ್ಯಃ ಕಲ್ಮಷನಾಶನಂ ॥ ೪೧ ॥

---

ಪುರಾಣಸ್ಮೃತಿಪಾಠದಲ್ಲಿಯೂ ಅಧಿಕಾರವಿಲ್ಲ. ಆದುದರಿಂದ ಅತಿಶಯ ಫಲವನ್ನು ಕೊಡುವುದೂ, ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಮುಕ್ತಿಸಾಧಕವೂ ಆದ ಪರಮಾತ್ಮಸದೃಶರೂಪವನ್ನು ಪ್ರತ್ಯಕ್ಷಗೊಳಿಸುವ ಯಾವುದಾದರೊಂದು ವಿಷಯ ವನ್ನು ನನಗೆ ಹೇಳು.

೩೭. ಗಾಲವನು ಹೇಳುತ್ತಾನೆ:—ಶಾಲಿಗ್ರಾಮದಲ್ಲಿ ಚಕ್ರಾಂಕಿತನಾಗಿರುವ ವಿಷ್ಣುವನ್ನು ನಿತ್ಯವೂ ಪೂಜಿಸುವ ಮಾನವರಿಗೆ ಭುಕ್ತಿಯು ಸಮೀಪದಲ್ಲಿಯೇ ಉಂಟಾಗುವುದು.

೩೮. ಚಾತುರ್ಮಾಸ್ಯದಲ್ಲಿ ಶಾಲಿಗ್ರಾಮದಲ್ಲಿ ಮನವನ್ನಿರಿಸಿ ಯಾವ ಕಾರ್ಯವನ್ನು ಮಾಡಿದರೆ ಅದು ಅಕ್ಷಯವಾಗುವುದು.

೩೯. ಶಾಲಿಗ್ರಾಮಶಿಲೆಯೂ, ದ್ವಾರಾವತೀಶಿಲೆಯೂ ಕೂಡಿರುವ ಸ್ಥಳದಲ್ಲಿ ಮುಕ್ತಿಯು ಸುಖವಾಗಿ ದೊರಕುವುದು.

೪೦. ಮಾನವರು ಪಾಪಿಗಳಾಗಿದ್ದರೂ ಯಾವ ಸ್ಥಳದಲ್ಲಿ ಶಾಲಿಗ್ರಾಮ ಶಿಲೆಯನ್ನು ಪೂಜಿಸುವರೊ, ಆ ಶಿಲೆಯು ಆ ಸ್ಥಳದ ಹತ್ತುಮೈಲಿ ದೂರದ ಪ್ರದೇಶ ಗಳನ್ನು ಪವಿತ್ರಗೊಳಿಸುವುದು.

೪೧. ಈ ಶಾಲಿಗ್ರಾಮಶಿಲೆಯು ವಿಷ್ಣುರೂಪವಾದ ತೇಜಃಪಿಂಡವಾಗಿರು ವುದು. ಇದನ್ನು ನೋಡುವುದರಿಂದ ಕೂಡಲೇ ಪಾಪವು ಪರಿಹಾರವಾಗುವುದು.

ಸರ್ವತೀರ್ಥಾನಿ ಪುಣ್ಯಾನಿ ದೇವತಾಽಽಯತನಾನಿ ಚ ।
ನದ್ಯಃ ಸರ್ವಾ ಮಹಾಶೂದ್ರ ತೀರ್ಥತ್ವಂ ಪ್ರಾಪ್ನುವಂತಿ ಹಿ ॥ ೪೨ ॥
ಸನ್ನಿಧಾನೇನ ವೈ ತಸ್ಯಾಃ ಕ್ರಿಯಾಃ ಸರ್ವತ್ರ ಶೋಭನಾಃ ।
ವ್ರಜಂತಿ ಹಿ ಕ್ರಿಯಾತ್ವಂ ಚ ಚಾತುರ್ಮಾಸ್ಯೇ ವಿಶೇಷತಃ ॥ ೪೩ ॥
ಪೂಜ್ಯತೇ ಭವನೇ ಯಸ್ಯ ಶಾಲಿಗ್ರಾಮಶಿಲಾ ಶುಭಾ ।
ಕೋಮಲೈಸ್ತುಲಸೀಪತ್ರೈರ್ವಿಮುಖಸ್ತತ್ರ ವೈ ಯಮಃ ॥ ೪೪ ॥
ಬ್ರಾಹ್ಮಣ ಕ್ಷತ್ರಿಯವಿಶಾಂ ಸಚ್ಛೂದ್ರಾಣಾಮಥಾಽಪಿ ವಾ ।
ಶಾಲಿಗ್ರಾಮೇಽಧಿಕಾರೋಽಸ್ತಿ ನ ಚಾಽನ್ಯೇಷಾಂ ಕದಾಚನ ॥ ೪೫ ॥

ಸಚ್ಛೂದ್ರ ಉವಾಚ :—

ಬ್ರಹ್ಮನ್ವೇದವಿದಾಂ ಶ್ರೇಷ್ಠ ಸರ್ವಶಾಸ್ತ್ರವಿಶಾರದ ।
ಸ್ತ್ರೀಶೂದ್ರಾದಿ ನಿಷೇಧೋಽಯಂ ಶಾಲಿಗ್ರಾಮೇ ಹಿ ಶ್ರೂಯತೇ ॥ ೪೬ ॥
ಮಾದೃಶಸ್ತ್ವಂ ಕಥಂ ಶಾಲಿಗ್ರಾಮಪೂಜಾವಿಧಿಂ ವದ ॥ ೪೭ ॥

ಗಾಲವ ಉವಾಚ :—

ಅಸಚ್ಛೂದ್ರಗತಂ ದಾಸ ನಿಷೇಧಂ ವಿದ್ಧಿ ಮಾನದ ।
ಸ್ತ್ರೀಣಾಮಪಿ ಚ ಸಾಧ್ವೀನಾಂ ನೈವಾಽಭಾವಃ ಪ್ರಕೀರ್ತಿತಃ ॥ ೪೮ ॥
ಮಾಭೂತ್ಸಂಶಯಸ್ತೇನಾಽತ್ರ ನಾಽಪ್ನುಷೇ ಸಂಶಯಾತ್ಫಲಂ ।
ಶಾಲಿಗ್ರಾಮಾರ್ಚನಪರಾಃ ಶುದ್ಧದೇಹಾ ವಿವೇಕಿನಃ ॥ ೪೯ ॥

---

೪೨. ಈ ಶಾಲಿಗ್ರಾಮಶಿಲೆಯಿಂದ ಸಮಸ್ತ ತೀರ್ಥಗಳೂ, ಪವಿತ್ರವಾದ ದೇವಾಲಯಗಳೂ, ಸಕಲ ನದಿಗಳೂ ತೀರ್ಥತ್ವವನ್ನು ಹೊಂದುವುವು.

೪೩. ಈ ಶಿಲೆಯ ಸನ್ನಿಧಾನದಿಂದ ಸಮಸ್ತ ಕಾರ್ಯಗಳೂ ಚಾತುರ್ಮಾಸ್ಯದಲ್ಲಿ ಮಂಗಳಕರಗಳಾಗುವುವು.

೪೪. ಈ ಶಿಲೆಯನ್ನು ಕೋಮಲವಾದ ತುಲಸೀಪತ್ರಗಳಿಂದ ಪೂಜಿಸುವವನ ಮನೆಗೆ ಯಮನೂ ವಿಮುಖನಾಗುವನು.

೪೫. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸಚ್ಛೂದ್ರರು ಇವರಿಗೆ ಶಾಲಿಗ್ರಾಮ ಪೂಜಾಧಿಕಾರವು ಇರುವುದು. ಇತರರಿಗೆ ಯಾವಾಗಲೂ ಇಲ್ಲ.

೪೬. ಸಚ್ಛೂದ್ರನು ಹೇಳುತ್ತಾನೆ:—ವೇದಜ್ಞರಲ್ಲಿ ಶ್ರೇಷ್ಠನೂ, ಸಕಲಶಾಸ್ತ್ರ ಕುಶಲನೂ ಆದ ಮುನಿಯೆ! ಶಾಲಿಗ್ರಾಮವನ್ನು ಸ್ತ್ರೀ ಶೂದ್ರಾದಿಗಳು ಪೂಜಿಸಬಾರದೆಂದು ಕೇಳಿದ್ದೇನೆ.

೪೭. ನನ್ನಂತಹವನು ಶಾಲಿಗ್ರಾಮವನ್ನು ಪೂಜಿಸುವ ಕ್ರಮವನ್ನು ಹೇಳು.

೪೮–೫೩. ಗಾಲವನು ಹೇಳುತ್ತಾನೆ:–ದಾಸ! ಆ ನಿಷೇಧವನ್ನು ಅಸಚ್ಛೂದ್ರ ವಿಷಯಕವಾದುದೆಂದು ತಿಳಿ. ಪತಿವ್ರತೆಯರಾದ ಸ್ತ್ರೀಯರಿಗೆ ಪೂಜಾ ನಿಷೇಧವಿಲ್ಲ. ಆದುದರಿಂದ ನಿನಗೆ ಈ ವಿಷಯದಲ್ಲಿ ಸಂಶಯವುಂಟಾಗದಿರಲಿ.

ನ ತೇ ಯಮಪುರಂ ಯಾಂತಿ ಚಾತುರ್ಮಾಸ್ಯೇ ಚ ಪೂಜಕಾಃ ।
ಶಾಲಿಗ್ರಾಮಾರ್ಪಿತಂ ಮಾಲ್ಯಂ ಶಿರಸಾ ಧಾರಯಂತಿ ಯೇ ॥ ೫೦ ॥
ತೇಷಾಂ ಪಾಪಸಹಸ್ರಾಣಿ ವಿಲಯಂ ಯಾಂತಿ ತತ್ಕ್ಷಣಾತ್ ।
ಶಾಲಿಗ್ರಾಮ ಶಿಲಾಗ್ರೇತು ಯೇ ಪ್ರಯಚ್ಛಂತಿ ದೀಪಕಂ ॥ ೫೧ ॥
ತೇಷಾಂ ಸೌರಪುರೇ ವಾಸಃ ಕದಾಚಿನ್ನೈವ ಹೀಯತೇ ।
ಶಾಲಿಗ್ರಾಮಗತಂ ವಿಷ್ಣುಂ ಸುಮನೋಭಿರ್ಮನೋಹರೈಃ ।
ಯೇಽರ್ಚಯಂತಿ ಮಹಾಶೂದ್ರ ಸುಪ್ತೇ ದೇವೇ ಹರೌ ತಥಾ ॥ ೫೨ ॥
ಪಂಚಾಮೃತೇನ ಸ್ನಪನಂ ಯೇ ಕುರ್ವಂತಿ ಸದಾ ನರಾಃ ।
ಶಾಲಿಗ್ರಾಮಶಿಲಾಯಾಂ ಚ ನ ತೇ ಸಂಸಾರಿಣೋ ನರಾಃ ॥ ೫೩ ॥
ಮುಕ್ತೇರ್ನಿದಾನಮಮಲಂ ಶಾಲಿಗ್ರಾಮಗತಂ ಹರಿಃ ।
ಹೃದಿ ನ್ಯಸ್ಯ ಸದಾ ಭಕ್ತ್ಯಾ ಯೋ ಧ್ಯಾಯತಿ ಸ ಮುಕ್ತಿಭಾಕ್ ॥ ೫೪ ॥
ತುಲಸೀದಲಜಾಂ ಮಾಲಾಂ ಶಾಲಿಗ್ರಾಮೋಪರಿನ್ಯಸೇತ್ ।
ಚಾತುರ್ಮಾಸ್ಯೇ ವಿಶೇಷೇಣ ಸರ್ವಕಾಮಾನವಾಪ್ನುಯಾತ್ ॥ ೫೫ ॥
ನ ತಾವತ್ಪುಷ್ಪಜಾ ಮಾಲಾ ಶಾಲಿಗ್ರಾಮಸ್ಯ ವಲ್ಲಭಾ ।
ಸರ್ವದಾ ತುಲಸೀ ದೇವೀ ವಿಷ್ಣೋರ್ನಿತ್ಯಂ ಶುಭಾ ಪ್ರಿಯಾ ॥ ೫೬ ॥

---

ಸಂಶಯದಿಂದ ಫಲವನ್ನು ಹೊಂದುವುದಿಲ್ಲ. ಚಾತುರ್ಮಾಸ್ಯದಲ್ಲಿ ಶಾಲಿಗ್ರಾಮವನ್ನರ್ಚಿಸುವ ಶುದ್ಧದೇಹವುಳ್ಳ ವಿವೇಕಿಗಳು ಯಮನ ಪಟ್ಟಣಕ್ಕೆ ಹೋಗುವುದಿಲ್ಲ. ಶಾಲಿಗ್ರಾಮಕ್ಕೆ ಅರ್ಪಿಸಿದ ಹೂವಿನ ಮಾಲೆಯನ್ನು ತಲೆಯಲ್ಲಿ ಧರಿಸಿದವರ ಅನೇಕ ಪಾಪಗಳು ಕೂಡಲೆ ನಾಶವಾಗುವುವು. ಶಾಲಿಗ್ರಾಮಶಿಲೆಯ ಮುಂದೆ ದೀಪವನ್ನು ಹೊತ್ತಿಸಿದವರು ಯಾವಾಗಲೂ ಸೂರ್ಯಲೋಕದಲ್ಲಿ ವಾಸಿಸುವರು. ಚಾತುರ್ಮಾಸ್ಯದಲ್ಲಿ ಶಾಲಿಗ್ರಾಮದಲ್ಲಿರುವ ವಿಷ್ಣುವನ್ನು ಮನೋಹರ ಪುಷ್ಪಗಳಿಂದ ಅರ್ಚಿಸುವವರೂ, ಪಂಚಾಮೃತಸ್ನಾನ ಮಾಡಿಸುವವರೂ ಸಂಸಾರಬಂಧನಕ್ಕೆ ಸಿಕ್ಕುವುದಿಲ್ಲ.

೫೪. ಮುಕ್ತಿಗೆ ಕಾರಣನೂ, ಶಾಲಿಗ್ರಾಮಶಿಲೆಯಲ್ಲಿ ಸನ್ನಿಹಿತನೂ ಆಗಿರುವ ಹರಿಯನ್ನು ಭಕ್ತಿಯಿಂದ ಧ್ಯಾನಿಸುವವನು ಮುಕ್ತಿಯನ್ನು ಪಡೆಯುವನು.

೫೫. ಚಾತುರ್ಮಾಸ್ಯದಲ್ಲಿ ತುಲಸೀದಳದ ಮಾಲೆಯನ್ನು ಶಾಲಿಗ್ರಾಮದ ಮೇಲೆ ಸಮರ್ಪಿಸುವವನು ಸಕಲೇಷ್ಟಾರ್ಥಗಳನ್ನು ಹೊಂದುವನು.

೫೬. ಶಾಲಿಗ್ರಾಮದಲ್ಲಿರುವ ಹರಿಗೆ ಪುಷ್ಪಮಾಲೆಯೂ ಅಷ್ಟು ಪ್ರಿಯವಾದುದಲ್ಲ. ಹರಿಗೆ ಮಂಗಳಕರಳಾದ ತುಲಸೀದೇವಿಯು ಯಾವಾಗಲೂ ಪ್ರಿಯಳಾಗಿರುವಳು.

ತುಲಸೀ ವಲ್ಲಭಾ ನಿತ್ಯಂ ಚಾತುರ್ಮಾಸ್ಯೇ ವಿಶೇಷತಃ ।
ಶಾಲಿಗ್ರಾಮೋ ಮಹಾವಿಷ್ಣುಸ್ತುಲಸೀ ಶ್ರೀರ್ನಸಂಶಯಃ ॥ ೫೭ ॥
ಅತೋ ವಾಸಿತಪಾನೀಯೈಃ ಸ್ನಾಪ್ಯಂ ಚಂದನಚರ್ಚಿತೈಃ ।
ಮಂಜರೀಭಿರ್ಯುತಂ ದೇವಂ ಶಾಲಿಗ್ರಾಮಶಿಲಾ ಹರಿಂ ॥ ೫೮ ॥
ತುಲಸೀ ಸಂಭವಾಭಿಶ್ಚ ಕೃತ್ವಾ ಕಾಮಾನವಾಪ್ನುಯಾತ್ ।
ಪತ್ರೇ ತು ಪ್ರಥಮೇ ಬ್ರಹ್ಮಾ ದ್ವಿತೀಯೇ ಭಗವಾಂಛಿವಃ ॥ ೫೯ ॥
ಮಂಜರ್ಯಾಂ ಭಗವಾನ್ ವಿಷ್ಣುಸ್ತದೇಕಸ್ಥತ್ರಯಾ ಸದಾ ।
ಮಂಜರೀ ದಲಸಂಯುಕ್ತಾ ಗ್ರಾಹ್ಯಾ ಬುಧಜನೈಃ ಶುಭಾ ॥ ೬೦ ॥
ತಾಂ ನಿವೇದ್ಯ ಗುರೌ ಭಕ್ತ್ಯಾ ಜನ್ಮಾದಿಕ್ಷಯಕಾರಣಂ ।
ಶಾಲಿಗ್ರಾಮೇ ಧೂಪರಾಶಿಂ ನಿವೇದ್ಯ ಹರಿತತ್ಪರಃ ॥ ೬೧ ॥
ಚಾತುರ್ಮಾಸ್ಯೇ ವಿಶೇಷೇಣ ಮನುಷ್ಯೋ ನೈವ ನಾರಕೀ ।
ಶಾಲಿಗ್ರಾಮಂ ನರೋ ದೃಷ್ಟ್ವಾ ಪೂಜಿತಂ ಕುಸುಮೈಃ ಶುಭೈಃ ॥ ೬೨ ॥
ಸರ್ವಪಾಪವಿಶುದ್ಧಾತ್ಮಾ ಯಾತಿ ತನ್ಮಯತಾಂ ಹರೌ ।
ಯಃ ಸ್ತೌತ್ಯಶ್ಮಗತಂ ವಿಷ್ಣುಂ ಗಂಡಕೀಜಲಸಂಭವಂ ॥ ೬೩ ॥

---

೫೭. ಅವಳು ಚಾತುರ್ಮಾಸ್ಯದಲ್ಲಿ ಆತನಿಗೆ ಅತ್ಯಂತ ಪ್ರಿಯಳು. ನಿಶ್ಚಯವಾಗಿಯೂ ಶಾಲಿಗ್ರಾಮವು ಮಹಾವಿಷ್ಣುವೂ, ತುಲಸಿಯು ಲಕ್ಷ್ಮಿಯೂ ಆಗಿರುವರು.

೫೮–೬೦. ಆದುದರಿಂದ ತುಲಸೀಮಂಜರಿಯಿಂದ ಸಹಿತನಾದ ವಿಷ್ಣುವನ್ನು ಗಂಧದಿಂದ ಸುವಾಸನೆಗೊಂಡ ನೀರಿನಿಂದ ಅಭಿಷೇಕ ಮಾಡಿದವನು ಇಷ್ಟಾರ್ಥಗಳನ್ನು ಪಡೆಯುವನು. ತುಲಸಿಯ ಮೊದಲಿನ ಪತ್ರದಲ್ಲಿ ಬ್ರಹ್ಮನೂ, ದ್ವಿತೀಯ ಪತ್ರದಲ್ಲಿ ಪೂಜ್ಯನಾದ ಶಿವನೂ, ಮಂಜರಿಯಲ್ಲಿ ಪೂಜ್ಯನಾದ ವಿಷ್ಣುವೂ ಇರುವರು. ಆದುದರಿಂದ ವಿದ್ವಾಂಸರು ಒಂದೆಡೆಯಲ್ಲಿ ಈ ಮೂವರೂ ಇರುವ ಮಂಜರಿಯಿಂದ ಸಹಿತವಾದ ತುಲಸೀದಳವನ್ನು ಸ್ವೀಕರಿಸಬೇಕು.

೬೧–೬೪. ಚಾತುರ್ಮಾಸ್ಯದಲ್ಲಿ ಆ ಮಂಜರಿಯನ್ನು ಹರಿಗೆ ಭಕ್ತಿಯಿಂದ ಅರ್ಪಿಸಿ ಜನ್ಮಾದಿಗಳನ್ನು ನಾಶಗೊಳಿಸುವ ಧೂಪವನ್ನು ಶಾಲಿಗ್ರಾಮಕ್ಕೆ ನಿವೇದಿಸಿದ ಮನುಷ್ಯನು ನರಕವಾಸಿಯಾಗುವುದಿಲ್ಲ. ಶುಭಕರವಾದ ಪುಷ್ಪಗಳಿಂದ ಪೂಜಿಸಲ್ಪಟ್ಟ ಶಾಲಿಗ್ರಾಮವನ್ನು ದರ್ಶನಮಾಡಿದ ಮಾನವನು ಸಮಸ್ತ ಪಾಪರಹಿತನಾಗಿ ವಿಷ್ಣುರೂಪವನ್ನು ಹೊಂದುವನು. ಶಾಲಿಗ್ರಾಮದಲ್ಲಿರುವ ವಿಷ್ಣುವನ್ನು ಶ್ರುತಿ, ಸ್ಮೃತಿ ಪುರಾಣಗಳಿಂದ ಸ್ತೋತ್ರಮಾಡುವವನು ವಿಷ್ಣುಲೋಕಕ್ಕೆ ತೆರಳುವನು.

ಶ್ರುತಿಸ್ಮೃತಿಪುರಾಣೈಶ್ಚ ಸೋಽಪಿ ವಿಷ್ಣುಪದಂ ವ್ರಜೇತ್ ।
ಶಾಲಿಗ್ರಾಮ ಶಿಲಾಯಾಶ್ಚ ಚತುರ್ವಿಂಶತಿಸಂಖ್ಯಕಾಃ ।
ಭೇದಾಃ ಸಂತಿ ಮಹಾಶೂದ್ರ ತಾಂಛೃಣುಷ್ವ ಮಹಾಮತೇ ॥ ೬೪ ॥
ಇಮಾಃ ಪೂಜ್ಯಾಶ್ಚ ಲೋಕೇಽತ್ರ ಚತುರ್ವಿಂಶತಿಸಂಖ್ಯಕಾಃ ।
ತಾಸಾಂ ಚ ದೈವತಂ ವಿಷ್ಣುಂ ನಾಮಾನಿ ಚ ವದಾಮ್ಯಹಂ ॥ ೬೫ ॥
ಸ ಏವ ಮೂರ್ತಶ್ಚತುರುತ್ತರಾಸಿ
ರ್ವಿಂಶದ್ಭಿರೇಕೋ ಭಗವಾನ್ ಯಥಾಽಽದ್ಯಃ ।
ಸ ಏವ ಸಂವತ್ಸರನಾಮ ಸಂಜ್ಞಃ
ಸ ಏವ ಗ್ರಾವಾಗತ ಆದಿದೇವಃ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪೈಜವನೋಪಾಖ್ಯಾನೇ ಶಾಲಿಗ್ರಾಮಪೂಜನ ಮಾಹಾತ್ಮ್ಯವರ್ಣನಂ" ನಾಮ
ತ್ರಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

ಮಹಾಶೂದ್ರ! ಶಾಲಿಗ್ರಾಮಶಿಲೆಯಲ್ಲಿ ಇಪ್ಪತ್ತನಾಲ್ಕು ಭೇದಗಳಿರುವುವು. ಅವುಗಳನ್ನು ಕೇಳು.

೬೫. ಈ ಲೋಕದಲ್ಲಿ ಈ ಇಪ್ಪತ್ತನಾಲ್ಕು ವಿಧ ಶಾಲಿಗ್ರಾಮಗಳೂ ಪೂಜ್ಯವಾದುವು. ಅವುಗಳ ದೇವತೆಯು ವಿಷ್ಣುವಾಗಿರುವನು. ನಾನು ಆ ಹೆಸರುಗಳನ್ನು ಹೇಳುವೆನು.

೬೬. ಆದಿಪುರುಷನಾದ ವಿಷ್ಣುವೇ ಚತುರ್ವಿಂಶತಿಮೂರ್ತಿರೂಪನೂ, ಸಂವತ್ಸರನಾಮಕನೂ, ಶಾಲಿಗ್ರಾಮದಲ್ಲಿರುವವನೂ ಆಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡವಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪೈಜವನೋಪಾಖ್ಯಾನ– ಶಾಲಿಗ್ರಾಮಪೂಜನ ಮಾಹಾತ್ಮ್ಯವರ್ಣನ"
ವೆಂಬ ಇನ್ನೂರ ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ಶಾಲಿಗ್ರಾಮಶಿಲಾಮೂರ್ತ್ಯುತ್ಪತ್ತಿವರ್ಣನಂ

ಪೈಜವನ ಉವಾಚ:—

ಏತಾನ್ಭೇದಾನ್ ಮಮ ಬ್ರೂಹಿ ವಿಸ್ತರೇಣ ತಪೋಧನ ।
ತ್ವದ್ವಾಕ್ಯಾಽಮೃತಪಾನೇನ ತೃಷಾ ನೈವ ಪ್ರಶಾಮ್ಯತಿ ॥ ೧ ॥

ಗಾಲವ ಉವಾಚ:—

ಶೃಣು ವಿಸ್ತರತೋ ಭೇದಾನ್ ಪುರಾಣೋಕ್ತಾನ್ ವದಾಮಿ ತೇ ।
ಯಾಂಛ್ರುತ್ವಾ ಮುಚ್ಯತೇಽವಶ್ಯಂ ಮನುಜಃ ಸರ್ವಕಿಲ್ಬಿಷಾತ್ ॥ ೨ ॥
ಪೂರ್ವಂ ತು ಕೇಶವಃ ಪೂಜ್ಯೋ ದ್ವಿತೀಯೋ ಮಧುಸೂದನಃ ।
ಸಂಕರ್ಷಣಸ್ತೃತೀಯಸ್ತು ತತೋ ದಾಮೋದರಃ ಸ್ಮೃತಃ ॥ ೩ ॥
ಪಂಚಮೋ ವಾಸುದೇವಾಖ್ಯಃ ಷಷ್ಠಃ ಪ್ರದ್ಯುಮ್ನ ಸಂಜ್ಞಕಃ ।
ಸಪ್ತಮೋ ವಿಷ್ಣುರುಕ್ತಶ್ಚಾಽಷ್ಟಮೋ ಮಾಧವ ಏವ ಚ ॥ ೪ ॥
ನವಮೋಽನಂತಮೂರ್ತಿಶ್ಚ ದಶಮಃ ಪುರುಷೋತ್ತಮಃ ।
ಅಧೋಕ್ಷಜಸ್ತತಃ ಪಶ್ಚಾದ್ದ್ವಾದಶಸ್ತು ಜನಾರ್ದನಃ ॥ ೫ ॥
ತ್ರಯೋದಶಸ್ತು ಗೋವಿಂದಶ್ಚತುರ್ದಶಸ್ತ್ರಿವಿಕ್ರಮಃ ।
ಶ್ರೀಧರಶ್ಚ ಪಂಚದಶೋ ಹೃಷೀಕೇಶಸ್ತು ಷೋಡಶಃ ॥ ೬ ॥
ನೃಸಿಂಹಸ್ತು ಸಪ್ತದಶೋ ವಿಶ್ವಯೋನಿಸ್ತತಃ ಪರಂ ।
ವಾಮನಶ್ಚ ತತಃ ಪ್ರೋಕ್ತಸ್ತತೋ ನಾರಾಯಣಃ ಸ್ಮೃತಃ ॥ ೭ ॥

---

## ಕನ್ನಡದ ಅನುವಾದ

### ಶಾಲಿಗ್ರಾಮಶಿಲಾಮೂರ್ತ್ಯುತ್ಪತ್ತಿವರ್ಣನ

೧. ಪೈಜವನನು ಹೇಳುತ್ತಾನೆ:—ಮಹರ್ಷಿಯೆ! ಈ ಭೇದಗಳನ್ನು ನನಗೆ ವಿಸ್ತಾರವಾಗಿ ಹೇಳು. ನಿನ್ನ ವಾಕ್ಯವೆಂಬ ಅಮೃತಪಾನದಿಂದ ಬಾಯಾರಿಕೆಯು ಶಾಂತವೇ ಆಗುವುದಿಲ್ಲ.

೨. ಗಾಲವನು ಹೇಳುತ್ತಾನೆ:— ಮಹಾಶೂದ್ರನೆ! ಪುರಾಣೋಕ್ತವಾದ ಶಾಲಿಗ್ರಾಮ ಭೇದಗಳನ್ನು ಕೇಳು. ವಿಸ್ತಾರವಾಗಿ ನಿನಗೆ ಹೇಳುತ್ತೇನೆ. ಈ ಭೇದಗಳನ್ನು ಕೇಳಿದ ಮನುಷ್ಯನು ಸಕಲಪಾಪಗಳಿಂದ ಅವಶ್ಯವಾಗಿಯೂ ಮುಕ್ತನಾಗುವನು.

೩–೯. ಕೇಶವ, ಮಧುಸೂದನ, ಸಂಕರ್ಷಣ, ದಾಮೋದರ, ವಾಸುದೇವ, ಪ್ರದ್ಯುಮ್ನ, ವಿಷ್ಣು, ಮಾಧವ, ಅನಂತಮೂರ್ತಿ, ಪುರುಷೋತ್ತಮ, ಅಧೋಕ್ಷಜ, ಜನಾರ್ದನ, ಗೋವಿಂದ, ತ್ರಿವಿಕ್ರಮ, ಶ್ರೀಧರ, ಹೃಷೀಕೇಶ, ನೃಸಿಂಹ, ವಿಶ್ವ

ಪುಂಡರೀಕಾಕ್ಷ ಉಕ್ತಸ್ತು ಹ್ಯುಪೇಂದ್ರಶ್ಚ ತತಃ ಪರಂ ।
ಹರಿಸ್ತ್ರಯೋವಿಂಶತಿಮಃ ಕೃಷ್ಣಶ್ಚಾಽಂತ್ಯ ಉದಾಹೃತಃ ॥ ೮ ॥
ಶಾಲಿಗ್ರಾಮಸ್ಯ ಭೇದಾಶ್ಚ ಮಯೋಕ್ತಾಸ್ತವ ಶೂದ್ರಜ ।
ಮೂರ್ತಿಭೇದಾಸ್ತಥಾ ಪ್ರೋಕ್ತಾ ಏತ ಏವ ಮಹಾಧನ ॥ ೯ ॥
ಮೂರ್ತಯಸ್ತಿಥಿನಾಮ್ನ್ಯಃ ಸ್ಯುರೇಕಾದಶ್ಯಃ ಸ ದೈವ ಹಿ ।
ಸಂವತ್ಸರೇಣ ಪೂಜ್ಯಂತೇ ಚತುರ್ವಿಂಶತಿ ಮೂರ್ತಯಃ ॥ ೧೦ ॥
ದೇವಾಽವತಾರಾಶ್ಚ ತಥಾ ಚತುರ್ವಿಂಶತಿ ಸಂಖ್ಯಕಾಃ ।
ಮಾಸಾ ಮಾರ್ಗಶಿರಾದ್ಯಾಶ್ಚ ಮಾಸಾರ್ಧಾಃ ಪಕ್ಷಸಂಜ್ಞಕಾಃ ॥ ೧೧ ॥
ಅಧೀಶಸಹಿತಾನ್ನಿತ್ಯಂ ಪೂಜಯನ್ ಭಕ್ತಿಮಾನ್ ಭವೇತ್ ।
ಚತುರ್ವಿಂಶತಿಸಂಜ್ಞಂ ಚ ಚತುಷ್ಟಯಮುದಾಹೃತಂ ॥ ೧೨ ॥
ಏತಚ್ಚತುಷ್ಟಯಂ ನೃಣಾಂ ಧರ್ಮಕಾಮಾರ್ಥಮೋಕ್ಷದಂ ।
ಯಃ ಶೃಣೋತಿ ನರೋ ಭಕ್ತ್ಯಾ ಪಠೇದ್ವಾಽಪಿ ಸಮಾಹಿತಃ ॥ ೧೩ ॥
ಭೂತಸರ್ಗಸ್ಯ ಗೋಪ್ತಾಽಸೌ ಹರಿಸ್ತಸ್ಯ ಪ್ರಸೀದತಿ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಾಲಿಗ್ರಾಮಶಿಲಾಮೂರ್ತ್ಯುತ್ಪತ್ತಿವರ್ಣನಂ" ನಾಮ
ಚತುಶ್ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

ಯೋನಿ, ವಾಮನ, ನಾರಾಯಣ, ಪುಂಡರೀಕಾಕ್ಷ, ಉಪೇಂದ್ರ, ಹರಿ, ಕೃಷ್ಣ ಇವು ಇಪ್ಪತ್ತನಾಲ್ಕು ಶಾಲಿಗ್ರಾಮಭೇದಗಳೂ, ಮೂರ್ತಿಭೇದಗಳೂ ಆಗಿವೆ.

೧೦–೧೨. ಏಕಾದಶಮೂರ್ತಿಗಳು ತಿಥಿನಾಮಕಗಳೂ ಆಗಿರುವುವು. ಈ ಇಪ್ಪತ್ತನಾಲ್ಕು ಮೂರ್ತಿಗಳನ್ನು ಒಂದು ವರ್ಷ ಪೂಜಿಸುವರು. ದೇವಾವತಾರಗಳೂ ಇಪ್ಪತ್ತನಾಲ್ಕು ಆಗಿವೆ. ಮಾರ್ಗಶೀರ್ಷ ಮೊದಲಾದ ಹನ್ನೆರಡು ಮಾಸಗಳಿರುವುವು. ಮಾಸಾರ್ಧಗಳು ಪಕ್ಷವೆನ್ನಿಸಿಕೊಳ್ಳುವುವು. ನರನು ಭಕ್ತಿಯಿಂದ ಮಾಸಾಧೀಶರಿಂದ ಸಹಿತವಾಗಿ ಇವುಗಳನ್ನು ಪೂಜಿಸಬೇಕು. ಹೀಗೆ ನಾಲ್ಕು ಇಪ್ಪತ್ತನಾಲ್ಕು ಹೆಸರುಳ್ಳವುಗಳಾಗಿವೆ.

೧೩–೧೪. ಮೂರ್ತ್ಯಾದಿ ಈ ನಾಲ್ಕೂ ಮಾನವರಿಗೆ ಧರ್ಮ, ಕಾಮ, ಅರ್ಥ, ಮೋಕ್ಷಗಳನ್ನು ಕೊಡುವುವು. ಇದನ್ನು ಹೇಳಿದ ಅಥವಾ ಕೇಳಿದ ಮಾನವನ ವಿಷಯದಲ್ಲಿ ಜಗತ್ತನ್ನು ಕಾಪಾಡುವ ಹರಿಯು ಪ್ರಸನ್ನನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಾಲಿಗ್ರಾಮಶಿಲಾಮೂರ್ತ್ಯುತ್ಪತ್ತಿವರ್ಣನ"ವೆಂಬ
ಇನ್ನೂರ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ದೇವಮುಂದರಾಚಲಗಮನವರ್ಣನಂ

ಪೈಜವನ ಉವಾಚ:—

ಶಾಲಿಗ್ರಾಮ ಶಿಲಾಯಾಂ ಚ ಜಗದಾದಿಃ ಸನಾತನಃ ।
ಕಥಂ ಪಾಷಾಣತಾಂ ಪ್ರಾಪ್ತೋ ಗಂಡಕ್ಯಾಂ ತಚ್ಚ ಮೇ ವದ ॥ ೧ ॥
ತ್ವತ್ಪ್ರಸಾದೇನ ವಿಪ್ರರ್ಷೇ ಹರೌ ಭಕ್ತಿರ್ದೃಢಾ ಭವೇತ್ ।
ಭವಂತಸ್ತೀರ್ಥರೂಪಾಹಿ ದರ್ಶನಾತ್ಪಾಪಹಾರಿಣಃ ॥ ೨ ॥
ತೀರ್ಥಾಽಮೃತಾಽವಗಾಹೇನ ಯಥಾ ಪವಿತ್ರತಾ ನೃಣಾಂ ।
ಭವದ್ವಾಕ್ಯಾಽಮೃತಾಜ್ಜಾತಾ ತಥಾ ಮಮ ನ ಸಂಶಯಃ ॥ ೩ ॥

ಗಾಲವ ಉವಾಚ:—

ಇತಿಹಾಸಸ್ತ್ವಯಂ ಪುಣ್ಯಃ ಪುರಾಣೇಷು ಚ ಪಠ್ಯತೇ ।
ಯಥಾ ಸ ಏವ ಭಗವಾಂಛಾಲಿಗ್ರಾಮತ್ವಮಾಗತಃ ॥ ೪ ॥
ಮಹೇಶ್ವರಶ್ಚ ಲಿಂಗತ್ವಂ ಕಥಯೇಽಹಂ ತವಾಽನಘ ।
ಪೂರ್ವಂ ಪ್ರಜಾಪತಿರ್ದಕ್ಷೋ ಬ್ರಹ್ಮಣೋಽಂಗುಷ್ಠಸಂಭವಃ ॥ ೫ ॥

---

## ಕನ್ನಡದ ಅನುವಾದ

### ದೇವಮುಂದರಾಚಲಗಮನವರ್ಣನ

೧. ಪೈಜವನನು ಹೇಳುತ್ತಾನೆ:—ಜಗದಾದಿಯೂ, ಸನಾತನನೂ ಆದ ವಿಷ್ಣುವು ಗಂಡಕೀ ನದಿಯಲ್ಲಿ ಶಾಲಿಗ್ರಾಮಶಿಲೆಯಲ್ಲಿ ಹೇಗೆ ಕಲ್ಲಾದನು?

೨. ಮಹರ್ಷಿಯೆ! ನಿನ್ನ ಅನುಗ್ರಹದಿಂದ ವಿಷ್ಣುವಿನಲ್ಲಿ ದೃಢವಾದ ಭಕ್ತಿ ಯುಂಟಾಗಲಿ. ನಿಮ್ಮಂತಹ ಋಷಿಪುಂಗವರು ತೀರ್ಥದಂತೆ ದರ್ಶನದಿಂದಲೇ ಪಾಪವನ್ನು ಪರಿಹರಿಸುವವರು.

೩. ನರರು ತೀರ್ಥಜಲದಲ್ಲಿ ಸ್ನಾನಮಾಡುವುದರಿಂದ ಪವಿತ್ರರಾಗುವಂತೆ ನಿನ್ನ ವಾಕ್ಯಾಮೃತದಿಂದ ನಾನು ನಿಶ್ಚಯವಾಗಿಯೂ ಪವಿತ್ರನಾದೆನು.

೪–೫. ಗಾಲವನು ಹೇಳುತ್ತಾನೆ:—ಆ ಮಹಾವಿಷ್ಣುವು ಹೇಗೆ ಶಾಲಿಗ್ರಾಮ ಶಿಲೆಯಾದನು? ಶಂಕರನು ಹೇಗೆ ಲಿಂಗವಾದನು? ಎಂಬ ಇತಿಹಾಸವು ಪುರಾಣ ಗಳಲ್ಲಿ ಪಠಿಸಿದ್ದೇನೆ. ಅದನ್ನು ನಿನಗೆ ಹೇಳುತ್ತೇನೆ. ಹಿಂದೆ ಬ್ರಹ್ಮನ ಅಂಗುಷ್ಠ ದಿಂದ ಜನಿಸಿದ ದಕ್ಷನೆಂಬ ಪ್ರಜಾಪತಿಯಿದ್ದನು.

ತಸ್ಯಾಽಽಸೀದ್ದುಹಿತಾ ಸಾಧ್ವೀ ಸತೀ ನಾಮ್ನಾ ಸುಲಕ್ಷಣಾ ।
ಹರೇಣೋಢಾ ವಿಧಿಜ್ಞೇನ ವೇದೋಕ್ತವಿಧಿನಾ ತತಃ ॥ ೬ ॥
ಸ ಚಕಾರ ಮಹಾಯಜ್ಞೇ ಹರದ್ವೇಷಂ ವಿಮೂಢಧೀಃ ।
ತೇನ ದ್ವೇಷೇಣ ಮಹತಾ ಸತೀ ಪ್ರಕುಪಿತಾ ಭೃಶಂ ॥ ೭ ॥
ಯಜ್ಞವೇದ್ಯಾಂ ಸಮಾಗಮ್ಯ ವಹ್ನಿಧಾರಣಯಾ ತದಾ ।
ಪ್ರಾಣಾಯಾಮಪರಾ ಭೂತ್ವಾ ದೇಹೋತ್ಸರ್ಗಂ ಚಕಾರ ಸಾ ॥ ೮ ॥
ಪಿತೃಭಾಗಂ ಪರಿತ್ಯಜ್ಯ ಸ್ವಭಾಗೇನ ಯುತಾ ಸತೀ ।
ಮನಸಾ ಧ್ಯಾನಮಗಮಚ್ಛೀತಲಂ ಚ ಹಿಮಾಲಯಂ ॥ ೯ ॥
ಯತ್ರ ಯತ್ರ ಮನೋ ಯಾತಿ ಸ್ವಕರ್ಮವಶಗಂ ಮೃತೌ ।
ಅವತಾರಸ್ತತ್ರ ತತ್ರ ಜಾಯತೇ ನಾಽತ್ರ ಸಂಶಯಃ ॥ ೧೦ ॥
ದಹ್ಯಮಾನಾ ಹಿ ಸಾ ದೇವೀ ಹಿಮಾಲಯ ಸುತಾಽಭವತ್ ।
ತತ್ರ ಸಾ ಪಾರ್ವತೀ ಭೂತ್ವಾ ತಪ ಉಗ್ರಂ ಸಮಾಶ್ರಿತಾ ॥ ೧೧ ॥
ಶಿವಭಕ್ತಿರತಾ ನಿತ್ಯಂ ಹರವ್ರತಪರಾಯಣಾ ।
ಶೃಂಗೇ ಹಿಮವತಃ ಪುತ್ರೀ ಮನೋ ನ್ಯಸ್ಯ ಮಹೇಶ್ವರೇ ॥ ೧೨ ॥

---

೬. ಅವನಿಗೆ ಪತಿವ್ರತೆಯೂ, ಸುಲಕ್ಷಣೆಯೂ ಆದ ಸತೀ ಎಂಬ ಮಗಳಿದ್ದಳು. ಅವಳನ್ನು ವಿಧಿಗಳನ್ನರಿತ ಹರನು ವೇದೋಕ್ತವಿಧಿಯಿಂದ ವಿವಾಹ ಮಾಡಿಕೊಂಡನು.

೭–೮. ಮೂಢನಾದ ಆ ದಕ್ಷನು ಮಹಾಯಜ್ಞವನ್ನು ಮಾಡುವಾಗ ಹರನಲ್ಲಿ ದ್ವೇಷವನ್ನು ಮಾಡಿದನು. ಆ ಮಹಾದ್ವೇಷದಿಂದ ಸತಿಯು ಅತಿಶಯವಾಗಿ ಕೋಪಗೊಂಡು ಯಜ್ಞವೇದಿಗೆ ಬಂದು ಪ್ರಾಣಾಯಾಮ ಮಾಡಿ ವಹ್ನಿಯಲ್ಲಿ ದೇಹವನ್ನು ತ್ಯಜಿಸಿದಳು.

೯. ಅವಳು ಪಿತೃಭಾಗವನ್ನು ಬಿಟ್ಟು ಸ್ವಭಾಗದಿಂದ ಸಹಿತಳಾಗಿ ಶೀತಳವಾದ ಹಿಮಾಲಯವನ್ನು ಮನಸ್ಸಿನಿಂದ ಧ್ಯಾನಿಸಿದಳು.

೧೦. ಮರಣಕಾಲದಲ್ಲಿ ತನ್ನ ತನ್ನ ಕರ್ಮವಶದಿಂದ ಮನಸ್ಸು ಎಲ್ಲಿಗೆ ಹೋಗುವುದೊ, ಅವತಾರವೂ ನಿಶ್ಚಯವಾಗಿ ಅಲ್ಲಿಯೇ ಆಗುವುದು.

೧೧–೧೨. ಅಗ್ನಿಯಿಂದ ದಗ್ಧಳಾದ ಆ ಸತಿಯು ಹಿಮಾಲಯನಿಗೆ ಮಗಳಾದಳು. ಆ ಪಾರ್ವತಿಯು ಶಿವಭಕ್ತಿನಿರತಳೂ, ಶಿವವ್ರತಪರಾಯಣಳೂ ಆಗಿ ಹಿಮಾಲಯದ ಶಿಖರದಲ್ಲಿ ಮಹೇಶ್ವರನಲ್ಲಿ ಮನಸ್ಸನ್ನಿರಿಸಿ ಉಗ್ರತಪವನ್ನಾಚರಿಸಿದಳು.

ತತೋ ವರ್ಷಸಹಸ್ರಾಂತೇ ಭಗವಾನ್ ಭೂತಭಾವನಃ ।
ಅಥಾಽಽಜಗಾಮ ತಂ ದೇಶಂ ವಿಪ್ರರೂಪೋ ಮಹೇಶ್ವರಃ ॥ ೧೩ ॥
ತಾಂ ಜ್ಞಾತ್ವಾ ತಪಸಾ ಶುದ್ಧಾಂ ಕರ್ಮಭಾವೈಃ ಪರೀಕ್ಷಿತೈಃ ।
ತತೋ ದಿವ್ಯವಪುರ್ಭೂತ್ವಾ ಕರೇ ಜಗ್ರಾಹ ಪಾರ್ವತೀಂ ॥ ೧೪ ॥
ತಪಸಾ ನಿರ್ಜಿತಶ್ಚಾಽಸ್ಮಿ ಕರವಾಣಿ ಚ ಕಿಂ ಪ್ರಿಯಂ ।
ತತಃ ಪ್ರಾಹ ಮಹೇಶಾನಂ ಪ್ರಮಾಣಂ ಮೇ ಪಿತಾ ಗುರುಃ ॥ ೧೫ ॥
ಸಪ್ತರ್ಷೀನ್ ಸ ತಥೋಕ್ತಸ್ತು ಪ್ರೇಷಯಾಮಾಸ ಶಂಕರಃ ।
ತೇ ತತ್ರ ಗತ್ವಾ ಸಮಯಂ ವಕ್ತುಂ ಹಿಮವತಾ ಸಹ ॥ ೧೬ ॥
ನಿವೇದ್ಯ ಚ ಮಹೇಶಾನಂ ಪ್ರೇಷಿತಾ ಮುನಯೋ ಯಯುಃ ।
ತತೋ ಲಗ್ನದಿನೇ ದೇವಾ ಮಹೇಂದ್ರಾದಯ ಈಶ್ವರಂ ॥ ೧೭ ॥
ಬ್ರಹ್ಮವಿಷ್ಣುಪುರೋಗಾಶ್ಚ ಪುರೋಧಾಯಾಽಗ್ನಿಮಾಯಯುಃ ।
ಯೋಗಸಿದ್ಧಾಃ ಸಮಾಯಾಂತಂ ವರವೇಷಂ ವೃಷಧ್ವಜಂ ॥ ೧೮ ॥
ಹಿಮವಾನ್ ಪೂಜಯಾಮಾಸ ಮಧುಪರ್ಕಾದಿಕೈಃ ಶುಭೈಃ ।
ಉಪಚಾರೈರ್ಮುದಾ ಯುಕ್ತೋ ಮಾನಯನ್ ಕೃತಕೃತ್ಯತಾಂ ॥ ೧೯ ॥
ವೇದೋಕ್ತೇನ ವಿಧಾನೇನ ತಾಂ ಕನ್ಯಾಂ ಸಮಯೋಜಯತ್ ।
ಪಾಣಿಗ್ರಹೇಣ ವಿಧಿನಾ ದ್ವಿಜಾತಿ ಗಣಸಂವೃತಃ ॥ ೨೦ ॥

---

೧೩. ಅನಂತರ ಸಾವಿರ ವರ್ಷಗಳ ತರುವಾಯ ಪೂಜ್ಯನಾದ ಮಹೇಶ್ವರನು ಬ್ರಾಹ್ಮಣರೂಪದಿಂದ ಅಲ್ಲಿಗೆ ಬಂದನು.

೧೪–೧೫. ಅವನು ಪರೀಕ್ಷಿತವಾದ ಕರ್ಮಭಾವನೆಗಳಿಂದ ಆ ಪಾರ್ವತಿಯು ಶುದ್ಧಳಾಗಿರುವಳೆಂದರಿತು ದಿವ್ಯದೇಹವನ್ನು ಧರಿಸಿ ಅವಳ ಕೈಯನ್ನು ಹಿಡಿದನು. "ನಿನ್ನ ತಪಸ್ಸಿನಿಂದ ಪರಾಜಿತನಾಗಿದ್ದೇನೆ. ನಿನಗೆ ಯಾವ ಇಷ್ಟಾರ್ಥವನ್ನು ಈಡೇರಿಸಲಿ" ಎಂದನು. ಬಳಿಕ ಪಾರ್ವತಿಯು, "ನನ್ನ ತಂದೆಯು ಈ ವಿಷಯ ದಲ್ಲಿ ನಿರ್ಣಾಯಕನು" ಎಂದಳು.

೧೬. ಅವಳು ಹಾಗೆ ಹೇಳಲು, ಶಂಕರನು ಹಿಮಾಲಯನೊಡನೆ ಮಾತಾಡಲು ಸಪ್ತರ್ಷಿಗಳನ್ನು ಕಳುಹಿಸಿದನು.

೧೭–೨೦. ಮುನಿಗಳು ಹಿಮಾಲಯನಿಗೆ ಮಹೇಶ್ವರನ ವಿಷಯವನ್ನು ತಿಳಿಸಿದರು. ಬಳಿಕ ಲಗ್ನದ ದಿನ ಇಂದ್ರಾದಿ ದೇವತೆಗಳೂ, ಬ್ರಹ್ಮ ವಿಷ್ಣುಗಳೂ ಅಗ್ನಿಯನ್ನು ಮುಂದಿರಿಸಿಕೊಂಡು ಹಿಮಾಲಯನೆಡೆಗೆ ಬಂದರು. ಹಿಮವಂತನು ವರವೇಷದಿಂದ ಬಂದ ಶಂಕರನನ್ನು ಕಂಡು ಸಂತೋಷದಿಂದ ಮಧುಪರ್ಕ ಮೊದಲಾದ ಉಪಚಾರಗಳಿಂದ ಪೂಜಿಸಿ ತಾನು ಧನ್ಯನಾದೆನೆಂದರಿತು ಬ್ರಾಹ್ಮಣರೊಡನೆ ವೇದೋಕ್ತ ವಿವಾಹವಿಧಿಯಿಂದ ಆ ಪಾರ್ವತಿಯನ್ನು ಮದುವೆ ಮಾಡಿಕೊಟ್ಟನು.

ವಹ್ನಿಂ ಪ್ರದಕ್ಷಿಣೀ ಕೃತ್ಯ ಗಿರೀಶಸ್ತದನಂತರಂ ।
ದಾನಕಾಲೇ ಚ ಗೋತ್ರಾದಿ ಪೃಷ್ಟೋ ಲಜ್ಜಾಪರೋ ಹರಃ ॥ ೨೧ ॥
ಬ್ರಹ್ಮಣೋ ವಚನಾತ್ತೇನ ವಿಧಿಶೇಷೋಽವಶೇಷಿತಃ ।
ಚರುಪ್ರಾಶನಕಾಲೇತು ಪಂಚವಕ್ತ್ರಪ್ರಕಾಶಕೃತ್ ॥ ೨೨ ॥
ಸಹಿತಃ ಸಕಲೈರ್ದೇವೈಃ ಕುತೂಹಲಪರಾಯಣಃ ।
ಗಿರಿಜಾರ್ಥಂ ಸಮಾಯುಕ್ತೋ ವರಃ ಸೋಽಪಿ ಮಹೇಶ್ವರಃ ॥ ೨೩ ॥
ನವಕೋಟಿಮುಖಾಂ ದೃಷ್ಟ್ವಾ ಸಾಽಟ್ಟಹಾಸೋ ಜನೋಽಭವತ್ ।
ವೈದಿಕೀ ಶ್ರುತಿರಿತ್ಯುಕ್ತ್ವಾ ಶಿವ ತ್ವಂ ಸ್ಥಿರತಾಂ ವ್ರಜ ॥ ೨೪ ॥
ಲಜ್ಜಿತಾ ಸಾ ಪರಿತ್ಯಾಗಂ ನಾಽಕರೋತ್ಪಂಚ ಜನ್ಮಸು ।
ಭರ್ತಾರಮಸಿತಾಪಾಂಗೀ ಹರಮೇವಾಽಭ್ಯಗಚ್ಛತ ॥ ೨೫ ॥
ದೇವಾನಾಂ ಪರ್ವತಾನಾಂ ಚ ಪ್ರಹೃಷ್ಟಂ ಸಕಲಂ ಕುಲಂ ।
ತತೋ ವಿವಾಹೇ ಸಂಪೂರ್ಣೇ ಹರೋಽಗಾತ್ಕೌತುಕೌಕಸಿ ॥ ೨೬ ॥
ಗಣಾನಾಂ ಚಾಽಪಿ ಸಾನ್ನಿಧ್ಯೇ ಸಾ ನಾಮರ್ಷಯದಂಬಿಕಾ ।
ಪಾರಿಬರ್ಹಂ ತತೋ ದತ್ವಾ ಶೈಲೇನ ಸ ವಿಸರ್ಜಿತಃ ॥ ೨೭ ॥
ಮಾನಿತಃ ಸತ್ಕೃತಶ್ಚಾಽಪಿ ಮಂದರಾಽಚಲಮಭ್ಯಗಾತ್ ।
ವಿಶ್ವಕರ್ಮಾ ತತಸ್ತಸ್ಯ ಕ್ಷಣೇನ ಮಣಿಮದ್ಗೃಹಂ ॥ ೨೮ ॥

---

೨೧–೨೩. ಶಿವನು ಬಳಿಕ ಅಗ್ನಿಯನ್ನು ಪ್ರದಕ್ಷಿಣೆಗೈದು ಕನ್ಯಾದಾನ ಕಾಲದಲ್ಲಿ ಗೋತ್ರಾದಿಗಳನ್ನು ಕೇಳಲು ಲಜ್ಜಿತನಾಗಿ ಬ್ರಹ್ಮನ ಮಾತಿನಂತೆ ಉಳಿದ ವಿವಾಹವಿಧಿಯನ್ನು ಹಾಗೆಯೇ ಅವಶೇಷಗೊಳಿಸಿದನು. ಚರುಪ್ರಾಶನ ಕಾಲದಲ್ಲಿ ಕುತೂಹಲದಿಂದ ಕೂಡಿದ ಅವನು ಸಕಲ ದೇವತೆಗಳೊಡನೆ ಗಿರಿಜೆಗಾಗಿ ಐದು ಮುಖಗಳನ್ನು ಪ್ರಕಾಶಗೊಳಿಸಿದನು.

೨೪. ಆಗ ಪಾರ್ವತಿಯು ಒಂಬತ್ತುಕೋಟಿ ಮುಖಗಳುಳ್ಳವಳಾಗಿರಲು ಜನರು ಅವಳನ್ನು ನೋಡಿ ಗಟ್ಟಿಯಾಗಿ ನಕ್ಕರು. ಶಿವ! ನೀನು ಸ್ಥಿರನಾಗಿರು ಎಂದು ವೇದಶ್ರುತಿಯು ಹೇಳಲ್ಪಟ್ಟಿತು.

೨೫. ಪಾರ್ವತಿಯು ಲಜ್ಜಿತಳಾಗಿ ಐದು ಜನ್ಮಗಳಲ್ಲಿಯೂ ಆ ಶಂಕರನನ್ನು ಬಿಡದೆ ಅನುಸರಿಸಿಕೊಂಡಿದ್ದಳು.

೨೬. ದೇವತೆಗಳ ಮತ್ತು ಪರ್ವತಗಳ ಸಕಲ ವಂಶಗಳೂ ಸಂತೋಷಗೊಂಡುವು. ವಿವಾಹವು ಮುಗಿದ ಮೇಲೆ ಹರನು ಕೌತುಕೋತಸ್ಸಿಗೆ ಹೋದನು.

೨೭–೩೧. ಗಣಗಳ ಸಮೀಪದಲ್ಲಿಯೂ ಆ ಪಾರ್ವತಿಯು ಕೋಪಿಸಿಕೊಳ್ಳಲಿಲ್ಲ. ತರುವಾಯ ಹಿಮವಂತನು ಶಂಕರನಿಗೆ ಉಡುಗರೆಗಳನ್ನು ಕೊಟ್ಟು ಸನ್ಮಾನಿಸಿ ಕಳುಹಿಸಲು ಅವನು ಮಂದರಪರ್ವತಕ್ಕೆ ತೆರಳಿದನು. ಬಳಿಕ

ನಿರ್ಮಮೇ ದೇವದೇವಸ್ಯ ಸ್ವೇಚ್ಛಾವರ್ಧಿಷ್ಣುಮಂದಿರಂ ।
ಸರ್ವರ್ಧಿಮತ್ಪ್ರಶಸ್ತಾಽಽಭಂ ಮಣಿವಿದ್ರುಮಭೂಷಿತಮ್ ॥ ೨೯ ॥
ಸ್ಥೂಣಾಸಹಸ್ರಸಂಯುಕ್ತಂ ಮಣಿವೇದಿಮನೋಹರಂ ।
ಗಣಾ ನಂದಿಪ್ರಭೃತಯೋ ಯಸ್ಯ ದ್ವಾರಿ ಸಮಾಶ್ರಿತಾಃ ॥ ೩೦ ॥
ತ್ರಿನೇತ್ರಾಃ ಶೂಲಹಸ್ತಾಶ್ಚ ಬಭುಃ ಶಂಕರರೂಪಿಣಃ ।
ವಾಟಿಕಾ ಅಸ್ಯ ಪರಿತಃ ಪಾರಿಜಾತಾಃ ಸಹಸ್ರಶಃ ॥ ೩೧ ॥
ಕಾಮಧೇನುರ್ಮಣಿರ್ದಿವ್ಯೋ ಯಸ್ಯದ್ವಾರಿ ಸಮಾಶ್ರಿತೌ ।
ತಸ್ಮಿನ್ಮನೋಹರತರೇ ಕಾಮವೃದ್ಧಿಕರೇ ಗೃಹೇ ॥ ೩೨ ॥
ಪಾರ್ವತ್ಯಾ ವಸತಃ ಸಾರ್ಧಂ ಕಾಮೋ ದೃಷ್ಟಿಪಥಂ ಯಯೌ ।
ವಾಯುರೂಪಃ ಶಿವಂ ದೃಷ್ಟ್ವಾ ಕಾಮಃ ಪ್ರೋವಾಚ ಶಂಕರಂ ॥ ೩೩ ॥
ನಮಸ್ತೇ ಸರ್ವರೂಪಾಯ ನಮಸ್ತೇ ವೃಷಭಧ್ವಜ ।
ನಮಸ್ತೇ ಗಣನಾಥಾಯ ಪಾಹಿ ನಾಥ ನಮೋಽಸ್ತುತೇ ॥ ೩೪ ॥
ತ್ವಯಾ ವಿರಹಿತಂ ಲೋಕಂ ಶವವತ್ಸ್ಫುರತೇ ಮಹೀ ।
ನ ತ್ವಯಾ ರಹಿತಂ ಕಿಂಚಿದ್ದೃಶ್ಯತೇ ಸ ಚರಾಚರೇ ॥ ೩೫ ॥

---

ವಿಶ್ವಕರ್ಮನು ಒಂದು ಕ್ಷಣದಲ್ಲಿಯೇ ಸ್ವೇಚ್ಛೆಯಿಂದಲೇ ಬೆಳೆಯುವುದೂ, ಸಮಸ್ತ ಸಮೃದ್ಧಿಯುಳ್ಳುದೂ, ಉತ್ತಮಕಾಂತಿಯುಳ್ಳುದೂ, ರತ್ನಹವಳಗಳಿಂದ ಅಲಂಕಾರಗೊಂಡುದೂ, ಸಾವಿರ ಕಂಬಗಳುಳ್ಳುದೂ, ರತ್ನದ ಜಗಲಿಗಳಿಂದ ಮನೋಹರವೂ, ರತ್ನಮಯವೂ ಆದ ಆಲಯವನ್ನು ಶಿವನಿಗಾಗಿ ರಚಿಸಿದನು. ಅದರ ಬಾಗಿಲಿನಲ್ಲಿ ಮೂರು ಕಣ್ಣುಗಳುಳ್ಳವರೂ, ಶೂಲವನ್ನು ಹಿಡಿದವರೂ, ಶಂಕರನ ಆಕೃತಿಯುಳ್ಳವರೂ ಆದ ನಂದಿ ಮೊದಲಾದ ಗಣಗಳು ನಿಂತರು. ಇದರ ಸುತ್ತಲೂ ಉದ್ಯಾನಗಳಿದ್ದುವು. ಅಲ್ಲಿ ಸಾವಿರಾರು ಪಾರಿಜಾತವೃಕ್ಷಗಳಿದ್ದುವು.

೩೨–೩೩. ಬಾಗಿಲಿನಲ್ಲಿ ಕಾಮಧೇನು ಚಿಂತಾಮಣಿಗಳಿದ್ದುವು. ಮನೋಹರವೂ, ಕಾಮವನ್ನು ಹೆಚ್ಚಿಸುವುದೂ ಆದ ಮನೆಯಲ್ಲಿ ಮಹೇಶ್ವರನು ಪಾರ್ವತಿಯೊಡನೆ ವಾಸಿಸುತ್ತಿರಲು ಮನ್ಮಥನು ದೃಷ್ಟಿಗೋಚರನಾದನು. ವಾಯುರೂಪನಾದ ಆ ಮನ್ಮಥನು ಶಿವನನ್ನು ನೋಡಿ ಇಂತೆಂದನು.

೩೪. "ಸರ್ವರೂಪನೂ, ವೃಷಭವಾಹನನೂ, ಗಣನಾಥನೂ ಆದ ಶಂಕರನೆ! ನಿನಗೆ ನಮಸ್ಕಾರ.

೩೫. ನೀನಿಲ್ಲದ ಲೋಕವನ್ನು ಭೂಮಿಯು ಶವದಂತೆ ಮುಟ್ಟುವುದು. ಚರಾಚರಾತ್ಮಕ ಜಗತ್ತಿನಲ್ಲಿ ನೀನಿಲ್ಲದಿರುವುದು ಯಾವುದೂ ಕಾಣಿಸುವುದಿಲ್ಲ.

ತ್ವಂ ಗೋಪ್ತಾ ತ್ವಂ ವಿಧಾತಾ ಚ ಲೋಕಸಂಹಾರಕಾರಕಃ ।
ಕೃಪಾಂ ಕುರು ಮಹಾದೇವ ದೇಹದಾನಂ ಪ್ರಯಚ್ಛ ಮೇ ॥ ೩೬ ॥

ಈಶ್ವರ ಉವಾಚ:—

ಯನ್ಮಯಾ ತ್ವಂ ಪುರಾ ದಗ್ಧಃ ಪರ್ವತೇ ಪುರತೋಽನಘ ।
ತಸ್ಯಾ ಏವ ಸಮೀಪೇ ತ್ವಂ ಪುನರ್ಭವ ಸ್ವದೇಹವಾನ್ ॥ ೩೭ ॥
ಏವಮುಕ್ತಸ್ತತಃ ಕಾಮಃ ಸ್ವಶರೀರಮುಪಾಗತಃ ।
ವವಂದೇ ಚರಣೌ ಶೂದ್ರ ವಿನಯಾವನತೋಽಭವತ್ ॥ ೩೮ ॥
ತತೋ ನನಾಮ ಚರಣೌ ಪಾರ್ವತ್ಯಾಃ ಸಂಪ್ರಹೃಷ್ಟವಾನ್ ।
ಲಬ್ಧಪ್ರಸಾದಸ್ತು ತಯೋಃ ಸಮಾಸಾದ್ಭುವನತ್ರಯೇ ॥ ೩೯ ॥
ಚಚಾರ ಸುಮಹಾತೇಜಾ ಮಹಾಮೋಹಬಲಾನ್ವಿತಃ ।
ಪುಷ್ಪಧನ್ವಾ ಪುಷ್ಪಬಾಣಸ್ತ್ವಾಕುಂಚಿತಶಿರೋರುಹಃ ॥ ೪೦ ॥
ಸದಾ ಘೂರ್ಣಿತನೇತ್ರಶ್ಚ ತಯೋರ್ದೇಹಮುಪಾವಿಶತ್ ।
ದಿವ್ಯಾಸವೈರ್ದಿವ್ಯಗಂಧೈರ್ವಸ್ತ್ರಮಾಲ್ಯಾದಿಭಿಸ್ತಥಾ ॥ ೪೧ ॥
ಸಖ್ಯಃ ಸಂಭೋಗಸಮಯೇ ಪರಿಚಕ್ರುಃ ಸಮಂತತಃ ।
ಏವಂ ಪ್ರಕ್ರೀಡತಸ್ತಸ್ಯ ವತ್ಸರಾಣಾಂ ಶತಂ ಯಯೌ ॥ ೪೨ ॥

---

೩೬. ನೀನು ರಕ್ಷಕನೂ, ಸೃಷ್ಟಿಕರ್ತನೂ, ಲೋಕಸಂಹಾರಕನೂ ಆಗಿರುವೆ. ಮಹೇಶ್ವರ! ನೀನು ನನಗೆ ದೇಹವನ್ನು ದಾನಮಾಡಿ ಕರುಣಿಸು.''

೩೭. ಈಶ್ವರನು ಹೇಳುತ್ತಾನೆ:—ನಾನು ನಿನ್ನನ್ನು ಹಿಂದೆ ದಹಿಸಿದ ಪರ್ವತದಲ್ಲಿಯೇ ಪಾರ್ವತಿಯ ಹತ್ತಿರ ಮರಳಿ ದೇಹವನ್ನು ಹೊಂದುವವನಾಗು.

೩೮. ಶಿವನು ಹೀಗೆ ಹೇಳಲು ಕಾಮನು ಶರೀರವನ್ನು ಪಡೆದು ಆ ಮಹೇಶ್ವರನ ಪಾದಗಳಿಗೆರಗಿ ವಿನಯದಿಂದ ತಲೆಬಾಗಿ ನಿಂತನು.

೩೯—೪೨. ಬಳಿಕ ಸಂತೋಷದಿಂದ ಪಾರ್ವತಿಯ ಪಾದಗಳಿಗೆರಗಿ ಅವರ ಅನುಗ್ರಹವನ್ನು ಪಡೆದು ಅತ್ಯಂತ ತೇಜಸ್ಸುಳ್ಳವನೂ, ಅತಿಶಯ ಮೋಹಬಲಗಳಿಂದ ಕೂಡಿದವನೂ, ಹೂವಿನ ಬಿಲ್ಲುಬಾಣಗಳುಳ್ಳವನೂ, ವಕ್ರವಾದ ತಲೆಗೂದಲುಳ್ಳವನೂ, ತಿರುಗುತ್ತಿರುವ ನಯನಗಳುಳ್ಳವನೂ ಆಗಿ ಮೂರು ಲೋಕಗಳಲ್ಲಿಯೂ ಸಂಚರಿಸುತ್ತ ಆ ಪಾರ್ವತೀ ಪರಮೇಶ್ವರರ ಶರೀರವನ್ನು ಪ್ರವೇಶಿಸಿದನು. ಅವರ ಸಂಭೋಗ ಸಮಯದಲ್ಲಿ ಸಖಿಯರು ದಿವ್ಯಾಸವಗಳಿಂದಲೂ, ದಿವ್ಯಗಂಧಗಳಿಂದಲೂ, ವಸ್ತ್ರಮಾಲ್ಯಾದಿಗಳಿಂದಲೂ ಉಪಚರಿಸಿದರು. ಮಹೇಶ್ವರನು ಹೀಗೆ ಕ್ರೀಡಿಸುತ್ತಿರಲು ನೂರು ವರ್ಷಗಳು ಒಂದು ರಾತ್ರಿಯಂತೆ ಕಳೆದು

ಸಾಗ್ರಮೇಕಾ ನಿಶಾಯಯದ್ವನ್ಮೈಥುನೇ ಸಕ್ತಚೇತಸಃ ।
ಏತಸ್ಮಿನ್ನಂತರೇ ದೇವಾಸ್ತಾರಕಪ್ರದ್ರುತಾ ಭಯಾತ್ ।
ಬ್ರಹ್ಮಾಣಂ ಶರಣಂ ಜಗ್ಮುಃ ಸ್ತುತ್ವಾ ತಂ ಶರಣಂ ಗತಾಃ ॥ ೪೩ ॥
ದೇವಾ ಊಚುಃ:—
ತಾರಕೋಽಸೌ ಮಹಾರೌದ್ರಸ್ತ್ವಯಾ ದತ್ತವರಃ ಪುರಾ ॥ ೪೪ ॥
ವಿಜಿತ್ಯ ತರಸಾ ಶಕ್ರಂ ಭುಂಕ್ತೇ ತ್ರೈಲೋಕ್ಯಪೂಜಿತಃ ।
ವಧೋಪಾಯೋ ಯಥಾ ತಸ್ಯ ಜಾಯತೇ ತ್ವಂ ಕುರು ಸ್ವಯಂ ॥ ೪೫ ॥
ಬ್ರಹ್ಮೋವಾಚ:—
ಮಯಾದತ್ತವರಶ್ಚಾಽಸೌ ಮಯ್ಯೈವೋಚ್ಛಿದ್ಯತೇ ನ ಹಿ ।
ಸ್ವಯಂ ಸಂವರ್ಧ್ಯ ಕಟುಕಂ ಛೇತ್ತುಂ ಕೋಽಪಿ ನ ಚಾಽರ್ಹತಿ ॥ ೪೬ ॥
ತಸ್ಮಾತ್ತಸ್ಯ ವಧೋಪಾಯಂ ಕಥಯಾಮಿ ಮಹಾತ್ಮನಃ ।
ಪಾರ್ವತ್ಯಾಂ ಯೋ ಮಹೇಶಾನಾತ್ ಸೂನುರುತ್ಪತ್ಸ್ಯತೇ ಹಿ ಸಃ ॥ ೪೭ ॥
ದಿನಸಪ್ತಕವಾನ್ ಭೂತ್ವಾ ತಾರಕಂ ಸ ಹನಿಷ್ಯತಿ ।
ಇತಿ ವಾಕ್ಯಂ ತು ತೇ ಶ್ರುತ್ವಾ ಮಂದರಂ ಲೋಕಸುಂದರಂ ॥ ೪೮ ॥
ಬ್ರಹ್ಮಲೋಕಾತ್ಸಮಾಜಗ್ಮುಃ ಪೀಡಿತಾ ದೈತ್ಯದಾನವೈಃ ॥ ೪೯ ॥
ತತ್ರ ನಂದಿಪ್ರಭೃತಯೋ ಗಣಾಃ ಶೂಲಭೃತಃ ಪುರಃ ।
ಗೃಹದ್ವಾರೇ ಹ್ಯುಪಾವೃತ್ಯ ತಸ್ಥುಃ ಸಂಯತಚೇತಸಃ ॥ ೫೦ ॥

---

ಹೋದುವು. ಈ ಸಮಯದಲ್ಲಿ ತಾರಕಾಸುರನಿಂದ ಪೀಡಿತರಾದ ದೇವತೆಗಳು ಭಯದಿಂದ ಬ್ರಹ್ಮನನ್ನು ಸ್ತುತಿಸಿ ಮರೆಹೊಕ್ಕರು.

೪೪–೪೫. ದೇವತೆಗಳು ಹೇಳುತ್ತಾರೆ:— ಅತಿ ಭಯಂಕರನಾದ ಈ ತಾರಕಾಸುರನು ಹಿಂದೆ ನಿನ್ನಿಂದ ವರವನ್ನು ಪಡೆದು ನಿಜಬಲದಿಂದ ಇಂದ್ರನನ್ನು ಸೋಲಿಸಿ ಮೂರು ಲೋಕಗಳಿಂದಲೂ ಪೂಜಿತನಾಗಿ ಸ್ವರ್ಗವನ್ನನುಭವಿಸುತ್ತಿರುವನು. ನೀನು ಅವನನ್ನು ವಧಿಸಲು ಉಪಾಯವನ್ನು ಮಾಡು.

೪೬. ಬ್ರಹ್ಮನು ಹೇಳುತ್ತಾನೆ:—ನನ್ನಿಂದ ವರವನ್ನು ಪಡೆದ ಅವನನ್ನು ನಾನೇ ಕೊಲ್ಲುವುದುಚಿತವಲ್ಲ. ಕಹಿಯಾದ ಬೇವಿನ ಮರವನ್ನು ತಾನೇ ಬೆಳೆಸಿ ತಾನೇ ಕಡಿಯುವುದು ಯೋಗ್ಯವಲ್ಲ.

೪೭–೫೦. ಆದುದರಿಂದ ಅವನನ್ನು ಕೊಲ್ಲುವ ಉಪಾಯವನ್ನು ಹೇಳುತ್ತೇನೆ. ಮಹೇಶ್ವರನಿಂದ ಪಾರ್ವತಿಯಲ್ಲಿ ಜನಿಸಿದ ಪುತ್ರನು ಏಳು ದಿನ ವಯಸ್ಸಿನಲ್ಲಿಯೇ ತಾರಕಾಸುರನನ್ನು ಕೊಲ್ಲುವನು. ದೈತ್ಯದಾನವರಿಂದ ಪೀಡಿತರಾದ ಆ ದೇವತೆಗಳು ಬ್ರಹ್ಮನ ಈ ಮಾತನ್ನು ಕೇಳಿ ಬ್ರಹ್ಮಲೋಕದಿಂದ ಜಗತ್ಸುಂದರವಾದ ಮಂದರ ಪರ್ವತಕ್ಕೆ ಬಂದರು. ಅಲ್ಲಿ ಮಹೇಶ್ವರನ ಮನೆಯ ಬಾಗಿಲಿನಲ್ಲಿ ನಂದಿ ಮೊದಲಾದ ಗಣಗಳು ಜಾಗರೂಕರಾಗಿ ಸುತ್ತುವರಿದು ನಿಂತಿದ್ದರು.

ಗಾಲವ ಉವಾಚ :—

ದೇವಾಶ್ಚ ದುಃಖಾತುರಚೇತಸೋ ಭೃಶಂ
ಹತಪ್ರಭಾಸ್ತ್ಯಕ್ತಗೃಹಾಶ್ರಯಾಃ ಖಿಲಾಃ ।
ಸಂಪ್ರಾಪ್ಯ ಮಾಸಾಂಶ್ಚತುರಸ್ತಪಃಸ್ಥಿತಾ
ದೇವೇ ಪ್ರಸುಪ್ತೇ ಹರತೋಷಣಂ ಪರಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದೇವಮಂದರಾಚಲಗಮನವರ್ಣನಂ" ನಾಮ
ಪಂಚಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

೫೧. ಗಾಲವನು ಹೇಳುತ್ತಾನೆ:—ದುಃಖಗೊಂಡ ಮನಸ್ಸುಳ್ಳವರೂ, ಕಾಂತಿ ಹೀನರೂ, ಮನೆಗಳನ್ನು ತ್ಯಜಿಸಿದವರೂ ಆದ ದೇವತೆಗಳು ಹರನು ಮಲಗಿರಲು ಅವನ ಸಂತೋಷಕ್ಕಾಗಿ ನಾಲ್ಕು ತಿಂಗಳು ತಪಸ್ಸನ್ನಾಚರಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದೇವಮಂದರಾಚಲಗಮನವರ್ಣನ"ವೆಂಬ
ಇನ್ನೂರ ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

## ಪಾರ್ವತೀಶಾಪಪ್ರದಾನವೃತ್ತಾಂತವರ್ಣನಂ

ಗಾಲವ ಉವಾಚ:—

ಶಕ್ರಾದಯಸ್ತು ದೇವೇಶಾ ದುಃಖಸಂತಪ್ತಮಾನಸಾಃ ।
ಈಶ್ವರಾದರ್ಶನಭ್ರಾಂತಮನಃಕರ್ಮೇಂದ್ರಿಯಾ ರತಿಂ ॥ ೧ ॥
ನ ಪ್ರಾಪುರ್ಲೋಕನಾಥಂ ತೇ ಕೃತ್ವಾಯಃಪ್ರತಿಮಾಕೃತಿಂ ।
ತಪಸಾಽರಾಧಯಾಮಾಸುಃ ಸರ್ವಭೂತಹೃದಿಸ್ಥಿತಂ ॥ ೨ ॥
ಕಪರ್ದಶಿರಸಂ ದೇವಂ ಶೂಲಹಸ್ತಂ ಪಿನಾಕಿನಂ ।
ಕಪಾಲಖಟ್ವಾಂಗಧರಂ ದಶಹಸ್ತಂ ಕಿರೀಟಿನಂ ॥ ೩ ॥
ಉಮಾಸಹಿತಮೀಶಾನಂ ಪಂಚವಕ್ತ್ರಂ ಮಹಾಭುಜಂ ।
ಕರ್ಪೂರಗೌರದೇಹಾಽಭಂ ಸಿತಭೂತಿವಿಭೂಷಿತಂ ॥ ೪ ॥
ನಾಗಯಜ್ಞೋಪವೀತೇನ ಗಜಚರ್ಮಸಮನ್ವಿತಂ ।
ಕೃಷ್ಣಸಾರತ್ವಚಾ ಚಾಽಪಿ ಕೃತಪ್ರಾವರಣಂ ವಿಭುಂ ॥ ೫ ॥

---

## ಕನ್ನಡದ ಅನುವಾದ

### ಪಾರ್ವತೀಶಾಪಪ್ರದಾನವೃತ್ತಾಂತವರ್ಣನ

೧–೨. ಗಾಲವನು ಹೇಳುತ್ತಾನೆ:—ಇಂದ್ರಾದಿ ದೇವತೆಗಳು ದುಃಖಗೊಂಡ ಮನಸ್ಸುಳ್ಳವರೂ, ಈಶ್ವರನ ದರ್ಶನವಾಗದಿರುವುದರಿಂದ ಭ್ರಾಂತಿಗೊಂಡ ಮನಸ್ಸು, ಕರ್ಮ, ಇಂದ್ರಿಯಗಳುಳ್ಳವರೂ ಆಗಿ ಸಂತೋಷವನ್ನು ಹೊಂದದೆ ಸಕಲ ಪ್ರಾಣಿಗಳ ಹೃದಯದಲ್ಲಿರುವ ಲೋಕನಾಥನಾದ ಆ ಶಂಕರನ ಲೋಹ ಪ್ರತಿಮೆಯನ್ನು ಮಾಡಿ ತಪಸ್ಸಿನಿಂದ ಪೂಜಿಸಿದರು.

೩–೮. ಅವರು ಜಟಾಧಾರಿಯೂ, ಶೂಲಪಿನಾಕಗಳನ್ನು ಕೈಯಲ್ಲಿ ಹಿಡಿದವನೂ, ಕಪಾಲ, ಖಟ್ವಾಂಗ, ಕಿರೀಟಗಳನ್ನು ಧರಿಸಿದವನೂ, ಹತ್ತು ಕೈಗಳುಳ್ಳವನೂ, ಉಮೆಯೊಡನೆ ಇರುವವನೂ, ಐದು ಮುಖಗಳುಳ್ಳವನೂ, ದೊಡ್ಡ ತೋಳುಗಳುಳ್ಳವನೂ, ಕರ್ಪೂರದಂತೆ ಬೆಳ್ಳಗಿರುವ ದೇಹದ ಕಾಂತಿಯುಳ್ಳವನೂ, ಶುಭ್ರವಾದ ವಿಭೂತಿಯಿಂದ ಅಲಂಕಾರಗೊಂಡವನೂ, ಸರ್ಪಯಜ್ಞೋಪವೀತ, ಆನೆ ಚರ್ಮಗಳಿಂದ ಕೂಡಿದವನೂ, ಜಿಂಕೆದೊಗಲನ್ನು ಹೊದೆದಿರುವವನೂ ಆದ ಶಿವನನ್ನು ವೃಕ್ಷಚ್ಛಾಯೆಯಲ್ಲಿ ನಿಂತು ಧ್ಯಾನಿಸುತ್ತ ವ್ರತವನ್ನು ಕೈಗೊಂಡು

ಕೃತಧ್ಯಾನಾಃ ಸುರಾಸ್ತತ್ರ ವೃಕ್ಷಾಧಾರೇ ಸಮಾಶ್ರಿತಾಃ ।
ವ್ರತಚರ್ಯಾಂ ಸಮಾಶ್ರಿತ್ಯ ಪ್ರಚಕ್ರುಸ್ತಪ ಉತ್ತಮಂ ॥ ೬ ॥
ಷಡಕ್ಷರೇಣ ಮಂತ್ರೇಣ ಶೈವೇನ ವಿಹಿತಾಃ ಸುರಾಃ ।

ಶೂದ್ರ ಉವಾಚ:—

ವ್ರತಚರ್ಯಾ ತ್ವಯಾ ಯಾ ಸಾ ಪ್ರೋಕ್ತಾ ಸಂಜಾಯತೇ ಕಥಂ ॥ ೭ ॥
ಬ್ರಹ್ಮನ್ ವಿಸ್ತರತೋ ಬ್ರೂಹಿ ನ ತೃಪ್ಯೇ ತೇ ವಚೋಽಮೃತೈಃ ॥ ೮ ॥

ಗಾಲವ ಉವಾಚ:—

ಜಪನ್ ಭಸ್ಮ ಚ ಖಟ್ವಾಂಗಂ ಕಪಾಲಂ ಸ್ಫಾಟಿಕಂ ತಥಾ ।
ರುಂಡಮಾಲಾಂ ಪಂಚವಕ್ತ್ರಮರ್ಧಚಂದ್ರಂ ಚ ಮೂರ್ಧನಿ ॥ ೯ ॥
ಚಿತ್ರಕೃತ್ತಿಪರೀಧಾನಂ ಕೌಪೀನ ಕುಂಡಲದ್ವಯಂ ।
ಘಂಟಾಯುಗ್ಮಂ ತ್ರಿಶೂಲಂ ಚ ಸೂತ್ರಂ ಚರ್ಯಾ ಸ್ವರೂಪಕಂ ॥ ೧೦ ॥
ಅಮೀಭಿರ್ಲಕ್ಷಣೈರ್ಲಕ್ಷ್ಯಂ ಮಯೋಕ್ತಂ ತವ ಶೂದ್ರಜ ।
ಅನೇನ ವಿಧಿನಾ ಸರ್ವೇ ದೇವಾ ವಹ್ನಿಪುರೋಗಮಾಃ ॥ ೧೧ ॥
ಸರ್ವ ಆರಾಧಯಾಮಾಸುಃ ಸರ್ವೋಪಾಯೈರ್ವರಪ್ರದಂ ।
ಚಾತುರ್ಮಾಸ್ಯೇ ಚ ಸಂಪೂರ್ಣೇ ಸಪೂರ್ಣೇ ಕಾರ್ತಿಕೇಽಮಲೇ ॥ ೧೨ ॥
ಚೀರ್ಣವ್ರತಾನ್ ಸುರಾನ್ ದೃಷ್ಟ್ವಾ ವಿಶುದ್ಧಾಂಶ್ಚ ಮಹೇಶ್ವರಃ ।
ಮತಿಂ ತೇಷಾಂ ದದೌ ತುಷ್ಟೋ ಜೀವಾತ್ಮಾ ಸರ್ವಭೂತದೃಕ್ ॥ ೧೩ ॥

---

ಷಡಕ್ಷರಮಂತ್ರದಿಂದ ಉತ್ತಮ ತಪಸ್ಸನ್ನು ಮಾಡಿದರು. ಶೂದ್ರನು ಹೇಳುತ್ತಾನೆ:—ಮಹರ್ಷಿಯೆ! ನೀನು ಹೇಳಿದ ವ್ರತಾಚರಣೆಯು ಹೇಗಾಗುವುದು? ಅದನ್ನು ವಿಸ್ತಾರವಾಗಿ ಹೇಳು. ನಿನ್ನ ವಚನಾಮೃತದಿಂದ ನಾನು ತೃಪ್ತಿಗೊಳ್ಳುವುದಿಲ್ಲ.

೯–೧೦. ಗಾಲವನು ಹೇಳುತ್ತಾನೆ:—ಭಸ್ಮ, ಖಟ್ವಾಂಗ, ಸ್ಫಟಿಕ ಕಪಾಲ, ರುಂಡಮಾಲೆ, ಪಂಚವಕ್ತ್ರ, ಅರ್ಧಚಂದ್ರ, ನಾನಾ ವರ್ಣದ ಚರ್ಮದ ಹೊದಿಕೆ, ಕೌಪೀನ, ಕುಂಡಲ, ಎರಡು ಘಂಟೆ, ತ್ರಿಶೂಲ, ಸೂತ್ರ ಇವುಗಳನ್ನು ಧರಿಸಿ ಜಪಿಸಿದರೆ ವ್ರತಾಚರಣೆಯಾಗುವುದು.

೧೧–೧೩. ಈ ಲಕ್ಷಣಗಳಿಂದ ಕೂಡಿರುವ ವ್ರತಚರ್ಯೆಯನ್ನು ನಿನಗೆ ಹೇಳಿದ್ದೇನೆ. ಅಗ್ನಿ ಮೊದಲಾದ ಸಮಸ್ತ ದೇವತೆಗಳು ಈ ವಿಧಿಯಿಂದಲೂ, ಸಕಲೋಪಾಯಗಳಿಂದಲೂ ವರಪ್ರದನಾದ ಶಿವನನ್ನು ಆರಾಧಿಸಿದರು. ಕಾರ್ತಿಕ ಮಾಸದಲ್ಲಿ ಚಾತುರ್ಮಾಸ್ಯವು ಮುಗಿಯಲು ಜೀವಾತ್ಮರೂಪನಾದ ಮಹೇಶ್ವರನು ವ್ರತಾನುಷ್ಠಾನ ಮಾಡಿ ವಿಶುದ್ಧರಾದ ದೇವತೆಗಳನ್ನು ನೋಡಿ ಸಂತುಷ್ಟನಾಗಿ ಅವರಿಗೆ ಮತಿಯನ್ನಿತ್ತನು.

ಶತರುದ್ರೀಯಜಾಪ್ಯೇನ ವಿಧಾನಸಹಿತೇನ ಚ ।
ಧ್ಯಾನೇನ ದೀಪದಾನೇನ ಚಾತುರ್ಮಾಸ್ಯೇ ತುತೋಷ ಸಃ ॥ ೧೪ ॥
ಪೂಜನೈಃ ಷೋಡಶವಿಧೈರ್ಯಥಾ ವಿಷ್ಣೋಸ್ತಥಾ ಹರೇ ।
ಕುರ್ವಾಣಾನ್ ಭಕ್ತಿಭಾವೇನ ಜ್ಞಾತ್ವಾ ದೇವಾನ್ ಸಮಾಗತಾನ್॥ ೧೫ ॥
ಪ್ರಹೃಷ್ಟೋ ಭಗವಾನ್ ರುದ್ರೋ ದದೌ ತೇಷಾಂ ಶುಭಾಂ ಮತಿಂ ।
ತತಃ ಸಂಮಂತ್ರ್ಯ ತೇ ದೇವಾ ವಹ್ನಿಂ ಸ್ತುತ್ವಾ ಯಥಾರ್ಥತಃ ॥ ೧೬ ॥
ಪ್ರಸನ್ನವದನಂ ಚಕ್ರುಃ ಕಾರ್ಯಸಾಧನ ತತ್ಪರಂ ।
ಕರ್ಮಸಾಕ್ಷೀ ಮಹಾತೇಜಾಃ ಕೃತ್ವಾ ಪಾರಾವತಂ ವಪುಃ ॥ ೧೭ ॥
ಪ್ರವಿವೇಶ ತತೋ ಮಧ್ಯೇ.ದ್ರಷ್ಟುಂ ದೇವಂ ಮಹೇಶ್ವರಂ ।
ಚಕಾರ ಗತಿವಿಕ್ಷೇಪಂ ಗುಂಠನೈರವಗುಂಠನೈಃ ॥ ೧೮ ॥
ಲುಂಠನೈಃ ಸರ್ಪಣೈಶ್ಚೈವ ಚಾರುರೂಪೋಽದ್ಭುತಾಂ ಗತಿಂ ।
ತಂ ದೃಷ್ಟ್ವಾ ಭಗವಾಂಸ್ತತ್ರ ಕಾರಣಂ ಸಮಬುಧ್ಯತ ॥ ೧೯ ॥
ಊರ್ಧ್ವರೇತಾಸ್ತತಸ್ತಸ್ಮಿನ್ ಸಸರ್ಜಾಽಽದೌ ದಧಾರ ತತ್ ।
ವೀರ್ಯಂ ವಹ್ನಿಮುಖೇ ಚೈವ ಸೋತ್ಪಪಾತ ಗೃಹಾದ್ಬಹಿಃ ॥ ೨೦ ॥
ಗತೇ ತಸ್ಮಿನ್ ಪತಂಗೇಽಥ ಪಾರ್ವತೀ ವಿಫಲಶ್ರಮಾ ।
ಸಂಕ್ರುದ್ಧಾ ಸರ್ವದೇವಾನಾಂ ಸಾ ಶಶಾಪ ಮಹೇಶ್ವರೀ ॥ ೨೧ ॥

---

೧೪. ಅವನು ಶತರುದ್ರೀಯ ಜಪದಿಂದಲೂ, ಧ್ಯಾನ ಮತ್ತು ದೀಪದಾನಗಳಿಂದಲೂ ಸಂತುಷ್ಟನಾದನು.

೧೫–೨೦. ಪೂಜ್ಯನಾದ ಆ ಮಹೇಶ್ವರನು ವಿಷ್ಣುವನ್ನು ಷೋಡಶೋಪಚಾರಗಳಿಂದ ಪೂಜಿಸಿದಂತೆಯೇ ತನ್ನನ್ನೂ ಭಕ್ತಿಯಿಂದ ಪೂಜಿಸುತ್ತಿರುವವರೂ ಹತ್ತಿರ ಬಂದಿರುವವರೂ ಆದ ದೇವತೆಗಳನ್ನು ಅರಿತು ಹರ್ಷಗೊಂಡು ಅವರಿಗೆ ಒಳ್ಳೆಯ ಬುದ್ಧಿಯನ್ನು ಕೊಟ್ಟನು. ಅನಂತರ ಆ ದೇವತೆಗಳು ಆಲೋಚಿಸಿ ಕಾರ್ಯಸಾಧನನಿರತನಾದ ಅಗ್ನಿಯನ್ನು ಸ್ತುತಿಸಿ ಪ್ರಸನ್ನನನ್ನಾಗಿ ಮಾಡಿದರು. ಕರ್ಮಸಾಕ್ಷಿಯೂ, ಅತಿ ತೇಜಸ್ವಿಯೂ ಆದ ಆ ಅಗ್ನಿಯು ಪಾರಿವಾಳದ ರೂಪವನ್ನು ಧರಿಸಿ ಮಹೇಶ್ವರನನ್ನು ನೋಡಲು ಮಧ್ಯದಲ್ಲಿ ಪ್ರವೇಶಿಸಿದನು. ಸುಂದರನಾದ ಅವನು ಅಲ್ಲಿ ಬಗ್ಗುವುದು, ಏಳುವುದು, ಹೊರಳಾಡುವುದು, ತೆವಳುವುದು ಇವುಗಳಿಂದ ಆಶ್ಚರ್ಯಕರವಾಗಿ ಸಂಚರಿಸಿದನು. ಪೂಜ್ಯನಾದ ಮಹೇಶ್ವರನು ಅವನನ್ನು ಕಂಡು ಅದಕ್ಕೆ ಕಾರಣವನ್ನರಿತು ಆ ಪಾರಿವಾಳದ ರೂಪದಿಂದಿರುವ ಅಗ್ನಿಯ ಬಾಯಿಯಲ್ಲಿ ತನ್ನ ವೀರ್ಯವನ್ನು ಬಿಟ್ಟನು. ಆ ಪಕ್ಷಿಯು ಅದನ್ನು ಧರಿಸಿ ಮನೆಯ ಹೊರಗೆ ಹಾರಿಹೋಯಿತು.

೨೧. ಆ ಪಕ್ಷಿಯು ಹೋಗಲು ನಿಷ್ಫಲವಾದ ಆಯಾಸವುಳ್ಳ ಪಾರ್ವತಿಯು ಕುಪಿತಳಾಗಿ ಸಮಸ್ತ ದೇವತೆಗಳನ್ನೂ ಹೀಗೆ ಶಪಿಸಿದಳು.

ಯಸ್ಮಾನ್ಮಮೇಚ್ಛಾ ವಿಹಿತಾ ಭವದ್ಭಿರ್ದುಷ್ಟಬುದ್ಧಿಭಿಃ ।
ತಸ್ಮಾತ್ಪಾಷಾಣತಾಮಾಶು ವ್ರಜಂತು ತ್ರಿದಿವೌಕಸಃ ॥ ೨೨ ॥
ನಿರಪತ್ಯಾ ನಿರ್ದಯಾಶ್ಚ ಸರ್ವೇ ದೇವಾ ಭವಿಷ್ಯಥ ।
ತತಃ ಪ್ರಸಾದಯಾಮಾಸುಃ ಪ್ರಣತಾಃ ಶಾಪಯಂತ್ರಿತಾಃ ॥ ೨೩ ॥
ಮಹದ್ದುಃಖಂ ಸಂಪ್ರವಿಷ್ಟಾಃ ಪುನಃ ಪುನರಥಾಽಬ್ರುವನ್ ॥ ೨೪ ॥

ದೇವಾ ಊಚುಃ:—

ತ್ವಂ ಮಾತಾ ಸರ್ವದೇವಾನಾಂ ಸರ್ವಸಾಕ್ಷೀ ಸನಾತನೀ ।
ಉತ್ಪತ್ತಿಸ್ಥಿತಿಸಂಹಾರಕಾರಣಂ ಜಗತಾಂ ಸದಾ ॥ ೨೫ ॥
ಭೂತಪ್ರಕೃತಿರೂಪಾ ತ್ವಂ ಮಹಾಭೂತಸಮಾಶ್ರಿತಾ ।
ಅಪರ್ಣಾ ತಪಸಾಂ ಧಾತ್ರೀ ಭೂತಧಾತ್ರೀ ವಸುಂಧರಾ ॥ ೨೬ ॥
ಮಂತ್ರಾರಾಧ್ಯಾ ಮಂತ್ರಬೀಜಂ ವಿಶ್ವಬೀಜಲಯಸ್ಥಿತಿಃ ।
ಯಜ್ಞಾದಿಫಲದಾತ್ರೀ ಚ ಸ್ವಾಹಾರೂಪೇಣ ಸರ್ವದಾ ॥ ೨೭ ॥
ಮಂತ್ರಯಂತ್ರಸಮೋಪೇತಾ ಬ್ರಹ್ಮ ವಿಷ್ಣು ಶಿವಾದಿಷು ।
ನಿತ್ಯರೂಪಾ ಮಹಾರೂಪಾ ಸರ್ವರೂಪಾ ನಿರಂಜನಾ ॥ ೨೮ ॥
ದೋಷತ್ರಯಸಮಾಕ್ರಾಂತ ಜನ ನೈಃಶ್ರೇಯಸಪ್ರದಾ ।
ಮಹಾಲಕ್ಷ್ಮೀರ್ಮಹಾಕಾಲೀ ಮಹಾದೇವೀ ಮಹೇಶ್ವರೀ ॥ ೨೯ ॥

---

೨೨–೨೪. ದುಷ್ಟಬುದ್ಧಿಯುಳ್ಳ ನೀವು ನನ್ನ ಅಪೇಕ್ಷೆಯನ್ನು ಹಾಳು ಮಾಡಿದ್ದರಿಂದ ಕಲ್ಲಾಗಿರಿ. ಮಕ್ಕಳಿಲ್ಲದವರೂ, ದಯಾಹೀನರೂ ಆಗಿರಿ. ಬಳಿಕ ಹೀಗೆ ಶಾಪಗ್ರಸ್ತರಾದ ದೇವತೆಗಳು ಅತಿ ದುಃಖಿತರಾಗಿ ಪಾರ್ವತಿಯನ್ನು ನಮಸ್ಕರಿಸಿ ಆಕೆಯನ್ನು ಸಂತೋಷಗೊಳಿಸಲು ಹೀಗೆಂದರು.

೨೫. ದೇವತೆಗಳು ಹೇಳುತ್ತಾರೆ :—ನೀನು ಸಕಲ ದೇವತೆಗಳಿಗೆ ತಾಯಿಯೂ, ಸರ್ವಸಾಕ್ಷಿಯೂ, ಸನಾತನಳೂ, ಜಗತ್ತುಗಳ ಉತ್ಪತ್ತಿ, ಸ್ಥಿತಿ, ಸಂಹಾರಕಾರಣಳೂ ಆಗಿರುವೆ.

೨೬–೩೦. ನೀನು ಭೂತಗಳಿಗೆ ಪ್ರಕೃತಿರೂಪಳೂ, ಮಹಾಭೂತಗಳನ್ನು ಆಶ್ರಯಿಸಿದವಳೂ, ಅಪರ್ಣಳೂ, ತಪೋಧಾರಕಳೂ, ಪ್ರಾಣಿಗಳನ್ನು ಸೃಜಿಸುವವಳೂ, ಭೂರೂಪಳೂ, ಮಂತ್ರಗಳಿಂದ ಆರಾಧ್ಯಳೂ, ಮಂತ್ರಗಳಿಗೆ ಕಾರಣಳೂ, ಪ್ರಪಂಚದ ಉತ್ಪತ್ತಿ, ಲಯ, ಸ್ಥಿತಿಕಾರಣಳೂ, ಸ್ವಾಹಾ ರೂಪದಿಂದ ಯಜ್ಞಾದಿಗಳಿಗೆ ಫಲವನ್ನು ಕೊಡುವವಳೂ, ಮಂತ್ರಯಂತ್ರಗಳಿಂದ ಕೂಡಿದವಳೂ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ನೆಲೆಸಿರುವವಳೂ, ನಿತ್ಯರೂಪಳೂ, ಮಹಾರೂಪಳೂ, ಸರ್ವರೂಪಳೂ, ದೋಷರಹಿತಳೂ, ದೋಷತ್ರಯದಿಂದ ಕೂಡಿದ ಜನರಿಗೆ ಮೋಕ್ಷದಾಯಕಳೂ, ಮಹಾಲಕ್ಷ್ಮೀ, ಮಹಾಕಾಳೀ, ಮಹಾದೇವೀ,

ವಿಶ್ವೇಶ್ವರೀ ಮಹಾಮಾಯಾ ಮಾಯಾಬೀಜವರಪ್ರದಾ ।
ವರರೂಪಾ ವರೇಣ್ಯಾ ತ್ವಂ ವರದಾತ್ರೀ ವರಾ ಸುತಾ ॥ ೩೦ ॥
ಬಿಲ್ವಪತ್ರೈಃ ಶುಭೈರ್ಯೇ ತ್ವಾಂ ಪೂಜಯಂತಿ ನರಾಃ ಸದಾ ।
ತೇಷಾಂ ರಾಜ್ಯಪ್ರದಾತ್ರೀ ಚ ಕಾಮದಾ ಸಿದ್ಧಿದಾ ಸದಾ ॥ ೩೧ ॥
ಚಾತುರ್ಮಾಸ್ಯೇಽರ್ಚಿತಾ ಯೈಸ್ತ್ವಂ ಬಿಲ್ವಪತ್ರೈರ್ವಿಶೇಷತಃ ।
ತೇಷಾಂ ವಾಂಛಿತಸಿದ್ಧ್ಯರ್ಥಂ ಜಾತಾ ಕಾಮದುಘಾ ಸ್ವಯಂ ॥ ೩೨ ॥
ಯೇಽರ್ಚಯಂತಿ ಸದಾ ಲೋಕೇ ಮಹೇಶ್ವರಸಮನ್ವಿತಾಂ ।
ಬಿಲ್ವಪತ್ರೈರ್ಮಹಾಭಕ್ತ್ಯಾ ನ ತೇಷಾಂ ದುಃಖದುಷ್ಕೃತೀ ॥ ೩೩ ॥
ಚಾತುರ್ಮಾಸ್ಯೇ ವಿಶೇಷೇಣ ತವ ಪೂಜಾ ಮಹಾಫಲಾ ।
ಅದ್ಯಪ್ರಭೃತಿ ಯೈರ್ಲೋಕೈರ್ಬಿಲ್ವಪತ್ರೈಸ್ತು ಪೂಜಿತಾ ॥ ೩೪ ॥
ವಿಧಾಸ್ಯಸಿ ಮಹೇಶಾನಿ ತೇಷಾಂ ಜ್ಞಾನಮನುತ್ತಮಂ ।
ಚಾತುರ್ಮಾಸ್ಯೇಽಧಿಕಫಲಂ ಬಿಲ್ವಪತ್ರಂ ವರಾನನೇ ॥ ೩೫ ॥
ಉಮಾಮಹೇಶ್ವರಪ್ರೀತ್ಯೈ ದತ್ತಂ ವಿಧಿವದಕ್ಷಯಂ ।
ಯಥಾ ಶ್ರೀಸ್ತುಲಸೀ ವೃಕ್ಷೇ ತಥಾ ಬಿಲ್ವೇಚ ಪಾರ್ವತೀ ॥ ೩೬ ॥

---

ಮಹೇಶ್ವರಿ, ವಿಶ್ವೇಶ್ವರಿ. ನೀನು ಮಹಾಮಾಯೆಯೂ, ಮಾಯಾಬೀಜಳೂ, ವರವನ್ನು ಕೊಡುವವಳೂ, ವರರೂಪಳೂ, ಶ್ರೇಷ್ಠಳೂ, ಉತ್ತಮ ಚೇತನಳೂ ಆಗಿರುವೆ.

೩೧. ನಿನ್ನನ್ನು ಮಂಗಳಕರವಾದ ಬಿಲ್ವಪತ್ರೆಗಳಿಂದ ಪೂಜಿಸುವ ಮಾನವರಿಗೆ ರಾಜ್ಯವನ್ನೂ, ಇಷ್ಟಾರ್ಥವನ್ನೂ, ಸಿದ್ಧಿಯನ್ನೂ ಕೊಡುವೆ.

೩೨. ಚಾತುರ್ಮಾಸ್ಯದಲ್ಲಿ ಬಿಲ್ವಪತ್ರೆಗಳಿಂದ ನಿನ್ನನ್ನು ಅರ್ಚಿಸಿದವರಿಗೆ ಇಷ್ಟಾರ್ಥವನ್ನು ಕೊಡಲು ಕಾಮಧೇನುವಾಗಿರುವೆ.

೩೩. ಯಾವಾಗಲೂ ಮಹೇಶ್ವರನೊಡನೆ ನಿನ್ನನ್ನು ಬಿಲ್ವಪತ್ರೆಗಳಿಂದ ಭಕ್ತಿಪೂರ್ವಕವಾಗಿ ಪೂಜಿಸುವವರಿಗೆ ದುಃಖ ಪಾಪಗಳಿರುವುದಿಲ್ಲ.

೩೪–೩೬. ಚಾತುರ್ಮಾಸ್ಯದಲ್ಲಿ ನಿನ್ನ ಪೂಜೆಯು ಅತಿಶಯ ಫಲವನ್ನೀಯುವುದು. ಇದು ಮೊದಲ್ಗೊಂಡು ಬಿಲ್ವಪತ್ರೆಗಳಿಂದ ಪೂಜಿಸುವ ಮಾನವರಿಗೆ ನೀನು ಉತ್ತಮ ಜ್ಞಾನವನ್ನೀಯುವೆ. ಸುಂದರಿಯೆ! ಚಾತುರ್ಮಾಸ್ಯದಲ್ಲಿ ಅಧಿಕ ಫಲವನ್ನು ಕೊಡುವ ಬಿಲ್ವಪತ್ರೆಯನ್ನು ಉಮಾಮಹೇಶ್ವರರ ಪ್ರೀತಿಗಾಗಿ ವಿಧಿಯಂತೆ ಅರ್ಪಿಸಿದರೆ ಅಕ್ಷಯವಾಗುವುದು. ಪಾರ್ವತಿ! ಸಕಲಾಭೀಷ್ಟವನ್ನು ಕೊಡುವ ನೀನು ತುಲಸೀಗಿಡದಲ್ಲಿ ಲಕ್ಷ್ಮಿಯು ಇರುವಂತೆಯೇ ಬಿಲ್ವವೃಕ್ಷದಲ್ಲಿ

ತ್ವಂ ಮೂರ್ತ್ಯಾ ದೃಶ್ಯಸೇ ವಿಶ್ವಂ ಸಕಲಾಽಭೀಷ್ಟದಾಯಿನೀ ।
ಚಾತುರ್ಮಾಸ್ಯೇ ವಿಶೇಷೇಣ ಸೇವಿತೌ ದ್ವೌ ಮಹಾಫಲೌ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಾರ್ವತೀಶಾಪಪ್ರದಾನವೃತ್ತಾಂತವರ್ಣನಂ" ನಾಮ
ಷಟ್‌ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

ಶರೀರದಿಂದ ಕಾಣಿಸಿಕೊಳ್ಳುವೆ. ಆದುದರಿಂದ ಅವೆರಡೂ ಚಾತುರ್ಮಾಸ್ಯದಲ್ಲಿ ಸೇವಿಸಿದರೆ ಅತಿಶಯಫಲವನ್ನು ಕೊಡುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಾರ್ವತೀಶಾಪಪ್ರದಾನವೃತ್ತಾಂತವರ್ಣನ"ವೆಂಬ
ಇನ್ನೂರ ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

### ಅಶ್ವತ್ಥಮಹಿಮವರ್ಣನಂ

ಪೈಜವನ ಉವಾಚ :—

ಶ್ರೀಃ ಕಥಂ ತುಲಸೀರೂಪಾ ಬಿಲ್ವವೃಕ್ಷೇ ಚ ಪಾರ್ವತೀ ।
ಏತಚ್ಚ ವಿಸ್ತರೇಣ ತ್ವಂ ಮುನೇ ತತ್ತ್ವಂ ವದ ಪ್ರಭೋ ॥ ೧ ॥

ಗಾಲವ ಉವಾಚ :—

ಪುರಾ ದೈವಾಸುರೇ ಯುದ್ಧೇ ದಾನವಾ ಬಲದರ್ಪಿತಾಃ ।
ದೇವಾನ್ನಿಜಘ್ನುಃ ಸಂಗ್ರಾಮೇ ಘೋರರೂಪಾಃ ಸುದಾರುಣಾಃ ॥ ೨ ॥
ದೇವಾಶ್ಚ ಭಯಸಂವಿಗ್ನಾ ಬ್ರಹ್ಮಾಣಂ ಶರಣಂ ಯಯುಃ ।
ತೇ ಸ್ತುತ್ವಾ ಪಿತರಂ ನತ್ವಾ ಬೃಹಸ್ಪತಿಪುರಸ್ಸರಾಃ ॥ ೩ ॥
ತಸ್ಥುಃ ಪ್ರಾಂಜಲಿಯಃ ಸರ್ವೇ ತಾನುವಾಚ ಪಿತಾಮಹಃ ।
ಕಿಮರ್ಥಂ ಮ್ಲಾನವದನಾ ಅಸ್ಮದ್ಗೇಹಮುಪಾಗತಾಃ ॥ ೪ ॥
ಕಾರಣಂ ಕಥ್ಯತಾಮಾಶು ವಹ್ನೀಂದ್ರವಸುಭಿರ್ಯುತಾಃ ।

ದೇವಾ ಊಚುಃ :—

ದೈತ್ಯೈಃ ಪರಾಜಿತಾಸ್ತಾತ ಸಂಗರೇಽದ್ಭುತಕಾರಿಭಿಃ ॥ ೫ ॥

---

## ಕನ್ನಡದ ಅನುವಾದ

### ಅಶ್ವತ್ಥಮಹಿಮವರ್ಣನ

೧. ಪೈಜವನನು ಹೇಳುತ್ತಾನೆ:—ಮಹರ್ಷಿಯೆ! ಲಕ್ಷ್ಮಿಯು ತುಲಸೀರೂಪಳೂ, ಪಾರ್ವತಿಯು ಬಿಲ್ವರೂಪಳೂ ಹೇಗೆ ಆದರು? ಇದರ ತತ್ವವನ್ನು ನೀನು ನನಗೆ ವಿಸ್ತಾರವಾಗಿ ಹೇಳು.

೨. ಗಾಲವನು ಹೇಳುತ್ತಾನೆ:—ಹಿಂದೆ ದೇವಾಸುರ ಯುದ್ಧದಲ್ಲಿ ಘೋರರೂಪರೂ, ಭಯಂಕರರೂ ಆದ ದಾನವರು ಬಲದಿಂದ ಅಹಂಕಾರಗೊಂಡವರಾಗಿ ಯುದ್ಧದಲ್ಲಿ ದೇವತೆಗಳನ್ನು ಹೊಡೆದರು.

೩–೬. ಭಯಗೊಂಡ ಆ ದೇವತೆಗಳು ಬೃಹಸ್ಪತಿಯನ್ನು ಮುಂದಿರಿಸಿಕೊಂಡು ಬ್ರಹ್ಮನನ್ನು ಮರೆಹೊಕ್ಕು ಸ್ತುತಿಸಿ, ನಮಿಸಿ ಕೈಮುಗಿದುಕೊಂಡು ನಿಂತರು. ಆಗ ಅವರನ್ನು ಕುರಿತು ಬ್ರಹ್ಮನು, "ಎಲೈ ದೇವತೆಗಳೆ! ನೀವು ಬಾಡಿದ ಮುಖವುಳ್ಳವರಾಗಿ ಅಗ್ನಿ, ಇಂದ್ರ, ವಸುಗಳೊಡನೆ ಏಕೆ ನನ್ನ ಮನೆಗೆ ಬಂದಿರುವಿರಿ? ಶೀಘ್ರವಾಗಿ ಕಾರಣವನ್ನು ಹೇಳಿರಿ" ಎಂದು ಕೇಳಿದನು. ದೇವತೆಗಳು ಹೇಳುತ್ತಾರೆ:— ಪಿತಾಮಹ! ಅದ್ಭುತ ಕಾರ್ಯವನ್ನೆಸಗುವ ದೈತ್ಯರು ಯುದ್ಧದಲ್ಲಿ ನಮ್ಮನ್ನು

ವಯಂ ಸರ್ವೇ ಪರಾಕ್ರಾಂತಾ ಅತಸ್ತ್ವಾಂ ಶರಣಂ ಗತಾಃ ।
ತ್ರಾಹ್ಯಸ್ಮಾನ್ ದೇವದೇವೇಶ ಶರಣಂ ಸಮುಪಾಗತಾನ್ ॥ ೬ ॥
ತಚ್ಛ್ರುತ್ವಾ ಭಗವಾನ್ ಪ್ರಾಹ ಬ್ರಹ್ಮಾ ಲೋಕಪಿತಾಮಹಃ ।
ಮಯಾ ನ ಶಕ್ಯತೇ ಕರ್ತುಂ ಪಕ್ಷಃ ಕಸ್ಯ ಜನಸ್ಯ ಚ ॥ ೭ ॥
ವಕ್ಷ್ಯಾಮ್ಯುಪಾಯಂ ಸದ್ಧರ್ಮಾಶ್ರಿತಾನಾಂ ಭವತಾಂ ಪುರಃ ।
ಏಕದಾ ಶಿವಭಕ್ತಾನಾಂ ವಿವಾದಃ ಸುಮಹಾನಭೂತ್ ॥ ೮ ॥
ಸಮಂ ಕೇಶವಭಕ್ತೈಶ್ಚ ಪರಸ್ಪರ ಜಿಗೀಷಯಾ ।
ತತಸ್ತು ಭಗವಾನ್ ರುದ್ರಃ ಸ್ವಭಕ್ತಾನಾಂ ಚ ಪಶ್ಯತಾಂ ॥ ೯ ॥
ಐಕ್ಯಂ ವಿಷ್ಣುಗಣೈಃ ಕುರ್ವನ್ ದಧ್ರೇ ರೂಪಂ ಮಹಾದ್ಭುತಂ ।
ತದಾ ಹರಿಹರಾಖ್ಯಂ ಚ ದೇಹಾಽರ್ಧಾಭ್ಯಾಂ ದಧಾರ ಸಃ ॥ ೧೦ ॥
ಹರಶ್ಚೈವಾಽರ್ಧದೇಹೇನ ವಿಷ್ಣುರರ್ಧೇನ ಚಾಽಭವತ್ ।
ಏಕತೋ ವಿಷ್ಣುಚಿಹ್ನಾನಿ ಹರಚಿಹ್ನಾನಿ ಚೈಕತಃ ॥ ೧೧ ॥
ಏಕತೋ ವೈನತೇಯಶ್ಚ ವೃಷಭಶ್ಚಾಽನ್ಯತೋಽಭವತ್ ।
ವಾಮತೋ ಮೇಘವರ್ಣಾಭೋ ದೇಹೋಽಶ್ಮನಿಚಯೋಪಮಃ ॥ ೧೨ ॥
ಕರ್ಪೂರಗೌರಃ ಸವ್ಯೇತು ಸಮಜಾಯತ ವೈ ತದಾ ।
ದ್ವಯೋರೈಕ್ಯಸಮಂ ವಿಶ್ವಂ ವಿಶ್ವನ್ಯೈಕ್ಯಮವರ್ತತ ॥ ೧೩ ॥

---

ಸೋಲಿಸಿರುವರು. ಆದುದರಿಂದ ನಾವು ನಿನ್ನನ್ನು ಮರೆಹೊಕ್ಕಿರುವೆವು. ನಮ್ಮನ್ನು ಕಾಪಾಡು.

೭. ಲೋಕಪಿತಾಮಹನಾದ ಬ್ರಹ್ಮನು ದೇವತೆಗಳ ಆ ಮಾತನ್ನು ಕೇಳಿ ಇಂತೆಂದನು. ನಾನು ಯಾರ ಪಕ್ಷವನ್ನೂ ವಹಿಸಲು ಸಮರ್ಥನಲ್ಲ.

೮–೧೧. ಸದ್ಧರ್ಮನಿರತರಾದ ನಿಮಗೊಂದು ಉಪಾಯವನ್ನು ಹೇಳುವೆನು. ಒಂದಾನೊಂದು ಕಾಲದಲ್ಲಿ ಶಿವಭಕ್ತರಿಗೆ ವಿಷ್ಣುಭಕ್ತರೊಡನೆ ಅನ್ಯೋನ್ಯವಾಗಿ ಜಯಿಸಲಿಚ್ಛೆಯಿಂದ ದೊಡ್ಡ ಜಗಳವುಂಟಾಯಿತು. ತರುವಾಯ ಪೂಜ್ಯನಾದ ರುದ್ರನು ತನ್ನ ಭಕ್ತರು ನೋಡುತ್ತಿರುವಾಗಲೆ ಅವರನ್ನು ವಿಷ್ಣುಭಕ್ತರೊಡನೆ ಐಕ್ಯಗೊಳಿಸುವುದಕ್ಕಾಗಿ ಅರ್ಧಾರ್ಧ ದೇಹಭಾಗಗಳಿಂದ ಅದ್ಭುತವಾದ ಹರಿಹರ ರೂಪವನ್ನು ಧರಿಸಿದನು. ಅವನ ಶರೀರದ ಅರ್ಧ ಭಾಗದಲ್ಲಿ ಶಿವರೂಪವೂ, ಇನ್ನೊಂದು ಭಾಗದಲ್ಲಿ ವಿಷ್ಣುರೂಪವೂ ಆಯಿತು. ಒಂದು ಕಡೆ ವಿಷ್ಣುಚಿಹ್ನೆಗಳೂ, ಮತ್ತೊಂದು ಕಡೆ ಶಿವಚಿಹ್ನೆಗಳೂ ಉಂಟಾದುವು.

೧೨–೧೩. ಒಂದೆಡೆ ಗರುಡನೂ, ಮತ್ತೊಂದೆಡೆ ವೃಷಭವೂ ವಾಹನವಾದರು. ದೇಹದ ಎಡಭಾಗವು ಮೇಘ ಮತ್ತು ನೀಲಮಣಿಯಂತೆ ಕಾಂತಿಯುಳ್ಳುದೂ, ಬಲಭಾಗವು ಕರ್ಪೂರದಂತೆ ಬಿಳುಪಾದುದೂ ಆಯಿತು. ಇವರಿಬ್ಬರಿಗೂ ಪ್ರಪಂಚಕ್ಕೂ ಐಕ್ಯವಾಯಿತು.

ವಿಭೇದಮತಯೋ ನಷ್ಟಾಃ ಶ್ರುತಿಸ್ಮೃತ್ಯರ್ಥಬಾಧಕಾಃ ।
ಪಾಖಂಡಿನೋ ಹೈತುಕಾಶ್ಚ ಸರ್ವೇ ವಿಸ್ಮಯಮಾಗಮನ್ ॥ ೧೪ ॥
ಸ್ವಂ ಸ್ವಂ ಮಾರ್ಗಂ ಪರಿತ್ಯಜ್ಯ ಯಯುರ್ನಿರ್ವಾಣಪದ್ಧತಿಂ ।
ಮಂದರೇ ಪರ್ವತಶ್ರೇಷ್ಠೇ ಸಾ ಮೂರ್ತಿರ್ನಿತ್ಯಸಂಸ್ತುತಾ ॥ ೧೫ ॥
ಪ್ರಮಥಾದ್ಯೈರ್ಗಣೈಶ್ಚೈವ ವರ್ತತೇಽದ್ಯಾಽಪಿ ನಿಶ್ಚಲಾ ।
ಸೃಷ್ಟಿಸ್ಥಿತ್ಯಂತಕರ್ತ್ರೀ ಸಾ ವಿಶ್ವಬೀಜಮನಂತಕಾ ॥ ೧೬ ॥
ಮಹೇಶವಿಷ್ಣುಸಂಯುಕ್ತಾ ಸಾ ಸ್ಮೃತಾ ಪಾಪನಾಶಿನೀ ।
ಯೋಗಿಧ್ಯೇಯಾ ಸದಾ ಪೂಜ್ಯಾ ಸತ್ವಾಧಾರಗುಣಾತಿಗಾ ॥ ೧೭ ॥
ಮುಮುಕ್ಷವೋಽಪಿ ತಾಂ ಧ್ಯಾತ್ವಾ ಪ್ರಯಾಂತಿ ಪರಮಂ ಪದಂ ।
ಚಾತುರ್ಮಾಸ್ಯೇ ವಿಶೇಷೇಣ ಧ್ಯಾತ್ವಾ ಮರ್ತ್ಯೋಽಪ್ಯಮಾನುಷಃ ॥ ೧೮ ॥
ತತ್ರ ಗಚ್ಛಂತಿ ಯೇ ತೇಷಾಂ ಸದೇವಃ ಸಂವಿಧಾಸ್ಯತಿ ।
ಇತ್ಯುಕ್ತ್ವಾ ಭಗವಾಂಸ್ತೇಷಾಂ ತತ್ರೈವಾಂತರಧೀಯತ ॥ ೧೯ ॥
ತೇಽಪಿ ವಹ್ನಿಮುಖಾ ದೇವಾಃ ಪ್ರಜಗ್ಮುರ್ಮಂದರಾಚಲಂ ।
ಬಭ್ರಮುಸ್ತತ್ರ ತತ್ರೈವ ವಿಚಿನ್ವಾನಾ ಮಹೇಶ್ವರಂ ॥ ೨೦ ॥

---

೧೪. ಶ್ರುತಿಸ್ಮೃತ್ಯರ್ಥಗಳನ್ನು ಬಾಧಿಸುವ ಭೇದಬುದ್ಧಿಗಳು ನಷ್ಟವಾದುವು. ಪಾಷಂಡಿಗಳೂ, ಯುಕ್ತಿವಾದಿಗಳೂ ಆಶ್ಚರ್ಯಗೊಂಡರು.

೧೫–೧೮. ಅವರು ತಮ್ಮತಮ್ಮ ಮಾರ್ಗಗಳನ್ನು ತ್ಯಜಿಸಿ ಮೋಕ್ಷಮಾರ್ಗವನ್ನು ಸೇರಿದರು. ಪ್ರಮಥಾದಿ ಗಣಗಳಿಂದ ಸ್ತುತಿಸಲ್ಪಟ್ಟ ಆ ಮೂರ್ತಿಯು ಈಗಲೂ ಪರ್ವತಶ್ರೇಷ್ಠವಾದ ಮಂದರಪರ್ವತದಲ್ಲಿ ನಿಶ್ಚಲವಾಗಿದೆ. ಸೃಷ್ಟಿ, ಸ್ಥಿತಿ, ಲಯಗಳನ್ನುಂಟುಮಾಡುವುದೂ, ಪ್ರಪಂಚಕ್ಕೆ ಕಾರಣವೂ, ನಾಶರಹಿತವೂ ಆದ ಆ ಹರಿಹರಮೂರ್ತಿಯು ಸ್ಮರಣೆಯಿಂದ ಪಾಪವನ್ನು ಪರಿಹರಿಸುವುದು. ಮೋಕ್ಷಾರ್ಥಿಗಳು ಯೋಗಿಗಳಿಗೆ ಧ್ಯಾನಮಾಡಲರ್ಹವೂ, ಸತ್ವಗುಣಾಶ್ರಯವೂ, ಸದಾ ಪೂಜ್ಯವೂ ಆದ ಆ ಮೂರ್ತಿಯನ್ನು ಧ್ಯಾನಿಸಿ ಉತ್ತಮಪದಕ್ಕೆ ತೆರಳುವರು. ಚಾತುರ್ಮಾಸ್ಯದಲ್ಲಿ ಅವನನ್ನು ಧ್ಯಾನಮಾಡಿದ ಮಾನವನು ದೇವತೆಯಾಗುವನು.

೧೯. ಅಲ್ಲಿಗೆ ಹೋಗುವವರನ್ನು ಆ ಶಂಕರನು ಉದ್ಧರಿಸುವನು. ಪೂಜ್ಯನಾದ ಬ್ರಹ್ಮನು ಆ ದೇವತೆಗಳನ್ನು ಕುರಿತು ಹೀಗೆಂದು ಅಲ್ಲಿಯೇ ಅದೃಶ್ಯನಾದನು.

೨೦–೨೧. ಅಗ್ನಿ ಮೊದಲಾದ ದೇವತೆಗಳು ಮಂದರಾಚಲಕ್ಕೆ ಹೋದರು. ಅವರು ಅಲ್ಲಿಯೇ ಶಂಕರನನ್ನೂ, ಬಿಲ್ವವೃಕ್ಷದಲ್ಲಿರುವ ಪಾರ್ವತಿಯನ್ನೂ, ತುಲಸೀ

ಪಾರ್ವತೀಂ ಬಿಲ್ವವೃಕ್ಷಸ್ಥಾಂ ಲಕ್ಷ್ಮೀಂ ಚ ತುಲಸೀಗತಾಂ ।
ಆದೌ ಸರ್ವಂ ವೃಕ್ಷಮಯಂ ಪೂರ್ವಂ ವಿಶ್ವಮಜಾಯತ ॥ ೨೧ ॥
ಏತೇ ವೃಕ್ಷಾ ಮಹಾಶ್ರೇಷ್ಠಾಃ ಸರ್ವೇ ದೇವಾಂಶಸಂಭವಾಃ ।
ಏತೇಷಾಂ ಸ್ಪರ್ಶನಾದೇವ ಸರ್ವಪಾಪೈಃ ಪ್ರಮುಚ್ಯತೇ ॥ ೨೨ ॥
ಚಾತುರ್ಮಾಸ್ಯೇ ವಿಶೇಷೇಣ ಮಹಾಪಾಪೌಘಹಾರಿಣಃ ।
ಯದಾ ತೇನೈವ ದದೃಶುರ್ದೇವಾಸ್ತ್ರಿಭುವನೇಶ್ವರಂ ॥ ೨೩ ॥
ತದಾಽಽಕಾಶಭವಾ ವಾಣೀ ಪ್ರಾಹ ದೇವಾನ್ ಯಥಾರ್ಥತಃ ।
ಈಶ್ವರಃ ಸರ್ವಭೂತಾನಾಂ ಕೃಪಯಾ ವೃಕ್ಷಮಾಶ್ರಿತಃ ॥ ೨೪ ॥
ಚಾತುರ್ಮಾಸ್ಯೇಽಥ ಸಂಪ್ರಾಪ್ತೇ ಸರ್ವಭೂತದಯಾಕರಃ ।
ಅಶ್ವತ್ಥೋಽತಃ ಸದಾ ಸೇವ್ಯೋ ಮಂದವಾರೇ ವಿಶೇಷತಃ ॥ ೨೫ ॥
ನಿತ್ಯಮಶ್ವತ್ಥ ಸಂಸ್ಪರ್ಶಾತ್ಪಾಪಂ ಯಾತಿ ಸಹಸ್ರಧಾ ।
ದುಗ್ಧೇನ ತರ್ಪಣಂ ಯೇಽಪ್ಯೈ ತಿಲಮಿಶ್ರೇಣ ಭಕ್ತಿತಃ ॥ ೨೬ ॥
ಸೇಚನಂ ವಾ ಕರಿಷ್ಯಂತಿ ತೃಪ್ತಿಸ್ತತ್ಪೂರ್ವಜೇಷು ಚ ।
ದರ್ಶನಾದೇವ ವೃಕ್ಷಸ್ಯ ಪಾತಕಂ ತು ವಿನಶ್ಯತಿ ॥ ೨೭ ॥

---

ಗಿಡದಲ್ಲಿರುವ ಲಕ್ಷ್ಮಿಯನ್ನೂ ಹುಡುಕುತ್ತ ಅಲ್ಲಲ್ಲಿ ಸಂಚರಿಸಿದರು. ಮೊದಲು ಈ ಪ್ರಪಂಚವು ವೃಕ್ಷಮಯವಾಗಿದ್ದಿತು.

೨೨. ಈ ವೃಕ್ಷಗಳೆಲ್ಲ ಅತ್ಯುತ್ತಮವೂ, ದೇವಾಂಶಸಂಭವವೂ ಆಗಿರುವುವು. ಮಾನವನು ಇವುಗಳ ಸ್ಪರ್ಶದಿಂದ ಸಕಲ ಪಾಪಗಳಿಂದ ಮುಕ್ತನಾಗುವನು.

೨೩–೨೫. ಇವು ಚಾತುರ್ಮಾಸ್ಯದಲ್ಲಿ ಮಹಾ ಪಾಪಗಳ ಸಮೂಹವನ್ನು ಪರಿಹರಿಸುವುವು. ಆ ದೇವತೆಗಳು ವೃಕ್ಷದಿಂದಲೇ ಮಹೇಶ್ವರನನ್ನು ನೋಡಲು ಆಕಾಶವಾಣಿಯು ಅವರನ್ನು ಕುರಿತು ಇಂತೆಂದಿತು. ಚಾತುರ್ಮಾಸ್ಯವು ಬರಲು ಸಕಲ ಪ್ರಾಣಿಗಳಲ್ಲಿ ದಯೆಗೊಳ್ಳುವ ಮಹೇಶ್ವರನು ಕರುಣೆಯಿಂದ ವೃಕ್ಷವನ್ನಾಶ್ರಯಿಸಿರುವನು. ಆದುದರಿಂದ ಶನಿವಾರದ ದಿನ ಅಶ್ವತ್ಥವೃಕ್ಷವನ್ನು ವಿಶೇಷವಾಗಿ ಸೇವಿಸಬೇಕು.

೨೬–೨೭. ನಿತ್ಯವೂ ಅಶ್ವತ್ಥ ಸ್ಪರ್ಶದಿಂದ ಸಾವಿರವಿಧ ಪಾಪವು ಪರಿಹಾರವಾಗುವುದು. ಅಶ್ವತ್ಥವೃಕ್ಷಕ್ಕೆ ತಿಲಮಿಶ್ರವಾದ ಹಾಲಿನಿಂದ ತರ್ಪಣವನ್ನಾಗಲಿ, ಸೇಚನವನ್ನಾಗಲಿ ಮಾಡುವವರು ತಮ್ಮ ಪಿತೃಗಳನ್ನು ತೃಪ್ತಿಗೊಳಿಸುವರು. ಅದರ ದರ್ಶನದಿಂದಲೇ ಪಾಪವು ಪರಿಹಾರವಾಗುವುದು.

ಪಿಪ್ಪಲಃ ಪೂಜಿತೋ ಧ್ಯಾತೋ ದೃಷ್ಟಃ ಸೇವಿತ ಏವ ವಾ ।
ಪಾಪರೋಗವಿನಾಶಾಯ ಚಾತುರ್ಮಾಸ್ಯೇ ವಿಶೇಷತಃ ।
ಅಶ್ವತ್ಥಂ ಪೂಜಿತಂ ಸಿಕ್ತಂ ಸರ್ವಭೂತ ಸುಖಾವಹಂ ॥ ೨೮ ॥
ಸರ್ವಾಮಯಹರಂ ಚೈವ ಸರ್ವಪಾಪೌಘಹಾರಿಣಂ ।
ಯೇ ನರಾಃ ಕೀರ್ತಯಿಷ್ಯಂತಿ ನಾಮಾಽಪ್ಯಶ್ವತ್ಥವೃಕ್ಷಜಂ ॥ ೨೯ ॥
ನ ತೇಷಾಂ ಯಮಲೋಕಸ್ಯ ಭಯಂ ಮಾರ್ಗೇ ಪ್ರಜಾಯತೇ ।
ಕುಂಕುಮೈಶ್ಚಂದನೈಶ್ಚೈವ ಸುಲಿಪ್ತಂ ಯಶ್ಚ ಕಾರಯೇತ್ ॥ ೩೦ ॥
ತಸ್ಯ ತಾಪತ್ರಯಾಽಭಾವೋ ವೈಕುಂಠೇ ಗಣತಾ ಭವೇತ್ ।
ದುಃಸ್ವಪ್ನಂ ದುಷ್ಟಚಿಂತಾಂ ಚ ದುಷ್ಟಜ್ವರಪರಾಭವಾನ್ ॥ ೩೧ ॥
ವಿಲಯಂ ನಯ ಪಾಪಾನಿ ಪಿಪ್ಪಲ ತ್ವಂ ಹರಿಪ್ರಿಯ ।
ಮಂತ್ರೇಣಾಽನೇನ ಯೇ ದೇವಾಃ ಪೂಜಯಿಷ್ಯಂತಿ ಪಿಪ್ಪಲಂ ॥ ೩೨ ॥
ತತಸ್ತೇಷಾಂ ಧರ್ಮರಾಜೋ ಜಾಯತೇ ವಾಕ್ಯಕಾರಕಃ ।
ಅಶ್ವತ್ಥೋ ವಚನೇಸಾಽಪಿ ಪ್ರೋಕ್ತೋ ಜ್ಞಾನಪ್ರದೋ ನೃಣಾಂ ॥ ೩೩ ॥
ಶ್ರುತೋ ಹರತಿ ಪಾಪಂ ಚ ಜನ್ಮಾದಿ ಮರಣಾವಧಿ ।
ಅಶ್ವತ್ಥ ಸೇವನಂ ಪುಣ್ಯಂ ಚಾತುರ್ಮಾಸ್ಯೇ ವಿಶೇಷತಃ ॥ ೩೪ ॥

---

೨೮. ಚಾತುರ್ಮಾಸ್ಯದಲ್ಲಿ ಅಶ್ವತ್ಥದ ಪೂಜೆ, ಧ್ಯಾನ, ದರ್ಶನ ಅಥವಾ ಸೇವೆಯನ್ನು ಮಾಡಿದರೆ ಪಾಪರೋಗಗಳು ನಾಶವಾಗುವುವು. ಅಶ್ವತ್ಥವು ಪೂಜೆ, ಜಲಸೇಚನಗಳಿಂದ ಸಕಲ ಪ್ರಾಣಿಗಳಿಗೆ ಸುಖವನ್ನುಂಟುಮಾಡುವುದು.

೨೯–೩೪. ಸಕಲ ರೋಗಗಳನ್ನು ನಿವಾರಿಸುವುದೂ, ಸಮಸ್ತ ಪಾಪಗಳನ್ನು ಪರಿಹರಿಸುವುದೂ ಆದ ಅಶ್ವತ್ಥವೃಕ್ಷದ ನಾಮವನ್ನು ಉಚ್ಚರಿಸಿದ ಮಾನವರಿಗೆ ಯಮಲೋಕದ ದಾರಿಯಲ್ಲಿ ಭಯವುಂಟಾಗುವುದಿಲ್ಲ. ಅಶ್ವತ್ಥವೃಕ್ಷಕ್ಕೆ ಕುಂಕುಮ, ಚಂದನಗಳಿಂದ ಲೇಪನ ಮಾಡಿದವನ ತಾಪತ್ರಯಗಳು ನೀಗಿ ಅವನು ವೈಕುಂಠದಲ್ಲಿ ವಿಷ್ಣು ಪಾರ್ಷದನಾಗುವನು. ಹರಿಪ್ರಿಯನಾದ ಅಶ್ವತ್ಥನೆ! ನೀನು ದುಸ್ಸ್ವಪ್ನ, ದುಷ್ಟ ಚಿಂತೆ, ದುಷ್ಟಜ್ವರ, ಪರಾಭವಗಳನ್ನೂ, ಇತರ ಪಾಪಗಳನ್ನೂ ನಾಶಗೊಳಿಸು ಎಂಬ ಮಂತ್ರದಿಂದ ಅಶ್ವತ್ಥವನ್ನು ಪೂಜಿಸಿದವನ ಮಾತನ್ನು ಧರ್ಮರಾಜನು ನಡೆಸುವನು. ಈ ವೃಕ್ಷವು ಅಶ್ವತ್ಥವೆಂಬ ಮಾತಿನಿಂದಲೇ ಮಾನವರಿಗೆ ಜ್ಞಾನ ವನ್ನು ಕೊಡುವುದು. ನಾಮಶ್ರವಣದಿಂದ ಹುಟ್ಟಿದ ಮೊದಲ್ಗೊಂಡು ಸಾಯುವ ವರೆಗಿನ ಪಾಪವು ನೀಗುವುದು. ಅಶ್ವತ್ಥಸೇವನೆಯು ಚಾತುರ್ಮಾಸ್ಯದಲ್ಲಿ ವಿಶೇಷ ವಾಗಿ ಪುಣ್ಯವನ್ನು ಕೊಡುವುದು.

ಸುಪ್ತೇ ದೇವೇ ವೃಕ್ಷಮಧ್ಯಮಾಸ್ಥಾಯ ಭಗವಾನ್ ಪ್ರಭುಃ ।
ಜಲಂ ಪೃಥ್ವೀಗತಂ ಸರ್ವಂ ಪ್ರಪಿಬನ್ನಿವ ಸೇವತೇ ॥ ೩೫ ॥
ಜಲಂ ವಿಷ್ಣುರ್ಜಲತ್ವೇನ ವಿಷ್ಣುರೇವ ರಸೋ ಮಹಾನ್ ।
ತಸ್ಮಾದ್ವೃಕ್ಷಗತೋ ವಿಷ್ಣುಶ್ಚಾತುರ್ಮಾಸ್ಯೇಽಘನಾಶನಃ ॥ ೩೬ ॥
ಸರ್ವಭೂತಗತೋ ವಿಷ್ಣುರಾಪ್ಯಾಯಯತಿ ವೈ ಜಗತ್ ।
ತಥಾಽಶ್ವತ್ಥಗತಂ ವಿಷ್ಣುಂ ಯೋ ನಮಸ್ಯೇನ್ನ ನಾರಕೀ ॥ ೩೭ ॥
ಅಶ್ವತ್ಥಂ ರೋಪಯೇದ್ಯಸ್ತು ಪೃಥಿವ್ಯಾಂ ಪ್ರಯತೋ ನರಃ ।
ತಸ್ಯ ಪಾಪಸಹಸ್ರಾಣಿ ವಿಲಯಂ ಯಾಂತಿ ತತ್ಕ್ಷಣಾತ್ ॥ ೩೮ ॥
ಅಶ್ವತ್ಥಃ ಸರ್ವವೃಕ್ಷಾಣಾಂ ಪವಿತ್ರೋ ಮಂಗಲಾನ್ವಿತಃ ।
ಮುಕ್ತಿದೋ ರೋಪಿತೋ ಧ್ಯಾತಶ್ಚಾತುರ್ಮಾಸ್ಯೇ ಘನಾಶನಃ ॥ ೩೯ ॥
ಅಶ್ವತ್ಥೇ ಚರಣಂ ದತ್ವಾ ಬ್ರಹ್ಮಹತ್ಯಾ ಪ್ರಜಾಯತೇ ।
ನಿಷ್ಕಾರಣಂ ಸಂಕುಥಿತ್ವಾ ನರಕೇ ಪಚ್ಯತೇ ಧ್ರುವಂ ॥ ೪೦ ॥
ಮೂಲೇ ವಿಷ್ಣುಃ ಸ್ಥಿತೋ ನಿತ್ಯಂ ಸ್ಕಂದೇ ಕೇಶವ ಏವ ಚ ।
ನಾರಾಯಣಸ್ತು ಶಾಖಾಸು ಪತ್ರೇಷು ಭಗವಾನ್ ಹರಿಃ ॥ ೪೧ ॥

---

೩೫. ಚಾತುರ್ಮಾಸ್ಯದಲ್ಲಿ ಪೂಜ್ಯನಾದ ವಿಷ್ಣುವು ಅಶ್ವತ್ಥವೃಕ್ಷದ ಮಧ್ಯದಲ್ಲಿ ಭೂಮಿಯಲ್ಲಿರುವ ಸಕಲ ನೀರನ್ನು ಕುಡಿಯುವವನಂತೆ ನೆಲೆಸಿರುತ್ತಾನೆ.

೩೬. ವಿಷ್ಣುವು ಜಲರೂಪನಾಗಿರುವನು. ಆದುದರಿಂದ ರಸರೂಪಿಯೂ ಅವನೇ ಆಗಿರುವನು. ಆದುದರಿಂದ ಚಾತುರ್ಮಾಸ್ಯದಲ್ಲಿ ವೃಕ್ಷಗತನಾದ ವಿಷ್ಣುವು ಪಾಪವನ್ನು ಪರಿಹರಿಸುವನು.

೩೭. ವಿಷ್ಣುವು ಸಕಲ ಪ್ರಾಣಿಗಳಲ್ಲಿದ್ದು ಜಗತ್ತನ್ನು ಆನಂದಗೊಳಿಸುವನು. ಹಾಗೆಯೇ ಅಶ್ವತ್ಥವೃಕ್ಷದಲ್ಲಿರುವ ವಿಷ್ಣುವನ್ನು ನಮಸ್ಕರಿಸುವವನು ನರಕವನ್ನು ಹೊಂದುವುದಿಲ್ಲ.

೩೮. ಭೂಮಿಯಲ್ಲಿ ನರನು ಶುದ್ಧನಾಗಿ ಅಶ್ವತ್ಥವೃಕ್ಷವನ್ನು ನೆಟ್ಟರೆ ಅವನ ಸಹಸ್ರ ಪಾಪಗಳು ಕೂಡಲೆ ನಾಶವಾಗುವುವು.

೩೯. ಅಶ್ವತ್ಥವೃಕ್ಷವು ಸಮಸ್ತ ವೃಕ್ಷಗಳಲ್ಲಿ ಪವಿತ್ರವೂ, ಮಂಗಳಕರವೂ ಆಗಿರುವುದು. ಚಾತುರ್ಮಾಸ್ಯದಲ್ಲಿ ಇದನ್ನು ನೆಟ್ಟರೆ ಮುಕ್ತಿಯನ್ನು ಕೊಡುವುದು. ಧ್ಯಾನಮಾಡಿದರೆ ಪಾಪವು ಪರಿಹಾರವಾಗುವುದು.

೪೦. ಅಶ್ವತ್ಥವನ್ನು ತುಳಿದರೆ ಬ್ರಹ್ಮಹತ್ಯೆಯುಂಟಾಗುವುದು. ಅದನ್ನು ನರನು ನಿಷ್ಕಾರಣವಾಗಿ ಕಡಿದರೆ ನರಕಭಾಗಿಯಾಗುವನು.

೪೧–೪೩. ಈ ಅಶ್ವತ್ಥವೃಕ್ಷದ ಬುಡದಲ್ಲಿಯೂ, ಕಾಂಡದಲ್ಲಿಯೂ, ಕೊಂಬೆಗಳಲ್ಲಿಯೂ, ಎಲೆಗಳಲ್ಲಿಯೂ, ಫಲದಲ್ಲಿಯೂ ವಿಷ್ಣುವು ಸಕಲ ದೇವತೆಗಳೊಡನೆ

ಫಲೇಽಚ್ಯುತೋ ನ ಸಂದೇಹಃ ಸರ್ವದೇವೈಃ ಸಮನ್ವಿತಃ ।
ಚಾತುರ್ಮಾಸ್ಯೇ ವಿಶೇಷೇಣ ದ್ರುಮಪೂಜೀ ಸ ಮುಕ್ತಿಭಾಕ್ ॥ ೪೨ ॥
ತಸ್ಮಾತ್ಸರ್ವಪ್ರಯತ್ನೇನ ಸದೈವಾಽಶ್ವತ್ಥಸೇವನಂ ।
ಯಃ ಕರೋತಿ ನರೋ ಭಕ್ತ್ಯಾ ಪಾಪಂ ಯಾತಿ ದಿನೋದ್ಭವಂ ॥ ೪೩ ॥
ಸ ಏವ ವಿಷ್ಣುರ್ದ್ರುಮ ಏವ ಮೂರ್ತೋ
ಮಹಾತ್ಮಭಿಃ ಸೇವಿತ ಪುಣ್ಯಮೂಲಃ ।
ಯಸ್ಯಾಶ್ರಯಃ ಪಾಪಸಹಸ್ರ ಹಂತಾ
ಭವೇನ್ನೃಣಾಂ ಕಾಮದುಘೋ ಗುಣಾಢ್ಯಃ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಶ್ವತ್ಥಮಹಿಮವರ್ಣನಂ" ನಾಮ
ಸಪ್ತಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

ಇರುವನು. ಚಾತುರ್ಮಾಸ್ಯದಲ್ಲಿ ವೃಕ್ಷವನ್ನು ಪೂಜಿಸುವವನು ಮುಕ್ತಿಯನ್ನು ಹೊಂದುವನು.

೪೩. ಆದುದರಿಂದ ಪ್ರಯತ್ನಿಸಿ ಯಾವಾಗಲೂ ಅಶ್ವತ್ಥಸೇವೆಯನ್ನು ಭಕ್ತಿಯಿಂದ ಮಾಡುವವನ ಪ್ರತಿದಿನದ ಪಾಪವು ಪರಿಹಾರವಾಗುವುದು.

೪೪. ಮಹಾತ್ಮರು ಸೇವಿಸಿರುವ ಪವಿತ್ರವಾದ ಮೂಲವುಳ್ಳ ಅಶ್ವತ್ಥವೃಕ್ಷವೇ ದೇಹವನ್ನು ಧರಿಸಿದ ವಿಷ್ಣುವಾಗಿರುವುದು. ವಿಷ್ಣುವಿಗೆ ಆಶ್ರಯವಾದ ಗುಣವುಳ್ಳ, ಈ ವೃಕ್ಷವು ಮಾನವರ ಅನೇಕ ಪಾಪಗಳನ್ನು ಪರಿಹರಿಸುವುದೂ, ಇಷ್ಟಾರ್ಥವನ್ನು ನೀಡುವುದೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಶ್ವತ್ಥಮಹಿಮವರ್ಣನ" ವೆಂಬ
ಇನ್ನೂರ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

## ಪಲಾಶಮಹಿಮವರ್ಣನಂ

ವಾಣ್ಯುವಾಚ :—

ಪಲಾಶೋ ಹರಿರೂಪೇಣ ಸೇವ್ಯತೇ ಹಿ ಪುರಾವಿದೈಃ ।
ಬಹುಭಿರ್ಹ್ಯುಪಚಾರೈಸ್ತು ಬ್ರಹ್ಮವೃಕ್ಷಸ್ಯ ಸೇವನಂ ॥ ೧ ॥
ಸರ್ವಕಾಮಪ್ರದಂ ಪ್ರೋಕ್ತಂ ಮಹಾಪಾತಕನಾಶನಂ ।
ತ್ರೀಣಿ ಪತ್ರಾಣಿ ಪಲಾಶೇ ಮಧ್ಯಮಂ ವಿಷ್ಣುಶಾಪಿತಂ ॥ ೨ ॥
ವಾಮೇ ಬ್ರಹ್ಮಾ ದಕ್ಷಿಣೇ ಚ ಹರ ಏಕಃ ಪ್ರಕೀರ್ತಿತಃ ।
ಪಲಾಶಪಾತ್ರೇ ಯೋ ಭುಂಕ್ತೇ ನಿತ್ಯಮೇವ ನರೋತ್ತಮಃ ॥ ೩ ॥
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ನೋತ್ಯಸಂಶಯಂ ।
ಚಾತುರ್ಮಾಸ್ಯೇ ವಿಶೇಷೇಣ ಭೋಕ್ತುರ್ಮೋಕ್ಷಪ್ರದಂ ಭವೇತ್ ॥ ೪ ॥
ಪಯಸಾವಾಽಥ ದುಗ್ಧೇನ ರವಿವಾರೇಽನಿಶಂ ಯದಿ ।
ಚಾತುರ್ಮಾಸ್ಯೇಽರ್ಚಿತೋ ಯೈಸ್ತು ತೇ ಯಾಂತಿ ಪರಮಂ ಪದಂ ॥ ೫ ॥
ದೃಶ್ಯತೇ ಯದಿ ಪಲಾಶಃ ಪ್ರಾತರುತ್ಥಾಯ ಮಾನವೈಃ ।
ನರಕಾನಾಶು ನಿರ್ಧೂಯ ಗಮ್ಯತೇ ಪರಮಂ ಪದಂ ॥ ೬ ॥

---

## ಕನ್ನಡದ ಅನುವಾದ

### ಪಲಾಶಮಹಿಮವರ್ಣನ

೧-೪. ವಾಣಿಯು ಹೇಳುತ್ತಾಳೆ:— ಪ್ರಾಜ್ಞರು ಪಲಾಶವೃಕ್ಷವು ವಿಷ್ಣು ರೂಪವಾಗಿರುವುದರಿಂದ ಅದನ್ನು ಸೇವಿಸುತ್ತಾರೆ. ಅನೇಕೋಪಚಾರಗಳಿಂದ ಈ ಪಲಾಶವೃಕ್ಷ ಸೇವನೆಯು ಸಕಲೇಷ್ಟಾರ್ಥಗಳನ್ನು ಕೊಡುವುದು. ಮಹಾ ಪಾತಕವನ್ನು ಪರಿಹರಿಸುವುದು. ಪಲಾಶವೃಕ್ಷದ ಮೂರು ದಳಗಳಲ್ಲಿ ನಡುವೆ ಇರು ವುದನ್ನು ವಿಷ್ಣುವೂ, ಎಡಗಡೆಯಿರುವುದನ್ನು ಬ್ರಹ್ಮನೂ, ಬಲಗಡೆಯಿರುವುದನ್ನು ಹರನೂ ಶಪಿಸಿರುವರು. ಪಲಾಶಪತ್ರದಲ್ಲಿ ನಿತ್ಯವೂ ಭುಂಜಿಸುವ ಮಾನವೋ ತ್ತಮನು ನಿಜವಾಗಿಯೂ ಸಾವಿರ ಅಶ್ವಮೇಧ ಯಾಗಗಳ ಫಲವನ್ನು ಹೊಂದು ವನು. ಚಾತುರ್ಮಾಸ್ಯದಲ್ಲಿ ಪಲಾಶಪತ್ರಭೋಜಿಗೆ ಮೋಕ್ಷವುಂಟಾಗುವುದು.

೫. ಚಾತುರ್ಮಾಸ್ಯದಲ್ಲಿ ಭಾನುವಾರದ ದಿನ ಆ ವೃಕ್ಷವನ್ನು ನೀರಿನಿಂದಾ ಗಲಿ, ಹಾಲಿನಿಂದಾಗಲಿ ಪೂಜಿಸಿದವರು ಉತ್ತಮ ಪದವಿಯನ್ನು ಹೊಂದುವರು.

೬. ಬೆಳಗ್ಗೆ ಎದ್ದು ಪಲಾಶವೃಕ್ಷವನ್ನು ನೋಡಿದವರು ನರಕವನ್ನು ಪರಿಹರಿಸಿ ಕೊಂಡು ಉತ್ತಮಸ್ಥಾನಕ್ಕೆ ತೆರಳುವರು.

ಪಲಾಶಃ ಸರ್ವದೇವಾನಾಮಾಧಾರೋ ಧರ್ಮಸಾಧನಂ ।
ಯತ್ರ ಲೋಭಸ್ತು ತಸ್ಯ ಸ್ಯಾತ್ತತ್ರ ಪೂಜ್ಯೋ ಮಹಾತರುಃ ॥ ೭ ॥
ಯಥಾ ಸರ್ವೇಷು ವರ್ಣೇಷು ವಿಪ್ರೋ ಮುಖ್ಯತಮೋ ಭವೇತ್ ।
ಮಧ್ಯೇ ಸರ್ವತರೂಣಾಂ ಚ ಬ್ರಹ್ಮವೃಕ್ಷೋ ಮಹೋತ್ತಮಃ ॥ ೮ ॥
ಯಸ್ಯ ಮೂಲೇ ಹರೋ ನಿತ್ಯಂ ಸ್ಕಂಧೇ ಶೂಲಧರಃ ಸ್ವಯಂ ।
ಶಾಖಾಸು ಭಗವಾನ್ ರುದ್ರಃ ಪುಷ್ಪೇಷು ತ್ರಿಪುರಾಂತಕಃ ॥ ೯ ॥
ಶಿವಃ ಪತ್ರೇಷು ವಸತಿ ಫಲೇ ಗಣಪತಿಸ್ತಥಾ ।
ಗಂಗಾಪತಿಸ್ತ್ವಚಾಯಾಂ ತು ಮಜ್ಜಾಯಾಂ ಭಗವಾನ್ ಭವಃ ॥ ೧೦ ॥
ಈಶ್ವರಸ್ತು ಪ್ರಶಾಖಾಸು ಸರ್ವೋಽಯಂ ಹರವಲ್ಲಭಃ ।
ಹರಃ ಕರ್ಪೂರಧವಲೋ ಯಥಾಪದ್ವರ್ಣಿತಃ ಸದಾ ॥ ೧೧ ॥
ತಥಾ ಹ್ಯಯಂ ಬ್ರಹ್ಮರೂಪಃ ಸಿತವರ್ಣೋ ಮಹಾಭಗಃ ।
ಚಿಂತಿತೋ ರಿಪುನಾಶಾಯ ಪಾಪಸಂಶೋಷಣಾಯ ಚ ॥ ೧೨ ॥
ಮನೋರಥ ಪ್ರದಾನಾಯ ಜಾಯತೇ ನಾತ್ರ ಸಂಶಯಃ ।
ಗುರುವಾರೇ ಸಮಾಯಾತೇ ಚಾತುರ್ಮಾಸ್ಯೇ ತಥೈವ ಚ ॥ ೧೩ ॥
ಪೂಜಿತಶ್ಚ ಸ್ತುತೋ ಧ್ಯಾತಃ ಸರ್ವದುಃಖವಿನಾಶಕಃ ॥ ೧೪ ॥

---

೭. ಈ ಪಲಾಶವೃಕ್ಷವು ಸಕಲ ದೇವತೆಗಳಿಗೆ ಆಶ್ರಯವೂ, ಸಮಸ್ತ ಜನರಿಗೆ ಧರ್ಮಸಾಧನವೂ ಆಗಿರುವುದು. ಯಾವನಿಗೆ ಯಾವ ವಿಷಯದಲ್ಲಿ ಆಶೆಯಿರುವುದೋ, ಅದಕ್ಕಾಗಿ ಅವನು ಆ ವೃಕ್ಷವನ್ನು ಪೂಜಿಸಬೇಕು.

೮. ಸಕಲ ಜಾತಿಗಳಲ್ಲಿ ಬ್ರಾಹ್ಮಣನು ಉತ್ತಮನಾಗಿರುವಂತೆ ಪಲಾಶ ವೃಕ್ಷವು ಸಮಸ್ತ ವೃಕ್ಷಗಳಲ್ಲಿ ಅತ್ಯುತ್ತಮವಾದುದು.

೯–೧೪. ಈ ವೃಕ್ಷದ ಮೂಲದಲ್ಲಿ ಹರನೂ, ಕಾಂಡದಲ್ಲಿ ಶೂಲಧರನೂ, ಶಾಖೆಗಳಲ್ಲಿ ರುದ್ರನೂ, ಪುಷ್ಪಗಳಲ್ಲಿ ತ್ರಿಪುರಾಂತಕನೂ, ಎಲೆಯಲ್ಲಿ ಶಿವನೂ, ಫಲದಲ್ಲಿ ಗಣಪತಿಯೂ, ತೊಗಟೆಯಲ್ಲಿ ಗಂಗಾಪತಿಯೂ, ಮಜ್ಜೆಯಲ್ಲಿ ಭವನೂ, ಉಪಶಾಖೆಗಳಲ್ಲಿ ಈಶ್ವರನೂ ವಾಸಿಸುವರು. ಹೀಗೆ ಈ ವೃಕ್ಷವು ಸಂಪೂರ್ಣವಾಗಿ ಶಿವನಿಗೆ ಪ್ರಿಯವಾಗಿರುವುದು. ಶಿವನು ಕರ್ಪೂರ ಧವಳನಾಗಿರುವಂತೆಯೇ ಈ ವೃಕ್ಷವೂ ಸಹ ಬ್ರಹ್ಮರೂಪವೂ, ಶ್ವೇತವರ್ಣವೂ ಆಗಿರುವುದು. ಇದನ್ನು ಧ್ಯಾನಿಸುವುದರಿಂದ ಶತ್ರುನಾಶವೂ, ಪಾಪನಿವಾರಣೆಯೂ, ಮನೋರಥಲಾಭವೂ ನಿಶ್ಚಯವಾಗಿ ಆಗುವುದು. ಚಾತುರ್ಮಾಸ್ಯದಲ್ಲಿ ಗುರುವಾರದ ದಿನ ಇದನ್ನು ಪೂಜಿಸಿ, ಸ್ತುತಿಸಿ, ಧ್ಯಾನಿಸಿದರೆ ಸಮಸ್ತ ದುಃಖಗಳೂ ಪರಿಹಾರವಾಗುವುವು.

ದೇವಸ್ತುತ್ಯೋ ದೇವಬೀಜಂ ಪರಂ ಯ
ನ್ಮೂರ್ತಂ ಬ್ರಹ್ಮ ಬ್ರಹ್ಮವೃಕ್ಷತ್ವಮಾಪ್ತಂ ।
ನಿತ್ಯಂ ಸೇವ್ಯಃ ಶ್ರದ್ಧಯಾ ಸ್ಥಾಣುರೂಪ
ಶ್ಚಾತುರ್ಮಾಸ್ಯೇ ಸೇವಿತಃ ಪಾಪಹಾ ಸ್ಯಾತ್ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಲಾಶಮಹಿಮವರ್ಣನಂ" ನಾಮ
ಅಷ್ಟಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

೧೫. ದೇವಸ್ತುತ್ಯನೂ, ದೇವತೆಗಳಿಗೆ ಕಾರಣನೂ ಆದ ಬ್ರಹ್ಮನು ಬ್ರಹ್ಮವೃಕ್ಷತ್ವವನ್ನು ಹೊಂದಿರುವುದರಿಂದ ವೃಕ್ಷರೂಪನಾದ ಆ ಬ್ರಹ್ಮನನ್ನು ನಿತ್ಯವೂ ಶ್ರದ್ಧೆಯಿಂದ ಸೇವಿಸಬೇಕು. ಚಾತುರ್ಮಾಸ್ಯದಲ್ಲಿ ಸೇವಿಸಿದರೆ ಪಾಪ ನಿವಾರಣೆಯಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಲಾಶಮಹಿಮವರ್ಣನ"ವೆಂಬ
ಇನ್ನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ತುಲಸೀಮಾಹಾತ್ಮ್ಯವರ್ಣನಂ

ವಾಣ್ಯುವಾಚ :—

ತುಲಸೀ ರೋಪಿತಾ ಯೇನ ಗೃಹಸ್ಥೇನ ಮಹಾಫಲಾ ।
ಗೃಹೇ ತಸ್ಯ ನ ದಾರಿದ್ರ್ಯಂ ಜಾಯತೇ ನಾಽತ್ರ ಸಂಶಯಃ ॥ ೧ ॥
ತುಲಸ್ಯಾ ದರ್ಶನಾದೇವ ಪಾಪರಾಶಿರ್ನಿವರ್ತತೇ ।
ಶ್ರಿಯೋಽಮೃತ ಕಣೋತ್ಪನ್ನಾ ತುಲಸೀ ಹರಿವಲ್ಲಭಾ ॥ ೨ ॥
ಪಿಬಂತ್ಯಾ ರುಚಿರಂ ಪಾನಂ ಪ್ರಾಣಿನಾಂ ಪಾಪಹಾರಿಣೀ ।
ಯಸ್ಯಾ ರೂಪೇ ವಸೇಲ್ಲಕ್ಷ್ಮೀಃ ಸ್ಕಂಧೇ ಸಾಗರಸಂಭವಾ ॥ ೩ ॥
ಪತ್ರೇಷು ಸತತಂ ಶ್ರೀಶ್ಚ ಶಾಖಾಸು ಕಮಲಾ ಸ್ವಯಂ ।
ಇಂದಿರಾ ಪುಷ್ಪಗಾ ನಿತ್ಯಂ ಫಲೇ ಕ್ಷೀರಾಬ್ಧಿಸಂಭವಾ ॥ ೪ ॥
ತುಲಸೀ ಶುಷ್ಕಕಾಷ್ಠೇಷು ಯಾ ರೂಪಾ ವಿಶ್ವವ್ಯಾಪಿನೀ ।
ಮಜ್ಜಾಯಾಂ ಪದ್ಮವಾಸಾ ಚ ತ್ವಚಾಸು ಚ ಹರಿಪ್ರಿಯಾ ॥ ೫ ॥
ಸರ್ವರೂಪಾ ಚ ಸರ್ವೇಶಾ ಪರಮಾನಂದದಾಯಿನೀ ।
ತುಲಸೀ ಪ್ರಾಶಕೋ ಮರ್ತ್ಯೋ ಯಮಲೋಕಂ ನ ಗಚ್ಛತಿ ॥ ೬ ॥

---

## ಕನ್ನಡದ ಅನುವಾದ

### ತುಲಸೀಮಾಹಾತ್ಮ್ಯವರ್ಣನ

೧. ವಾಣಿಯು ಹೇಳುತ್ತಾಳೆ:—ಅತಿಶಯ ಫಲವನ್ನು ನೀಡುವ ತುಲಸಿಯನ್ನು ನೆಟ್ಟವನ ಮನೆಯಲ್ಲಿ ನಿಜವಾಗಿಯೂ ಬಡತನವುಂಟಾಗುವುದಿಲ್ಲ.

೨–೬. ತುಲಸೀದರ್ಶನದಿಂದಲೇ ಪಾಪರಾಶಿಯು ತೊಲಗುವುದು. ಅಮೃತ ಕಣದಿಂದ ಹುಟ್ಟಿರುವುದೂ, ಹರಿಪ್ರಿಯವೂ, ಮನೋಹರ ಜಲವನ್ನು ಕುಡಿಯುವುದೂ, ಪ್ರಾಣಿಗಳ ಪಾಪವನ್ನು ನಿವಾರಿಸುವುದೂ ಆದ ತುಲಸಿಯು ಸಂಪತ್ತನ್ನುಂಟುಮಾಡುವುದು. ಇದರ ಆಕೃತಿಯಲ್ಲಿ ಲಕ್ಷ್ಮಿಯೂ, ಕಾಂಡದಲ್ಲಿ ಸಾಗರತನಯಳೂ, ಎಲೆಗಳಲ್ಲಿ ಶ್ರೀಯೂ, ಶಾಖೆಗಳಲ್ಲಿ ಕಮಲೆಯೂ, ಹೂವಿನಲ್ಲಿ ಇಂದಿರೆಯೂ, ಬೀಜದಲ್ಲಿ ಕ್ಷೀರಸಾಗರತನುಜೆಯೂ, ಒಣಗಿದ ತುಲಸೀಕಾಷ್ಠದಲ್ಲಿ ವಿಶ್ವವ್ಯಾಪಿನಿಯೂ, ಮಜ್ಜೆಯಲ್ಲಿ ಪದ್ಮವಾಸೆಯೂ, ತೊಗಟೆಯಲ್ಲಿ ಸರ್ವರೂಪಳೂ, ಸರ್ವೇಶಳೂ, ಅತ್ಯಾನಂದದಾಯಿನಿಯೂ ಆದ ಹರಿಪ್ರಿಯೆಯೂ ವಾಸಿಸುವರು. ತುಲಸೀದಳವನ್ನು ಭಕ್ಷಿಸುವ ಮಾನವನು ಯಮಲೋಕಕ್ಕೆ ತೆರಳುವುದಿಲ್ಲ.

ಶಿರಸ್ಥಾ ತುಲಸೀ ಯಸ್ಯ ನಯಾಮ್ಯೈರಸುಭೂಯತೇ ।
ಮುಖಸ್ಥಾ ತುಲಸೀ ಯಸ್ಯ ನಿರ್ವಾಣಪದದಾಯಿನೀ ॥ ೭ ॥
ಹಸ್ತಸ್ಥಾ ತುಲಸೀ ಯಸ್ಯ ಸ ತಾಪತ್ರಯವರ್ಜಿತಃ ।
ತುಲಸೀ ಹೃದಯಸ್ಥಾ ಚ ಪ್ರಾಣಿನಾಂ ಸರ್ವಕಾಮದಾ ॥ ೮ ॥
ಸ್ಕಂಧಸ್ಥಾ ತುಲಸೀ ಯಸ್ಯ ಸ ಪಾಪೈರ್ನ ಚ ಲಿಪ್ಯತೇ ।
ಕಂಠಗಾ ತುಲಸೀ ಯಸ್ಯ ಜೀವನ್ಮುಕ್ತಃ ಸದಾ ಹಿ ಸಃ ॥ ೯ ॥
ತುಲಸೀ ಸಂಭವಂ ಪತ್ರಂ ಸದಾ ವಹತಿ ಯೋ ನರಃ ।
ಮನಸಾ ಚಿಂತಿತಾಂ ಸಿದ್ಧಿಂ ಸಂಪ್ರಾಪ್ನೋತಿ ನ ಸಂಶಯಃ ॥ ೧೦ ॥
ತುಲಸೀಂ ಸರ್ವಕಾರ್ಯಾರ್ಥಸಾಧಿನೀಂ ದುಷ್ಟವಾರಿಣೀಂ ।
ಯೋ ನರಃ ಪ್ರತ್ಯಹಂ ಸಿಂಚೇನ್ನ ಸ ಯಾತಿ ಯಮಾಲಯಂ ॥ ೧೧ ॥
ಚಾತುರ್ಮಾಸ್ಯೇ ವಿಶೇಷೇಣ ವಂದಿತಾಽಪಿ ವಿಮುಕ್ತಿದಾ ।
ನಾರಾಯಣಂ ಜಲಗತಂ ಜ್ಞಾತ್ವಾ ವೃಕ್ಷಗತಂ ತಥಾ ॥ ೧೨ ॥
ಪ್ರಾಣಿನಾಂ ಕೃಪಯಾ ಲಕ್ಷ್ಮೀಸ್ತುಲಸೀವೃಕ್ಷಮಾಶ್ರಿತಾ ।
ಚಾತುರ್ಮಾಸ್ಯೇ ಸಮಾಯಾತೇ ತುಲಸೀ ಸೇವಿತಾ ಯದಿ ॥ ೧೩ ॥

---

೭–೮. ತುಲಸಿಯನ್ನು ಶಿರಸ್ಸಿನಲ್ಲಿಟ್ಟಿರುವವನನ್ನು ಯಮಭಟರು ಮುಟ್ಟು ವುದಿಲ್ಲ. ಬಾಯಿಯಲ್ಲಿರುವ ತುಲಸಿಯು ಮೋಕ್ಷವನ್ನೀಯುವುದು. ಕೈಯಲ್ಲಿ ತುಲಸಿಯನ್ನು ಹಿಡಿದಿರುವವನು ತಾಪತ್ರಯಮುಕ್ತನಾಗುವನು. ಎದೆಯಲ್ಲಿರುವ ತುಲಸಿಯು ಪ್ರಾಣಿಗಳಿಗೆ ಸಕಲೇಷ್ಟಾರ್ಥಗಳನ್ನು ನೀಡುವುದು.

೯. ಭುಜದಲ್ಲಿ ತುಲಸಿಯನ್ನಿಟ್ಟಿರುವವನು ಪಾಪಲಿಪ್ತನಾಗುವುದಿಲ್ಲ. ಕಂಠ ವಲ್ಲಿ ತುಲಸಿಯನ್ನು ಧರಿಸಿರುವವನು ಯಾವಾಗಲೂ ಜೀವನ್ಮುಕ್ತನೇ.

೧೦. ತುಲಸೀದಳವನ್ನು ಶರೀರದಲ್ಲಿ ಯಾವಾಗಲೂ ಧರಿಸಿರುವವನು ನಿಜ ವಾಗಿಯೂ ಮನಸ್ಸಿನಿಂದ ಆಲೋಚಿಸಿದ ಸಿದ್ಧಿಯನ್ನು ಪಡೆಯುವನು.

೧೧. ಸಕಲ ಕಾರ್ಯಾರ್ಥಗಳನ್ನು ಸಾಧಿಸುವುದೂ, ದುಷ್ಟರನ್ನು ನಿವಾರಿಸು ವುದೂ ಆದ ತುಲಸಿಗೆ ಪ್ರತಿದಿನವೂ ನೀರನ್ನೆರೆಯುವವನು ಯಮಪುರಿಗೆ ಹೋಗು ವುದಿಲ್ಲ.

೧೨–೧೮. ಈ ತುಲಸಿಯು ಚಾತುರ್ಮಾಸ್ಯದಲ್ಲಿ ನಮಸ್ಕಾರ ಮಾಡಿದರೆ ಮೋಕ್ಷವನ್ನೀಯುವುದು. ನಾರಾಯಣನು ಜಲ ಮತ್ತು ವೃಕ್ಷಗಳಲ್ಲಿರುವುದನ್ನು ತಿಳಿದು ಲಕ್ಷ್ಮಿಯು ಪ್ರಾಣಿಗಳ ಮೇಲಿರುವ ದಯೆಯಿಂದ ತುಲಸೀಗಿಡವನ್ನಾಶ್ರಯಿ ಸಿದಳು. ಚಾತುರ್ಮಾಸ್ಯದಲ್ಲಿ ತುಲಸಿಯನ್ನು ಸೇವಿಸಿದವರ ಅನೇಕ ಪಾಪಗಳು ಪರಿಹಾರವಾಗುವುವು. ಚಾತುರ್ಮಾಸ್ಯದಲ್ಲಿ ನಿತ್ಯವೂ ಗೋವಿಂದ ಸ್ಮರಣೆಯೂ,

ತೇಷಾಂ ಪಾಪಸಹಸ್ರಾಣಿ ಯಾಂತಿ ನಿತ್ಯಂ ಸಹಸ್ರಧಾ ।
ಗೋವಿಂದಸ್ಮರಣಂ ನಿತ್ಯಂ ತುಲಸೀವನಸೇವನಂ ॥ ೧೪ ॥
ತುಲಸೀಸೇಚನಂ ದುಗ್ಧೈಃ ಲಭ್ಯತೇ ತು ಪರ್ವಾಸ್ಯೈಃಽತಿದುರ್ಲಭಂ ।
ತುಲಸೀಂ ವರ್ಧಯೇದ್ಯಸ್ತು ಮಾನವೋ ಯದಿ ಶ್ರದ್ಧಯಾ ॥ ೧೫ ॥
ಆಲವಾಲಾಂಬುದಾನೈಶ್ಚ ಪಾವಿತಂ ಸಕಲಂ ಕುಲಂ ।
ಯಥಾ ಶ್ರೀಸ್ತುಲಸೀ ಸಂಸ್ಥಾ ನಿತ್ಯಮೇವ ಹಿ ವರ್ಧತೇ ॥ ೧೬ ॥
ತಥಾ ತಥಾ ಗೃಹಸ್ಥಸ್ಯ ಕಾಮವೃದ್ಧಿಃ ಪ್ರಜಾಯತೇ ।
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ॥ ೧೭ ॥
ತಥಾ ಪ್ರಕೃತಯಃ ಸರ್ವಾಸ್ತುಲಸೀ ಸೇವನೇ ರತಾಃ ।
ಶ್ರದ್ಧಯಾ ಯದಿ ಜಾಯಂತೇ ನ ತಾಸಾಂ ದುಃಖದೋ ಹರಿಃ ॥ ೧೮ ॥

ಏಕೋ ಹರಿಃ ಸಕಲ ವೃಕ್ಷಗತೋ ವಿಭಾತಿ
ನಾನಾರಸೈಸ್ತು ಪರಿಭಾವಿತ ಮೂರ್ತಿರೇವ ।
ವೃಕ್ಷಾದಿವಾಸಮಗಮತ್ಕಮಲಾ ಚ ದೇವೀ
ದುಃಖಾದಿನಾಶನಕರೀ ಸತತಂ ಸ್ಮೃತಾಪಿ ॥ ೧೯ ॥

ಇತಿ ಶ್ರೀ ಸ್ಕಾಂದೇಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತುಲಸೀಮಾಹಾತ್ಮ್ಯವರ್ಣನಂ"
ನಾಮೈಕೋನಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

ತುಲಸೀವನ ಸೇವನೆಯೂ, ಹಾಲಿನಿಂದ ತುಲಸೀ ಸೇಚನೆಯೂ ಅತ್ಯಂತ ದುರ್ಲಭವು. ತುಲಸಿಗೆ ಪಾತಿಯನ್ನು ಕಟ್ಟಿ ನೀರನ್ನು ಹಾಕಿ ಶ್ರದ್ಧೆಯಿಂದ ಬೆಳೆಸುವವನ ಸಮಸ್ತ ಕುಲಗಳೂ ಪವಿತ್ರವಾಗುವುವು. ತುಲಸಿಯಲ್ಲಿರುವ ಲಕ್ಷ್ಮಿಯು ನಿತ್ಯವೂ ವೃದ್ಧಿಯಾದಹಾಗೆಲ್ಲ ಗೃಹಸ್ಥನ ಇಷ್ಟಾರ್ಥವೂ ಅಭಿವೃದ್ಧಿಗೊಳ್ಳುವುದು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ, ಹಾಗೆಯೇ ಸಕಲ ಜನಗಳೂ ತುಲಸೀ ಸೇವನೆಯಲ್ಲಿ ನಿರತರಾದರೆ ಶ್ರೀಹರಿಯು ಅವರ ದುಃಖವನ್ನು ಪರಿಹರಿಸುತ್ತಾನೆ.

೧೯. ಒಬ್ಬನೇ ವಿಷ್ಣುವು ಸಮಗ್ರವೃಕ್ಷದಲ್ಲಿದ್ದು ಅನೇಕ ರಸಗಳಿಂದುಂಟಾದ ಶರೀರವುಳ್ಳವನಾಗಿ ಪ್ರಕಾಶಿಸುತ್ತಾನೆ. ಆದರಿಂದ ಲಕ್ಷ್ಮಿಯೂ ವೃಕ್ಷದಲ್ಲಿ ವಾಸಿಸುವಳು. ಆಕೆಯನ್ನು ಯಾವಾಗಲೂ ಸ್ಮರಿಸಿದರೆ ದುಃಖಾದಿಗಳನ್ನು ನೀಗಿಸುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತುಲಸೀಮಾಹಾತ್ಮ್ಯವರ್ಣನ"ವೆಂಬ
ಇನ್ನೂರ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಬಿಲ್ವೋತ್ಪತ್ತಿ ವರ್ಣನಂ

ವಾಣ್ಯುವಾಚ :—

ಬಿಲ್ವಪತ್ರಸ್ಯ ಮಾಹಾತ್ಮ್ಯಂ ಕಥಿತುಂ ನೈವ ಶಕ್ಯತೇ ।
ತವೋದ್ದೇಶೇನ ವಕ್ಷ್ಯಾಮಿ ಮಹೇಂದ್ರ ಶೃಣು ತತ್ತ್ವತಃ ॥ ೧ ॥
ವಿಹಾರ ಶ್ರಮಮಾಪನ್ನಾ ದೇವೀ ಗಿರಿಸುತಾ ಶುಭಾ ।
ಲಲಾಟಫಲಕೇ ತಸ್ಯಾಃ ಸ್ವೇದಬಿಂದು ರಜಾಯತ ॥ ೨ ॥
ಸ ಭವಾನ್ಯಾ ವಿನಿಕ್ಷಿಪ್ತೋ ಭೂತಲೇ ನಿಪಪಾತ ಚ ।
ಮಹಾತರುರಯಂ ಜಾತೋ ಮಂದರೇ ಪರ್ವತೋಪಮೇ ॥ ೩ ॥
ತತಃ ಶೈಲಸುತಾ ತತ್ರ ರಮಮಾಣಾ ಯದೃಚ್ಛಯಾ ಪುನಃ ।
ದೃಷ್ಟ್ವಾ ವನಗತಂ ವೃಕ್ಷಂ ವಿಸ್ಮಯೋತ್ಫುಲ್ಲಲೋಚನಾ ॥ ೪ ॥
ಜಯಾಂ ಚ ವಿಜಯಾಂ ಚೈವ ಪಪ್ರಚ್ಛ ಚ ಸಖೀದ್ವಯಂ ।
ಕೋಽಯಂ ಮಹಾತರುರ್ದಿವ್ಯೋ ವಿಭಾತಿ ವನಮಧ್ಯಗಃ ।
ದೃಶ್ಯತೇ ರುಚಿರಾಕಾರೋ ಮಹಾಹರ್ಷಕರೋಽಹ್ಯಯಂ ॥ ೫ ॥

ಜಯೋವಾಚ :—

ದೇವಿ ತ್ವದ್ದೇಹಸಂಭೂತೋ ವೃಕ್ಷೋಽಯಂ ಸ್ವೇದಬಿಂದುಜಃ ।
ನಾಮಾಽಸ್ಯ ಕುರು ವೈ ಕ್ಷಿಪ್ರಂ ಪೂಜಿತಃ ಪಾಪನಾಶನಃ ॥ ೬ ॥

---

## ಕನ್ನಡದ ಅನುವಾದ

### ಬಿಲ್ವೋತ್ಪತ್ತಿ ವರ್ಣನ

೧-೩. ವಾಣಿಯು ಹೇಳುತ್ತಾಳೆ:—ಮಹೇಂದ್ರ! ಬಿಲ್ವಪತ್ರೆಯ ಮಾಹಾತ್ಮೆಯನ್ನು ಇಂತೆಂದು ಹೇಳಲು ಸಾಧ್ಯವಿಲ್ಲ. ಆದರೂ ನಿನಗಾಗಿ ಅದನ್ನು ಹೇಳುತ್ತೇನೆ ಕೇಳು. ಪಾರ್ವತಿಗೆ ವಿಹಾರಶ್ರಮದಿಂದ ಹಣೆಯಲ್ಲಿ ಬೆವರಿನ ಹನಿಯುಂಟಾಯಿತು. ಅವಳು ಅದನ್ನು ಮಂದರಪರ್ವತದಲ್ಲಿ ನೆಲದ ಮೇಲೆ ಬೀಳಿಸಲು ಅದು ದೊಡ್ಡ ಮರವಾಯಿತು.

೪-೫. ತರುವಾಯ ಪಾರ್ವತಿಯು ಅಲ್ಲಿ ವಿಹರಿಸುತ್ತ ವನದಲ್ಲಿ ಬೆಳೆದಿರುವ ಆ ವೃಕ್ಷವನ್ನು ಕಂಡು ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವಳಾಗಿ ಜಯಾ, ವಿಜಯಾ ಎಂಬ ಇಬ್ಬರು ಸಖಿಯರನ್ನು ಕುರಿತು ಈ ಕಾಡಿನ ನಡುವೆ ಮನೋಹರಾಕಾರವುಳ್ಳುದೂ, ಅತಿಶಯ ಸಂತೋಷವನ್ನುಂಟುಮಾಡುವುದೂ ಆಗಿ ಕಾಣುತ್ತಿರುವ ಈ ದೊಡ್ಡ ವೃಕ್ಷವಾವುದು? ಎಂದು ಪ್ರಶ್ನಿಸಿದಳು.

೬. ಜಯೆಯು ಹೇಳುತ್ತಾಳೆ:—ದೇವಿ! ಇದು ನಿನ್ನ ಶರೀರದ ಬೆವರಿನ ಹನಿಯಿಂದ ಹುಟ್ಟಿದ ವೃಕ್ಷವು. ಶೀಘ್ರವಾಗಿ ಇದಕ್ಕೊಂದು ಹೆಸರನ್ನಿಡು. ಇದನ್ನು ಪೂಜಿಸುವುದರಿಂದ ಪಾಪವನ್ನು ಪರಿಹರಿಸುವುದು.

ಪಾರ್ವತ್ಯುವಾಚ :—

ಯಸ್ಮಾತ್ಕ್ಷೋಣೀತಲಂ ಭಿತ್ವಾ ವಿಶಿಷ್ಟೋಽಯಂ ಮಹಾತರುಃ ॥ ೭ ॥
ಉದತಿಷ್ಠತ್ಸನ್ನಿಧೌ ಮೇ ತಸ್ಮಾದ್ಬಿಲ್ವೋ ಭವತ್ವಯಂ ।
ಇಮಂ ವೃಕ್ಷಂ ಸಮಾಸಾದ್ಯ ಭಕ್ತಿತಃ ಪತ್ರಸಂಚಯಂ ॥ ೮ ॥
ಆಹರಿಷ್ಯತ್ಯಸೌ ರಾಜಾ ಭವಿಷ್ಯತ್ಯೇವ ಭೂತಲೇ ।
ಯಃ ಕರಿಷ್ಯತಿ ಮೇ ಪೂಜಾಂ ಪತ್ರೈಃ ಶ್ರದ್ಧಾಸಮನ್ವಿತಃ ॥ ೯ ॥
ಯಂ ಯಂ ಕಾಮಮಭಿಧ್ಯಾಯೇತ್ತಸ್ಯ ಸಿದ್ಧಿಃ ಪ್ರಜಾಯತೇ ।
ಯೋ ದೃಷ್ಟ್ವಾ ಬಿಲ್ವಪತ್ರಾಣಿ ಶ್ರದ್ಧಾಮಪಿ ಕರಿಷ್ಯತಿ ॥ ೧೦ ॥
ಪೂಜನಾರ್ಥಾಯ ವಿಧಯೇ ಧನದಾಽಹಂ ನ ಸಂಶಯಃ ।
ಪತ್ರಾಗ್ರಪ್ರಾಶನೇ ಯಸ್ತು ಕರಿಷ್ಯತಿ ಮನೋ ಯದಿ ।
ತಸ್ಯ ಪಾಪಸಹಸ್ರಾಣಿ ಯಾಸ್ಯಂತಿ ವಿಲಯಂ ಸ್ವಯಂ ॥ ೧೧ ॥
ಶಿರಃ ಪತ್ರಾಗ್ರಸಂಯುಕ್ತಂ ಕರೋತಿ ಯದಿ ಮಾನವಃ ।
ನ ಯಾಮ್ಯಾ ಯಾತನಾಹ್ಯಸ್ಯ ದುಃಖದಾತ್ರೀ ಭವಿಷ್ಯತಿ ॥ ೧೨ ॥
ಇತ್ಯುಕ್ತ್ವಾ ಪಾರ್ವತೀ ಹೃಷ್ಟಾ ಜಗಾಮ ಭವನಂ ಸ್ವಕಂ ।
ಸಖೀಭಿಃ ಸಹಿತಾ ದೇವೀ ಗಣೈರಪಿ ಸಮನ್ವಿತಾ ॥ ೧೩ ॥

ವಾಣ್ಯುವಾಚ :—

ಅಯಂ ಬಿಲ್ವತರುಃ ಶ್ರೇಷ್ಠಃ ಪವಿತ್ರಃ ಪಾಪನಾಶನಃ ।
ತಸ್ಯ ಮೂಲೇ ಸ್ಥಿತಾ ದೇವೀ ಗಿರಿಜಾ ನಾಽತ್ರ ಸಂಶಯಃ ॥ ೧೪ ॥

---

೭–೧೧. ಪಾರ್ವತಿಯು ಹೇಳುತ್ತಾಳೆ :—ಈ ವೃಕ್ಷವು ಭೂಮಿಯನ್ನು ಭೇದಿಸಿಕೊಂಡು ನನ್ನ ಹತ್ತಿರವೇ ಮೇಲಕ್ಕೆ ಬಂದದ್ದರಿಂದ ಬಿಲ್ವ ಎಂಬ ಹೆಸರನ್ನು ಪಡೆಯಲಿ. ಭಕ್ತಿಯಿಂದ ಇದರ ಎಲೆಯನ್ನು ತರುವವನು ಭೂಮಿಯಲ್ಲಿ ರಾಜನಾಗುವನು. ಇದರ ಪತ್ರೆಗಳಿಂದ ನನ್ನನ್ನು ಶ್ರದ್ಧೆಯಿಂದ ಪೂಜಿಸುವವನ ಇಷ್ಟಾರ್ಥಗಳು ಸಿದ್ಧಿಸುವುವು. ಈ ಬಿಲ್ವಪತ್ರೆಗಳನ್ನು ನೋಡಿ ವಿಧಿಯಿಂದ ಪೂಜಿಸುವ ಶ್ರದ್ಧಾವಂತನಿಗೆ ನಾನು ನಿಜವಾಗಿಯೂ ದ್ರವ್ಯವನ್ನು ಕೊಡುವೆನು. ಈ ಪತ್ರೆಗಳ ಅಗ್ರಗಳನ್ನು ಭಕ್ಷಿಸ ಬಯಸುವವನ ಅನೇಕ ಪಾಪಗಳು ನಾಶವಾಗುವುವು.

೧೨. ಬಿಲ್ವಪತ್ರಾಗ್ರವನ್ನು ತಲೆಯಲ್ಲಿ ತಾಳುವ ಮಾನವನಿಗೆ ಯಮಯಾತನೆಯ ದುಃಖವುಂಟಾಗುವುದಿಲ್ಲ.

೧೩. ಪಾರ್ವತಿಯು ಹೀಗೆ ಹೇಳಿ ಸಂತೋಷಗೊಂಡು ಸಖಿಯರಿಂದಲೂ, ಗಣಗಳಿಂದಲೂ ಸಹಿತಳಾಗಿ ತನ್ನ ಮನೆಗೆ ತೆರಳಿದಳು.

೧೪–೧೭. ವಾಣಿಯು ಹೇಳುತ್ತಾಳೆ:— ಈ ಬಿಲ್ವವೃಕ್ಷವು ಶ್ರೇಷ್ಠವೂ, ಪವಿತ್ರವೂ, ಪಾಪವನ್ನು ಪರಿಹರಿಸುವುದೂ ಆಗಿರುವುದು. ಇದರ ಬುಡದಲ್ಲಿ

ಸ್ಕಂಧೇ ದಾಕ್ಷಾಯಣೀ ದೇವೀ ಶಾಖಾಸು ಚ ಮಹೇಶ್ವರೀ ।
ಪತ್ರೇಷು ಪಾರ್ವತೀ ದೇವೀ ಫಲೇ ಕಾತ್ಯಾಯನೀ ಸ್ಮೃತಾ ॥ ೧೫ ॥
ತ್ವಚಿ ಗೌರೀ ಸಮಾಖ್ಯಾತಾ ಅಪರ್ಣಾ ಮಧ್ಯವಲ್ಕಲೇ ।
ಪುಷ್ಪೇ ದುರ್ಗಾ ಸಮಾಖ್ಯಾತಾ ಉಮಾ ಶಾಖಾಂಗಕೇಷು ಚ ॥ ೧೬ ॥
ಕಂಟಕೇಷು ಚ ಸರ್ವೇಷು ಕೋಟಿಯೋ ನವಸಂಖ್ಯಯಾ ।
ಶಕ್ತಯಃ ಪ್ರಾಣಿರಕ್ಷಾರ್ಥಂ ಸಂಸ್ಥಿತಾ ಗಿರಿಜಾಽಽಜ್ಞಯಾ ॥ ೧೭ ॥
ತಾಂ ಭಜಂತಿ ಸುಪುತ್ರೈಶ್ಚ ಪೂಜಯಂತಿ ಸನಾತನೀಂ ।
ಯಂ ಯಂ ಕಾಮಯತೇ ಕಾಮಂ ತಸ್ಯ ಸಿದ್ಧಿರ್ಭವೇದ್ಧ್ರುವಂ ॥ ೧೮ ॥

ಮಹೇಶ್ವರೀ ಸಾ ಗಿರಿಜಾ ಮಹೇಶ್ವರೀ
ವಿಶುದ್ಧರೂಪಾ ಜನಮೋಕ್ಷದಾತ್ರೀ ।
ಹರಂ ಚ ದೃಷ್ಟ್ವಾಽಥ ಪಲಾಶಮಾಶ್ರಿತಂ
ಸ್ವಲೀಲಯಾ ಬಿಲ್ವವಪುಶ್ಚಕಾರ ಸಾ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬಿಲ್ವೋತ್ಪತ್ತಿವರ್ಣನಂ" ನಾಮ
ಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

ಗಿರಿಜಾದೇವಿಯೂ, ಕಾಂಡದಲ್ಲಿ ದಾಕ್ಷಾಯಣಿಯೂ, ಕೊಂಬೆಗಳಲ್ಲಿ ಮಹೇಶ್ವರಿಯೂ, ಎಲೆಗಳಲ್ಲಿ ಪಾರ್ವತಿಯೂ, ಫಲದಲ್ಲಿ ಕಾತ್ಯಾಯನಿಯೂ, ತೊಗಟೆಯಲ್ಲಿ ಗೌರಿಯೂ, ನಡುವಿನ ತೊಗಟೆಯಲ್ಲಿ ಅಪರ್ಣೆಯೂ, ಪುಷ್ಪದಲ್ಲಿ ದುರ್ಗೆಯೂ, ಉಪಶಾಖೆಗಳಲ್ಲಿ ಉಮೆಯೂ ಸಾಕ್ಷಾತ್ತಾಗಿ ನೆಲೆಸಿರುವರು. ಸಮಸ್ತ ಕಂಟಕಗಳಲ್ಲಿಯೂ ಒಂಬತ್ತುಕೋಟಿ ಶಕ್ತಿಗಳು ಪಾರ್ವತಿಯ ಆಜ್ಞೆಯಿಂದ ಪ್ರಾಣಿಗಳ ರಕ್ಷಣೆಗಾಗಿ ನೆಲೆಸಿರುವುವು.

೧೮. ಆ ಪಾರ್ವತಿಯನ್ನು ಸೇವಿಸುವವರೂ, ಒಳ್ಳೆ ಬಿಲ್ವಪತ್ರೆಗಳಿಂದ ಪೂಜಿಸುವವರೂ ಆದ ಮಾನವರ ಇಷ್ಟಾರ್ಥಗಳು ಸಿದ್ಧಿಸುವುವು.

೧೯. ವಿಶುದ್ಧರೂಪಳೂ, ಜನರಿಗೆ ಮೋಕ್ಷವನ್ನು ಕೊಡುವವಳೂ ಆದ ಆ ಪಾರ್ವತಿಯು ಪಲಾಶವೃಕ್ಷವನ್ನಾಶ್ರಯಿಸಿರುವ ಹರನನ್ನು ನೋಡಿ ತಾನೂ ಲೀಲೆಯಿಂದ ಬಿಲ್ವವೃಕ್ಷರೂಪಳಾದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬಿಲ್ವೋತ್ಪತ್ತಿವರ್ಣನ"ವೆಂಬ
ಇನ್ನೂರ ಐವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ವಿಷ್ಣುಶಾಪವರ್ಣನಂ

ಗಾಲವ ಉವಾಚ :—

ಇತ್ಯುಕ್ತ್ವಾಽಽಕಾಶಜಾ ವಾಣೀ ವಿರರಾಮ ಶುಭಪ್ರದಾ ।
ತೇಽಪಿ ದೇವಾಸ್ತದಾಽಽಶ್ಚರ್ಯಂ ಮಹದ್ದೃಷ್ಟ್ವಾ ಮಹಾವ್ರತಾಃ ॥ ೧ ॥
ಚತುಷ್ಟಯಂ ಚ ವೃಕ್ಷಾಣಾಂ ಚಾತುರ್ಮಾಸ್ಯೇ ಸಮಾಗತೇ ।
ಅಪೂಜಯಂಶ್ಚ ವಿಧಿವದೈಕ್ಯಭಾವೇನ ಶೂದ್ರಜ ॥ ೨ ॥
ಚಾತುರ್ಮಾಸ್ಯೇಽಥ ಸಂಪೂರ್ಣೇ ದೇವೋ ಹರಿಹರಾತ್ಮಕಃ ।
ಪ್ರಸನ್ನಸ್ತಾನುವಾಚಾಽಥ ಭಕ್ತ್ಯಾ ಪ್ರತ್ಯಕ್ಷರೂಪಧೃಕ್ ॥ ೩ ॥
ಯೂಯಂ ಗಚ್ಛತ ದೇವೇಶಾ ಮಹಾವ್ರತಪರಾಯಣಾಃ ।
ಭುಂಕ್ತ ಸ್ವಾಂ ಸ್ವಾಂಶ್ಚಾಽಧಿಕಾರಾನ್ಮಯಾ ತೇ ದಾನವಾ ಹತಾಃ ॥ ೪ ॥

---

### ಕನ್ನಡದ ಅನುವಾದ

#### ವಿಷ್ಣುಶಾಪವರ್ಣನ

೧–೨. ಗಾಲವನು ಹೇಳುತ್ತಾನೆ:— ಶುಭಪ್ರದವಾದ ಆಕಾಶವಾಣಿಯು ಹೀಗೆ ಹೇಳಿ ಸುಮ್ಮನಾಯಿತು. ಆ ದೇವತೆಗಳೂ ಆ ಮಹಾಶ್ಚರ್ಯವನ್ನು ನೋಡಿ ಚಾತುರ್ಮಾಸ್ಯವು ಬರಲು ಅತಿಶಯವಾದ ವ್ರತವನ್ನಾಚರಿಸುತ್ತ ಆ ನಾಲ್ಕು ವೃಕ್ಷಗಳನ್ನು ಐಕ್ಯಭಾವನೆಯಿಂದ ವಿಧಿಪೂರ್ವಕವಾಗಿ ಪೂಜಿಸಿದರು.

೩. ಚಾತುರ್ಮಾಸ್ಯವು ಪೂರ್ತಿಯಾಗಲು ಹರಿಹರರೂಪನಾದ ಶಂಕರನು ಭಕ್ತಿಯಿಂದ ಪ್ರಸನ್ನನಾಗಿ ಪ್ರತ್ಯಕ್ಷರೂಪವನ್ನು ಧರಿಸಿ ಆ ದೇವತೆಗಳನ್ನು ಕುರಿತು ಇಂತೆಂದನು.

೪. "ಎಲೈ ದೇವತೆಗಳಿ! ನಾನು ಆ ದಾನವರನ್ನು ಕೊಂದಿರುವೆನು. ಆದುದರಿಂದ ವ್ರತನಿರತರಾದ ನೀವು ನಿಮ್ಮ ನಿಮ್ಮ ಅಧಿಕಾರಗಳನ್ನು ನೆರವೇರಿಸುತ್ತ ಸ್ವರ್ಗರಾಜ್ಯವನ್ನನುಭವಿಸಿರಿ."

ಇತ್ಯುಕ್ತ್ವಾ ದೇವದೇವೇಶಾವೈಕ್ಯರೂಪಧರೌ ಯದಾ ।
ಗಣಾನಾಂ ದೇವತಾನಾಂ ಚ ಬುದ್ಧಿಂ ನಿರ್ಭೇದತಾಂ ತದಾ ॥ ೫ ॥
ನಯಂತೌ ತೌ ತದಾ ಚೇಶೌ ಬಭೂವತುರರಿಂದಮೌ ।
ತೇಽಪಿ ದೇವಾ ನಿರಾಬಾಧಾ ಹೃಷ್ಟಚಿತ್ತಾ ಹ್ಯಭೇದತಃ ॥ ೬ ॥
ಪ್ರಯಯುಃ ಸ್ವಾಂಶಾಧಿಕಾರಾನ್ವಿಮಾನಗಣಕೋಟಿಭಿಃ ॥ ೭ ॥

ಗಾಲವ ಉವಾಚ :—

ತಥಾ ತತ್ರಾಽಪಿ ತೇ ದೇವಾಃ ಪಾರ್ವತ್ಯಾಃ ಶಾಪಮೋಹಿತಾಃ ।
ಸ್ತುತ್ವಾ ತಾಂ ಬಿಲ್ವಪತ್ರೈಶ್ಚ ಪೂಜಯಿತ್ವಾ ಮಹೇಶ್ವರೀಂ ।
ಪ್ರಸನ್ನವದನಾಂ ಸ್ತುತ್ವಾ ಪ್ರಣಿಪತ್ಯ ಪುನಃ ಪುನಃ ॥ ೮ ॥
ಸಾ ಪ್ರೋವಾಚ ತತೋ ದೇವಾನ್ ವಿಶ್ವಮಾತಾ ತು ಸಂಸ್ತುತಾ ।
ಮಮ ಶಾಪೋ ವೃಥಾ ನೈವ ಭವಿಷ್ಯತಿ ಸುರೋತ್ತಮಾಃ ॥ ೯ ॥
ತಥಾಽಪಿ ಕೃತಪಾಪಾನಾಂ ಕರವಾಣಿ ಕೃಪಾಂ ಚ ವಃ ।
ಸ್ವರ್ಗೇ ದೃಷನ್ಮಯಾ ನೈವ ಭವಿಷ್ಯಥ ಸುರೋತ್ತಮಾಃ ॥ ೧೦ ॥
ಮರ್ತ್ಯಲೋಕಂ ಚ ಸಂಪ್ರಾಪ್ಯ ಪ್ರತಿಮಾಸು ಚ ಸರ್ವಶಃ ।
ಸರ್ವೇ ದೇವಾಶ್ಚ ವರದಾ ಲೋಕಾನಾಂ ಪ್ರಭವಿಷ್ಯಥ ॥ ೧೧ ॥
ಪಾಣಿಗ್ರಹೇಣ ವಿಹಿತಾ ಯೇ ಕುಮಾರಾಃ ಕುಮಾರಿಕಾಃ ।
ತೇಷಾಂ ತೇಷಾಂ ಪ್ರಜಾಶ್ಚೈವ ಭವಿಷ್ಯಥ ನ ಸಂಶಯಃ ॥ ೧೨ ॥

---

೫–೭. ಐಕ್ಯರೂಪವನ್ನು ಧರಿಸಿದ ಆ ಹರಿಹರರು ಗಣಗಳಿಗೂ, ದೇವತೆಗಳಿಗೂ ಭೇದಬುದ್ಧಿಯನ್ನು ನಿವಾರಿಸುತ್ತ ಶತ್ರುಗಳನ್ನು ನಾಶಗೊಳಿಸಿದರು. ಅಭೇದಬುದ್ಧಿಯಿಂದ ಸಂತೋಷಗೊಂಡ ಆ ದೇವತೆಗಳು ಶತ್ರುಬಾಧೆಯಿಲ್ಲದವರಾಗಿ ಅನೇಕ ವಿಮಾನಗಳನ್ನೇರಿ ತಮ್ಮ ತಮ್ಮ ಅಧಿಕಾರಸ್ಥಾನಕ್ಕೆ ತೆರಳಿದರು.

೮. ಗಾಲವನು ಹೇಳುತ್ತಾನೆ:— ಅಲ್ಲಿಯೂ ಪಾರ್ವತಿಯ ಶಾಪದಿಂದ ಮೋಹಿತರಾದ ಆ ದೇವತೆಗಳು ಆ ಮಹೇಶ್ವರಿಯನ್ನು ಸ್ತುತಿಸಿ ಬಿಲ್ವಪತ್ರೆಗಳಿಂದ ಅರ್ಚಿಸಿ ಪ್ರಸನ್ನಳಾದ ಅವಳನ್ನು ನಮಸ್ಕರಿಸಿದರು.

೯. ಹೀಗೆ ಸ್ತುತಿಸಲ್ಪಟ್ಟ ಆ ಪಾರ್ವತಿಯು ದೇವತೆಗಳನ್ನು ಕುರಿತು ಹೀಗೆಂದಳು. "ಸುರವರ್ಯರೆ! ನನ್ನ ಶಾಪವು ವ್ಯರ್ಥವಾಗುವುದಿಲ್ಲ.

೧೦. ಹಾಗಾದರೂ ಪಾಪಮಾಡಿದ ನಿಮ್ಮ ಮೇಲೆ ದಯದೋರುವೆನು. ನೀವು ಸ್ವರ್ಗದಲ್ಲಿ ಕಲ್ಲಿನ ರೂಪದಲ್ಲಿರುವುದಿಲ್ಲ.

೧೧–೧೨. ಮನುಷ್ಯಲೋಕಕ್ಕೆ ಹೋಗಿ ಪ್ರತಿಮೆಗಳಲ್ಲಿ ಸನ್ನಿಹಿತರಾಗಿ ಭಕ್ತಜನರಿಗೆ ವರವನ್ನು ನೀಡಿರಿ. ಪಾಣಿಗ್ರಹಣ ಮಾಡಿಕೊಂಡ ಕುಮಾರ ಕುಮಾರಿಕೆಯರಿಗೆ ಸಂತತಿಯಾಗುವುದು.

ಇತ್ಯುಕ್ತ್ವಾ ಸಾ ಭಗವತೀ ದೇವತಾನಾಂ ವರಪ್ರದಾ ।
ವಿಷ್ಣುಂ ಮಹೇಶ್ವರಂ ಚೈವ ಪ್ರೋವಾಚ ಕುಪಿತಾ ಭೃಶಂ ॥ ೧೩ ॥
ದೇವಾಸ್ತಸ್ಯಾಭಯಾನ್ನಷ್ಟಾ ಮರ್ತ್ಯೇಷು ಪ್ರತಿಮಾಂ ಗತಾಃ ।
ಭಕ್ತಾನಾಂ ಮಾನಸಂ ಭಾವಂ ಪೂರಯಂತಃ ಸುಸಂಸ್ಥಿತಾಃ ॥ ೧೪ ॥
ಯಸ್ಮಾದ್ವಿಷ್ಣೋ ಮಹೇಶಾನಸ್ತ್ವಯಾಪಿ ನ ನಿಷೇಧಿತಃ ।
ತಸ್ಮಾತ್ತ್ವಮಪಿ ಪಾಷಾಣೋ ಭವಿಷ್ಯಸಿ ನ ಸಂಶಯಃ ॥ ೧೫ ॥
ಹರೋಽಪ್ಯಶ್ಮಮಯಂ ರೂಪಂ ಪ್ರಾಪ್ಯಲೋಕವಿಗರ್ಹಿತಂ ।
ಲಿಂಗಾಕಾರಂ ವಿಪ್ರಶಾಪಾನ್ಮಹದ್ದುಃಖಮವಾಪ್ಸ್ಯತಿ ॥ ೧೬ ॥
ತಚ್ಛ್ರುತ್ವಾ ಭಗವಾನ್ ವಿಷ್ಣುಃ ಪಾರ್ವತೀಮನುಕೂಲಯನ್ ।
ಉವಾಚ ಪ್ರಣತೋ ಭೂತ್ವಾ ಹರಭಾರ್ಯಾಂ ಮಹೇಶ್ವರೀಂ ॥ ೧೭ ॥

ಶ್ರೀ ವಿಷ್ಣುರುವಾಚ :—

ಮಹಾವ್ರತೇ ಮಹಾದೇವಿ ಮಹಾದೇವಪ್ರಿಯಾ ಸದಾ ।
ತ್ವಂ ಹಿ ಸತ್ವರಜಃಸ್ಥಾ ಚ ತಾಮಸೀ ಶಕ್ತಿರುತ್ತಮಾ ॥ ೧೮ ॥
ಮಾತ್ರಾತ್ರಯ ಸಮೋಪೇತಾ ಗುಣತ್ರಯವಿಭಾವಿನೀ ।
ಮಾಯಾದೀನಾಂ ಜನಿತ್ರೀ ತ್ವಂ ವಿಶ್ವವ್ಯಾಪಕರೂಪಿಣೀ ॥ ೧೯ ॥

---

೧೩. ವರದಾಯಕಳಾದ ಆ ದೇವಿಯು ದೇವತೆಗಳನ್ನು ಕುರಿತು ಹೀಗೆ ಹೇಳಿ ವಿಷ್ಣು ಮಹೇಶ್ವರರನ್ನು ಕುಪಿತಳಾಗಿ ಇಂತೆಂದಳು.

೧೪. ದೇವತೆಗಳು ಅವಳ ಭಯದಿಂದ ಅದೃಶ್ಯರಾಗಿ ಭೂಲೋಕದಲ್ಲಿ ಪ್ರತಿಮೆಗಳಲ್ಲಿ ನೆಲೆಸಿ ಭಕ್ತರ ಮನೋಭೀಷ್ಟವನ್ನು ಪೂರಯಿಸುತ್ತಿದ್ದರು.

೧೫. "ವಿಷ್ಣುವೆ! ನೀನು ಮಹೇಶ್ವರನನ್ನು ತಡೆಯದೆ ಹೋದೆಯಾದುದರಿಂದ ನೀನೂ ಪಾಷಾಣವಾಗು.

೧೬. ಮಹೇಶ್ವರನೂ ಬ್ರಾಹ್ಮಣಶಾಪದಿಂದ ಲೋಕನಿಂದ್ಯವಾದ ಪಾಷಾಣಮಯವಾದ ಲಿಂಗಾಕಾರವನ್ನು ಹೊಂದಿ ಅತ್ಯಂತ ದುಃಖಗೊಳ್ಳುವನು."

೧೭. ಪೂಜ್ಯನಾದ ವಿಷ್ಣುವು ಆ ಮಾತನ್ನು ಕೇಳಿ ಶಿವಪತ್ನಿಯಾದ ಆ ಪಾರ್ವತಿಯನ್ನು ನಮಸ್ಕರಿಸಿ ಸಮಾಧಾನಗೊಳಿಸುತ್ತ ಹೀಗೆಂದನು.

೧೮. ಶ್ರೀವಿಷ್ಣುವು ಹೇಳುತ್ತಾನೆ:—"ಮಹಾವ್ರತಳೂ, ಮಹಾದೇವಿಯೂ, ಶಿವಪತ್ನಿಯೂ ಆದ ಪಾರ್ವತಿಯೆ! ನೀನು ಸತ್ವರಜಸ್ತಮಶ್ಶಕ್ತಿರೂಪಳಾಗಿರುವೆ.

೧೯. ಮಾತ್ರಾತ್ರಯದಿಂದ ಕೂಡಿದವಳೂ, ಗುಣತ್ರಯರೂಪಳೂ, ಮಾಯೆ ಮೊದಲಾದುವುಗಳನ್ನುಂಟುಮಾಡುವವಳೂ, ವಿಶ್ವವ್ಯಾಪಿನಿಯೂ ಆಗಿರುವೆ.

ವೇದತ್ರಯಸ್ತುತಾ ತ್ವಂ ಚ ಸಾಧ್ಯಾ ರೂಪೇಣ ರಾಗಿಣೀ ।
ಅರೂಪಾ ಸರ್ವರೂಪಾ ತ್ವಂ ಜನಸಂತಾನದಾಯಿನೀ ॥ ೨೦ ॥
ಫಲವೇಲಾ ಮಹಾಕಾಲೀ ಮಹಾಲಕ್ಷ್ಮೀಃ ಸರಸ್ವತೀ ।
ಓಂಕಾರಶ್ಚ ವಷಟ್ಕಾರಸ್ತ್ವಮೇವ ಹಿ ಸುರೇಶ್ವರಿ ॥ ೨೧ ॥
ಭೂತಧಾತ್ರಿ ನಮಸ್ತೇಸ್ತು ಶಿವಾಯೈ ಚ ನಮೋಸ್ತುತೇ ।
ರಾಗಿಣ್ಯೈ ಚ ವಿರಾಗಿಣ್ಯೈ ವಿಕರಾಲೇ ನಮಃ ಶುಭೇ ॥ ೨೨ ॥
ಏವಂ ಸ್ತುತಾ ಪ್ರಸನ್ನಾಕ್ಷೀ ಪ್ರಸನ್ನೇನಾಽಂತರಾತ್ಮನಾ ।
ಉವಾಚ ಪರಮೋದಾರಂ ಮಿಥ್ಯಾರೋಷಯುತಂ ವಚಃ ॥ ೨೩ ॥
ಮಚ್ಛಾಪೋ ನಾಽನ್ಯಥಾ ಭಾವೀ ಜನಾರ್ದನ ತವಾಽಪ್ಯಯಂ ।
ತತ್ರಾಽಪಿ ಸಂಸ್ಥಿತಸ್ತ್ವಂ ಹಿ ಯೋಗೀಶ್ವರ ವಿಮುಕ್ತಿದಃ ॥ ೨೪ ॥
ಕಾಮಪ್ರದಶ್ಚ ಭಕ್ತಾನಾಂ ಚಾತುರ್ಮಾಸ್ಯೇ ವಿಶೇಷತಃ ।
ನಿಮ್ನಗಾ ಗಂಡಕೀನಾಮ ಬ್ರಹ್ಮಣೋ ದಯಿತಾ ಸುತಾ ॥ ೨೫ ॥
ಪಾಷಾಣಸಾರಸಂಭೂತಾ ಪುಣ್ಯದಾತ್ರೀ ಮಹಾಜಲಾ ।
ತಸ್ಯಾಃ ಸುವಿಮಲೇ ನೀರೇ ತವ ವಾಸೋ ಭವಿಷ್ಯತಿ ॥ ೨೬ ॥

---

೨೦. ಮೂರು ವೇದಗಳಿಂದ ಸಾಧ್ಯಾರೂಪದಿಂದ ಸ್ತುತಿಸಲ್ಪಟ್ಟವಳೂ, ರಾಗವುಳ್ಳವಳೂ, ರೂಪರಹಿತಳೂ, ಸರ್ವಸ್ವರೂಪಳೂ, ಜನರಿಗೆ ಸಂತತಿಯನ್ನು ಕೊಡುವವಳೂ ಆಗಿರುವೆ.

೨೧. ಫಲವೇಳೆಯೂ, ಮಹಾಕಾಳಿಯೂ, ಮಹಾಲಕ್ಷ್ಮಿಯೂ, ಸರಸ್ವತಿಯೂ, ಓಂಕಾರ ವಷಟ್ಕಾರರೂಪಳೂ ಆಗಿರುವೆ.

೨೨. ಪ್ರಾಣಿಗಳನ್ನು ಸೃಜಿಸುವವಳೂ, ಶಿವಪತ್ನಿಯೂ, ವಿಷಯರಾಗವುಳ್ಳವಳೂ, ರಾಗವಿಲ್ಲದವಳೂ, ವಿಕರಾಳಳೂ, ಶುಭಕರಳೂ ಆದ ದೇವಿಯೆ! ನಿನಗೆ ನಮಸ್ಕಾರವು."

೨೩. ವಿಷ್ಣುವು ಹೀಗೆ ಸ್ತುತಿಸಲು ದೇವಿಯು ಪ್ರಸನ್ನನಯನಳಾಗಿ ಪ್ರಸನ್ನವಾದ ಮನಸ್ಸಿನಿಂದ ಮಿಥ್ಯಾಕೋಪವನ್ನು ತೋರುತ್ತ ಉದಾರವಾದ ಈ ಮಾತನ್ನು ಹೇಳಿದಳು.

೨೪–೨೬. "ಜನಾರ್ದನ! ನನ್ನ ಶಾಪವೂ ಅನ್ಯಥಾ ಆಗುವುದಿಲ್ಲ. ನೀನು ಆ ಶಿಲೆಯಲ್ಲಿದ್ದು ಯೋಗೀಶ್ವರರಿಗೆ ಮೋಕ್ಷವನ್ನು ಕೊಡುವವನೂ, ಚಾತುರ್ಮಾಸ್ಯದಲ್ಲಿ ಭಕ್ತರಿಗೆ ವಿಶೇಷವಾಗಿ ಇಷ್ಟಾರ್ಥವನ್ನು ನೀಡುವವನೂ ಆಗು. ಬ್ರಹ್ಮನ ಪ್ರಿಯಸುತೆಯೂ, ಪಾಷಾಣಗಳ ಸಾರದಿಂದ ಜನಿಸಿದವಳೂ, ಪುಣ್ಯವನ್ನು ಕೊಡುವವಳೂ, ಅತಿಶಯವಾದ ನೀರುಳ್ಳ ನದೀರೂಪಳೂ ಆದ ಗಂಡಕಿಯೆಂಬುವಳಿರುವಳು. ಆ ನದಿಯ ಶುದ್ಧ ಜಲದಲ್ಲಿ ನೀನು ವಾಸಮಾಡು.

ಚತುರ್ವಿಂಶತಿಭೇದೇಸ ಪುರಾಣಜ್ಞೈರ್ನಿರೀಕ್ಷಿತಃ ।
ಮುಖೇ ಜಾಂಬೂನದಂ ಚೈವ ಶಾಲಗ್ರಾಮಃ ಪ್ರಕೀರ್ತಿತಃ ॥ ೨೭ ॥
ವರ್ತುಲಸ್ತ್ರೈಜಸಃ ಪಿಂಡಃ ಶ್ರಿಯಾ ಯುಕ್ತೋ ಭವಿಷ್ಯಸಿ ।
ಸರ್ವಸಾಮರ್ಥ್ಯಸಂಯುಕ್ತೋ ಯೋಗಿನಾಮಪಿ ಮೋಕ್ಷದಃ ॥ ೨೮ ॥
ಯೇ ತ್ವಾಂ ಶಿಲಾಗತಂ ವಿಷ್ಣುಂ ಪೂಜಯಿಷ್ಯಂತಿ ಮಾನವಾಃ ।
ತೇಷಾಂ ಸುಚಿಂತಿತಾಂ ಸಿದ್ಧಿಂ ಭಕ್ತಾನಾಂ ಸಂಪ್ರಯಚ್ಛಸಿ ॥ ೨೯ ॥
ಶಿಲಾಗತಂ ಚ ದೇವೇಶಂ ತುಲಸ್ಯಾ ಭಕ್ತಿತತ್ಪರಾಃ ।
ಪೂಜಯಿಷ್ಯಂತಿ ಮನುಜಾಸ್ತೇಷಾಂ ಮುಕ್ತಿರ್ನದೂರತಃ ॥ ೩೦ ॥
ಶಿಲಾಸ್ಥಿತಂ ಚ ಯಃ ಪಶ್ಯೇತ್ತ್ವಾಂ ವಿಷ್ಣುಂ ಪ್ರತಿಮಾಗತಂ ।
ಸುಚಕ್ರಾಂಕಿತಸರ್ವಾಂಗಂ ನ ಸ ಗಚ್ಛೇದ್ಯಮಾಲಯಂ ॥ ೩೧ ॥

ಗಾಲವ ಉವಾಚ:—

ಇತಿ ತೇ ಕಥಿತಂ ಸರ್ವಂ ಶಾಲಗ್ರಾಮಸ್ಯ ಕಾರಣಂ ।
ಯಥಾ ಸ ಭಗವಾನ್ ವಿಷ್ಣುಃ ಪಾಷಾಣತ್ವಮುಪಾಗತಃ ॥ ೩೨ ॥
ಗೋವಿಂದೋಽಪಿ ಮಹಾಶಾಪಂ ಲಬ್ಧ್ವಾ ಸ್ವಭವನಂ ಗತಃ ।
ಪಾರ್ವತೀ ಚ ಮಹೇಶಾನಂ ಕುಪಿತಾ ಪ್ರಣಮ್ಯ ಚ ॥ ೩೩ ॥

---

೨೭—೨೮. ಪುರಾಣಜ್ಞರಿಂದ ಇಪ್ಪತ್ತು ನಾಲ್ಕು ನಾಮಭೇದಗಳಿಂದ ನೋಡಲ್ಪಟ್ಟವನೂ, ಚಿನ್ನದ ಮುಖವುಳ್ಳವನೂ, ಶಾಲಿಗ್ರಾಮವೆಂದು ನಾಮವನ್ನು ಪಡೆದವನೂ, ವರ್ತುಳಾಕಾರವಾದ ತೇಜಃಪಿಂಡರೂಪನೂ, ಲಕ್ಷ್ಮೀಸಮೇತನೂ, ಸಕಲ ಸಾಮರ್ಥ್ಯಗಳಿಂದ ಕೂಡಿದವನೂ, ಯೋಗಿಗಳಿಗೆ ಮೋಕ್ಷವನ್ನು ಕೊಡುವವನೂ ಆಗುವೆ.

೨೯. ಈ ಶಿಲೆಯಲ್ಲಿರುವ ನಿನ್ನನ್ನು ಪೂಜಿಸುವ ಭಕ್ತರಿಗೆ ಮನೋಭೀಷ್ಟವನ್ನು ಕೊಡುವೆ.

೩೦. ಶಿಲೆಯಲ್ಲಿರುವ ನಿನ್ನನ್ನು ತುಲಸಿಯಿಂದ ಭಕ್ತಿಯುಕ್ತರಾಗಿ ಪೂಜಿಸುವ ಮಾನವರಿಗೆ ಮುಕ್ತಿಯು ಸಮೀಪದಲ್ಲಿರುವುದು.

೩೧. ಶಾಲಿಗ್ರಾಮಶಿಲೆ ಮತ್ತು ಪ್ರತಿಮೆಗಳಲ್ಲಿರುವ ಚಕ್ರಾಂಕಿತನಾದ ನಿನ್ನನ್ನು ನೋಡುವವನು ಯಮನ ಮನೆಗೆ ಹೋಗುವುದಿಲ್ಲ.''

೩೨. ಗಾಲವನು ಹೇಳುತ್ತಾನೆ:— ಹೀಗೆ ನಿನಗೆ ಶ್ರೀ ವಿಷ್ಣುವು ಹೇಗೆ ಶಾಲಿಗ್ರಾಮಶಿಲೆಯಾದನೆಂಬುದನ್ನು ಹೇಳಿರುವೆನು.

೩೩. ಗೋವಿಂದನು ಪಾರ್ವತಿಯಿಂದ ಶಪ್ತನಾಗಿ ಸ್ವಸ್ಥಾನಕ್ಕೆ ತೆರಳಿದನು. ಕುಪಿತಳಾದ ಪಾರ್ವತಿಯೂ ಶಂಕರನನ್ನು ವಂದಿಸಿ ಸ್ವಸ್ಥಳಕ್ಕೆ ಹೋದಳು.

ಏವಂ ಸ ಏವ ಭಗವಾನ್ ಭವಭೂತಭವ್ಯ
ಭೂತಾದಿಕೃತ್ಸಕಲಸಂಸ್ಥಿತಿನಾಶನಾಂಕ ।
ಸೋಽಪಿ ಶ್ರಿಯಾ ಸಹ ಭವೋಽಪಿ ಗಿರೀಶಪುತ್ರ್ಯಾ
ಸಾರ್ಧಂ ಚತುರ್ಷು ಚ ದ್ರುಮೇಷು ನಿವಾಸಮಾಪ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಷ್ಣುಶಾಪವರ್ಣನಂ" ನಾಮ
ಏಕಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೩೪. ಹೀಗೆ ಭೂತಭವಿಷ್ಯದ್ವರ್ತಮಾನ ಪ್ರಾಣಿಗಳನ್ನು ಸೃಜಿಸುವವನೂ, ಸಕಲಪ್ರಪಂಚದ ಸ್ಥಿತಿಲಯಕಾರಣನೂ ಆದ ವಿಷ್ಣುವು ಲಕ್ಷ್ಮಿಯೊಡನೆಯೂ, ಶಂಕರನು ಪಾರ್ವತಿಯೊಡನೆಯೂ ಹಿಂದೆ ಹೇಳಿದ ನಾಲ್ಕು ವೃಕ್ಷಗಳಲ್ಲಿ ವಾಸಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಷ್ಣುಶಾಪವರ್ಣನ"ವೆಂಬ
ಇನ್ನೂರ ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ವೃಕ್ಷಮಾಹಾತ್ಮ್ಯವರ್ಣನಂ

ಶೂದ್ರ ಉವಾಚ :—

ಮಹದಾಶ್ಚರ್ಯಮೇತದ್ಧಿ ಯತ್ಸುರಾ ವೃಕ್ಷರೂಪಿಣಃ ।
ಚಾತುರ್ಮಾಸ್ಯೇ ಸಮಾಯಾತೇ ಸರ್ವವೃಕ್ಷನಿವಾಸಿನಃ ॥ ೧ ॥
ಭಗವನ್ ಕೇ ಸುರಾಸ್ತೇ ತು ಕೇಷು ಕೇಷು ನಿವಾಸಿನಃ ।
ಏತದ್ವಿಸ್ತರತೋ ಬ್ರೂಹಿ ಮಮಾಽನುಗ್ರಹ ಕಾಮ್ಯಯಾ ॥ ೨ ॥

ಗಾಲವ ಉವಾಚ :—

ಅಮೃತಂ ಜಲಮಿತ್ಯಾಹುಶ್ಚಾತುರ್ಮಾಸ್ಯೇ ತದಿಚ್ಛಯಾ ।
ಲೀಲಯಾ ವಿಧೃತಂ ದೇವೈಃ ಪಿಬಂತಿ ದ್ರುಮದೇವತಾಃ ॥ ೩ ॥
ತಸ್ಯ ಪಾನಾನ್ಮಹಾತೃಪ್ತಿರ್ಜಾಯತೇ ನಾಽತ್ರ ಸಂಶಯಃ ।
ಬಲಂ ತೇಜಶ್ಚ ಕಾಂತಿಶ್ಚ ಸೌಷ್ಠವಂ ಲಘುವಿಕ್ರಮಃ ॥ ೪ ॥
ಗುಣಾ ಏತೇ ಪ್ರಜಾಯಂತೇ ಪಾನಾತ್ಕೃಷ್ಣಾಂಶಸಂಭವಾತ್ ।
ನಿತ್ಯಾಽಮೃತಸ್ಯ ಪಾನೇನ ಬಲಂ ಸ್ವಲ್ಪಂ ಪ್ರಜಾಯತೇ ॥ ೫ ॥

---

### ಕನ್ನಡದ ಅನುವಾದ

#### ವೃಕ್ಷಮಾಹಾತ್ಮ್ಯವರ್ಣನ

೧. ಶೂದ್ರನು ಹೇಳುತ್ತಾನೆ:—ದೇವತೆಗಳು ವೃಕ್ಷರೂಪಿಗಳಾಗಿ ಚಾತುರ್ಮಾಸ್ಯದಲ್ಲಿ ಸಕಲ ವೃಕ್ಷಗಳಲ್ಲಿಯೂ ವಾಸಿಸುವರೆಂಬುದು ಆಶ್ಚರ್ಯಕರವಾದುದು.

೨. ಪೂಜ್ಯನೆ! ನನಗೆ ಅನುಗ್ರಹಮಾಡಲಿಚ್ಛೆಯಿಂದ ಯಾವ ದೇವತೆಗಳು ಯಾವ ಯಾವ ವೃಕ್ಷಗಳಲ್ಲಿ ವಾಸಿಸುತ್ತಾರೆಂಬುದನ್ನು ವಿಸ್ತಾರವಾಗಿ ಹೇಳು.

೩. ಗಾಲವನು ಹೇಳುತ್ತಾನೆ:—ಜಲವನ್ನು ಅಮೃತವೆನ್ನುತ್ತಾರೆ. ಚಾತುರ್ಮಾಸ್ಯದಲ್ಲಿ ಜಲಾಪೇಕ್ಷೆಯಿಂದ ದೇವತೆಗಳು ಧರಿಸಿದ ಆ ಅಮೃತವನ್ನು ವೃಕ್ಷ ದೇವತೆಗಳು ಕುಡಿಯುತ್ತಾರೆ.

೪–೫. ಆ ವಿಷ್ಣುವಿನ ಅಂಶದಿಂದ ಹುಟ್ಟಿದ ಜಲಪಾನದಿಂದ ಅತಿಶಯ ತೃಪ್ತಿಯೂ, ಬಲ, ತೇಜಸ್ಸು, ಕಾಂತಿ, ಸೌಷ್ಠವ, ಪರಾಕ್ರಮಗಳೂ ಉಂಟಾಗುವುವು. ನಿತ್ಯವೂ ಅಮೃತಪಾನದಿಂದ ಸ್ವಲ್ಪವೇ ಬಲವು ಹೆಚ್ಚುವುದು.

ಭೋಜನಂ ತತ್ರಶಂಸಂತಿ ನಿತ್ಯಮೇತನ್ನಸಂಶಯಃ ।
ತಸ್ಮಾಚ್ಚತುರ್ಷು ಮಾಸೇಷು ಪಿಬಂತಿ ಜಲಮೇವಹಿ ॥ ೬ ॥
ವೃಕ್ಷಸ್ಥಾಃ ಪಿತರೋ ದೇವಾಃ ಪ್ರಾಣಿನಾಂ ಹಿತಕಾಮ್ಯಯಾ ।
ವೃಕ್ಷಾಣಾಂ ಸೇವನಂ ಶ್ರೇಷ್ಠಂ ಸರ್ವಮಾಸೇಷು ಸರ್ವದಾ ॥ ೭ ॥
ಚಾತುರ್ಮಾಸ್ಯೇ ವಿಶೇಷೇಣ ಸೇವಿತಾಃ ಸೌಖ್ಯಕಾರಕಾಃ ।
ತಿಲೋದಕೇನ ವೃಕ್ಷಾಣಾಂ ಸೇಚನಂ ಸರ್ವಕಾಮದಂ ॥ ೮ ॥
ಕ್ಷೀರವೃಕ್ಷಾಃ ಕ್ಷೀರಯುಕ್ತೈಸ್ತೋಯೈಃ ಸಿಕ್ತಾಃ ಶುಭಪ್ರದಾ ।
ಚತುಷ್ಟಯಂ ಚ ವೃಕ್ಷಾಣಾಂ ಯಚ್ಚೋಕ್ತಂ ಪೂರ್ವತೋ ಮಯಾ ॥ ೯ ॥
ಚಾತುರ್ಮಾಸ್ಯೇ ವಿಶೇಷೇಣ ಸರ್ವಕಾಮಫಲಪ್ರದಂ ।
ಬ್ರಹ್ಮಾ ತು ವಟಮಾಶ್ರಿತ್ಯ ಪ್ರಾಣಿನಾಂ ಸ ವರಪ್ರದಃ ॥ ೧೦ ॥
ಸಾವಿತ್ರೀಂ ತಿಲಮಾಸ್ಥಾಯ ಪವಿತ್ರಂ ಶ್ವೇತಭೂಷಣಂ ।
ಸುಪ್ತೇ ದೇವೇ ವಿಶೇಷೇಣ ತಿಲಸೇವಾ ಮಹಾಫಲಾ ॥ ೧೧ ॥
ತಿಲಾಃ ಪವಿತ್ರಮತುಲಂ ತಿಲಾ ಧರ್ಮಾರ್ಥಸಾಧಕಾಃ ।
ತಿಲಾ ಮೋಕ್ಷಪ್ರದಾಶ್ಚೈವ ತಿಲಾಃ ಪಾಪಾಪಹಾರಿಣಃ ॥ ೧೨ ॥

---

೬–೭. ಆ ಜಲಪಾನವನ್ನು ಭೋಜನವೆಂದು ಹೇಳುತ್ತಾರೆ. ಆದುದರಿಂದ ನಾಲ್ಕು ತಿಂಗಳಲ್ಲಿ ವೃಕ್ಷಸ್ಥರಾದ ದೇವಪಿತೃಗಳು ಪ್ರಾಣಿಗಳ ಹಿತಕ್ಕಾಗಿ ಜಲವನ್ನು ಕುಡಿಯುತ್ತಾರೆ. ಎಲ್ಲ ಮಾಸಗಳಲ್ಲಿಯೂ ವೃಕ್ಷಸೇವನೆಯು ಶ್ರೇಷ್ಠವಾದುದು.

೮. ಚಾತುರ್ಮಾಸ್ಯದಲ್ಲಿ ವೃಕ್ಷಗಳು ವಿಶೇಷವಾಗಿ ಸೇವಿಸಿದರೆ ಸೌಖ್ಯವನ್ನು ಉಂಟುಮಾಡುವುವು. ಮರಗಳಿಗೆ ತಿಲೋದಕವನ್ನೆರೆದರೆ ಅವು ಸಕಲೇಷ್ಟಾರ್ಥಗಳನ್ನೂ ಕೊಡುವುವು.

೯–೧೦. ಕ್ಷೀರವೃಕ್ಷಗಳು ಹಾಲಿನಿಂದ ಸೇರಿದ ನೀರಿನಿಂದ ಸೇಚನ ಮಾಡಿದರೆ ಶುಭವನ್ನುಂಟುಮಾಡುವುವು. ಹಿಂದೆ ನಾನು ಹೇಳಿದ ನಾಲ್ಕು ವೃಕ್ಷಗಳು ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಸಕಲೇಷ್ಟಾರ್ಥಗಳನ್ನು ಕೊಡುತ್ತವೆ. ಬ್ರಹ್ಮನು ವಟವೃಕ್ಷವನ್ನಾಶ್ರಯಿಸಿ ಪ್ರಾಣಿಗಳಿಗೆ ವರವನ್ನು ಕೊಡುವನು.

೧೧. ಸಾವಿತ್ರಿಯು ಶ್ವೇತಾಲಂಕಾರವುಳ್ಳ ಪವಿತ್ರವಾದ ಎಳ್ಳನ್ನು ಆಶ್ರಯಿಸಿ ಪ್ರಾಣಿಗಳಿಗೆ ವರವನ್ನು ನೀಡುವಳು. ಚಾತುರ್ಮಾಸ್ಯದಲ್ಲಿ ತಿಲಸೇವನೆಯು ಅತಿಶಯವಾದ ಫಲವನ್ನು ಕೊಡುವುದು.

೧೨–೧೩. ತಿಲವು ಅತ್ಯಂತ ಪವಿತ್ರವೂ, ಧರ್ಮಾರ್ಥಸಾಧಕವೂ, ಮೋಕ್ಷವನ್ನು ಕೊಡುವುದೂ, ಪಾಪಪರಿಹಾರಕವೂ, ಅತಿಶಯ ಫಲದಾಯಕವೂ, ಶತ್ರು

ತಿಲಾ ವಿಶೇಷ ಫಲದಾಸ್ತಿಲಾಃ ಶತ್ರುವಿನಾಶನಾಃ ।
ತಿಲಾಃ ಸರ್ವೇಷು ಪುಣ್ಯೇಷು ಪ್ರಥಮಂ ಸಮುದಾಹೃತಾಃ ॥ ೧೩ ॥
ನ ತಿಲಾ ಧಾನ್ಯಮಿತ್ಯಾಹುರ್ದೇವಧಾನ್ಯಮಿತಿ ಸ್ಮೃತಂ ।
ತಸ್ಮಾತ್ಸರ್ವೇಷು ದಾನೇಷು ತಿಲದಾನಂ ಮಹೋತ್ತಮಂ ॥ ೧೪ ॥
ಕನಕೇನ ಯುತಾ ಯೇನ ತಿಲಾ ದತ್ತಾಸ್ತು ಶೂದ್ರಜ ।
ಬ್ರಹ್ಮಹತ್ಯಾದಿ ಪಾಪಾನಾಂ ವಿನಾಶಸ್ತೇನ ವೈ ಕೃತಃ ॥ ೧೫ ॥
ಸಾವಿತ್ರೀ ಚ ತಿಲಾಃ ಪ್ರೋಕ್ತಾ ಸರ್ವಕಾರ್ಯಾರ್ಥಸಾಧಕಾಃ ।
ತಿಲೈಸ್ತು ತರ್ಪಣಂ ಕುರ್ಯಾಚ್ಚಾತುರ್ಮಾಸ್ಯೇ ವಿಶೇಷತಃ ॥ ೧೬ ॥
ತಿಲಾನಾಂ ದರ್ಶನಂ ಪುಣ್ಯಂ ಸ್ಪರ್ಶನಂ ಸೇವನಂ ತಥಾ ।
ಹವನಂ ಭಕ್ಷಣಂ ಚೈವ ಶರೀರೋದ್ವರ್ತನಂ ತಥಾ ॥ ೧೭ ॥
ಸರ್ವಥಾ ತಿಲವೃಕ್ಷೋಽಯಂ ದರ್ಶನಾದೇವ ಪಾಪಹಾ ।
ಚಾತುರ್ಮಾಸ್ಯೇ ವಿಶೇಷೇಣ ಸೇವಿತಃ ಸರ್ವಸೌಖ್ಯದಃ ॥ ೧೮ ॥
ಮಹೇಂದ್ರೋ ಯವಮಾಸ್ಥಾಯ ಸ್ಥಿತೋ ಭೂತಹಿತೇ ರತಃ ।
ಯವಸ್ಯ ಸೇವನಂ ಪುಣ್ಯಂ ದರ್ಶನಂ ಸ್ಪರ್ಶನಂ ತಥಾ ॥ ೧೯ ॥

---

ನಾಶಕವೂ, ಸಕಲ ಪುಣ್ಯಕಾರ್ಯಗಳಲ್ಲಿ ಮೊದಲು ಉಪಯೋಗಿಸಲರ್ಹವೂ ಆಗಿರುವುದು.

೧೪. ತಿಲವು ಧಾನ್ಯವಲ್ಲ. ಅದು ದೇವಧಾನ್ಯವು. ಆದುದರಿಂದ ಸಕಲ ದಾನಗಳಲ್ಲಿಯೂ ತಿಲದಾನವೇ ಅತ್ಯುತ್ತಮವಾದುದು.

೧೫. ಅಯ್ಯಾ ಶೂದ್ರನೇ! ಚಿನ್ನದೊಡನೆ ತಿಲವನ್ನು ದಾನಮಾಡಿದವನು ಬ್ರಹ್ಮಹತ್ಯಾದಿ ಪಾಪಗಳನ್ನು ನೀಗಿಸಿಕೊಳ್ಳುವನು.

೧೬. ತಿಲವು ಸಾವಿತ್ರಿಯೆನ್ನಿಸಿಕೊಳ್ಳುವುದು. ಇದು ಸಮಸ್ತ ಕಾರ್ಯಗಳನ್ನು ಸಾಧಿಸುವುದು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ತಿಲದಿಂದ ತರ್ಪಣ ಮಾಡಬೇಕು.

೧೭. ತಿಲದ ದರ್ಶನ, ಸ್ಪರ್ಶನ, ಸೇವನ, ಹವನ, ಭಕ್ಷಣ, ದೇಹೋದ್ವರ್ತನ ಇವುಗಳು ಪುಣ್ಯಕರವಾದುವು.

೧೮. ಈ ಎಳ್ಳಿನ ಗಿಡವು ದರ್ಶನದಿಂದಲೇ ಪಾಪವನ್ನು ಪರಿಹರಿಸುವುದು. ಚಾತುರ್ಮಾಸ್ಯದಲ್ಲಿ ಇದನ್ನು ಸೇವಿಸಿದರೆ ಸಮಸ್ತ ಸೌಖ್ಯಗಳನ್ನು ಕೊಡುವುದು.

೧೯. ಮಹೇಂದ್ರನು ಪ್ರಾಣಿಗಳ ಹಿತಕ್ಕಾಗಿ ಯವವನ್ನಾಶ್ರಯಿಸಿರುವನು. ಇದರ ಸೇವನೆಯೂ, ದರ್ಶನವೂ, ಸ್ಪರ್ಶವೂ ಪುಣ್ಯಕರವಾದುದು.

ಯವೈಸ್ತು ತರ್ಪಣಂ ಕುರ್ಯಾದ್ದೇವಾನಾಂ ದತ್ತಮಕ್ಷಯಂ ।
ಪ್ರಜಾನಾಂ ಪತಯಃ ಸರ್ವೇ ಚೂತವೃಕ್ಷಮುಪಾಶ್ರಿತಾಃ ॥ ೨೦ ॥
ಗಂಧರ್ವಾ ಮಲಯಂ ವೃಕ್ಷಮಗುರುಂ ಗಣನಾಯಕಃ ।
ಸಮುದ್ರಾ ವೇತಸಂ ವೃಕ್ಷಂ ಯಕ್ಷಾ ಪುನ್ನಾಗಮೇವ ಚ ॥ ೨೧ ॥
ನಾಗವೃಕ್ಷಂ ತಥಾ ನಾಗಾಃ ಸಿದ್ಧಾಃ ಕಂಕೋಲಕಂ ದ್ರುಮಂ ।
ಗುಹ್ಯಕಾಃ ಪನಸಂಚೈವ ಕಿನ್ನರಾ ಮರಿಚಂ ಶ್ರಿತಾಃ ॥ ೨೨ ॥
ಯಷ್ಟೀಮಧುಂ ಸಮಾಶ್ರಿತ್ಯ ಕಂದರ್ಪೋಽಭೂದ್ವ್ಯವಸ್ಥಿತಃ ।
ರಕ್ತಾಂಜನಂ ಮಹಾವೃಕ್ಷಂ ವಹ್ನಿರಾಶ್ರಿತ್ಯ ತಿಷ್ಠತಿ ॥ ೨೩ ॥
ಯಮೋ ವಿಭೀತಕಂ ಚೈವ ಬಕುಲಂ ನೈರ್ಋತಾಧಿಪಃ ।
ವರುಣಃ ಖರ್ಜುರೀವೃಕ್ಷಂ ಪೂಗವೃಕ್ಷಂ ಚ ಮಾರುತಃ ॥ ೨೪ ॥
ಧನದೋಽಕ್ಷೋಟಕಂ ವೃಕ್ಷಂ ರುದ್ರಾಶ್ಚ ಬದರೀದ್ರುಮಂ ।
ಸಪ್ತರ್ಷೀಣಾಂ ಮಹಾತಾಲಾ ಬಹುಲಾಶ್ಚಾಽಮರೈರ್ವೃತಾಃ ॥ ೨೫ ॥
ಜಂಬೂರ್ಮೇಘೈಃ ಪರಿವೃತಃ ಕೃಷ್ಣವರ್ಣೋಽಘನಾಶನಃ ।
ಕೃಷ್ಣಸ್ಯ ಸದೃಶೋ ವರ್ಣಸ್ತೇನ ಜಂಬೂನಗೋತ್ತಮಃ ॥ ೨೬ ॥

---

೨೦. ಯವದಿಂದ ದೇವತೆಗಳಿಗೆ ತರ್ಪಣ ಮಾಡಬೇಕು. ಅದರಿಂದ ಕೊಟ್ಟ ದಾನವು ಸಫಲವಾಗುವುದು. ಪ್ರಜಾಪತಿಗಳೆಲ್ಲ ಮಾವಿನ ಮರವನ್ನಾಶ್ರಯಿಸಿರುವರು.

೨೧–೨೬. ಗಂಧರ್ವರು ಮಲಯವೃಕ್ಷವನ್ನೂ, ಗಣನಾಯಕನು ಅಗುರುವೃಕ್ಷವನ್ನೂ, ಸಮುದ್ರಗಳು ವೇತಸವೃಕ್ಷವನ್ನೂ, ಯಕ್ಷರು ಪುನ್ನಾಗವೃಕ್ಷವನ್ನೂ, ನಾಗರು ನಾಗವೃಕ್ಷವನ್ನೂ, ಸಿದ್ಧರು ಕಂಕೋಲಕವೃಕ್ಷವನ್ನೂ, ಗುಹ್ಯಕರು ಹಲಸಿನ ಮರವನ್ನೂ, ಕಿನ್ನರರು ಮೆಣಸಿನ ಗಿಡವನ್ನೂ, ಮನ್ಮಥನು ಯಷ್ಟೀಮಧುವೃಕ್ಷವನ್ನೂ, ಅಗ್ನಿಯು ರಕ್ತಾಂಜನವೃಕ್ಷವನ್ನೂ, ಯಮನು ವಿಭೀತಕವೃಕ್ಷವನ್ನೂ, ನಿರ್ಋತಿಯು ಬಕುಲವೃಕ್ಷವನ್ನೂ, ವರುಣನು ಖರ್ಜುರೀವೃಕ್ಷವನ್ನೂ, ಮಾರುತನು ಪೂಗವೃಕ್ಷವನ್ನೂ, ಕುಬೇರನು ಅಕ್ಷೋಟಕವೃಕ್ಷವನ್ನೂ, ರುದ್ರರು ಬದರೀವೃಕ್ಷವನ್ನೂ, ಸಪ್ತರ್ಷಿಗಳು ಮಹಾತಾಳವೃಕ್ಷವನ್ನೂ, ಅಮರರು ಬಹುಲವೃಕ್ಷವನ್ನೂ, ಮೇಘಗಳು ಕೃಷ್ಣವರ್ಣವೂ, ಪಾಪವನ್ನು ಪರಿಹರಿಸುವುದೂ ಆದ ಜಂಬೂವೃಕ್ಷವನ್ನೂ ಆಶ್ರಯಿಸಿರುವುವು. ಜಂಬೂವೃಕ್ಷವು ವಿಷ್ಣುವಿಗೆ ಸಮಾನವಾದ ಬಣ್ಣವುಳ್ಳದ್ದಾದ್ದರಿಂದ ಅದು ಉತ್ತಮವೃಕ್ಷವಾಗಿರುವುದು.

ತತ್ಫಲೈರ್ವಾಸುದೇವಸ್ತು ಪ್ರೀತೋ ಭವತಿ ದಾನತಃ ।
ಜಂಬೂವೃಕ್ಷಂ ಸಮಾಶ್ರಿತ್ಯ ಕುರ್ವಂತಿ ದ್ವಿಜಭೋಜನಂ ॥ ೨೭ ॥
ತೇಷಾಂ ಪ್ರೀತೋ ಹರಿರ್ದದ್ಯಾತ್ಪುರುಷಾರ್ಥಚತುಷ್ಟಯಂ ।
ಚಾತುರ್ಮಾಸ್ಯೇ ಸಮಾಯಾತೇ ಸುಪ್ತೇ ದೇವೇ ಜನಾರ್ದನೇ ॥ ೨೮ ॥
ಬ್ರಾಹ್ಮಣಾನ್ ಭೋಜಯೇದ್ಯಸ್ತು ಸಪತ್ನೀಕಾಂಛುಚಿಃ ಸ್ಥಿತಃ ।
ತೇನ ನಾರಾಯಣಸ್ತುಷ್ಟೋ ಭವೇಲ್ಲಕ್ಷ್ಮೀಸಹಾಯವಾನ್ ॥ ೨೯ ॥
ಲಕ್ಷ್ಮೀನಾರಾಯಣಪ್ರೀತ್ಯೈ ವಸ್ತ್ರಾಲಂಕರಣೈಃ ಶುಭೈಃ ।
ಪರಿಧಾಯ ಸಪತ್ನೀಕಃ ಕೃತಕೃತ್ಯೋ ಭವೇನ್ನರಃ ॥ ೩೦ ॥
ಯದ್ರಾತ್ರಿತ್ರಿತಯೇನೈವ ವಟಾಶೋಕಭವೇನ ಚ ।
ಫಲಂ ಸಂಜಾಯತೇ ತಚ್ಚ ಜಂಬುನಾ ದ್ವಿಜಭೋಜನಾತ್ ॥ ೩೧ ॥
ತಸ್ಮಿನ್ ದಿನೇ ಏಕಭುಕ್ತಂ ಕಾರಯೇತ್ಕೃತ್ಯಕೃತ್ತದಾ ।
ಬಹುನಾ ಚ ಕಿಮುಕ್ತೇನ ಜಂಬೂವೃಕ್ಷಪ್ರಪೂಜನಾತ್ ॥ ೩೨ ॥
ಪುತ್ರ ಪೌತ್ರ ಧನೈರ್ಯುಕ್ತೋ ಜಾಯತೇ ನಾಽತ್ರ ಸಂಶಯಃ ।
ಜಂಬೂರ್ಮೇಘೈಃ ಪರಿವೃತಾ ವಿದ್ಯುತಾಽಶೋಕ ಏವ ಚ ॥ ೩೩ ॥
ವಸುಭಿಃ ಸ್ವೀಕೃತೋ ನಿತ್ಯಂ ಪ್ರಿಯಾಲಶ್ಚ ಮಹಾನಗಃ ।
ಆದಿತ್ಯೈಸ್ತು ಜಪಾವೃಕ್ಷೋ ಹ್ಯಶ್ವಿಭ್ಯಾಂ ಮದನಸ್ತಥಾ ॥ ೩೪ ॥

---

೨೭–೨೯. ಜಂಬೂಫಲವನ್ನು ದಾನಮಾಡುವುದರಿಂದ ವಿಷ್ಣುವು ಸಂತುಷ್ಟನಾಗುವನು. ಜಂಬೂವೃಕ್ಷದ ಕೆಳಗೆ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನಲ್ಲಿ ಹರಿಯು ಪ್ರೀತನಾಗಿ ಪುರುಷಾರ್ಥಚತುಷ್ಟಯವನ್ನು ನೀಡುವನು. ಚಾತುರ್ಮಾಸ್ಯದಲ್ಲಿ ವಿಷ್ಣುವು ಮಲಗಿರಲು ಪತ್ನೀಸಹಿತರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನಲ್ಲಿ ಲಕ್ಷ್ಮೀಸಹಿತನಾದ ನಾರಾಯಣನು ಸಂತುಷ್ಟನಾಗುವನು.

೩೦. ಪತ್ನಿಯೊಡನೆ ಲಕ್ಷ್ಮೀನಾರಾಯಣನ ಪ್ರೀತಿಗಾಗಿ ಮಂಗಳಕರವಾದ ಒಡವೆ ವಸ್ತ್ರಗಳಿಂದ ಜಂಬೂವೃಕ್ಷಕ್ಕೆ ಅಲಂಕಾರ ಮಾಡಿದ ಮಾನವನು ಧನ್ಯನಾಗುವನು.

೩೧. ಮೂರು ರಾತ್ರಿ ವಟಾಶೋಕವೃಕ್ಷಗಳನ್ನು ಪೂಜಿಸಿದ ಫಲವು ಜಂಬೂವೃಕ್ಷದ ಕೆಳಗೆ ಬ್ರಾಹ್ಮಣರನ್ನು ಭೋಜನ ಮಾಡಿಸಿದ್ದರಿಂದುಂಟಾಗುವುದು.

೩೨–೪೨. ಆ ದಿನ ಏಕಭುಕ್ತವನ್ನು ಮಾಡಿದವನು ಧನ್ಯನಾಗುವನು. ಬಹು ಮಾತಿನಿಂದೇನು? ಜಂಬೂವೃಕ್ಷವನ್ನು ಪೂಜಿಸುವುದರಿಂದ ಮಾನವನು ಪುತ್ರ, ಪೌತ್ರ, ಧನಗಳಿಂದ ಸಹಿತನಾಗುವನು. ಜಂಬೂವೃಕ್ಷವು ಮೇಘಗಳಿಂದಲೂ, ಅಶೋಕವೃಕ್ಷವು ಮಿಂಚಿನಿಂದಲೂ, ಪ್ರಿಯಾಲವು ವಸುಗಳಿಂದಲೂ, ಜಪಾವೃಕ್ಷವು ಆದಿತ್ಯರಿಂದಲೂ, ಮದನವೃಕ್ಷವು ಅಶ್ವಿನೀ ದೇವತೆಗಳಿಂದಲೂ, ಮಧೂಕವೃಕ್ಷವು

ವಿಶ್ವೇಭಿಶ್ಚ ಮಧೂಕಶ್ಚ ಗುಗ್ಗುಲಃ ಪಿಶಿತಾಶನೈಃ ।
ಸೂರ್ಯೇಣಾರ್ಕಃ ಪವಿತ್ರೇಣ ಸೋಮೇನಾಥ ತ್ರಿಪತ್ರಕಃ ॥ ೩೫ ॥
ಖದಿರೋ ಭೂಮಿಪುತ್ರೇಣ ಅಪಾಮಾರ್ಗೋ ಬುಧೇನ ಚ ।
ಅಶ್ವತ್ಥೋ ಗುರುಣಾಚೈವ ಶುಕ್ರೇಣೋದುಂಬರಸ್ತಥಾ ॥ ೩೬ ॥
ಶಮೀ ಶನೈಶ್ಚರೇಣಾಥ ಸ್ವೀಕೃತಾ ಶೂದ್ರಜಾತಿಭಿಃ ।
ರಾಹುಣಾ ಸ್ವೀಕೃತಾ ದೂರ್ವಾ ಪಿತೄಣಾಂ ತರ್ಪಣೋಚಿತಾ ॥ ೩೭ ॥
ವಿಷ್ಣೋಶ್ಚ ದಯಿತಾ ನಿತ್ಯಂ ಚಾತುರ್ಮಾಸ್ಯೇ ವಿಶೇಷತಃ ।
ಕೇತುನಾ ಸ್ವೀಕೃತೋ ದರ್ಭೋ ಯಾಜ್ಞಿಕೇಯೋ ಮಹಾಫಲಃ ॥ ೩೮ ॥
ವಿನಾ ಯೇನ ಶುಭಂ ಕರ್ಮ ಸಂಪೂರ್ಣಂ ನೈವ ಜಾಯತೇ ।
ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ ॥ ೩೯ ॥
ಮುಮುಕ್ಷೂಣಾಂ ಮೋಕ್ಷರೂಪೋ ಧರಾಸಂಸ್ಥೋ ಮಹಾದ್ರುಮಃ ।
ಅಸ್ಮಿನ್ ವಸಂತಿ ಸತತಂ ಬ್ರಹ್ಮ ವಿಷ್ಣು ಶಿವಾಃ ಸದಾ ॥ ೪೦ ॥
ಮೂಲೇ ಮಧ್ಯೇ ತಥಾಗ್ರೇ ಚ ಯಸ್ಯ ನಾಮಾಪಿ ತೃಪ್ತಿದಂ ।
ಅನ್ಯೇಪಿ ದೇವಾ ವೃಕ್ಷಾಂಸ್ತಾನಧಿಶ್ರಿತ್ಯ ಮಹಾದ್ರುಮಾಃ ॥ ೪೧ ॥
ಪ್ರವರ್ತಂತೇ ಹಿ ಮಾಸೇಷು ಚತುರ್ಷು ಚ ನ ಸಂಶಯಃ ।
ಚಾತುರ್ಮಾಸ್ಯೇ ದೇವಪತ್ನ್ಯಃ ಸರ್ವಾ ವಲ್ಲೀಸಮಾಶ್ರಿತಾಃ ॥ ೪೨ ॥

---

ವಿಶ್ವೇದೇವತೆಗಳಿಂದಲೂ, ಗುಗ್ಗುಲುವೃಕ್ಷವು ರಾಕ್ಷಸರಿಂದಲೂ, ಅರ್ಕವೃಕ್ಷವು ಸೂರ್ಯನಿಂದಲೂ, ತ್ರಿಪತ್ರಕವು ಸೋಮನಿಂದಲೂ, ಖದಿರವು ಅಂಗಾರಕನಿಂದಲೂ, ಅಪಾಮಾರ್ಗವು ಬುಧನಿಂದಲೂ, ಅಶ್ವತ್ಥವು ಬೃಹಸ್ಪತಿಯಿಂದಲೂ, ಅತ್ತಿಯ ಮರವು ಶುಕ್ರನಿಂದಲೂ, ಶೂದ್ರಪ್ರಿಯವಾದ ಶಮೀವೃಕ್ಷವು ಶನಿಯಿಂದಲೂ, ಪಿತೃಗಳಿಗೆ ತರ್ಪಣಮಾಡಲು ಉಚಿತವಾದ ಗರಿಕೆಯು ರಾಹುವಿನಿಂದಲೂ ಆಶ್ರಿತವಾಗಿರುವುದು. ಚಾತುರ್ಮಾಸ್ಯದಲ್ಲಿ ಈ ಗರಿಕೆಯು ವಿಷ್ಣುವಿಗೆ ಪ್ರಿಯವಾದುದು. ಯಜ್ಞಾರ್ಹವಾದ ದರ್ಭೆಯನ್ನು ಕೇತುವು ಆಶ್ರಯಿಸಿರುವನು. ಇದರ ಹೊರತು ಶುಭಕರ್ಮವು ಸಂಪೂರ್ಣವಾಗುವುದಿಲ್ಲ. ಇದು ಪವಿತ್ರವಾದ ವಸ್ತುಗಳಲ್ಲಿ ಪವಿತ್ರವೂ, ಮಂಗಳವಸ್ತುಗಳಲ್ಲಿ ಮಂಗಳಕರವೂ, ಮೋಕ್ಷಾರ್ಥಿಗಳಿಗೆ ಮೋಕ್ಷರೂಪವೂ ಆಗಿ ಭೂಮಿಯಲ್ಲಿ ಮಹಾವೃಕ್ಷವಾಗಿರುವುದು. ಈ ವೃಕ್ಷದಲ್ಲಿ ಮೂಲ, ಮಧ್ಯ, ಅಗ್ರಭಾಗಗಳಲ್ಲಿ ಬ್ರಹ್ಮ, ವಿಷ್ಣು, ಶಿವರು ನೆಲೆಸಿರುವರು. ಇದರ ನಾಮೋಚ್ಚಾರಣೆಯೂ ತೃಪ್ತಿಯನ್ನು ಕೊಡುವುದು. ಚಾತುರ್ಮಾಸ್ಯದಲ್ಲಿ ಇತರ ದೇವತೆಗಳೂ ಆಯಾ ವೃಕ್ಷಗಳನ್ನಾಶ್ರಯಿಸಿರುವರು. ದೇವತೆಗಳ ಪತ್ನಿಯರೆಲ್ಲರೂ ಲತೆಗಳನ್ನಾಶ್ರಯಿಸಿರುವರು.

ಪ್ರಯಚ್ಛಂತಿ ನೃಣಾಂ ಕಾಮಾನ್ ವಾಂಛಿತಾನ್ ಸೇವಿತಾ ಅಪಿ ।
ತಸ್ಮಾತ್ಸರ್ವಾತ್ಮಭಾವೇನ ಪಿಪ್ಪಲೋ ಯೇನ ಸೇವಿತಃ ॥ ೪೩ ॥
ಸೇವಿತಾಃ ಸಕಲಾ ವೃಕ್ಷಾಶ್ಚಾತುರ್ಮಾಸ್ಯೇ ವಿಶೇಷತಃ ।
ತುಲಸೀ ಸೇವಿತಾ ಯೇನ ಸರ್ವವಲ್ಲ್ಯಶ್ಚ ಸೇವಿತಾಃ ॥ ೪೪ ॥
ಆಪ್ಯಾಯಿತಂ ಜಗತ್ಸರ್ವಮಾಬ್ರಹ್ಮಸ್ತಂಬ ಸೇವಿತಂ ।
ಚಾತುರ್ಮಾಸ್ಯೇ ಗೃಹಸ್ಥೇನ ವಾನಪ್ರಸ್ಥೇನ ವಾ ಪುಸಃ ॥ ೪೫ ॥
ಬ್ರಹ್ಮಚಾರಿಯತಿಭ್ಯಾಂ ಚ ಸೇವಿತಾ ಮೋಕ್ಷದಾಯಿನೀ ।
ಏತೇಷಾಂ ಸರ್ವವೃಕ್ಷಾಣಾಂ ಛೇದನಂ ನೈವ ಕಾರಯೇತ್ ॥ ೪೬ ॥
ಚಾತುರ್ಮಾಸ್ಯೇ ವಿಶೇಷೇಣ ವಿನಾ ಯಜ್ಞಾದಿಕಾರಣಂ ।
ಏತದುಕ್ತಮಶೇಷೇಣ ಯತ್ಪೃಷ್ಟೋಽಹಮಿಹ ತ್ವಯಾ ॥ ೪೭ ॥
ಯಥಾ ವೃಕ್ಷತ್ವಮಾಪನ್ನಾ ದೇವಾಃ ಸರ್ವೇಽಪಿ ಶೂದ್ರಜ ॥ ೪೮ ॥
ಅಶ್ವತ್ಥಮೇಕಂ ಪಿಚುಮಂದಮೇಕಂ
ನ್ಯಗ್ರೋಧಮೇಕಂ ದಶ ತಿತ್ತಿಡೀಶ್ಚ ।
ಕಪಿತ್ಥ ಬಿಲ್ವಾಮಲಕೀ ತ್ರಯಂ ಚ
ಏತಾಂಶ್ಚ ದೃಷ್ಟ್ವಾ ನರಕಂ ನ ಪಶ್ಯೇತ್ ॥ ೪೯ ॥

---

೪೩–೪೪. ಆ ವೃಕ್ಷಗಳೆಲ್ಲ ಸೇವಿಸುವ ಮಾನವರಿಗೆ ಇಷ್ಟಾರ್ಥಗಳನ್ನು ನೀಡುವುವು. ಆದುದರಿಂದ ಚಾತುರ್ಮಾಸ್ಯದಲ್ಲಿ ಅಶ್ವತ್ಥವೃಕ್ಷವನ್ನು ಸೇವಿಸಿದವನು ಸಮಸ್ತ ವೃಕ್ಷಗಳನ್ನೂ ಸೇವಿಸಿದವನಂತಾಗುವನು. ತುಲಸಿಯನ್ನು ಸೇವಿಸಿದವನು ಸಕಲ ಲತೆಗಳನ್ನೂ ಸೇವಿಸಿದವನಂತಾಗುವನು.

೪೫–೪೮. ಇದರಿಂದ ಬ್ರಹ್ಮ ಮೊದಲು ತೃಣದವರೆಗಿನ ಸಮಗ್ರ ಜಗತ್ತೇ ಸೇವಿಸಿದಂತಾಗಿ ಸಂತೋಷಪಡುವುದು. ತುಲಸಿಯು ಚಾತುರ್ಮಾಸ್ಯದಲ್ಲಿ ತನ್ನನ್ನು ಸೇವಿಸಿದ ಗೃಹಸ್ಥ, ವಾನಪ್ರಸ್ಥ, ಬ್ರಹ್ಮಚಾರಿ, ಯತಿ ಇವರಿಗೆ ಮೋಕ್ಷವನ್ನು ಕೊಡುವುದು. ಯಜ್ಞಾದಿಗಳಿಗಲ್ಲದೆ ಇತರ ಯಾವ ಕಾರಣದಿಂದಲೂ ಚಾತುರ್ಮಾಸ್ಯದಲ್ಲಿ ಈ ವೃಕ್ಷಗಳನ್ನು ಕಡಿಯಬಾರದು. ಶೂದ್ರ! ನೀನು ಕೇಳಿದ ದೇವತೆಗಳು ಹೇಗೆ ವೃಕ್ಷಗಳಾದರೆಂಬುದನ್ನು ಸಂಪೂರ್ಣವಾಗಿ ನಿನಗೆ ಹೇಳಿದ್ದೇನೆ.

೪೯. ನರನು ಒಂದು ಅಶ್ವತ್ಥವೃಕ್ಷ, ಒಂದು ಪಿಚುಮಂದ, ಒಂದು ಆಲ, ಹತ್ತು ತಿತ್ತಿಡೀ ತರುಗಳು, ಮೂರು ಬೇಲ, ಬಿಲ್ವ, ನೆಲ್ಲಿ ಮರಗಳು ಇವುಗಳನ್ನು ದರ್ಶನಮಾಡಿದರೆ ನರಕಕ್ಕೆ ಹೋಗುವುದಿಲ್ಲ.

ಸರ್ವೇ ದೇವಾ ವಿಶ್ವವೃಕ್ಷೇಶಯಾಶ್ಚ
ಕೃಷ್ಣಾಧಾರಾ ಕೃಷ್ಣಮಧ್ಯಾಗ್ರಕಾಶ್ಚ ।
ಯಸ್ಮಿನ್ ದೇವೇ ಸೇವಿತೇ ವಿಶ್ವಪೂಜ್ಯೇ
ಸರ್ವಂ ತೃಪ್ತಂ ಜಾಯತೇ ವಿಶ್ವಮೇತತ್ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವೃಕ್ಷಮಾಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೫೦. ಸಕಲ ವೃಕ್ಷಗಳಲ್ಲಿರುವ ದೇವತೆಗಳು ಕೃಷ್ಣನನ್ನು ಆಶ್ರಯಿಸಿರುವವರು ಮತ್ತು ಮಧ್ಯ ಭಾಗದಲ್ಲಿಯೂ, ಕೊನೆಗಳಲ್ಲಿಯೂ ಸಹ ಕೃಷ್ಣನನ್ನು ಹೊಂದಿರುವರು. ವಿಶ್ವಮಾನ್ಯನಾದ ಈ ವಿಷ್ಣುವನ್ನು ಸೇವಿಸಿದರೆ ಈ ಸಮಸ್ತ ಪ್ರಪಂಚವೂ ತೃಪ್ತಿಗೊಳ್ಳುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವೃಕ್ಷಮಾಹಾತ್ಮ್ಯವರ್ಣನ"ವೆಂಬ
ಇನ್ನೂರ ಐವತ್ತೆರಡನೆಯ ಅಧ್ಯಾಯವು ಮುಗಿಪುದು

॥ ಶ್ರೀಃ ॥

## ಅಥ ಶ್ರೀಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಶಂಕರಕೃತಪಾರ್ವತ್ಯನುನಯವರ್ಣನಂ

ಶೂದ್ರ ಉವಾಚ:—

ಪಾರ್ವತೀ ಕುಪಿತಾ ದೇವೀ ಕಥಂ ದೇವೇನ ಶೂಲಿನಾ ।
ಪ್ರಸಾದಂ ಚ ಗತಾ ಶಪ್ತ್ವಾ ಯತ್ಕೋಪಾತ್ಕ್ಷುಭ್ಯತೇ ಜಗತ್ ॥ ೧ ॥
ಕಥಂ ಸ ಭಗವಾನ್ ರುದ್ರೋ ಭಾರ್ಯಾಶಾಪಮವಾಪಹ ।
ವೈಕೃತಂ ರೂಪಮಾಸಾದ್ಯ ಪುನರ್ದಿವ್ಯಂ ವಪುಃ ಶ್ರಿತಃ ॥ ೨ ॥

ಗಾಲವ ಉವಾಚ:—

ದೇವಾ ರೂಪಾಣ್ಯದೃಶ್ಯಾನಿ ಕೃತ್ವಾ ದೇವ್ಯಾ ಮಹಾಭಯಾತ್ ।
ಮನುಷ್ಯಲೋಕೇ ಸಕಲೇ ಪ್ರತಿಮಾಸು ಚ ಸಂಸ್ಥಿತಾಃ ॥ ೩ ॥
ತೇಷಾಮಪಿ ಪ್ರಸನ್ನಾ ಸಾಽನುಗ್ರಹಂ ಸಮುಪಾಕರೋತ್ ।
ವಿಷ್ಣುಸ್ತುತಾ ಮಹಾಭಾಗಾ ವಿಶ್ವಮಾತಾಽಘನಾಶಿನೀ ॥ ೪ ॥
ತೇಷಾಂ ಬಲಾಚ್ಚ ಪಾರ್ವತ್ಯಾಃ ಶಾಪಭಾರೇಣ ಯಂತ್ರಿತಃ ।
ತಾಂ ನಿತ್ಯಮೇವಾಽನುನಯನ್ನೃಚೇ ಸೋವಾಚ ಶಂಕರಂ ॥ ೫ ॥

---

### ಕನ್ನಡದ ಅನುವಾದ

#### ಶಂಕರಕೃತಪಾರ್ವತ್ಯನುನಯವರ್ಣನ

೧. ಶೂದ್ರನು ಹೇಳುತ್ತಾನೆ:—ಯಾವಾಕೆಯ ಕೋಪದಿಂದ ಪ್ರಪಂಚವು ಅಲ್ಲೋಲಕಲ್ಲೋಲವಾಗುವುದೊ, ಕುಪಿತಳಾಗಿ ಶಾಪವನ್ನಿತ್ತ ಆ ಪಾರ್ವತಿಯನ್ನು ಮಹೇಶ್ವರನು ಹೇಗೆ ಸಮಾಧಾನಗೊಳಿಸಿದನು?

೨. ಪೂಜ್ಯನಾದ ಆ ಮಹೇಶನು ತಾನು ದಿವ್ಯರೂಪಧಾರಿಯಾಗಿದ್ದರೂ ಪತ್ನಿಯಿಂದ ಹೇಗೆ ಶಾಪವನ್ನು ವೈಕೃತರೂಪವನ್ನು ಹೊಂದಿದನು.

೩. ಗಾಲವನು ಹೇಳುತ್ತಾನೆ:—ದೇವತೆಗಳು ದೇವಿಯ ಭಯದಿಂದ ತಮ್ಮ ರೂಪಗಳನ್ನು ಮರೆಮಾಚಕೊಂಡು ಮನುಷ್ಯಲೋಕದಲ್ಲಿ ಪ್ರತಿಮೆಗಳಲ್ಲಿ ನೆಲೆಸಿದರು.

೪. ವಿಷ್ಣುವಿನಿಂದ ಸ್ತುತಿಸಲ್ಪಟ್ಟವಳೂ, ಮಹಾಭಾಗ್ಯವಂತಳೂ, ವಿಶ್ವಮಾತೆಯೂ, ಪಾಪನಾಶಿನಿಯೂ ಆದ ಆ ಪಾರ್ವತಿಯು ಪ್ರಸನ್ನಳಾಗಿ ಅನುಗ್ರಹವನ್ನು ಮಾಡಿದಳು.

೫. ದೇವತೆಗಳ ಬಲದಿಂದ ಪಾರ್ವತಿಯು ಶಾಪವನ್ನು ಹೊಂದಿದ ಶಂಕರನು ನಿತ್ಯವೂ ಆ ದೇವಿಯನ್ನು ಸಮಾಧಾನಗೊಳಿಸಲು ಅವಳು ಶಂಕರನನ್ನು ಕುರಿತು ಇಂತೆಂದಳು.

ಏತೇ ದೇವಾ ವಿಶ್ವಪೂಜ್ಯಾ ವಿಶ್ವಸ್ಯ ಚ ವರಪ್ರದಾಃ ।
ಮತ್ಪ್ರಸಾದಾದ್ಭವಿಷ್ಯಂತಿ ಭಕ್ತಿತಸ್ತೋಷಿತಾ ನರೈಃ ॥ ೬ ॥
ತ್ವಾಮೃತೇ ಮಮ ಕರ್ಮೇದಂ ಕೃತಂ ಸಾಧುವಿನಿಂದಿತಂ ।
ವೇದ್ಯಾಂ ವಿವಾಹಕಾಲೇ ಚ ಪ್ರತ್ಯಕ್ಷಂ ಸರ್ವಸಾಕ್ಷಿಕಂ ॥ ೭ ॥
ಯತ್ಸಪ್ತಮಂಡಲಾನಾಂ ಚ ಗಮನಂ ಚ ಕರಾರ್ಪಣಂ ।
ವಹ್ನಿಶ್ಚ ವರುಣಃ ಕೃಷ್ಣೋ ದೇವತಾಶ್ಚ ಸ ವಲ್ಲಭಾಃ ॥ ೮ ॥
ಚತುರ್ದಿಕ್ಷ್ವಂಗಸಂಯುಕ್ತಾ ದೇವಬ್ರಾಹ್ಮಣಸಂಯುತಾಃ ।
ಏತೇಷಾಮಗ್ರತೋ ದಿವ್ಯಂ ಕೃತ್ವಾ ತ್ವಂ ಜನಸಂಸದಿ ॥ ೯ ॥
ಪ್ರಮಾದಾತ್ಸತ್ವಮಾಪನ್ನೋ ವ್ಯಭಿಚಾರಂ ಕಥಂ ಕೃಥಾಃ ।
ಗುರವೋಽಪಿ ನ ಸನ್ಮಾರ್ಗೇ ಪ್ರವರ್ತಂತೇ ಜನೌಘವತ್ ॥ ೧೦ ॥
ನಿಗ್ರಾಹ್ಯಾಃ ಸರ್ವಲೋಕೇಷು ಪ್ರಬುದ್ಧೈಃ ಶ್ರೂಯತೇ ಶ್ರುತೌ ।
ಪುತ್ರೇಣಾಽಪಿ ಪಿತಾ ಶಾಸ್ಯಃ ಶಿಷ್ಯೇಣಾಽಪಿ ಗುರುಃ ಸ್ವಯಂ ॥ ೧೧ ॥
ಕ್ಷತ್ರಿಯೈರ್ಬ್ರಾಹ್ಮಣಃ ಶಾಸ್ಯೋ ಭಾರ್ಯಯಾ ಚ ಪತಿಸ್ತಥಾ ।
ಉನ್ಮಾರ್ಗಗಾಮಿನಂ ಶ್ರೇಷ್ಠಮಪಿ ವೇದಾಂತಪಾರಗಂ ॥ ೧೨ ॥
ನೀಚೈರಪಿ ಪ್ರಶಾಸ್ಯೇತ ಶ್ರುತಿರಾಹ ಸನಾತನೀ ।
ಸನ್ಮಾರ್ಗ ಏವ ಸರ್ವತ್ರ ಪೂಜ್ಯತೇ ನಾಽಪಥಃ ಕ್ವಚಿತ್ ॥ ೧೩ ॥

---

೬–೧೩. ನರರಿಂದ ಭಕ್ತಿಯಿಂದ ಸಂತೋಷಗೊಳಿಸಲ್ಪಟ್ಟ ಈ ದೇವತೆಗಳು ನಿನ್ನನ್ನು ಬಿಟ್ಟು ನನ್ನ ಅನುಗ್ರಹದಿಂದ ಜಗತ್ಪೂಜ್ಯರೂ, ಜಗತ್ತಿಗೆ ವರಪ್ರದರೂ ಆಗುವರು. ನೀನು ಸಜ್ಜನನಿಂದ್ಯವಾದ ಕಾರ್ಯವನ್ನೆಸಗಿರುವೆ. ನೀನು ವಿವಾಹ ಕಾಲದಲ್ಲಿ ವಿವಾಹವೇದಿಯಲ್ಲಿ ಅಗ್ನಿ, ವರುಣ, ಕೃಷ್ಣ ಪತ್ನಿಯರಿಂದಲೂ, ಪರಿವಾರದಿಂದಲೂ, ದೇವಬ್ರಾಹ್ಮಣರಿಂದಲೂ ಸಹಿತರಾದ ದೇವತೆಗಳು ಇವರ ಮುಂದೆ ಜನರ ಸಭೆಯಲ್ಲಿ ದಿವ್ಯವಾದ ಸಪ್ತಪದಿ, ಪಾಣಿಗ್ರಹಣ ಇವುಗಳನ್ನು ಮಾಡಿಕೊಂಡು ಪ್ರಮಾದದಿಂದ ಹೀಗೆ ವ್ಯತ್ಯಾಸವಾಗಿ ಹೇಗೆ ನಡೆದಿರುವೆ? ಮಹಾಜನರಂತೆ ನಡೆಯದ ಗುರುಗಳೂ ನಿಗ್ರಹಯೋಗ್ಯರೆಂಬುದನ್ನು ಪ್ರಾಜ್ಞರಿಂದ ಕೇಳಿದ್ದೇನೆ. ಉನ್ಮಾರ್ಗಗಾಮಿಯಾದ ತಂದೆಯನ್ನು ಮಗನೂ, ಗುರುವನ್ನು ಶಿಷ್ಯನೂ, ಬ್ರಾಹ್ಮಣನನ್ನು ಕ್ಷತ್ರಿಯನೂ, ಗಂಡನನ್ನು ಹೆಂಡತಿಯೂ, ವೇದಾಂತ ಪಾರಂಗತನಾಗಿದ್ದರೂ ಉತ್ತಮನನ್ನು ನೀಚರೂ ದಂಡಿಸಬಹುದೆಂದು ಸನಾತನ ಶ್ರುತಿಯು ಸಾರುತ್ತಿದೆ. ಎಲ್ಲೆಡೆಯಲ್ಲಿಯೂ ಸನ್ಮಾರ್ಗವನ್ನು ಪೂಜಿಸುವರೇ ಹೊರತು ದುರ್ಮಾರ್ಗವನ್ನು ಯಾರೂ ಮಾನಿಸುವುದಿಲ್ಲ.

ಯೇನ ಸ್ವಕುಲಜೋ ಧರ್ಮಸ್ತ್ಯಕ್ತಃ ಸ ಪತಿತೋ ಭವೇತ್ ।
ಮೃತಶ್ಚ ನರಕಂ ಪ್ರಾಪ್ಯ ದುಃಖಭಾರೇಣ ಯುಜ್ಯತೇ ॥ ೧೪ ॥
ಧರ್ಮಂ ತ್ಯಜತಿ ನಾಸ್ತಿಕ್ಯಾತ್ ಜ್ಞಾತಿಭೇದಮುಪಾಗತಃ ।
ಸ ನಿಗ್ರಾಹ್ಯಃ ಸರ್ವಲೋಕೈರ್ಮನುಧರ್ಮಪರಾಯಣೈಃ ॥ ೧೫ ॥
ಕುಲಧರ್ಮಾನ್ ಜ್ಞಾತಿಧರ್ಮಾನ್ ದೇಶಧರ್ಮಾನ್ ಮಹೇಶ್ವರ ।
ಯೇ ತ್ಯಜಂತಿ ಚ ತೇಽವಶ್ಯಂ ಕುಲಾಚ್ಚ ಪತಿತಾ ಜನಾಃ ॥ ೧೬ ॥
ಅಗ್ನಿತ್ಯಾಗೋ ವ್ರತತ್ಯಾಗೋ ವಚನತ್ಯಾಗ ಏವ ಚ ।
ಧರ್ಮತ್ಯಾಗೋ ನೈವ ಕಾರ್ಯಃ ಕುರ್ವನ್ ಪತಿತ ಏವ ಹಿ ॥ ೧೭ ॥
ನ ಪಿತಾ ನ ಚ ತೇ ಮಾತಾ ನ ಭ್ರಾತಾ ಸ್ವಜನೋಽಪಿ ಚ ।
ಪಶ್ಯತೇ ತವ ವಾರ್ತಾಂ ಚ ಅಸ್ಪೃಶ್ಯತ್ವಮುದನ್ವಿಷಂ ॥ ೧೮ ॥
ಅಸ್ಥಿಮಾಲಾ ಚಿತಾಭಸ್ಮ ಜಟಾಧಾರೀ ಕುಚೈಲವಾನ್ ।
ಚಪಲೋ ಮುಕ್ತಮರ್ಯಾದಸ್ತಸ್ಥಂ ನಾಽರ್ಹಸಿ ಮೇಽಗ್ರತಃ ॥ ೧೯ ॥
ಅಬ್ರಹ್ಮಣ್ಯೋಽವ್ರತೀ ಭಿಕ್ಷುರ್ದುಷ್ಟಾತ್ಮಾ ಕಪಟೀ ಸದಾ ।
ನಾಽರ್ಹಸಿ ತ್ವಂ ಮಮ ಪುರಃ ಸಂಭಾಷಯಿತುಮೀಶ್ವರ ॥ ೨೦ ॥

---

೧೪. ತನ್ನ ಕುಲಧರ್ಮವನ್ನು ತ್ಯಜಿಸಿದವನು ಪತಿತನಾಗುವನು. ಅವನು ಮೃತನಾಗಿ ನರಕವನ್ನು ಹೊಂದಿ ಅತ್ಯಂತ ದುಃಖಿಗೊಳ್ಳುವನು.

೧೫. ನಾಸ್ತಿಕ್ಯದಿಂದ ಜ್ಞಾತಿಗಳಿಂದ ಭಿನ್ನನಾಗಿ ಧರ್ಮವನ್ನು ತ್ಯಜಿಸುವವನನ್ನು ಮನುಧರ್ಮಾನುಷ್ಠಾನನಿರತರಾದ ಸಕಲ ಮಾನವರೂ ನಿಗ್ರಹಿಸುವರು.

೧೬. ಮಹೇಶ್ವರ! ಕುಲ, ಜ್ಞಾತಿ, ದೇಶಧರ್ಮಗಳನ್ನು ಬಿಡುವವರು ಕುಲದಿಂದ ಪತಿತರಾಗುವರು.

೧೭. ಅಗ್ನಿ, ವ್ರತ, ವಚನ ಮತ್ತು ಧರ್ಮಗಳನ್ನು ತ್ಯಜಿಸಲೇಬಾರದು. ಹಾಗೆ ತ್ಯಜಿಸಿದವನು ಪತಿತನಾಗುವನು.

೧೮. ನೀನು ವಿಷವನ್ನು ಭಕ್ಷಿಸಿ ಅಸ್ಪೃಶ್ಯನಾಗಿರುವೆ. ಆದುದರಿಂದ ತಂದೆ, ತಾಯಿ, ಸಹೋದರ, ಬಂಧುಗಳು ನಿನ್ನ ಸಮಾಚಾರವನ್ನು ಅರಿತುಕೊಳ್ಳುವುದಿಲ್ಲ.

೧೯. ಶಂಕರ! ನೀನು ನನ್ನ ಮುಂದೆ ಮೂಳೆಗಳ ಸರ, ಚಿತೆಯ ಬೂದಿ, ಜಟೆ, ಕೊಳೆಬಟ್ಟೆ ಇವುಗಳನ್ನು ಧರಿಸಿ ಚಪಲತೆಯಿಂದ ಮರ್ಯಾದೆಯಿಲ್ಲದವನಾಗಿ ಇರಲು ಅರ್ಹನಲ್ಲ.

೨೦. ಅಬ್ರಹ್ಮಣ್ಯನೂ, ವ್ರತವಿಲ್ಲದವನೂ, ಭಿಕ್ಷೆಬೇಡುವವನೂ, ದುಷ್ಟನೂ, ಚಿಂದಿಬಟ್ಟೆಯನ್ನುಟ್ಟವನೂ ಆದ ನೀನು ನನ್ನ ಮುಂದೆ ಮಾತಾಡಲು ಯೋಗ್ಯನಲ್ಲ.

ಏವಂ ಸಾ ರುದತೀ ದೇವೀ ಬಾಷ್ಪವ್ಯಾಕುಲಲೋಚನಾ ।
ಮಹಾದುಃಖಯುತೈವಾಽಽಸೀದ್ದೇವೇಶೇಽನುನಯತ್ಯಪಿ ॥ ೨೧ ॥
ಪುನರೇವ ಪ್ರಕುಪಿತಾ ಹರಂ ಪ್ರೋವಾಚ ಭಾಮಿನೀ ।
ತವಾರ್ಜವಂ ನ ಹೃದಯೇ ಕಾಠಿನ್ಯಂ ವೇದ್ಮಿ ನಿತ್ಯದಾ ॥ ೨೨ ॥
ಬ್ರಾಹ್ಮಣೈಸ್ತ್ವಸುರೈರುಕ್ತಂ ತನ್ಮೃಷಾ ಪ್ರತಿಭಾತಿ ಮೇ ।
ಯಸ್ಮಾನ್ಮಯಿ ಮಹಾದುಷ್ಟಭಾವ ಏವ ಕೃತಸ್ತ್ವಯಾ ॥ ೨೩ ॥
ಬ್ರಾಹ್ಮಣಾ ವಂಚಿತಾ ಯಸ್ಮಾದ್ಬ್ರಾಹ್ಮಣೈಸ್ತ್ವಂ ಹನಿಷ್ಯಸೇ ।
ಏವಮುಕ್ತ್ವಾ ಭಗವತೀ ಪುನರಾಹ ನ ಕಿಂಚನ ॥ ೨೪ ॥
ಈಶಃ ಪ್ರಸನ್ನವದನಾಮುಪಚಾರೈರಥಾಽಕರೋತ್ ।
ಶನೈರ್ನೀತಿಮಯೈರ್ವಾಕ್ಯೈರ್ಹೇತುಮದ್ಭಿರ್ಮಹೇಶ್ವರಃ ॥ ೨೫ ॥
ಪ್ರಸನ್ನಲೋಚನಾಂ ಜ್ಞಾತ್ವಾ ಕಿಂಚಿತ್ಪ್ರಾಹ ಹರಸ್ತತಃ ।
ಕೋಪೇನ ಕಲುಷಂ ವಕ್ತ್ರಂ ಪೂರ್ಣಚಂದ್ರಸಮಪ್ರಭಂ ॥ ೨೬ ॥
ಕಸ್ಮಾತ್ತ್ವಂ ಕುರುಷೇ ಭದ್ರೇ ಯುಕ್ತಮೇವ ವಚೋ ನ ತೇ ।
ಸರ್ವಭೂತದಯಾ ಕಾರ್ಯಾ ಪ್ರಾಣಿನಾಂ ಹಿ ಹಿತೇಚ್ಛಯಾ ॥ ೨೭ ॥

---

೨೧. ಈಶ್ವರನು ಸಮಾಧಾನಗೊಳಿಸುತ್ತಿದ್ದರೂ ಆ ಪಾರ್ವತಿಯು ಅಳುತ್ತ, ಕಣ್ಣೀರನ್ನು ಸುರಿಸುತ್ತ ಅತ್ಯಂತವಾಗಿ ದುಃಖಗೊಂಡಳು.

೨೨. ಅವಳು ಕುಪಿತಳಾಗಿ ಈಶ್ವರನನ್ನು ಕುರಿತು ಮರಳಿ ಇಂತೆಂದಳು. "ನಿನ್ನ ಹೃದಯದಲ್ಲಿ ಆರ್ಜವವಿಲ್ಲ. ಯಾವಾಗಲೂ ಕಾಠಿನ್ಯವಿದೆಯೆಂದು ನಾನು ತಿಳಿಯುತ್ತೇನೆ.

೨೩. ನೀನು ನನ್ನಲ್ಲಿ ಅತಿ ದುಷ್ಟತನವನ್ನು ತೋರಿರುವುದರಿಂದ ಬ್ರಾಹ್ಮಣರೂ, ಅಸುರರೂ ಹೇಳಿರುವುದು ಸುಳ್ಳೆಂದು ನನಗೆ ತೋರುತ್ತದೆ.

೨೪. ನೀನು ಬ್ರಾಹ್ಮಣರನ್ನು ಮೋಸಗೊಳಿಸಿದ್ದರಿಂದ ಅವರು ನಿನ್ನನ್ನು ನಿಗ್ರಹಿಸುವರು." ಪಾರ್ವತಿಯು ಹೀಗೆ ಹೇಳಿ ಮರಳಿ ಏನನ್ನೂ ಹೇಳಲಿಲ್ಲ.

೨೫. ಶಿವನು ಉಪಚಾರಗಳಿಂದಲೂ, ನೀತಿ ಮತ್ತು ಯುಕ್ತಿಗಳಿಂದ ಕೂಡಿದ ಮಾತುಗಳಿಂದಲೂ ಆ ಪಾರ್ವತಿಯನ್ನು ಮೆಲ್ಲನೆ ಪ್ರಸನ್ನಮುಖಳನ್ನಾಗಿ ಮಾಡಿದನು.

೨೬–೨೭. ಬಳಿಕ ಶಂಕರನು ಅವಳು ಪ್ರಸನ್ನನಯನಳಾಗಿರುವುದನ್ನು ಅರಿತು ಮೆಲ್ಲಮೆಲ್ಲನೆ ಮಾತಾಡಿದನು. "ಎಲೌ ಮಂಗಳಕರಳೆ! ನೀನು ಪೂರ್ಣಚಂದ್ರನಂತೆ ಕಾಂತಿಯುಳ್ಳ ಮುಖವನ್ನು ಏಕೆ ಕೋಪದಿಂದ ಕಲುಷವನ್ನಾಗಿ ಮಾಡುವೆ? ನಿನ್ನ ಈ ಮಾತು ಉಚಿತವಲ್ಲ. ಪ್ರಾಣಿಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಸಕಲ ಭೂತಗಳಲ್ಲಿಯೂ ದಯೆ ತೋರಬೇಕು.

ಯದ್ಯಪೀಷ್ಟೋ ಹಿ ಯಸ್ಯಾರ್ಥೋ ನ ಕಾರ್ಯಂ ಪರಪೀಡನಮ್ ।
ಜಗತ್ಸರ್ವಂ ಸುತಪ್ರಾಯಂ ತವಾಽಸ್ತಿ ವರವರ್ಣಿನಿ ॥ ೨೮ ॥
ಜಗತ್ಪೂಜ್ಯಾ ತ್ವಮೇವೈಕಾ ಸರ್ವರೂಪಧರಾಽನಘೇ ।
ಮಯಾ ಯದಿ ಕೃತಂ ಕರ್ಮಾಽವದ್ಯಂ ದೇವಹಿತಾಯ ವೈ ॥ ೨೯ ॥
ತಥಾಽಪ್ಯೇವಂ ತವಸುತೋ ಭವಿಷ್ಯತಿ ನ ಸಂಶಯಃ ।
ಅಥವಾ ಮಮ ಸರ್ವೇಭ್ಯಃ ಪ್ರಾಣೇಭ್ಯೋಽಪಿ ಗರೀಯಸೀ ॥ ೩೦ ॥
ಯದಿಚ್ಛಸಿ ತಥಾ ಕುರ್ಯಾಂ ತಥಾ ತವ ಮನೋರಥಾನ್ ।
ಪ್ರಸನ್ನವದನಾ ಭೂತ್ವಾ ಕಥಯಸ್ವ ವರಾನನೇ ॥ ೩೧ ॥
ಇತ್ಯುಕ್ತ್ವಾ ಸಾ ಭಗವತೀ ಪುನರಾಹ ಮಹೇಶ್ವರಮ್ ।
ಚಾತುರ್ಮಾಸ್ಯೇ ಚ ಸಂಪ್ರಾಪ್ತೇ ಮಹಾವ್ರತಧರೋ ಯದಿ ॥ ೩೨ ॥
ದೇವತಾನಾಂ ಚ ಪ್ರತ್ಯಕ್ಷಂ ತಾಂಡವಂ ನರ್ತಸೇ ಯದಿ ।
ಪಾರಯಿತ್ವಾ ವ್ರತಂ ಸಮ್ಯಗ್ಬ್ರಹ್ಮಚರ್ಯಂ ಮಹೇಶ್ವರ ॥ ೩೩ ॥
ಮತ್ಪ್ರೀತ್ಯೈ ಯದಿ ದೇಹಾರ್ಥಂ ವೈಷ್ಣವಂ ಚ ಪ್ರಯಚ್ಛಸಿ ।
ಶಾಪಸ್ಯಾಽನುಗ್ರಹಂ ಕುರ್ಯಾಂ ಪ್ರಸನ್ನವದನಾ ಸತೀ ॥ ೩೪ ॥
ನಾಽನ್ಯಥಾ ಮಮ ಚಿತ್ತಂ ತ್ವಾಂ ವಿಶ್ವಾಸಮನುಗಚ್ಛತಿ ।
ತಚ್ಛ್ರುತ್ವಾ ಭಗವಾಂಸ್ತುಷ್ಟಸ್ತಥೇತಿ ಪ್ರತ್ಯುವಾಚ ತಾಮ್ ॥ ೩೫ ॥

---

೨೮. ಯಾವುದಾದರೂ ಪ್ರಯೋಜನವು ತನಗಿಷ್ಟವಾಗಿದ್ದರೂ ಅದಕ್ಕಾಗಿ ಇನ್ನೊಬ್ಬರನ್ನು ಪೀಡಿಸಬಾರದು. ಪ್ರಿಯಳೆ! ಜಗತ್ತೆಲ್ಲ ನಿನಗೆ ಮಕ್ಕಳಂತಿರುವುದು.

೨೯–೩೧. ನಿರ್ದುಷ್ಟಳಾದ ಪಾರ್ವತಿಯೆ! ಸಕಲ ರೂಪವನ್ನು ಧರಿಸಿರುವ ನೀನೊಬ್ಬಳೇ ಜಗತ್ಪೂಜ್ಯಳಾಗಿರುವೆ. ಒಂದುವೇಳೆ ನಾನು ದೇವತೆಗಳ ಹಿತಕ್ಕಾಗಿ ದುಷ್ಟಕಾರ್ಯವನ್ನೇ ಎಸಗಿರಬಹುದು. ಆದರೂ ನಿನಗೆ ನಿಶ್ಚಯವಾಗಿಯೂ ಮಗನಾಗುವನು. ಅಥವಾ ನೀನು ನನಗಿಂತಲೂ ಸಕಲ ಪ್ರಾಣಿಗಳಿಗಿಂತಲೂ ಶ್ರೇಷ್ಠಳಾಗಿರಲು ಬಯಸುವುದಾದರೆ ಹಾಗೆಯೇ ನಿನ್ನ ಮನೋರಥಗಳನ್ನು ಈಡೇರಿಸುವೆನು. ಪ್ರಸನ್ನವದನಳಾಗಿ ಅದನ್ನು ನನಗೆ ಹೇಳು."

೩೨–೩೫. ಈಶ್ವರನು ಹೀಗೆನ್ನಲು, ಪೂಜ್ಯಳಾದ ಪಾರ್ವತಿಯು ಮಹೇಶ್ವರನನ್ನು ಕುರಿತು ಇಂತೆಂದಳು. " ನೀನು ಚಾತುರ್ಮಾಸ್ಯವು ಬರಲು ನನ್ನ ಪ್ರೀತಿಗಾಗಿ ದೇಹಲಾಭಕ್ಕೋಸ್ಕರ ಬ್ರಹ್ಮಚಾರಿಯಾಗಿ ವೈಷ್ಣವವ್ರತವನ್ನಾಚರಿಸಿದರೆ, ದೇವತೆಗಳ ಮುಂದೆ ತಾಂಡವನರ್ತನ ಮಾಡಿದರೆ ನಾನು ಪ್ರಸನ್ನಮುಖಳಾಗಿ ಶಾಪಕ್ಕೆ ಅನುಗ್ರಹ ಮಾಡುವೆನು. ಬೇರೆ ವಿಧದಲ್ಲಿ ನನ್ನ ಮನಸ್ಸು ನಿನ್ನಲ್ಲಿ ವಿಶ್ವಾಸವನ್ನು ಹೊಂದುವುದಿಲ್ಲ. ಅದನ್ನು ಕೇಳಿ ಪೂಜ್ಯನಾದ ಶಂಕರನು ಹಾಗೆಯೇ ಆಗಲೆಂದು ಉತ್ತರ ಕೊಟ್ಟನು.

ಸಾಽಪಿ ಹೃಷ್ಟಾ ಭಗವತೀ ಶಾಪಸ್ಯಾಽನುಗ್ರಹೇ ವೃತಾ ॥ ೩೬ ॥
ಇದಂ ಪುರಾಣಂ ಮನುಜಃ ಶೃಣೋತಿ
ಶ್ರದ್ಧಾಯುಕ್ತೋಽಭೇದಬುದ್ಧ್ಯಾ ದೃಢತ್ವಂ ।
ತಸ್ಯಾವಶ್ಯಂ ಜೀವಿತಂ ಸರ್ವಸಿದ್ಧಂ
ಮರ್ತ್ಯಾಃ ಸತ್ಯಾತ್ತಚ್ಛ್ರಯತ್ವಂ ಪ್ರಯಾಂತಿ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಂಕರಕೃತಪಾರ್ವತ್ಯನುನಯವರ್ಣನಂ" ನಾಮ
ತ್ರಿಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೩೬. ಶಾಪಕ್ಕೆ ಅನುಗ್ರಹಮಾಡಲು ನಿರತಳಾದ ಪಾರ್ವತಿಯೂ ಸಂತೋಷಗೊಂಡಳು.

೩೭. ಈ ಹಿಂದಿನ ಕಥೆಯನ್ನು ಶ್ರದ್ಧೆಯಿಂದ ಕೇಳಿದ ಮಾನವನು ಅಭೇದ ಬುದ್ಧಿದಾರ್ಢ್ಯವನ್ನೂ, ಜೀವಿತದಲ್ಲಿ ಸಕಲಸಿದ್ಧಿಯನ್ನೂ ಪಡೆದು ಸತ್ಯವಾಗಿ ಆ ಮಹೇಶ್ವರನನ್ನು ಆಶ್ರಯಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಂಕರಕೃತಪಾರ್ವತ್ಯನುನಯವರ್ಣನ"ವೆಂಬ
ಇನ್ನೂರ ಐವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಹರತಾಂಡವನರ್ತನವರ್ಣನಂ

ಶೂದ್ರ ಉವಾಚ :—

ಇದಮಾಶ್ಚರ್ಯರೂಪಂ ಮೇ ಪ್ರತಿಭಾತಿ ವಚಸ್ತವ ।
ಯದ್ಯಪಿ ಸ್ಯಾನ್ಮಹಾಕ್ಲೇಶೋ ವದತಸ್ತವ ಸುವ್ರತ ॥ ೧ ॥
ತಥಾಽಪಿ ಮಮ ಭಾಗ್ಯೇನ ಪುಣ್ಯೈರ್ಮದ್ಗೃಹಂ ಗತಃ ।
ನ ತೃಪ್ಯೇ ತ್ವನ್ಮುಖಾಂಭೋಜಾಚ್ಚ್ಯುತಂ ವಾಕ್ಯಾಮೃತಂ ಪುನಃ ॥ ೨ ॥
ಪಿಬನ್ ಗೌರೀಕಥಾಖ್ಯಾನಂ ವಿಶೇಷಗುಣಪೂರಿತಂ ।
ಕಥಂ ಮಹೇಶ್ವರೋ ನೃತ್ಯಂ ಚಕಾರ ಸುರಸಂವೃತಃ ॥ ೩ ॥
ಚಾತುರ್ಮಾಸ್ಯೇ ಕಥಂ ಜಾತಂ ಕಿಂ ಗ್ರಾಹ್ಯಂ ವ್ರತಮುಚ್ಯತೇ ।
ಅನುಗ್ರಹಂ ಕೃತವತೀ ಸಾ ಕಥಂ ಕೋಽಪ್ಯನುಗ್ರಹಃ ॥ ೪ ॥
ಏತದ್ವಿಸ್ತರತೋ ಬ್ರೂಹಿ ಪೃಚ್ಛತೋ ಮೇ ದ್ವಿಜೋತ್ತಮ ।
ಭಗವಾನ್ ಪೂಜ್ಯತೇ ಲೋಕೇ ಮಮಾಽನುಗ್ರಹಕಾರಕಃ ॥ ೫ ॥
ಪ್ರಸನ್ನವದನೋ ಭೂತ್ವಾ ಸ್ವಸ್ಥಃ ಕಥಯ ಸುವ್ರತ ।
ಗಾಲವಶ್ಚಾಽಪಿ ತಚ್ಛ್ರುತ್ವಾ ಪುನರಾಹ ಪ್ರಹೃಷ್ಟವಾನ್ ॥ ೬ ॥

---

### ಕನ್ನಡದ ಅನುವಾದ

#### ಹರತಾಂಡವನರ್ತನವರ್ಣನ

೧–೩. ಶೂದ್ರನು ಹೇಳುತ್ತಾನೆ:—ಮಹರ್ಷಿಯೆ! ನಿನ್ನೀಮಾತು ನನಗೆ ಆಶ್ಚರ್ಯಕರವಾಗಿ ಕಾಣುತ್ತಿದೆ. ಆಲೋಚಿಸಿದರೆ ಹೇಳುತ್ತಿರುವ ನಿನಗೆ ಅತ್ಯಂತ ಕ್ಲೇಶವುಂಟಾಗುವುದು. ಆದರೂ ನನ್ನ ಭಾಗ್ಯದಿಂದಲೂ, ಪುಣ್ಯದಿಂದಲೂ ಮನೆಗೆ ಬಂದ ನಿನ್ನ ವದನಕಮಲದಿಂದ ಅತಿಶಯ ಗುಣಗಳಿಂದ ಕೂಡಿ ಹೊರಸೂಸಿದ ಗೌರೀಕಥಾಖ್ಯಾನ ವಿಷಯಕವಾದ ವಚನಾಮೃತವನ್ನು ಕುಡಿಯುತ್ತ ತೃಪ್ತನಾಗುವುದಿಲ್ಲ. ಮಹೇಶ್ವರನು ದೇವತೆಗಳೊಡನೆ ಹೇಗೆ ನೃತ್ಯ ಮಾಡಿದನು?

೪. ಚಾತುರ್ಮಾಸ್ಯದಲ್ಲಿ ಯಾವ ವ್ರತವು ಹೇಗೆ ಗ್ರಾಹ್ಯವಾಯಿತು? ಆ ಪಾರ್ವತಿಯು ಹೇಗೆ ಅನುಗ್ರಹಮಾಡಿದಳು? ಅನುಗ್ರಹವಾವುದು?

೫–೬. ನನಗೆ ಅನುಗ್ರಹಮಾಡುವ ಪೂಜ್ಯನಾದ ಶಿವನನ್ನು ಹೇಗೆ ಪೂಜಿಸುತ್ತಾರೆ? ಇವುಗಳನ್ನು ನೀನು ಪ್ರಸನ್ನಮುಖನೂ, ಸ್ಥಿರಚಿತ್ತನೂ ಆಗಿ ಕೇಳುತ್ತಿರುವ ನನಗೆ ವಿಸ್ತಾರವಾಗಿ ಹೇಳು. ಗಾಲವನೂ ಆ ಮಾತನ್ನು ಕೇಳಿ ಸಂತೋಷದಿಂದ ಮರಳಿ ಹೇಳಿದನು.

ಗಾಲವ ಉವಾಚ:—

ಇತಿಹಾಸಮಿಮಂ ಪುಣ್ಯಂ ಕಥಯಾಮಿ ತವಾಽನಘ ।
ಶೃಣುಷ್ವಾಽವಹಿತೋ ಭೂತ್ವಾ ಯಜ್ಞಾಽಯುತಫಲಪ್ರದಂ ॥ ೭ ॥
ಚಾತುರ್ಮಾಸ್ಯೇಽಥ ಸಂಪ್ರಾಪ್ತೇ ಹರೋ ಭಕ್ತಿಸಮನ್ವಿತಃ ।
ಬ್ರಹ್ಮಚರ್ಯವ್ರತಪರಃ ಪ್ರಹೃಷ್ಟವದನೋಽಭವತ್ ॥ ೮ ॥
ದೇವತಾನಾಂ ಚ ಸಂಕಲ್ಪಂ ಮಹರ್ಷೀಣಾಂ ಚಕಾರ ಹ ।
ಸಮಾಗತ್ಯ ತತೋ ದೇವಾ ಮಂದರಾಚಲಮಾಸ್ಥಿತಾಃ ॥ ೯ ॥
ಪ್ರಣಮ್ಯ ಚ ಮಹೇಶಾನಂ ತಸ್ಥುಃ ಪ್ರಾಂಜಲಯೋಽಗ್ರತಃ ।
ತಾನುವಾಚ ಸುರಾನ್ ಸರ್ವಾನ್ ಹರೋ ದೃಷ್ಟ್ವಾ ಸಮಾಗತಾನ್ ॥೧೦॥
ಪಾರ್ವತ್ಯಾಽಭಿಹಿತಂ ಪ್ರಾಹ ಕಸ್ಮಿನ್ ಕಾರ್ಯಾಂತರೇ ಸತಿ ।
ಮಯಾ ನಿಯುಕ್ತೇಽಭಿನಯೇ ಯತ್ರ ಸಾಹಾಯ್ಯಕಾರಿಣಃ ॥ ೧೧ ॥
ಭವಂತ್ವಿಂದ್ರಪುರೋಗಾಶ್ಚ ಚಾತುರ್ಮಾಸ್ಯೇ ಸಮಾಗತೇ ।
ತೇ ತಥೋಚುಶ್ಚ ಸಂಹೃಷ್ಟಾ ನಮಸ್ಕೃತ್ಯ ಚ ಶೂಲಿನಂ ॥ ೧೨ ॥
ಸ್ವಂ ಸ್ವಂ ಭವನಮಾಜಗ್ಮುರ್ವಿಮಾನೈಃ ಸೂರ್ಯಸನ್ನಿಭೈಃ ।
ತಥಾಽಽಷಾಢೇ ಶುಕ್ಲಪಕ್ಷೇ ಚತುರ್ದಶ್ಯಾಂ ಮಹೇಶ್ವರಃ ॥ ೧೩ ॥
ಪ್ರನರ್ತಯಿತುಮಾರೇಭೇ ಭವಾನೀ ತೋಷಣಾಯ ಚ ।
ಮಂದರೇ ಪರ್ವತಶ್ರೇಷ್ಠೇ ತತ್ರ ಜಗ್ಮುರ್ಮಹರ್ಷಯಃ ॥ ೧೪ ॥

---

೭. ಗಾಲವನು ಹೇಳುತ್ತಾನೆ:—ಎಲೈ ಪುಣ್ಯಶಾಲಿಯೆ! ನಿನಗೆ ಈ ಪುಣ್ಯಕರವಾದ ಇತಿಹಾಸವನ್ನು ಹೇಳುತ್ತೇನೆ. ಹತ್ತುಸಾವಿರ ಯಜ್ಞಗಳ ಫಲವನ್ನು ಕೊಡುವ ಇದನ್ನು ಸಾವಧಾನಮನಸ್ಸಿನಿಂದ ಕೇಳು.

೮. ಚಾತುರ್ಮಾಸ್ಯವು ಬರಲು ಶಂಕರನು ಭಕ್ತಿಯಿಂದ ಕೂಡಿದವನೂ, ಬ್ರಹ್ಮಚರ್ಯವ್ರತನಿರತನೂ, ಸಂತೋಷಗೊಂಡ ಮನಸ್ಸುಳ್ಳವನೂ ಆದನು.

೯. ಅವನು ದೇವತೆಗಳನ್ನೂ, ಮಹರ್ಷಿಗಳನ್ನೂ ಮನಸ್ಸಿನಲ್ಲಿ ಸ್ಮರಿಸಿದನು. ಬಳಿಕ ಆ ದೇವತೆಗಳೂ, ಮಹರ್ಷಿಗಳೂ ಮಂದರಾಚಲಕ್ಕೆ ಬಂದು ನೆಲೆಸಿದರು.

೧೦–೧೯. ಅವರು ಮಹೇಶ್ವರನನ್ನು ವಂದಿಸಿ ಕೈಮುಗಿದುಕೊಂಡು ಮುಂದೆ ನಿಲ್ಲಲು ಹರನು ಬಂದಿರುವ ಆ ದೇವತೆಗಳನ್ನೆಲ್ಲ ನೋಡಿ ಯಾವುದೊ ಒಂದು ಕಾರ್ಯಕ್ಕಾಗಿ ಪಾರ್ವತಿಯು ಹೇಳಿರುವುದನ್ನು ತಿಳಿಸಿ ಚಾತುರ್ಮಾಸ್ಯದಲ್ಲಿ ನಾನು ಮಾಡುವ ಅಭಿನಯದಲ್ಲಿ ನೀವು ಸಹಾಯಮಾಡಿರಿ ಎಂದನು. ಆ ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಸಂತೋಷದಿಂದ ಶಿವನನ್ನು ವಂದಿಸಿ ಸೂರ್ಯನಂತಿರುವ ವಿಮಾನದಿಂದ ತಮ್ಮ ತಮ್ಮ ಮನೆಗೆ ತೆರಳಿದರು. ಹಾಗೆಯೇ ಮಹೇಶ್ವರನು ಆಷಾಢಶುಕ್ಲ ಚತುರ್ದಶಿಯ ದಿನ ಮಂದರಪರ್ವತದಲ್ಲಿ

ನಾರದೋ ದೇವಲೋ ವ್ಯಾಸಃ ಶುಕ್ರದ್ವೈಪಾಯನಾದಯಃ ।
ಅಂಗಿರಾಶ್ಚ ಮರೀಚಿಶ್ಚ ಕರ್ದಮಶ್ಚ ಪ್ರಜಾಪತಿಃ ॥ ೧೫ ॥
ಕಶ್ಯಪೋ ಗೌತಮಶ್ಚಾತ್ರಿರ್ವಸಿಷ್ಠೋ ಭೃಗುರೇವ ಚ ।
ಜಮದಗ್ನಿಸ್ತಥೋತ್ತಂಕೋ ರಾಮೋ ಭಾರ್ಗವ ಏವ ಚ ॥ ೧೬ ॥
ಅಗಸ್ತ್ಯಶ್ಚ ಪುಲೋಮಾಜ ಪುಲಸ್ತ್ಯಃ ಪುಲಹಸ್ತಥಾ ।
ಪ್ರಚೇತಾಶ್ಚ ಕ್ರತುಶ್ಚೈವ ತಥೈವಾನ್ಯೇ ಮಹರ್ಷಯಃ ॥ ೧೭ ॥
ಸಿದ್ಧಾ ಯಕ್ಷಾಃ ಪಿಶಾಚಾಶ್ಚ ಚಾರಣಾಶ್ಚಾರಣೈಃ ಸಹ ।
ಆದಿತ್ಯಾ ಗುಹ್ಯಕಾಶ್ಚೈವ ಸಾಧ್ಯಾಶ್ಚ ವಸವೋಽಶ್ವಿನೌ ॥ ೧೮ ॥
ಏತೇ ಸರ್ವೇ ತಥೇಂದ್ರಾದ್ಯಾ ಬ್ರಹ್ಮವಿಷ್ಣುಪುರೋಗಮಾಃ ।
ಸಮಾಜಗ್ಮುರ್ಮಹೇಶಸ್ಯ ನೃತ್ಯದರ್ಶನಲಾಲಸಾಃ ॥ ೧೯ ॥
ತತೋ ಗಣಾ ನಂದಿಮುಖಾ ರತ್ನಾನಿ ಪ್ರದದುಸ್ತಥಾ ।
ಭೂಷಣಾನಿ ಚ ವಾಸಾಂಸಿ ಮುನ್ಯಾದಿಭ್ಯೋ ಯಥಾಕ್ರಮಂ ॥ ೨೦ ॥
ತತೋ ವಾದ್ಯಸಹಸ್ರೇಷು ವಾದಿತ್ರೇಷು ಸಮಂತತಃ ।
ಸರ್ವೈರ್ಜಯೇತಿ ಚೈವೋಕ್ತಾ ಭಗವಾನ್ ಪ್ರತಮಾದಿಶತ್ ॥ ೨೧ ॥
ಭವಾನೀ ಹೃಷ್ಟಹೃದಯಾ ಮಹಾದೇವಂ ವ್ಯಲೋಕಯತ್ ।
ಜಯಾ ಚ ವಿಜಯಾ ಚೈವ ಜಯಂತೀ ಮಂಗಲಾರುಣಾ ॥ ೨೨ ॥

---

ಪಾರ್ವತಿಯನ್ನು ಸಂತೋಷಗೊಳಿಸುವುದಕ್ಕಾಗಿ ನರ್ತನಮಾಡಲು ಆರಂಭಿಸಿದನು. ಅಲ್ಲಿಗೆ ನಾರದ, ದೇವಲ, ವ್ಯಾಸ, ಶುಕ, ಅಂಗಿರಾ, ಮರೀಚಿ, ಕರ್ದಮ, ಪ್ರಜಾಪತಿ, ಕಶ್ಯಪ, ಗೌತಮ, ಅತ್ರಿ, ವಸಿಷ್ಠ, ಭೃಗು, ಜಮದಗ್ನಿ, ಉತ್ತಂಕ, ಭಾರ್ಗವರಾಮ, ಅಗಸ್ತ್ಯ, ಪುಲೋಮಾ, ಪುಲಸ್ತ್ಯ, ಪುಲಹ, ಪ್ರಚೇತಾ, ಕ್ರತು ಇವರೂ, ಇತರ ಮಹರ್ಷಿಗಳೂ, ಸಿದ್ಧರು, ಯಕ್ಷರು, ಪಿಶಾಚಗಳು, ಚಾರಣರು, ಆದಿತ್ಯರು, ಗುಹ್ಯಕರು, ಸಾಧ್ಯರು, ವಸುಗಳು, ಅಶ್ವಿನೀದೇವತೆಗಳು ಇವರೂ, ಇಂದ್ರ, ಬ್ರಹ್ಮ, ವಿಷ್ಣು ಮೊದಲಾದವರೂ ಮಹೇಶನ ನೃತ್ಯವನ್ನು ನೋಡಲು ಅಲ್ಲಿಗೆ ಬಂದರು.

೨೦. ಅನಂತರ ನಂದಿ ಮೊದಲಾದ ಗಣಗಳು ಮುನ್ಯಾದಿಗಳಿಗೆ ಕ್ರಮವಾಗಿ ರತ್ನಾಭರಣ ವಸ್ತ್ರಗಳನ್ನು ಕೊಟ್ಟರು.

೨೧. ಅನಂತರ ಸುತ್ತಲೂ ಸಕಲ ವಾದ್ಯಗಳು ಮೊಳಗುತ್ತಿರಲು, ಎಲ್ಲರೂ ಜಯ ಜಯ ಎನ್ನಲು ಶಂಕರನು ಪ್ರತವನ್ನಾರಂಭಿಸಿದನು.

೨೨–೨೩. ಪಾರ್ವತಿಯೂ ಸಂತೋಷಗೊಂಡ ಮನಸ್ಸುಳ್ಳವಳಾಗಿ ಶಂಕರನನ್ನು ನೋಡಿದಳು. ಅವಳು ಜಯಾ, ವಿಜಯಾ, ಜಯಂತೀ, ಮಂಗಲಾರುಣಾ,

ಚತುಷ್ಟಯಸಖೀಮಧ್ಯೇ ವಿರರಾಜ ಶುಭಾನನಾ ।
ತಸ್ಯಾಃ ಸಾನ್ನಿಧ್ಯಯೋಗೇನ ಜಗದ್ಭಾತಿ ಗುಣೋತ್ತರಂ ॥ ೨೩ ॥
ಯಸ್ಯಾಃ ಶರೀರಜಾ ಶೋಭಾ ವರ್ಣಿತುಂ ನೈವ ಶಕ್ಯತೇ ।
ಈಶೋಽಪಿ ಗಣಕೋಟೀಭಿರ್ನಾನಾ ವಕ್ತ್ರಾಭಿರೀಕ್ಷಿತಃ ॥ ೨೪ ॥
ಪಿಶಾಚಭೂತಸಂಘೈಶ್ಚ ವೃತಃ ಪರಮಶೋಭನಃ ।
ಸ್ವರ್ಣವೇತ್ರಧರೋ ನಂದೀ ಬಭೌ ಕಪಿಮುಖೋಽಗ್ರತಃ ॥ ೨೫ ॥
ವಿದ್ಯಾಧರಾಶ್ಚ ಗಂಧರ್ವಾಶ್ಚಿತ್ರಸೇನಾದಯಸ್ತಥಾ ।
ಚಿತ್ರನ್ಯಸ್ತಾ ಇವ ಬಭುಸ್ತತ್ರ ನಾಗಾ ಮುನೀಶ್ವರಾಃ ॥ ೨೬ ॥
ಶ್ರೀರಾಗಪ್ರಮುಖಾ ರಾಗಾಸ್ತಸ್ಯ ಪುತ್ರಾ ಮಹೌಜಸಃ ।
ಅಮೂರ್ತಾಶ್ಚೈವ ತೇ ಪುತ್ರಾ ಹರದೇಹ ಸಮುದ್ಭವಾಃ ॥ ೨೭ ॥
ಏಕೈಕಸ್ಯ ಚ ಷಡ್ಭಾರ್ಯಾಃ ಸರ್ವಾಸಾಂ ಚ ಪಿತಾಮಹಃ ।
ತಾಭಿಃ ಸಹೈವ ತೇ ರಾಗಾ ಲೀಲಾವಪುರ್ಧರಾಸ್ತಥಾ ॥ ೨೮ ॥
ಪ್ರಾದುರ್ಬಭೂವುಃ ಸಹಸಾ ಚಿಂತಿತಾಸ್ತೇನ ಶಂಭುನಾ ।
ತೇಷಾಂ ನಾಮಾನಿ ತೇ ವಚ್ಮಿ ಶೃಣುಷ್ವ ತ್ವಂ ಮಹಾಧನ ॥ ೨೯ ॥
ಶ್ರೀರಾಗಃ ಪ್ರಥಮಃ ಪುತ್ರ ಈಶ್ವರಸ್ಯ ವಿಮೋಹನಃ ।
ಆಸಾಂಚಕ್ರೇ ಭ್ರುವೋರ್ಮಧ್ಯೇ ಪರಬ್ರಹ್ಮಪ್ರದಾಯಕಃ ॥ ೩೦ ॥

---

ಈ ನಾಲ್ಕು ಮಂದಿ ಸಖಿಯರ ನಡುವೆ ವಿರಾಜಿಸಿದಳು. ಅವಳ ಸಾನ್ನಿಧ್ಯದಿಂದ ಪ್ರಪಂಚವು ಅತಿಶಯ ಗುಣಗಳುಳ್ಳುದಾಗಿ ಪ್ರಕಾಶಿಸಿತು.

೨೪–೨೫. ಆ ಪಾರ್ವತಿಯ ದೇಹಕಾಂತಿಯನ್ನು ವರ್ಣಿಸಲು ಶಕ್ಯವಾಗಲಿಲ್ಲ. ಪಿಶಾಚ, ಭೂತಗಳ ಸಮೂಹಗಳಿಂದ ಸಹಿತನಾಗಿ ಅತ್ಯಂತ ಮಂಗಳಕರನಾದ ಶಂಕರನನ್ನು ಬಗೆಬಗೆಯ ಮುಖಗಳುಳ್ಳ ಅನೇಕ ಗಣಗಳು ನೋಡಿದುವು. ಕಪಿಮುಖನಾದ ನಂದಿಯು ಚಿನ್ನದ ಬೆತ್ತವನ್ನು ಧರಿಸಿ ಮುಂದೆ ಪ್ರಕಾಶಿಸಿದನು.

೨೬. ಅಲ್ಲಿ ವಿದ್ಯಾಧರರೂ, ಚಿತ್ರಸೇನ ಮೊದಲಾದ ಗಂಧರ್ವರೂ, ನಾಗಗಳೂ, ಮುನಿವರ್ಯರೂ ಚಿತ್ರದಲ್ಲಿ ಬರೆದಂತೆ ಪ್ರಕಾಶಿಸಿದರು.

೨೭–೨೯. ಆ ಶಂಕರನು ಆಲೋಚಿಸುತ್ತಿರುವಂತೆಯೆ ಅವನಿಂದ ಜನಿಸಿದ ಶ್ರೀರಾಗ ಮೊದಲಾದ ರಾಗಗಳು ತಮ್ಮ ಆರಾರು ಮಂದಿ ಪತ್ನಿಯರು, ಅವರ ಪಿತಾಮಹ ಇವರೊಡನೆ ಲೀಲೆಯಿಂದ ಶರೀರವನ್ನು ಧರಿಸಿ ಕೂಡಲೆ ಸನ್ನಿಹಿತರಾದರು. ಅವರ ಹೆಸರನ್ನು ನಿನಗೆ ಹೇಳುವೆನು ಕೇಳು.

೩೦–೩೧. ಶ್ರೀರಾಗವೆಂಬ ಈಶ್ವರನ ಮೊದಲನೆಯ ಮಗನು ಈಶ್ವರನಿಗೆ ಅತ್ಯಂತ ಮೋಹಕನಾಗಿರುವನು. ಪರಬ್ರಹ್ಮಪ್ರದಾಯಕನಾದ ಈ ಗಣೋತ್ತಮನು

ತಸ್ಮಾದ್ಧ್ಯಕ್ಷ್ಚೈವ ಮಾಹೇಶಾತ್ಸಮುದ್ಭೂತೋ ಗಣೋತ್ತಮಃ ।
ದ್ವಿತೀಯೋಽಥ ವಸಂತೋಽಭೂತ್ಕಟಿದೇಶಾನ್ಮಹಾಯಶಾಃ ॥ ೩೧ ॥
ಮಹದಂಕಶ್ಚ ಭೂತಾನಾಂ ಚಕ್ರಾಚ್ಚೈವ ವಿಶುದ್ಧಿತಃ ।
ಪಂಚಮಸ್ತು ತೃತೀಯೋಽಭೂತ್ಸುತೋ ವಿಶ್ವವಿಭೂಷಣಃ ॥ ೩೨ ॥
ಮಹೇಶ್ವರಹೃದೋ ಜಾತಂ ಚಕ್ರಂ ಚೈವಮನಾಹತಂ ।
ನಾಸಾದೇಶಾತ್ಸಮುದ್ಭೂತೋ ಭೈರವೋ ಭೈರವಃ ಸ್ವಯಂ ॥ ೩೩ ॥
ಮಣಿಪೂರಕನಾಮೇದಂ ಚಕ್ರಂ ತದ್ಧಿ ವಿಮುಕ್ತಿದಂ ।
ಪಂಚಾಶಚ್ಚ ತಥಾ ವರ್ಣಾ ಅಂಕಾನಾಮ ಮಹೇಶ್ವರಾತ್ ॥ ೩೪ ॥
ರಾಶಯೋ ದ್ವಾದಶ ತಥಾ ನಕ್ಷತ್ರಾಣಿ ತಥೈವ ಚ ।
ಸ್ವಾಧಿಷ್ಠಾನ ಸಮುದ್ಭೂತಾ ಜಗದ್ಬೀಜಸಮನ್ವಿತಾಃ ॥ ೩೫ ॥
ಕ್ಷಣೇನ ವೃದ್ಧಿಮಾಯಾಂತಿ ತತೋ ರೇತಃ ಪ್ರವರ್ತತೇ ।
ರೇತಸಸ್ತು ಜಗತ್ಸೃಷ್ಟಂ ತದೀಶ ಜನನೇಂದ್ರಿಯಂ ॥ ೩೬ ॥
ಆಧಾರಾಚ್ಚ ಮಹಾನ್ ಷಷ್ಠೋ ನಟೋ ನಾರಾಯಣೋಽಭವತ್ ।
ಮಹೇಶವಲ್ಲಭಃ ಪುತ್ರೋ ನೀಲೋ ವಿಷ್ಣು ಪರಾಕ್ರಮಃ ॥ ೩೭ ॥
ಏತೇ ಮೂರ್ತಿಧರಾ ರಾಗಾ ಜಾತಾ ಭಾರ್ಯಾ ಸಹಾಯಿನಃ ।
ಭಾರ್ಯಾಸ್ತೇಷಾಂ ಸಮುದ್ಭೂತಾಃ ಶಿರೋಭಾಗಾತ್ಪಿನಾಕಿನಃ ॥ ೩೮ ॥

---

ಈಶ್ವರನ ಹುಬ್ಬುಗಳ ಮಧ್ಯದಿಂದ ಹುಟ್ಟಿರುವನು. ಎರಡನೆಯ ವಸಂತನು ಈಶ್ವರನ ಸೊಂಟದಿಂದ ಹುಟ್ಟಿದನು.

೩೨–೩೩. ಭೂತಗಳಿಗೆ ದೊಡ್ಡ ಚಿಹ್ನೆಯೂ, ಪ್ರಪಂಚಕ್ಕೆ ಅಲಂಕಾರ ಪ್ರಾಯನೂ ಆದ ಪಂಚಮನೆಂಬ ಮೂರನೆಯ ಮಗನು ಈಶ್ವರನ ಕಂಠದಲ್ಲಿರುವ ವಿಶುದ್ಧಿಯೆಂಬ ಚಕ್ರದಿಂದ ಹುಟ್ಟಿದನು. ಚಕ್ರವು ಈಶ್ವರನ ಹೃದಯದಿಂದಲೂ, ಭೈರವರಾಗವು ಮೂಗಿನಿಂದಲೂ ಹುಟ್ಟಿತು.

೩೪–೩೫. ಮಣಿಪೂರಕವೆಂಬ ಈ ಚಕ್ರವು ಮೋಕ್ಷವನ್ನುಂಟುಮಾಡುವುದು. ಐವತ್ತು ವರ್ಣಗಳೂ, ಅಂಕೆಗಳೂ, ದ್ವಾದಶರಾಶಿಗಳೂ, ನಕ್ಷತ್ರಗಳೂ ಈಶ್ವರನಿಂದ ಜಗದ್ಬೀಜದೊಡನೆ ತಮ್ಮ ಅಧಿಷ್ಠಾನದಲ್ಲಿ ಹುಟ್ಟಿದುವು.

೩೬–೩೭. ಅವು ಒಂದು ಕ್ಷಣದಲ್ಲಿ ವೃದ್ಧಿಗೊಳ್ಳುವುವು. ಅನಂತರ ರೇತಸ್ಸು ಉಂಟಾಯಿತು. ಆ ರೇತಸ್ಸಿನಿಂದ ಈಶ್ವರನ ಜನನೇಂದ್ರಿಯವಾದ ಜಗತ್ತು ಸೃಷ್ಟಿಯಾಯಿತು. ಆಧಾರದಿಂದ ಮಹೇಶನಿಗೆ ಪ್ರಿಯನೂ, ವಿಷ್ಣುವಿನಂತೆ ಪರಾಕ್ರಮವುಳ್ಳವನೂ ಆದ ಆರನೆಯ ನಟನಾರಾಯಣರಾಗನು ಹುಟ್ಟಿದನು.

೩೮. ಈ ರಾಗಗಳು ಶರೀರವನ್ನು ಧರಿಸಿ ಪತ್ನಿಯರೊಡನೆ ಹುಟ್ಟಿದುವು. ಇವುಗಳ ಪತ್ನಿಯರು ಈಶನ ತಲೆಯಿಂದ ಜನಿಸಿದರು.

ಷಟ್ತ್ರಿಂಶತ್ಪರಿಮಾಣೇನ ತತಸ್ತಾಸ್ತ್ವಂ ನಿಶಾಮಯ ।
ಗೌರೀ ಕೋಲಾಹಲೀ ಧೀರಾ ದ್ರಾವಿಡೀ ಮಾಲಕೌಶಿಕೀ ॥ ೩೯ ॥
ಷಷ್ಠೀ ಸ್ಯಾದ್ದೇವಗಾಂಧಾರೀ ಶ್ರೀರಾಗಸ್ಯ ಪ್ರಿಯಾ ಇಮಾಃ ।
ಆಂದೋಲಾ ಕೌಶಿಕೀ ಚೈವ ತಥಾ ಚರಮಮಂಜರೀ ॥ ೪೦ ॥
ಗಂಡಗಿರೀ ದೇವಶಾಖಾ ರಾಮಗಿರೀ ವಸಂತಗಾ ।
ತ್ರಿಗುಣಾ ಸ್ತಂಭತೀರ್ಥಾ ಚ ಅಹಿರೀ ಕುಂಕುಮಾ ತಥಾ ॥ ೪೧ ॥
ವೈರಾಟೀ ಸಾಮವೇರೀ ಚ ಷಡ್ಭಾರ್ಯಾಃ ಪಂಚಮೇ ಮತಾಃ ।
ಭೈರವೀ ಗುರ್ಜರೀ ಚೈವ ಭಾಷಾವೇಲಾಗುಲೀ ತಥಾ ॥ ೪೨ ॥
ಕರ್ಣಾಟಕೀ ರಕ್ತಹಂಸಾ ಷಡ್ಭಾರ್ಯಾ ಭೈರವಾನುಗಾಃ ।
ಬಂಗಾಲೀ ಮಧುರಾ ಚೈವ ಕಾಮೋದಾ ಚಾಕ್ಷಿನಾರಿಕಾ ॥ ೪೩ ॥
ದೇವಗಿರೀ ಚ ದೇವಾಲೀ ಮೇಘರಾಗಾನುಗಾ ಇಮಾಃ ।
ತ್ರೋಟಕೀ ಮೋಡಕೀ ಚೈವ ನರಾದುಂಬೀ ತಥೈವ ಚ ॥ ೪೪ ॥
ಮಲ್ಹಾರೀ ಸಿಂಧುಮಲ್ಹಾರೀ ನಟನಾರಾಯಣಾನುಗಾಃ ।
ಏತಾ ಹಿ ಗಿರಿಶಂ ನತ್ವಾ ಮಹೇಶಂ ಚ ಮಹೇಶ್ವರೀಂ ॥ ೪೫ ॥
ಸ್ವಮೂರ್ತಿವಾಹನೋಪೇತಾಃ ಸ್ವಭರ್ತೃಸಹಿತಾಃ ಸ್ಥಿತಾಃ ।
ಬ್ರಹ್ಮಾ ಮೃದಂಗವಾದ್ಯೇನ ತೋಷಯಾಮಾಸ ಶಂಕರಂ ॥ ೪೬ ॥
ಚತುರಕ್ಷರವಾದ್ಯೇನ ಸುವಾದ್ಯಂ ಚಾಕರೋತ್ಪುನಃ ।
ತಾಲಕ್ರಿಯಾಂ ಮಹೇಶಾಯ ದರ್ಶಯಾಮಾಸ ಕೇಶವಃ ॥ ೪೭ ॥

---

೩೯-೪೭. ಅನಂತರ ಅವು ಮೂವತ್ತಾರು ಆದುವು. ಅವುಗಳನ್ನು ನೀನು ಕೇಳು. ಗೌರೀ, ಕೋಲಾಹಲೀ, ಧೀರಾ, ದ್ರಾವಿಡೀ, ಮಾಲಕೌಶಿಕೀ, ದೇವಗಾಂಧಾರೀ ಈ ಆರು ಶ್ರೀರಾಗದ ಪ್ರಿಯಪತ್ನಿಯರು. ಆಂದೋಲಾ, ಕೌಶಿಕೀ, ಚರಮಮಂಜರೀ, ಗಂಡಗಿರೀ, ದೇವಶಾಖಾ, ರಾಮಗಿರೀ, ವಸಂತಗಾ, ಸ್ತಂಭತೀರ್ಥಾ, ಅಹಿರೀ, ಕುಂಕುಮಾ, ವೈರಾಟೀ, ಸಾಮವೇರೀ ಇವು ಪಂಚಮರಾಗದ ಪತ್ನಿಯರು. ಭೈರವೀ, ಗುರ್ಜರೀ, ಭಾಷಾ, ವೇಲಾಗುಳೀ, ಕರ್ಣಾಟಕೀ, ರಕ್ತಹಂಸಾ ಇವು ಆರು ಭೈರವರಾಗದ ಪತ್ನಿಯರು. ಬಂಗಾಲೀ, ಮಧುರಾ, ಕಾಮೋದಾ, ಅಕ್ಷಿನಾರಿಕಾ, ದೇವಗಿರೀ, ದೇವಾಲೀ, ಇವು ಮೇಘರಾಗದ ಅನುಯಾಯಿಗಳಾದ ಪತ್ನಿಯರು. ತ್ರೋಟಕೀ, ಮೋಡಕೀ, ನರಾ, ದುಂಬೀ, ಮಲ್ಹಾರೀ, ಸಿಂಧುಮಲ್ಹಾರೀ ಇವು ನಟನಾರಾಯಣನ ಪತ್ನಿಯರು. ಇವು ಈಶ್ವರನನ್ನೂ ಪಾರ್ವತಿಯನ್ನೂ ವಂದಿಸಿ ತಮ್ಮ ಮೂರ್ತಿ, ವಾಹನ, ಗಂಡಂದಿರು ಇವರೊಡನೆ ನೆಲೆಸಿದುವು. ಬ್ರಹ್ಮನು ಮೃದಂಗವನ್ನು ಬಾರಿಸಿ ಶಂಕರನನ್ನು ಸಂತೋಷಗೊಳಿಸಿದನು. ಮತ್ತು ನಾಲ್ಕು ಅಕ್ಷರದ ವಾದ್ಯದಿಂದ ಒಳ್ಳೆಯ ವಾದನವನ್ನು ಮಾಡಿದನು. ವಿಷ್ಣುವು ಶಂಕರನಿಗೆ ತಾಳವನ್ನು ಪ್ರದರ್ಶಿಸಿದನು.

ವಾಯುವಸ್ತತ್ರ ವಾದ್ಯಂ ಚ ಚಕ್ರುಃ ಸುಸ್ವರವೋಜಸಾ ।
ಮಹೇಂದ್ರೋ ವಂಶವಾದ್ಯಂ ಚ ಸುಗಿರಂ ಸುಸ್ವರಂ ಬಹು ॥ ೪೮ ॥
ವಹ್ನಿಃ ಶೂರ್ಪರವಂ ಚಕ್ರೇ ಪಣವಂ ಚ ತಥಾಽಶ್ವಿನೌ ।
ಉಪಾಂಗವಾದನಂ ಚಕ್ರೇ ಸೋಮಃ ಸೂರ್ಯಃ ಸಮಂತತಃ ॥ ೪೯ ॥
ಘಂಟಾನಾಂ ವಾದನಂ ಚಕ್ರುರ್ಗಣಾಃ ಶತಸಹಸ್ರಶಃ ।
ಮುನೀಶ್ವರಾಸ್ತಥಾ ದೇವ್ಯಃ ಪಾರ್ವತೀಸಹಿತಾಸ್ತಥಾ ॥ ೫೦ ॥
ಸ್ವರ್ಣಭದ್ರಾಸನೇಷ್ವೇತೇ ಹ್ಯುಪವಿಷ್ಟಾ ವ್ಯಲೋಕಯನ್ ।
ಶೃಂಗಾಣಾಂ ವದನಂ ಚಕ್ರುರ್ವಸವಃ ಸಮಹೋರಗಾಃ ॥ ೫೧ ॥
ಭೇರೀಧ್ವನಿಂ ತಥಾ ಸಾಧ್ಯಾ ವಾದ್ಯಾನ್ಯನ್ಯೇ ಸುರೋತ್ತಮಾಃ ।
ಝುರ್ಝುರೀ ಗೋಮುಖಾದೀನಿ ಸಾಧ್ಯಾಶ್ಚಕ್ರುರ್ಮಹೋತ್ಸವೇ ॥ ೫೨ ॥
ತಂತ್ರೀಲಯಸಮಾಯುಕ್ತಾ ಗಂಧರ್ವಾ ಮಧುರಸ್ವರಾಃ ।
ಸುವರ್ಣಶೃಂಗನಾದಂ ಚ ಚಕ್ರುಃ ಸಿದ್ಧಾಃ ಸಮಂತತಃ ॥ ೫೩ ॥
ತತಸ್ತು ಭಗವಾನಾಸೀನ್ಮಹಾನಟವಪುರ್ಧರಃ ।
ಮುಕುಟಾಃ ಪಂಚ ಶೀರ್ಷೇ ತು ಪನ್ನಗೈರುಪಶೋಭಿತಾಃ ॥ ೫೪ ॥
ಜಟಾ ವಿಮುಚ್ಯ ಸಕಲಾ ಭಸ್ಮೋದ್ಧೂಲಿತವಿಗ್ರಹಃ ।
ಬಾಹುಭಿರ್ದಶಭಿರ್ಯುಕ್ತೋ ಹಾರ ಕೇಯೂರ ಸಂಯುತಃ ॥ ೫೫ ॥

---

೪೮. ವಾಯುಗಳು ಶ್ರಾವ್ಯವಾಗುವಂತೆ ಬಲವಾಗಿ ವಾದ್ಯವಾದನ ಮಾಡಿದರು. ಇಂದ್ರನು ಸುಸ್ವರವಾಗಿ ಕೊಳಲನ್ನೂದಿದನು.

೪೯. ಅಗ್ನಿಯು ಶೂರ್ಪಧ್ವನಿಯನ್ನೂ, ಅಶ್ವಿನೀ ದೇವತೆಗಳು ಪಣವವಾದ್ಯವನ್ನೂ ಮಾಡಿದರು. ಚಂದ್ರ ಸೂರ್ಯರು ಉಪವಾದ್ಯಗಳನ್ನು ಬಾಜಿಸಿದರು.

೫೦–೫೧. ಸಾವಿರಾರು ಗಣಗಳು ಘಂಟೆಗಳನ್ನು ಬಾರಿಸಿದರು. ಮುನೀಶ್ವರರೂ, ಇತರ ರಾಣಿಯರೂ ಪಾರ್ವತಿಯೊಡನೆ ಚಿನ್ನದ ಭದ್ರಾಸನಗಳಲ್ಲಿ ಕುಳಿತು ಮಹೇಶ್ವರನ ಆ ತಾಂಡವನೃತ್ಯವನ್ನು ಈಕ್ಷಿಸಿದರು. ವಸುಗಳೂ, ಮಹೋರಗರೂ ಕೊಂಬನ್ನೂದಿದರು.

೫೨. ಸಾಧ್ಯರು ಭೇರಿಯನ್ನೂ, ಇತರ ದೇವತೆಗಳು ಇತರ ವಾದ್ಯಗಳನ್ನೂ, ಸಾಧ್ಯರು ಝುರ್ಝುರೀ ಗೋಮುಖ ಮೊದಲಾದ ವಾದ್ಯಗಳನ್ನೂ ಬಾಜಿಸಿದರು.

೫೩. ಇಂಪಾದ ಸ್ವರವುಳ್ಳ ಗಂಧರ್ವರು ತಾಳಾನುಸಾರವಾಗಿ ವೀಣೆಯನ್ನು ನುಡಿಸಿದರು. ಸಿದ್ಧರು ಚಿನ್ನದ ಕೊಂಬಿನ ಧ್ವನಿಯನ್ನು ಮಾಡಿದರು.

೫೪–೫೫. ಬಳಿಕ ಪೂಜ್ಯನಾದ ಶಂಕರನು ಮಹಾನಟನ ದೇಹವನ್ನು ಧರಿಸಿ ಐದು ತಲೆಗಳಲ್ಲಿಯೂ ಕಿರೀಟಗಳಿಂದಲೂ, ನಾಗಗಳಿಂದಲೂ ಅಲಂಕಾರಗೊಂಡು ಸಮಸ್ತ ಜಟೆಗಳನ್ನು ಬಿಡಿಸಿ, ಭಸ್ಮಲಿಪ್ತನಾಗಿ ಹತ್ತು ತೋಳುಗಳು, ಹಾರ,

ತ್ರೈಲೋಕ್ಯವ್ಯಾಪಕಂ ರೂಪಂ ಸೂರ್ಯಕೋಟಿಸಮಪ್ರಭಂ ।
ಕೃತ್ವಾ ನನರ್ತ ಭಗವಾನ್ ಭಾಸುರಂ ಸ ಮಹಾನಗೇ ॥ ೫೬ ॥
ತತಂ ವೀಣಾದಿಕಂ ವಾದ್ಯಂ ಕಾಂಸ್ಯತಾಲಾದಿಕಂ ಘನಂ ।
ವಂಶಾದಿಕಂ ತು ವಾದಿತ್ರಂ ತೋಮರಾದಿಕನಾಪಕಂ ॥ ೫೭ ॥
ಚತುರ್ವಿಧಂ ತತೋ ವಾದ್ಯಂ ತುಮುಲಂ ಸಮಜಾಯತ ।
ತಾಲಾನಾಂ ಪಟಹಾದೀನಾಂ ಹಸ್ತಕಾನಾಂ ತಥೈವ ಚ ॥ ೫೮ ॥
ಮಾನಾನಾಂ ಚೈವ ತಾನಾನಾಂ ಪ್ರತ್ಯಕ್ಷಂ ರೂಪಮಾಬಭೌ ।
ಸುಕಂಠಂ ಸುಸ್ವರಂ ಮುಕ್ತಂ ಸುಗಂಭೀರಂ ಮಹಾಸ್ವನಂ ॥ ೫೯ ॥
ವಿಶ್ವಾವಸುರ್ನಾರದಶ್ಚ ತುಂಬುರಶ್ಚೈವ ಗಾಯಕಾಃ ।
ಜಗುರ್ಗಂಧರ್ವಪತಯೋಽಪ್ಸರಸೋ ಮಧುರಸ್ವರಾಃ ॥ ೬೦ ॥
ಗ್ರಾಮತ್ರಯಸಮೋಪೇತಂ ಸ್ವರಸಪ್ತಕಸಂಯುತಂ ।
ದಿವ್ಯಂ ಶುದ್ಧಂ ಚ ಸಾಂಕಲ್ಪಂ ತತ್ರ ಗೇಯಮವರ್ತತ ॥ ೬೧ ॥
ಪರ್ವತೋಽಪಿ ಮಹಾನಾದಂ ಹರಪಾದತಲಾಽಽಹತಃ ।
ಭ್ರಮಿಭಿರ್ಭ್ರಮಯಂಸ್ತತ್ರ ಮಹೀಂ ಸ ಪುರಕಾನನಾಂ ॥ ೬೨ ॥
ಹಸ್ತಕಾಂಶ್ಚತುರಾಶೀತಿಂ ಸ ಸಸರ್ಜ ಸದಾಶಿವಃ ।
ಲಲಾಟಫಲಕಸ್ವೇದಾತ್ಸೂತಮಾಗಧವಂದಿನಃ ॥ ೬೩ ॥

---

ಕೇಯೂರಗಳಿಂದ ಸಹಿತನಾಗಿ ಕೋಟಿಸೂರ್ಯರ ಕಾಂತಿಯುಳ್ಳ ಮೂರು ಲೋಕಗಳಲ್ಲಿ ವ್ಯಾಪಿಸಿದ ರೂಪವನ್ನು ತಾಳಿ ಆ ಮಂದರಾದ್ರಿಯಲ್ಲಿ ಮನೋಹರವಾಗಿ ಕುಣಿದನು.

೫೭-೬೦. ಅನಂತರ ವೀಣೆ, ಕಾಂಸ್ಯತಾಳ, ವೇಣಿ, ತೋಮರ ಮೊದಲಾದ ನಾಲ್ಕುಬಗೆಯ ವಾದ್ಯಗಳು ಭಯಂಕರವಾಗಿ ಮೊಳಗಿದುವು. ತಾಳ, ಪಟಹ, ಹಸ್ತಕ, ಮಾನ, ತಾನ ಇವುಗಳು ಪ್ರತ್ಯಕ್ಷರೂಪವನ್ನು ತಾಳಿ ಪ್ರಕಾಶಗೊಂಡುವು. ಗಾಯಕರಾದ ವಿಶ್ವಾವಸು, ನಾರದ, ತುಂಬುರ, ಗಂಧರ್ವರಾಜರು, ಅಪ್ಸರೆಯರು ಇವರು ಸುಸ್ವರವಾಗಿಯೂ, ಗಂಭೀರವಾಗಿಯೂ, ಇಂಪಾಗಿಯೂ, ಗಟ್ಟಿಯಾಗಿಯೂ ಗಾನಮಾಡಿದರು.

೬೧. ಅಲ್ಲಿ ಗೇಯವು ಗ್ರಾಮತ್ರಯದಿಂದ ಕೂಡಿರುವುದೂ, ಏಳು ಸ್ವರವುಳ್ಳುದೂ, ದಿವ್ಯವೂ, ಶುದ್ಧವೂ ಆಗಿ ಪರಿಣಮಿಸಿತು.

೬೨. ಮಂದರಪರ್ವತವೂ ಶಿವನ ಪಾದತಾಡನೆಯಿಂದ ಪಟ್ಟಣ, ಕಾಡುಗಳಿಂದ ಸಹಿತವಾದ ಭೂಮಿಯನ್ನು ಸುತ್ತುತ್ತ ಮಹಾಧ್ವನಿಗೈದಿತು.

೬೩. ಆ ಮಹೇಶ್ವರನು ಎಂಬತ್ತುನಾಲ್ಕು ಮಂದಿ ಹಸ್ತಕರನ್ನೂ, ಹಣೆಯ ಬೆವರಿನಿಂದ ಸೂತ; ಮಾಗಧ, ವಂದಿಗಳನ್ನೂ ಸೃಜಿಸಿದನು.

ಮಹೇಶಹೃದಯಾಜ್ಜಾತಾ ಗಂಧರ್ವಾ ವಿಶ್ವಗಾಯಕಾಃ ।
ತೇ ಮೂರ್ತಾ ದೇವದೇವಸ್ಯ ಸುರಂಗಾಲಯಸಂಯುತಾಃ ॥ ೬೪ ॥
ಪ್ರೇಕ್ಷಕಾಣಾಮೃಷೀಣಾಂ ಚ ಚಕ್ರುರಾಶ್ಚರ್ಯಮೋಜಸಾ ।
ಕಿನ್ನರಾಃ ಪುಷ್ಪವರ್ಷಾಣಿ ಸಸೃಜುಃ ಸ್ವೈರ್ಗುಣೈರಿಹ ॥ ೬೫ ॥
ಏವಂ ಚತುರ್ಷು ಮಾಸೇಷು ಯದಾ ನೃತ್ಯಮಜಾಯತ ।
ಅತಿಕ್ರಾಂತಾ ಜರಜ್ಜಾತಾ ನಿರ್ಮಲಾಕಾಶಶೋಭಿತಾ ॥ ೬೬ ॥
ಪದ್ಮಖಂಡಸಮಾಚ್ಛನ್ನ ಸರೋವರಮುಖಾಂಬುಜಾ ।
ಫಲವೃಕ್ಷೌಷಧೀಭಿಶ್ಚ ಕಿಂಚಿತ್ಪಾಂಡುಮುಖಚ್ಛವಿಃ ॥ ೬೭ ॥
ಊರ್ಜಶುಕ್ಲಚತುರ್ದಶ್ಯಾಂ ಪ್ರಸನ್ನಾ ಗಿರಿಜಾ ತದಾ ।
ಸಮಾಪ್ತವ್ರತಚರ್ಯಃ ಸ ಈಶ್ವರೋಽಪಿ ತದಾ ಬಭೌ ॥ ೬೮ ॥
ಸಾ ಚೋವಾಚ ತದಾ ಶಂಭುಂ ವಿಕಚಸ್ವರಲೋಚನಾ ।
ವಿಪ್ರಶಾಪಪಾತಿತಂ ಚ ಯದಾ ಲಿಂಗಂ ಭವಿಷ್ಯತಿ ॥ ೬೯ ॥
ನರ್ಮದಾಜಲಸಂಭೂತಂ ವಿಶ್ವಪೂಜ್ಯಂ ಭವಿಷ್ಯತಿ ।
ಏವಮುಕ್ತ್ವಾ ತತಸ್ತುಷ್ಟಾ ಹರಸ್ತೋತ್ರಂ ಚಕಾರ ಹ ॥ ೭೦ ॥
ನಮಸ್ತೇ ದೇವದೇವಾಯ ಮಹಾದೇವಾಯ ಮೌಲಿನೇ ।
ಜಗದ್ಧಾತ್ರೇ ಸವಿತ್ರೇ ಚ ಶಂಕರಾಯ ಶಿವಾಯ ಚ ॥ ೭೧ ॥

---

೬೪–೬೫. ಶಂಕರನ ಹೃದಯದಿಂದ ಹುಟ್ಟಿದ ಪ್ರಪಂಚನಾಯಕರಾದ ಗಂಧರ್ವರು ಮಂಗಳಕರವಾದ ರಂಗಸ್ಥಳದಮೇಲೆ ಶೋಭಿಸಿ ನೋಡುತ್ತಿರುವ ಋಷಿಗಳಿಗೆ ಆಶ್ಚರ್ಯವನ್ನುಂಟುಮಾಡಿದರು. ಕಿನ್ನರರು ಹೂಮಳೆಗರೆದರು.

೬೬–೬೭. ಹೀಗೆ ನಾಲ್ಕು ತಿಂಗಳು ನೃತ್ಯದಿಂದ ಕಳೆಯಲು ನಿರ್ಮಲವಾದ ಆಕಾಶದಿಂದ ಶೋಭಿಸುವುದೂ, ತಾವರೆಗಳ ಸಮೂಹದಿಂದ ಮುಚ್ಚಿದ ಸರೋವರ ವೆಂಬ ಮುಖಕಮಲವುಳ್ಳುದೂ, ಫಲವನ್ನು ಕೊಡುವ ವೃಕ್ಷ, ಓಷಧಿಗಳಿಂದ ಸ್ವಲ್ಪ ಬೆಳ್ಳಗಾದ ಮುಖಕಾಂತಿಯುಳ್ಳುದೂ ಆದ ಶರತ್ಕಾಲವು ಬಂದಿತು.

೬೮. ಕಾರ್ತಿಕಶುಕ್ಲ ಚತುರ್ದಶಿಯ ದಿನ ಪಾರ್ವತಿಯು ಈಶ್ವರನ ವಿಷಯ ದಲ್ಲಿ ಪ್ರಸನ್ನಳಾದಳು. ಈಶ್ವರನೂ ವ್ರತವನ್ನು ಮುಗಿಸಿ ಪ್ರಕಾಶಿಸಿದನು.

೬೯–೭೦. ಆ ಪಾರ್ವತಿಯು ಅರಳಿದ ಕಂಗಳುಳ್ಳವಳಾಗಿ ಶಂಕರನನ್ನು ಕುರಿತು, "ಮಹೇಶ್ವರ! ನಿನ್ನ ಲಿಂಗವು ಬ್ರಾಹ್ಮಣಶಾಪದಿಂದ ಕೆಳಗೆ ಬಿದ್ದಂದು ನರ್ಮದಾ ಜಲದಲ್ಲಿ ಹುಟ್ಟಿ ಜಗತ್ಪೂಜ್ಯವಾಗುವುದು" ಎಂದು ಹೇಳಿ ಸಂತೋಷ ದಿಂದ ಆ ಶಂಕರನನ್ನು ಸ್ತುತಿಸಿದಳು.

೭೧. "ದೇವತೆಗಳಿಗೆ ದೇವತೆಯೂ, ಮಹಾದೇವನೂ, ಅನಾದಿಯೂ, ಜಗತ್ತನ್ನು ಸೃಜಿಸುವವನೂ, ಸವಿತೃವೂ, ಶಿವನೂ ಆದ ಓ ಶಂಕರ! ನಿನಗೆ ನಮಸ್ಕಾರವು.

ಕಪರ್ದಿನೇಽಜಯಾಯಾದ್ಯ ಬ್ರಹ್ಮಗರ್ಭಾಯ ತೇ ನಮಃ ।
ಹಿರಣ್ಯರೇತಸೇ ತುಭ್ಯಂ ನೀಲಗ್ರೀವಾಯ ತೇ ನಮಃ ॥ ೭೨ ॥
ನಮೋ ಬ್ರಹ್ಮಣ್ಯದೇವಾಯ ಸಿತಭೂತಿಧರಾಯ ಚ ।
ಪಂಚವಕ್ತ್ರಾಯ ರೂಪಾಯ ನೀರೂಪಾಯ ನಮೋ ನಮಃ ॥ ೭೩ ॥
ಸಹಸ್ರಾಕ್ಷಾಯ ಶುಭ್ರಾಯ ನಮಸ್ತೇ ಕೃತ್ತಿವಾಸಸೇ ।
ಅಂಧಕಾಸುರಮೋಕ್ಷಾಯ ಪಶೂನಾಂ ಪತಯೇ ನಮಃ ॥ ೭೪ ॥
ವಿಪ್ರವಹ್ನಿಮುಖಾಗ್ರಾಯ ಹರಾಯ ಚ ಭವಾಯ ಚ ।
ಶಂಕರಾಯ ಮಹೇಶಾಯ ಈಶ್ವರಾಯ ನಮೋ ನಮಃ ॥ ೭೫ ॥
ಅಮೂರ್ತಬ್ರಹ್ಮರೂಪಾಯ ಮೂರ್ತಾನಾಂ ಭಾವನಾಯ ಚ ।
ನಮಃ ಶಿವಾಯ ಚೋಗ್ರಾಯ ಹರಾಯ ಚ ಭವಾಯ ಚ ॥ ೭೬ ॥
ನಮಃ ಕೃಷ್ಣಾಯ ಶರ್ವಾಯ ತ್ರಿಪುರಾಂತಕ ಹಾರಿಣೇ ।
ಅಘೋರಾಯ ನಮಸ್ತೇಽಸ್ತು ನಮಸ್ತೇ ಪುರುಷಾಯ ತೇ ॥ ೭೭ ॥
ಸದ್ಯೋಜಾತಾಯ ತುಭ್ಯಂ ಭೋ ವಾಮದೇವಾಯ ತೇ ನಮಃ ।
ಈಶಾನಾಯ ನಮಸ್ತುಭ್ಯಂ ಪಂಚಾಸ್ಯಾಯ ಕಪಾಲಿನೇ ॥ ೭೮ ॥

---

೭೨. ಜಟಾಧಾರಿಯೂ, ಅಜೇಯನೂ, ಬ್ರಹ್ಮಗರ್ಭನೂ, ಹಿರಣ್ಯವೀರ್ಯನೂ, ನೀಲಕಂಠನೂ ಆದ ನಿನಗೆ ನಮಸ್ಕಾರವು.

೭೩. ಬ್ರಹ್ಮಣ್ಯದೇವನೂ, ಧವಳಭಸ್ಮಲೇಪನನೂ, ಐದು ಮುಖವುಳ್ಳವನೂ, ರೂಪರಹಿತನೂ, ಕಲ್ಪಿತರೂಪವುಳ್ಳವನೂ ಆದ ಎಲೈ ಶಂಕರನೆ! ನಿನಗೆ ನಮಸ್ಕಾರವು.

೭೪. ಸಹಸ್ರನಯನನೂ, ಶುಭ್ರವರ್ಣನೂ, ಗಜಚರ್ಮಧಾರಿಯೂ, ಅಂಧಕಾಸುರನಿಗೆ ಮೋಕ್ಷವನ್ನಿತ್ತವನೂ, ಜೀವಗಳಿಗೊಡೆಯನೂ ಆದ ಓ ಶಂಕರ! ನಿನಗೆ ವಂದನೆಯು.

೭೫. ಬ್ರಾಹ್ಮಣ ಮತ್ತು ದೇವತೆಗಳಿಗೆ ಮೊದಲನೆಯವನೂ, ಪಾಪಹರನೂ, ಭವನೂ, ಶಂಕರನೂ, ಮಹೇಶನೂ, ಈಶ್ವರನೂ ಆದ ನಿನಗೆ ನಮಸ್ಕಾರವು.

೭೬. ಶರೀರರಹಿತಬ್ರಹ್ಮಸ್ವರೂಪನೂ, ಮೂರ್ತವಸ್ತುಗಳನ್ನು ಸೃಜಿಸುವವನೂ, ಶಿವನೂ, ಉಗ್ರನೂ, ಹರನೂ, ಭವನೂ ಆದ ನಿನಗೆ ವಂದನೆಯು.

೭೭. ಕೃಷ್ಣನೂ, ಶರ್ವನೂ, ತ್ರಿಪುರಾಸುರಾಂತಕನೂ, ಅಘೋರನೂ ಆದ ಶಿವನೆ! ನಿನಗೆ ನಮಸ್ಕಾರವು.

೭೮. ಸದ್ಯೋಜಾತನೂ, ವಾಮದೇವನೂ, ಈಶಾನನೂ, ಪಂಚಾಸ್ಯನೂ, ಕಪಾಲಧಾರಿಯೂ ಆದ ಶಂಕರ! ನಿನಗೆ ನಮಸ್ಕಾರವು.

ವಿರೂಪಾಕ್ಷಾಯ ಭಾವಾಯ ಭಗನೇತ್ರನಿಪಾತಿನೇ ।
ಪೂಷದಂತನಿಪಾತಾಯ ಮಹಾಯಜ್ಞನಿಪಾತಿನೇ ॥ ೭೯ ॥
ಮೃಗವ್ಯಾಧಾಯ ಧರ್ಮಾಯ ಕಾಲಚಕ್ರಾಯ ಚಕ್ರಿಣೇ ।
ಮಹಾಪುರುಷಪೂಜ್ಯಾಯ ಗಣಾನಾಂ ಪತಯೇ ನಮಃ ॥ ೮೦ ॥
ಗಂಗಾಧರಾಯ ಮೃಡಿನೇ ಭವಾನೀಪ್ರಿಯಕಾರಿಣೇ ।
ಜಗದಾನಂದದಾತ್ರೇ ಚ ಬ್ರಹ್ಮರೂಪಾಯ ತೇ ನಮಃ ॥ ೮೧ ॥
ಗುಣಾತೀತಾಯ ಗುಣಿನೇ ಸೂಕ್ಷ್ಮಾಯ ಗುರವೇಽಪಿ ಚ ।
ನಮೋ ಮಹಾಸ್ವರೂಪಾಯ ಭಸ್ಮನೋ ಜನ್ಮಕಾರಿಣೇ ॥ ೮೨ ॥
ವೈರಾಗ್ಯರೂಪಿಣೇ ನಿತ್ಯಂ ಯೋಗಾಚಾರ್ಯಾಯ ವೈ ನಮಃ ।
ಮಯೋಕ್ತಮಪ್ರಿಯಂ ದೇವ ಸ್ಮರಸಂಹಾರಕಾರಕ ॥ ೮೩ ॥
ಕ್ಷಂತುಮರ್ಹಸಿ ವಿಶ್ವೇಶ ಶಿರಸಾ ತ್ವಾಂ ಪ್ರಸಾದಯೇ ।
ಶಾಪಾಽನುಗ್ರಹ ಏವೈಷ ಕೃತಸ್ತೇ ವೈ ನ ಸಂಶಯಃ ॥ ೮೪ ॥
ಮಮಾಽಪರಾಧಜೋ ಮನ್ಯುರ್ನಕಾರ್ಯೋಽ ಭವತಾಽನಘ ।
ಏವಂ ಪ್ರಸಾದಿತಃ ಶಂಭುರ್ಹೃಷ್ಟಾತ್ಮಾ ತ್ರಿದಶೈಃ ಸಹ ॥ ೮೫ ॥

---

೭೯. ವಿರೂಪಾಕ್ಷನೂ, ಭಾವರೂಪನೂ, ಭಗನೇತ್ರನಿಗ್ರಹಿಯೂ, ಸೂರ್ಯನ ದಂತವನ್ನು ಬೀಳಿಸಿದವನೂ, ದಕ್ಷಯಜ್ಞವನ್ನು ನಾಶಗೊಳಿಸಿದವನೂ ಆದ ಶಂಕರ! ನಿನಗೆ ನಮೋ ನಮೋ!

೮೦. ಮೃಗವ್ಯಾಧರೂಪನೂ, ಧರ್ಮಕಾಲಚಕ್ರಸ್ವರೂಪನೂ, ಚಕ್ರಿಯೂ, ವಿಷ್ಣುಪೂಜ್ಯನೂ, ಗಣಗಳಿಗೆ ಒಡೆಯನೂ ಆದ ಶಂಕರ! ನಿನಗೆ ನಮಸ್ಕಾರವು.

೮೧. ಗಂಗೆಯನ್ನು ಧರಿಸಿದವನೂ, ಮೃಡನೂ, ಪಾರ್ವತಿಗೆ ಹಿತವನ್ನುಂಟುಮಾಡುವವನೂ, ಜಗತ್ತಿಗೆ ಆನಂದವನ್ನು ಕೊಡುವವನೂ, ಬ್ರಹ್ಮರೂಪನೂ ಆದ ಶಂಕರ! ನಿನಗೆ ನಮಸ್ಕಾರವು.

೮೨. ಗುಣರಹಿತನೂ, ಕಲ್ಪಿತಗುಣವುಳ್ಳವನೂ, ಸೂಕ್ಷ್ಮನೂ, ಗುರುವೂ, ದೊಡ್ಡ ಆಕೃತಿಯುಳ್ಳವನೂ, ಭಸ್ಮಧಾರಿಯೂ, ಜಗತ್ಸೃಷ್ಟಿಕರ್ತನೂ ಆದ ಶಂಕರ! ನಿನಗೆ ನಮಸ್ಕಾರವು.

೮೩–೮೪. ವೈರಾಗ್ಯರೂಪಿಯೂ, ಯೋಗಕ್ಕೆ ಆಚಾರ್ಯಸ್ವರೂಪನೂ ಆದ ಎಲೈ ಶಂಕರನೇ! ನಿನಗೆ ನಮಸ್ಕಾರವು. ಸ್ಮರಾಂತಕನಾದ ಓ ಶಂಕರ! ನಾನು ಹೇಳಿದ ಅಹಿತವಾದ ಮಾತನ್ನು ಕ್ಷಮಿಸು. ತಲೆಬಾಗಿ ನಿನ್ನನ್ನು ಸಮಾಧಾನಗೊಳಿಸುವೆನು. ನಿಶ್ಚಯವಾಗಿಯೂ ನಿನ್ನ ಶಾಪಕ್ಕೆ ಅನುಗ್ರಹ ಮಾಡಿರುವೆನು.

೮೫–೮೬. ನೀನು ನನ್ನ ತಪ್ಪಿಗಾಗಿ ಕುಪಿತನಾಗಬಾರದು." ಪಾರ್ವತಿಯು ಹೀಗೆ ಸಮಾಧಾನಮಾಡಲು ವ್ರತವನ್ನು ಮುಗಿಸಿದ್ದರಿಂದ ದೇವತೆಗಳೊಡನೆ

ತೀರ್ಣವ್ರತಪರಾನಂದನಿರ್ಭರಃ ಪ್ರಾಹ ತಾಮುಮಾಂ ।
ಯ ಇಮಾಂ ಮತ್‌ಸ್ತುತಿಂ ಭಕ್ತ್ಯಾ ಪಠಿಷ್ಯತಿ ತವೋದ್ಗತಾಂ ।
ತಸ್ಯ ಚೇಷ್ಟವಿಯೋಗಶ್ಚ ನ ಭವಿಷ್ಯತಿ ಪಾರ್ವತಿ ॥ ೮೬ ॥
ಜನ್ಮತ್ರಯಧನೈರ್ಯುಕ್ತಃ ಸರ್ವವ್ಯಾಧಿ ವಿವರ್ಜಿತಃ ।
ಭುಕ್ತ್ವೇಹ ವಿವಿಧಾನ್ ಭೋಗಾನಂತೇ ಯಾಸ್ಯತಿ ಮತ್ಪುರಂ ॥ ೮೭ ॥
ಇತ್ಯುಕ್ತ್ವಾ ತಾಂ ಮಹೇಶೋಽಪಿ ಸ್ವಮಂಗಂ ಪ್ರದದೌ ತತಃ ।
ವೈಷ್ಣವಂ ವಾಮಭಾಗಂ ಸಾ ಪ್ರತಿಜಗ್ರಾಹ ಪಾರ್ವತೀ ॥ ೮೮ ॥
ಶರ್ವಂ ಕಪಾಲಹಸ್ತಂ ಚ ಗ್ರೀವಾರ್ಧೇ ಗರಲಾನ್ವಿತಂ ।
ರುಂಡಮಾಲಾರ್ಧಹಾರಂ ಚ ಸಿತಗೌರಂ ಸಮಂತತಃ ॥ ೮೯ ॥
ಬ್ರಹ್ಮಾಂಡಕೋಟಿಜನಕಂ ಜಟಾಭಿರ್ಭೂಷಿತಂ ಶಿರಃ ।
ಸಿತದ್ಯುತಿಕಲಾಖಂಡ ರತ್ನಭಾಸಾಽವಭಾಸಿತಂ ॥ ೯೦ ॥
ಸ್ವರ್ಣಾಽಽಭರಣಸಂಯುಕ್ತಮೇಕತೋ ಭುಜಗಾಂಗದಂ ।
ಏಕತಃ ಕೃತ್ತಿವಸನಮನ್ಯತಃ ಪಟ್ಟಕೂಲವತ್ ॥ ೯೧ ॥

---

ಸಂತೋಷಗೊಂಡ ಶಂಕರನು ಆ ಪಾರ್ವತಿಯನ್ನು ಕುರಿತು ಇಂತೆಂದನು. "ಪಾರ್ವತಿ! ನೀನು ಮಾಡಿದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವ ಮಾನವನಿಗೆ ಇಷ್ಟಜನರ ವಿಯೋಗವಾಗುವುದಿಲ್ಲ.

೮೭. ಅಂತಹವನು ಮೂರು ಜನ್ಮಗಳಲ್ಲಿಯೂ ಧನಿಕನೂ, ವ್ಯಾಧಿರಹಿತನೂ ಆಗಿ ಈ ಲೋಕದಲ್ಲಿ ನಾನಾ ಭೋಗಗಳನ್ನು ಅನುಭವಿಸಿ ಅವಸಾನದಲ್ಲಿ ನನ್ನ ಪಟ್ಟಣವನ್ನು ಸೇರುವನು."

೮೮. ಶಂಕರನು ಹೀಗೆ ಹೇಳಿ ಆ ಪಾರ್ವತಿಗೆ ತನ್ನ ಶರೀರಾರ್ಧಭಾಗವನ್ನಿತ್ತನು. ಆ ಪಾರ್ವತಿಯು ವಿಷ್ಣುಸಂಬಂಧವಾದ ಶಂಕರಶರೀರದ ಎಡಭಾಗವನ್ನು ಸ್ವೀಕರಿಸಿದಳು.

೮೯–೯೦. ಈಶ್ವರನ ಬಲಭಾಗವು ಕೈಯಲ್ಲಿ ಕಪಾಲವನ್ನು ಹಿಡಿದಿರುವುದೂ, ಕುತ್ತಿಗೆಯ ಅರ್ಧಭಾಗದಲ್ಲಿ ವಿಷದಿಂದ ಕೂಡಿರುವುದೂ, ಅರ್ಧರುಂಡಮಾಲೆಯನ್ನು ಧರಿಸಿರುವುದೂ, ಶ್ವೇತವರ್ಣವೂ, ಅನೇಕ ಬ್ರಹ್ಮಾಂಡಗಳನ್ನು ಸೃಜಿಸಿರುವುದೂ, ಜಟಾಭೂಷಿತ ಮಸ್ತಕವುಳ್ಳುದೂ, ಚಂದ್ರಕಲೆ, ರತ್ನಕಾಂತಿಗಳಿಂದ ಪ್ರಕಾಶಿಸುವುದೂ ಆಗಿದ್ದಿತು.

೯೧–೯೩. ಅವನ ಶರೀರದ ಎಡಭಾಗವು ಸ್ವರ್ಣಾಭರಣದಿಂದ ಸಹಿತವೂ, ಇನ್ನೊಂದು ಭಾಗವು ಸರ್ಪದ ಭುಜಕೀರ್ತಿಯುಳ್ಳುದೂ, ಒಂದೆಡೆ ಗಜಚರ್ಮವನ್ನು ಧರಿಸಿರುವುದೂ, ಮತ್ತೊಂದು ಕಡೆ ಪಟ್ಟೆವಸ್ತ್ರವನ್ನುಟ್ಟಿರುವುದೂ, ಒಂದೆಡೆ ಮತ್ಸ್ಯವಾಹನವುಳ್ಳುದೂ, ಇನ್ನೊಂದೆಡೆ ವೃಷಭವಾಹನವುಳ್ಳುದೂ,

ಮತ್ಸ್ಯವಾಹನಸಂಯುಕ್ತಮನ್ಯತೋ ವೃಷಭಾಂಕಿತಂ ।
ಏಕತಃ ಪಾರ್ಷದೈಃ ಸೇವ್ಯಮನ್ಯತಃ ಸಖಿಸೇವಿತಂ ॥ ೯೨ ॥
ರೂಪಮೇವಂ ವಿಧಂ ದೃಷ್ಟ್ವಾ ಬ್ರಹ್ಮಾದ್ಯಾ ದೇವತಾಗಣಾಃ ।
ತುಷ್ಟುವುಃ ಪರಯಾ ಭಕ್ತ್ಯಾ ತೇಜೋ ಭೂಷಿತಲೋಚನಂ ॥ ೯೩ ॥
ತ್ವಮೇಕೋ ಭಗವಾನ್ ಸರ್ವವ್ಯಾಪಕಃ ಸರ್ವದೇಹಿನಾಂ ।
ಪಿತೃವದ್ರಕ್ಷಕೋಽಸಿ ತ್ವಂ ಮಾತಾ ತ್ವಂ ಜೀವ ಸಂಜ್ಞಕಃ ॥ ೯೪ ॥
ಸಾಕ್ಷೀ ವಿಶ್ವಸ್ಯ ಬೀಜಂ ತ್ವಂ ಬ್ರಹ್ಮಾಂಡವಶಕಾರಕಃ ।
ಉತ್ಪದ್ಯಂತೇ ವಿಲೀಯಂತೇ ತ್ವಯಿ ಬ್ರಹ್ಮಾಂಡ ಕೋಟಯಃ ॥ ೯೫ ॥
ಊರ್ಮಯಃ ಸಾಗರೇ ನಿತ್ಯಂ ಸಲಿಲೇ ಬುದ್ಬುದಾ ಯಥಾ ।
ಅಹಂ ಕದಾಚಿತ್ತ್ರೇ ನೇತ್ರಾತ್ಕದಾಚಿತ್ತವ ಫಾಲತಃ ॥ ೯೬ ॥
ಕ್ವಚಿತ್ಸಂಗೇ ಶಿವಾ ದೇವ್ಯಾ ಪ್ರಾದುರ್ಭೂತ್ವಾ ಸೃಜೇ ಜಗತ್ ।
ತವಾಽಜ್ಞಾಕಾರಿಣಃ ಸರ್ವೇ ವಯಂ ಬ್ರಹ್ಮಾದಯಃ ಸುರಾಃ ॥ ೯೭ ॥
ಅನಂತವೈಭವೋಽನಂತೋಽನಂತಧಾಮಾಽಸ್ಯನಂತಕಃ ।
ಅನಂತಃ ಸರ್ವಭಂಗಾಯ ಕುರುಷೇ ರೂಪಮದ್ಭುತಂ ॥ ೯೮ ॥

---

ಒಂದೆಡೆ ಪ್ರಮಥಗಣಗಳಿಂದ ಸೇವಿಸಲ್ಪಟ್ಟುದೂ, ಇನ್ನೊಂದೆಡೆ ಸಖಿಯರಿಂದ ಸೇವಿಸಲ್ಪಟ್ಟುದೂ ಆಗಿದ್ದಿತು.

೯೩. ಬ್ರಹ್ಮಾದಿ ದೇವತೆಗಳು ಶಂಕರನ ಇಂತಹ ತೇಜಸ್ಸಿನಿಂದ ಅಲಂಕಾರಗೊಂಡ ಕಣ್ಣುಳ್ಳ ರೂಪವನ್ನು ನೋಡಿ ಅತಿಶಯ ಭಕ್ತಿಯಿಂದ ಸ್ತುತಿಸಿದರು.

೯೪. ಪೂಜ್ಯನಾದ ನೀನೊಬ್ಬನೇ ಸಕಲ ಪ್ರಾಣಿಗಳ ದೇಹಗಳಲ್ಲಿ ಅಂತರ್ಯಾಮಿಯಾಗಿರುವೆ. ತಂದೆಯಂತೆ ರಕ್ಷಕನಾಗಿರುವೆ. ತಾಯಿಯಾಗಿರುವೆ. ಜೀವನಾಮಕನಾಗಿರುವೆ.

೯೫–೯೭. ನೀನು ಸಾಕ್ಷಿಯೂ, ವಿಶ್ವಬೀಜನೂ, ಬ್ರಹ್ಮಾಂಡವನ್ನು ವಶಮಾಡಿಕೊಳ್ಳುವವನೂ ಆಗಿರುವೆ. ಸಮುದ್ರದಲ್ಲಿ ಅಲೆಯಂತೆಯೂ, ನೀರಿನಲ್ಲಿ ಗುಳ್ಳೆಗಳಂತೆಯೂ ನಿನ್ನಲ್ಲಿ ಅನೇಕ ಬ್ರಹ್ಮಾಂಡಗಳು ಹುಟ್ಟುವುವು, ಅಳಿಯುವುವು. ನಾನು ಒಂದು ಸಲ ನಿನ್ನ ಕಣ್ಣಿನಿಂದಲೂ, ಒಂದು ಸಾರಿ ಹಣೆಯಿಂದಲೂ, ಒಂದು ಸಲ ಪಾರ್ವತಿಯ ಸಂಬಂಧದಿಂದಲೂ ಜನಿಸಿ ಜಗತ್ತನ್ನು ಸೃಜಿಸುವೆನು. ನಾನೇ ಮೊದಲಾದ ಸಮಸ್ತ ದೇವತೆಗಳೂ ನಿನ್ನ ಅಪ್ಪಣೆಯನ್ನು ನೆರವೇರಿಸುವೆವು.

೯೮. ನೀನು ಅಪರಿಮಿತ ವೈಭವವುಳ್ಳವನೂ, ನಾಶರಹಿತನೂ, ಅಪರಿಮಿತ ಕಾಂತಿಯುಳ್ಳವನೂ, ಅವಸಾನವಿಲ್ಲದವನೂ ಆಗಿ ಸಮಸ್ತ ಲೋಕನಾಶಕ್ಕಾಗಿ ಅದ್ಭುತರೂಪವನ್ನು ತಾಳುವೆ.

ಭವಾನಿ ತ್ವಂ ಭಯಂ ನಿತ್ಯಮಶಿವಾನಾಂ ಪವಿತ್ರಕೃತ್ ।
ಶಿವಾನಾಮಪಿ ದಾತ್ರೀ ತ್ವಂ ತಪಸಾಮಪಿ ತ್ವಂ ಫಲಂ ॥ ೯೯ ॥
ಯಃ ಶಿವಃ ಸ ಸ್ವಯಂ ವಿಷ್ಣುರ್ಯೋ ವಿಷ್ಣುಃ ಸ ಸದಾಶಿವಃ ।
ಇತ್ಯಭೇದಮತಿರ್ಜಾತಾಽಸ್ಮಾಕಂ ನಸ್ತ್ವತ್ಪ್ರಸಾದತಃ ॥ ೧೦೦ ॥
ಯತ್ಕಿಂಚಿಚ್ಚ ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ ।
ಮಧ್ಯೇ ಬಹಿಶ್ಚ ತತ್ಸರ್ವಂ ತ್ರಯಂ ವ್ಯಾಪ್ಯ ಸ್ಥಿತಾ ಯದಾ ॥ ೧೦೧ ॥
ಜಗತ್ಪೂಜ್ಯೇ ಸುರೇಶಾನಿ ಜಗದ್ವಂದ್ಯೇ ತಥಾಂಬಿಕೇ ।
ಪ್ರಸಾದಂ ಕುರು ದೇವೇಶಿ ದೇವೇಶ ಪ್ರಣತಾ ವಯಂ ॥ ೧೦೨ ॥
ಇತ್ಯುಕ್ತ್ವಾ ತ್ರಿದಶಾಃ ಸರ್ವೇ ಹೃಷ್ಟಾ ಜಗ್ಮುರ್ಯಥಾಗತಂ ॥ ೧೦೩ ॥

ಗಾಲವ ಉವಾಚ :–

ತದ್ದಿವ್ಯರೂಪಮತುಲಂ ದಿವಿ ಯೇ ಮನುಷ್ಯಾಃ
ಸಂಸಾರಸಾಗರ ಸಮುತ್ತರಣೈಕಪೋತಂ ।
ಸಂಚಿತಯಂತಿ ಮನಸಾ ಹೃತಕಿಲ್ಬಿಷಾಸ್ತೇ
ಬ್ರಹ್ಮಸ್ವರೂಪಮನುಯಾಂತಿ ವಿಮುಕ್ತಸಂಗಾಃ ॥ ೧೦೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಹರತಾಂಡವನರ್ತನವರ್ಣನಂ"ನಾಮ
ಚತುಃಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೯೯–೧೦೦. ಪಾರ್ವತಿಯೆ! ನೀನು ಅಮಂಗಳಗಳಿಗೆ ಭಯಂಕರಳೂ, ಪಾವಿತ್ರ್ಯವನ್ನುಂಟುಮಾಡುವವಳೂ, ಮಂಗಳದಾಯಕಳೂ, ತಪಸ್ಸುಗಳಿಗೆ ಫಲರೂಪಳೂ ಆಗಿರುವೆ. ಶಿವನೇ ವಿಷ್ಣುವು, ವಿಷ್ಣುವೇ ಶಿವನು ಎಂಬ ಅಖಂಡವಾದ ಅಭೇದಬುದ್ಧಿಯು ನಿನ್ನ ಅನುಗ್ರಹದಿಂದ ನಮಗುಂಟಾಯಿತು.

೧೦೧. ಪಾರ್ವತಿಯೆ! ಈ ಜಗತ್ತಿನಲ್ಲಿ ಕಾಣುತ್ತಿರುವ ಮತ್ತು ಕೇಳುತ್ತಿರುವ ಸಕಲ ವಸ್ತುಗಳ ಒಳಗೂ, ಹೊರಗೂ, ಸರ್ವತ್ರವೂ ನೀನೇ ವ್ಯಾಪಿಸಿರುವೆ.

೧೦೨–೧೦೩. ಜಗತ್ಪೂಜ್ಯಳೂ, ಜಗದ್ವಂದ್ಯಳೂ ಆದ ಪಾರ್ವತಿಯೆ! ಅನುಗ್ರಹಮಾಡು. ಮಹೇಶ್ವರ! ನಾವು ನಿನ್ನನ್ನು ವಂದಿಸಿರುವೆವು. ಸಮಸ್ತ ದೇವತೆಗಳೂ ಹೀಗೆಂದು ಸಂತೋಷದಿಂದ ಬಂದಂತೆ ಹೊರಟುಹೋದರು.

೧೦೪. ಗಾಲವನು ಹೇಳುತ್ತಾನೆ :–ಸಂಸಾರವೆಂಬ ಸಮುದ್ರವನ್ನು ದಾಟಲು ದೋಣಿಯಂತಿರುವ ಆ ದಿವ್ಯರೂಪವನ್ನು ಮನಸ್ಸಿನಿಂದ ಧ್ಯಾನಮಾಡುವ ಮಾನವರು ಪಾಪರಹಿತರೂ, ಮುಕ್ತವಿಷಯಸಂಗರೂ ಆಗಿ ಬ್ರಹ್ಮಸ್ವರೂಪವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಹರತಾಂಡವನರ್ತನವರ್ಣನ"ವೆಂಬ
ಇನ್ನೂರ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಪಂಚಾಶದುತ್ತರದ್ವಿಶತತಮೋಽಧ್ಯಾಯಃ

## ಲಕ್ಷ್ಮೀನಾರಾಯಣಮಹಿಮವರ್ಣನಂ

ಗಾಲವ ಉವಾಚ:—

ಏವಂ ತೇ ಲಬ್ಧಶಾಪಾಶ್ಚ ಪಾರ್ವತೀ ಶಾಪಪೀಡಿತಾಃ ।
ಅನಪತ್ಯಾ ಬಭೂವುಶ್ಚ ತಥಾ ಚ ಪ್ರತಿಮಾ ನವಾಃ ॥ ೧ ॥
ಶಾಲಿಗ್ರಾಮಸ್ತು ಗಂಡಕ್ಯಾಂ ನರ್ಮದಾಯಾಂ ಮಹೇಶ್ವರಃ ।
ಉತ್ಪದ್ಯತೇ ಸ್ವಯಂಭೂಶ್ಚ ತಾವೇತೌ ನೈವ ಕೃತ್ರಿಮೌ ॥ ೨ ॥
ಚತುರ್ವಿಂಶತಿಭೇದೇನ ಶಾಲಿಗ್ರಾಮಗತೋ ಹರಿಃ ।
ಪರೀಕ್ಷ್ಯಃ ಪುರುಷೈರ್ನಿತ್ಯಮೇಕರೂಪಃ ಸದಾಶಿವಃ ॥ ೩ ॥
ಶಾಲಿಗ್ರಾಮಶಿಲಾ ಯತ್ರ ಗಂಡಕೀ ವಿಮಲೇ ಜಲೇ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಣಃ ಪದಮಾಪ್ನುಯಾತ್ ॥ ೪ ॥
ತಾಂ ಪೂಜಯಿತ್ವಾ ವಿಧಿವದ್ಗಂಡಕೀ ಸಂಭವಾಂ ಶಿಲಾಂ ।
ಯೋಗೀಶ್ವರೋ ವಿಶುದ್ಧಾತ್ಮಾ ಜಾಯತೇ ನಾಽತ್ರ ಸಂಶಯಃ ॥ ೫ ॥
ಏತತ್ತೇ ಕಥಿತಂ ಸರ್ವಂ ಯತ್ಪೃಷ್ಟೋಽಹಮಿಹ ತ್ವಯಾ ।
ಯಥಾ ಹರೋ ವಿಪ್ರಶಾಪಂ ಪ್ರಾಪ್ತವಾಂಸ್ತನ್ನಿಶಾಮಯ ॥ ೬ ॥

---

## ಕನ್ನಡದ ಅನುವಾದ

### ಲಕ್ಷ್ಮೀನಾರಾಯಣಮಹಿಮವರ್ಣನ

೧. ಗಾಲವನು ಹೇಳುತ್ತಾನೆ:—ಹೀಗೆ ಆ ದೇವತೆಗಳು ಪಾರ್ವತೀ ಶಾಪದಿಂದ ಪೀಡಿತರಾಗಿ ಮಕ್ಕಳಿಲ್ಲದವರೂ, ನೂತನ ಪ್ರತಿಮೆಗಳೂ ಆದರು.

೨. ವಿಷ್ಣುವು ಗಂಡಕೀ ನದಿಯಲ್ಲಿ ಶಾಲಿಗ್ರಾಮಶಿಲೆಯಾದನು. ಮಹೇಶ್ವರನು ನರ್ಮದಾ ನದಿಯಲ್ಲಿ ಹುಟ್ಟಿದನು. ಹೀಗೆ ಹುಟ್ಟಿದ ಅವರಿಬ್ಬರೂ ಕೃತ್ರಿಮರೂಪಿಗಳಲ್ಲ.

೩. ಶಾಲಿಗ್ರಾಮದಲ್ಲಿರುವ ಹರಿಯು ಇಪ್ಪತ್ತನಾಲ್ಕು ವಿಧವಾಗಿರುವನು. ಶಂಕರನು ಏಕರೂಪನಾಗಿರುವನು.

೪. ಶಾಲಿಗ್ರಾಮಶಿಲೆಯಿರುವ ಗಂಡಕೀ ನದಿಯ ಶುದ್ಧಜಲದಲ್ಲಿ ಮಿಂದು ಆ ಜಲವನ್ನು ಕುಡಿದವನು ಬ್ರಹ್ಮನ ಸ್ಥಾನವನ್ನು ಹೊಂದುವನು.

೫. ಗಂಡಕೀ ನದಿಯಲ್ಲಿ ಹುಟ್ಟಿದ ಶಾಲಿಗ್ರಾಮಶಿಲೆಯನ್ನು ವಿಧಿಪೂರ್ವಕವಾಗಿ ಪೂಜಿಸಿದವನು ವಿಶುದ್ಧಮನಸ್ಸುಳ್ಳವನಾಗಿ ಯೋಗೀಶ್ವರನಾಗುವನು.

೬. ನೀನು ನನ್ನನ್ನು ಕೇಳಿದ ವಿಷಯಗಳನ್ನೆಲ್ಲ ನಿನಗೆ ಹೇಳಿರುವೆನು. ಈಗ ಶಿವನು ಹೇಗೆ ಬ್ರಾಹ್ಮಣಶಾಪವನ್ನು ಹೊಂದಿದನೆಂಬುದನ್ನು ಕೇಳು.

ಯಃ ಶೃಣೋತಿ ನರೋ ಭಕ್ತ್ಯಾ ವಾಚ್ಯಮಾನಾಮಿಮಾಂ ಕಥಾಂ ।
ಗಿರೀಶನೃತ್ಯಸಂಬಂಧಾಮುಮಾದೇಹಾರ್ಧವರ್ಣಿತಾಂ ॥ ೭ ॥
ಬ್ರಹ್ಮಣಃ ಸ್ತುತಿಸಂಯುಕ್ತಾಂ ಸ ಗಚ್ಛೇತ್ಪರಮಾಂ ಗತಿಂ ।
ಶ್ಲೋಕಾರ್ಧಂ ಶ್ಲೋಕಪಾದಂ ವಾ ಸಮಸ್ತಂ ಶ್ಲೋಕಮೇವ ವಾ ॥ ೮ ॥
ಯಃ ಪಠೇದವಿರೋಧೇನ ಮಾಯಾಮಾನವಿವರ್ಜಿತಃ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೯ ॥
ಚಾತುರ್ಮಾಸ್ಯೇ ವಿಶೇಷೇಣ ಪಠಂಛೃಣ್ವನ್ನರೋತ್ತಮಃ ।
ಲಭತೇ ಚಿಂತಿತಾಂ ಸಿದ್ಧಿಂ ಧನಪುತ್ರಾದಿಸಂವೃತಃ ॥ ೧೦ ॥
ಯಥಾ ಬ್ರಹ್ಮಾದಯೋ ದೇವಾ ಗೀತವಾದ್ಯಾಭಿಯೋಗತಃ ।
ಪರಾಂ ಸಿದ್ಧಿಮವಾಪುಸ್ತೇ ದುರ್ಗಾಶಿವಸಮೀಪತಃ ॥ ೧೧ ॥
ವರ್ಷಾಕಾಲೇ ಚ ಸಂಪ್ರಾಪ್ತೇ ಭಕ್ತಿಯೋಗೇ ಜನಾರ್ದನೇ ।
ಮಹೇಶ್ವರೇಽಥ ದುರ್ಗಾಯಾಂ ನ ಭೂಯಃ ಸ್ತನಪೋ ಭವೇತ್ ॥ ೧೨ ॥
ಗಣೇಶಸ್ಯ ಸದಾ ಕುರ್ಯಾಚ್ಚಾತುರ್ಮಾಸ್ಯೇ ವಿಶೇಷತಃ ।
ಪೂಜಾಂ ಮನುಷ್ಯೋ ಲಾಭಾರ್ಥಂ ಯತ್ನೋ ಲಾಭಪ್ರದೋ ಹಿ ಸಃ ॥ ೧೩ ॥
ಸೂರ್ಯೋ ನೀರೋಗತಾಂ ದದ್ಯಾದ್ಭಕ್ತ್ಯಾ ಯೈಃ ಪೂಜ್ಯತೇ ಹಿ ಸಃ ।
ಚಾತುರ್ಮಾಸ್ಯೇ ಸಮಾಯಾತೇ ವಿಶೇಷಫಲದೋ ನೃಣಾಂ ॥ ೧೪ ॥

---

೭–೯. ಶಂಕರನ ತಾಂಡವನೃತ್ಯಸಂಬಂಧವಾದುದೂ, ಪಾರ್ವತಿಯು ಶಿವನ ಅರ್ಧಾಂಗಿಯಾದುದೂ ಆದ ಈ ಕಥೆಯನ್ನು ಬ್ರಹ್ಮನ ಸ್ತುತಿಯೊಡನೆ ಹೇಳುತ್ತಿರುವುದನ್ನು ಕೇಳಿದವನು ಉತ್ತಮಗತಿಯನ್ನು ಪಡೆಯುವನು. ಈ ಕಥೆಯ ಅರ್ಧಶ್ಲೋಕವನ್ನಾಗಲಿ, ಕಾಲುಶ್ಲೋಕವನ್ನಾಗಲಿ, ಪೂರ್ಣಶ್ಲೋಕವನ್ನಾಗಲಿ, ಕಪಟಾಹಂಕಾರಗಳಿಲ್ಲದೆ ಅವಿರೋಧವಾಗಿ ಪಠಿಸುವವನು ದುಃಖರಹಿತವಾದ ಸ್ಥಾನಕ್ಕೆ ತೆರಳುವನು.

೧೦–೧೧. ಚಾತುರ್ಮಾಸ್ಯದಲ್ಲಿ ಇದನ್ನು ಪಠಿಸುವವನೂ, ಕೇಳುವವನೂ ಆದ ಮಾನವೋತ್ತಮನು ಬ್ರಹ್ಮಾದಿ ದೇವತೆಗಳು ಪಾರ್ವತೀ ಪರಮೇಶ್ವರರ ಸನ್ನಿಧಿಯಲ್ಲಿ ಗೀತವಾದ್ಯಾದಿ ಸಂಬಂಧದಿಂದ ಉತ್ತಮ ಸಿದ್ಧಿಯನ್ನು ಪಡೆದಂತೆ ಧನಪುತ್ರಾದಿಗಳಿಂದ ಸಹಿತನಾಗಿ ಇಷ್ಟಾರ್ಥವನ್ನು ಪಡೆಯುವನು.

೧೨. ಮಳೆಗಾಲದಲ್ಲಿ ವಿಷ್ಣು, ಶಂಕರ, ದುರ್ಗೆಯರಲ್ಲಿ ಭಕ್ತಿಮಾಡುವವನು ಮರಳಿ ಜನಿಸುವುದಿಲ್ಲ.

೧೩. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಲಾಭಕ್ಕಾಗಿ ಗಣೇಶನನ್ನು ಪೂಜಿಸಬೇಕು. ಅವನು ಲಾಭವನ್ನೀಯುವನು.

೧೪. ಸೂರ್ಯನು ಭಕ್ತಿಯಿಂದ ಪೂಜಿಸಿದ ಮಾನವರ ರೋಗವನ್ನು ಪರಿಹರಿಸುವನು. ಅವನು ಚಾತುರ್ಮಾಸ್ಯದಲ್ಲಿ ಮಾನವರಿಗೆ ಅತಿಶಯ ಫಲವನ್ನು ನೀಡುವನು.

ಇದಂ ಹಿ ಪಂಚಾಯತನಂ ಸೇವ್ಯತೇ ಗೃಹಮೇಧಿಭಿಃ ।
ಚಾತುರ್ಮಾಸ್ಯೇ ವಿಶೇಷೇಣ ಸೇವಿತಂ ಚಿಂತಿತಪ್ರದಂ ॥ ೧೫ ॥
ಶಾಲಿಗ್ರಾಮಗತಂ ವಿಷ್ಣುಂ ಯಃ ಪೂಜಯತಿ ನಿತ್ಯದಾ ।
ದ್ವಾರವತೀ ಚಕ್ರಶಿಲಾ ಸಹಿತಂ ಮೋಕ್ಷದಾಯಕಂ ॥ ೧೬ ॥
ಚಾತುರ್ಮಾಸ್ಯೇ ವಿಶೇಷೇಣ ದರ್ಶನಾದಪಿ ಮುಕ್ತಿದಂ ।
ಯಸ್ಮಿನ್ ಸ್ತುತೇ ಸ್ತುತಂ ಸರ್ವಂ ಪೂಜಿತೇ ಪೂಜಿತಂ ಜಗತ್ ॥ ೧೭ ॥
ಪೂಜಿತಃ ಪಠಿತೋ ಧ್ಯಾತಃ ಸ್ಮೃತೋ ವೈ ಕಲುಷಾಪಹಃ ।
ಶಾಲಿಗ್ರಾಮೇ ಕಿಂ ಪುನರ್ಯಚ್ಛಾಲಿಗ್ರಾಮಗತೋ ಹರಿಃ ॥ ೧೮ ॥
ಪುನರ್ಹಿ ಹರಿನೈವೇದ್ಯಂ ಫಲಂ ಚಾಽಪಿ ಧೃತಂ ಜಲಂ ।
ಚಾತುರ್ಮಾಸ್ಯೇ ವಿಶೇಷೇಣ ಶಾಲಿಗ್ರಾಮಗತಂ ಶುಭಂ ॥ ೧೯ ॥
ತಿಲಾಃ ಪುನಂತ್ಯರ್ಪಿತಾಶ್ಚ ಶಾಲಿಗ್ರಾಮಸ್ಯ ಶೂದ್ರಜ ।
ಚಾತುರ್ಮಾಸ್ಯೇ ವಿಶೇಷೇಣ ನರಂ ಭಕ್ತ್ಯಾ ಸಮನ್ವಿತಂ ॥ ೨೦ ॥
ಸ ಲಕ್ಷ್ಮೀ ಸಹಿತೋ ನಿತ್ಯಂ ಧನಧಾನ್ಯ ಸಮನ್ವಿತಃ ।
ಮಹಾಭಾಗ್ಯವತಾಂ ಗೇಹೇ ಜಾಯತೇ ನಾಽತ್ರ ಸಂಶಯಃ ॥ ೨೧ ॥

---

೧೫. ಗೃಹಸ್ಥರು ಚಾತುರ್ಮಾಸ್ಯದಲ್ಲಿ ಈ ಪಂಚಾಯತನ ಪೂಜೆಯನ್ನು ಮಾಡಿದರೆ ಅದು ಅಭಿಲಷಿತಾರ್ಥವನ್ನು ಕೊಡುವುದು.

೧೬. ಶಾಲಿಗ್ರಾಮದಲ್ಲಿರುವ ವಿಷ್ಣುವನ್ನು ದ್ವಾರವತೀ ಚಕ್ರಶಿಲೆಯೊಡನೆ ಪೂಜಿಸಿದವನಿಗೆ ಮೋಕ್ಷವು ಲಭಿಸುವುದು.

೧೭. ಚಾತುರ್ಮಾಸ್ಯದಲ್ಲಿ ಇದರ ದರ್ಶನದಿಂದಲೇ ಮುಕ್ತಿಯುಂಟಾಗುವುದು. ವಿಷ್ಣುವನ್ನು ಸ್ತುತಿಸಿದರೆ ಎಲ್ಲ ದೇವತೆಗಳನ್ನೂ ಸ್ತುತಿಸಿದಂತಾಗುವುದು; ಪೂಜಿಸಿದರೆ ಜಗತ್ತನ್ನೇ ಪೂಜಿಸಿದಂತಾಗುವುದು.

೧೮. ಶಾಲಿಗ್ರಾಮವನ್ನು ಪೂಜಿಸುವುದರಿಂದಲೂ, ಅದರ ನಾಮೋಚ್ಚಾರಣೆಯಿಂದಲೂ, ಧ್ಯಾನಸ್ಮರಣೆಗಳಿಂದಲೂ ಪಾಪವು ನೀಗುವುದು. ಶಾಲಿಗ್ರಾಮದಲ್ಲಿರುವ ವಿಷ್ಣುವಿನ ವಿಷಯವಿನ್ನೇನು.

೧೯. ಚಾತುರ್ಮಾಸ್ಯದಲ್ಲಿ ಶಾಲಿಗ್ರಾಮದಲ್ಲಿರುವ ಹರಿಗೆ ನಿವೇದಿಸಿದ ಫಲ, ಜಲಗಳನ್ನು ಸ್ವೀಕರಿಸಿದರೆ ವಿಶೇಷ ಶುಭವುಂಟಾಗುವುದು.

೨೦. ಎಲೈ ಶೂದ್ರನೆ! ಶಾಲಿಗ್ರಾಮಕ್ಕೆ ತಿಲವನ್ನು ಭಕ್ತಿಯಿಂದ ಅರ್ಪಿಸಿದ ನರನನ್ನು ಅದು ಪವಿತ್ರಗೊಳಿಸುವುದು.

೨೧. ಆ ಮನುಷ್ಯನು ನಿಶ್ಚಯವಾಗಿಯೂ ಧನಧಾನ್ಯಗಳಿಂದ ಕೂಡಿ ಮಹಾಭಾಗ್ಯವಂತರ ಮನೆಯಲ್ಲಿ ಹುಟ್ಟುವನು.

ಸ ಲಕ್ಷ್ಮೀ ಸಹಿತೋ ವಿಷ್ಣುರ್ವಿಜ್ಞೇಯೋ ನಾಽತ್ರ ಸಂಶಯಃ ।
ತಂ ಪೂಜಯೇನ್ಮಹಾಭಕ್ತ್ಯಾ ಸ್ಥಿರಾ ಲಕ್ಷ್ಮೀರ್ಗೃಹೇ ಭವೇತ್ ॥ ೨೨ ॥
ತಾವದ್ದಾರಿದ್ರತಾ ಲೋಕೇ ತಾವದ್ಗರ್ಜತಿ ಪಾತಕಂ ।
ತಾವಕ್ಲ್ಲೇಶಾಃ ಶರೀರೇಽಸ್ಮಿನ್ನ ಯಾವತ್ಪೂಜಯೇದ್ಧರಿಂ ॥ ೨೩ ॥
ಸ ಏವ ಪೂಜ್ಯತೇ ಯತ್ರ ಪಂಚಕ್ರೋಶಂ ಪವಿತ್ರಕಂ ।
ಕರೋತಿ ಸಕಲಂ ಕ್ಷೇತ್ರಂ ನ ತತ್ರಾಽಶುಭಸಂಭವಃ ॥ ೨೪ ॥
ಏತದೇವ ಮಹಾಭಾಗ್ಯಮೇತದೇವ ಮಹಾತಪಃ ।
ಏಷ ಏವ ಪರೋ ಮೋಕ್ಷೋ ಯತ್ರ ಲಕ್ಷ್ಮೀಶಪೂಜನಂ ॥ ೨೫ ॥
ಶಂಖಶ್ಚ ದಕ್ಷಿಣಾವರ್ತೋ ಲಕ್ಷ್ಮೀನಾರಾಯಣಾತ್ಮಕಃ ।
ತುಲಸೀ ಕೃಷ್ಣಸಾರೋಽತ್ರ ಯತ್ರ ದ್ವಾರವತೀ ಶಿಲಾ ।
ತತ್ರ ಶ್ರೀರ್ವಿಜಯೋ ವಿಷ್ಣುರ್ಮುಕ್ತಿರೇವಂ ಚತುಷ್ಟಯಂ ॥ ೨೬ ॥
ಲಕ್ಷ್ಮೀನಾರಾಯಣೋ ಪೂಜಾಂ ವಿಧಾತುರ್ಮನುಜಸ್ಯತು ।
ದದಾತಿ ಪುಣ್ಯಮತುಲಂ ಮುಕ್ತೋ ಭವತಿ ತತ್ಕ್ಷಣಾತ್ ॥ ೨೭ ॥
ಚಾತುರ್ಮಾಸ್ಯೇ ವಿಶೇಷೇಣ ಪೂಜ್ಯೋ ಲಕ್ಷ್ಮೀಯುತೋ ಹರಿಃ ॥ ೨೮ ॥

---

೨೨. ಅವನನ್ನು ಲಕ್ಷ್ಮಿಯಿಂದ ಸಹಿತನಾದ ವಿಷ್ಣುವೆಂದು ತಿಳಿಯಬೇಕು. ಅವನನ್ನು ಭಕ್ತಿಯಿಂದ ಪೂಜಿಸಿದರೆ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿ ನೆಲೆಸುವಳು.

೨೩. ಹರಿಯನ್ನು ಪೂಜಿಸದಿರುವವರೆಗೆ ಲೋಕದಲ್ಲಿ ಬಡತನವೂ, ಪಾಪವೂ, ಶರೀರದಲ್ಲಿ ಕ್ಲೇಶಗಳೂ ಇರುವುವು.

೨೪. ಎಲ್ಲಿ ವಿಷ್ಣುವನ್ನು ಪೂಜಿಸುವರೊ; ಅಲ್ಲಿಂದ ಹತ್ತು ಮೈಲಿ ದೂರದ ಸ್ಥಳವೂ, ಆ ಕ್ಷೇತ್ರವೂ ಪವಿತ್ರವಾಗುವುದು. ಅಲ್ಲಿ ಅಮಂಗಳವುಂಟಾಗುವುದಿಲ್ಲ.

೨೫. ವಿಷ್ಣುವಿನ ಪೂಜೆಯೇ ಮಹಾಭಾಗ್ಯವೂ, ಮಹಾತಪಸ್ಸೂ, ಮೋಕ್ಷವೂ ಆಗಿರುವುದು.

೨೬. ಲಕ್ಷ್ಮೀನಾರಾಯಣರೂಪವಾದ ಬಲಮುರಿ ಶಂಖ, ತುಲಸೀ, ಜಿಂಕೆ, ಶಾಲಿಗ್ರಾಮಶಿಲಾ ಇವುಗಳಿರುವ ಸ್ಥಳದಲ್ಲಿ ಲಕ್ಷ್ಮೀ, ಜಯ, ವಿಷ್ಣು, ಮುಕ್ತಿ ಈ ನಾಲ್ಕು ನೆಲಸಿರುವುವು.

೨೭. ಲಕ್ಷ್ಮೀನಾರಾಯಣನು ತನ್ನನ್ನು ಪೂಜಿಸುವ ಮಾನವನಿಗೆ ಅಮಿತ ಪುಣ್ಯವನ್ನು ಕೊಡುವನು. ಆ ಪೂಜಕನು ಕೂಡಲೆ ಮುಕ್ತನಾಗುವನು.

೨೮. ಚಾತುರ್ಮಾಸ್ಯದಲ್ಲಿ ಲಕ್ಷ್ಮೀಸಹಿತನಾದ ವಿಷ್ಣುವನ್ನು ಪೂಜಿಸಬೇಕು.

ಕುರ್ವತಸ್ತಸ್ಯ ದೇವಸ್ಯ ಧ್ಯಾನಂ ಕಲ್ಮಷನಾಶನಂ ।
ತುಲಸೀ ಮಂಜರೀಭಿಶ್ಚ ಪೂಜಿತೋ ಜನ್ಮನಾಶನಃ ॥ ೨೯ ॥
ಪೂಜಿತೋ ಬಿಲ್ವಪತ್ರೇಣ ಚಾತುರ್ಮಾಸ್ಯೇಽಘಹೃತ್ತಮಃ ॥ ೩೦ ॥
ಸರ್ವಪ್ರಯತ್ನೇನ ಸ ಏವ ಸೇವ್ಯೋ
ಯೋ ವ್ಯಾಪ್ಯ ವಿಶ್ವಂ ಜಗತಾಮಧೀಶಃ ।
ಕಾಲೇ ಸೃಜತ್ಯತ್ತಿ ಚ ಹೇಲಯಾ ವಾ
ತಂ ಪ್ರಾಪ್ಯ ಭಕ್ತೋ ನ ಹಿ ಸೀದತೀತಿ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಲಕ್ಷ್ಮೀನಾರಾಯಣಮಹಿಮವರ್ಣನಂ" ನಾಮ
ಪಂಚಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೨೯. ಆ ವಿಷ್ಣುವನ್ನು ಧ್ಯಾನಿಸುವವನ ಪಾಪವು ನಾಶವಾಗುವುದು. ತುಲಸೀ ಮಂಜರಿಯಿಂದ ಪೂಜಿಸಿದರೆ ಮುಕ್ತಿಯುಂಟಾಗುವುದು.

೩೦. ಚಾತುರ್ಮಾಸ್ಯದಲ್ಲಿ ವಿಷ್ಣುವನ್ನು ಬಿಲ್ವಪತ್ರದಿಂದ ಪೂಜಿಸಿದರೆ ಅತಿಶಯವಾಗಿ ಪಾಪವು ಪರಿಹಾರವಾಗುವುದು.

೩೧. ಜಗತ್ತನ್ನು ಸೃಜಿಸಿ ಅದನ್ನು ವ್ಯಾಪಿಸಿ ಅದಕ್ಕೆ ಒಡೆಯನಾಗಿ ಅದನ್ನು ಅನಾಯಾಸವಾಗಿ ನಾಶಗೊಳಿಸುವ ವಿಷ್ಣುವನ್ನು ಸೇವಿಸಬೇಕು. ಅವನನ್ನು ಹೊಂದಿದ ಭಕ್ತನು ನಾಶವಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಲಕ್ಷ್ಮೀನಾರಾಯಣಮಹಿಮವರ್ಣನ"ವೆಂಬ
ಇನ್ನೂರ ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ರಾಮನಾಮಮಹಿಮವರ್ಣನಂ

ಗಾಲವ ಉವಾಚ:—

ಏಕದಾ ಭಗವಾನ್ ರುದ್ರಃ ಕೈಲಾಸಶಿಖರೇ ಸ್ಥಿತಃ ।
ದಧಾರ ಪರಮಾಂ ಲಕ್ಷ್ಮೀಮುಮಯಾ ಸಹಿತಃ ಕಿಲ ॥ ೧ ॥
ಗಣಾನಾಂ ಕೋಟಿಯಸ್ತಿಸ್ರಸ್ತಂ ಯದಾ ಪರ್ಯವಾರಯನ್ ।
ವೀರಬಾಹುರ್ವೀರಭದ್ರೋ ವೀರಸೇನಶ್ಚ ಭೃಂಗಿರಾಟ್ ॥ ೨ ॥
ರುಚಿಸ್ತುಟಿಸ್ತಥಾ ನಂದೀ ಪುಷ್ಪದಂತಸ್ತಥೋತ್ಕಟಿಃ ।
ವಿಕಟಿಃ ಕಂಟಕಶ್ಚೈವ ಹರಃ ಕೇಶೋ ವಿಘಂಟಕಃ ॥ ೩ ॥
ಮಾಲಾಧರಃ ಪಾಶಧರಃ ಶೃಂಗೀ ಚ ನರನಸ್ತಥಾ ।
ಪುಷ್ಪೋತ್ಕಟಿಃ ಶಾಲಿಭದ್ರೋ ಮಹಾಭದ್ರೋ ವಿಭದ್ರಕಃ ॥ ೪ ॥
ಕಣಪಃ ಕಾಲಪಃ ಕಾಲೋ ಧನಪೋ ರಕ್ತಲೋಚನಃ ।
ವಿಕಟಾಸ್ಯೋ ಭದ್ರಕಶ್ಚ ದೀರ್ಘಜಿಹ್ವೋ ವಿರೋಚನಃ ॥ ೫ ॥
ಪಾರದೋ ಘನದೋ ಧ್ವಾಂಕ್ಷೀ ಹಂಸಕೀ ನರಕಸ್ತಥಾ ।
ಪಂಚಶೀರ್ಷಸ್ತ್ರಿಶೀರ್ಷಶ್ಚ ಕ್ರೋಡದಂಷ್ಟ್ರೋ ಮಹಾದ್ಭುತಃ ॥ ೬ ॥
ಸಿಂಹವಕ್ತ್ರೋ ವೃಷಹನುಃ ಪ್ರಚಂಡಸ್ತುಂಡಿರೇವ ಚ ।
ಏತೇಚಾಽನ್ಯೇ ಚ ಬಹವಸ್ತದಾ ಭವಸಮೀಪಗಾಃ ॥ ೭ ॥

---

## ಕನ್ನಡದ ಅನುವಾದ

### ರಾಮನಾಮಮಹಿಮವರ್ಣನ

೧. ಗಾಲವನು ಹೇಳುತ್ತಾನೆ:— ಒಂದಾನೊಂದು ವೇಳೆ ಪೂಜ್ಯನಾದ ರುದ್ರನು ಕೈಲಾಸ ಶಿಖರದಲ್ಲಿ ಪಾರ್ವತಿಯೊಡನೆ ಇರುವವನಾಗಿ ಅತಿಶಯವಾದ ಕಾಂತಿಯನ್ನು ಧರಿಸಿದನು.

೨–೯. ಆಗ ಅವನನ್ನು ಮೂರುಕೋಟಿ ಗಣಗಳು ಸುತ್ತುವರಿದುವು. ವೀರಬಾಹು, ವೀರಭದ್ರ, ವೀರಸೇನ, ಭೃಂಗಿರಟ, ರುಚಿ, ತುಟಿ, ನಂದಿ, ಪುಷ್ಪ ದಂತ, ಉತ್ಕಟ, ವಿಕಟ, ಕಂಟಕ, ಹರ, ಕೇಶ, ವಿಘಂಟಕ, ಮಾಲಾಧರ, ಪಾಶ ಧರ, ಶೃಂಗೀ, ನರನ, ಪುಷ್ಪೋತ್ಕಟ, ಶಾಲಿಭದ್ರ, ಮಹಾಭದ್ರ, ವಿಭದ್ರಕ, ಕಣಪ, ಕಾಲಪ, ಕಾಲ, ಧನಪ, ರಕ್ತಲೋಚನ, ವಿಕಟಾಸ್ಯ, ಭದ್ರಕ, ದೀರ್ಘ ಜಿಹ್ವ, ವಿರೋಚನ, ಪಾರದ, ಘನದ, ಧ್ವಾಂಕ್ಷೀ, ಹಂಸಕೀ, ನರಕ, ಪಂಚ ಶೀರ್ಷ, ತ್ರಿಶೀರ್ಷ, ಕ್ರೋಡದಂಷ್ಟ್ರ, ಸಿಂಹವಕ್ತ್ರ, ವೃಷಹನು, ಪ್ರಚಂಡ, ತುಂಡಿ

ಮಹಾದೇವ ಜಯೇತ್ಯುಚ್ಚೈರ್ಭದ್ರಕಾಲೀ ಸಮನ್ವಿತಾಃ ।
ಭೂತಪ್ರೇತ ಪಿಶಾಚಾನಾಂ ಸಮೂಹಾ ಯಸ್ಯವಲ್ಲಭಾಃ ॥ ೮ ॥
ಅಸ್ತುವಂಸ್ತಂ ಸಮೀಪಸ್ಥಾ ವಸಂತೇ ಸಮುಪಾಗತೇ ।
ವನರಾಜಿರ್ವಿಭಾತಿಸ್ಮ ನವಕೋರಕಶೋಭಿತಾ ॥ ೯ ॥
ದಕ್ಷಿಣಾಽನಿಲಸಂಸ್ಪರ್ಶಃ ಕವೀನಾಂ ಸುಖಕೃದ್ಬಭೌ ।
ವಿಯೋಗಿ ಹೃದಯಾಕರ್ಷೀ ಕಿಂಶುಕಃ ಪುಷ್ಪಶೋಭಿತಃ ॥ ೧೦ ॥
ದ್ವಂದ್ವಾದಿವಿಕ್ರಿಯಾಭಾವಂ ಚಿಕ್ರೀಡುಶ್ಚ ಸಮಂತತಃ ।
ತಸ್ಮಿನ್ ವಿಗಾಢೇ ಸಮಯೇ ಮನಸ್ಯುನ್ಮಾದಕೇ ತಥಾ ॥ ೧೧ ॥
ನಂದೀ ದಂಡಧರಃ ಸಂಜ್ಞಾಂ ದೃಷ್ಟ್ವಾ ಚಕ್ರೇ ಹರೋ ಪರಃ ।
ಅಲಂ ಚಾಪಲದೋಷೇಣ ತಪಃ ಕುರ್ವಂತು ಭೋ ಗಣಾಃ ॥ ೧೨ ॥
ತದಾ ಸರ್ವೇ ವನಮಪಿ ಭೂಕಾಂಡಜಮಭೂತ್ಪುನಃ ।
ಗಣಾಸ್ತೇ ತಪ ಆತಸ್ಥುರ್ದೃಷ್ಟ್ವಾ ಕಾಂತಿಂ ವಸಂತಜಾಂ ॥ ೧೩ ॥
ತತಃ ಸಾ ವಿಶ್ವಜನನೀ ಪಾರ್ವತೀ ಪ್ರಾಹ ಶಂಕರಂ ।
ಇಯಂ ತೇ ಕರಗಾ ನಿತ್ಯಮಕ್ಷಮಾಲಾ ಮಹೇಶ್ವರ ॥ ೧೪ ॥

---

ಇವೂ, ಇನ್ನೂ ಇತರ ಗಣಗಳೂ ಭದ್ರಕಾಲಿಯಿಂದಲೂ, ಶಿವನಿಗೆ ಪ್ರಿಯರಾದ ಭೂತ ಪ್ರೇತ ಪಿಶಾಚ ಸಮೂಹಗಳಿಂದಲೂ ಸಹಿತರಾಗಿ ಆ ಶಂಕರನನ್ನು ಸ್ತುತಿಸಿದರು. ಆಗ ವಸಂತಕಾಲವು ಬರಲು ವನಗಳ ಪಂಕ್ತಿಯು ಹೊಸ ಮೊಗ್ಗುಗಳಿಂದ ಶೋಭಿಸಿತು.

೧೦. ದಕ್ಷಿಣದಿಕ್ಕಿನ ಗಾಳಿಯು ಕವಿಗಳಿಗೆ ಸುಖವನ್ನುಂಟುಮಾಡುತ್ತ ಬೀಸಿತು. ವಿಯೋಗಿಗಳ ಹೃದಯವನ್ನು ಸೆಳೆಯುವ ಕಿಂಶುಕವು ಪುಷ್ಪಗಳಿಂದ ಪ್ರಕಾಶಿಸಿತು.

೧೧–೧೨. ಸ್ತ್ರೀಪುರುಷರು ವಿಕಾರಗೊಳ್ಳದೆ ಎಲ್ಲೆಡೆಯಲ್ಲಿಯೂ ಕ್ರೀಡಿಸಿದರು. ಆ ಸಮಯವು ಮನಸ್ಸನ್ನು ಉದ್ರೇಕಗೊಳಿಸುತ್ತಿರಲು ಅದನ್ನು ನೋಡಿ ಮತ್ತೊಬ್ಬ ಶಿವನಂತಿರುವ ನಂದಿಯು ದಂಡಧಾರಿಯಾಗಿ, "ಎಲೈ ಗಣಗಳೆ! ಚಪಲಚಿತ್ತರಾಗಬೇಡಿರಿ. ತಪಸ್ಸನ್ನು ಮಾಡಿರಿ" ಎಂದು ಸಂಜ್ಞೆಮಾಡಿದನು.

೧೩. ಆಗ ಸಮಗ್ರ ವನವು ಶಬ್ದಮಾಡದ ಪಕ್ಷಿಗಳುಳ್ಳದ್ದಾಯಿತು. ಆ ಗಣಗಳು ವಸಂತಕಾಲದ ಶೋಭೆಯನ್ನು ನೋಡಿ ತಪವನ್ನಾಚರಿಸಿದುವು.

೧೪. ಬಳಿಕ ಪ್ರಪಂಚಕ್ಕೆ ಮಾತೆಯಾದ ಪಾರ್ವತಿಯು ಶಂಕರನನ್ನು ಕುರಿತು ಇಂತೆಂದಳು. "ಮಹೇಶ್ವರ! ನಿನ್ನ ಕೈಯಲ್ಲಿ ಈ ಜಪಸರವು ಯಾವಾಗಲೂ ಇರುವುದಷ್ಟೆ.

ತ್ವಯಾ ಕಿಂ ಜಪ್ಯತೇ ದೇವ ಸಂದೇಹಯತಿ ಮೇ ಮನಃ ।
ತ್ವಮೇಕಃ ಸರ್ವಭೂತಾನಾಮಾದಿಕೃತ್ಸಕಲೇಶ್ವರಃ ॥ ೧೫ ॥
ನ ಮಾತಾ ನ ಪಿತಾ ಬಂಧುಸ್ತವಜಾತಿರ್ನಕಶ್ಚನ ।
ಅಹಂ ತವ ಪರಂ ಕಿಂ ಚಿದ್ವೇದ್ಮಿ ನಾಸ್ತೀತಿ ಕಿಂಚನ ॥ ೧೬ ॥
ಶ್ರಮೇಣ ತ್ವಂ ಸಮಾಯುಕ್ತೋ ಶ್ವಾಸೋಚ್ಛ್ವಾಸ ಪರಾಯಣಃ ।
ಜಪನ್ನಪಿ ಮಹಾಭಕ್ತ್ಯಾ ದೃಶ್ಯಸೇ ತ್ವಂ ಮಯಾ ಸದಾ ॥ ೧೭ ॥
ತ್ವತ್ತಃ ಪರತರಂ ಕಿಂಚಿದ್ಯತ್ತ್ವಂ ಧ್ಯಾಯಸಿ ಚೇತಸಾ ।
ತನ್ಮೇ ಕಥಯ ದೇವೇಶ ಯದ್ಯಹಂ ದಯಿತಾ ತವ ॥ ೧೮ ॥
ಇತಿ ಪೃಷ್ಟಸ್ತದಾ ಶಂಭುರುವಾಚ ಹರಿಸೇವಕಃ ।
ಹರೇರ್ನಾಮಸಹಸ್ರಾಣಾಂ ಸಾರಂ ಧ್ಯಾಯಾಮಿ ನಿತ್ಯಶಃ ॥ ೧೯ ॥
ಜಪಾಮಿ ರಾಮನಾಮಾಂಕಮವಾತರಂ ಸ ಸಪ್ತಮಂ ।
ಚತುರ್ವಿಂಶತಿಸಂಖ್ಯಾಕಾನ್ ಪ್ರಾದುರ್ಭಾವಾನ್ ಹರೇರ್ಗುಣಾನ್ ॥ ೨೦ ॥
ಏತೇಷಾಮಪಿ ಯತ್ಸಾರಂ ಪ್ರಣವಾಖ್ಯಂ ಮಹತ್ಫಲಂ ।
ದ್ವಾದಶಾಕ್ಷರಸಂಯುಕ್ತಂ ಬ್ರಹ್ಮರೂಪಂ ಸನಾತನಂ ॥ ೨೧ ॥

---

೧೫. ನೀನೊಬ್ಬನೇ ಸಕಲಪ್ರಾಣಿಗಳಿಗೆ ಆದಿಯೂ, ಸಕಲೇಶ್ವರನೂ ಆಗಿರುವೆ. ಆದುದರಿಂದ ನೀನು ಏನನ್ನು ಜಪಿಸುವೆ? ಎಂದು ನನ್ನ ಮನಸ್ಸು ಸಂದೇಹಗೊಳ್ಳುವುದು.

೧೬. ನಿನಗೆ ತಾಯಿಯೂ, ತಂದೆಯೂ, ಬಂಧುವೂ, ಜಾತಿಯೂ ಇರುವುದಿಲ್ಲ. ನಾನು ನಿನಗಿಂತ ಹೆಚ್ಚಿನದು ಯಾವುದೂ ಇಲ್ಲವೆಂದೇ ತಿಳಿಯುತ್ತೇನೆ.

೧೭. ನೀನು ಆಯಾಸಗೊಂಡವನೂ, ಶ್ವಾಸೋಚ್ಛ್ವಾಸನಿರತನೂ, ಭಕ್ತಿಯಿಂದ ಜಪಿಸುವವನೂ ಆಗಿ ನನಗೆ ತೋರುತ್ತಿರುವೆ.

೧೮. ನಾಥ! ನಾನು ನಿನಗೆ ಪ್ರಿಯಳಾಗಿದ್ದರೆ ನೀನು ಮನಸ್ಸಿನಿಂದ ಚಿಂತಿಸುತ್ತಿರುವ ನಿನಗಿಂತಲೂ ಉತ್ತಮವಾದ ವಸ್ತುವು ಯಾವುದೆಂಬುದನ್ನು ನನಗೆ ಹೇಳು.

೧೯. ಪಾರ್ವತಿಯು ಹೀಗೆ ಕೇಳಲು, ಹರಿಸೇವಕನಾದ ಶಂಕರನು ಹೀಗೆ ಹೇಳಿದನು. ನಾನು ನಿತ್ಯವೂ ಶ್ರೀಹರಿಯ ಸಹಸ್ರನಾಮಗಳ ಸಾರವನ್ನು ಧ್ಯಾನಿಸುವೆನು.

೨೦–೨೧. ಹರಿಯ ಏಳನೆಯ ಅವತಾರವಾದ ರಾಮನ ನಾಮವನ್ನೂ, ಇಪ್ಪತ್ತನಾಲ್ಕು ಅವತಾರಗಳನ್ನೂ, ಗುಣಗಳನ್ನೂ, ಇವುಗಳ ಸಾರವಾದ ಅತಿಶಯ ಫಲವನ್ನೀಯುವ ಶ್ರೇಷ್ಠವಾದ ದ್ವಾದಶಾಕ್ಷರ ಮಂತ್ರದಿಂದ ಸಹಿತವಾದ ಸನಾತನ ಬ್ರಹ್ಮರೂಪ ಪ್ರಣವವನ್ನೂ ಜಪಿಸುವೆನು.

ಅಕ್ಷರತ್ರಯಸಂಬದ್ಧಂ ಗ್ರಾಮತ್ರಯಸಮನ್ವಿತಂ ।
ಸ ಬಿಂದುಂ ಪ್ರಣವಂ ಶಶ್ವಜ್ಜಪಾಮಿ ಜಪಮಾಲಯಾ ॥ ೨೨ ॥
ವೇದಸಾರಮಿದಂ ನಿತ್ಯಂ ದ್ವ್ಯಕ್ಷರಂ ಸತತೋದ್ಯತಂ ।
ನಿರ್ಮಲಂ ಹ್ಯಮೃತಂ ಶಾಂತಂ ಸದ್ರೂಪಮಮೃತೋಪಮಂ ॥ ೨೩ ॥
ಕಲಾತೀತಂ ನಿರ್ವಶಗಂ ನಿರ್ವ್ಯಾಪಾರಂ ಮಹತ್ಪರಂ ।
ವಿಶ್ವಾಧಾರಂ ಜಗನ್ಮಧ್ಯಂ ಕೋಟಿಬ್ರಹ್ಮಾಂಡಬೀಜಕಂ ॥ ೨೪ ॥
ಜಡಂ ಶುದ್ಧಕ್ರಿಯಂ ವಾಽಪಿ ನಿರಂಜನಂ ನಿಯಾಮಕಂ ।
ಯ ಜ್ಞಾತ್ವಾ ಮುಚ್ಯತೇ ಕ್ಷಿಪ್ರಂ ಘೋರಸಂಸಾರಬಂಧನಾತ್ ॥ ೨೫ ॥
ಓಂಕಾರಸಹಿತಂ ಯಚ್ಚ ದ್ವಾದಶಾಕ್ಷರಬೀಜಕಂ ।
ಜಪತಃ ಪಾಪಕೋಟೀನಾಂ ದಾವಾಗ್ನಿತ್ವಂ ಪ್ರಜಾಯತೇ ॥ ೨೬ ॥
ಏತದೇವ ಪರಂ ಗುಹ್ಯಮೇತದೇವ ಪರಂ ಮಹಃ ।
ಏತದ್ಧಿ ದುರ್ಲಭಂ ಲೋಕೇ ಲೋಕತ್ರಯವಿಭೂಷಣಂ ॥ ೨೭ ॥
ಪ್ರಾಪ್ಯತೇ ಜನ್ಮಕೋಟೀಭಿಃ ಶುಭಾಽಶುಭವಿನಾಶಕಂ ।
ಏತದೇವ ಪರಂ ಜ್ಞಾನಂ ದ್ವಾದಶಾಽಕ್ಷರ ಚಿಂತನಂ ॥ ೨೮ ॥

---

೨೨. ಈ ಪ್ರಣವವು ಮೂರು ಅಕ್ಷರಗಳಿಂದಲೂ, ಮೂರು ಗ್ರಾಮಗಳಿಂದಲೂ, ಬಿಂದುವಿನಿಂದಲೂ ಸಹಿತವಾಗಿರುವುದು. ಇದನ್ನು ನಾನು ಜಪಮಾಲೆಯಿಂದ ಯಾವಾಗಲೂ ಜಪಿಸುವೆನು.

೨೩–೨೫. ಈ ಎರಡು ಅಕ್ಷರದ ರಾಮನಾಮವು ವೇದದ ಸಾರವೂ, ನಿರ್ಮಲವೂ, ಫಲವನ್ನೀಯುವುದರಲ್ಲಿ ಯಾವಾಗಲೂ ಉದ್ಯುಕ್ತವೂ, ನಾಶರಹಿತವೂ, ಶಾಂತವೂ, ಸದ್ರೂಪವೂ, ಅಮೃತಕ್ಕೆ ಸಾಟಿಯೂ, ಕಲೆಯನ್ನು ಮೀರಿದುದೂ, ಸ್ವತಂತ್ರವೂ, ವ್ಯಾಪಾರವಿಲ್ಲದಿರುವುದೂ, ಅತಿ ಶ್ರೇಷ್ಠವೂ, ಜಗತ್ತಿಗೆ ಆಧಾರವೂ, ಜಗತ್ತಿನ ನಡುವೆ ಇರುವುದೂ, ಕೋಟಿಸಂಖ್ಯೆಯ ಬ್ರಹ್ಮಾಂಡಗಳಿಗೆ ಕಾರಣವೂ, ಜಡವೂ, ಶುದ್ಧಕ್ರಿಯೆಯುಳ್ಳುದೂ, ನಿರ್ದುಷ್ಟವೂ, ನಿಯಾಮಕವೂ ಆಗಿರುವುದು. ಇದನ್ನರಿತವನು ಬೇಗನೆ ಘೋರ ಸಂಸಾರಬಂಧನದಿಂದ ಮುಕ್ತನಾಗುವನು.

೨೬. ಓಂಕಾರಸಹಿತವಾದ ದ್ವಾದಶಾಕ್ಷರ ಬೀಜಮಂತ್ರಜಪವು ಅನೇಕ ಕೋಟಿ ಪಾಪಗಳಿಗೆ ಕಾಳ್ಗಿಚ್ಚಾಗಿರುವುದು.

೨೭–೨೮. ಈ ದ್ವಾದಶಾಕ್ಷರ ಮಂತ್ರಧ್ಯಾನವು ಅತಿ ಗುಹ್ಯವೂ, ಉತ್ತಮ ಜ್ಯೋತಿಯೂ, ಲೋಕದಲ್ಲಿ ದುರ್ಲಭವೂ, ಮೂರು ಲೋಕಗಳಿಗೆ ಅಲಂಕಾರಪ್ರಾಯವೂ, ಉತ್ತಮ ಜ್ಞಾನರೂಪವೂ, ಶುಭಕರವೂ, ಅಶುಭನಾಶಕವೂ ಆಗಿರುವುದು. ಇದು ಅನೇಕ ಜನ್ಮಗಳ ಪುಣ್ಯದಿಂದ ಲಭಿಸುವುದು.

ಚಾತುರ್ಮಾಸ್ಯೇ ವಿಶೇಷೇಣ ಬ್ರಹ್ಮದಂ ಚಿಂತಿತಪ್ರದಂ ।
ಏತದಕ್ಷರಜಂ ಸ್ತೋತ್ರಂ ಯಃ ಸಮಾಶ್ರಯತೇ ಸದಾ ॥ ೨೯ ॥
ಮನಸಾ ಕರ್ಮಣಾ ವಾಚಾ ತಸ್ಯ ನಾಽಸ್ತಿ ಪುನರ್ಭವಃ ।
ದ್ವಾದಶಾಕ್ಷರ ಸಂಯುಕ್ತಂ ಚಕ್ರದ್ವಾದಶಭೂಷಿತಂ ॥ ೩೦ ॥
ಮಾಸದ್ವಾದಶನಾಮಾನಿ ವಿಷ್ಣೋರ್ಯೋ ಭಕ್ತಿತತ್ಪರಃ ।
ಶಾಲಿಗ್ರಾಮೇಷು ತಾನ್ಯುಕ್ತ್ವಾ ನ್ಯಸೇದಘಹರಾಣಿ ಚ ॥ ೩೧ ॥
ದಿವಸೇ ದಿವಸೇ ತಸ್ಯ ದ್ವಾದಶಾಽಹಫಲಂ ಲಭೇತ್ ।
ದ್ವಾದಶಾಽಕ್ಷರಮಾಹಾತ್ಮ್ಯಂ ವರ್ಣಿತುಂ ನೈವ ಶಕ್ಯತೇ ॥ ೩೨ ॥
ಜಿಹ್ವಾ ಸಹಸ್ರೈರಪಿ ಚ ಬ್ರಹ್ಮಣಾಽಪಿ ನ ವಾರ್ಯತೇ ।
ಮಹಾಮಂತ್ರೋಽಹ್ಯಯಂ ಲೋಕೇ ಜಪ್ಯೋಽಧ್ಯಾತಃ ಸ್ತುತಸ್ತಥಾ ॥ ೩೩ ॥
ಪಾಪಹಾ ಸರ್ವಮಾಸೇಷು ಚಾತುರ್ಮಾಸ್ಯೇ ವಿಶೇಷತಃ ।
ಇದಂ ರಹಸ್ಯಂ ವೇದಾನಾಂ ಪುರಾಣಾನಾಮನೇಕಶಃ ॥ ೩೪ ॥
ಸ್ಮೃತೀನಾಮಪಿ ಸರ್ವಾಸಾಂ ದ್ವಾದಶಾಽಕ್ಷರಚಿಂತನಂ ।
ಚಿಂತನಾದೇವ ಮರ್ತ್ಯಾನಾಂ ಸಿದ್ಧಿರ್ಭವತೀಹೇಪ್ಸಿತಾ ॥ ೩೫ ॥
ಪುಣ್ಯದಾನೇನ ಯಾಮ್ಯೇನ ಮುಕ್ತಿರ್ಭವತಿ ಶಾಶ್ವತೀ ।
ವರ್ಣೈಸ್ತಥಾಽಽಶ್ರಮೈರೇವ ಪ್ರಣವೇನ ಸಮನ್ವಿತೈಃ ॥ ೩೬ ॥

---

೨೯–೩೫. ಇದು ಚಾತುರ್ಮಾಸ್ಯದಲ್ಲಿ ಬ್ರಹ್ಮಪ್ರಾಪ್ತಿಯನ್ನೂ, ಇಷ್ಟಾರ್ಥವನ್ನೂ ಕೊಡುವುದು. ಈ ಮಂತ್ರವನ್ನು ಮನಸ್ಸು, ಕರ್ಮ, ವಾಕ್ಕುಗಳಿಂದ ಯಾವಾಗಲೂ ಆಶ್ರಯಿಸುವವನಿಗೆ ಪುನರುತ್ಪತ್ತಿಯಿಲ್ಲ. ದ್ವಾದಶಚಕ್ರಗಳಿಂದ ಅಲಂಕಾರಗೊಂಡ ಈ ಮಂತ್ರವನ್ನೂ, ಪಾಪವನ್ನು ನಿವಾರಿಸುವ ದ್ವಾದಶಮಾಸನಾಮಗಳನ್ನೂ ವಿಷ್ಣುಭಕ್ತಿತತ್ಪರನಾಗಿ ಶಾಲಿಗ್ರಾಮಗಳಲ್ಲಿ ನ್ಯಾಸಮಾಡುವವನಿಗೆ ಒಂದೊಂದು ದಿವಸವೂ ಹನ್ನೆರಡು ದಿನಗಳ ಫಲವು ದೊರೆಯುವುದು. ದ್ವಾದಶಾಕ್ಷರಮಂತ್ರದ ಮಾಹಾತ್ಮ್ಯವನ್ನು ವರ್ಣಿಸಲು ಸಾಧ್ಯವಿಲ್ಲ. ಬ್ರಹ್ಮನೂ ಸಹಸ್ರನಾಲಿಗೆಗಳಿಂದ ಆದಿಶೇಷನೂ ವರ್ಣಿಸಲು ಶಕ್ತರಲ್ಲ. ಈ ಮಹಾಮಂತ್ರವನ್ನು ಜಪಿಸುವುದರಿಂದಲೂ, ಧ್ಯಾನಿಸುವುದರಿಂದಲೂ, ಸ್ತುತಿಸುವುದರಿಂದಲೂ, ಸಕಲ ಮಾಸಗಳಲ್ಲಿಯೂ ಪಾಪವು ಪರಿಹಾರವಾಗುವುದು. ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಪರಿಹಾರವಾಗುವುದು. ಈ ದ್ವಾದಶಾಕ್ಷರಚಿಂತನೆಯು ಸಕಲ ವೇದ, ಪುರಾಣ, ಸ್ಮೃತಿಗಳ ರಹಸ್ಯವಾಗಿರುವುದು. ಇದನ್ನು ಚಿಂತಿಸುವುದರಿಂದಲೇ ಮಾನವರಿಗೆ ಇಷ್ಟಸಿದ್ಧಿಯಾಗುವುದು.

೩೬–೩೭. ಪುಣ್ಯದಾನದಿಂದಲೂ, ಯಮದೀಪದಿಂದಲೂ ಶಾಶ್ವತಮುಕ್ತಿಯಾಗುವಂತೆ ಶಾಂತಿನಿರತರಾದ ವರ್ಣ ಮತ್ತು ಆಶ್ರಮದವರು ಪ್ರಣವದೊಡನೆ

ಜಪೈರ್ಧ್ಯಾನೈಃ ಶಮುಪರ್ವೈರ್ಮೋಕ್ಷಂ ಯಾಸ್ಯೇತ ನಿಶ್ಚಿತಂ ।
ಶೂದ್ರಾಣಾಂ ಚಾಽಪಿ ನಾರೀಣಾಂ ಪ್ರಣವೇನ ವಿವರ್ಜಿತಃ ॥ ೩೭ ॥
ಪ್ರಕೃತೀನಾಂ ಚ ಸರ್ವಾಸಾಂ ನ ಮಂತ್ರೋ ದ್ವಾದಶಾಽಕ್ಷರಃ ।
ನ ಜಪೋ ನ ತಪಃ ಕಾರ್ಯಂ ಕಾಯಕ್ಲೇಶಾದ್ವಿಶುದ್ಧಿತಾ ॥ ೩೮ ॥
ವಿಪ್ರಭಕ್ತ್ಯಾ ಚ ದಾನೇನ ವಿಷ್ಣುಧ್ಯಾನೇನ ಸಿದ್ಧ್ಯತಿ ।
ತಾಸಾಂ ಮಂತ್ರೋ ರಾಮನಾಮ ಧ್ಯೇಯಃ ಕೋಟ್ಯಧಿಕೋ ಭವೇತ್ ॥
ರಾಮೇತಿಃ ದ್ವ್ಯಕ್ಷರ ಜಪಃ ಸರ್ವಪಾಪಾಽಪನೋದಕಃ ।
ಗಚ್ಛಂಸ್ತಿಷ್ಠಂಛಯಾನೋ ವಾ ಮನುಜೋ ರಾಮಕೀರ್ತನಾತ್ ॥ ೪೦ ॥
ಇಹ ನಿರ್ವರ್ತತೋ ಯಾತಿ ಪ್ರಾಂತೇ ಹರಿಗಣೋ ಭವೇತ್ ।
ರಾಮೇತಿ ದ್ವ್ಯಕ್ಷರೋ ಮಂತ್ರೋ ಮಂತ್ರಕೋಟಿಶತಾಧಿಕಃ ॥ ೪೧ ॥
ಸರ್ವಾಸಾಂ ಪ್ರಕೃತೀನಾಂ ಚ ಕಥಿತಃ ಪಾಪನಾಶಕಃ ।
ಚಾತುರ್ಮಾಸ್ಯೇಽಥ ಸಂಪ್ರಾಪ್ತೇ ಸೋಽಪ್ಯನಂತಫಲಪ್ರದಃ ॥ ೪೨ ॥
ಚಾತುರ್ಮಾಸ್ಯೇ ಮಹಾಪುಣ್ಯೇ ಲಭ್ಯತೇ ಪುಣ್ಯತತ್ಪರೈಃ
ದೇವವನ್ನಿಷ್ಫಲಂ ತೇಷಾಂ ಯಮಲೋಕಸ್ಯ ಸೇವನಂ ॥ ೪೩ ॥

---

ಈ ಮಂತ್ರವನ್ನು ಜಪಿಸುವುದರಿಂದಲೂ, ಧ್ಯಾನಿಸುವುದರಿಂದಲೂ ನಿಶ್ಚಯವಾಗಿಯೂ ಮುಕ್ತಿಯು ಲಭಿಸುವುದು. ಶೂದ್ರರಿಗೂ, ಹೆಂಗಸರಿಗೂ ಪ್ರಣವವಿಲ್ಲದ ದ್ವಾದಶಾಕ್ಷರ ಮಂತ್ರಜಪವು ವಿಹಿತವಾಗಿರುವುದು.

೩೮–೩೯. ಸಕಲ ಪ್ರಕೃತಿಗಳೂ ದ್ವಾದಶಾಕ್ಷರ ಮಂತ್ರಜಪವನ್ನೂ, ತಪಸ್ಸನ್ನೂ ಮಾಡಕೂಡದು. ಅವರು ಶರೀರಕ್ಲೇಶದಿಂದಲೂ, ಬ್ರಾಹ್ಮಣಭಕ್ತಿಯಿಂದಲೂ, ದಾನದಿಂದಲೂ, ವಿಷ್ಣುಧ್ಯಾನದಿಂದಲೂ ಶುದ್ಧರಾಗುವರು. ಅವರು ರಾಮನಾಮವನ್ನು ಧ್ಯಾನಮಾಡಬೇಕು. ಅದರಿಂದ ಕೋಟ್ಯಧಿಕವಾದ ಫಲವು ಉಂಟಾಗುವುದು.

೪೦–೪೨. ರಾಮ ಎಂಬ ಎರಡಕ್ಷರದ ಜಪವು ಸಕಲ ಪಾಪಗಳನ್ನೂ ಪರಿಹರಿಸುವುದು. ಮಾನವನು ಹೋಗುತ್ತ, ನಿಲ್ಲುತ್ತ, ಮಲಗುತ್ತ ರಾಮನಾಮವನ್ನು ಉಚ್ಚರಿಸುವುದರಿಂದ ಈ ಲೋಕದಲ್ಲಿ ಸುಖಿಯಾಗಿ ಅವಸಾನದಲ್ಲಿ ಹರಿಗಣನಾಗುವನು. ಅನೇಕ ಕೋಟಿ ಮಂತ್ರಗಳಿಗಿಂತಲೂ ಅಧಿಕವೂ, ಪಾಪನಾಶಕವೂ ಆದ ರಾಮ ಎಂಬೆರಡಕ್ಷರಗಳ ಮಂತ್ರವು ಸಮಸ್ತ ಪ್ರಕೃತಿಗಳಿಗೂ ಜಪಿಸಲರ್ಹವಾದುದು. ಚಾತುರ್ಮಾಸ್ಯದಲ್ಲಿ ಆ ಮಂತ್ರವು ಅಪರಿಮಿತ ಫಲವನ್ನು ಕೊಡುವುದು.

೪೩. ಪುಣ್ಯಕರವಾದ ಚಾತುರ್ಮಾಸ್ಯದಲ್ಲಿ ಭಕ್ತರಿಗೆ ಮಾತ್ರ ಆ ಮಂತ್ರವು ಲಭಿಸುವುದು. ದೇವತೆಗಳಿಗೆ ಹೇಗೋ ಹಾಗೆ ಅವರಿಗೆ ಯಮಲೋಕ ಸೇವನೆಯು ನಿಷ್ಫಲವಾಗುವುದು.

ನ ರಾಮಾದಧಿಕಂ ಕಿಂಚಿತ್ಪಠನಂ ಜಗತೀ ತಲೇ ।
ರಾಮನಾಮಾಶ್ರಯಾ ಯೇ ವೈ ನ ತೇಷಾಂ ಯಮಯಾತನಾ ॥ ೪೪ ॥
ಯೇ ಚ ದೋಷಾ ವಿಘ್ನಕರಾ ಮೃತಕಾ ವಿಗ್ರಹಾಶ್ಚ ಯೇ ।
ರಾಮನಾಮ್ನೈವ ವಿಲಯಂ ಯಾಂತಿ ನಾತ್ರ ವಿಚಾರಣಾ ॥ ೪೫ ॥
ರಮತೇ ಸರ್ವಭೂತೇಷು ಸ್ಥಾವರೇಷು ಚರೇಷು ಚ ।
ಅಂತರಾತ್ಮ ಸ್ವರೂಪೇಣ ಯಶ್ಚ ರಾಮೇತಿ ಕಥ್ಯತೇ ॥ ೪೬ ॥
ರಾಮೇತಿ ಮಂತ್ರರಾಜೋಽಯಂ ಭವ ವ್ಯಾಧಿನಿಷೂದಕಃ ।
ರಣೇ ವಿಜಯದಶ್ಚಾಽಪಿ ಸರ್ವಕಾರ್ಯಾರ್ಥಸಾಧಕಃ ॥ ೪೭ ॥
ಸರ್ವತೀರ್ಥಫಲಃ ಪ್ರೋಕ್ತೋ ವಿಪ್ರಾಣಾಮಪಿ ಕಾಮದಃ ।
ರಾಮಚಂದ್ರೇತಿ ರಾಮೇತಿ ರಾಮೇತಿ ಸಮುದಾಹೃತಃ ॥ ೪೮ ॥
ದ್ವ್ಯಕ್ಷರೋ ಮಂತ್ರರಾಜೋಽಯಂ ಸರ್ವಕಾರ್ಯಕರೋ ಭುವಿ ।
ದೇವಾ ಅಪಿ ಪ್ರಗಾಯಂತಿ ರಾಮನಾಮ ಗುಣಾಕರಂ ॥ ೪೯ ॥
ತಸ್ಮಾತ್ತ್ವಮಪಿ ದೇವೇಶಿ ರಾಮನಾಮ ಸದಾ ವದ ।
ರಾಮನಾಮ ಜಪೇದ್ಯೋ ವೈ ಮುಚ್ಯತೇ ಸರ್ವಕಿಲ್ಬಿಷೈಃ ॥ ೫೦ ॥

---

೪೪. ಜಗತ್ತಿನಲ್ಲಿ ರಾಮನಾಮ ಜಪಕ್ಕಿಂತಲೂ ಅಧಿಕ ಫಲವನ್ನು ನೀಡುವ ಜಪವಿಲ್ಲ. ರಾಮನಾಮವನ್ನಾಶ್ರಯಿಸಿದವರಿಗೆ ಯಮಯಾತನೆಯಿರುವುದಿಲ್ಲ.

೪೫. ವಿಘ್ನವನ್ನುಂಟುಮಾಡುವ ಮೃತಕ, ವಿಗ್ರಹದೋಷಗಳು ರಾಮನಾಮದಿಂದಲೇ ನಾಶವಾಗುವುವು. ಈ ವಿಷಯದಲ್ಲಿ ವಿಚಾರಮಾಡಬೇಕಾಗಿರುವುದಿಲ್ಲ.

೪೬. ರಾಮನು ಸಕಲ ಭೂತಗಳಲ್ಲಿಯೂ, ಸ್ಥಾವರ ಜಂಗಮ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿರುವನು.

೪೭–೪೯. ರಾಮ ಎಂಬ ಶ್ರೇಷ್ಠವಾದ ಈ ಮಂತ್ರವು ಭಯ, ವ್ಯಾಧಿಗಳನ್ನು ಪರಿಹರಿಸುವುದೂ, ಯುದ್ಧದಲ್ಲಿ ಜಯವನ್ನೀಯುವುದೂ, ಸಮಸ್ತ ಕಾರ್ಯಗಳನ್ನು ಸಾಧಿಸುವುದೂ, ಬ್ರಾಹ್ಮಣರಿಗೆ ಸಕಲ ತೀರ್ಥಫಲವನ್ನೀಯುವುದೂ, ಇಷ್ಟಾರ್ಥದಾಯಕವೂ ಆಗಿರುವುದು. ರಾಮಚಂದ್ರ, ರಾಮ ಎಂಬ ಈ ಮಂತ್ರಶ್ರೇಷ್ಠವು ಲೋಕದಲ್ಲಿ ಸಮಸ್ತ ಕಾರ್ಯವನ್ನು ಮಾಡುವುದು. ದೇವತೆಗಳೂ ಗುಣಗಳಿಗೆ ಆಶ್ರಯವಾದ ಈ ರಾಮನಾಮವನ್ನು ಹಾಡುವರು.

೫೦. ದೇವೇಶಿ! ಆದುದರಿಂದ ನೀನೂ ರಾಮನಾಮವನ್ನು ಯಾವಾಗಲೂ ಜಪಿಸು. ರಾಮನಾಮವನ್ನು ಜಪಿಸುವವನು ಸಮಸ್ತ ಪಾಪಗಳಿಂದ ಮುಕ್ತನಾಗುವನು.

ಸಹಸ್ರನಾಮಜಂ ಪುಣ್ಯಂ ರಾಮನಾಮ್ನೈವ ಜಾಯತೇ ।
ಚಾತುರ್ಮಾಸ್ಯೇ ವಿಶೇಷೇಣ ತತ್ಪುಣ್ಯಂ ದಶಧೋತ್ತರಂ ॥ ೫೧ ॥
ಹೀನಜಾತಿಪ್ರಜಾತಾನಾಂ ಮಹದ್ದಹ್ಯತಿ ಪಾತಕಂ ॥ ೫೨ ॥
ರಾಮೋಽಹ್ಯಯಂ ವಿಶ್ವಮಿದಂ ಸಮಗ್ರಂ
ಸ್ವತೇಜಸಾ ವ್ಯಾಪ್ಯ ಜನಾಂತರಾತ್ಮನಾ ।
ಪುನಾತಿ ಜನ್ಮಾಂತರಪಾತಕಾನಿ
ಸ್ಥೂಲಾನಿ ಸೂಕ್ಷ್ಮಾಣಿ ಕ್ಷಣಾಚ್ಚ ದಗ್ಧ್ವಾ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಾಮನಾಮಮಹಿಮವರ್ಣನಂ" ನಾಮ
ಷಟ್‌ಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೫೧. ಸಹಸ್ರನಾಮ ಜಪದಿಂದಾಗುವ ಪುಣ್ಯವು ರಾಮನಾಮದಿಂದಲೇ ಉಂಟಾಗುವುದು. ಚಾತುರ್ಮಾಸ್ಯದಲ್ಲಿ ಆ ಪುಣ್ಯವು ಹತ್ತರಷ್ಟು ಹೆಚ್ಚುವುದು.

೫೨. ಈ ಮಂತ್ರವು ನೀಚಜಾತಿಯಲ್ಲಿ ಹುಟ್ಟಿದವರ ಮಹಾಪಾಪವನ್ನು ಕೂಡ ನಿವಾರಿಸುವುದು.

೫೩. ರಾಮನು ಸಕಲಜನರಲ್ಲಿ ಅಂತರ್ಯಾಮಿಯಾಗಿದ್ದು ಸಮಗ್ರ ಜಗತ್ತನ್ನು ವ್ಯಾಪಿಸಿ ಜನ್ಮಾಂತರದ ಸ್ಥೂಲಸೂಕ್ಷ್ಮ ಪಾಪಗಳನ್ನು ಕ್ಷಣಕಾಲದಲ್ಲಿ ಬೂದಿಮಾಡಿ ಪವಿತ್ರಗೊಳಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಾಮನಾಮಮಹಿಮವರ್ಣನ" ವೆಂಬ
ಇನ್ನೂರ ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಪಾರ್ವತೀ ತಪೋವರ್ಣನಂ

**ಪಾರ್ವತ್ಯುವಾಚ :—**

ದ್ವಾದಶಾಕ್ಷರಮಾಹಾತ್ಮ್ಯಂ ಮಮ ವಿಸ್ತರತೋ ವದ ।
ಯಥಾವರ್ಣಂ ಯತ್ಫಲಂ ಚ ಯಥಾ ಚ ಕ್ರಿಯತೇ ಮಯಾ ॥ ೧ ॥

**ಶ್ರೀ ಮಹಾದೇವ ಉವಾಚ :—**

ದ್ವಿಜಾತೀನಾಂ ಸಹೋಂಕಾರಸಹಿತೋ ದ್ವಾದಶಾಽಕ್ಷರಃ ।
ಸ್ತ್ರೀ ಶೂದ್ರಾಣಾಂ ನಮಸ್ಕಾರಪೂರ್ವಕಃ ಸಮುದಾಹೃತಃ ॥ ೨ ॥
ಪ್ರಕೃತೀನಾಂ ರಾಮನಾಮ ಸಮಂತೋ ವಾ ಷಡಕ್ಷರಃ ।
ಸೋಽಪಿ ಪ್ರಣವ ಹೀನಃ ಸ್ಯಾತ್ಪುರಾಣಸ್ಮೃತಿನಿರ್ಣಯಃ ॥ ೩ ॥
ಕ್ರಮೋಽಯಂ ಸರ್ವವರ್ಣಾನಾಂ ಪ್ರಕೃತೀನಾಂ ಸದೈವ ಹಿ ।
ಕ್ರಮೇಣ ರಹಿತೋ ಯಸ್ತು ಕರೋತಿ ಮನುಜೋ ಜಪಂ ।
ತಸ್ಯ ಪ್ರಕುಪ್ಯತಿ ವಿಭುರ್ನರಕಾದಿ ಪ್ರದಾಯಕಃ ॥ ೪ ॥

---

## ಕನ್ನಡದ ಅನುವಾದ

### ಪಾರ್ವತೀ ತಪೋವರ್ಣನ

೧. ಪಾರ್ವತಿಯು ಹೇಳುತ್ತಾಳೆ:—ದ್ವಾದಶಾಕ್ಷರ ಮಂತ್ರದ ಮಾಹಾತ್ಮ್ಯವನ್ನೂ, ಜಾತ್ಯನುಸಾರ ಅದರ ಫಲವನ್ನೂ, ನಾನು ಜಪಿಸುವ ಕ್ರಮವನ್ನೂ ನನಗೆ ವಿಸ್ತಾರವಾಗಿ ಹೇಳು.

೨. ಶ್ರೀ ಮಹಾದೇವನು ಹೇಳುತ್ತಾನೆ:—ಬ್ರಾಹ್ಮಣರಿಗೆ ಓಂಕಾರಸಹಿತವಾದ ದ್ವಾದಶಾಕ್ಷರ ಮಂತ್ರವು ವಿಹಿತವಾಗಿರುವುದು. ಸ್ತ್ರೀ ಶೂದ್ರರಿಗೆ ಆ ಮಂತ್ರವು ನಮಃ ಪದಪೂರ್ವಕವಾಗಿ ಉಕ್ತವಾಗಿದೆ.

೩. ಪ್ರಕೃತಿಗಳಿಗೆ ಪ್ರಣವ ಇಲ್ಲದ ಷಡಕ್ಷರ ಮಂತ್ರವಾಗಲಿ, ರಾಮನಾಮವಾಗಲಿ ಪುರಾಣ, ಸ್ಮೃತಿಗಳ ನಿರ್ಣಯದಂತೆ ವಿಹಿತವಾಗಿರುವುದು.

೪. ಈ ಕ್ರಮವೇ ಸಕಲ ಜಾತಿಯವರಿಗೂ, ಪ್ರಕೃತಿಗಳಿಗೂ ವಿಧಾಯಕವಾಗಿರುವುದು. ಈ ಕ್ರಮವನ್ನು ತ್ಯಜಿಸಿ ಜಪಿಸುವ ಮನುಷ್ಯನಲ್ಲಿ ನರಕಾದಿ ಪ್ರದಾತನಾದ ರಾಮನು ಕುಪಿತನಾಗುವನು.

ಪಾರ್ವತ್ಯುವಾಚ :—

ಮಯಾ ತ್ರಿಮಾತ್ರಯಾ ಸ್ವಾಮಿನ್ ಸೇವ್ಯತೇ ಜಗದೀಶ್ವರಃ ।
ರೂಪಮಸ್ಯ ಕಥಂ ಜಾನೇ ವಚಸಾಮಪ್ಯಗೋಚರಂ ॥ ೫ ॥

ಈಶ್ವರ ಉವಾಚ :—

ಪ್ರಣವಸ್ಯಾಽಧಿಕಾರೋ ನ ತವಾಽಸ್ತಿ ವರವರ್ಣಿನಿ ।
ನಮೋ ಭಗವತೇ ವಾಸುದೇವಾಯೇತಿ ಜಪಃ ಸದಾ ॥ ೬ ॥

ಪಾರ್ವತ್ಯುವಾಚ :—

ಯದಿ ಸಪ್ರಣವಂ ದದ್ಯಾದ್ದ್ವಾದಶಾಽಕ್ಷರಚಿಂತನಂ ।
ಪ್ರಣವೇ ನಾಽಧಿಕಾರೋ ಮೇ ಕಥಂ ಭವತಿ ಧೂರ್ಜಟೇ ॥ ೭ ॥

ಈಶ್ವರ ಉವಾಚ :—

ಪ್ರಣವಃ ಸರ್ವದೇವಾನಾಮಾದಿರೇಷ ಪ್ರಕೀರ್ತಿತಃ ।
ಬ್ರಹ್ಮಾ ವಿಷ್ಣುಃ ಶಿವಶ್ಚೈವ ವಸಂತಿ ದಯಿತಾಯುತಾಃ ॥ ೮ ॥
ತತ್ರ ಸರ್ವಾಣಿ ಭೂತಾನಿ ಸರ್ವತೀರ್ಥಾನಿ ಭಾಗಶಃ ।
ತಿಷ್ಠಂತಿ ಸರ್ವತೀರ್ಥಾನಿ ಕೈವಲ್ಯಂ ಬ್ರಹ್ಮ ಏವ ಯಃ ॥ ೯ ॥
ತಸ್ಯ ಯೋಗ್ಯಾ ತದಾ ದೇವಿ ಭವಿಷ್ಯಸಿ ಯದಾ ತಪಃ ।
ಚಾತುರ್ಮಾಸ್ಯೇ ಹರಿಪ್ರೀತ್ಯೈ ಕರಿಷ್ಯಸಿ ಶುಭಾನನೇ ॥ ೧೦ ॥

---

೫. ಪಾರ್ವತಿಯು ಹೇಳುತ್ತಾಳೆ:—ನಾನು ತ್ರಿಮಾತ್ರೆಯುಳ್ಳ ರಾಮನಾಮದಿಂದ ಜಗದೀಶ್ವರನನ್ನು ಸೇವಿಸುವೆನು. ಮಾತಿಗೂ ವಿಷಯವಾಗದ ಇವನ ರೂಪವನ್ನು ಹೇಗೆತಾನೆ ತಿಳಿಯಲಿ?

೬. ಈಶ್ವರನು ಹೇಳುತ್ತಾನೆ:—ಪ್ರಿಯಳೆ! ನಿನಗೆ ಪ್ರಣವೋಚ್ಚಾರಣೆಯಲ್ಲಿ ಅಧಿಕಾರವಿಲ್ಲ. "ನಮೋ ಭಗವತೇ ವಾಸುದೇವಾಯ" ಎಂದು ಯಾವಾಗಲೂ ಜಪಮಾಡು.

೭. ಪಾರ್ವತಿಯು ಹೇಳುತ್ತಾಳೆ:—ಈ ಮಂತ್ರವು ಪ್ರಣವಸಹಿತವಾದರೆ ಹನ್ನೆರಡಕ್ಷರದಮಂತ್ರವಾಗುವುದು. ಈಶ್ವರ! ನನಗೆಪ್ರಣವದಲ್ಲಿಏಕೆಅಧಿಕಾರವಿಲ್ಲ?

೮. ಈಶ್ವರನು ಹೇಳುತ್ತಾನೆ:—ಪ್ರಣವವು ಸಕಲದೇವತೆಗಳಿಗೆ ಆದಿಯೆನ್ನಿಸಿಕೊಳ್ಳುವುದು. ಈ ಪ್ರಣವದಲ್ಲಿ ಬ್ರಹ್ಮ, ವಿಷ್ಣು ಶಿವರು ಪತ್ನಿಯರೊಡನೆ ಸನ್ನಿಹಿತರಾಗಿರುವರು.

೯. ಪ್ರಣವದಲ್ಲಿ ಸಕಲಭೂತಗಳೂ, ಸಕಲತೀರ್ಥಗಳೂ ಇರುವುವು. ಪ್ರಣವವೇ ಕೈವಲ್ಯವೂ, ಬ್ರಹ್ಮವೂ ಆಗಿರುವುದು.

೧೦. ದೇವಿ! ನೀನು ಚಾತುರ್ಮಾಸ್ಯದಲ್ಲಿ ಹರಿಪ್ರೀತಿಗಾಗಿ ತಪವನ್ನಾಚರಿಸಿದರೆ ಆ ಪ್ರಣವಕ್ಕೆ ಅರ್ಹಳಾಗುವೆ.

ತಪಸಾ ಪ್ರಾಪ್ಯತೇ ಕಾಮಸ್ತಪಸಾ ಚ ಮಹತ್ಫಲಂ ।
ತಪಸಾ ಜಾಯತೇ ಸರ್ವಂ ತತ್ತಪಃ ಸುಲಭಂ ನರೈಃ ॥ ೧೧ ॥
ಯಶಃ ಸೌಭಾಗ್ಯಮತುಲಂ ಕ್ಷಮಾ ಸತ್ಯಾದಯೋ ಗುಣಾಃ ।
ಸುಲಭಂ ತಪಸಾ ನಿತ್ಯಂ ತಪಶ್ಚರ್ತುಂ ನ ಶಕ್ಯತೇ ॥ ೧೨ ॥
ಯದಾ ಹಿ ತಪಸೋ ವೃದ್ಧಿಸ್ತದಾ ಭಕ್ತಿರ್ಹರೌ ಭವೇತ್ ।
ತದಾ ಹಿ ತಪಸೋ ಹಾನಿರ್ಯದಾ ಭಕ್ತಿಂ ವಿನಾ ಕೃತಂ ॥ ೧೩ ॥
ತಾವತ್ತಪಾಂಸಿ ಗರ್ಜಂತಿ ದೇಹೇಽಸ್ಮಿನ್ ಸತತಂ ನೃಣಾಂ ।
ಯದಾ ವಿಷ್ಣುಂ ಸ್ಮರೇನ್ನಿತ್ಯಂ ಜಿಹ್ವಾಗ್ರಂ ಪಾವನಂ ಭವೇತ್ ॥ ೧೪ ॥
ಯಥಾ ಪ್ರದೀಪೇ ಜ್ವಲಿತೇ ಪ್ರಣಶ್ಯತಿ ಮಹತ್ತಮಃ ।
ತಥಾ ಹರೇಃ ಕಥಾಯಾಂ ಚ ಯಾತಿ ಪಾಪಮನೇಕಧಾ ॥ ೧೫ ॥
ತಸ್ಮಾತ್ಪಾರ್ವತಿ ಯತ್ನೇನ ಹರೌ ಸುಪ್ತೇ ತಪಃ ಕುರು ।
ಚಾತುರ್ಮಾಸ್ಯೇಽಥ ಸಂಪ್ರಾಪ್ತೇ ಪ್ರಣವೇನ ಸಮನ್ವಿತಂ ॥ ೧೬ ॥
ವಿಶುದ್ಧಹೃದಯಾ ಭೂತ್ವಾ ಮಂತ್ರರಾಜಮಿಮಂ ಜಪ ।
ಸ ಏವ ಭಗವಾಂಸ್ತುಷ್ಟೋ ದ್ವಾದಶಾಕ್ಷರಸಂಯುತಂ ॥ ೧೭ ॥
ಪ್ರದಾಸ್ಯತಿ ಪರಂ ಜ್ಞಾನಂ ಬ್ರಹ್ಮರೂಪಮಖಂಡಿತಂ ।
ಬ್ರಹ್ಮಕಲ್ಪಾಂತಕೋಟೀಷು ಜಪ ತ್ವಂ ದ್ವಾದಶಾಕ್ಷರಂ ॥ ೧೮ ॥

---

೧೧. ತಪಸ್ಸಿನಿಂದ ಇಷ್ಟಾರ್ಥವೂ, ಮಹಾ ಫಲವೂ, ಸಕಲವೂ ಉಂಟಾಗುವುದು. ಆ ತಪಸ್ಸು ಮಾನವರಿಗೆ ಸುಲಭವಾದುದು.

೧೨. ತಪಸ್ಸಿನಿಂದ ಯಶಸ್ಸು, ಸೌಭಾಗ್ಯ, ಕ್ಷಮೆ, ಸತ್ಯ ಮೊದಲಾದ ಗುಣಗಳೂ ಸುಖವಾಗಿ ದೊರಕುವುವು. ಅಂತಹ ತಪಸ್ಸನ್ನು ಮಾಡಲು ಶಕ್ಯವಲ್ಲ.

೧೩. ತಪಸ್ಸು ವೃದ್ಧಿಯಾದಹಾಗೆಲ್ಲ ಹರಿಯಲ್ಲಿ ಭಕ್ತಿಯುಂಟಾಗುವುದು. ಭಕ್ತಿಯಿಲ್ಲದೆ ಮಾಡಿದ ತಪಸ್ಸು ಕೆಡುವುದು.

೧೪. ವಿಷ್ಣುವನ್ನು ಸ್ಮರಿಸಿ ನಾಲಿಗೆಯ ಕೊನೆಯು ಪವಿತ್ರವಾಗುವವರೆಗೆ ಮನುಷ್ಯರ ಈ ಶರೀರದಲ್ಲಿ ತಪಸ್ಸುಗಳು ಗರ್ಜಿಸುವುವು.

೧೫. ದೊಡ್ಡ ದೀಪವು ಉರಿಯುತ್ತಿರಲು ಕತ್ತಲೆಯು ನಾಶವಾಗುವಂತೆ ವಿಷ್ಣುವಿನ ಕಥೆಯನ್ನು ಹೇಳುತ್ತಿರಲು ಪಾಪವು ಅನೇಕವಿಧವಾಗಿ ನಾಶವಾಗುವುದು.

೧೬–೨೨. ಪಾರ್ವತಿ! ಆದುದರಿಂದ ಚಾತುರ್ಮಾಸ್ಯದಲ್ಲಿ ಶುದ್ಧಮನಸ್ಕಳಾಗಿ ಈ ಉತ್ತಮ ಮಂತ್ರವನ್ನು ಪ್ರಣವದೊಡನೆ ಜಪಿಸು. ವಿಷ್ಣುವು ಸಂತುಷ್ಟನಾಗಿ ಅಖಂಡ ಬ್ರಹ್ಮಜ್ಞಾನವನ್ನು ಕೊಡುವನು. ನೀನು ಅನೇಕಕೋಟಿ ಬ್ರಹ್ಮಕಲ್ಪಾಂತಕಾಲ ಈ ಮಂತ್ರವನ್ನು ಪ್ರಣವಸಹಿತವಾಗಿ ಜಪಿಸು. ಅವನು

ಮಂತ್ರರಾಜಂ ಸಪ್ರಣವಂ ಧ್ಯಾಯೇತ್ಸೋಽಪಿ ನ ಪಶ್ಯತಿ ।
ಇತ್ಯುಕ್ತ್ವಾ ಸಾ ತಪೋನಿಷ್ಠಾ ತಪಶ್ಚರಿತುಮಾಗತಾ ॥ ೧೯ ॥
ಹಿಮಾಚಲಸ್ಯ ಶಿಖರೇ ಚಾತುರ್ಮಾಸ್ಯೇ ಸಮಾಗತೇ ।
ಬ್ರಹ್ಮಚರ್ಯವ್ರತಪರಾ ವಸನತ್ರಯಸಂಯುತಾ ॥ ೨೦ ॥
ಪ್ರಾತರ್ಮಧ್ಯೇಽಪರಾಹ್ಣೇ ಚ ಧ್ಯಾಯಂತೀ ಹರಿಶಂಕರಂ ।
ವಪುರ್ಯಥಾ ಪುರಾ ಕೃಷ್ಣಂ ಪೂಜನೇ ಶಂಕರಸ್ಯ ಚ ॥ ೨೧ ॥
ಸಖೀಜನಸಮಾಯುಕ್ತಾ ಪಿತುಃ ಶೃಂಗೇ ಮನೋಹರೇ ।
ಅತಪತ್ಸಾ ವಿಶಾಲಾಕ್ಷೀ ಕ್ಷಮಾದಿಗುಣಸಂಯುತಾ ॥ ೨೨ ॥

ಗಾಲವ ಉವಾಚ :—

ಯಾ ಹಿ ಯೋಗೀಶ್ವರಧ್ಯೇಯಾ ಯಾ ವಂದ್ಯಾ ವಿಶ್ವವಂದಿತಾ ।
ಜನನೀ ಯಾಚ ವಿಶ್ವಸ್ಯ ಸಾಽಪಿ ಕಾಮಾತ್ತಪೋಗತಾ ॥ ೨೩ ॥
ಯಾ ಹಿ ಪ್ರಕೃತಿಸದ್ರೂಪಾ ತಡಿತ್ಕೋಟಿಸಮಪ್ರಭಾ ।
ನಿರಜಾ ಯಾ ಸ್ವಯಂ ವಂದ್ಯಾ ಗುಣಾಽತೀತಾಽಚರತ್ತಪಃ ॥ ೨೪ ॥
ಪೃಥ್ವ್ಯಂಬುತೇಜೋ ವಾಯುಶ್ಚ ಗಗನಂ ಯನ್ಮಯಂ ವಿದುಃ ।
ಮೂಲಪ್ರಕೃತಿರೂಪಾ ಯಾ ಸಾ ಚಕಾರೋತ್ತಮಂ ತಪಃ ॥ ೨೫ ॥

---

ಧ್ಯಾನಿಸುತ್ತ ನಿನ್ನನ್ನು ನೋಡುವುದಿಲ್ಲ. ಶಿವನು ಹೀಗೆ ಹೇಳಲು, ಆ ಪಾರ್ವತಿಯು ಚಾತುರ್ಮಾಸ್ಯವು ಬರಲು ತಪವನ್ನಾಚರಿಸಲು ಹಿಮಾಚಲದ ಶಿಖರಕ್ಕೆ ಬಂದಳು. ಅಲ್ಲಿ ಬ್ರಹ್ಮಚರ್ಯವ್ರತನಿರತಳೂ, ಮೂರು ಬಟ್ಟೆಗಳುಳ್ಳವಳೂ, ಕ್ಷಮಾದಿ ಗುಣಗಳಿಂದ ಕೂಡಿದವಳೂ ಆಗಿ ಆಕೆಯು ಪ್ರಾತಃಕಾಲ, ಮಧ್ಯಾಹ್ನ, ಅಪರಾಹ್ಣಗಳಲ್ಲಿ ಹರಿಹರರನ್ನು ಧ್ಯಾನಿಸುತ್ತ, ಹಿಂದೆ ಶಂಕರನ ಪೂಜೆಗಾಗಿ ಶರೀರವನ್ನು ಕೃಶಗೊಳಿಸಿದಂತೆ ಕಠಿನ ತಪವನ್ನಾಚರಿಸಿದಳು.

೨೩. ಗಾಲವನು ಹೇಳುತ್ತಾನೆ:—ಯಾವಳು ಯೋಗೀಶ್ವರರಿಂದ ವಂದ್ಯಳೂ, ಪ್ರಪಂಚವಂದಿತಳೂ, ವಿಶ್ವಜನನಿಯೂ ಆಗಿರುವಳೊ, ಅವಳು ಇಷ್ಟಾರ್ಥವನ್ನು ಪಡೆಯಲು ತಪಸ್ಸಿಗಾಗಿ ಬಂದಳು.

೨೪. ಯಾವಳು ಪ್ರಕೃತಿರೂಪಳೂ, ಕೋಟಿಮಿಂಚುಗಳಂತೆ ಕಾಂತಿಯುಳ್ಳವಳೂ, ದೋಷರಹಿತಳೂ, ಇತರರಿಂದ ವಂದ್ಯಳೂ, ಗುಣರಹಿತಳೂ ಆಗಿರುವಳೊ ಅವಳು ತಪವನ್ನಾಚರಿಸಿದಳು.

೨೫. ಯಾವಳು ಭೂಮಿ, ನೀರು, ತೇಜಸ್ಸು, ವಾಯು, ಆಕಾಶಗಳ ರೂಪಳೂ, ಮೂಲಪ್ರಕೃತಿರೂಪಳೂ ಆಗಿರುವಳೊ, ಅವಳು ಉತ್ತಮ ತಪಸ್ಸನ್ನು ಮಾಡಿದಳು.

ಯಾ ಸ್ಥಾವರಂ ಜಂಗಮಮಾಶು ವಿಶ್ವಂ
ವ್ಯಾಪ್ಯ ಸ್ಥಿತಾ ಯಾ ಪ್ರಕೃತೇಃ ಪುರಾಽಪಿ ।
ಸ್ಪೃಹಾದಿರೂಪೇಣ ಚ ತೃಪ್ತಿದಾತ್ರೀ
ದೇವೇ ಪ್ರಸುಪ್ತೇ ತಪಸಾಽಪ ಶುದ್ಧಿಂ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಾರ್ವತೀತಪೋವರ್ಣನಂ" ನಾಮ
ಸಪ್ತಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೨೬. ಯಾವಳು ಸ್ಥಾವರಜಂಗಮಾತ್ಮಕ ಪ್ರಪಂಚವನ್ನು ವ್ಯಾಪಿಸಿ ಇಚ್ಛಾದಿ ರೂಪದಿಂದ ತೃಪ್ತಿಯನ್ನುಂಟುಮಾಡುವಳೊ, ಅವಳು ಚಾತುರ್ಮಾಸ್ಯದಲ್ಲಿ ತಪಸ್ಸಿನಿಂದ ಶುದ್ಧಳಾದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಾರ್ವತೀತಪೋವರ್ಣನ"ವೆಂಬ
ಇನ್ನೂರೈವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಪಂಚಾಶದುತ್ತರದ್ವಿಶತತಮೋಽಧ್ಯಾಯಃ

### ಹರಶಾಪವರ್ಣನಂ

ಗಾಲವ ಉವಾಚ :—

ಪ್ರವೃತ್ತಾಯಾಂ ಶೈಲಪುತ್ರ್ಯಾಂ ಮಹತ್ತಪಸಿ ದಾರುಣೇ ।
ಕಂದರ್ಪೇಣ ಪರಾಭೂತೋ ವಿಚಚಾರ ಮಹೀಂ ಹರಃ ॥ ೧ ॥
ವೃಕ್ಷಚ್ಛಾಯಾಸು ತೀರ್ಥೇಷು ನದೀಷು ಚ ನದೇಷು ಚ ।
ಜಲೇನ ಸಿಂಚತಸ್ಸ್ವವಪುಃ ಸರ್ವತ್ರಾಪಿ ಮಹೇಶ್ವರಃ ॥ ೨ ॥
ಕಥಾಽಪಿ ಕಾಮಾಕುಲಿತೋ ನ ಲೇಭೇ ಶರ್ಮ ಕರ್ಹಿಚಿತ್ ।
ಏಕದಾ ಯಮುನಾಂ ದೃಷ್ಟ್ವಾ ಜಲಕಲ್ಲೋಲಮಾಲಿನೀಂ ॥ ೩ ॥
ವಿಗಾಹಿತುಂ ಮನಶ್ಚಕ್ರೇ ತಾಪಾರ್ತಿಂ ಶಮಯನ್ನಿವ ।
ಕೃಷ್ಣಂ ಬಭೂವ ತನ್ನೀರಂ ಹರಕಾಯಾಽಗ್ನಿವಹ್ನಿನಾ ॥ ೪ ॥
ದಗ್ಧಂ ವಿಗಾಹನೇನಾಶು ಮಷೀಪ್ರಾಯಂ ತದಾ ಬಭೌ ।
ಸಾಽಪಿ ದಿವ್ಯವಪುಃ ಪೂರ್ವಂ ಶ್ಯಾಮಾ ಭೂತ್ವಾ ಹರಾದ್ಯತಃ ॥ ೫ ॥
ಸ್ತುತ್ವಾ ನತ್ವಾ ಮಹೇಶಾನಮುವಾಚ ಪುನರೇವ ಸಾ ।
ಪ್ರಸಾದಂ ಕುರು ದೇವೇಶ ವಶಗಾಽಸ್ಮಿ ಸದಾ ತವ ॥ ೬ ॥

---

### ಕನ್ನಡದ ಅನುವಾದ

#### ಹರಶಾಪವರ್ಣನ

೧. ಗಾಲವನು ಹೇಳುತ್ತಾನೆ :—ಪಾರ್ವತಿಯು ಮಹಾ ತಪಸ್ಸಿನಲ್ಲಿ ತೊಡಗಿರಲು ಹರನು ಮನ್ಮಥೋದ್ರಿಕ್ತನಾಗಿ ಭೂಮಿಯಲ್ಲಿ ಸಂಚರಿಸಿದನು.

೨. ಆ ಶಂಕರನು ಮರದ ನೆರಳಲ್ಲಿ, ತೀರ್ಥಗಳಲ್ಲಿ, ನದಿಗಳಲ್ಲಿ ಎಲ್ಲೆಡೆಯಲ್ಲಿಯೂ ನೀರಿನಿಂದ ತನ್ನ ಶರೀರವನ್ನು ಸಿಂಪಡಿಸಿಕೊಂಡನು.

೩–೪. ಆದರೂ ಕಾಮಪೀಡಿತನಾದ ಅವನು ಎಲ್ಲಿಯೂ ಸುಖವನ್ನು ಹೊಂದಲಿಲ್ಲ. ಒಂದಾನೊಂದು ದಿನ ಅವನು ಅಲೆಗಳ ಸಮೂಹಗಳುಳ್ಳ ಯಮುನಾ ನದಿಯನ್ನು ಕಂಡು ತಾಪಪೀಡೆಯನ್ನು ಶಾಂತಿಗೊಳಿಸುವವನಂತೆ ಅದರಲ್ಲಿ ಸ್ನಾನ ಮಾಡಲು ಮನಸ್ಸನ್ನು ಮಾಡಿದನು. ಆದರ ನೀರು ಶಿವನ ಶರೀರಾಗ್ನಿಯಿಂದ ಕೃಷ್ಣವರ್ಣವಾಯಿತು.

೫–೬. ಶಿವನ ಪ್ರವೇಶದಿಂದ ದಗ್ಧವಾದ ಆ ನೀರು ಮಸಿಯಂತೆ ಪ್ರಕಾಶಿಸಿತು. ಹಿಂದೆ ದಿವ್ಯಶರೀರವುಳ್ಳ ಆ ಯಮುನೆಯು ಶಿವನಿಂದ ಕೃಷ್ಣವರ್ಣಳಾಗಿ ಆ ಶಂಕರನನ್ನು ಸ್ತುತಿಸಿ, ಮಣಿದು, "ಮಹೇಶ! ನಾನು ಯಾವಾಗಲೂ ನಿನ್ನ ಅಧೀನಳಾಗಿರುವೆನು. ಅನುಗ್ರಹಿಸು" ಎಂದಳು.

ಈಶ್ವರ ಉವಾಚ :—
ಅಸ್ಮಿಂಸ್ತೀರ್ಥವರೇ ಪುಣ್ಯೇ ಯಃ ಸ್ನಾಸ್ಯತಿ ನರೋ ಭುವಿ ।
ತಸ್ಯ ಪಾಪಸಹಸ್ರಾಣಿ ಯಾಸ್ಯಂತಿ ವಿಲಯಂ ಧ್ರುವಂ ॥ ೭ ॥
ಹರತೀರ್ಥಮಿತಿ ಖ್ಯಾತಂ ಪುಣ್ಯಂ ಲೋಕೇ ಭವಿಷ್ಯತಿ ।
ಇತ್ಯುಕ್ತ್ವಾ ತಾಂ ಪ್ರಣಮ್ಯಾಥ ತತ್ರೈವಾಂತರಧೀಯತ ॥ ೮ ॥
ತಸ್ಯಾಸ್ತೀರೇ ಮಹೇಶೋಽಪಿ ಕೃತ್ವಾರೂಪಂ ಮನೋಹರಂ ।
ಕಾಮಾಲಯಂ ವಾದ್ಯಹಸ್ತಂ ಕೃತಪುಂಡ್ರಂ ಜಟಾಧರಂ ॥ ೯ ॥
ಸ್ವೇಚ್ಛಯಾ ಮುನಿಗೇಹೇಷು ದರ್ಶಯತ್ಯಂಗಚಾಪಲಂ ।
ಕ್ವಚಿದ್ಗಾಯತಿ ಗೀತಾನಿ ಕ್ವಚಿನ್ನೃತ್ಯತಿ ಛಂದತಃ ॥ ೧೦ ॥
ಸ ಚ ಕ್ರುಧ್ಯತಿ ಹಸತಿ ಸ್ತ್ರೀಣಾಂ ಮಧ್ಯಗತಃ ಕ್ವಚಿತ್ ।
ಏವಂ ವಿಚರತಸ್ತಸ್ಯ ಋಷಿಪತ್ನ್ಯಃ ಸಮಂತತಃ ॥ ೧೧ ॥
ಪತ್ಯುಃ ಶುಶ್ರೂಷಣಂ ಗೇಹೇ ತ್ಯಕ್ತ್ವಾ ಕಾರ್ಯಾಣ್ಯಪಿ ಕ್ಷಣಾತ್ ।
ತಮೇವ ಮನಸಾ ಚಕ್ರುಃ ಪತಿರೂಪೇಣ ಮೋಹಿತಾಃ ॥ ೧೨ ॥
ಭ್ರಮಂತ್ಯಶ್ಚೈವ ಹಾಸ್ಯಾನಿ ಚಕ್ರುಸ್ತಾ ಅಪಿ ಯೋಷಿತಃ ।
ತತಸ್ತು ಮುನಯೋ ದೃಷ್ಟ್ವಾ ತಾಸಾಂ ದುಃಶೀಲಭಾವನಾಂ ॥ ೧೩ ॥

---

೭. ಈಶ್ವರನು ಹೇಳುತ್ತಾನೆ:—ಲೋಕದಲ್ಲಿ ಪುಣ್ಯಕರವಾದ ಈ ಉತ್ತಮ ತೀರ್ಥದಲ್ಲಿ ಮಿಂದವನ ಅನೇಕ ಪಾಪಗಳು ನಿಶ್ಚಯವಾಗಿಯೂ ನಾಶವಾಗುವುವು.

೮. ಇದು ಲೋಕದಲ್ಲಿ ಹರತೀರ್ಥವೆಂದು ಪ್ರಸಿದ್ಧವಾಗುವುದು. ಶಿವನು ಹೀಗೆ ಹೇಳಿ, ಅವಳನ್ನು ವಂದಿಸಿ ಅಲ್ಲಿಯೇ ಅದೃಶ್ಯನಾದನು.

೯–೧೦. ಅನಂತರ ಆ ಶಿವನು ಆ ಯಮುನಾ ನದಿಯ ದಡದಲ್ಲಿ ಕಾಮನಿಗೆ ಆಶ್ರಯವೂ, ಕೈಯಲ್ಲಿ ವಾದ್ಯವನ್ನು ಹಿಡಿದಿರುವುದೂ, ಪುಂಡ್ರವನ್ನು ಧರಿಸಿರುವುದೂ, ಜಟೆಯುಳ್ಳುದೂ ಆದ ಮನೋಹರ ರೂಪವನ್ನು ತಾಳಿ ಸ್ವೇಚ್ಛೆಯಿಂದ ಮುನಿಗಳ ಮನೆಗಳಲ್ಲಿ ಸಂಚರಿಸುತ್ತ ಶರೀರಚಾಪಲ್ಯವನ್ನು ತೋರಿಸಿದನು. ಅವನು ಒಂದೆಡೆಯಲ್ಲಿ ಹಾಡುತ್ತಿದ್ದನು. ಇನ್ನೊಂದೆಡೆಯಲ್ಲಿ ಸ್ವೇಚ್ಛೆಯಾಗಿ ಕುಣಿಯುತ್ತಿದ್ದನು.

೧೧–೧೨. ಅವನು ಸ್ತ್ರೀಯರ ನಡುವೆ ಒಂದುಸಾರಿ ಕೋಪಿಸಿಕೊಳ್ಳುತ್ತಿದ್ದನು. ಒಂದುಸಾರಿ ನಗುತ್ತಿದ್ದನು. ಅವನು ಹೀಗೆ ಸಂಚರಿಸುತ್ತಿರಲು ಋಷಿಪತ್ನಿಯರು ಪತಿಯ ಸೇವೆಯನ್ನೂ, ಗೃಹಕೃತ್ಯಗಳನ್ನೂ ಬಿಟ್ಟು ಮೋಹಗೊಂಡು ಅವನನ್ನು ಪತಿರೂಪದಿಂದ ಮನಸ್ಸಿನಲ್ಲಿ ಚಿಂತಿಸಿದರು.

೧೩–೧೪. ಆ ಸ್ತ್ರೀಯರು ಸಂಚರಿಸುತ್ತಲೂ, ನಗುತ್ತಲೂ ಇದ್ದರು. ಬಳಿಕ ಮುನಿಗಳು ಆ ಸ್ತ್ರೀಯರ ದುರ್ನಡತೆಯ ಭಾವನೆಯನ್ನೂ, ಶಿವನ ಮನೋಹರ

ಚುಕ್ರುಧುರ್ಮುನಯಃ ಸರ್ವೇ ರೂಪಂ ತಸ್ಯ ಮನೋಹರಂ ।
ಗೃಹ್ಯತಾಂ ಹನ್ಯತಾಮೇಷ ಕೋಽಯಂ ದುಷ್ಟ ಉಪಾಗತಃ ॥ ೧೪ ॥
ಇತಿ ತೇ ಗೃಹ್ಯ ಕಾಷ್ಠಾನಿ ಯದೋಪಸ್ಥೇ ಯಯುಸ್ತದಾ ।
ಪಲಾಯಿತಃ ಸ ಬಹುಧಾ ಭಯಾತ್ತೇಷಾಂ ಮಹಾತ್ಮನಾಂ ॥ ೧೫ ॥
ಯೋ ಜೀವ ಕಲಯಾ ವಿಶ್ವಂ ವ್ಯಾಪ್ಯ ತಿಷ್ಠತಿ ದೇಹಿನಾಂ ।
ನ ಜ್ಞಾಯತೇ ನ ಚ ಗ್ರಾಹ್ಯೋ ನ ಭೇದ್ಯಶ್ಚಾಪಿ ಜಾಯತೇ ॥ ೧೬ ॥
ನ ಶೇಕುಸ್ತೇ ಯದಾ ಸರ್ವೇ ಗ್ರಹೀತುಂ ತಂ ಮಹೇಶ್ವರಂ ।
ತದಾ ಶಿವಂ ಪ್ರಕುಪಿತಾ ಶೇಪುರಿತ್ಥಂ ದ್ವಿಜಾತಯಃ ॥ ೧೭ ॥
ಯಸ್ಮಾಲ್ಲಿಂಗಾರ್ಥಮಾಗತ್ಯ ಹ್ಯಾಶ್ರಮಾಂಶ್ಚೋರವತ್ಕೃತಂ ।
ಪರದಾರಾಪಹರಣಂ ತಲ್ಲಿಂಗಂ ಪತತಾಂ ಭುವಿ ॥ ೧೮ ॥
ಸದ್ಯ ಏವಹಿ ಶಾಪಂ ತ್ವಂ ದುಷ್ಟಂ ಪ್ರಾಪ್ನುಹಿ ತಾಪಸ ।
ಏವಮುಕ್ತೇ ಸ ಶಾಪಾಗ್ನಿರ್ವಜ್ರರೂಪಧರೋ ಮಹಾನ್ ॥ ೧೯ ॥
ತಲ್ಲಿಂಗಂ ಧೂರ್ಜಟೇಶ್ಛಿತ್ವಾ ಪಾತಯಾಮಾಸ ಭೂತಲೇ ।
ರುಧಿರೌಘಪರಿವ್ಯಾಪ್ತೋ ಮುನೋಹ ಭಗವಾನ್ ವಿಭುಃ ॥ ೨೦ ॥
ವೇದನಾರ್ತೋಜ್ವಲವಪುರ್ಮಹಾಶಾಪಾಭಿಭೂತಧೀಃ ।
ತಂ ತಥಾ ಪತಿತಂ ದೃಷ್ಟ್ವಾ ತ ಆಜಗ್ಮುರ್ಮಹರ್ಷಯಃ ॥ ೨೧ ॥

---

ರೂಪವನ್ನೂ ನೋಡಿ ಕ್ರುದ್ಧರಾಗಿ ಇಲ್ಲಿಗೆ ಬಂದಿರುವ ಈ ದುಷ್ಟನು ಯಾವನು? ಇವನನ್ನು ಹಿಡಿದುಕೊಳ್ಳಿರಿ, ಹೊಡೆಯಿರಿ ಎಂದು ಹೇಳುತ್ತ ದೊಣ್ಣೆಗಳನ್ನು ತೆಗೆದು ಕೊಂಡು ಸಮೀಪಕ್ಕೆ ಹೋಗಲು ಆ ಶಂಕರನು ಮಹಾತ್ಮರಾದ ಆ ಮುನಿಗಳ ಭಯದಿಂದ ಓಡಿದನು.

೧೬–೧೭. ಯಾವ ಶಂಕರನು ಪ್ರಾಣಿಗಳಲ್ಲಿ ಜೀವಾಂಶದಿಂದ ಇರುತ್ತ ಪ್ರಪಂಚವನ್ನು ವ್ಯಾಪಿಸಿ ಅರಿಯಲೂ, ಹಿಡಿಯಲೂ, ಭೇದಿಸಲೂ ಅಶಕ್ಯನಾಗಿರುವನೊ ಅಂತಹ ಮಹೇಶನನ್ನು ಆ ಮುನಿಗಳು ಹಿಡಿಯಲು ಶಕ್ತರಾಗದಿರಲು ಅವರು ಕುಪಿತರಾಗಿ ಅವನನ್ನು ಹೀಗೆ ಶಪಿಸಿದರು.

೧೮. ನೀನು ಲಿಂಗಕ್ಕಾಗಿ ನಮ್ಮ ಆಶ್ರಮಕ್ಕೆ ಬಂದು ಕಳ್ಳನಂತೆ ಪರರ ಪತ್ನಿಯರನ್ನು ಅಪಹರಿಸಬಯಸಿರುವುದರಿಂದ ನಿನ್ನ ಲಿಂಗವು ಭೂಮಿಯಲ್ಲಿ ಬೀಳಲಿ.

೧೯–೨೧. ಮುನಿಯೆ! ನೀನು ಕೂಡಲೆ ಈ ದುಷ್ಟಶಾಪವನ್ನು ಹೊಂದು. ಮುನಿಗಳು ಹೀಗೆ ನುಡಿಯಲು, ಆ ಶಾಪಾಗ್ನಿಯು ವಜ್ರರೂಪವನ್ನು ತಾಳಿ ಆ ಶಿವನ ಲಿಂಗವನ್ನು ಕತ್ತರಿಸಿ ಭೂಮಿಯಲ್ಲಿ ಕೆಡವಿತು. ಪೂಜ್ಯನಾದ ಆ ಮಹೇಶ್ವರನು ರಕ್ತಪ್ರವಾಹದಿಂದ ವ್ಯಾಪ್ತನೂ, ವೇದನೆಯಿಂದ ಪ್ರಕಾಶಗೊಂಡ ಶರೀರವುಳ್ಳವನೂ, ಮಹಾಶಾಪದಿಂದ ಅಡಗಿಹೋದಬುದ್ಧಿಯುಳ್ಳವನೂ ಆಗಿ ಮೂರ್ಛೆಗೊಂಡನು. ಅವನು ಹಾಗೆ ಬಿದ್ದಿರುವುದನ್ನು ನೋಡಿ ಮುನಿಗಳು ಅಲ್ಲಿಗೆ ಬಂದರು.

ಆಕಾಶೇ ಸರ್ವಭೂತಾನಿ ತ್ರೇಸುರ್ವಿಶ್ವಂ ಚಚಾಲಹ ।
ದೇವಾಶ್ಚ ವ್ಯಾಕುಲಾ ಜಾತಾ ಮಹಾಭಯಮುಪಾಗತಾಃ ॥ ೨೨ ॥
ಜ್ಞಾತ್ವಾ ವಿಪ್ರಾ ಮಹೇಶಾನಂ ಪೀಡಿತಾ ಹೃದಯೇಽಭವನ್ ।
ಶುಶುಚುರ್ಭೃಶದುಃಖಾರ್ತಾ ದೈವಂ ಹಿ ಬಲವತ್ತರಂ ॥ ೨೩ ॥
ಕಿಂ ಕೃತಂ ಭಗವಾನೇಷ ದೇವೈರಪಿ ಸ ಸೇವ್ಯತೇ ।
ಸಾಕ್ಷೀ ಸರ್ವಸ್ಯ ಜಗತೋಽಸ್ಮಾಭಿರ್ನೈವೋಪಲಕ್ಷಿತಃ ॥ ೨೪ ॥
ವಯಂ ಮೂಢಧಿಯಃ ಪಾಪಾಃ ಪರಮಜ್ಞಾನದುರ್ಬಲಾಃ ।
ಕಥಮಸ್ಮಾಭಿರ್ಯಸ್ಯಾತ್ಮಾ ಶ್ರುತಶ್ಚ ನ ನಿವೇದಿತಃ ॥ ೨೫ ॥
ಮಯೇದೃಶೋ ಗೃಹಸ್ಥಾಯ ಹ್ಯಾತ್ಮಾಽಯಂ ನ ನಿವೇದಿತಃ ।
ನಿರ್ವಿಕಾರೋ ನಿರ್ವಿಷಯೋ ನಿರೀಹೋ ನಿರುಪದ್ರವಃ ॥ ೨೬ ॥
ನಿರ್ಮಮೋ ನಿರಹಂಕಾರೋ ಯಃ ಶಂಭುರ್ನೋಪಲಕ್ಷಿತಃ ।
ಯಸ್ಯ ಲೋಕಾ ಇಮೇ ಸರ್ವೇ ದೇಹೇ ತಿಷ್ಠಂತಿ ಮಧ್ಯಗಾಃ ॥ ೨೭ ॥
ಸ ಏಷ ಜಗತಾಂ ಸ್ವಾಮೀ ಹರೋಽಸ್ಮಾಭಿರ್ನವೀಕ್ಷಿತಃ ।
ಇತ್ಯುಕ್ತ್ವಾ ತೇಹ್ಯುಪವಿಷ್ಟಾ ಯಾವತ್ತತ್ರಸಮಾಗತಾಃ ॥ ೨೮ ॥
ತಾನ್ ದೃಷ್ಟ್ವಾ ಸಹಸಾ ತ್ರಸ್ತಃ ಪುನರೇವ ಮಹೇಶ್ವರಃ ।
ವಿಪ್ರಶಾಪಭಯಾನ್ನಷ್ಟಸ್ತ್ರಿಪುರಾರಿರ್ದಿವಂ ಯಯೌ ॥ ೨೯ ॥

---

೨೨. ಆಕಾಶದಲ್ಲಿ ಸಕಲ ಭೂತಗಳೂ ಭಯಗೊಂಡುವು. ಜಗತ್ತು ಅದುರಿತು. ದೇವತೆಗಳು ವ್ಯಾಕುಲಚಿತ್ತರಾಗಿ ಅತ್ಯಂತ ಭಯವನ್ನು ಹೊಂದಿದರು.

೨೩. ಬ್ರಾಹ್ಮಣರು ಅವನು ಮಹೇಶ್ವರನೆಂದರಿತು ಮನಸ್ಸಿನಲ್ಲಿ ಅತ್ಯಂತ ಪೀಡಿತರಾದರು. ಅತಿ ದುಃಖದಿಂದ ಗೋಳಾಡಿದರು. "ವಿಧಿಯು ಬಲವಾದುದಷ್ಟೆ.

೨೪. ನಾವು ಎಂತಹ ಕೆಲಸವನ್ನು ಮಾಡಿದೆವು. ದೇವಸೇವ್ಯನೂ, ಸಕಲ ಜಗತ್ತಿಗೆ ಸಾಕ್ಷಿಯೂ ಆದ ಮಹೇಶ್ವರನನ್ನು ನಾವು ಅರಿಯದೆಹೋದೆವು.

೨೫. ನಾವು ಮೂಢರೂ, ಪಾಪಿಗಳೂ, ಅಜ್ಞಾನದುರ್ಬಲರೂ ಆಗಿದ್ದೇವೆ. ನಾವು ಇವನ ವಿಷಯವನ್ನು ಕೇಳಿದ್ದರೂ ತಿಳಿಯದೆಹೋದೆವು.

೨೬-೨೯. ನಾವು ನಮ್ಮನ್ನು ಇಂತಹ ಪರಮಾತ್ಮನಿಗೆ ನಿವೇದಿಸಿಕೊಳ್ಳಲಿಲ್ಲ. ನಿರ್ವಿಕಾರನೂ, ವಿಷಯರಹಿತನೂ, ಅಪೇಕ್ಷೆ, ಉಪದ್ರವ, ಮಮತೆ, ಅಹಂಕಾರಗಳಿಲ್ಲದವನೂ ಆದ ಶಂಭುವನ್ನು ಅರಿತುಕೊಳ್ಳಲಿಲ್ಲ. ಯಾವನ ಶರೀರದಲ್ಲಿ ಈ ಸಮಸ್ತ ಲೋಕಗಳೂ ನೆಲೆಸಿರುವವೋ, ಅಂತಹ ಜಗತ್ಸ್ವಾಮಿಯಾದ ಹರನನ್ನು ನಾವು ವೀಕ್ಷಿಸಲಿಲ್ಲ." ಆ ಮುನಿಗಳು ಹೀಗೆ ಹೇಳಿ ಅಲ್ಲಿ ಕುಳಿತುಕೊಳ್ಳಲು ಮಹೇಶ್ವರನು ಅವರನ್ನು ನೋಡಿ ಕೂಡಲೆ ಭಯಗೊಂಡು ಅವರ ಶಾಪದ ಭಯದಿಂದ ಅಡಗಿಕೊಂಡು ದೇವಲೋಕಕ್ಕೆ ತೆರಳಿದನು.

ಸುರಭಿಂ ಗಾಂ ಚ ಗೋಲೋಕೇ ತಾಂ ತುಷ್ಟಾವ ಸುಸಂಯುತಃ ।
ಸೃಷ್ಟಿ ಸ್ಥಿತಿವಿನಾಶಾನಾಂ ಕರ್ತ್ರ್ಯೈ ಮಾತ್ರೇ ನಮೋ ನಮಃ ॥ ೩೦ ॥
ಯಾ ತ್ವಂ ರಸಮಯೈರ್ಭಾವೈರಾಪ್ಯಾಯಯಸಿ ಭೂತಲಂ ।
ದೇವಾನಾಂ ಚ ತಥಾ ಸಂಘಾನ್ ಪಿತೄಣಾಮಪಿ ವೈಗಣಾನ್ ॥ ೩೧ ॥
ಸರ್ವೈರ್ಜ್ಞಾತಾ ರಸಾಭಿಜ್ಞೈರ್ಮಧುರಾಸ್ವಾದದಾಯಿನೀ ।
ತ್ವಯಾ ವಿಶ್ವಮಿದಂ ಸರ್ವಂ ಬಲಸ್ನೇಹಸಮನ್ವಿತಂ ॥ ೩೨ ॥
ತ್ವಂ ಮಾತಾ ಸರ್ವರುದ್ರಾಣಾಂ ವಸೂನಾಂ ದುಹಿತಾ ತಥಾ ।
ಆದಿತ್ಯಾನಾಂ ಸ್ವಸಾ ಚೈವ ತುಷ್ಟಾ ವಾಂಛಿತಸಿದ್ಧಿದಾ ॥ ೩೩ ॥
ತ್ವಂ ಧೃತಿಸ್ತ್ವಂ ತಥಾ ಪುಷ್ಟಿಸ್ತ್ವಂ ಸ್ವಾಹಾ ತ್ವಂ ಸ್ವಧಾ ತಥಾ ।
ಋದ್ಧಿಃ ಸಿದ್ಧಿಸ್ತಥಾ ಲಕ್ಷ್ಮೀರ್ಧೃತಿಃ ಕೀರ್ತಿಸ್ತಥಾ ಮತಿಃ ॥ ೩೪ ॥
ಕಾಂತಿರ್ಲಜ್ಜಾ ಮಹಾಮಾಯಾ ಶ್ರದ್ಧಾ ಸರ್ವಾರ್ಥಸಾಧಿನೀ ।
ತ್ವಯಾ ವಿರಹಿತಂ ಕಿಂಚಿನ್ನಾಽಸ್ತಿ ತ್ರಿಭುವನೇಷ್ವಪಿ ॥ ೩೫ ॥
ವಹ್ನೇಸ್ತೃಪ್ತಿಪ್ರದಾತ್ರೀ ಚ ದೇವಾದೀನಾಂ ಚ ತೃಪ್ತಿದಾ ।
ತ್ವಯಾ ಸರ್ವಮಿದಂ ವ್ಯಾಪ್ತಂ ಜಗತ್ಸ್ಥಾವರಜಂಗಮಂ ॥ ೩೬ ॥

---

೩೦. ಸುರಲೋಕದಲ್ಲಿ ಅವನು ಸಂಯಮದಿಂದ ಸುರಭಿಯನ್ನು ಹೀಗೆ ಸ್ತುತಿಗೈದನು. "ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವವಳೂ, ಮಾತೆಯೂ ಆದ ನಿನಗೆ ನಮಸ್ಕಾರವು.

೩೧. ನೀನು ರಸಮಯ ವಸ್ತುಗಳಿಂದ ಭೂಮಿಯನ್ನು ಆನಂದಗೊಳಿಸುವೆ. ಹಾಗೆಯೇ ದೇವಪಿತೃಗಳ ಸಮೂಹಗಳನ್ನೂ ಸಂತೋಷಗೊಳಿಸುವೆ.

೩೨. ರಸವನ್ನರಿತ ಸಕಲ ಜನರಿಂದ ತಿಳಿಯಲ್ಪಟ್ಟವಳೂ, ಮಧುರಾಸ್ವಾದವನ್ನು ಕೊಡುವವಳೂ ಆದ ನೀನು ಬಲ ಮತ್ತು ಸ್ನೇಹಗಳಿಂದ ಕೂಡಿದ ಈ ಸಕಲ ಪ್ರಪಂಚವನ್ನು ವ್ಯಾಪಿಸಿರುವೆ.

೩೩. ಏಕಾದಶ ರುದ್ರರ ತಾಯಿಯೂ, ವಸುಗಳ ಮಗಳೂ, ಆದಿತ್ಯರ ಸೋಸೆಯೂ ಆದ ನೀನು ಸಂತುಷ್ಟಳಾಗಿ ಇಷ್ಟಾರ್ಥಸಿದ್ಧಿಯನ್ನು ಕೊಡುವೆ.

೩೪–೩೫. ಧೃತಿಯೂ, ಪುಷ್ಟಿಯೂ, ಸ್ವಾಹೆಯೂ, ಸ್ವಧೆಯೂ, ಋದ್ಧಿ, ಸಿದ್ಧಿಯೂ, ಲಕ್ಷ್ಮಿಯೂ, ಕೀರ್ತಿಯೂ, ಮತಿಯೂ, ಕಾಂತಿಯೂ, ಲಜ್ಜೆಯೂ, ಮಹಾಮಾಯೆಯೂ, ಶ್ರದ್ಧೆಯೂ, ಸರ್ವಾರ್ಥಗಳನ್ನು ಸಾಧಿಸುವವಳೂ ನೀನೇ ಆಗಿರುವೆ. ಮೂರು ಲೋಕಗಳಲ್ಲಿ ನಿನ್ನಿಂದ ವಿರಹಿತವಾದ ವಸ್ತುವು ಯಾವುದೂ ಇಲ್ಲ.

೩೬. ನೀನು ಅಗ್ನಿಗೆ ತೃಪ್ತಿಯನ್ನುಂಟುಮಾಡುವವಳೂ, ದೇವತೆಗಳೇ ಮೊದಲಾದವರಿಗೆ ತೃಪ್ತಿಯನ್ನು ಕೊಡುವವಳೂ ಆಗಿರುವೆ. ಸ್ಥಾವರಜಂಗಮಾತ್ಮಕ ಸಕಲ ಪ್ರಪಂಚವನ್ನು ವ್ಯಾಪಿಸಿರುವೆ.

ಪಾದಾಸ್ತೇ ವೇದಾಶ್ಚತ್ವಾರಃ ಸಮುದ್ರಾಃ ಸ್ತನತಾಂ ಯಯುಃ ।
ಚಂದ್ರಾರ್ಕೌ ಲೋಚನೇ ಯಸ್ಯಾ ರೋಮಾಗ್ರೇಷು ಚ ದೇವತಾಃ ॥ ೩೭॥
ಶೃಂಗಯೋಃ ಪರ್ವತಾಃ ಸರ್ವೇ ಕರ್ಣಯೋರ್ವಾಯವಸ್ತಥಾ ।
ನಾಭೌ ಚೈವಾಽಮೃತಂ ದೇವಿ ಪಾತಾಲಾನಿ ಖುರಾಸ್ತಥಾ ॥ ೩೮ ॥
ಸ್ಕಂಧೇ ಚ ಭಗವಾನ್ ಬ್ರಹ್ಮಾ ಮಸ್ತಕಸ್ಥಃ ಸದಾಶಿವಃ ।
ಹೃದ್ದೇಶೇಚ ಸ್ಥಿತೋ ವಿಷ್ಣುಃ ಪುಚ್ಛಾಗ್ರೇ ಪನ್ನಗಾಸ್ತಥಾ ॥ ೩೯ ॥
ಶಕೃತ್ಸ್ಥಾ ವಸವಃ ಸರ್ವೇ ಸಾಧ್ಯಾ ಮೂತ್ರಸ್ಥಿತಾಸ್ತವ ।
ಸರ್ವೇ ಯಜ್ಞಾ ಹ್ಯಸ್ಥಿದೇಶೇ ಕಿನ್ನರಾ ಗುಹ್ಯಸಂಸ್ಥಿತಾಃ ॥ ೪೦ ॥
ಪಿತೄಣಾಂ ಚ ಗಣಾಃ ಸರ್ವೇ ಪುರಃಸ್ಥಾ ಭಾಂತಿ ಸರ್ವದಾ ।
ಸರ್ವೇ ಯಕ್ಷಾ ಭಾಲದೇಶೇ ಕಿನ್ನರಾಶ್ಚ ಕಪೋಲಯೋಃ ॥ ೪೧ ॥
ಸರ್ವದೇವಮಯೀ ತ್ವಂ ಹಿ ಸರ್ವಭೂತವಿವೃದ್ಧಿದಾ ।
ಸರ್ವಲೋಕಹಿತಾ ನಿತ್ಯಂ ಮಮ ದೇಹಹಿತಾ ಭವ ॥ ೪೨ ॥
ಪ್ರಣತಸ್ತ್ವ ದೇವೇಶಿ ಪೂಜಯೇ ತ್ವಾಂ ಸದಾಽನಘೇ ।
ಸ್ತೌಮಿ ವಿಶ್ವಾರ್ತಿಹಂತ್ರೀಂ ತ್ವಾಂ ಪ್ರಸನ್ನಾ ವರದಾ ಭವ ॥ ೪೩ ॥
ವಿಪ್ರಶಾಪಾಽಗ್ನಿನಾ ದಗ್ಧಂ ಶರೀರಂ ಮಮ ಶೋಭನೇ ।
ಸ್ವತೇಜಸಾ ಪುನಃ ಕರ್ತುಮರ್ಹಸ್ಯಮೃತಸಂಭವೇ ॥ ೪೪ ॥

---

೩೭–೪೨. ನಾಲ್ಕು ವೇದಗಳೇ ನಿನ್ನ ಪಾದಗಳು; ಚತುಃಸಮುದ್ರಗಳೇ ನಿನ್ನ ಮೊಲೆಗಳು; ಚಂದ್ರಸೂರ್ಯರು ನಿನ್ನ ಕಣ್ಣುಗಳು; ನಿನ್ನ ರೋಮಗಳ ಅಗ್ರಗಳಲ್ಲಿ ದೇವತೆಗಳೂ, ಕೊಂಬುಗಳಲ್ಲಿ ಪರ್ವತಗಳೂ, ಕಿವಿಗಳಲ್ಲಿ ವಾಯುಗಳೂ, ನಾಭಿಯಲ್ಲಿ ಅಮೃತವೂ, ಗೊರಸುಗಳಲ್ಲಿ ಪಾತಾಳಲೋಕವೂ, ಹೆಗಲಿನಲ್ಲಿ ಪೂಜ್ಯನಾದ ಬ್ರಹ್ಮನೂ, ತಲೆಯಲ್ಲಿ ಶಿವನೂ, ಹೃದಯದಲ್ಲಿ ವಿಷ್ಣುವೂ, ಬಾಲದ ಕೊನೆಯಲ್ಲಿ ಸರ್ಪಗಳೂ, ಗೋಮಯದಲ್ಲಿ ಸಮಸ್ತ ವಸುಗಳೂ, ಮೂತ್ರದಲ್ಲಿ ಸಾಧ್ಯರೂ, ಮೂಳೆಯಲ್ಲಿ ಸಕಲ ಯಜ್ಞಗಳೂ, ಗುಹ್ಯದಲ್ಲಿ ಕಿನ್ನರರೂ, ಮುಂಭಾಗದಲ್ಲಿ ಸಕಲ ಪಿತೃಗಣಗಳೂ, ಹಣೆಯಲ್ಲಿ ಯಕ್ಷರೂ, ಕಪೋಲಗಳಲ್ಲಿ ಕಿನ್ನರರೂ ನೆಲೆಸಿರುವರು. ಸಕಲ ದೇವತಾಸ್ವರೂಪಳೂ, ಸಕಲ ಭೂತಗಳಿಗೆ ವೃದ್ಧಿಯನ್ನು ನೀಡುವವಳೂ, ಸಮಸ್ತ ಜನರಿಗೆ ಹಿತವನ್ನುಂಟುಮಾಡುವವಳೂ ಆದ ನೀನು ನನ್ನ ಶರೀರಕ್ಕೆ ಹಿತವನ್ನುಂಟುಮಾಡು.

೪೩–೪೪. ದೇವೇಶಿ! ನಾನು ನಿನ್ನನ್ನು ವಂದಿಸಿ ಪೂಜಿಸುವೆನು. ಸಕಲರ ದುಃಖವನ್ನು ಪರಿಹರಿಸುವ ನಿನ್ನನ್ನು ಸ್ತುತಿಸುವೆನು. ನೀನು ಪ್ರಸನ್ನಳಾಗಿ ನನಗೆ ವರವನ್ನು ಕೊಡು. ಮಂಗಳಕರಳೆ! ನನ್ನ ಶರೀರವು ಬ್ರಾಹ್ಮಣರ ಶಾಪವೆಂಬ ಅಗ್ನಿಯಿಂದ ದಗ್ಧವಾಗಿದೆ. ಅಮೃತದಿಂದ ಹುಟ್ಟಿದ ಸುರಭಿಯೆ! ನೀನು ನಿನ್ನ ತೇಜಸ್ಸಿನಿಂದ ಅದನ್ನು ಸರಿಮಾಡು.

ಇತ್ಯುಕ್ತ್ವಾ ತಾಂ ಪರಿಕ್ರಮ್ಯ ತಸ್ಯಾ ದೇಹೇ ಲಯಂ ಗತಃ ।
ಸಾಽಪಿ ಗರ್ಭೇ ದಧಾರಾಽಥ ಸುರಭಿಸ್ತದನಂತರಂ ॥ ೪೫ ॥
ಕಾಲಾಽತಿಕ್ರಮಯೋಗೇನ ಸರ್ವವ್ಯಾಕುಲತಾಂ ಯಯೌ ।
ಯಸ್ಮಿನ್ ಪ್ರಣಷ್ಟೇ ದೇವೇಶೇ ವಿಪ್ರಶಾಪಭಯಾವೃತೇ ॥ ೪೬ ॥
ದೇವಾ ಮಹಾರ್ತಿಂ ಪ್ರಯಯುಶ್ಚಚಾಲ ಪೃಥಿವೀ ತಥಾ ।
ಚಂದ್ರಾರ್ಕೌ ನಿಷ್ಪ್ರಭೌ ಚೈವ ವಾಯುರುಚ್ಚಂಡ ಏವ ಚ ॥ ೪೭ ॥
ಸಮುದ್ರಾಃ ಕ್ಷೋಭಮಗಮಂಸ್ತಸ್ಮಿನ್‌ಕಾಲೇ ದ್ವಿಜೋತ್ತಮ ॥ ೪೮ ॥
ಯಸ್ಮಿಂ ಜಗತ್ಸ್ಥಾವರ ಜಂಗಮಾದಿಕಂ
ಕಾಲೇ ಲಯಂ ಪ್ರಾಪ್ಯ ಪುನಃ ಪ್ರರೋಹತಿ ।
ತಸ್ಮಿನ್ ಪ್ರಣಷ್ಟೇ ದ್ವಿಜಶಾಪಪೀಡಿತೇ
ಜಗದ್ಗತಪ್ರಾಯಮವರ್ತತ ಕ್ಷಣಾತ್ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಹರಶಾಪವರ್ಣನಂ" ನಾಮ
ಅಷ್ಟಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

೪೫. ಶಂಕರನು ಹೀಗೆ ಹೇಳಿ ಆ ಧೇನುವನ್ನು ಪ್ರದಕ್ಷಿಣೆಗೈದು ಅದರ ಶರೀರದಲ್ಲಿ ಅಡಗಿಹೋದನು. ಅದು ಅವನನ್ನು ಗರ್ಭದಲ್ಲಿ ಧರಿಸಿತು.

೪೬. ಕಾಲಕ್ರಮದಿಂದ ದೇವೇಶನಾದ ಶಂಕರನು ವಿಪ್ರಶಾಪದ ಭಯದಿಂದ ಕೂಡಿದವನಾಗಿ ಅದೃಶ್ಯನಾಗಲು ಎಲ್ಲವೂ ವ್ಯಾಕುಲಗೊಂಡಿತು.

೪೭. ದೇವತೆಗಳು ಅತ್ಯಂತ ದುಃಖವನ್ನು ಹೊಂದಿದರು. ಭೂಮಿಯು ಚಲಿಸಿತು. ಚಂದ್ರಸೂರ್ಯರು ಕಳೆಗುಂದಿದರು. ಗಾಳಿಯು ಪ್ರಚಂಡವಾಯಿತು.

೪೮. ಆ ಸಮಯದಲ್ಲಿ ಸಮುದ್ರಗಳು ಅಲ್ಲೋಲಕಲ್ಲೋಲವಾದುವು.

೪೯. ಪ್ರಳಯಕಾಲದಲ್ಲಿ ಸ್ಥಾವರಜಂಗಮಾತ್ಮಕ ಪ್ರಪಂಚವು ಯಾವ ಮಹೇಶ್ವರನಲ್ಲಿ ಲಯವಾಗಿ ಮರಳಿ ಹುಟ್ಟುವುದೊ, ಅಂತಹ ಶಂಕರನು ಬ್ರಾಹ್ಮಣ ಶಾಪದಿಂದ ಪೀಡಿತನಾಗಿ ಅದೃಶ್ಯನಾಗಲು ಪ್ರಪಂಚವು ಕೂಡಲೆ ನಷ್ಟವಾದಂತಾಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಹರಶಾಪವರ್ಣನ"ವೆಂಬ
ಇನ್ನೂರೈವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

## ವೃಷಸ್ತುತಿನಾಮವರ್ಣನಂ

ಗಾಲವ ಉವಾಚ:—
ತಸ್ಮಿಂಸ್ತು ಪತಿತೇ ಲಿಂಗೇ ಯೋಜನಾಯಾಮವಿಸ್ತೃತೇ ।
ವಿಷಾದಾರ್ತಾ ಋಷಿಗಣಾಸ್ತತ್ರಾಽಽಜಗ್ಮುಃ ಸಹಸ್ರಶಃ ॥ ೧ ॥
ವ್ಯಲೋಕಯಂತ ಸರ್ವತ್ರ ದೃಷ್ಟ್ವಾ ತತ್ರ ಮಹೇಶ್ವರಂ ।
ನಾಽಸೌ ದೃಷ್ಟಿಪಥೇ ತೇಷಾಂ ಬಭೂವ ಭಯವಿಹ್ವಲಃ ॥ ೨ ॥
ವೀರ್ಯಂ ವರ್ಷಸಹಸ್ರಾಣಿ ಬಹೂನ್ಯಪಿ ಸುಸಂಚಿತಂ ।
ಪೃಥಿವೀಂ ಸಕಲಾಂ ವ್ಯಾಪ್ಯ ಸ್ಥಿತಂ ದದೃಶಿರೇ ದ್ವಿಜಾಃ ॥ ೩ ॥
ತದ್ದೃಷ್ಟ್ವಾ ಸುಮಹಲ್ಲಿಂಗಂ ರುಧಿರಾಕ್ತಂ ಜಲೈಃ ಪ್ಲುತಂ ।
ಬ್ರಾಹ್ಮಣಾಃ ಸಂಶಯಗತಾ ದಹ್ಯಮಾನಾವಸುಂಧರಾ ॥ ೪ ॥
ತಲ್ಲಿಂಗಂ ತತ್ರಸಂಸ್ಥಾಪ್ಯ ಚಕ್ರುಸ್ತಾಂ ನರ್ಮದಾಂ ನದೀಂ ।
ತಜ್ಜಲಂ ನರ್ಮದಾರೂಪಂ ಲಿಂಗಂ ಚಾಮರಕಂಟಕಂ ॥ ೫ ॥

---

## ಕನ್ನಡದ ಅನುವಾದ

### ವೃಷಸ್ತುತಿನಾಮವರ್ಣನ

೧. ಗಾಲವನು ಹೇಳುತ್ತಾನೆ:—ಪೈಜವನ! ಒಂದು ಯೋಜನ ಉದ್ದವಾದ ಆ ಲಿಂಗವು ಬೀಳಲು ವ್ಯಥೆಗೊಂಡ ಸಾವಿರಾರು ಮಂದಿ ಋಷಿಗಳು ಅಲ್ಲಿಗೆ ಬಂದರು.

೨. ಅವರು ಎಲ್ಲೆಡೆಯಲ್ಲಿಯೂ ನೋಡಿದರು. ಆದರೆ ಭಯಗೊಂಡ ಮಹೇಶ್ವರನು ಅವರಿಗೆ ಗೋಚರನಾಗಲಿಲ್ಲ.

೩. ಅನೇಕ ಸಾವಿರ ವರ್ಷಗಳ ಕಾಲ ಸಂಗ್ರಹಿಸಿದ ವೀರ್ಯವು ಸಕಲ ಭೂಮಿಯನ್ನು ವ್ಯಾಪಿಸಿರುವುದನ್ನು ಆ ಋಷಿಗಳು ಕಂಡರು.

೪. ಆ ಲಿಂಗವು ರಕ್ತದಿಂದಲೂ, ನೀರಿನಿಂದಲೂ ಒದ್ದೆಯಾದುದನ್ನು ಆ ಬ್ರಾಹ್ಮಣರು ಕಂಡು ಸಂಶಯಗ್ರಸ್ತರಾದರು. ಭೂಮಿಯು ಸುಡಲ್ಪಡುತ್ತಿದ್ದಿತು.

೫. ಆ ಬ್ರಾಹ್ಮಣರು ಆ ಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿ ನರ್ಮದಾ ನದಿಯನ್ನು ರಚಿಸಿದರು. ಆ ನೀರು ನರ್ಮದಾಜಲವೂ, ಲಿಂಗವು ಅಮರಕಂಟಕವೂ ಆಯಿತು.

ನರಕಂ ವಾರಯತ್ಯೇತತ್ಸೇವಿತಂ ನರಕಾಽಪಹಂ ।
ಭೂತಗ್ರಹಾಶ್ಚ ಸರ್ವೇಽಪಿ ಯಾಸ್ಯಂತಿ ವಿಲಯಂ ಧ್ರುವಂ ॥ ೬ ॥
ತತ್ರ ಸ್ನಾತ್ವಾ ಜಲಂ ಪೀತ್ವಾ ಸಂತರ್ಪ್ಯ ಚ ಪಿತೄಂಸ್ತಥಾ ।
ಸರ್ವಾನ್ ಕಾಮಾನವಾಪ್ನೋತಿ ಮನುಷ್ಯೋ ಭುವಿ ದುರ್ಲಭಾನ್ ॥ ೭ ॥
ಲಿಂಗಾನಿ ನಾರ್ಮದೇಯಾನಿ ಪೂಜಯಿಷ್ಯಂತಿ ಯೇ ನರಾಃ ।
ತೇಷಾಂ ರುದ್ರಮಯೋ ದೇಹೋ ಭವಿಷ್ಯತಿ ನ ಸಂಶಯಃ ॥ ೮ ॥
ಚಾತುರ್ಮಾಸ್ಯೇ ವಿಶೇಷೇಣ ಲಿಂಗಪೂಜಾ ಮಹಾಫಲಾ ।
ಚಾತುರ್ಮಾಸ್ಯೇ ರುದ್ರಜಪಂ ಹರಪೂಜಾ ಶಿವೇ ರತಿಃ ॥ ೯ ॥
ಪಂಚಾಮೃತೇನ ಸ್ನಪನಂ ನ ತೇಷಾಂ ಗರ್ಭವೇದನಾ ।
ಯೇ ಕರಿಷ್ಯಂತಿ ಮಧುನಾ ಸೇಚನಂ ಲಿಂಗಮಸ್ತಕೇ ॥ ೧೦ ॥
ತೇಷಾಂ ದುಃಖಸಹಸ್ರಾಣಿ ಯಾಸ್ಯಂತಿ ವಿಲಯಂ ಧ್ರುವಂ ।
ದೀಪದಾನಂ ಕೃತಂ ಯೇನ ಚಾತುರ್ಮಾಸ್ಯೇ ಶಿವಾಗ್ರತಃ ॥ ೧೧ ॥
ಕುಲಕೋಟಿಂ ಸಮುದ್ಧೃತ್ಯ ಸ್ವೇಚ್ಛಯಾ ಶಿವಲೋಕಭಾಕ್ ।
ಚಂದನಾಗುರುಧೂಪೈಶ್ಚ ಸುಶ್ವೇತಕುಸುಮೈರಪಿ ॥ ೧೨ ॥
ನರ್ಮದಾ ಜಲಲಿಂಗಂ ಯೇ ಹ್ಯರ್ಚಯಿಷ್ಯಂತಿ ತೇ ಶಿವಾಃ ।
ಶಿಲಾ ಹರತ್ವಮಾಪನ್ನಾಃ ಪ್ರಾಣಿನಾಮಪಿ ಕಾ ಕಥಾ ॥ ೧೩ ॥

---

೬. ಇದು ಸೇವಿಸುವುದರಿಂದ ನರಕವನ್ನು ನಿವಾರಿಸುವುದು. ಸಕಲ ಭೂತ ಗ್ರಹಗಳೂ ನಾಶವಾಗುವುವು.

೭. ಅಲ್ಲಿ ಮಿಂದು ನೀರನ್ನು ಕುಡಿದು ಪಿತೃಗಳಿಗೆ ತರ್ಪಣ ಮಾಡಿದ ಮಾನವನು ಲೋಕದುರ್ಲಭವಾದ ಸಕಲೇಷ್ಟಾರ್ಥಗಳನ್ನು ಪಡೆಯುವನು.

೮. ನರ್ಮದಾ ನದಿಯ ಲಿಂಗಗಳನ್ನು ಪೂಜಿಸುವ ಮಾನವರ ದೇಹವು ನಿಶ್ಚಯವಾಗಿಯೂ ರುದ್ರಮಯವಾಗುವುವು.

೯–೧೩. ಚಾತುರ್ಮಾಸ್ಯದಲ್ಲಿ ಲಿಂಗಪೂಜೆಯು ಅತಿಶಯಫಲವನ್ನೀಯು ವುದು. ಈ ಚಾತುರ್ಮಾಸ್ಯದಲ್ಲಿ ರುದ್ರಜಪ, ಶಿವಪೂಜೆ, ಶಿವಭಕ್ತಿ, ಪಂಚಾಮೃತಾ ಭಿಷೇಕಗಳನ್ನು ಮಾಡುವವರಿಗೆ ಗರ್ಭವಾಸವುಂಟಾಗುವುದಿಲ್ಲ. ಲಿಂಗದ ತಲೆಯಲ್ಲಿ ಜೇನುತುಪ್ಪದಿಂದ ಅಭಿಷೇಕ ಮಾಡುವವರ ಅನೇಕ ದುಃಖಗಳು ನಾಶವಾಗುವುವು. ಚಾತುರ್ಮಾಸ್ಯದಲ್ಲಿ ಶಿವನ ಮುಂದೆ ದೀಪವನ್ನು ಹೊತ್ತಿಸುವವನು ಕೋಟಿ ಕುಲವನ್ನು ಉದ್ಧರಿಸಿ ಸ್ವೇಚ್ಛೆಯಿಂದ ಶಿವಲೋಕವನ್ನು ಸೇರುವನು. ಚಂದನ ದಿಂದಲೂ, ಆಗುರುಧೂಪಗಳಿಂದಲೂ, ಶ್ವೇತಕುಸುಮಗಳಿಂದಲೂ ನರ್ಮದಾಜಲ ಲಿಂಗವನ್ನು ಪೂಜಿಸುವವರು ಶಿವರೇ ಆಗುವರು. ಶಿಲೆಗಳೇ ಶಿವತ್ವವನ್ನು ಹೊಂದಿ ರುವುವು. ಪ್ರಾಣಿಗಳ ವಿಷಯವಿನ್ನೇನು.

ತತ್ಸಂಭೂತಂ ಮಹಾಲಿಂಗಂ ಜಲಧಾರಣಸಂಯುತಂ ।
ಪೂಜಯಿತ್ವಾ ವಿಧಾನೇನ ಚಾತುರ್ಮಾಸ್ಯೇ ಶಿವೋ ಭವೇತ್ ॥ ೧೪ ॥
ಚಾತುರ್ಮಾಸ್ಯೇ ಯೇ ಮನುಜಾ ನರ್ಮದಾಽಮರಕಂಟಕೇ ।
ತೀರ್ಥೇ ಸ್ನಾಸ್ಯಂತಿ ನಿಯತಾಸ್ತೇಷಾಂ ವಾಸಸ್ತ್ರಿವಿಷ್ಟಪೇ ॥ ೧೫ ॥

ಬ್ರಹ್ಮೋವಾಚ :—

ಇತ್ಯುಕ್ತ್ವಾ ತೇ ದ್ವಿಜಾಸ್ತತ್ರ ಸ್ಥಾಪ್ಯ ಲಿಂಗಂ ಯಥಾವಿಧಿ ।
ಅಮರಕಂಟಕತೀರ್ಥೇ ನರ್ಮದಾಂ ಚ ಮಹಾನದೀಂ ॥ ೧೬ ॥
ಪುನಶ್ಚಿಂತಾಪರಾ ಜಾತಾ ವಿಶ್ವಸ್ಯ ಕ್ಷೋಭಕಾರಣೇ ।
ಪದ್ಮಾಸನಗತಾಭೂತ್ವಾ ಪ್ರಾಣಾಯಾಮಪರಾಯಣಾಃ ॥ ೧೭ ॥
ಚಿಂತಯಾಮಾಸುರವ್ಯಗ್ರಂ ಹೃದಯಸ್ಥಂ ಮಹೇಶ್ವರಂ ।
ತತೋ ದೇವಾ ಮಹೇಂದ್ರಾದ್ಯಾಃ ಸಂಪ್ರಾಪ್ಯಾಽಮರಕಂಟಕಂ ॥ ೧೮ ॥
ಬ್ರಾಹ್ಮಣಾನಾಂ ಸ್ತುತಿಂ ಚಕ್ರುರ್ವಿನಯಾನತ ಕಂಧರಾಃ ।
ನಮೋಽಸ್ತು ವೋ ದ್ವಿಜಾತಿಭ್ಯೋ ಬ್ರಹ್ಮವಿದ್ಭ್ಯೋ ಮಹೇಶ್ವರಾಃ ॥ ೧೯ ॥
ಭೂಸುರೇಭ್ಯೋ ಗುರುಭ್ಯಶ್ಚ ವಿಮುಕ್ತೇಭ್ಯಶ್ಚ ಬಂಧನಾತ್ ।
ಯೂಯಂ ಗುಣತ್ರಯಾಽತೀತಾ ಗುಣರೂಪಾ ಗುಣಾಕರಾಃ ॥ ೨೦ ॥

---

೧೪. ನರ್ಮದಾನದಿಯ ಲಿಂಗವನ್ನು ಜಲಧಾರೆಯೊಡನೆ ವಿಧಿಯಿಂದ ಚಾತುರ್ಮಾಸ್ಯದಲ್ಲಿ ಪೂಜಿಸುವವನು ಶಿವನಾಗುವನು.

೧೫. ಚಾತುರ್ಮಾಸ್ಯದಲ್ಲಿ ನರ್ಮದಾನದಿಯ ಅಮರಕಂಟಕ ತೀರ್ಥದಲ್ಲಿ ಸ್ನಾನಮಾಡುವವರು ನಿಶ್ಚಯವಾಗಿಯೂ ಸುರಲೋಕದಲ್ಲಿ ವಾಸಿಸುವರು.

೧೬–೧೭. ಬ್ರಹ್ಮನು ಹೇಳುತ್ತಾನೆ:—ಆ ಬ್ರಾಹ್ಮಣರೆಲ್ಲ ಹೀಗೆಂದು ಹೇಳಿ ಆ ಅಮರಕಂಟಕ ತೀರ್ಥದಲ್ಲಿ ಲಿಂಗವನ್ನೂ, ನರ್ಮದಾ ನದಿಯನ್ನೂ ವಿಧಿಯಂತೆ ಸ್ಥಾಪಿಸಿ ಮರಳಿ ಪ್ರಪಂಚದ ಕ್ಷೋಭೆಯ ಕಾರಣದ ವಿಷಯದಲ್ಲಿ ಪದ್ಮಾಸನದಲ್ಲಿ ಕುಳಿತವರೂ, ಪ್ರಾಣಾಯಾಮನಿರತರೂ ಆಗಿ ಚಿಂತಿಸಿದರು.

೧೮–೨೧. ಅವರು ಹೃದಯದಲ್ಲಿರುವ ಮಹೇಶ್ವರನನ್ನು ಚಿತ್ತೈಕಾಗ್ರ್ಯದಿಂದ ಧ್ಯಾನಿಸಿದರು. ಬಳಿಕ ಇಂದ್ರಾದಿ ದೇವತೆಗಳು ಅಮರಕಂಟಕ ತೀರ್ಥಕ್ಕೆ ಬಂದು ವಿನಯದಿಂದ ತಲೆತಗ್ಗಿಸಿಕೊಂಡು ಬ್ರಾಹ್ಮಣರನ್ನು ಹೀಗೆ ಸ್ತೋತ್ರ ಮಾಡಿದರು. ಬ್ರಹ್ಮಜ್ಞಾನಿಗಳೂ, ಮಹೇಶ್ವರರೂ, ಭೂದೇವತೆಗಳೂ, ಗುರುಗಳೂ, ಬಂಧನರಹಿತರೂ ಆದ ಬ್ರಾಹ್ಮಣರಿಗೆ ನಮಸ್ಕಾರವು. ನೀವು ಸತ್ವಾದಿ ಗುಣತ್ರಯಾತೀತರೂ, ಗುಣರೂಪರೂ, ಗುಣಾಶ್ರಯರೂ, ಗುಣತ್ರಯ ರೂಪಭಾವಗಳಿಂದ ನೀರಿನ ಗುಳ್ಳೆಯಂತಿರುವ ಪ್ರಾಣವುಳ್ಳವರೂ ಆಗಿರುವಿರಿ.

ಗುಣತ್ರಯಯುಮಯ್ಯೈರ್ಭಾವ್ಯೈಃ ಸತತಂ ಪ್ರಾಣಬುದ್ಧ್ಯದಾಃ ।
ಯೇಷಾಂ ವಾಕ್ಯಜಲೇನೈವ ಪಾಪಿಷ್ಠಾ ಅಪಿ ಶುದ್ಧತಾಂ ।
ಪ್ರಯಾಂತಿ ಪಾಪಪುಂಜಾಶ್ಚ ಭಸ್ಮಸಾದ್ಯಾಂತಿ ಪಾಪಿನಾಂ ॥ ೨೧ ॥
ಶಸ್ತ್ರಂ ಲೋಹಮಯಂ ಯೇಷಾಂ ವಾಗೇವ ತತ್ಸಮನ್ವಿತಾಃ ।
ಪಾಪೈಃ ಪರಾಭಿಭೂತಾನಾಂ ತೇಷಾಂ ಲೋಕೋತ್ತರಂ ಬಲಂ ॥ ೨೨ ॥
ಕ್ಷಮಯಾ ಪೃಥಿವೀತುಲ್ಯಾಃ ಕೋಪೇ ವೈಶ್ವಾನರಪ್ರಭಾಃ ।
ಪಾತನೇಽನೇಕಶಕ್ತೀನಾಂ ಸಮರ್ಥಾ ಯೂಯಮೇವಹಿ ॥ ೨೩ ॥
ಸ್ವರ್ಗಾದೀನಾಂ ತಥಾ ಯಾನೇ ಭವಂತೋ ಗತಯೋ ಧ್ರುವಂ ॥ ೨೪ ॥
ಸತ್ಕರ್ಮಕಾರಕಾಶ್ಚೈವ ಸತ್ಕರ್ಮನಿರತಾಃ ಸದಾ ।
ಸತ್ಕರ್ಮಫಲದಾತಾರಃ ಸತ್ಕರ್ಮೇಭ್ಯೋ ಮುಮುಕ್ಷವಃ ॥ ೨೫ ॥
ಸಾವಿತ್ರೀಮಂತ್ರನಿರತಾ ಯೇ ಭವಂತೋಽಘನಾಶನಾಃ ।
ಆತ್ಮಾನಂ ಯಜಮಾನಂ ಚ ತಾರಯಂತಿ ನ ಸಂಶಯಃ ॥ ೨೬ ॥
ವಹ್ನಯಶ್ಚ ತಥಾ ವಿಪ್ರಾಸ್ತರ್ಪಿತಾಃ ಕಾರ್ಯಸಾಧಕಾಃ ।
ಚಾತುರ್ಮಾಸ್ಯೇ ವಿಶೇಷೇಣ ತೇಷಾಂ ಪೂಜಾ ಮಹಾಫಲಾ ॥ ೨೭ ॥
ಕೋಪಿತಾಃ ಸರ್ವದೇಹಸ್ಯ ನಾಶನಾಯ ಭವಂತಿ ಹಿ ।
ತಾವನ್ನವಜ್ರಮಿಂದ್ರಸ್ಯ ಶೂಲಂ ನೈವ ಪಿನಾಕಿನಃ ॥ ೨೮ ॥

---

ನಿಮ್ಮ ಮಾತಿನಿಂದಲೇ ಪಾಪಿಷ್ಠರು ಶುದ್ಧರಾಗುವರು. ಪಾಪಿಗಳ ಪಾಪಸಮೂಹವು ಸುಟ್ಟು ಬೂದಿಯಾಗುವುವು.

೨೨. ಬ್ರಾಹ್ಮಣರಿಗೆ ಮಾತೇ ಲೋಹದ ಶಸ್ತ್ರಗಳು. ಆ ಶಸ್ತ್ರಗಳಿಂದ ಕೂಡಿದ ಅವರಿಗೆ ಪಾಪವೆಂಬ ಶತ್ರುವಿನ ಆಕ್ರಮಣಕಾಲದಲ್ಲಿ ಅತ್ಯಂತಬಲವುಂಟಾಗುವುದು.

೨೩–೨೪. ಕ್ಷಮೆಯಿಂದ ಭೂಮಿಗೂ, ಕೋಪದಿಂದ ಬೆಂಕಿಗೂ ಸಮಾನರಾದ ನೀವೇ ಅನೇಕ ಶಕ್ತಿಗಳನ್ನು ನಾಶಗೊಳಿಸುವುದರಲ್ಲಿ ಸಮರ್ಥರು. ಸ್ವರ್ಗಾದಿಗಳಿಗೆ ಹೋಗಲು ನೀವೇ ಗತಿಯಾಗಿರುವಿರಿ.

೨೫–೨೬. ಸತ್ಕರ್ಮವನ್ನು ಮಾಡುವವರೂ, ಸತ್ಕರ್ಮನಿರತರೂ, ಸತ್ಕರ್ಮಫಲವನ್ನು ಕೊಡುವವರೂ, ಸತ್ಕರ್ಮಗಳಿಂದ ಮೋಕ್ಷವನ್ನು ಬಯಸುವವರೂ, ಗಾಯತ್ರೀ ಮಂತ್ರದಲ್ಲಿ ಆಸಕ್ತರೂ, ಪಾಪನಾಶಕರೂ ಆದ ನೀವು ನಿಮ್ಮನ್ನೂ, ಯಾಗ ಮಾಡುವವನನ್ನೂ ಉದ್ಧರಿಸುವಿರಿ.

೨೭. ವಹ್ನಿ ಮತ್ತು ಅಗ್ನಿಗಳು ಸಂತೋಷಗೊಳಿಸಲ್ಪಟ್ಟರೆ ಕಾರ್ಯವನ್ನು ಸಾಧಿಸಿಕೊಡುವರು. ಚಾತುರ್ಮಾಸ್ಯದಲ್ಲಿ ಅವರ ಪೂಜೆಯು ಅತಿಶಯಫಲವನ್ನುಂಟುಮಾಡುವುದು.

೨೮–೩೨. ಕೋಪಗೊಳಿಸಿದರೆ ಸಮಗ್ರ ದೇಹವನ್ನು ನಾಶಗೊಳಿಸುವರು. ಬ್ರಾಹ್ಮಣರ ಶಾಪವುಂಟಾಗುವವರಿಗೆ ಇಂದ್ರನ ವಜ್ರವೂ, ಶಿವನ ಶೂಲವೂ,

ದಂಡೋ ಯಮಸ್ಯ ತಾವನ್ನೋ ಯಾವಚ್ಛಾಪೋ ದ್ವಿಜೋದ್ಭವಃ ।
ಅಗ್ನಿನಾ ಜ್ವಾಲ್ಯತೇ ದೃಶ್ಯಂ ಶಾಪೋದ್ದಿಷ್ಟಾನಪಿ ಸ್ವಯಂ ॥ ೨೯ ॥
ಹಂತಿ ಜಾತಾನಜಾತಾಂಶ್ಚ ತಸ್ಮಾದ್ವಿಪ್ರಂ ನ ಕೋಪಯೇತ್ ।
ವಿಪ್ರಕೋಪಾಗ್ನಿನಾ ದಗ್ಧೋ ನರಕಾನ್ನೈವ ಮುಚ್ಯತೇ ॥ ೩೦ ॥
ಶಸ್ತ್ರಕ್ಷತೋಽಪಿ ನರಕಾನ್ಮುಚ್ಯತೇನಾತ್ರಸಂಶಯಃ ।
ದೇವಾನಾಂ ಮಧುಧಾನ್ಯಾನಾಂ ಸಾಮರ್ಥ್ಯಂ ಭೇದನೇ ನ ಹಿ ॥ ೩೧ ॥
ವಾಙ್ಮಾತ್ರೇಣ ಹಿ ವಿಪ್ರಸ್ಯ ಭಿದ್ಯತೇ ಸಕಲಂ ಜಗತ್ ।
ತೇ ಯೂಯಂ ಗುರವೋಽಸ್ಮಾಕಂ ವಿಶ್ವಕಾರಣಕಾರಕಾಃ ।
ಪ್ರಸಾದಪರಮಾ ನಿತ್ಯಂ ಭವಂತು ಭುವನೇಶ್ವರಾಃ ॥ ೩೨ ॥
ಈಶ್ವರೇಣ ವಿನಾ ಸರ್ವೇ ವಯಂ ಲೋಕಾಶ್ಚ ದುಃಖಿತಾಃ ।
ತತ್ಕಥ್ಯತಾಂ ಸ ಭಗವಾನ್ ಕುತ್ರಾಸ್ತೇ ಪರಮೇಶ್ವರಃ ॥ ೩೩ ॥

ಗಾಲವ ಉವಾಚ:—

ಜ್ಞಾತ್ವಾ ಮುನಿಭಯತ್ರಸ್ತಂ ದೇವೇಶಂ ಶೂಲಪಾಣಿನಂ ॥ ೩೪ ॥
ಸುರಭೀ ಗರ್ಭಸಂಭೂತಂ ದೇವಾನೂಚುರ್ಮಹರ್ಷಯಃ ।
ಸ್ವಾಗತಂ ದೇವದೇವೇಭ್ಯೋ ಜ್ಞಾತೋ ವೈ ಸ ಮಹೇಶ್ವರಃ ॥ ೩೫ ॥

---

ಯಮನ ದಂಡವೂ ಕಾರ್ಯವನ್ನು ಮಾಡಲು ಸಮರ್ಥವಾಗುವುದಿಲ್ಲ. ಅಗ್ನಿಯು ಕಾಣುತ್ತಿರುವುದನ್ನು ಮಾತ್ರ ಸುಡುವುದು. ಬ್ರಾಹ್ಮಣನು ಶಾಪೋದ್ದಿಷ್ಟರನ್ನೂ, ಹುಟ್ಟಿದವರನ್ನೂ, ಹುಟ್ಟದಿರುವವರನ್ನೂ ಕೊಲ್ಲುವನು. ಆದುದರಿಂದ ಬ್ರಾಹ್ಮಣನನ್ನು ಕೋಪಗೊಳಿಸಬಾರದು. ಬ್ರಾಹ್ಮಣ ಕೋಪಾಗ್ನಿಯಿಂದ ದಗ್ಧನಾದವನು ನರಕಮುಕ್ತನಾಗುವುದಿಲ್ಲ. ಶಸ್ತ್ರದಿಂದ ಗಾಯಗೊಂಡವನು ನರಕಮುಕ್ತನಾಗುವನು. ದೇವತೆಗಳಿಗೂ, ಮಧುಧಾನ್ಯಗಳಿಗೂ ಭೇದಿಸುವುದರಲ್ಲಿ ಶಕ್ತಿಯಿಲ್ಲ. ಬ್ರಾಹ್ಮಣನ ಮಾತಿನಿಂದಲೇ ಸಕಲ ಜಗತ್ತು ಭಿನ್ನವಾಗುವುದು. ಪ್ರಪಂಚದ ಕಾರಣವನ್ನು ನಿರ್ಮಿಸುವ ಲೋಕದೊಡೆಯರಾದ ನೀವು ನಮಗೆ ಗುರುಗಳು. ನಮ್ಮಲ್ಲಿ ಅನುಗ್ರಹಮಾಡಲು ಆಸಕ್ತರಾಗಿರಿ.

೩೩. ಈಶ್ವರನಿಲ್ಲದೆ ನಾವೂ, ಸಕಲ ಲೋಕಗಳೂ ದುಃಖಗೊಂಡಿದ್ದೇವೆ. ಆದುದರಿಂದ ಆ ಪರಮೇಶ್ವರನು ಎಲ್ಲಿದ್ದಾನೆ? ಹೇಳಿರಿ.

೩೪–೩೫. ಗಾಲವನು ಹೇಳುತ್ತಾನೆ:—ಶಂಕರನು ಮುನಿಗಳ ಭಯದಿಂದ ಕಾಮಧೇನುವಿನ ಗರ್ಭದಲ್ಲಿ ಅಡಗಿರುವುದನ್ನರಿತು ಮಹರ್ಷಿಗಳು ದೇವತೆಗಳನ್ನು ಕುರಿತು ಇಂತೆಂದರು. ದೇವತೆಗಳೆ! ನಿಮಗೆ ಸುಖಾಗಮನವಾಗಲಿ. ಆ ಮಹೇಶ್ವರ

ತತ್ರ ಗಚ್ಛಂತು ದೇವೇಶಾ ಯತ್ರ ದೇವಃ ಸನಾತನಃ ।
ಇತ್ಯುಕ್ತ್ವಾ ತೇ ಮಹಾತ್ಮಾನಃ ಸಹದೇವೈರ್ಯಯುಸ್ತದಾ ॥ ೩೭ ॥
ಗೋಲೋಕಂ ದೇವಮಾರ್ಗೇಣ ಯತ್ರಪಾಯಸಕರ್ದಮಾಃ ।
ಘೃತನದ್ಯೋ ಮಧುಹ್ರದಾ ನದೀನಾಂ ಯತ್ರ ಸಂಘಶಃ ॥ ೩೮ ॥
ಪೂರ್ವಜಾನಾಂ ಗಣಾಃ ಸರ್ವೇ ದಧಿಪೀಯೂಷಪಾಣಯಃ ।
ಮರೀಚಿಪಾಃ ಸೋಮಪಾಶ್ಚ ಸಿದ್ಧಸಂಘಾಸ್ತಥಾ ಪರೇ ॥ ೩೮ ॥
ಘೃತಪಾಶ್ಚೈವ ಸಾಧ್ಯಾಶ್ಚ ಯತ್ರ ದೇವಾಃ ಸನಾತನಾಃ ।
ತೇ ತತ್ರ ಗತ್ವಾ ಮುನಯೋ ದದೃಶುಃ ಸುರಭೀಸುತಂ ॥ ೩೯ ॥
ತೇಜಸಾ ಭಾಸ್ಕರಂ ಚೈವ ನೀಲನಾಮೇತಿ ವಿಶ್ರುತಂ ।
ಇತಸ್ತತೋಽಭಿಧಾವಂತಂ ಗವಾಂ ಸಂಘಾತಮಧ್ಯಗಂ ॥ ೪೦ ॥
ನಂದಾ ಸುಮನಸಾ ಚೈವ ಸುರೂಪಾ ಚ ಸುಶೀಲಕಾ ।
ಕಾಮಿನೀ ನಂದಿನೀಚೈವ ಮೇಧ್ಯಾ ಚೈವ ಹಿರಣ್ಯದಾ ॥ ೪೧ ॥
ಧನದಾ ಧರ್ಮದಾ ಚೈವ ನರ್ಮದಾ ಸಕಲಪ್ರಿಯಾ ।
ವಾಮನಾಲಂಬಿಕಾ ಕೃಷ್ಣಾ ದೀರ್ಘಶೃಂಗಾ ಸುಪಿಚ್ಛಿಕಾ ॥ ೪೨ ॥
ತಾರಾ ತರೇಯಿಕಾ ಶಾಂತಾ ದುರ್ವಿಷಹ್ಯಾ ಮನೋರಮಾ ।
ಸುನಾಸಾ ದೀರ್ಘನಾಸಾ ಚ ಗೌರಾ ಗೌರಮುಖೀ ಹಯಾ ॥ ೪೩ ॥
ಹರಿದ್ರವರ್ಣಾ ನೀಲಾ ಚ ಶಂಖಿನೀ ಪಂಚವರ್ಣಕಾ ।
ವಿನತಾಭಿನತಾ ಚೈವ ಭಿನ್ನವರ್ಣಾ ಸುಪತ್ರಿಕಾ ॥ ೪೪ ॥

---

ನನ್ನು ತಿಳಿದೆವು. ಅವನಿರುವ ಸ್ಥಳಕ್ಕೆ ನೀವು ಹೋಗಿರಿ. ಹೀಗೆ ನುಡಿದು ಮುನಿಗಳು ದೇವತೆಗಳೊಡನೆ ಹೊರಟರು.

೩೭–೪೦. ಅವರು ಪಾಯಸದ ಕೆಸರೂ, ತುಪ್ಪದ ನದಿಗಳೂ, ಜೇನಿನ ಮಡುಗಳೂ, ಮೊಸರು ಅಮೃತಗಳನ್ನು ಕೈಯಲ್ಲಿ ಹಿಡಿದಿರುವ ಪಿತೃಗಣಗಳೂ, ಮರೀಚಿಪರೂ, ಸೋಮಪರೂ, ಸಿದ್ಧರ ಸಮೂಹವೂ, ಘೃತಪರೂ, ಸಾಧ್ಯರೂ, ಸನಾತನ ದೇವತೆಗಳೂ ಇರುವ ಗೋಲೋಕಕ್ಕೆ ಹೋಗಿ ಅಲ್ಲಿ ತೇಜಸ್ಸಿನಿಂದ ಸೂರ್ಯನಂತಿರುವವನೂ, ಗೋವುಗಳ ನಡುವೆ ಅತ್ತ ಇತ್ತ ಓಡಾಡುತ್ತಿರುವವನೂ ಆದ ನೀಲನೆಂಬ ಕಾಮಧೇನುವಿನ ಕರುವನ್ನು ನೋಡಿದರು.

೪೧–೪೭. ನಂದಾ, ಸುಮನಸಾ, ಸುರೂಪಾ, ಸುಶೀಲಕಾ, ಕಾಮಿನೀ, ನಂದಿನೀ, ಮೇಧ್ಯಾ, ಹಿರಣ್ಯದಾ, ಧನದಾ, ಧರ್ಮದಾ, ನರ್ಮದಾ, ಸಕಲ ಪ್ರಿಯಾ, ವಾಮನಾ, ಆಲಂಬಿಕಾ, ಕೃಷ್ಣಾ, ದೀರ್ಘಶೃಂಗಾ, ಸುಪಿಚ್ಛಿಕಾ, ತಾರಾ, ತರೇಯಿಕಾ, ಶಾಂತಾ, ದುರ್ವಿಷಹ್ಯಾ, ಮನೋರಮಾ, ಸುನಾಸಾ, ದೀರ್ಘ ನಾಸಾ, ಗೌರಾ, ಗೌರಮುಖೀ, ಹರಿದ್ರವರ್ಣಾ, ನೀಲಾ, ಶಂಖಿನೀ, ಪಂಚ

ಜಯಾಽರುಣಾ ಚ ಕುಂಡೋಘ್ನೀ ಸುದತೀ ಚಾರುಚಂಪಕಾ ।
ಏತಾಸಾಂ ಮಧ್ಯಗಂ ನೀಲಂ ದೃಷ್ಟ್ವಾ ತಾ ಮುನಿದೇವತಾಃ ॥ ೪೫ ॥
ವಿಚರಂತಿ ಸುರೂಪಂ ತಂ ಸಂಜಾತವಿಸ್ಮಯೋಽಸ್ಮ್ಯಖಿಲಾಃ ।
ಮುನೀಶ್ವರಾಃ ಕೃಪಾವಿಷ್ಟಾ ಇಂದ್ರಾದ್ಯಾ ಹೃಷ್ಟಮಾನಸಾಃ ।
ಸ್ತುತಿಮಾರೇಭಿರೇ ಕರ್ತುಂ ತೇಜಸಾ ತಸ್ಯ ತೋಷಿತಾಃ ॥ ೪೬ ॥

ಶೂದ್ರ ಉವಾಚ :—

ಕಥಂ ನೀಲೇತಿ ನಾಮಾಽಸೌ ಜಾತೋಽಯಮದ್ಭುತಾಕೃತಿಃ ।
ಕಿಮಸ್ತುವನ್ ಪ್ರಸನ್ನಾಸ್ತೇ ಬ್ರಾಹ್ಮಣಾ ವಿಶ್ವಕಾರಣಂ ॥ ೪೭ ॥

ಗಾಲವ ಉವಾಚ :—

ಲೋಹಿತೋ ಯಸ್ತು ವರ್ಣೇನ ಮುಖೇ ಪುಚ್ಛೇ ಚ ಪಾಂಡುರಃ ॥ ೪೮ ॥
ಶ್ವೇತಃ ಖುರವಿಷಾಣೇಷು ಸ ನೀಲೋ ವೃಷಭಃ ಸ್ಮೃತಃ ॥
ಚತುಷ್ಪಾದೋ ಧರ್ಮರೂಪೋ ನೀಲಲೋಹಿತಚಿಹ್ನಕಃ ॥ ೪೯ ॥
ಕಪಿಲಃ ಖುರಚಿಹ್ನೇಷು ಸ ನೀಲೋ ವೃಷಭಃ ಸ್ಮೃತಃ ।
ಯೋಽಸೌ ಮಹೇಶ್ವರೋ ದೇವೋ ವೃಷಲ್ವಾಽಪಿ ಸ ಏವ ಹಿ ॥ ೫೦ ॥
ಚತುಷ್ಪಾದೋ ಧರ್ಮರೂಪೋ ನೀಲಃ ಪಂಚಮುಖೋ ಹರಃ ।
ಯಸ್ಯ ಸಂದರ್ಶನಾದೇವ ವಾಜಪೇಯಫಲಂ ಲಭೇತ್ ॥ ೫೧ ॥

---

ವರ್ಣಕಾ, ವಿನತಾ, ಅಭಿನತಾ, ಭಿನ್ನವರ್ಣಾ, ಸುಪತ್ರಿಕಾ, ಜಯಾ, ಅರುಣಾ, ಕುಂಡೋಘ್ನೀ, ಸುದತೀ, ಚಾರುಚಂಪಕಾ ಎಂಬ ಧೇನುಗಳ ನಡುವೆ ಸಂಚರಿಸುತ್ತಿರುವ ಸುಂದರನಾದ ಆ ನೀಲವೃಷಭವನ್ನು ನೋಡಿ ಆಶ್ಚರ್ಯಗೊಂಡ ಮುನಿವರ್ಯರೂ, ಕರುಣೆಗೊಂಡ ಇಂದ್ರಾದಿದೇವತೆಗಳೂ ಅವನ ತೇಜಸ್ಸಿನಿಂದ ಸಂತೋಷಗೊಂಡವರಾಗಿ ಸ್ತುತಿಸಲು ಆರಂಭಿಸಿದರು.

೪೭. ಶೂದ್ರನು ಹೇಳುತ್ತಾನೆ:—ಅದ್ಭುತವಾದ ಆಕಾರವುಳ್ಳ ವೃಷಭನು ನೀಲನೆಂದು ಹೆಸರನ್ನು ಹೇಗೆ ಪಡೆದನು? ಪ್ರಸನ್ನರಾದ ಆ ಬ್ರಾಹ್ಮಣರು ಜಗತ್ಕಾರಣನಾದ ಆ ಶಂಕರನನ್ನು ಹೇಗೆ ಸ್ತುತಿಸಿದರು?

೪೮–೫೧. ಗಾಲವನು ಹೇಳುತ್ತಾನೆ:—ಮೈಯೆಲ್ಲ ನೀಲವರ್ಣವೂ, ಮುಖ ಮತ್ತು ಬಾಲದಲ್ಲಿ ಬೆಳ್ಳಗಿರುವುದೂ, ಗೊರಸು, ಕೊಂಬುಗಳಲ್ಲಿ ಶ್ವೇತವರ್ಣವೂ ಆಗಿರುವ ವೃಷಭವು ನೀಲವೆನ್ನಿಸಿಕೊಳ್ಳುವುದು. ನಾಲ್ಕು ಕಾಲುಳ್ಳುದೂ, ಧರ್ಮರೂಪವೂ, ನೀಲ ಮತ್ತು ಕೆಂಪುವರ್ಣಗಳುಳ್ಳುದೂ, ಗೊರಸುಗಳಲ್ಲಿ ಕಪಿಲವರ್ಣವೂ ಆಗಿರುವುದು ನೀಲವೆನ್ನಿಸಿಕೊಳ್ಳುವುದು. ಪಂಚಮುಖವುಳ್ಳ ಮಹೇಶ್ವರನೇ ನಾಲ್ಕುಪಾದವುಳ್ಳ ಧರ್ಮ ನೀಲವೃಷಭವೆನ್ನಿಸಿಕೊಳ್ಳುವನು. ಇವನನ್ನು ನೋಡುವುದರಿಂದಲೇ ವಾಜಪೇಯಯಾಗದ ಫಲವು ದೊರೆಯುವುದು.

ನೀಲೇ ಚ ಪೂಜಿತೇ ಯಸ್ಮಿನ್ ಪೂಜಿತಂ ಸಕಲಂ ಜಗತ್ ।
ಸ್ನಿಗ್ಧಗ್ರಾಸಪ್ರದಾನೇನ ಜಗದಾಪ್ಯಾಯಿತಂ ಭವೇತ್ ॥ ೫೨ ॥
ಯಸ್ಯ ದೇಹೇ ಸದಾ ಶ್ರೀಮಾನ್ ವಿಶ್ವವ್ಯಾಪೀ ಜನಾರ್ದನಃ ।
ನಿತ್ಯಮರ್ಚಯತೇ ಯೋಽಸೌ ವೇದಮಂತ್ರೈಃ ಸನಾತನೈಃ ॥ ೫೩ ॥

ಋಷಯ ಊಚುಃ:—

ತ್ವಂ ದೇವಃ ಸರ್ವಗೋಪ್ತೄಣಾಂ ವಿಶ್ವಗೋಪ್ತಾ ಸನಾತನಃ ।
ವಿಘ್ನಹರ್ತಾ ಜ್ಞಾನದಶ್ಚ ಧರ್ಮರೂಪಶ್ಚ ಮೋಕ್ಷದಃ ॥ ೫೪ ॥
ತ್ವಮೇವ ಧನದಃ ಶ್ರೀದಃ ಸರ್ವವ್ಯಾಧಿ ನಿಷೂದನಃ ।
ಜಗತಾಂ ಶರ್ಮಕರಣೇ ಪ್ರವೃತ್ತಃ ಕನಕಪ್ರದಃ ॥ ೫೫ ॥
ತೇಜಸಾಂ ಧಾಮ ಸರ್ವೇಷಾಂ ಸೌರಭೇಯ ಮಹಾಬಲ ।
ಶೃಂಗಾಗ್ರೇ ಧೃತಕೈಲಾಸಃ ಪಾರ್ವತೀಸಹಿತಸ್ತ್ವಯಾ ॥ ೫೬ ॥
ವೇದಸ್ತುತ್ಯೋ ವೇದಮಯೋ ವೇದಾತ್ಮಾ ವೇದವಿತ್ತಮಃ ।
ವೇದವೇದ್ಯೋ ವೇದಯಾನೋ ವೇದರೂಪೋ ಗುಣಾಕರಃ ॥ ೫೭ ॥
ಗುಣತ್ರಯೇಭ್ಯೋಽಪಿ ಪರೋ ಯಾಥಾತ್ಮ್ಯಂ ವೇದ ಕಸ್ತವ ।
ವೃಷಸ್ತ್ವಂ ಭಗವಾನ್ ದೇವ ಯಸ್ತುಭ್ಯಂ ಕುರುತೇ ತ್ವಘಂ ॥ ೫೮ ॥

---

೫೨. ಈ ನೀಲವೃಷಭವನ್ನು ಪೂಜಿಸುವುದರಿಂದ ಸಕಲ ಪ್ರಪಂಚವು ಪೂಜಿಸಲ್ಪಟ್ಟಂತಾಗುವುದು. ಇದಕ್ಕೆ ಮೃದುವಾದ ಹುಲ್ಲನ್ನು ಕೊಡುವುದರಿಂದ ಜಗತ್ತು ಸಂತೋಷಗೊಳ್ಳುವುದು.

೫೩. ಇವನ ದೇಹದಲ್ಲಿ ನೆಲೆಸಿರುವ ವಿಶ್ವವ್ಯಾಪಿಯಾದ ವಿಷ್ಣುವು ಸನಾತನ ವೇದಮಂತ್ರಗಳಿಂದ ಇವನನ್ನು ನಿತ್ಯವೂ ಅರ್ಚಿಸುತ್ತಾನೆ.

೫೪. ಋಷಿಗಳು ಹೇಳುತ್ತಾರೆ:—ನೀನು ಸಮಸ್ತ ರಕ್ಷಕರಿಗೂ ದೇವತೆಯೂ, ಪ್ರಪಂಚರಕ್ಷಕನೂ, ಸನಾತನನೂ, ವಿಘ್ನನಾಶಕನೂ, ಜ್ಞಾನದಾತನೂ, ಧರ್ಮರೂಪನೂ, ಮೋಕ್ಷದಾಯಕನೂ ಆಗಿರುವೆ.

೫೫. ನೀನೇ ಧನದನೂ, ಶ್ರೀದನೂ, ಸಮಸ್ತ ರೋಗನಾಶಕನೂ, ಜಗತ್ತುಗಳಿಗೆ ಸುಖವನ್ನುಂಟುಮಾಡುವವನೂ, ಕನಕದಾತನೂ ಆಗಿರುವೆ.

೫೬. ಸಮಸ್ತ ತೇಜಸ್ಸುಗಳಿಗೆ ಆಶ್ರಯನಾದ ಎಲೈ ಕಾಮಧೇನು ಸುತನೆ! ನೀನು ಕೊಂಬುಗಳ ಕೊನೆಗಳಿಂದ ಪಾರ್ವತಿಯೊಡನೆ ಕೈಲಾಸಪರ್ವತವನ್ನು ಹೊತ್ತಿರುವೆ.

೫೭–೬೨. ವೇದಸ್ತುತ್ಯನೂ, ವೇದರೂಪನೂ, ವೇದಾತ್ಮನೂ, ವೇದಜ್ಞನೂ, ವೇದಜ್ಞೇಯನೂ, ವೇದವಾಹನನೂ, ವೇದರೂಪನೂ, ಗುಣಾಶ್ರಯನೂ, ಗುಣತ್ರಯಹೀನನೂ ಆದ ನಿನ್ನ ತತ್ವವಿಷಯವನ್ನು ಯಾರು ತಿಳಿದಿರುವರು?

ವೃಷಲಃ ಸ ತು ವಿಜ್ಞೇಯೋ ರೌರವಾದಿಷು ಪಚ್ಯತೇ ।
ಪದಾ ಸ್ಪೃಷ್ಟಃ ಸ ತು ನರೋ ನರಕಾದಿಷು ಯಾತನಾಃ ॥ ೫೯ ॥
ಸೇವತೇ ಪಾಪನಿಚಯೈರ್ನಿಗಾಢಪ್ರಾಯಬಂಧನೈಃ ।
ಕ್ಷುತ್ಕ್ಷಾಮಂ ಚ ತೃಷಾಕ್ರಾಂತಂ ಮಹಾಭಾರಸಮನ್ವಿತಂ ॥ ೬೦ ॥
ನಿರ್ದಯಾ ಯೇ ಪ್ರಶೋಷ್ಯಂತಿ ಮತಿಸ್ತೇಷಾಂ ನ ಶಾಶ್ವತೀ ।
ಚತುರ್ಭಿಃ ಸಹಿತಂ ಮತ್ರ್ಯಾ ವಿವಾಹವಿಧಿನಾತು ಯೇ ॥ ೬೧ ॥
ವಿವಾಹಂ ನೀಲರೂಪಸ್ಯ ಯೇ ಕರಿಷ್ಯಂತಿ ಮಾನವಾಃ ।
ಪಿತೄನುದ್ದಿಶ್ಯ ತೇಷಾಂ ವೈ ಕುಲೇ ನೈವಾಽಸ್ತಿ ನಾರಕೀ ॥ ೬೨ ॥
ತ್ವಂ ಗತಿಃ ಸರ್ವಲೋಕಾನಾಂ ತ್ವಂ ಪಿತಾ ಪರಮೇಶ್ವರಃ ।
ತ್ವಯಾ ವಿನಾ ಜಗತ್ಸರ್ವಂ ತತ್ಕ್ಷಣಾದೇವ ನಶ್ಯತಿ ॥ ೬೩ ॥
ಪರಾ ಚೈವತು ಪಶ್ಯಂತೀ ಮಧ್ಯಮಾ ವೈಖರೀ ತಥಾ ।
ಚತುರ್ವಿಧಾನಾಂ ವಚಸಾಮೀಶ್ವರಂ ತ್ವಾಂ ವಿದುರ್ಬುಧಾಃ ॥ ೬೪ ॥
ಚತುಃಶೃಂಗಂ ಚತುಷ್ಪಾದಂ ದ್ವಿಶೀರ್ಷಂ ಸಪ್ತಹಸ್ತಕಂ ।
ತ್ರಿಧಾಬದ್ಧಂ ಧರ್ಮಮಯಂ ತ್ವಾಮೇವ ವೃಷಭಂ ವಿದುಃ ॥ ೬೫ ॥

---

ಸ್ವಾಮಿ! ನೀನು ವೃಷನಾಗಿರುವೆ. ನಿನಗೆ ಅಹಿತವನ್ನುಂಟುಮಾಡುವವನು ವೃಷಲನು. ಅವನು ರೌರವಾದಿ ನರಕಗಳಲ್ಲಿ ವ್ಯಥೆಗೊಳ್ಳುವನು. ನಿನ್ನನ್ನು ಕಾಲಿನಿಂದ ತುಳಿದು ಗಾಢವಾಗಿ ಕಟ್ಟಿ ಪಾಪವನ್ನೆಸಗಿದವನು ಆ ಪಾಪಗಳಿಂದ ನರಕಗಳಲ್ಲಿ ಯಾತನೆಗಳನ್ನು ಅನುಭವಿಸುವನು. ಹಸಿವಿನಿಂದ ಕೃಶನೂ, ಬಾಯಾರಿಕೆಗೊಂಡವನೂ, ದೊಡ್ಡ ಹೊರೆಯನ್ನು ಹೊತ್ತಿರುವವನೂ ಆದ ನಿನ್ನನ್ನು ನಿರ್ದಯರಾಗಿ ಪೀಡಿಸುವವರಿಗೆ ಶಾಶ್ವತಬುದ್ಧಿಯುಂಟಾಗುವುದಿಲ್ಲ. ಪಿತೃಗಳನ್ನುದ್ದೇಶಿಸಿ ನೀಲರೂಪನಾದ ನಿನಗೆ ನಾಲ್ಕು ಗೋವುಗಳೊಡನೆ ವಿವಾಹಮಾಡಿ ಉತ್ಸರ್ಗಮಾಡುವವನ ಕುಲದಲ್ಲಿ ನರಕವನ್ನನುಭವಿಸುವವರು ಜನಿಸುವುದಿಲ್ಲ.

೬೩. ನೀನು ಸಕಲ ಲೋಕಗಳಿಗೆ ಗತಿಯೂ, ತಂದೆಯೂ, ಈಶ್ವರನೂ ಆಗಿರುವೆ. ನೀನಿಲ್ಲದಿದ್ದರೆ ಸಕಲ ಜಗತ್ತುಗಳೂ ಕೂಡಲೆ ನಾಶವಾಗುವುವು.

೬೪. ಜ್ಞಾನಿಗಳು ನೀನು ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕುವಿಧ ವಾಕ್ಕುಗಳಿಗೆ ಒಡೆಯನೆಂದು ತಿಳಿದಿರುತ್ತಾರೆ.

೬೫. ನಾಲ್ಕು ಕೊಂಬುಗಳುಳ್ಳವನೂ, ಎರಡು ತಲೆಯುಳ್ಳವನೂ, ಏಳು ಕೈಯುಳ್ಳವನೂ, ತ್ರಿವಿಧವಾಗಿ ಬದ್ಧನೂ, ಧರ್ಮರೂಪನೂ ಆದ ನಿನ್ನನ್ನೇ ವೃಷಭನೆಂದು ತಿಳಿದಿರುತ್ತಾರೆ.

ತೃಪ್ತಿದಂ ಸರ್ವಭೂತಾನಾಂ ವಿಶ್ವವ್ಯಾಪಕಮೋಜಸಾ ।
ಬ್ರಹ್ಮಧರ್ಮಮಯಂ ನಿತ್ಯಂ ತ್ವಾಮಾತ್ಮಾನಂ ವಿದುರ್ಜನಾಃ ॥ ೬೬ ॥
ಅಚ್ಛೇದ್ಯಸ್ತ್ವಮಭೇದ್ಯಸ್ತ್ವಮಪ್ರಮೇಯೋ ಮಹಾ ಯಶಾಃ ।
ಅಶೋಚ್ಯಸ್ತ್ವಮದಾಹ್ಯೋಽಸಿ ವಿದುಃ ಪೌರಾಣಿಕಾ ಜನಾಃ ॥ ೬೭ ॥
ತ್ವದಾಧಾರಮಿದಂ ಸರ್ವಂ ತ್ವದಾಧಾರಮಿದಂ ಜಗತ್ ।
ತ್ವದಾಧಾರಾಶ್ಚ ದೇವಾಶ್ಚ ತ್ವದಾಧಾರಂ ತದಾಮೃತಂ ॥ ೬೮ ॥
ಜೀವರೂಪೇಣ ಲೋಕಾಂಸ್ತ್ರೀನ್ವ್ಯಾಪ್ಯ ತಿಷ್ಠಸಿ ನಿತ್ಯದಾ ।
ಏವಂ ಸ ಸಂಸ್ತುತೋ ನೀಲೋ ವಿಪ್ರೈಸ್ತೈಃ ಸೋಮಪಾಯಿಭಿಃ ॥ ೬೯ ॥
ಪ್ರಸನ್ನವದನೋ ಭೂತ್ವಾ ವಿಪ್ರಾನ್ ಪ್ರಣತಿತತ್ಪರಃ ।
ಪುನರೇವ ವಚಃ ಪ್ರೋಚುರ್ವಿಪ್ರಾಃ ಕೃತ ಶಿವಾಗಸಃ ॥ ೭೦ ॥
ವರಂ ದದುರ್ಮಹೇಶಸ್ಯ ನೀಲರೂಪಸ್ಯ ಧರ್ಮತಃ ।
ಏಕಾದಶಾಽಹೇ ಪ್ರೇತಸ್ಯ ಯಸ್ಯ ನೋತ್ಸೃಜ್ಯತೇ ವೃಷಃ ॥ ೭೧ ॥
ಪ್ರೇತತ್ವಂ ಸುಸ್ಥಿರಂ ತಸ್ಯ ದತ್ತೈಃ ಶ್ರಾದ್ಧಶತೈರಪಿ ।
ಪುನರೇವ ಸುಸರ್ಪಂತಂ ದೃಷ್ಟ್ವಾ ನೀಲಂ ಮಹಾವೃಷಂ ॥ ೭೨ ॥

---

೬೬. ನಿನ್ನನ್ನು ಸಕಲ ಪ್ರಾಣಿಗಳಿಗೆ ತೃಪ್ತಿಯನ್ನುಂಟುಮಾಡುವವನೂ, ತೇಜಸ್ಸಿನಿಂದ ಪ್ರಪಂಚವನ್ನು ವ್ಯಾಪಿಸಿರುವವನೂ, ಧರ್ಮಮಯನೂ, ನಿತ್ಯನೂ ಆದ ಬ್ರಹ್ಮನನ್ನಾಗಿ ತಿಳಿದಿರುತ್ತಾರೆ.

೬೭. ಪೌರಾಣಿಕರು ನಿನ್ನನ್ನು ಭೇದಿಸಲೂ, ತಿಳಿಯಲೂ ಅಶಕ್ಯನನ್ನಾಗಿಯೂ ಅತಿಶಯ ಯಶಸ್ಸುಳ್ಳವನನ್ನಾಗಿಯೂ, ದುಃಖಗೊಳಿಸಲೂ, ದಹಿಸಲೂ ಅಶಕ್ಯನನ್ನಾಗಿಯೂ ತಿಳಿಯುತ್ತಾರೆ.

೬೮. ಈ ಎಲ್ಲ ವಸ್ತುಗಳೂ, ಜಗತ್ತೂ, ದೇವತೆಗಳೂ, ಮೋಕ್ಷವೂ ನಿನ್ನನ್ನು ಆಶ್ರಯಿಸಿರುವುವು.

೬೯–೭೦. ನೀನು ಯಾವಾಗಲೂ ಜೀವರೂಪದಿಂದ ಮೂರು ಲೋಕಗಳನ್ನು ವ್ಯಾಪಿಸಿರುವೆ. ಸೋಮಪಾನಮಾಡಿದ ಆ ಬ್ರಾಹ್ಮಣರು ಹೀಗೆ ಸ್ತುತಿಸಲು ನೀಲನು ಪ್ರಸನ್ನಮುಖನಾಗಿ ಬ್ರಾಹ್ಮಣರಿಗೆ ವಂದಿಸಿದನು. ಅವನಲ್ಲಿ ಅಪರಾಧ ಮಾಡಿದ ಬ್ರಾಹ್ಮಣರು ಮರಳಿ ಇಂತೆಂದರು.

೭೧–೭೪. ಮತ್ತು ನೀಲರೂಪನಾದ ಆ ಶಿವನಿಗೆ ಹೀಗೆ ವರವನ್ನು ಕೊಟ್ಟರು. ಯಾವ ಪ್ರೇತನಿಗೆ ಹನ್ನೊಂದನೆಯ ದಿನ ವೃಷೋತ್ಸರ್ಗ ಮಾಡುವುದಿಲ್ಲವೋ, ಅವನಿಗೆ ಅನೇಕ ಶ್ರಾದ್ಧಗಳನ್ನು ಮಾಡಿದರೂ ಪ್ರೇತತ್ವವು ದೃಢವಾಗಿರುವುದು. ಮರಳಿಯೂ ಸ್ವಲ್ಪ ಕೋಪದಿಂದ ಹತ್ತಿರಬರುತ್ತಿರುವ ಆ ನೀಲವೃಷಭಕ್ಕೆ

ಸ್ವಲ್ಪಕ್ರೋಧಸಮಾವಿಷ್ಟಂ ದ್ವಿಜಾಶ್ಚಕ್ರುಸ್ತಮಂಕಿತಂ ।
ಚಕ್ರಂ ಚ ವಾಮಭಾಗೇಷು ಶೂಲಂ ಪಾರ್ಶ್ವೇ ಚ ದಕ್ಷಿಣೇ ॥ ೭೩ ॥
ಉತ್ಸಸೃಜುರ್ಗವಾಂ ಮಧ್ಯೇ ತಂ ದೇವೈರ್ಗೋಪಿತಂ ತದಾ ।
ತತೋ ದೇವಗಣಾಃ ಸರ್ವೇ ಮಹರ್ಷೀಣಾಂ ಗಣಾಃ ಪುನಃ ॥ ೭೪ ॥
ಸ್ವಾನಿ ಸ್ಥಾನಾನಿ ತೇ ಜಗ್ಮುರ್ಮುನಯೋ ವೀತಮತ್ಸರಾಃ ।
ಏವಮೃಷೀಣಾಂ ದಯಿತಾಸು ಸಕ್ತಃ
ಕಾಮಾರ್ತಚಿತ್ತೋ ಮುನಿಪುಂಗವಾನಾಂ ।
ಶಾಪಂ ಸಮಾಸಾದ್ಯ ಶಿವೋಽಪಿ ಭಕ್ತ್ಯಾ
ರೇವಾಜಲೇಽಗಾತ್ಸುಶಿಲಾಮಯತ್ವಂ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವೃಷಸ್ತುತಿನಾಮವರ್ಣನಂ"
ನಾಮೈಕೋನಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಆ ಬ್ರಾಹ್ಮಣರು ಎಡಭಾಗದಲ್ಲಿ ಚಕ್ರಾಂಕನೆಯನ್ನೂ, ಬಲಭಾಗದಲ್ಲಿ ಶೂಲಾಂಕವನ್ನೂ ಮಾಡಿ ಗೋವಿನ ನಡುವೆ ಬಿಟ್ಟರು. ದೇವತೆಗಳು ಅದನ್ನು ರಕ್ಷಿಸಿದರು. ಬಳಿಕ ದೇವತೆಗಳೂ, ಮಹರ್ಷಿಗಳೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಮುನಿಗಳು ಮಾತ್ಸರ್ಯರಹಿತರಾದರು.

೭೫. ಹೀಗೆ ಕಾಮಾತುರನಾಗಿ ಮಹರ್ಷಿಗಳ ಪತ್ನಿಯರಲ್ಲಿ ಆಸಕ್ತನಾದ ಪರಮೇಶ್ವರನು ಆ ಮುನಿಗಳಿಂದ ಶಾಪವನ್ನು ಹೊಂದಿ ನರ್ಮದಾ ಜಲದಲ್ಲಿ ಶಿಲಾಮಯನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವೃಷಸ್ತುತಿನಾಮವರ್ಣನ"ವೆಂಬ
ಇನ್ನೂರೈವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ಹರಿಹರಪೂಜಾಮಾಹಾತ್ಮ್ಯವರ್ಣನಂ

ಗಾಲವ ಉವಾಚ:—

ಇತಿ ತೇ ಕಥಿತಂ ಸರ್ವಂ ಶಾಲಿಗ್ರಾಮಕಥಾನಕಂ ।
ಮಹೇಶ್ವರಸ್ಯ ಚೋತ್ಪತ್ತಿರ್ಯಥಾ ಲಿಂಗತ್ವಮಾಪ ಸಃ ॥ ೧ ॥
ತಸ್ಮಾದ್ವರಂ ಲಿಂಗರೂಪಂ ಶಾಲಿಗ್ರಾಮಗತಂ ಹರಿಂ ।
ಯೇಽರ್ಚಯಂತಿ ನರಾ ಭಕ್ತ್ಯಾ ನ ತೇಷಾಂ ದುಃಖಯಾತನಾಃ ॥ ೨ ॥
ಚಾತುರ್ಮಾಸ್ಯೇ ಸಮಾಯಾತೇ ವಿಶೇಷಾತ್ಪೂಜಯೇಚ್ಚ ತೌ ।
ಅರ್ಚಿತೌ ಯಾವಭೇದೇನ ಸ್ವರ್ಗಮೋಕ್ಷಪ್ರದಾಯಕೌ ॥ ೩ ॥
ದೇವೌ ಹರಿಹರೌ ಭಕ್ತ್ಯಾ ವಿಪ್ರವಹ್ನಿಗವಾಂ ಗತೌ ।
ಯೇಽರ್ಚಯಂತಿ ಮಹಾಶೂದ್ರ ತೇಷಾಂ ಮೋಕ್ಷಪ್ರದೋ ಹರಿಃ ॥ ೪ ॥
ವೇದೋಕ್ತಂ ಕಾರಯೇತ್ಕರ್ಮ ಪೂರ್ತೇಷ್ಟಂ ವೇದತತ್ಪರಃ ।
ಪಂಚಾಯತನಪೂಜಾ ಚ ಸತ್ಯವಾದೋಹ್ಯಲೋಲತಾ ॥ ೫ ॥

---

### ಕನ್ನಡದ ಅನುವಾದ

#### ಹರಿಹರಪೂಜಾಮಾಹಾತ್ಮ್ಯವರ್ಣನ

೧. ಗಾಲವನು ಹೇಳುತ್ತಾನೆ:—ಹೀಗೆ ನಿನಗೆ ಶಾಲಿಗ್ರಾಮದ ಕಥೆಯನ್ನೂ, ಮಹೇಶ್ವರನು ಲಿಂಗವಾದ ರೀತಿಯನ್ನೂ ಹೇಳಿರುವೆನು.

೨. ಆದುದರಿಂದ ಲಿಂಗರೂಪನಾದ ಶಿವನನ್ನೂ, ಶಾಲಿಗ್ರಾಮದಲ್ಲಿರುವ ಹರಿಯನ್ನೂ ಭಕ್ತಿಯಿಂದ ಪೂಜಿಸಿದ ಮಾನವರಿಗೆ ದುಃಖವುಂಟಾಗುವುದಿಲ್ಲ.

೩. ಆದುದರಿಂದ ಚಾತುರ್ಮಾಸ್ಯದಲ್ಲಿ ಆ ಹರಿಹರರನ್ನು ಪೂಜಿಸಬೇಕು. ಅಭೇದಬುದ್ಧಿಯಿಂದ ಪೂಜಿತರಾದ ಅವರು ಸ್ವರ್ಗಮೋಕ್ಷಗಳನ್ನು ಅನುಗ್ರಹಿಸುವರು.

೪. ಬ್ರಾಹ್ಮಣರು, ಅಗ್ನಿ, ಗೋವು ಇವುಗಳಲ್ಲಿರುವ ಹರಿಹರರನ್ನು ಭಕ್ತಿಯಿಂದ ಪೂಜಿಸುವವರಿಗೆ ಹರಿಯು ಮೋಕ್ಷವನ್ನು ಕೊಡುವನು.

೫-೬. ಶೂದ್ರನು ವೇದದಲ್ಲಿ ವಿಶ್ವಾಸವುಳ್ಳವನಾಗಿ ವೇದೋಕ್ತವಾದ ಇಷ್ಟಾಪೂರ್ತ ಕರ್ಮಗಳನ್ನು ಮಾಡಿಸುವುದರಿಂದಲೂ, ಪಂಚಾಯತನ ಪೂಜೆಯಿಂದಲೂ, ಸತ್ಯವಾದ ನುಡಿ, ಲೋಭವಿಲ್ಲದಿರುವಿಕೆ, ವಿವೇಕಾದಿ ಗುಣ ಇವು

ವಿವೇಕಾದಿಗುಣೈರ್ಯುಕ್ತಃ ಸಶೂದ್ರೋಯಾತಿ ಸದ್ಗತಿಂ ।
ಬ್ರಹ್ಮಚರ್ಯಂ ತಪೋನಾನ್ಯದ್ದ್ವಾದಶಾಕ್ಷರ ಚಿಂತನಾತ್ ॥ ೬ ॥
ಮಂತ್ರೈರ್ವಿನಾ ಷೋಡಶಸೋಪಚಾರೈಃ
ಕಾರ್ಯಾ ಸುಪೂಜಾ ನರಕಾದಿಹಂತುಃ ।
ಯಥಾ ತಥಾ ವೈ ಗಿರಿಜಾಪತೇಶ್ಚ
ಕಾರ್ಯಾ ಮಹಾಶೂದ್ರ ಮಹಾಘಹಂತ್ರೀ ॥ ೭ ॥

ಬ್ರಹ್ಮೋವಾಚ :—

ಏವಂ ಕಥಯತೋರೇಷಾ ರಜನೀ ಕ್ಷಯಮಾಯಯೌ ।
ಸಚ್ಛೂದ್ರೋ ಗಾಲವಶ್ಚೈವ ಶಿಷ್ಯೈಶ್ಚ ಪರಿವಾರಿತಃ ॥ ೮ ॥
ಸ ತೇನ ಪೂಜಿತೋ ವಿಪ್ರೋ ಯಯೌ ಶೀಘ್ರಂ ನಿಜಾಶ್ರಮಂ ॥ ೯ ॥
ಯ ಇಮಂ ಶೃಣುಯಾನ್ಮರ್ತ್ಯೋ ವಾಚಯೇತ್ಪಾಠಯೇಚ್ಚ ವಾ ।
ಶ್ಲೋಕಂ ವಾ ಸರ್ವಮಪಿ ಚ ತಸ್ಯ ಪುಣ್ಯಕ್ಷಯೋ ನ ಹಿ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಹರಿಹರಪೂಜಾಮಾಹಾತ್ಮ್ಯವರ್ಣನಂ " ನಾಮ
ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಗಳಿಂದಲೂ ಸದ್ಗತಿಯನ್ನು ಪಡೆಯುವನು. ಆ ಶೂದ್ರನಿಗೆ ಬ್ರಹ್ಮಚರ್ಯ, ದ್ವಾದಶಾಕ್ಷರಚಿಂತನಗಳಿಗಿಂತ ಬೇರೆ ತಪಸ್ಸಿಲ್ಲ.

೭. ಶೂದ್ರನು ಮಂತ್ರವಿಲ್ಲದೆ ವಿಷ್ಣುವಿಗೂ, ಶಿವನಿಗೂ ಮಹಾಪಾಪವನ್ನು ಪರಿಹರಿಸುವ ಪೂಜೆಯನ್ನು ಮಾಡಬೇಕು.

೮–೯. ಬ್ರಹ್ಮನು ಹೇಳುತ್ತಾನೆ:—ಆ ಗಾಲವ ಶೂದ್ರರು ಮಾತಾಡುತ್ತಿರುವಾಗಲೆ ರಾತ್ರಿಯು ಬೆಳಗಾಯಿತು. ಗಾಲವನು ಆ ಸಚ್ಛೂದ್ರನಿಂದ ಪೂಜಿತನಾಗಿ ಶಿಷ್ಯರೊಡನೆ ತನ್ನ ಆಶ್ರಮಕ್ಕೆ ತೆರಳಿದನು.

೧೦. ಈ ಕಥೆಯನ್ನು ಸಂಪೂರ್ಣವಾಗಿ ಅಥವಾ ಒಂದು ಪದ್ಯವನ್ನು ಹೇಳುವವನ, ಹೇಳಿಸುವವನ ಅಥವಾ ಕೇಳುವವನ ಪುಣ್ಯವು ನಾಶವಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಹರಿಹರಪೂಜಾಮಾಹಾತ್ಮ್ಯವರ್ಣನ "ವೆಂಬ
ಇನ್ನೂರ ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ಧ್ಯಾನಯೋಗವರ್ಣನಂ

ನಾರದ ಉವಾಚ :—

ಕಥಂ ನಿತ್ಯಾ ಭಗವತೀ ಹರಪತ್ನೀ ಯಶಸ್ವಿನೀ ।
ಯೋಗಸಿದ್ಧಿಂ ಸುಮಹತೀಂ ಪ್ರಾಪ ಮಾಸಚತುಷ್ಟಯೇ ॥ ೧ ॥
ಮಂತ್ರರಾಜಮಿಮಂ ಜಪ್ತ್ವಾ ದ್ವಾದಶಾಕ್ಷರಸಂಭವಂ ।
ಏತನ್ಮೇ ವಿಸ್ತರೇಣ ತ್ವಂ ಕಥಯಸ್ವ ಯಥಾತಥಂ ॥ ೨ ॥

ಬ್ರಹ್ಮೋವಾಚ :—

ಚಾತುರ್ಮಾಸ್ಯೇ ಹರೌ ಸುಪ್ತೇ ಪಾರ್ವತೀ ನಿಯತವ್ರತಾ ।
ಮನಸಾ ಕರ್ಮಣಾ ವಾಚಾ ಹರಿಭಕ್ತಿಪರಾಯಣಾ ॥ ೩ ॥
ಚಾರುಶೃಂಗೇ ಪಿತುರ್ನಿತ್ಯಂ ತಿಷ್ಠಂತೀ ತಪಸಿ ಸ್ಥಿತಾ ।
ದೇವದ್ವಿಜಾಽಗ್ನಿಗೋಽಶ್ವತ್ಥಾಽತಿಥಿಪೂಜಾಪರಾಯಣಾ ॥ ೪ ॥
ಚಾತುರ್ಮಾಸ್ಯೇಽಥ ಸಂಪ್ರಾಪ್ತೇ ವಿಮಲೇ ಹರಿವಾಸರೇ ।
ಜಜಾಪ ಪರಮಂ ಮಂತ್ರಂ ಯಥಾದಿಷ್ಟಂ ಪಿನಾಕಿನಾ ॥ ೫ ॥

---

## ಕನ್ನಡದ ಅನುವಾದ

### ಧ್ಯಾನಯೋಗವರ್ಣನ

೧–೨. ನಾರದನು ಹೇಳುತ್ತಾನೆ :—ನಿತ್ಯಳೂ, ಪೂಜ್ಯಳೂ ಆದ ಪಾರ್ವತಿಯು ಚಾತುರ್ಮಾಸ್ಯದಲ್ಲಿ ಈ ದ್ವಾದಶಾಕ್ಷರ ಮಂತ್ರವನ್ನು ಜಪಿಸಿ ಹೇಗೆ ಯೋಗಸಿದ್ಧಿಯನ್ನು ಹೊಂದಿದಳು? ಇದನ್ನು ನನಗೆ ನೀನು ವಿಸ್ತಾರವಾಗಿ ಹೇಳು.

೩–೪. ಬ್ರಹ್ಮನು ಹೇಳುತ್ತಾನೆ :—ಚಾತುರ್ಮಾಸ್ಯದಲ್ಲಿ ವಿಷ್ಣುವು ಮಲಗಲು ವ್ರತದೀಕ್ಷೆಯನ್ನು ಹೊಂದಿದ ಪಾರ್ವತಿಯು ತನ್ನ ತಂದೆಯಾದ ಹಿಮಾಲಯನ ಮನೋಹರವಾದ ಶಿಖರದಲ್ಲಿ ಮನೋವಾಕ್ಕಾಯಕರ್ಮಗಳಿಂದ ಹರಿಭಕ್ತಿ ನಿರತಳೂ, ದೇವತೆಗಳು, ಬ್ರಾಹ್ಮಣರು, ಅಗ್ನಿ, ಗೋವು, ಅಶ್ವತ್ಥ, ಅತಿಥಿಗಳ ಪೂಜೆಯಲ್ಲಿ ಆಸಕ್ತಳೂ ಆಗಿ ತಪಸ್ಸನ್ನು ಮಾಡಿದಳು.

೫. ಚಾತುರ್ಮಾಸ್ಯದಲ್ಲಿ ಹರಿವಾಸರದಲ್ಲಿ ಶಿವನು ಉಪದೇಶಮಾಡಿದಂತೆ ಉತ್ತಮ ವಿಷ್ಣುಮಂತ್ರವನ್ನು ಜಪಿಸಿದಳು.

ಶಂಖಚಕ್ರಧರೋ ವಿಷ್ಣುಶ್ಚತುರ್ಹಸ್ತಃ ಕಿರೀಟಧೃಕ್ ।
ಮೇಘಶ್ಯಾಮೋಽಂಬುಜಾಕ್ಷಶ್ಚ ಸೂರ್ಯಕೋಟಿಸಮಪ್ರಭಃ ॥ ೬ ॥
ಗರುಡಾಧಿಷ್ಠಿತೋ ಹೃಷ್ಟೋ ವಸನ್ ವ್ಯಾಪ್ಯ ಜಗತ್ರಯಂ ।
ಶ್ರೀವತ್ಸಕೌಸ್ತುಭಯುತಃ ಪೀತಕೌಶೇಯವಸ್ತ್ರಕಃ ॥ ೭ ॥
ಸರ್ವಾಭರಣಶೋಭಾಭಿರಭಿದೀಪ್ತ ಮಹಾವಪುಃ ।
ಬಭಾಷೇ ಪಾರ್ವತೀಂ ವಿಷ್ಣುಃ ಪ್ರಸನ್ನವದನಃ ಶುಭಾಂ ।
ದೇವಿ ತುಷ್ಟೋಽಸ್ಮಿ ಭದ್ರಂತೇ ಕಥಯಸ್ವ ತವೇಪ್ಸಿತಂ ॥ ೮ ॥

ಪಾರ್ವತ್ಯುವಾಚ :—

ತಜ್ಜ್ಞಾನಮಮಲಂ ದೇಹಿ ಯೇನ ನಾಽಽವರ್ತನಂ ಭವೇತ್ ।
ಇತ್ಯುಕ್ತಃ ಸ ಮಹಾವಿಷ್ಣುಃ ಪ್ರತ್ಯುವಾಚ ಹರಪ್ರಿಯಾಂ ॥ ೯ ॥
ಸ ಏವ ದೇವದೇವೇಶಸ್ತವ ವಕ್ಷ್ಯತ್ಯಸಂಶಯಂ ।
ಸ ಏವ ಭಗವಾನ್ ಸಾಕ್ಷೀ ದೇಹಾಂತರಬಹಿಃಸ್ಥಿತಃ ॥ ೧೦ ॥
ವಿಶ್ವಸ್ರಷ್ಟಾ ಚ ಗೋಪ್ತಾ ಚ ಪವಿತ್ರಾಣಾಂ ಚ ಪಾವನಃ ।
ಅನಾದಿನಿಧನೋ ಧರ್ಮೋ ಧರ್ಮಾದೀನಾಂ ಪ್ರಭುರ್ಹಿ ಸಃ ॥ ೧೧ ॥

---

೬–೮. ಶಂಖಚಕ್ರಧಾರಿಯೂ, ನಾಲ್ಕು ತೋಳುಗಳುಳ್ಳವನೂ, ಕಿರೀಟಧಾರಿಯೂ, ಮೇಘದಂತೆ ನೀಲವರ್ಣನೂ, ತಾವರೆ ಹೂವಿನಂತೆ ಕಣ್ಣುಗಳುಳ್ಳವನೂ, ಕೋಟಿಸೂರ್ಯರಂತೆ ಕಾಂತಿಯುಳ್ಳವನೂ, ಗರುಡವಾಹನನೂ, ಮೂರು ಲೋಕಗಳನ್ನು ವ್ಯಾಪಿಸಿರುವವನೂ, ಶ್ರೀವತ್ಸಕೌಸ್ತುಭಗಳಿಂದ ಸಹಿತನೂ, ಪೀತಾಂಬರಧಾರಿಯೂ, ಸಮಸ್ತಾಭರಣಕಾಂತಿಗಳಿಂದ ಪ್ರಕಾಶಗೊಂಡ ಶರೀರವುಳ್ಳವನೂ ಆದ ವಿಷ್ಣುವು ಪ್ರಸನ್ನಮುಖನಾಗಿ ಮಂಗಳಕರಳಾದ ಪಾರ್ವತಿಯನ್ನು ಕುರಿತು ಇಂತೆಂದನು. "ದೇವಿ! ನಿನ್ನಲ್ಲಿ ನಾನು ಸಂತುಷ್ಟನಾಗಿರುವೆನು. ನಿನ್ನ ಇಷ್ಟಾರ್ಥವನ್ನು ಹೇಳು."

೯. ಪಾರ್ವತಿಯು ಹೇಳುತ್ತಾಳೆ:—ನನಗೆ ಪುನರ್ಜನ್ಮವನ್ನುಂಟುಮಾಡದ ಶುದ್ಧವಾದ ಜ್ಞಾನವನ್ನು ನೀಡು. ಪಾರ್ವತಿಯು ಹೀಗೆ ಹೇಳಲು, ಮಹಾವಿಷ್ಣುವು ಅವಳನ್ನು ಕುರಿತು ಇಂತೆಂದನು.

೧೦. "ದೇವತೆಗಳಿಗೆ ಒಡೆಯನಾದ ಶಂಕರನೇ ನಿನಗೆ ನಿಜವಾಗಿಯೂ ಅಂತಹ ಜ್ಞಾನವನ್ನು ಉಪದೇಶಮಾಡುವನು. ಅವನೇ ಸಾಕ್ಷಿಯೂ, ದೇಹದ ಒಳಗೂ ಹೊರಗೂ ಇರುವವನೂ ಆಗಿದ್ದಾನೆ.

೧೧. ಅವನು ಪ್ರಪಂಚವನ್ನು ಸೃಜಿಸುವವನೂ, ರಕ್ಷಕನೂ, ಪವಿತ್ರವಸ್ತುಗಳಲ್ಲಿ ಪರಿಶುದ್ಧನೂ, ಆದ್ಯಂತರಹಿತನೂ, ಧರ್ಮಸ್ವರೂಪನೂ, ಧರ್ಮಾದಿಗಳಿಗೆ ಪ್ರಭುವೂ ಆಗಿರುವನು.

ಅಕ್ಷರತ್ರಯಸೇವ್ಯಂ ಯತ್ಸಕಲಂ ಬ್ರಹ್ಮ ಏವ ಸಃ ।
ಮೂರ್ತಾಮೂರ್ತಸ್ವರೂಪೇಣ ಯೋಽಜೋ ಜನ್ಮಧರೋಽಹಿ ಸಃ ॥ ೧೨ ॥
ಮಮಾಧಿಕಾರೋ ನೈವಾಽಸ್ತಿ ವಕ್ತುಂ ತವ ನ ಸಂಶಯಃ ।
ಇತ್ಯುಕ್ತ್ವಾ ಭಗವಾನೀಶೋ ವಿರರಾಮ ಪ್ರಹೃಷ್ಟವಾನ್ ॥ ೧೩ ॥
ಏತಸ್ಮಿನ್ನಂತರೇ ಶಂಭುರ್ಗಿರಿಜಾಶ್ರಮಮಭ್ಯಗಾತ್ ।
ಸರ್ವಭೂತಗಣೈರ್ಯುಕ್ತೋ ವಿಮಾನೇ ಸಾರ್ವಕಾಮಿಕೇ ॥ ೧೪ ॥
ತಯಾ ವೈ ಭಗವಾನ್ ದೇವಃ ಪೂಜಿತಃ ಪರಮೇಶ್ವರಃ ।
ಸಖೀನಾಮಪಿ ಪ್ರತ್ಯಕ್ಷಮಾಶ್ಚರ್ಯಂ ಸಮಜಾಯತ ॥ ೧೫ ॥
ಸ್ತುತ್ವಾಽಥ ತಂ ಮಹಾದೇವಂ ವಿಷ್ಣುರ್ದೇಹೇ ಲಯಂ ಯಯೌ ।
ಅಥೋವಾಚ ಮಹೇಶಾನಃ ಪಾರ್ವತೀಂ ಪರಮೇಶ್ವರಃ ॥ ೧೬ ॥
ವಿಮಾನವರಮಾರುಹ್ಯ ತುಷ್ಟೋಽಹಂ ತವ ಸುವ್ರತೇ ।
ಗತ್ವೈಕಾಂತಪ್ರದೇಶಂ ತೇ ಕಥಯೇ ಪರಮಂ ಮಹಃ ॥ ೧೭ ॥
ಏವಮುಕ್ತ್ವಾ ಭಗವತೀಂ ಕರೇಗೃಹ್ಯ ಮುದಾನ್ವಿತಃ ।
ವಿಮಾನವರಮಾರೋಪ್ಯ ಲೀಲಯಾ ಪ್ರಯಯೌ ತದಾ ॥ ೧೮ ॥
ನಾನಾಧಾತುಮಯಾನದ್ರೀನ್ನಾನಾರತ್ನವಿಚಿತ್ರಿತಾನ್ ।
ನದೀ ನಿರ್ಝರಕುಂಜಾಂಶ್ಚ ನದಾನ್ ಕೋಕಿಲಕೂಜಿತಾನ್ ॥ ೧೯ ॥

---

೧೨. ಓಂಕಾರಪ್ರತಿಪಾದ್ಯಬ್ರಹ್ಮನೂ ಅವನೇ. ಮೂರ್ತಾಮೂರ್ತಸ್ವರೂಪದಿಂದ ಉತ್ಪತ್ತಿರಹಿತನೂ, ಜನ್ಮವನ್ನು ತಾಳುವವನೂ ಅವನೇ.

೧೩. ನಿನಗೆ ಉಪದೇಶಮಾಡಲು ನನಗೆ ಅಧಿಕಾರವಿಲ್ಲ.'' ಹೀಗೆಂದು ಹೇಳಿ ವಿಷ್ಣುವು ಸಂತೋಷದಿಂದ ಸುಮ್ಮನಾದನು.

೧೪. ಈ ಸಮಯದಲ್ಲಿ ಗಿರೀಶನು ಸಮಸ್ತ ಗಣಗಳೊಡನೆ ಸಕಲೇಷ್ಟದಾಯಕವಾದ ವಿಮಾನಾರೂಢನಾಗಿ ಪಾರ್ವತಿಯ ಆಶ್ರಮಕ್ಕೆ ಬಂದನು.

೧೫. ಆ ಪಾರ್ವತಿಯು ಆ ಶಂಕರನನ್ನು ಸಖಿಯರೊಡಗೂಡಿ ಪೂಜಿಸಿ ಆಶ್ಚರ್ಯಗೊಂಡಳು.

೧೬. ವಿಷ್ಣುವು ಆ ಮಹೇಶ್ವರನನ್ನು ಸ್ತುತಿಸಿ ಅವನ ಶರೀರದಲ್ಲಿ ಅದೃಶ್ಯನಾದನು. ಬಳಿಕ ಮಹೇಶ್ವರನು ಪಾರ್ವತಿಯನ್ನು ಕುರಿತು ಹೀಗೆಂದನು.

೧೭. ವ್ರತಧಾರಿಣಿಯೆ! ನಿನ್ನಲ್ಲಿ ಸಂತುಷ್ಟನಾದ ನಾನು ಉತ್ತಮವಿಮಾನವನ್ನೇರಿ ರಹಸ್ಯಸ್ಥಳಕ್ಕೆ ಹೋಗಿ ಉತ್ತಮ ಜ್ಯೋತಿಯ ವಿಷಯವನ್ನು ಹೇಳುತ್ತೇನೆ.

೧೮. ಶಂಕರನು ಹೀಗೆ ಹೇಳಿ ಸಂತೋಷದಿಂದ ಪಾರ್ವತಿಯ ಕೈಯನ್ನು ಹಿಡಿದುಕೊಂಡು ಉತ್ತಮ ವಿಮಾನವನ್ನೇರಿ ಹೊರಟನು.

೧೯–೨೭. ಅವನು ದಾರಿಯಲ್ಲಿ ಅನೇಕ ಧಾತುಗಳಿಂದ ಕೂಡಿರುವುವೂ, ಅನೇಕ ರತ್ನಗಳಿಂದ ಆಶ್ಚರ್ಯಗೊಂಡುವೂ ಆದ ಪರ್ವತಗಳನ್ನೂ, ನದೀ, ಗಿರಿ

ಅಖಾತಾನ್ದೇವಖಾತಾಂಶ್ಚ ಗಂಗಾದ್ಯಾಃ ಸರಿತಸ್ತಥಾ ।
ಸೌಗಂಧಿಕಾಂಶ್ಚ ಕಲ್ಹಾರಾನ್ ಸಹಸ್ರದಲಪಿಂಜರಾನ್ ॥ ೨೦ ॥
ದರ್ಶಯನ್ ಕರ್ಣಿಕಾರಾಂಶ್ಚ ಕೋವಿದಾರಾನ್ ಮಹಾದ್ರುಮಾನ್ ।
ತಾಲಾಂಸ್ತಮಾಲಾನ್ ಹಿಂತಾಲಾನ್ ಪ್ರಿಯಂಗೂನ್ ಪನಸಾನಪಿ ॥ ೨೧ ॥
ತಿಲಕಾನ್ ಬಕುಲಾಂಶ್ಚೈವ ಬಹೂನಪಿ ಚ ಪುಷ್ಪಿತಾನ್ ।
ಕ್ಷೇತ್ರಾಣಿ ಕಲನಾಭಾನಿ ಪಿಂಜರಾಣಿ ವಿದರ್ಶಯನ್ ॥ ೨೨ ॥
ಯಯೌ ದೇವನದೀತೀರೇ ಗತಂ ಶರವಣಂ ಮಹತ್ ।
ಫುಲ್ಲಕಾಶಂ ಸ್ವರ್ಣಮಯಂ ಶರಸ್ತಂಬಗಣಾನ್ವಿತಂ ॥ ೨೩ ॥
ಹೇಮಭೂಮಿವಿಭಾಗಸ್ಥಂ ವಹ್ನಿಕಾಂತಿಮೃಗದ್ವಿಜಂ ।
ತತ್ರ ತೀರಗತಾನಾಂ ಚ ಮುನೀನಾಮೂರ್ಧ್ವರೇತಸಾಂ ॥ ೨೪ ॥
ಆಶ್ರಮಾನ್ ಸ ವಿಮಾನಾಗ್ರೇ ತಿಷ್ಠನ್ ಪತ್ನ್ಯೈ ಪ್ರದರ್ಶಯತ್ ।
ಷಟ್‌ಕೃತ್ತಿಕಾಶ್ಚ ದದೃಶೇ ಪಾರ್ವತೀಂ ವನಸನ್ನಿಧೌ ॥ ೨೫ ॥
ಸ್ನಾತಾಃ ಸ್ವಲಂಕೃತಾಶ್ಚಂದ್ರಪತ್ನ್ಯಸ್ತಾ ವಿರಜಾಂಬರಾಃ ।
ಊಚುಸ್ತಾ ಯೋಜಿತಕರಾ ಕೇಯಂ ಪುತ್ರಾಯ ಗಮ್ಯತೇ ॥ ೨೬ ॥
ತತ್ಕಥ್ಯತಾಂ ಮಹಾಭಾಗೇ ಸ ಚ ತೇ ದರ್ಶನಂ ಗತಃ ॥ ೨೭ ॥

---

ನದೀ ಪೊದೆಗಳನ್ನೂ, ಕೋಗಿಲೆಗಳ ಧ್ವನಿಯುಳ್ಳ ನದಗಳನ್ನೂ, ತಾವಾಗಿ ಉದ್ಭವಿಸಿದ ಕೆರೆಗಳನ್ನೂ, ದೇವನಿರ್ಮಿತವಾದ ಕೆರೆಗಳನ್ನೂ, ಗಂಗಾದಿ ನದಿಗಳನ್ನೂ, ಸೌಗಂಧಿಕ, ಅನೇಕ ದಳಗಳಿಂದ ಹಳದಿ ಬಣ್ಣವಾದ ಕಲ್ಹಾರಗಳನ್ನೂ, ಅರಳಿದ ಕರ್ಣಿಕಾರ, ಕೋವಿದಾರ, ತಾಳ, ತಮಾಲ, ಹಿಂತಾಲ, ಪಿಯಂಗು, ಪನಸ, ತಿಲಕ, ಬಕುಲವೃಕ್ಷಗಳನ್ನೂ, ಹಳದಿ ಬಣ್ಣದ ಕ್ಷೇತ್ರಗಳನ್ನೂ, ಗಂಗಾನದಿಯ ದಡದಲ್ಲಿರುವ ಅರಳಿದ ಕಾಶಪುಷ್ಪವುಳ್ಳುದೂ, ಸ್ವರ್ಣಮಯವೂ, ನೊಸೆಹುಲ್ಲುಗಳುಳ್ಳದೂ, ಸುವರ್ಣಭೂಮಿಯಲ್ಲಿರುವುದೂ, ಅಗ್ನಿಯ ಕಾಂತಿಯುಳ್ಳ ಮೃಗ ಪಕ್ಷಿಗಳುಳ್ಳುದೂ ಆದ ಶರವಣವನ್ನೂ, ಆ ನದಿಯ ದಡದಲ್ಲಿರುವ ಜಿತೇಂದ್ರಿಯರಾದ ಮುನಿಗಳ ಆಶ್ರಮಗಳನ್ನೂ ವಿಮಾನದಲ್ಲಿಯೇ ಕುಳಿತು ಪತ್ನಿಗೆ ತೋರಿಸಿದನು. ಆ ವನದ ಹತ್ತಿರ ಪಾರ್ವತಿಯು ಸ್ನಾನಮಾಡಿ ಅಲಂಕಾರ ಮಾಡಿಕೊಂಡವರೂ, ಶುದ್ಧವಸ್ತ್ರವನ್ನುಟ್ಟವರೂ, ಚಂದ್ರನ ಪತ್ನಿಯರೂ ಆದ ಆರು ಕೃತ್ತಿಕಾ ನಕ್ಷತ್ರಲಲನೆಯರನ್ನು ಕಂಡಳು. ಆ ಕೃತ್ತಿಕೆಯರು ಕೈಯನ್ನು ಮುಗಿದುಕೊಂಡು ಮಗನನ್ನು ಹುಡುಕಿಕೊಂಡು ಹೋಗುತ್ತಿರುವ ಇವಳಾರು? ಭಾಗ್ಯವಂತಳೆ! ಅವನನ್ನು ನೋಡಿರುವಿಯಾ? ಎಂದು ಕೇಳಿದರು.

ಪಾರ್ವತ್ಯುವಾಚ :—

ಮಮ ಭಾಗ್ಯವಶಾತ್ಪುತ್ರಃ ಕಥಮುತ್ಸಂಗಮಾಹರೇತ್ ।
ನ ಹ್ಯಭಾಗ್ಯವಶಾತ್ಪುಂಸಾಂ ಕ್ವಾಽಪಿ ಸೌಖ್ಯಂ ನಿರಂತರಂ ॥ ೨೮ ॥
ಸುತನಾಮ್ನಾಽಪ್ಯಹಂ ದೃಷ್ಟ್ವಾ ಭವತೀನಾಂ ಚ ದರ್ಶನಾತ್ ।
ಕಿಮರ್ಥಮಿಹ ಸಂಪ್ರಾಪ್ತಾಃ ಕಥ್ಯತಾಮವಿಲಂಬಿತಂ ॥ ೨೯ ॥

ಕೃತ್ತಿಕಾ ಊಚುಃ :—

ವಯಂ ತವ ಸುತಂ ನ್ಯಸ್ತಂ ಪ್ರದಾತುಮಿಹ ಸುಂದರಿ ।
ಚಾತುರ್ಮಾಸ್ಯೇ ರವೌ ಸ್ನಾತುಮಾಗತಾ ದೇವ ನಿಮ್ನಗಾಂ ॥ ೩೦ ॥

ಪಾರ್ವತ್ಯುವಾಚ :—

ನ ಹಾಸ್ಯಾವಸರಃ ಸಖ್ಯಃ ಸತ್ಯಮೇವ ಹಿ ಕಥ್ಯತಾಂ ।
ಏಕಾಂತಾಽವಸರೇ ಹಾಸ್ಯಂ ಜಾಯತೇ ಚೇತರೇತರಂ ॥ ೩೧ ॥

ಕೃತ್ತಿಕಾ ಊಚುಃ :—

ಸತ್ಯಂ ವದಾಮಹೇ ದೇವಿ ತವ ತ್ರೈಲೋಕ್ಯಶೋಭಿತೇ ।
ಅಸ್ಯ ಸ್ತಂಬಸಮೂಹಸ್ಯ ಮಧ್ಯಸ್ಥಂ ಬಾಲಕಂ ವೃಣು ॥ ೩೨ ॥
ಕೃತ್ತಿಕಾನಾಂ ವಚಃ ಶ್ರುತ್ವಾ ಶಂಕಿತಾ ಪಾರ್ವತೀ ತದಾ ।
ದದರ್ಶ ಬಾಲಂ ದೀಪ್ತಾಭಂ ಷಣ್ಮುಖಂ ದೀಪ್ತವರ್ಚಸಂ ॥ ೩೩ ॥

---

೨೮. ಪಾರ್ವತಿಯು ಹೇಳುತ್ತಾಳೆ:—ಪುತ್ರನನ್ನು ತೊಡೆಯಲ್ಲಿ ಕುಳ್ಳಿರಿಸಿ ಕೊಳ್ಳುವ ಭಾಗ್ಯವು ನನಗೆಲ್ಲಿ? ಪುರುಷರಿಗೆ ಅಭಾಗ್ಯವಶದಿಂದ ಎಲ್ಲಿಯೂ ಸೌಖ್ಯ ವುಂಟಾಗುವುದಿಲ್ಲ.

೨೯. ನಾನು ಸುತನೆಂಬ ಶಬ್ದದಿಂದಲೂ, ನಿಮ್ಮ ದರ್ಶನದಿಂದಲೂ ಆನಂದ ಗೊಂಡಿರುವೆನು. ನೀವು ಇಲ್ಲಿಗೇಕೆ ಬಂದಿರುವಿರಿ? ಶೀಘ್ರವಾಗಿ ಹೇಳಿರಿ.

೩೦. ಕೃತ್ತಿಕೆಯರು ಹೇಳುತ್ತಾರೆ:— ಸುಂದರಿ! ನಾವು ನಮ್ಮಲ್ಲಿರುವ ನಿನ್ನ ಸುತನನ್ನು ನಿನಗೆ ಒಪ್ಪಿಸುವುದಕ್ಕಾಗಿ ಚಾತುರ್ಮಾಸ್ಯದ ಭಾನುವಾರದ ದಿನ ಗಂಗೆಯಲ್ಲಿ ಸ್ನಾನಮಾಡಲು ಬಂದಿದ್ದೇವೆ.

೩೧. ಪಾರ್ವತಿಯು ಹೇಳುತ್ತಾಳೆ:—ಸಖಿಯರೆ! ಇದು ಹಾಸ್ಯಕ್ಕೆ ತಕ್ಕ ಸಮಯವಲ್ಲ. ನಿಜವನ್ನು ಹೇಳಿರಿ. ರಹಸ್ಯದಲ್ಲಾದರೆ ಪರಸ್ಪರ ಹಾಸ್ಯವು ಉಚಿತವಾಗುವುದು.

೩೨. ಕೃತ್ತಿಕೆಯರು ಹೇಳುತ್ತಾರೆ:—ತ್ರೈಲೋಕ್ಯಸುಂದರಿಯಾದ ದೇವಿಯೆ! ನಾವು ಸತ್ಯವನ್ನೇ ಹೇಳುತ್ತಿದ್ದೇವೆ. ಈ ಹುಲ್ಲಿನ ನಡುವೆ ಇರುವ ನಿನ್ನ ಬಾಲಕ ನನ್ನು ಕರೆದುಕೊ.

೩೩–೩೪. ಪಾರ್ವತಿಯು ಕೃತ್ತಿಕೆಯರ ಮಾತನ್ನು ಕೇಳಿ ಶಂಕೆಗೊಂಡು ಪ್ರಕಾಶಮಾನವಾದ ಕಾಂತಿಯುಳ್ಳವನೂ, ಆರು ಮುಖವುಳ್ಳವನೂ, ಪ್ರಕಾಶ

ವಾಸಾಂಸಿ ಭೂಷಣಾನಾಂ ಚ ಸಮೂಹಾನ್ ಹರ್ಷಯಂತಿ ಚ ।
ಏತಾನಿ ದಕ್ಷಚಿಹ್ನಾನಿ ದ್ವೀಪಾನಿ ಮುನಿಸತ್ತಮ ॥ ೪೯ ॥
ಮಹೇಶ್ವರೋ ವಿಮಾನೇನ ವ್ಯತಿಕ್ರಾಮದ್ವಿಹಾಯಸಾ ।
ಪ್ಲಕ್ಷದ್ವೀಪಸ್ಯ ಚ ಪ್ರಾಂತೇ ದ್ವಿಗುಣಃ ಕ್ಷೀರಸಾಗರಃ ॥ ೫೦ ॥
ತನ್ಮಧ್ಯೇ ಸುಮಹದ್ದ್ವೀಪಂ ಶ್ವೇತಂ ನಾಮ ಸುನಿಶ್ಚಿತಂ ।
ರಮ್ಯಕಃ ಪರ್ವತಸ್ತತ್ರ ಶತಶೃಂಗೋಽಮಿತದ್ರುಮಃ ॥ ೫೧ ॥
ತಸ್ಯಶೃಂಗೇ ಮಹದ್ದಿವ್ಯೇ ವಿಮಾನಂ ಸ್ಥಾಪಿತಂ ತದಾ ।
ತದಾಽಮೃತಫಲೈರ್ವೃಕ್ಷೈಃ ಸೇವಿತೇ ಹೇಮವಾಲುಕೇ ॥ ೫೨ ॥
ಕ್ಷೀರ ಚ್ಛೇದೇನ ವಿಧೃತೇ ಶಿಲಾತಲಸುಸಂವೃತೇ ।
ವಿವಿಕ್ತೇ ಸರ್ವಸುಭಗೇ ಮಣಿರತ್ನ ಸಮನ್ವಿತೇ ॥ ೫೩ ॥
ಉಮಾಯೈ ಕಥಯಾಮಾಸ ದೇವದೇವಃ ಪಿನಾಕಧೃಕ್ ।
ಕಾರ್ತಿಕೇಯೋಽಪಿ ಶುಶ್ರಾವ ಗುಹ್ಯಾದ್ಗುಹ್ಯತರಂ ಮಹತ್ ॥ ೫೪ ॥
ಧ್ಯಾನಯೋಗಂ ಮಂತ್ರರೂಪಂ ದ್ವಾದಶಾಕ್ಷರ ಸಂಜ್ಞಿತಂ ।
ಪ್ರಣವೇನ ಯುತಂ ಸಾಗ್ರಂ ಸರಹಸ್ಯಂ ಶ್ರುತೇಃ ಪರಂ ॥ ೫೫ ॥

ಈಶ್ವರ ಉವಾಚ :—

ಅಕ್ಷರತ್ರಯ ಸಂಯುಕ್ತೋ ಮಂತ್ರೋಽಯಂ ಸಕೃದಕ್ಷರಃ ।
ಮಾಘಮಾಸಹಿತಶ್ಚಾಯಮಮಾಯೋ ವಿಶ್ವಪಾವನಃ ॥ ೫೬ ॥

---

ಮನೆಯಲ್ಲಿ ಕಲ್ಪವೃಕ್ಷಗಳು ಇರುವುವು. ದಕ್ಷಚಿಹ್ನೆಗಳುಳ್ಳ ಈ ದ್ವೀಪಗಳು ವಸ್ತ್ರಗಳನ್ನೂ, ಒಡವೆಗಳ ಸಮೂಹವನ್ನೂ ಪ್ರಕಾಶಗೊಳಿಸುವುವು.

೫೦–೫೧. ಈ ದ್ವೀಪಗಳನ್ನು ಮಹೇಶ್ವರನು ವಿಮಾನದಲ್ಲಿ ಆಕಾಶಮಾರ್ಗದಿಂದ ದಾಟಿದನು. ಪ್ಲಕ್ಷದ್ವೀಪದ ಕೊನೆಯಲ್ಲಿರುವ ಅದಕ್ಕಿಂತ ಇಮ್ಮಡಿಯಾದ ಕ್ಷೀರಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವಿರುವುದು. ಅದರಲ್ಲಿ ನೂರು ಶಿಖರಗಳುಳ್ಳದೂ, ಮಿತಿಯಿಲ್ಲದ ಮರಗಳುಳ್ಳದೂ ಆದ ರಮ್ಯಕ ಪರ್ವತವಿದೆ.

೫೨–೫೫. ಆ ಪರ್ವತದ ಅಮೃತಫಲವನ್ನು ಕೊಡುವ ವೃಕ್ಷಗಳುಳ್ಳದೂ, ಸುವರ್ಣದ ಮರಳುಳ್ಳದೂ, ಕ್ಷೀರಖಂಡದಿಂದ ಕೂಡಿರುವುದೂ, ಕಲ್ಲುಗಳಿಂದ ಮುಚ್ಚಿರುವುದೂ, ರತ್ನಗಳಿಂದ ವಿರಾಜಿಸುವುದೂ, ಮನೋಹರವೂ, ನಿರ್ಜನವೂ ಆದ ಶಿಖರದಲ್ಲಿ ಶಂಕರನು ವಿಮಾನವನ್ನು ನಿಲ್ಲಿಸಿ ಪಾರ್ವತಿಗೆ ಅತಿ ರಹಸ್ಯವಾದ ಮಂತ್ರ ವಿಷಯವನ್ನು ಹೇಳಿದನು. ಕಾರ್ತಿಕೇಯನೂ ದ್ವಾದಶಾಕ್ಷರ ಮಂತ್ರ ರೂಪವೂ, ಪ್ರಣವ ಶ್ರುತಿರಹಸ್ಯಗಳಿಂದ ಕೂಡಿರುವುದೂ ಆದ ಆ ರಹಸ್ಯವಿಷಯವನ್ನು ಕೇಳಿದನು.

೫೬–೫೮. ಈಶ್ವರನು ಹೇಳುತ್ತಾನೆ:— ಮೂರು ಅಕ್ಷರಗಳಿಂದ ಸೇರಿ ಒಂದಕ್ಷರವಾದ ಈ ಮಂತ್ರವು ಮಾಘಮಾಸದಲ್ಲಿ ಹಿತದಾಯಕವೂ, ಕಪಟವಿಲ್ಲ

ವಿಷ್ಣುಗವ್ಯೋ ವಿಷ್ಣುಮಧ್ಯೋ ಮಂತ್ರತ್ರಯಸಮನ್ವಿತಃ ।
ತುರೀಯಕಲಯಾಽಶೇಷಬ್ರಹ್ಮಾಂಡಗಣಸೇವಿತಃ ॥ ೫೭ ॥
ನಿಷ್ಕಾಮೈರ್ಮುನಿಭಿಃ ಸೇವ್ಯೋ ಮಹಾವಿದ್ಯಾದಿಸೇವಿತಃ ।
ನಾಭಿತಃ ಶಿರಸಿ ವ್ಯಾಪ್ತ ಅಖಂಡಸುಖದಾಯಕಃ ॥ ೫೮ ॥
ಓಂಕಾರೇತಿ ಪ್ರಿಯೋಕ್ತಿಸ್ತೇ ಮಹಾದುಃಖವಿನಾಶನಃ ।
ತಂ ಪೂರ್ವಂ ಪ್ರಣವಂ ಧ್ಯಾತ್ವಾ ಜ್ಞಾನರೂಪಂ ಸುಖಾಶ್ರಯಂ ॥ ೫೯ ॥
ಜ್ಞಾತ್ವಾ ಸರ್ವಗತಂ ಬ್ರಹ್ಮ ದೇಹಶೋಧನತತ್ಪರಃ ।
ಪದ್ಮಾಸನಪರೋ ಭೂತ್ವಾ ಸಂಪೂಜ್ಯ ಜ್ಞಾನಲೋಚನಃ ॥ ೬೦ ॥
ನೇತ್ರೇ ಮುಕುಲಿತೇ ಕೃತ್ವಾ ಕರೌ ಕೃತ್ವಾ ತು ಸಂಹತೌ ।
ಚೇತಸಿ ಧ್ಯಾನರೂಪೇಣ ಚಿಂತಯೇಚ್ಛಿವಮಂಗಲಂ ॥ ೬೧ ॥
ತಡಿತ್ಕೋಟಿಪ್ರತೀಕಾಶಂ ಸೂರ್ಯಕೋಟಿಸಮಚ್ಛವಿಂ ।
ಚಂದ್ರಲಕ್ಷಸಮಚ್ಛನ್ನಂ ಪುರುಷಂ ದ್ಯೋತಿತಾಽಖಿಲಂ ॥ ೬೨ ॥
ಮೂರ್ತಾಮೂರ್ತವಿರಾಜಂ ತಂ ಸದಸದ್ರೂಪಮವ್ಯಯಂ ।
ಚಿಂತಯಿತ್ವಾ ವಿರಾಡ್ರೂಪಂ ಸ ಭೂಯಃ ಸ್ತನಪೋ ಭವೇತ್ ।
ಚಾತುರ್ಮಾಸ್ಯೇ ಸಕೃದಪಿ ಧ್ಯಾನಾತ್ಕಲ್ಮಷಸಂಕ್ಷಯಃ ॥ ೬೩ ॥

---

ದುದೂ, ಜಗತ್ತನ್ನು ಪವಿತ್ರಗೊಳಿಸುವುದೂ, ವಿಷ್ಣುಗವ್ಯವೂ, ವಿಷ್ಣುವು ನಡುವೆ ಇರುವುದೂ, ಮೂರು ಮಂತ್ರಗಳಿಂದಲೂ, ನಾಲ್ಕು ಕಲೆಗಳಿಂದ ಕೂಡಿರುವುದೂ, ಅಶೇಷ ಬ್ರಹ್ಮಾಂಡ ಜನರು ಸೇವಿಸುವುದೂ, ನಿಷ್ಕಾಮರಾದ ಮುನಿಗಳು, ಮಹಾ ವಿದ್ಯೆ ಇವುಗಳಿಂದ ಸೇವಿಸಲ್ಪಟ್ಟುದೂ, ನಾಭಿಯಿಂದ ಶಿರಸ್ಸಿನವರೆಗೆ ವ್ಯಾಪಿಸಿ ಅಖಂಡ ಸುಖವನ್ನುಂಟುಮಾಡುವುದೂ ಆಗಿರುವುದು.

೫೯–೬೧. ಓಂಕಾರವೆಂಬ ಹಿತವಾದ ಮಾತು ನಿನ್ನ ಅತಿಶಯ ದುಃಖಗಳನ್ನು ನಾಶಗೊಳಿಸುವುದು. ಜ್ಞಾನರೂಪವೂ, ಸುಖಾಶ್ರಯವೂ ಆದ ಆ ಪ್ರಣವವನ್ನು ಮೊದಲು ಧ್ಯಾನಿಸಿ ಸರ್ವಗತನಾದ ಬ್ರಹ್ಮನನ್ನು ತಿಳಿದುಕೊಂಡು ದೇಹಶೋಧನ ನಿರತನೂ, ಪದ್ಮಾಸನದಲ್ಲಿ ಆಸಕ್ತನೂ, ಜ್ಞಾನನಯನನೂ ಆಗಿ ಆ ಬ್ರಹ್ಮನನ್ನು ಪೂಜಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಕೈಜೋಡಿಸಿಕೊಂಡು ಮನಸ್ಸಿನಲ್ಲಿ ಮಂಗಳರೂಪನಾದ ಶಿವನನ್ನು ಧ್ಯಾನಿಸಬೇಕು.

೬೨–೬೩. ಕೋಟಿ ಮಿಂಚುಗಳಂತೆ ಹೊಳೆಯುವುದೂ, ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳುದೂ, ಲಕ್ಷಚಂದ್ರರಿಗೆ ಸಮಾನವಾದುದೂ, ಸಕಲ ವನ್ನೂ ಪ್ರಕಾಶಗೊಳಿಸುವುದೂ, ಮೂರ್ತಾಮೂರ್ತ ವಸ್ತುಗಳಂತೆ ವಿರಾಜಿಸು ವುದೂ, ಸದಸದ್ರೂಪವಾದುದೂ, ನಾಶವಿಲ್ಲದುದೂ ಆದ ವಿರಾಡ್ರೂಪವನ್ನು ಚಿಂತಿಸಿದವನು ಮರಳಿ ಜನಿಸುವುದಿಲ್ಲ. ಚಾತುರ್ಮಾಸ್ಯದಲ್ಲಿ ಒಂದುಸಾರಿ ಧ್ಯಾನ ಮಾಡುವುದರಿಂದಲೂ ಪಾಪಗಳು ನಾಶವಾಗುವುವು.

ತಟಿತ್ಕೋಟಿಪ್ರತೀಕಾಶಂ ರೂಪದಿವ್ಯಶ್ರಿಯಾ ಯುತಂ ।
ವಹ್ನಿಪುತ್ರಂ ಚ ಗಾಂಗೇಯಂ ಕಾರ್ತಿಕೇಯಂ ಮಹಾಬಲಂ ॥ ೩೪ ॥
ಸಾವತ್ಸೇತಿ ಗೃಹೀತ್ವಾ ತಂ ಕುಮಾರಂ ಪಾಣಿನಾಮುದಾ ।
ವಿಮಾನಮಧ್ಯಮಾದಾಯ ಕೃತ್ವೋತ್ಸಂಗೇಹ್ಯುವಾಚ ಹ ॥ ೩೫ ॥
ಚಿರಂ ಜೀವ ಚಿರಂ ನಂದ ಚಿರಂ ನಂದಯ ಬಾಂಧವಾನ್ ।
ಇತ್ಯುಕ್ತ್ವಾ ಗಾಢಮಾಲಿಂಗ್ಯ ಮೂರ್ಧ್ನಿ ಚಾಘ್ರಾಯ ತಂ ಸುತಂ ॥ ೩೬ ॥
ಸಂಹೃಷ್ಟಾ ಪರಮೋದಾರಂ ಭಾಸ್ವರಂ ಹೃಷ್ಟಮಾನಸಂ ।
ಕಾರ್ತಿಕೇಯೋ ಮಹಾಪ್ರೇಮ್ಣಾ ಪ್ರಣಿಪತ್ಯ ಮಹೇಶ್ವರಂ ॥ ೩೭ ॥
ತತಃ ಪ್ರಾಂಜಲಿರವ್ಯಗ್ರಃ ಪ್ರಹೃಷ್ಟೇನಾಂತರಾತ್ಮನಾ ।
ತದ್ವಿಮಾನಂ ಯಯೌ ಶೀಘ್ರಂ ತೀರ್ತ್ವಾ ನದನದೀಪತೀನ್ ॥ ೩೮ ॥
ಜಂಬುದ್ವೀಪಮತಿಕ್ರಮ್ಯ ಲಕ್ಷಯೋಜನಮಾಯುತಂ ।
ತತಃ ಸಮುದ್ರಂ ದ್ವಿಗುಣಂ ಲವಣೋದಂ ತಥೈವ ಚ ॥ ೩೯ ॥
ಉತ್ತರಾಂಶ್ಚ ಕುರೂನ್ನೀತ್ವಾ ವಿಮಾನೇನಾಽರ್ಕತೇಜಸಾ ।
ಸಮುದ್ರ ದ್ವಿಗುಣಂ ದ್ವೀಪಂ ಕುಶನಾಭೇತಿ ಕೀರ್ತಿತಂ ॥ ೪೦ ॥

---

ಮಾನವಾದ ತೇಜಸ್ಸುಳ್ಳವನೂ, ಅನೇಕಕೋಟಿ ಮಿಂಚುಗಳಂತೆ ಹೊಳೆಯುತ್ತಿರುವವನೂ, ದಿವ್ಯರೂಪದ ಕಾಂತಿಯಿಂದ ಕೂಡಿರುವವನೂ, ಅಗ್ನಿ, ಗಂಗೆ, ಕೃತ್ತಿಕೆಯರ ಪುತ್ರನೂ, ಅತಿ ಬಲಿಷ್ಠನೂ ಆದ ಬಾಲಕನನ್ನು ನೋಡಿದಳು.

೩೫. ಆ ಪಾರ್ವತಿಯು, "ಮಗು!" ಎಂದು ಆ ಬಾಲಕನನ್ನು ಕೈಯಿಂದ ಎತ್ತಿಕೊಂಡು ವಿಮಾನಮಧ್ಯದಲ್ಲಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಇಂತೆಂದಳು.

೩೬–೩೮. "ಚಿರಂಜೀವಿಯಾಗು. ಬಹುಕಾಲ ಆನಂದಪಡು. ಬಾಂಧವರನ್ನು ಚಿರಕಾಲ ಸಂತೋಷಗೊಳಿಸು" ಎಂದು ಅತ್ಯುತ್ಕೃಷ್ಟನೂ, ಪ್ರಕಾಶಮಾನನೂ, ಸಂತುಷ್ಟನೂ ಆದ ಪುತ್ರನನ್ನು ಕುರಿತು ಹೇಳಿ ಗಾಢವಾಗಿ ಆಲಿಂಗಿಸಿ ಮಸ್ತಕದಲ್ಲಿ ಆಘ್ರಾಣಿಸಿದಳು. ಆ ಕಾರ್ತಿಕೇಯನು ಅತಿ ಪ್ರೀತಿಯಿಂದ ಶಂಕರನನ್ನು ವಂದಿಸಿ ಸಂತುಷ್ಟಮನಸ್ಸುಳ್ಳವನಾಗಿ ಕೈಮುಗಿದುಕೊಂಡು ನಿಂತನು. ಆ ವಿಮಾನವು ಅನೇಕ ನದೀನದಗಳನ್ನು ದಾಟಿ ಶೀಘ್ರವಾಗಿ ಹೊರಟಿತು.

೩೯–೪೬. ಸೂರ್ಯನಂತೆ ತೇಜಸ್ಸುಳ್ಳ ಆ ವಿಮಾನವು ಲಕ್ಷಯೋಜನ ಉದ್ದವಾದ ಜಂಬುದ್ವೀಪವನ್ನೂ, ಅದಕ್ಕೆ ಇಮ್ಮಡಿಯಾದ ಲವಣಸಮುದ್ರವನ್ನೂ, ಉತ್ತರಕುರುದೇಶಗಳನ್ನೂ, ಲವಣಸಮುದ್ರಕ್ಕಿಂತ ಇಮ್ಮಡಿಯಾದುದೂ, ದಿವ್ಯಲೋಕಗಳಿಂದ ಕೂಡಿರುವುದೂ, ದಿವ್ಯಪರ್ವತಗಳಿಂದ ವ್ಯಾಪ್ತವಾದುದೂ ಆಗಿರುವ

ದಿವ್ಯಲೋಕಸಮಾಕ್ರಾಂತಂ ದಿವ್ಯಪರ್ವತಸಂಕುಲಂ ।
ಇಕ್ಷ್ವಾದಾದ್ದ್ವಿಗುಣಂ ದ್ವೀಪಂ ತದ್ದ್ವೀಪಾದ್ದ್ವಿಗುಣಃ ಪುನಃ ॥ ೪೧ ॥
ತಮತಿಕ್ರಮ್ಯ ತಸ್ಮಿಂಧೋರ್ದ್ವಿಗುಣಂ ಕ್ರೌಂಚಸಂಜ್ಞಿತಂ ।
ತತೋಽಪಿ ದ್ವಿಗುಣಂ ಸಿಂಧುಃ ಸುರೋದೋ ಯಕ್ಷ ಸೇವಿತಃ ॥ ೪೨ ॥
ತತೋಽಪಿ ದ್ವಿಗುಣಂ ದ್ವೀಪಂ ಶಾಕದ್ವೀಪೇತಿ ಸಂಜ್ಞಿತಂ ।
ಅರ್ಣವದ್ವಿಗುಣಂ ತಸ್ಮಾದಾಜ್ಯರೂಪಂ ಸುನಿರ್ಮಿತಂ ॥ ೪೩ ॥
ಪರಮಸ್ವಾದಸಂಪೂರ್ಣಂ ಯತ್ರ ಸಿದ್ಧಾಃ ಸಮಂತತಃ ।
ತಸ್ಮಾಚ್ಚ ದ್ವಿಗುಣಂ ದ್ವೀಪಂ ಶಾಲ್ಮಲೀವೃಕ್ಷಸಂಜ್ಞಿತಂ ॥ ೪೪ ॥
ಸಮುದ್ರೋ ದ್ವಿಗುಣಸ್ತತ್ರ ದಧಿಮಂಡೋದ ಸಂಭವಃ ।
ಸಾಧ್ಯಾ ವಸಂತಿ ನಿಯತಂ ಮಹತ್ತಪಸಿ ಸಂಸ್ಥಿತಾಃ ॥ ೪೫ ॥
ತತೋಽಪಿ ದ್ವಿಗುಣಂ ದ್ವೀಪಂ ಪ್ಲಕ್ಷನಾಮೇತಿ ವಿಶ್ರುತಂ ।
ಕ್ಷೀರೋದೋ ದ್ವಿಗುಣಸ್ತತ್ರ ಯತ್ರ ಯತ್ರ ಮಹರ್ಷಯಃ ॥ ೪೬ ॥
ಷಡಿಮಾನಿ ಸುದಿವ್ಯಾನಿ ಭೌಮಃ ಸ್ವರ್ಗ ಉದಾಹೃತಃ ।
ತತ್ರ ಸ್ವರ್ಣಮಯೀ ಭೂಮಿಸ್ತಥಾ ರಜತ ಸಂಯುತಾ ॥ ೪೭ ॥
ದೃಷ್ಟ್ವಾ ಮಧೂಪರಸ್ವಾದ್ಯೈಃ ಸರ್ವಕಾಮ ಪ್ರದಾಯಕಾ ।
ಯತ್ರ ಸ್ತ್ರೀ ಪುರುಷಾಣಾಂ ಚ ಕಲ್ಪವೃಕ್ಷಾ ಗೃಹೇ ಸ್ಥಿತಾಃ ॥ ೪೮ ॥

---

ಕುಶನಾಭದ್ವೀಪವನ್ನೂ, ಇಕ್ಷ್ವೋದಕಸಮುದ್ರವನ್ನೂ, ಅದಕ್ಕಿಂತ ಇಮ್ಮಡಿಯಾದ ದ್ವೀಪವನ್ನೂ, ಮರಳಿ ಅದಕ್ಕಿಂತ ಇಮ್ಮಡಿಯಾದ ದ್ವೀಪವನ್ನೂ, ಸಮುದ್ರವನ್ನೂ, ಅದಕ್ಕಿಂತ ಇಮ್ಮಡಿಯಾದ ಕ್ರೌಂಚದ್ವೀಪವನ್ನೂ, ಅದಕ್ಕಿಂತ ಇಮ್ಮಡಿಯಾಗಿ ಯಕ್ಷರಿಂದ ಸೇವಿಸಲ್ಪಟ್ಟ ಮದ್ಯೋದಕಸಮುದ್ರವನ್ನೂ, ಅದಕ್ಕಿಂತ ಇಮ್ಮಡಿಯಾದ ಶಾಕದ್ವೀಪವನ್ನೂ, ಅದಕ್ಕಿಂತ ಇಮ್ಮಡಿಯಾಗಿ ಸಿದ್ಧರು ವಾಸವಾಗಿರುವ ಅತಿ ರುಚಿಕರವಾದ ಆಜ್ಯಸಮುದ್ರವನ್ನೂ, ಅದಕ್ಕಿಂತ ಇಮ್ಮಡಿಯಾದ ಶಾಲ್ಮಲಿ ದ್ವೀಪವನ್ನೂ, ಅದಕ್ಕಿಂತ ಇಮ್ಮಡಿಯಾಗಿ ಸಾಧ್ಯರು ತಪವನ್ನಾಚರಿಸುತ್ತಿರುವ ದಧಿಮಂಡೋದಕ ದ್ವೀಪವನ್ನೂ, ಅದಕ್ಕಿಂತ ಇಮ್ಮಡಿಯಾದ ಪ್ಲಕ್ಷದ್ವೀಪವನ್ನೂ, ಅದಕ್ಕಿಂತ ಇಮ್ಮಡಿಯಾಗಿ ಮಹರ್ಷಿಗಳಿರುವ ಕ್ಷೀರಸಮುದ್ರವನ್ನೂ ದಾಟಿತು.

೪೭–೪೯. ಈ ಆರು ದಿವ್ಯದ್ವೀಪಗಳು ಭೂಮಿಯ ಸ್ವರ್ಗವೆನ್ನಿಸಿಕೊಳ್ಳುವುವು. ಇಲ್ಲಿಯ ಭೂಮಿಯು ಚಿನ್ನಬೆಳ್ಳಿಗಳಿಂದ ಕೂಡಿರುವುವು. ದರ್ಶನಮಾತ್ರದಿಂದಲೇ ಕಲ್ಲುಸಕ್ಕರೆಯ ರುಚಿಯಿಂದ ಕೂಡಿರುವ ಈ ಭೂಮಿಯು ಸಕಲೇಷ್ಟಾರ್ಥಗಳನ್ನು ಕೊಡುವುವು. ಇಲ್ಲಿ ವಾಸವಾಗಿರುವ ಸ್ತ್ರೀಪುರುಷರ

ವಾಸಾಂಸಿ ಭೂಷಣಾನಾಂ ಚ ಸಮೂಹಾನ್ ಹರ್ಷಯಂತಿ ಚ ।
ಏತಾನಿ ದಕ್ಷಚಿಹ್ನಾನಿ ದ್ವೀಪಾನಿ ಮುನಿಸತ್ತಮ ॥ ೪೯ ॥
ಮಹೇಶ್ವರೋ ವಿಮಾನೇನ ವ್ಯತಿಕ್ರಾಮದ್ವಿಹಾಯಸಾ ।
ಪ್ಲಕ್ಷದ್ವೀಪಸ್ಯ ಚ ಪ್ರಾಂತೇ ದ್ವಿಗುಣಃ ಕ್ಷೀರಸಾಗರಃ ॥ ೫೦ ॥
ತನ್ಮಧ್ಯೇ ಸುಮಹದ್ದ್ವೀಪಂ ಶ್ವೇತಂ ನಾಮ ಸುನಿಶ್ಚಿತಂ ।
ರಮ್ಯಕಃ ಪರ್ವತಸ್ತತ್ರ ಶತಶೃಂಗೋಽಮಿತದ್ರುಮಃ ॥ ೫೧ ॥
ತಸ್ಯಶೃಂಗೇ ಮಹದ್ದಿವ್ಯೇ ವಿಮಾನಂ ಸ್ಥಾಪಿತಂ ತದಾ ।
ತದಾಽಮೃತಫಲೈರ್ವೃಕ್ಷೈಃ ಸೇವಿತೇ ಹೇಮವಾಲುಕೇ ॥ ೫೨ ॥
ಕ್ಷೀರ ಚ್ಛೇದೇನ ವಿಹೃತೇ ಶಿಲಾತಲಸುಸಂವೃತೇ ।
ವಿವಿಕ್ತೇ ಸರ್ವಸುಭಗೇ ಮಣಿರತ್ನ ಸಮನ್ವಿತೇ ॥ ೫೩ ॥
ಉಮಾಯೈ ಕಥಯಾಮಾಸ ದೇವದೇವಃ ಪಿನಾಕಧೃಕ್ ।
ಕಾರ್ತಿಕೇಯೋಽಪಿ ಶುಶ್ರಾವ ಗುಹ್ಯಾದ್ಗುಹ್ಯತರಂ ಮಹತ್ ॥ ೫೪ ॥
ಧ್ಯಾನಯೋಗಂ ಮಂತ್ರರೂಪಂ ದ್ವಾದಶಾಕ್ಷರ ಸಂಜ್ಞಿತಂ ।
ಪ್ರಣವೇನ ಯುತಂ ಸಾಗ್ರಂ ಸರಹಸ್ಯಂ ಶ್ರುತೇಃ ಪರಂ ॥ ೫೫ ॥

ಈಶ್ವರ ಉವಾಚ :—

ಅಕ್ಷರತ್ರಯ ಸಂಯುಕ್ತೋ ಮಂತ್ರೋಽಯಂ ಸಕೃದಕ್ಷರಃ ।
ಮಾಘಮಾಸಹಿತಶ್ಚಾಽಯಮಮಾಯೋ ವಿಶ್ವಪಾವನಃ ॥ ೫೬ ॥

---

ಮನೆಯಲ್ಲಿ ಕಲ್ಪವೃಕ್ಷಗಳು ಇರುವುವು. ದಕ್ಷಚಿಹ್ನೆಗಳುಳ್ಳ ಈ ದ್ವೀಪಗಳು ವಸ್ತ್ರಗಳನ್ನೂ, ಒಡವೆಗಳ ಸಮೂಹವನ್ನೂ ಪ್ರಕಾಶಗೊಳಿಸುವುವು.

೫೦–೫೧. ಈ ದ್ವೀಪಗಳನ್ನು ಮಹೇಶ್ವರನು ವಿಮಾನದಲ್ಲಿ ಆಕಾಶಮಾರ್ಗ ದಿಂದ ದಾಟಿದನು. ಪ್ಲಕ್ಷದ್ವೀಪದ ಕೊನೆಯಲ್ಲಿರುವ ಅದಕ್ಕಿಂತ ಇಮ್ಮಡಿಯಾದ ಕ್ಷೀರಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವಿರುವುದು. ಅದರಲ್ಲಿ ನೂರು ಶಿಖರ ಗಳುಳ್ಳದೂ, ಮಿತಿಯಿಲ್ಲದ ಮರಗಳುಳ್ಳದೂ ಆದ ರಮ್ಯಕ ಪರ್ವತವಿದೆ.

೫೨–೫೫. ಆ ಪರ್ವತದ ಅಮೃತಫಲವನ್ನು ಕೊಡುವ ವೃಕ್ಷಗಳುಳ್ಳದೂ, ಸುವರ್ಣದ ಮರಳುಳ್ಳದೂ, ಕ್ಷೀರಖಂಡದಿಂದ ಕೂಡಿರುವುದೂ, ಕಲ್ಲುಗಳಿಂದ ಮುಚ್ಚಿರುವುದೂ, ರತ್ನಗಳಿಂದ ವಿರಾಜಿಸುವುದೂ, ಮನೋಹರವೂ, ನಿರ್ಜನವೂ ಆದ ಶಿಖರದಲ್ಲಿ ಶಂಕರನು ವಿಮಾನವನ್ನು ನಿಲ್ಲಿಸಿ ಪಾರ್ವತಿಗೆ ಅತಿ ರಹಸ್ಯವಾದ ಮಂತ್ರ ವಿಷಯವನ್ನು ಹೇಳಿದನು. ಕಾರ್ತಿಕೇಯನೂ ದ್ವಾದಶಾಕ್ಷರ ಮಂತ್ರ ರೂಪವೂ, ಪ್ರಣವ ಶ್ರುತಿರಹಸ್ಯಗಳಿಂದ ಕೂಡಿರುವುದೂ ಆದ ಆ ರಹಸ್ಯವಿಷಯ ವನ್ನು ಕೇಳಿದನು.

೫೬–೫೮. ಈಶ್ವರನು ಹೇಳುತ್ತಾನೆ:— ಮೂರು ಅಕ್ಷರಗಳಿಂದ ಸೇರಿ ಒಂದಕ್ಷರವಾದ ಈ ಮಂತ್ರವು ಮಾಘಮಾಸದಲ್ಲಿ ಹಿತದಾಯಕವೂ, ಕಪಟವಿಲ್ಲ

ವಿಷ್ಣುಗರ್ಭ್ಯೋ ವಿಷ್ಣುಮಧ್ಯೋ ಮಂತ್ರತ್ರಯಸಮನ್ವಿತಃ ।
ತುರೀಯಕಲಯಾಽಶೇಷಬ್ರಹ್ಮಾಂಡಗಣಸೇವಿತಃ ॥ ೫೭ ॥
ನಿಷ್ಕಾಮೈರ್ಮುನಿಭಿಃ ಸೇವ್ಯೋ ಮಹಾವಿದ್ಯಾದಿಸೇವಿತಃ ।
ನಾಭಿತಃ ಶಿರಸಿ ವ್ಯಾಪ್ತ ಅಖಂಡಸುಖದಾಯಕಃ ॥ ೫೮ ॥
ಓಂಕಾರೇತಿ ಪ್ರಿಯೋಕ್ತಿಸ್ತೇ ಮಹಾದುಃಖವಿನಾಶನಃ ।
ತಂ ಪೂರ್ವಂ ಪ್ರಣವಂ ಧ್ಯಾತ್ವಾ ಜ್ಞಾನರೂಪಂ ಸುಖಾಶ್ರಯಂ ॥ ೫೯ ॥
ಜ್ಞಾತ್ವಾ ಸರ್ವಗತಂ ಬ್ರಹ್ಮ ದೇಹಶೋಧನತತ್ಪರಃ ।
ಪದ್ಮಾಸನಪರೋ ಭೂತ್ವಾ ಸಂಪೂಜ್ಯ ಜ್ಞಾನಲೋಚನಃ ॥ ೬೦ ॥
ನೇತ್ರೇ ಮುಕುಲಿತೇ ಕೃತ್ವಾ ಕರೌ ಕೃತ್ವಾ ತು ಸಂಹತೌ ।
ಚೇತಸಿ ಧ್ಯಾನರೂಪೇಣ ಚಿಂತಯೇಚ್ಛಿವಮಂಗಲಂ ॥ ೬೧ ॥
ತಡಿತ್ಕೋಟಿಪ್ರತೀಕಾಶಂ ಸೂರ್ಯಕೋಟಿಸಮಚ್ಛವಿಂ ।
ಚಂದ್ರಲಕ್ಷಸಮಚ್ಛನ್ನಂ ಪುರುಷಂ ದ್ಯೋತಿತಾಽಖಿಲಂ ॥ ೬೨ ॥
ಮೂರ್ತಾಮೂರ್ತವಿರಾಜಂ ತಂ ಸದಸದ್ರೂಪಮವ್ಯಯಂ ।
ಚಿಂತಯಿತ್ವಾ ವಿರಾಡ್ರೂಪಂ ನ ಭೂಯಃ ಸ್ತನಪೋ ಭವೇತ್ ।
ಚಾತುರ್ಮಾಸ್ಯೇ ಸಕೃದಪಿ ಧ್ಯಾನಾತ್ಕಲ್ಮಷಸಂಕ್ಷಯಃ ॥ ೬೩ ॥

---

ದುದೂ, ಜಗತ್ತನ್ನು ಪವಿತ್ರಗೊಳಿಸುವುದೂ, ವಿಷ್ಣುಗರ್ಭ್ಯವೂ, ವಿಷ್ಣುವು ನಡುವೆ ಇರುವುದೂ, ಮೂರು ಮಂತ್ರಗಳಿಂದಲೂ, ನಾಲ್ಕು ಕಲೆಗಳಿಂದ ಕೂಡಿರುವುದೂ, ಅಶೇಷ ಬ್ರಹ್ಮಾಂಡ ಜನರು ಸೇವಿಸುವುದೂ, ನಿಷ್ಕಾಮರಾದ ಮುನಿಗಳು, ಮಹಾ ವಿದ್ಯೆ ಇವುಗಳಿಂದ ಸೇವಿಸಲ್ಪಟ್ಟದ್ದೂ, ನಾಭಿಯಿಂದ ಶಿರಸ್ಸಿನವರೆಗೆ ವ್ಯಾಪಿಸಿ ಅಖಂಡ ಸುಖವನ್ನುಂಟುಮಾಡುವುದೂ ಆಗಿರುವುದು.

೫೯–೬೧. ಓಂಕಾರವೆಂಬ ಹಿತವಾದ ಮಾತು ನಿನ್ನ ಅತಿಶಯ ದುಃಖಗಳನ್ನು ನಾಶಗೊಳಿಸುವುದು. ಜ್ಞಾನರೂಪವೂ, ಸುಖಾಶ್ರಯವೂ ಆದ ಆ ಪ್ರಣವವನ್ನು ಮೊದಲು ಧ್ಯಾನಿಸಿ ಸರ್ವಗತನಾದ ಬ್ರಹ್ಮನನ್ನು ತಿಳಿದುಕೊಂಡು ದೇಹಶೋಧನ ನಿರತನೂ, ಪದ್ಮಾಸನದಲ್ಲಿ ಆಸಕ್ತನೂ, ಜ್ಞಾನನಯನನೂ ಆಗಿ ಆ ಬ್ರಹ್ಮನನ್ನು ಪೂಜಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಕೈಜೋಡಿಸಿಕೊಂಡು ಮನಸ್ಸಿನಲ್ಲಿ ಮಂಗಳರೂಪನಾದ ಶಿವನನ್ನು ಧ್ಯಾನಿಸಬೇಕು.

೬೨–೬೩. ಕೋಟಿ ಮಿಂಚುಗಳಂತೆ ಹೊಳೆಯುವುದೂ, ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳುದೂ, ಲಕ್ಷಚಂದ್ರರಿಗೆ ಸಮಾನವಾದುದೂ, ಸಕಲ ವನ್ನೂ ಪ್ರಕಾಶಗೊಳಿಸುವುದೂ, ಮೂರ್ತಾಮೂರ್ತ ವಸ್ತುಗಳಂತೆ ವಿರಾಜಿಸು ವುದೂ, ಸದಸದ್ರೂಪವಾದುದೂ, ನಾಶವಿಲ್ಲದುದೂ ಆದ ವಿರಾಡ್ರೂಪವನ್ನು ಚಿಂತಿಸಿದವನು ಮರಳಿ ಜನಿಸುವುದಿಲ್ಲ. ಚಾತುರ್ಮಾಸ್ಯದಲ್ಲಿ ಒಂದುಸಾರಿ ಧ್ಯಾನ ಮಾಡುವುದರಿಂದಲೂ ಪಾಪಗಳು ನಾಶವಾಗುವುವು.

ಏವಂ ಚ ಮದ್ರೂಪಮಿದಂ ಮುರಾರೇ
ರನೋಘವೀರ್ಯಂ ಗುಣತೋಽಪ್ಯಪಾರಂ ।
ವಿಲೋಕಯೇದ್ಯೋಽಘವಿನಾಶನಾಯ
ಕ್ಷಣಂ ಪ್ರಭುರ್ಜನ್ಮಶತೋದ್ಭವಾಯ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧ್ಯಾನಯೋಗವರ್ಣನಂ" ನಾಮ
ಏಕಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

೬೪. ಈ ನನ್ನ ಮತ್ತು ವಿಷ್ಣುವಿನ ಅಮೂಲ್ಯವಾದ ಸಾಮರ್ಥ್ಯವುಳ್ಳುದೂ, ಅಪಾರ ಗುಣಗಳುಳ್ಳುದೂ ಆದ ರೂಪವನ್ನು ನೋಡುವವನು ಅನೇಕ ಜನ್ಮಗಳಲ್ಲಿ ಪಾಪರಹಿತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧ್ಯಾನಯೋಗವರ್ಣನ" ವೆಂಬ
ಇನ್ನೂರ ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ಜ್ಞಾನಯೋಗಕಥನವರ್ಣನಂ

ಪಾರ್ವತ್ಯುವಾಚ :—

ಧ್ಯಾನಯೋಗಮಹಂ ಪ್ರಾಪ್ಯ ಜ್ಞಾನಯೋಗಮವಾಪ್ನುಯಾಂ ।
ತಥಾ ಕುರುಷ್ವ ದೇವೇಶ ಯಥಾಽಹಮಮರೀ ಭವೇ ॥ ೧ ॥

ಈಶ್ವರ ಉವಾಚ :—

ಪ್ರತ್ಯುಕ್ತೋಽಯಂ ಮಂತ್ರರಾಜೋ ದ್ವಾದಶಾಕ್ಷರಸಂಜ್ಞಿತಃ ।
ಜಪ್ತವ್ಯಃ ಸುಕುಮಾರಾಂಗಿ ವೇದಸಾರಃ ಸನಾತನಃ ॥ ೨ ॥
ಪ್ರಣವಃ ಸರ್ವವೇದಾದ್ಯಃ ಸರ್ವಬ್ರಹ್ಮಾಂಡಯಾಜಕಃ ।
ಪ್ರಥಮಃ ಸರ್ವಕಾರ್ಯೇಷು ಸರ್ವಸಿದ್ಧಿಪ್ರದಾಯಕಃ ॥ ೩ ॥
ಸಿತವರ್ಣೋ ಮಧುಚ್ಛಂದಾ ಋಷಿರ್ಬ್ರಹ್ಮಾ ತು ದೇವತಾ ।
ಪರಮಾತ್ಮಾ ತು ಗಾಯತ್ರೀ ನಿಯೋಗಃ ಸರ್ವಕರ್ಮಸು ॥ ೪ ॥
ಏತದ್ಬ್ರಹ್ಮಮಯಂ ಬೀಜಂ ವಿಶ್ವಮತ್ರ ಸಮನ್ವಿತಂ ।
ವೇದವೇದಾಂಗತತ್ವಾಖ್ಯಂ ಸದಸದ್ರೂಪಮವ್ಯಯಂ ॥ ೫ ॥

---

### ಕನ್ನಡದ ಅನುವಾದ

#### ಜ್ಞಾನಯೋಗಕಥನವರ್ಣನ

೧. ಪಾರ್ವತಿಯು ಹೇಳುತ್ತಾಳೆ:—ದೇವೇಶ! ನಾನು ಧ್ಯಾನಯೋಗವನ್ನು ಹೊಂದಿ ಜ್ಞಾನಯೋಗವನ್ನು ಪಡೆಯುವಂತೆಯೂ, ದೇವತೆಯಾಗುವಂತೆಯೂ ಮಾಡು.

೨. ಈಶ್ವರನು ಹೇಳುತ್ತಾನೆ :—ಕೋಮಲಾಂಗಿ! ನಾನು ನಿನಗೆ ಉಪದೇಶ ಮಾಡಿದ ಸನಾತನ ವೇದಸಾರವಾದ ಈ ದ್ವಾದಶಾಕ್ಷರ ಮಂತ್ರವನ್ನು ಜಪಿಸು.

೩–೪. ಪ್ರಣವವು ಸಮಸ್ತವೇದದ ಆದಿಯೂ, ಸಮಸ್ತಬ್ರಹ್ಮಾಂಡ ಪೂಜಕವೂ, ಸಮಸ್ತಕಾರ್ಯಗಳಲ್ಲಿ ಮೊದಲನೆಯದೂ, ಸಕಲಸಿದ್ಧಿಯನ್ನೀಯು ವುದೂ, ಶ್ವೇತವರ್ಣವೂ, ಮದುಚ್ಛಂದ ಎಂಬ ಋಷಿಯುಳ್ಳುದೂ, ಬ್ರಹ್ಮದೇವ ತಾಕವೂ, ಗಾಯತ್ರೀಛಂದಸ್ಸುಳ್ಳುದೂ, ಸಕಲಕರ್ಮಗಳಲ್ಲಿ ವಿನಿಯೋಗಾರ್ಹವೂ ಆಗಿರುವುದು.

೫. ಇದು ಬ್ರಹ್ಮರೂಪಬೀಜವಾಗಿರುವುದು. ಇದರಲ್ಲಿ ಪ್ರಪಂಚವು ಅಡಗಿರು ವುದು. ಮತ್ತು ವೇದವೇದಾಂಗಗಳಿಗೆ ಬೀಜರೂಪವೂ, ಸದಸದ್ರೂಪವೂ, ಶಾಶ್ವತವೂ ಆಗಿರುವುದು.

ನಕಾರಃ ಪೀತವರ್ಣಸ್ತು ಜಲಬೀಜಃ ಸನಾತನಃ ।
ಬೀಜಂ ಪೃಥ್ವೀ ಮನಶ್ಛಂದೋ ವಿಷಹಾ ವಿನಿಯೋಗತಃ ॥ ೬ ॥
ಮೋಕಾರಃ ಪೃಥಿವೀಬೀಜೋ ವಿಶ್ವಾಮಿತ್ರಸಮನ್ವಿತಃ ।
ರಕ್ತವರ್ಣೋ ಮಹಾತೇಜಾ ಧನದೋ ವಿನಿಯೋಜಿತಃ ॥ ೭ ॥
ಭಕಾರಃ ಪಂಚವರ್ಣಸ್ತು ಜಲಬೀಜಃ ಸನಾತನಃ ।
ಮರೀಚಿನಾ ಸಮಾಯುಕ್ತಃ ಪೂಜಿತಃ ಸರ್ವಭೋಗದಃ ॥ ೮ ॥
ಗಕಾರೋ ಹೇಮರಕ್ತಾಭೋ ಭರದ್ವಾಜಸಮನ್ವಿತಃ ।
ವಾಯುಬೀಜೋ ವಿನಿಯೋಗಂ ಕುರ್ವತಾಮಾದಿಭೋಗದಃ ॥ ೯ ॥
ವಕಾರಃ ಕುಂದಧವಲೋ ವ್ಯೋಮಬೀಜೋ ಮಹಾಬಲಃ ।
ಋಷಿಮಂತ್ರಿಪುರಸ್ಕೃತ್ಯ ಯೋಜಿತೋ ಮೋಕ್ಷದಾಯಕಃ ॥ ೧೦ ॥
ತೇಕಾರೋ ವಿದ್ಯುದ್ವಿಕಾರಃ ಸೋಮಬೀಜಂ ಮಹತ್ಸ್ಮೃತಂ ।
ಅಂಗಿರಾವರ್ಧಮೂಲಂ ಚ ವರ್ಜಿತಂ ಕರ್ಮ ಕಾಮಿಕಂ ॥ ೧೧ ॥

---

೬. ನಕಾರವು ಪೀತವರ್ಣವೂ, ಜಲಬೀಜವೂ, ಅನಾದಿಯೂ, ಪೃಥ್ವೀ ಬೀಜವುಳ್ಳುದೂ, ಮನಶ್ಛಂದಸ್ಸುಳ್ಳುದೂ ಆಗಿರುವುದು. ಇದರ ವಿನಿಯೋಗದಿಂದ ವಿಷವು ಪರಿಹಾರವಾಗುವುದು.

೭. ಮೋಕಾರವು ಪೃಥಿವೀಬೀಜವುಳ್ಳುದೂ, ವಿಶ್ವಾಮಿತ್ರಋಷಿಯುಳ್ಳುದೂ, ರಕ್ತವರ್ಣವೂ, ಅತಿಶಯ ತೇಜಸ್ಸುಳ್ಳುದೂ, ವಿನಿಯೋಗದಿಂದ ಧನವನ್ನೀಯು ವುದೂ ಆಗಿರುವುದು.

೮. ಭಕಾರವು ಪಂಚವರ್ಣವೂ, ಜಲಬೀಜವುಳ್ಳುದೂ, ಅನಾದಿಯೂ, ಮರೀಚಿಋಷಿಯಿಂದ ಕೂಡಿರುವುದೂ, ಪೂಜೆಯಿಂದ ಸಕಲ ಭೋಗಗಳನ್ನು ಕೊಡುವುದೂ ಆಗಿರುವುದು.

೯. ಗಕಾರವು ಹಳದಿ ಕೆಂಪುಬಣ್ಣವುಳ್ಳುದೂ, ಭರದ್ವಾಜಋಷಿಯಿಂದ ಕೂಡಿ ರುವುದೂ, ವಾಯುಬೀಜವುಳ್ಳುದೂ ಆಗಿರುವುದು. ಇದನ್ನು ವಿನಿಯೋಗಿಸು ವವರಿಗೆ ಭೋಗವನ್ನು ಕೊಡುವುದು.

೧೦. ವಕಾರವು ಕುಂದಪುಷ್ಪದಂತೆ ಶ್ವೇತವರ್ಣವೂ, ಆಕಾಶಬೀಜವೂ, ಅತಿ ಬಲವುಳ್ಳುದೂ, ಋಷಿಯೊಡನೆ ಪ್ರಯೋಗಿಸಿದರೆ ಮೋಕ್ಷವನ್ನುಂಟುಮಾಡು ವುದೂ ಆಗಿರುವುದು.

೧೧. ತೇಕಾರವು ವಿದ್ಯುದ್ವಿಕಾರವೂ, ಸೋಮಬೀಜವೂ, ಅಂಗಿರಾವರ್ಧ ಮೂಲವುಳ್ಳುದೂ ಆಗಿರುವುದು. ಇದು ಕರ್ಮಕ್ಕೆ ತ್ಯಾಜ್ಯವು.

ವಾಕಾರೋ ಧೂಮ್ರವರ್ಣಶ್ಚ ಸೂರ್ಯಬೀಜಂ ಮನೋಜವಂ ।
ಪುಲಸ್ತ್ಯರ್ಷಿಸಮಾಯುಕ್ತಂ ನಿಯುಕ್ತಂ ಸರ್ವಸೌಖ್ಯದಂ ॥ ೧೨ ॥
ಸುಕಾರಶ್ಚಾಕ್ಷರೋ ನಿತ್ಯಂ ಜಪಾಕುಸುಮಭಾಸ್ವರಃ ।
ಮನೋಬೀಜಂ ದುರ್ವಿಷಹ್ಯಂ ಪುಲಹಾಶ್ರಿತಮರ್ಥಿದಂ ॥ ೧೩ ॥
ದೇಕಾರಾಕ್ಷರಕಂ ಬೀಜಂ ಹಂಸರೂಪಂ ಚ ಕರ್ಬುರಂ ।
ಸಿದ್ಧಿಬೀಜಂ ಮಹಾಸತ್ವಂ ಕ್ರತೌ ಕ್ರತುನಿಯೋಜಿತಂ ॥ ೧೪ ॥
ವಾಕಾರೋ ನಿರ್ಮಲೋ ನಿತ್ಯಂ ಯಜಮಾನಸ್ತು ಬೀಜಭೃತ್ ।
ಪ್ರಚೇತಾಶ್ರಿಯಮಾಶ್ರೇಯಂ ಮೋಕ್ಷೇ ಮೋಕ್ಷಪ್ರದಾಯಕಂ ॥ ೧೫ ॥
ಯಕಾರಸ್ಯ ಮಹಾಬೀಜಂ ಪಿಂಗವರ್ಣಶ್ಚ ಖೇಚರೀ ।
ಭೂಚರೀ ಚ ಮಹಾಸಿದ್ಧಿಃ ಸರ್ವದಾ ಭೂವಿಚಿಂತನಂ ॥ ೧೬ ॥
ಭೃಗುಯಂತ್ರೇ ಸಮಾಶ್ರಾಂತಿ ನಿಯೋಗೇ ಸರ್ವಕರ್ಮಕೃತ್ ।
ಗಾಯತ್ರೀಚ್ಛಂದ ಏತೇಷಾಂ ದೇಹನ್ಯಾಸಕ್ರಮೋ ಭವೇತ್ ॥ ೧೭ ॥
ಓಂಕಾರಂ ಸರ್ವದಾನ್ಯಸ್ಯನ್ನಕಾರಂ ಪಾದಯೋರ್ದ್ವಯೋಃ ।
ಮೋಕಾರಂ ಗುಹ್ಯದೇಶೇ ತು ಭಕಾರಂ ನಾಭಿಪಂಕಜೇ ॥ ೧೮ ॥

---

೧೨. ವಾಕಾರವು ಧೂಮ್ರವರ್ಣವೂ, ಸೂರ್ಯಬೀಜವೂ, ಮನಸ್ಸಿನಂತೆ ವೇಗವುಳ್ಳುದೂ, ಪುಲಸ್ತ್ಯರ್ಷಿಯಿಂದ ಕೂಡಿರುವುದೂ ಆಗಿರುವುದು. ನಿಯೋಗದಿಂದ ಸಕಲ ಸೌಖ್ಯವನ್ನು ನೀಡುವುದು.

೧೩. ಸುಕಾರವು ಜಪಾಕುಸುಮದಂತೆ ಪ್ರಕಾಶಮಾನವೂ, ಮನೋಬೀಜವೂ, ಸಹಿಸಲಶಕ್ಯವೂ, ಪುಲಹಋಷಿಯುಳ್ಳುದೂ ಆಗಿರುವುದು. ಇದು ಅರ್ಥಿಗಳನ್ನು ಕೊಡುವುದು.

೧೪. ದೇಕಾರವು ಹಂಸಬೀಜವೂ, ಕರ್ಬುರವರ್ಣವೂ, ಸಿದ್ಧಿಗೆ ಕಾರಣವೂ, ಅತಿಶಯ ಸತ್ವವುಳ್ಳುದೂ, ಕ್ರತುವೆಂಬ ಮುನಿಯಿಂದ ಯಜ್ಞದಲ್ಲಿ ವಿನಿಯೋಗಿಸಲ್ಪಟ್ಟುದೂ ಆಗಿರುವುದು.

೧೫. ವಾಕಾರವು ನಿರ್ಮಲವೂ, ಯಜಮಾನಬೀಜವೂ, ಪ್ರಚೇತರ್ಷಿಯುಳ್ಳುದೂ, ಮೋಕ್ಷದಾಯಕವೂ ಆಗಿರುವುದು.

೧೬–೧೭. ಯಕಾರವು ಮಹಾಬೀಜವೂ, ಪಿಂಗಲವರ್ಣವೂ, ಖೇಚರೀ ಭೂಚರೀ ಸಿದ್ಧಿಯನ್ನೀಯುವುದೂ, ಭೂಚಿಂತೆಯನ್ನುಂಟುಮಾಡುವುದೂ, ಭೃಗುಯಂತ್ರವನ್ನಾಶ್ರಯಿಸಿರುವುದೂ, ವಿನಿಯೋಗದಿಂದ ಸಕಲ ಕಾರ್ಯವನ್ನುಂಟುಮಾಡುವುದೂ ಆಗಿರುವುದು. ಇವುಗಳಿಗೆ ಗಾಯತ್ರಿಯು ಛಂದಸ್ಸಾಗಿರುವುದು. ದೇಹನ್ಯಾಸಕ್ರಮವು ಈರೀತಿಯಾಗಿರುವುದು.

೧೮–೨೦. ಓಂಕಾರವನ್ನು ಸರ್ವತ್ರವೂ, ನಕಾರವನ್ನು ಎರಡು ಪಾದಗಳಲ್ಲಿಯೂ, ಮೋಕಾರವನ್ನು ಗುಹ್ಯದಲ್ಲಿಯೂ, ಭಕಾರವನ್ನು ನಾಭಿಕಮಲ

ಗಕಾರಂ ಹೃದಯೇ ನ್ಯಸ್ಯ ವಕಾರಃ ಕಂಠಮಧ್ಯಗಃ ।
ತೇಕಾರಂ ದಕ್ಷಿಣೇ ಹಸ್ತೇ ವಾಕಾರೋ ವಾಮಹಸ್ತಗಃ ॥ ೧೯ ॥
ಸುಕಾರಂ ಮುಖಜಿಹ್ವಾಯಾಂ ದೇಕಾರಃ ಕರ್ಣಯೋರ್ದ್ವಯೋಃ ।
ವಾಕಾರಶ್ಚಕ್ಷುಷೋರ್ದ್ವಂದ್ವೇ ಯಕಾರಂ ಮಸ್ತಕೇ ನ್ಯಸೇತ್ ॥ ೨೦ ॥
ಲಿಂಗಮುದ್ರಾ ಯೋನಿಮುದ್ರಾ ಧೇನುಮುದ್ರಾ ತಥಾ ತ್ರಯಂ ।
ಸಕಲಂ ಕೃತಮೇತದ್ಧಿ ಮಂತ್ರರೂಪೇ ಬೀಜಾಕ್ಷರಂ ॥ ೨೧ ॥
ಯೋಜಯೇತ್ಪ್ರತ್ಯಹಂ ದೇವಿ ನ ಸ ಪಾಪೈಃ ಪ್ರಲಿಪ್ಯತೇ ।
ಏತದ್ದ್ವಾದಶಲಿಂಗಾರಂ ಕೂರ್ಮಸ್ಥಂ ದ್ವಾದಶಾಕ್ಷರಂ ॥ ೨೨ ॥
ಶಾಲಿಗ್ರಾಮಶಿಲಾಶ್ಚೈವ ದ್ವಾದಶೈವ ಹಿ ಪೂಜಿತಾಃ ।
ತಾಭಿಃ ಸಹಾಕರೈರೇಭಿಃ ಪ್ರತ್ಯಕ್ಷೈಃ ಸಹ ಸಂಸದಿ ॥ ೨೩ ॥
ಯಥಾವರ್ಣಮನುಧ್ಯಾನೈರ್ಮುನಿಬೀಜಸಮನ್ವಿತೈಃ ।
ವಿನಿಯೋಗೇನ ಸಹಿತೈಶ್ಛಂದೋಭಿಃ ಸಮಲಂಕೃತೈಃ ॥ ೨೪ ॥
ಧ್ಯಾನೈರ್ಜಪೈಃ ಪೂಜಿತೈಶ್ಚ ಭಕ್ತಾನಾಂ ಮುನಿಸತ್ತಮ ।
ಮೋಕ್ಷೋ ಭವತಿ ಬಂಧೇಭ್ಯಃ ಕರ್ಮಜೇಭ್ಯೋ ನ ಸಂಶಯಃ ॥ ೨೫ ॥
ಅಯಂ ಹಿ ಧ್ಯಾನಕರ್ಮಾಖ್ಯೋ ಯೋಗೋ ದುಷ್ಪ್ರಾಪ್ಯ ಏವ ಹಿ ।
ಧ್ಯಾನಯೋಗಂ ಪುನರ್ವಚ್ಮಿ ಶೃಣುಷ್ವೈಕಾಗ್ರಮಾನಸಾ ॥ ೨೬ ॥

---

ದಲ್ಲಿಯೂ, ಗಕಾರವನ್ನು ಎದೆಯಲ್ಲಿಯೂ, ವಕಾರವನ್ನು ಕಂಠಮಧ್ಯದಲ್ಲಿಯೂ, ತೇಕಾರವನ್ನು ಬಲಗೈಯಲ್ಲಿಯೂ, ವಾಕಾರವನ್ನು ಎಡಗೈಯಲ್ಲಿಯೂ, ಸುಕಾರವನ್ನು ಬಾಯಿನಾಲಿಗೆಯಲ್ಲಿಯೂ, ದೇಕಾರವನ್ನು ಎರಡು ಕಿವಿಗಳಲ್ಲಿಯೂ, ವಾಕಾರವನ್ನು ಎರಡು ಕಣ್ಣುಗಳಲ್ಲಿಯೂ, ಯಕಾರವನ್ನು ಮಸ್ತಕದಲ್ಲಿಯೂ ನ್ಯಾಸ ಮಾಡಬೇಕು.

೨೧–೨೨. ಲಿಂಗಮುದ್ರಾ, ಯೋನಿಮುದ್ರಾ, ಧೇನುಮುದ್ರಾ ಇವುಗಳನ್ನು ತೋರಿಸಿ ಮಂತ್ರದಲ್ಲಿ ಬೀಜಾಕ್ಷರವನ್ನು ಪ್ರತಿದಿನವೂ ನಿಯೋಜಿಸುವವನು ಪಾಪ ಲಿಪ್ತನಾಗುವುದಿಲ್ಲ. ಹನ್ನೆರಡು ಲಿಂಗಾಕಾರವುಳ್ಳ ಈ ದ್ವಾದಶಾಕ್ಷರ ಮಂತ್ರವು ಕೂರ್ಮನಲ್ಲಿ ನೆಲೆಸಿರುವುದು.

೨೩–೨೫. ಹನ್ನೆರಡು ಶಾಲಿಗ್ರಾಮ ಶಿಲೆಗಳನ್ನು ಸಭೆಯಲ್ಲಿ ಆ ಮುದ್ರೆಗಳಿಂದಲೂ, ಪ್ರತ್ಯಕ್ಷವರ್ಣಾನುಧ್ಯಾನ, ಮುನಿ, ಬೀಜ, ವಿನಿಯೋಗ, ಛಂದಸ್ಸು ಇವುಗಳಿಂದಲೂ ಸಹಿತವಾದ ಧ್ಯಾನ, ಜಪ, ಪೂಜೆಗಳನ್ನು ಮಾಡುವುದರಿಂದ ಭಕ್ತರಿಗೆ ಕರ್ಮಜನ್ಯವಾದ ಬಂಧನದಿಂದ ಮೋಕ್ಷವಾಗುವುದು.

೨೬. ಈ ಧ್ಯಾನಕರ್ಮವೆಂಬ ಯೋಗವು ಹೊಂದಲಶಕ್ಯವಾದುದು. ಧ್ಯಾನಯೋಗವನ್ನು ಹೇಳುವೆನು; ಅದನ್ನು ಚಿತ್ತೈಕಾಗ್ರ್ಯದಿಂದ ಕೇಳು.

ಧ್ಯಾನಯೋಗೇನ ಪಾಪಾನಾಂ ಕ್ಷಯೋ ಭವತಿ ನಾಽನ್ಯಥಾ ।
ಜಪಧ್ಯಾನಮಯೋ ಯೋಗಃ ಕರ್ಮಯೋಗೋ ಸ ಸಂಶಯಃ ॥ ೨೭ ॥
ಶಬ್ದಬ್ರಹ್ಮಸಮುದ್ಭೂತೋ ವೇದೇನ ದ್ವಾದಶಾಕ್ಷರಃ ।
ಧ್ಯಾನೇನ ಸರ್ವಮಾಪ್ನೋತಿ ಧ್ಯಾನೇನಾಪ್ನೋತಿ ಶುದ್ಧತಾಂ ॥ ೨೮ ॥
ಧ್ಯಾನೇನ ಪರಮಂ ಬ್ರಹ್ಮ ಮೂರ್ತೌ ಯೋಗಸ್ತು ಧ್ಯಾನಜಃ ।
ಸಾವಲಂಬೋ ಧ್ಯಾನಯೋಗೋ ಯನ್ನಾರಾಯಣದರ್ಶನಂ ॥ ೨೯ ॥
ದ್ವಿತೀಯೋ ನಿಖಿಲಾಲಂಬೋ ಜ್ಞಾನಯೋಗೇನ ಕೀರ್ತಿತಃ ।
ಅರೂಪಮಪ್ರಮೇಯಂ ಯತ್ಸರ್ವಕಾಯಂ ಮಹಃ ಸದಾ ॥ ೩೦ ॥
ತಡಿತ್ಕೋಟಿಸಮಪ್ರಖ್ಯಂ ಸದೋದಿತಮಖಂಡಿತಂ ।
ನಿಷ್ಕಲಂ ಸಕಲಂ ವಾಽಪಿ ನಿರಂಜನಮಯಂ ವಿಯತ್ ॥ ೩೧ ॥
ತತ್ಸ್ವರೂಪಂ ಭೋಗರೂಪಂ ತುರ್ಯಾತೀತಮನೋಪಮಂ ।
ವಿಭ್ರಾಂತಕರಣಂ ಮೂರ್ತಂ ಪ್ರಕೃತಿಸ್ಥಂ ಚ ಶಾಶ್ವತಂ ॥ ೩೨ ॥
ದೃಶ್ಯಾಽದೃಶ್ಯಮಜಂ ಚೈವ ವೈರಾಜಂ ಸಂತತೋಜ್ವಲಂ ।
ಬಹುಲಂ ಸರ್ವಜಂ ಧರ್ಮ್ಯಂ ನಿರ್ವಿಕಲ್ಪಮನೀಶ್ವರಂ ॥ ೩೩ ॥

---

೨೭–೨೮. ಧ್ಯಾನಯೋಗದಿಂದ ಪಾಪವು ಕ್ಷಯಿಸುವುದು. ಬೇರೆ ವಿಧದಿಂದ ಕ್ಷಯಿಸುವುದಿಲ್ಲ. ಜಪಧ್ಯಾನಮಯವಾದ ಯೋಗವು ಶಬ್ದಬ್ರಹ್ಮನಿಂದ ಹುಟ್ಟಿರುವುದೂ, ದ್ವಾದಶಾಕ್ಷರವೂ ಆಗಿ ಕರ್ಮಯೋಗವೆನ್ನಿಸಿಕೊಳ್ಳುವುದು. ಧ್ಯಾನದಿಂದ ಎಲ್ಲವನ್ನೂ, ಶುದ್ಧತೆಯನ್ನೂ ಹೊಂದುವನು.

೨೯. ಧ್ಯಾನದಿಂದ ಪರಬ್ರಹ್ಮನನ್ನು ಹೊಂದುವನು. ಮೂರ್ತಿಯಲ್ಲಿ ಮನಸ್ಸನ್ನಿಡುವುದು ಧ್ಯಾನಯೋಗವು. ನಾರಾಯಣನ ದರ್ಶನವಾಗುವುದರಿಂದ ಧ್ಯಾನಯೋಗವು ಸಾವಲಂಬವಾಗಿರುವುದು.

೩೦–೩೩. ಎರಡನೆಯ ಧ್ಯಾನಯೋಗವು ಸಕಲಾಶ್ರಯವಾಗಿರುವುದು. ಪಾರ್ವತಿ! ನೀನು ರೂಪವಿಲ್ಲದಿರುವುದೂ, ಅರಿಯಲಶಕ್ಯವೂ, ಸರ್ವದೇಹಾಂತರ್ವ್ಯಾಪಿಯೂ, ತೇಜೋರೂಪವೂ, ಕೋಟಿಮಿಂಚುಗಳಿಗೆ ಸಮವೂ, ಯಾವಾಗಲೂ ಪ್ರಕಾಶಗೊಂಡಿರುವುದೂ, ಅಖಂಡವೂ, ಕಲಾಹೀನವೂ, ಕಲಾಸಹಿತವೂ, ದೋಷರಹಿತವೂ, ಆಕಾಶರೂಪವೂ, ಭೋಗರೂಪವೂ, ತುರೀಯಾತೀತವೂ, ಅಸದೃಶವೂ, ಭ್ರಾಂತಕರಣವುಳ್ಳುದೂ, ಮೂರ್ತವೂ, ಪ್ರಕೃತಿಯಲ್ಲಿರುವುದೂ, ಶಾಶ್ವತವೂ, ದೃಶ್ಯಾದೃಶ್ಯರೂಪವೂ, ಉತ್ಪತ್ತಿರಹಿತವೂ, ವಿರಾಡ್ರೂಪವೂ, ಸತತಪ್ರಕಾಶವೂ, ಬಹುಲವೂ, ಸರ್ವಜನಕವೂ, ಧರ್ಮದಿಂದ ಕೂಡಿರುವುದೂ, ವಿಕಲ್ಪರಹಿತವೂ, ಸ್ವಾಮಿಯಿಲ್ಲದಿರುವುದೂ, ಗೋತ್ರವಿಲ್ಲದಿರುವುದೂ, ಆವರಕವೂ, ಶತಬ್ರಹ್ಮಾಂಡ

ಅಗೋತ್ರಂ ವರಣಂ ವಾಽಪಿ ಬ್ರಹ್ಮಾಂಡಶತಕಾರಣಂ ।
ನಿರೀಹಂ ನಿರ್ಮಮಂ ಬುದ್ಧಿಶೂನ್ಯರೂಪಂ ಚ ನಿರ್ಮಲಂ ॥ ೩೪ ॥
ತದೀಶರೂಪಂ ನಿರ್ದೇಹಂ ನಿರ್ದ್ವಂದ್ವಂ ಸಾಕ್ಷಿಮಾತ್ರಕಂ ।
ಶುದ್ಧಸ್ಫಟಿಕಸಂಕಾಶಂ ಧ್ಯಾತೃಧ್ಯೇಯವಿವರ್ಜಿತಂ ।
ನೋಪಮೇಯಮಗಾಧಂ ತ್ವಂ ಸ್ವೀಕುರುಷ್ವ ಸ್ವತೇಜಸಾ ॥ ೩೫ ॥

ಪಾರ್ವತ್ಯುವಾಚ :—

ತತ್ಕಥಂ ಪ್ರಾಪ್ಯತೇ ಸಮ್ಯಗ್ಜ್ಞಾನಂ ಯೋಗಿಸ್ವರೂಪಿಣಂ ।
ನಾರಾಯಣಮಮೂರ್ತಂ ಚ ಸ್ಥಾನಂ ತಸ್ಯ ವದ ಪ್ರಭೋ ॥ ೩೬ ॥

ಈಶ್ವರ ಉವಾಚ :—

ಶಿರಃ ಪ್ರಧಾನಂ ಗಾತ್ರೇಷು ಶಿರಸಾ ಧಾರ್ಯತೇ ಮಹಾನ್ ॥ ೩೭ ॥
ಶಿರಸಾ ಪೂಜಿತೋ ದೇವಃ ಪೂಜಿತಂ ಸಕಲಂ ಜಗತ್ ।
ಶಿರಸಾ ಧಾರ್ಯತೇ ಯೋಗಃ ಶಿರಸಾ ಧ್ರಿಯತೇ ಬಲಂ ॥ ೩೮ ॥
ಶಿರಸಾ ಧ್ರಿಯತೇ ತೇಜೋ ಜೀವಿತಂ ಶಿರಸಿ ಸ್ಥಿತಂ ।
ಸೂರ್ಯಃ ಶಿರೋ ಹ್ಯಮೂರ್ತಸ್ಯ ಮೂರ್ತಸ್ಯಾಽಪಿ ತಥೈವ ಚ ॥ ೩೯ ॥
ಉರಸ್ತು ಪೃಥಿವೀಲೋಕಃ ಪಾದಶ್ಚೈವ ರಸಾತಲಂ ।
ಅಯಂ ಬ್ರಹ್ಮಾಂಡರೂಪೇ ಚ ಮೂರ್ತಾಮೂರ್ತಸ್ವರೂಪತಃ ॥ ೪೦ ॥

---

ಕಾರಣವೂ, ಆಶೆ, ಮಮತೆ, ಬುದ್ಧಿಗಳಿಲ್ಲದಿರುವುದೂ, ನಿರ್ಮಲವೂ, ದೇಹರಹಿತವೂ, ದ್ವಂದ್ವಾತೀತವೂ, ಸಾಕ್ಷಿರೂಪವೂ, ಶುದ್ಧಸ್ಫಟಿಕಕ್ಕೆ ಸಮಾನವೂ, ಧ್ಯಾತೃಧ್ಯೇಯಗಳಿಲ್ಲದಿರುವುದೂ, ಉಪಮೇಯರಹಿತವೂ, ಆಗಾಧವೂ ಆದ ಆ ಈಶ್ವರತೇಜಸ್ಸನ್ನು ನೀನು ನಿನ್ನ ತೇಜಸ್ಸಿನಿಂದ ಸ್ವೀಕರಿಸು.

೩೬. ಪಾರ್ವತಿಯು ಹೇಳುತ್ತಾಳೆ :—ಪ್ರಭುವೆ! ಸಮ್ಯಗ್ಜ್ಞಾನರೂಪನೂ, ಯೋಗಿರೂಪಿಯೂ ಆದ ನಾರಾಯಣನನ್ನೂ, ಆ ಅಮೂರ್ತಸ್ಥಾನವನ್ನೂ ಪಡೆಯುವ ಬಗೆ ಹೇಗೆ? ಹೇಳು.

೩೭. ಈಶ್ವರನು ಹೇಳುತ್ತಾನೆ :—ದೇಹದಲ್ಲಿ ತಲೆಯು ಮುಖ್ಯವಾದುದು. ಆ ತಲೆಯಿಂದ ಮಹಾತ್ಮನಾದ ಪರಮಾತ್ಮನನ್ನು ಧರಿಸುತ್ತಾರೆ.

೩೮. ತಲೆಯಿಂದ ಪರಮಾತ್ಮನನ್ನು ಪೂಜಿಸಿದರೆ ಸಕಲ ಪ್ರಪಂಚವೂ ಪೂಜಿಸಿದಂತಾಗುವುದು. ಶಿರಸ್ಸಿನಿಂದ ಯೋಗವನ್ನೂ ಬಲವನ್ನೂ ಧರಿಸುತ್ತಾರೆ.

೩೯. ತಲೆಯಿಂದ ತೇಜಸ್ಸು ಧರಿಸಲ್ಪಡುತ್ತದೆ. ಜೀವವು ಶಿರಸ್ಸಿನಲ್ಲಿರುವುದು. ಸೂರ್ಯನು ಅಮೂರ್ತನೂ ಮೂರ್ತನೂ ಆದ ಪರಮಾತ್ಮನ ತಲೆಯು.

೪೦. ಎದೆಯು ಭೂಲೋಕವು. ಪಾದವು ಪಾತಾಳವು. ಈ ಪರಮಾತ್ಮನು ಮೂರ್ತಾಮೂರ್ತ ಸ್ವರೂಪದಿಂದ ಬ್ರಹ್ಮಾಂಡದ ರೂಪದಲ್ಲಿರುವನು.

ವಿಷ್ಣುರೇವ ಬ್ರಹ್ಮರೂಪೋ ಜ್ಞಾನಯೋಗಾಶ್ರಯಃ ಸ್ವಯಂ ।
ಸೃಜತೇ ಸರ್ವಭೂತಾನಿ ಪಾಲಯತ್ಯಪಿ ಸರ್ವಶಃ ॥ ೪೧ ॥
ವಿನಾಶಯತಿ ಸರ್ವಂ ಹಿ ಸರ್ವದೇವಮಯೋ ಹ್ಯಯಂ ।
ಸರ್ವಮಾಸೇಷ್ವಾಧಿಪತ್ಯಂ ಯಸ್ಯ ವಿಷ್ಣೋಃ ಸನಾತನಂ ॥ ೪೨ ॥
ತಸ್ಮಾತ್ಸರ್ವೇಷು ಮಾಸೇಷು ಸರ್ವೇಷು ದಿವಸೇಷ್ವಪಿ ।
ಸರ್ವೇಷು ಯಾಮಕಾಲೇಷು ಸಂಸ್ಮರನ್ ಮುಚ್ಯತೇ ಹರಿಂ ॥ ೪೩ ॥
ಚಾತುರ್ಮಾಸ್ಯೇ ವಿಶೇಷೇಣ ಧ್ಯಾನಮಾತ್ರಾತ್ಪ್ರಮುಚ್ಯತೇ ।
ಅಮೂರ್ತಸೇವನಂ ಗಂಗಾತೀರ್ಥಧ್ಯಾನಾದ್ವರಂ ಪರಂ ॥ ೪೪ ॥
ಸರ್ವದಾನೋತ್ತರಂ ಚೈವ ಚಾತುರ್ಮಾಸ್ಯೇ ನ ಸಂಶಯಃ ।
ಸರ್ವಮಾಸಕೃತಂ ಪಾಪಂ ಚಾತುರ್ಮಾಸ್ಯೇ ಶುಭಾಶುಭಂ । ॥ ೪೫ ॥
ಅಕ್ಷಯ್ಯಂ ತದ್ಭವೇದ್ದೇವಿ ನಾಽತ್ರ ಕಾರ್ಯಾ ವಿಚಾರಣಾ ।
ತಸ್ಮಾತ್ಸರ್ವಪ್ರಯತ್ನೇನ ಜ್ಞಾನಯೋಗೋ ಬಹೂತ್ತಮಃ ॥ ೪೬ ॥
ಸೇವಿತೋ ವಿಷ್ಣುರೂಪೇಣ ಬ್ರಹ್ಮ ಮೋಕ್ಷಪ್ರದಾಯಕಃ ।
ಶೃಣುಷ್ವಾವಹಿತಾ ಭೂತ್ವಾ ಮೂರ್ತಾಮೂರ್ತೇಃ ಸ್ಥಿತಿಂ ಶುಭೇ ॥ ೪೭ ॥

---

೪೧–೪೨. ಬ್ರಹ್ಮರೂಪನೂ, ಜ್ಞಾನಯೋಗಗಳಿಗೆ ಆಶ್ರಯನೂ ಆದ ವಿಷ್ಣುವೇ ಸಕಲ ಪ್ರಾಣಿಗಳನ್ನು ಸೃಷ್ಟಿಸುತ್ತಾನೆ, ಪಾಲಿಸುತ್ತಾನೆ ಮತ್ತು ನಾಶಗೊಳಿಸುತ್ತಾನೆ. ಇವನು ಸಕಲ ದೇವತಾರೂಪನಾಗಿರುವನು. ಈ ವಿಷ್ಣುವು ಅನಾದಿಯಾಗಿ ಸಕಲ ಮಾಸಗಳಿಗೆ ಅಧಿಪತಿಯಾಗಿರುವನು.

೪೩. ಆದುದರಿಂದ ಸಕಲ ಮಾಸಗಳಲ್ಲಿಯೂ, ಸಮಸ್ತ ದಿವಸಗಳಲ್ಲಿಯೂ, ಸಕಲ ಯಾಮಗಳಲ್ಲಿಯೂ ಹರಿಯನ್ನು ಸ್ಮರಿಸುತ್ತಿರುವವನು ಮುಕ್ತನಾಗುವನು.

೪೪. ಚಾತುರ್ಮಾಸ್ಯದಲ್ಲಿ ಮನುಷ್ಯನು ವಿಷ್ಣುವಿನ ಧ್ಯಾನಮಾತ್ರದಿಂದಲೇ ಮುಕ್ತನಾಗುವನು. ಅಮೂರ್ತನಾದ ಪರಮಾತ್ಮನ ಸೇವನೆಯು ಗಂಗೆಯ ಧ್ಯಾನಕ್ಕಿಂತಲೂ ಉತ್ತಮವಾದುದು.

೪೫–೪೭. ಚಾತುರ್ಮಾಸ್ಯದಲ್ಲಿ ಮಾಡುವ ಸಕಲ ದಾನಗಳೂ ಉತ್ತಮ ವಾಗುವುವು. ಸಕಲ ಮಾಸಗಳಲ್ಲಿ ಮಾಡಿದ ಪಾಪವು ಚಾತುರ್ಮಾಸ್ಯದಲ್ಲಿ ಪರಿಹಾರವಾಗುವುದು. ಚಾತುರ್ಮಾಸ್ಯದಲ್ಲೆಸಗಿದ ಶುಭಾಶುಭ ಕರ್ಮಗಳು ಅಕ್ಷಯವಾಗುವುವು. ಈ ವಿಷಯದಲ್ಲಿ ವಿಚಾರವಿಲ್ಲ. ಆದುದರಿಂದ ಪ್ರಯತ್ನ ದಿಂದ ಸೇವಿಸಿದ ವಿಷ್ಣುವಿನ ಉತ್ತಮ ಜ್ಞಾನಯೋಗವು ಬ್ರಹ್ಮ ಮತ್ತು ಮೋಕ್ಷ ಗಳನ್ನು ಕೊಡುವುದು. ಇದನ್ನು ಸಾವಧಾನಮನಸ್ಸಿನಿಂದ ಕೇಳು. ಮಂಗಳಕರಳೆ! ಮೂರ್ತಾಮೂರ್ತನಾದ ವಿಷ್ಣುವಿನಲ್ಲಿ ಮನಸ್ಸನ್ನಿಡು.

ನ ಕಥ್ಯೇಯಂ ಯಸ್ಯ ಕಸ್ಯ ಸುತಸ್ಯಾಽಪ್ಯಪರಸ್ಯ ಚ ।
ಅದಾಂತಾಯಾಽಥ ದುಷ್ಟಾಯ ಚಲಚಿತ್ತಾಯ ದಾಂಭಿಕೇ ॥ ೪೮ ॥
ಸ್ವವಾಕ್ಚ್ಯುತಾಯ ನಿಂದ್ಯಾಯ ನ ವಾಚ್ಯಾ ಯೋಗಜಾ ಕಥಾ ।
ನಿತ್ಯಭಕ್ತಾಯ ದಾಂತಾಯ ಶಮಾದಿಗುಣಿನೇ ತಥಾ ॥ ೪೯ ॥
ವಿಷ್ಣುಭಕ್ತಾಯ ದಾತವ್ಯಾ ಶೂದ್ರಾಯಾಽಪಿ ದ್ವಿಜನ್ಮನೇ ।
ಅಭಕ್ತಾಯಾಽಪ್ಯಶುಚಯೇ ಬ್ರಹ್ಮಸ್ಥಾನಂ ನ ಕಥ್ಯತೇ ॥ ೫೦ ॥
ಮದ್ಭಕ್ತ್ಯಾ ಯೋಗಸಿದ್ಧಿಂ ತ್ವಂ ಗೃಹಾಣಾಽಽಶು ತಪೋಧನೇ ।
ಅಭೂತಂ ಜ್ಞಾನಗಮ್ಯಂ ತಂ ವಿದ್ಧಿ ನಾರಾಯಣಂ ಪರಂ ॥ ೫೧ ॥
ನಾದರೂಪೇಣ ಶಿರಸಿ ತಿಷ್ಠಂತಂ ಸರ್ವದೇಹಿನಾಂ ।
ಸ ಏವ ಜೀವಶಿರಸಿ ವರ್ತತೇ ಸೂರ್ಯಬಿಂಬವತ್ ॥ ೫೨ ॥
ಸದೋದಿತಃ ಸೂಕ್ಷ್ಮರೂಪೋಽಮೂರ್ತೋ ಮೂರ್ತ್ಯಾಂ ಪ್ರಣೀಯತೇ ।
ಅಭ್ಯಾಸೇನ ಸದಾ ದೇವಿ ಪ್ರಾಪ್ಯತೇ ಪರಮಾತ್ಮಕಃ ॥ ೫೩ ॥
ಶರೀರೇ ಸಕಲಾ ದೇವಾ ಯೋಗಿನೋ ನಿವಸಂತಿ ಹಿ ।
ಕರ್ಣೇ ತು ದಕ್ಷಿಣೇ ನದ್ಯೋ ನಿವಸಂತಿ ತಥಾಽಪರಾಃ ॥ ೫೪ ॥
ಹೃದಯೇ ಚೇಶ್ವರಃ ಶಂಭುರ್ನಾಭೌ ಬ್ರಹ್ಮಾ ಸನಾತನಃ ।
ಪೃಥ್ವೀ ಪಾದತಲಾಗ್ರೇ ತು ಜಲಂ ಸರ್ವಗತಂ ತಥಾ ॥ ೫೫ ॥

---

೪೮–೫೦. ಇಂದ್ರಿಯನಿಗ್ರಹವಿಲ್ಲದವನೂ, ದುಷ್ಟನೂ, ಚಂಚಲನೂ, ದಾಂಭಿಕನೂ, ಮಾತನ್ನು ತಪ್ಪುವವನೂ, ನಿಂದ್ಯನೂ ಆದ ಯಾವನಿಗೂ ಈ ಯೋಗವಿಷಯವನ್ನು ಹೇಳಕೂಡದು. ಪರಮಾತ್ಮನಲ್ಲಿ ಭಕ್ತಿಯುಳ್ಳವನೂ, ಜಿತೇಂದ್ರಿಯನೂ, ಶಮಾದಿಗುಣವಿಶಿಷ್ಟನೂ, ವಿಷ್ಣುಭಕ್ತನೂ ಆದ ಶೂದ್ರನಿಗೂ, ಬ್ರಾಹ್ಮಣನಿಗೂ ಹೇಳಬೇಕು. ಅಭಕ್ತನೂ, ಅಶುಚಿಯೂ ಆದವನಿಗೆ ಬ್ರಹ್ಮ ವಿಷಯವನ್ನು ಹೇಳುವುದಿಲ್ಲ.

೫೧–೫೨. ಎಲೌ ತಪಸ್ವಿನಿಯಾದ ಪಾರ್ವತಿಯೆ! ನೀನು ನನ್ನ ಭಕ್ತಿಯಿಂದ ಯೋಗಸಿದ್ಧಿಯನ್ನು ಹೊಂದು. ಅಪೂರ್ವನೂ, ಜ್ಞಾನಗಮ್ಯನೂ, ನಾದರೂಪ ದಿಂದ ಸಕಲ ಪ್ರಾಣಿಗಳ ಮಸ್ತಕದಲ್ಲಿರುವವನೂ ಆದ ಆ ನಾರಾಯಣನನ್ನು ತಿಳಿ. ಅವನೇ ಸೂರ್ಯನ ಬಿಂಬದಂತೆ ಜೀವನ ತಲೆಯಲ್ಲಿರುವವನು.

೫೩. ಯಾವಾಗಲೂ ಪ್ರಕಾಶಗೊಂಡವನೂ, ಸೂಕ್ಷ್ಮರೂಪನೂ, ಅಮೂರ್ತನೂ ಆದ ಅವನನ್ನು ಮೂರ್ತಿರೂಪದಿಂದ ನಿರ್ಮಿಸುತ್ತಾರೆ. ದೇವಿ! ಯಾವಾಗಲೂ ಅಭ್ಯಾಸಮಾಡುವುದರಿಂದ ಆ ಪರಮಾತ್ಮನು ಲಭಿಸುವನು.

೫೪–೫೫. ಯೋಗಿಯ ಶರೀರದಲ್ಲಿ ಸಮಸ್ತ ದೇವತೆಗಳೂ ವಾಸಿಸುತ್ತಾರೆ. ಬಲಗಿವಿಯಲ್ಲಿ ನದಿಗಳೂ, ಹೃದಯದಲ್ಲಿ ಶಂಕರನೂ, ನಾಭಿಯಲ್ಲಿ ಸನಾತನನಾದ ಬ್ರಹ್ಮನೂ, ಪಾದತಳದಲ್ಲಿ ಭೂಮಿಯೂ, ಶರೀರದ ಎಲ್ಲಾ ಭಾಗದಲ್ಲಿ ನೀರೂ,

ತೇಜೋ ವಾಯುಸ್ತಥಾಽಽಕಾಶಂ ವಿದ್ಯತೇ ಭಾಲಮಧ್ಯತಃ ।
ಹಸ್ತೇ ಚ ಪಂಚತೀರ್ಥಾನಿ ದಕ್ಷಿಣೇ ನಾಽತ್ರ ಸಂಶಯಃ ॥ ೫೬ ॥
ಸೂರ್ಯೋ ಯದ್ದಕ್ಷಿಣಂ ನೇತ್ರಂ ಚಂದ್ರೋ ವಾಮಮುದಾಹೃತಂ ।
ಭೌಮಶ್ಚೈವ ಬುಧಶ್ಚೈವ ನಾಸಿಕೇ ದ್ವೇ ಉದಾಹೃತೇ ॥ ೫೭ ॥
ಗುರುಶ್ಚ ದಕ್ಷಿಣೇ ಕರ್ಣೇ ವಾಮಕರ್ಣೇ ತಥಾ ಭೃಗುಃ ।
ಮುಖೇ ಶನೈಶ್ಚರಃ ಪ್ರೋಕ್ತೋ ಗುದೇ ರಾಹುಃ ಪ್ರಕೀರ್ತಿತಃ ॥ ೫೮ ॥
ಕೇತುರಿಂದ್ರಿಯಗಃ ಪ್ರೋಕ್ತೋ ಗ್ರಹಾಃ ಸರ್ವೇ ಶರೀರಗಾಃ ।
ಯೋಗಿನೋ ದೇಹಮಾಸಾದ್ಯ ಭುವನಾನಿ ಚತುರ್ದಶ ॥ ೫೯ ॥
ಪ್ರವರ್ತಂತೇ ಸದಾ ದೇವಿ ತಸ್ಮಾದ್ಯೋಗಂ ಸದಾಽಭ್ಯಸೇತ್ ।
ಚಾತುರ್ಮಾಸ್ಯೇ ವಿಶೇಷೇಣ ಯೋಗೀ ಪಾಪಂ ನಿಕೃಂತತಿ ॥ ೬೦ ॥
ಮುಹೂರ್ತಮಪಿ ಯೋ ಯೋಗೀ ಮಸ್ತಕೇ ಧಾರಯೇನ್ಮನಃ ।
ಕರ್ಣೌ ಪಿಧಾಯ ಪಾಪೇಭ್ಯೋ ಮುಚ್ಯತೇಽಸೌ ನ ಸಂಶಯಃ ॥ ೬೧ ॥
ಅಂತರಂ ನೈವ ಪಶ್ಯಾಮಿ ವಿಷ್ಣೋರ್ಯೋಗಪರಸ್ಯವಾ ।
ಏಕೋಽಪಿ ಯೋಗೀ ಯದ್ಗೇಹೇ ಗ್ರಾಸಮಾತ್ರಂ ಭುನಕ್ತಿ ಚ ॥ ೬೨ ॥

---

ಹಣೆಯ ನಡುವೆ ತೇಜಸ್ಸು, ವಾಯು, ಆಕಾಶಗಳೂ, ಬಲಗೈಯಲ್ಲಿ ಪಂಚತೀರ್ಥಗಳೂ ನೆಲೆಸಿರುವುವು.

೫೭. ಸೂರ್ಯನು ಬಲಗಣ್ಣೂ, ಚಂದ್ರನು ಎಡಗಣ್ಣೂ, ಅಂಗಾರಕ ಬುಧರು ಎರಡು ಮೂಗುಗಳೂ ಆಗಿರುವರು.

೫೮–೬೦. ಬಲಗಿವಿಯಲ್ಲಿ ಬೃಹಸ್ಪತಿಯೂ, ಎಡಗಿವಿಯಲ್ಲಿ ಶುಕ್ರನೂ, ಮುಖದಲ್ಲಿ ಶನಿಯೂ, ಗುದದಲ್ಲಿ ರಾಹುವೂ, ಜನನೇಂದ್ರಿಯದಲ್ಲಿ ಕೇತುವೂ ಇರುವರು. ಹೀಗೆ ಸಕಲ ಗ್ರಹಗಳು ಯೋಗಿಯ ಶರೀರದಲ್ಲಿರುವರು. ಹದಿನಾಲ್ಕು ಲೋಕಗಳು ಯೋಗಿಯ ಶರೀರವನ್ನಾಶ್ರಯಿಸಿ ಯಾವಾಗಲೂ ತಮ್ಮ ಕಾರ್ಯವನ್ನೆಸಗುವುವು. ಆದುದರಿಂದ ಯಾವಾಗಲೂ ಯೋಗಾಭ್ಯಾಸ ಮಾಡಬೇಕು. ಯೋಗಿಯು ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಪಾಪವನ್ನು ಪರಿಹರಿಸಿಕೊಳ್ಳುವನು.

೬೧. ಯೋಗಿಯು ಕಿವಿಗಳನ್ನು ಮುಚ್ಚಿಕೊಂಡು ಒಂದು ಮುಹೂರ್ತಕಾಲ ತಲೆಯಲ್ಲಿ ಮನಸ್ಸನ್ನು ತಡೆದರೆ ಅವನು ನಿಶ್ಚಯವಾಗಿಯೂ ಪಾಪಮುಕ್ತನಾಗುವನು.

೬೨–೬೯. ನಾನು ವಿಷ್ಣುವಿಗೂ, ಯೋಗಿಗೂ ವ್ಯತ್ಯಾಸವನ್ನರಿಯುವುದಿಲ್ಲ. ಯಾವನ ಮನೆಯಲ್ಲಿ ಒಬ್ಬ ಯೋಗಿಯಾದರೂ ಒಂದು ಕವಳ ಅನ್ನವನ್ನು ಭಕ್ಷಿಸು

ಕುಲಾನಿ ತ್ರೀಣಿ ಸೋಽವಶ್ಯಂ ತಾರಯೇದಾತ್ಮನಾ ಸಹ ।
ಯದಿ ವಿಪ್ರೋ ಭವೇದ್ಯೋಗೀ ಸೋಽವಶ್ಯಂ ದರ್ಶನಾದಪಿ ॥ ೧೩ ॥
ಸರ್ವೇಷಾಂ ಪ್ರಾಣಿನಾಂ ದೇವಿ ಪಾಪರಾಶಿನಿಷೂದಕಃ ।
ಸಕ್ರಿಯೋ ಬ್ರಹ್ಮನಿರತಃ ಸಚ್ಛೂದ್ರೋ ಯೋಗಭಾಗ್ಯದಿ ॥ ೧೪ ॥
ಭವೇತ್ಸದ್ಗುರುಭಕ್ತೋ ವಾ ಸೋಽಪ್ಯಮೂರ್ತಫಲಂ ಲಭೇತ್ ।
ಯೋ ಯೋಗೀ ನಿಯತಾಹಾರಃ ಪರಬ್ರಹ್ಮ ಸಮಾಧಿಮಾನ್ ॥ ೧೫ ॥
ಚಾತುರ್ಮಾಸ್ಯೇ ವಿಶೇಷೇಣ ಹರೌ ಸ ಲಯಭಾಗ್ಭವೇತ್ ।
ಯಥಾ ಸಿದ್ಧಕರಸ್ಪರ್ಶಾಲ್ಲೋಹಂ ಭವತಿ ಕಾಂಚನಂ ॥ ೧೬ ॥
ತಥಾ ಮೂರ್ತಂ ಹರಿಪ್ರೀತ್ಯಾ ಮನುಷ್ಯೋ ಲಯಮಾವ್ರಜೇತ್ ।
ಯಥಾ ಮಾರ್ಗಜಲಂ ಗಂಗಾ ಪತಿತಂ ತ್ರಿದಶೈರಪಿ ॥ ೧೭ ॥
ಸೇವಿತಂ ಸರ್ವಫಲದಂ ತಥಾ ಯೋಗೀ ವಿಮುಕ್ತಿದಃ ।
ಯಥಾ ಗೋಮಯಮಾತ್ರೇಣ ವಹ್ನಿರ್ದೀಪ್ಯತಿ ಸರ್ವದಾ ॥ ೧೮ ॥
ದೇವತಾನಾಂ ಮುಖಂ ತದ್ಧಿ ಕೀರ್ತ್ಯತೇ ಯಾಜ್ಞಿಕೈಃ ಸದಾ ।
ಏವಂ ಯೋಗೀ ಸದಾಽಭ್ಯಾಸಾಜ್ಜಾಯತೇ ಮೋಕ್ಷಭಾಜನಂ ॥ ೧೯ ॥
ಯೋಗೋಽಯಂ ಸೇವ್ಯತೇ ದೇವಿ ಜ್ಞಾನಸಿದ್ಧಿಪ್ರದಃ ಸದಾ ।
ಸನಕಾದಿಭಿರಾಚಾರ್ಯೈರ್ಮುಮುಕ್ಷುಭಿರಧೀಶ್ವರೈಃ ॥ ೨೦ ॥

---

ವನೊ, ಆ ಮನೆಯವನು ತನ್ನೊಡನೆ ಮೂರು ಕುಲಗಳನ್ನು ಉದ್ಧರಿಸುವನು. ಬ್ರಾಹ್ಮಣನು ಯೋಗಿಯಾದರೆ ಅವನು ದರ್ಶನಮಾತ್ರದಿಂದಲೆ ಸಮಸ್ತ ಪ್ರಾಣಿಗಳ ಪಾಪಸಮೂಹವನ್ನು ನಾಶಗೊಳಿಸುವನು. ಕ್ರಿಯಾಸಹಿತನೂ, ಬ್ರಹ್ಮನಿಷ್ಠನೂ ಆದ ಸಚ್ಛೂದ್ರನು ಯೋಗಭಾಗಿಯಾದರೆ ಅಥವಾ ಸದ್ಗುರುಭಕ್ತನಾದರೆ ಅವನು ಅಮೂರ್ತಫಲವನ್ನು ಪಡೆಯುವನು. ಮಿತಾಹಾರಿಯೂ, ಪರಬ್ರಹ್ಮನಲ್ಲಿ ಭಕ್ತಿಯುಳ್ಳವನೂ ಆದ ಯೋಗಿಯು ಚಾತುರ್ಮಾಸ್ಯದಲ್ಲಿ ವಿಶೇಷವಾಗಿ ಹರಿಯಲ್ಲಿ ಲೀನನಾಗುವನು. ಸಿದ್ಧಪುರುಷನ ಹಸ್ತಸ್ಪರ್ಶದಿಂದ ಕಬ್ಬಿಣವು ಚಿನ್ನವಾಗುವಂತೆ ಮನುಷ್ಯನು ಹರಿಪ್ರೀತಿಯಿಂದ ಮೂರ್ತನಾದ ಅವನಲ್ಲಿ ಲಯವಾಗುವನು. ದಾರಿಯ ನೀರು ಗಂಗೆಯಲ್ಲಿ ಸೇರಿದರೆ ಹೇಗೆ ದೇವತೆಗಳಿಂದ ಸೇವಿಸಲ್ಪಟ್ಟದ್ದೂ, ಸಕಲ ಫಲವನ್ನು ಕೊಡುವುದೂ ಆಗುವುದೊ, ಹಾಗೆಯೇ ಯೋಗಿಯು ಮೋಕ್ಷವನ್ನು ಕೊಡುವನು. ಗೋಮಯದಿಂದ ಜ್ವಲಿಸುವ ಅಗ್ನಿಯನ್ನು ಯಾಜ್ಞಿಕರು ದೇವತೆಗಳ ಮುಖವೆಂದು ತಿಳಿದಿರುವಂತೆ ಯೋಗಿಯು ಯಾವಾಗಲೂ ಅಭ್ಯಾಸದಿಂದ ಮೋಕ್ಷಕ್ಕೆ ಪಾತ್ರನಾಗುವನು.

೨೦. ಜ್ಞಾನಸಿದ್ಧಿಯನ್ನೀಯುವ ಈ ಯೋಗವನ್ನು ಮೋಕ್ಷಾರ್ಥಿಗಳೂ, ಅಧೀಶ್ವರರೂ ಆದ ಸನಕಾದ್ಯಾಚಾರ್ಯರು ಯಾವಾಗಲೂ ಸೇವಿಸುವರು.

ಪ್ರಥಮಂ ಜ್ಞಾನಸಂಪತ್ತಿರ್ಜಾಯತೇ ಯೋಗಿನಾಂ ಸದಾ ।
ತೇಷಾಂ ಗೃಹೀತಮಾತ್ರಸ್ತು ಯೋಗೀ ಭವತಿ ಪಾರ್ವತಿ ॥ ೭೧ ॥
ತತಸ್ತು ಸಿದ್ಧಯಸ್ತಸ್ಯ ತ್ವಣಿಮಾದ್ಯಾಃ ಪುರೋಗತಾಃ ।
ಭವಂತಿ ತತ್ರಾಽಪಿ ಮನೋ ನ ದದ್ಯಾದ್ಯೋಗಿನಾಂ ವರಃ ॥ ೭೨ ॥
ಸರ್ವದಾನಕ್ರತುಭವಂ ಪುಣ್ಯಂ ಭವತಿ ಯೋಗತಃ ।
ಯೋಗಾತ್ಸಕಲಕಾಮಾಪ್ತಿರ್ನ ಯೋಗಾದ್ಭುವಿ ಪ್ರಾಪ್ಯತೇ ॥ ೭೩ ॥
ಯೋಗಾನ್ನಹೃದಯಗ್ರಂಥಿರ್ನ ಯೋಗಾನ್ಮಮತಾ ರಿಪುಃ ।
ನ ಯೋಗಸಿದ್ಧಸ್ಯ ಮನೋಹರ್ತುಂ ಕೇನಾಽಪಿ ಶಕ್ಯತೇ ॥ ೭೪ ॥
ಸ ಏವ ವಿಮಲೋ ಯೋಗೀ ಯಚ್ಚಿತ್ತಂ ಶಿರಸಿ ಸ್ಥಿತಂ ।
ಸ್ಥಿರೀಭೂತವ್ಯಥಂ ನಿತ್ಯಂ ದಶಮದ್ವಾರ ಸಂಪುಟೇ ॥ ೭೫ ॥
ಕರ್ಣೌ ಪಿಧಾಯ ಮರ್ತ್ಯಸ್ಯ ನಾದರೂಪಂ ವಿಚಿನ್ವತಃ ।
ತದೇವ ಪ್ರಣವಸ್ಯಾಗ್ರಂ ತದೇವ ಬ್ರಹ್ಮಶಾಶ್ವತಂ ॥ ೭೬ ॥
ತದೇವಾಽನಂತರೂಪಾಖ್ಯಂ ತದೇವಾಽಮೃತಮುತ್ತಮಂ ।
ಘ್ರಾಣವಾಯೌ ಪ್ರಘೋಷೋಽಯಂ ಜಠರಾಗ್ನೇರ್ಮಹತ್ಪದಂ ॥ ೭೭ ॥

---

೭೧. ಯೋಗಿಗಳಿಗೆ ಯಾವಾಗಲೂ ಮೊದಲು ಜ್ಞಾನಸಂಪತ್ತುಂಟಾಗುವುದು. ಆ ಜ್ಞಾನಸಂಪತ್ತಿನಿಂದಲೆ ಅವರು ಯೋಗಿಗಳಾಗುವರು.

೭೨. ಅನಂತರ ಅವನಿಗೆ ಅಣಿಮಾದಿಸಿದ್ಧಿಗಳು ಮುಂಬರುವುವು. ಯೋಗೀಶ್ವರನು ಅವುಗಳಲ್ಲಿ ಮನವನ್ನಿಡಬಾರದು.

೭೩. ಯೋಗದಿಂದ ಸಕಲ ದಾನ ಯಜ್ಞಗಳಿಂದುಂಟಾಗುವ ಪುಣ್ಯವು ದೊರೆಯುವುದು. ಯೋಗದಿಂದ ಸಕಲೇಷ್ಟಾರ್ಥಗಳು ಲಭಿಸುವುವು. ಭೂಮಿಯಲ್ಲಿ ಅದರಿಂದ ದೊರೆಯದಿರುವುದು ಯಾವುದೂ ಇಲ್ಲ.

೭೪. ಯೋಗದಿಂದ ಹೃದಯಗ್ರಂಥಿಯು ಛಿನ್ನವಾಗುವುದು. ಮಮತೆಯೆಂಬ ಶತ್ರುವು ತೊಲಗುವುದು. ಯೋಗಸಿದ್ಧನ ಮನಸ್ಸನ್ನು ಅಪಹರಿಸಲು ಯಾರಿಗೂ ಶಕ್ತಿಯಿಲ್ಲ.

೭೫. ಯಾವಾಗಲೂ ವ್ಯಥೆಯನ್ನು ತಡೆದುಕೊಂಡು ತಲೆಯಲ್ಲಿರುವ ಹತ್ತನೆಯ ದ್ವಾರದ ಸಂಪುಟದಲ್ಲಿ ಮನಸ್ಸನ್ನಿಟ್ಟಿರುವವನು ಶುದ್ಧ ಯೋಗಿಯು.

೭೬–೭೮. ಕಿವಿಗಳನ್ನು ಮುಚ್ಚಿಕೊಂಡು ನಾದರೂಪಬ್ರಹ್ಮನನ್ನು ಹುಡುಕುತ್ತಿರುವ ಮಾನವನಿಗೆ ಅದೇ ಪ್ರಣವಾಗ್ರವೂ, ಶಾಶ್ವತಬ್ರಹ್ಮವೂ, ಅನಂತರೂಪವೆಂಬುದೂ, ಉತ್ತಮಾಮೃತವೂ, ಘ್ರಾಣವಾಯುವಿನ ಪ್ರಘೋಷವೂ, ಜಠರಾಗ್ನಿಯ ಉತ್ತಮಸ್ಥಾನವೂ, ಪಂಚಭೂತ ನಿವಾಸಸ್ಥಾನವೂ ಆಗಿರುವುದು.

ಪಂಚಭೂತಂ ನಿವಾಸಂ ಯಜ್ಜ್ಞಾನರೂಪಮಿದಂ ಪದಂ ।
ಪದಂ ಪ್ರಾಪ್ಯ ವಿಮುಕ್ತಿಃ ಸ್ಯಾಜ್ಜನ್ಮ ಸಂಸಾರ ಬಂಧನಾತ್ ॥ ೭೮ ॥
ಯದಾಪ್ತಿರ್ದುರ್ಲಭಾ ಲೋಕೇ ಯೋಗಸಿದ್ಧಿಪ್ರದಾಯಿಕಾ ॥ ೭೯ ॥
ಏವಂ ಬ್ರಹ್ಮಮಯಂ ವಿಭಾತಿ ಸಕಲಂ
ವಿಶ್ವಂ ಚರಂ ಸ್ಥಾವರಂ
ವಿಜ್ಞಾನಾಖ್ಯಮಿದಂ ಪದಂ ಸ ಭಗವಾನ್
ವಿಷ್ಣುಃ ಸ್ವಯಂ ವ್ಯಾಪಕಃ ।
ಜ್ಞಾತ್ವಾ ತಂ ಶಿರಸಿ ಸ್ಥಿತಂ ಬಹುವರಂ
ಯೋಗೇಶ್ವರಾಣಾಂ ಪರಂ
ಪ್ರಾಣೀ ಮುಂಚತಿ ಸರ್ಪವಜ್ಜಗತಿಜಾಂ
ನಿರ್ಮೋಕ ಮಾಯಾ ಕೃತಿಂ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಜ್ಞಾನಯೋಗಕಥನವರ್ಣನಂ" ನಾಮ
ದ್ವಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಈ ಜ್ಞಾನರೂಪಸ್ಥಾನವನ್ನು ಹೊಂದಿದ ಮಾನವನಿಗೆ ಜನ್ಮ ಸಂಸಾರಬಂಧಗಳಿಂದ ಮುಕ್ತಿಯಾಗುವುದು.

೭೯. ಯೋಗಸಿದ್ಧಿಯನ್ನೀಯುವ ಈ ಸ್ಥಾನಲಾಭವು ಲೋಕದಲ್ಲಿ ದುರ್ಲಭವು.

೮೦. ಹೀಗೆ ಸ್ಥಾವರಜಂಗಮಾತ್ಮಕವಾದ ಪ್ರಪಂಚವು ಬ್ರಹ್ಮಮಯವಾಗಿ ಕಾಣಿಸುವುದು. ಈ ವಿಜ್ಞಾನಾಖ್ಯಸ್ಥಾನವನ್ನು ವ್ಯಾಪಿಸಿರುವ ಯೋಗೀಶ್ವರನಾದ ವಿಷ್ಣುವು ತನ್ನ ಮಸ್ತಕದಲ್ಲಿರುವನೆಂದರಿತ ಪ್ರಾಣಿಯು ಸರ್ಪವು ಪರೆಯನ್ನು ಬಿಡುವಂತೆ ಜಗತ್ತಿನ ಮಾಯಾಕೃತಿಯನ್ನು ತ್ಯಜಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಜ್ಞಾನಯೋಗಕಥನವರ್ಣನ" ವೆಂಬ
ಇನ್ನೂರ ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ಮತ್ಸ್ಯೇಂದ್ರನಾಥೋತ್ಪತ್ತಿಕಥನವರ್ಣನಂ

ಈಶ್ವರ ಉವಾಚ :—

ಯದಿ ಚೇತ್ತಾಮಸಂ ಕರ್ಮ ತ್ಯಕ್ತ್ವಾ ಕರ್ಮಸು ಜಾಯತೇ ।
ತದಾ ಜ್ಞಾನಮಯೋ ಯೋಗೀ ಜೀವತಾಂ ಮೋಕ್ಷದಾಯಕಃ ॥ ೧ ॥
ಯದಿ ನಿರ್ಮಮತಾ ದೇಹೇ ಯದಾ ಚಿತ್ತಂ ಸುನಿರ್ಮಲಂ ।
ಯದಾ ಹರೌ ಭಕ್ತಿಯೋಗಸ್ತದಾ ಬಂಧೋ ನ ಕರ್ಮಣಾ ॥ ೨ ॥
ಕುರ್ವನ್ನೇವ ಹಿ ಕರ್ಮಾಣಿ ಮನಃ ಶಾಂತಂ ನೃಣಾಂ ಯದಾ ।
ತದಾ ಯೋಗಮಯೀ ಸಿದ್ಧಿರ್ಜಾಯತೇ ನಾಽತ್ರ ಸಂಶಯಃ ॥ ೩ ॥
ಗುರುತ್ವಂ ಸ್ಥಾನಮಸಕೃದನುಭೂಯ ಮಹಾಮತಿಃ ।
ಜೀವನ್ವಿಷ್ಣುತ್ವಮಾಸಾದ್ಯ ಕರ್ಮಸಂಗಾತ್ಪ್ರಮುಚ್ಯತೇ ॥ ೪ ॥
ಕರ್ಮಾಣಿ ನಿತ್ಯಜಾತಾನಿ ನಿತ್ಯ ನೈಮಿತ್ತಿಕಾನಿ ಚ ।
ಇಚ್ಛಯಾ ನೈವ ಸೇವ್ಯಾನಿ ದುಃಖತಾಪ ವಿವೃದ್ಧಯೇ ॥ ೫ ॥

---

## ಕನ್ನಡದ ಅನುವಾದ

### ಮತ್ಸ್ಯೇಂದ್ರನಾಥೋತ್ಪತ್ತಿಕಥನವರ್ಣನ

೧. ಈಶ್ವರನು ಹೇಳುತ್ತಾನೆ :—ಯೋಗಿಯು ತಾಮಸಕರ್ಮವನ್ನು ತ್ಯಜಿಸಿ ಸಾತ್ವಿಕ ಕರ್ಮದಲ್ಲಾಸಕ್ತನಾದರೆ ಅವನು ಜೀವಗಳಿಗೆ ಮೋಕ್ಷವನ್ನೀಯುವನು.

೨. ದೇಹದಲ್ಲಿ ನಿರ್ಮಮತೆ, ಚಿತ್ತಶುದ್ಧಿ, ಹರಿಭಕ್ತಿ ಇವುಗಳುಂಟಾದರೆ ಕರ್ಮಬಂಧವಿಡುವುದಿಲ್ಲ.

೩. ಕರ್ಮವನ್ನು ಮಾಡುತ್ತಿರುವಾಗಲೇ ಮಾನವರ ಮನಸ್ಸು ಶಾಂತವಾದರೆ ಯೋಗಸಿದ್ಧಿಯುಂಟಾಗುವುದು.

೪. ಜ್ಞಾನಿಯು ಅನೇಕಸಾರಿ ಗುರುಸ್ಥಾನವನ್ನು ಅನುಭವಿಸಿ ಜೀವಿಸಿರುವಾಗಲೇ ವಿಷ್ಣುತ್ವವನ್ನು ಹೊಂದಿ ಕರ್ಮಸಂಗದಿಂದ ಮುಕ್ತನಾಗುವನು.

೫. ದುಃಖತಾಪಗಳನ್ನುಂಟುಮಾಡುವ ನಿತ್ಯನೈಮಿತ್ತಿಕ ಕರ್ಮಗಳನ್ನು ಸ್ವೇಚ್ಛೆಯಾಗಿ ಸೇವಿಸಬಾರದು.

ಕರ್ಮಣಾಮೀಶಿತಾರಂ ಚ ವಿಷ್ಣುಂ ವಿದ್ಧಿ ಮಹೇಶ್ವರಿ ।
ತಸ್ಮಿನ್ ಸಂತ್ಯಜ್ಯ ಸರ್ವಾಣಿ ಸಂಸಾರಾನ್ಮುಚ್ಯತೇಽಖಿಲಾತ್ ॥ ೬ ॥
ಏತದೇವ ಪರಂ ಜ್ಞಾನಮೇತದೇವ ಪರಂ ತಪಃ ।
ಏತದೇವ ಪರಂ ಶ್ರೇಯೋ ಯತ್ಕೃಷ್ಣೇ ಕರ್ಮಣೋಽರ್ಪಣಂ ॥ ೭ ॥
ಅಯಂ ಹಿ ನಿರ್ಮಲೋ ಯೋಗೋ ನಿರ್ಗುಣಃ ಸ ಉದಾಹೃತಃ ।
ತದ್ವಿಷ್ಣೋಃ ಕರ್ಮಜನಿತಂ ಶುಭತ್ವ ಪ್ರತಿಪಾದನಂ ॥ ೮ ॥
ತಾವದ್ಭ್ರಮಂತಿ ಸಂಸಾರೇ ಪಿತರಃ ಪಿಂಡತತ್ಪರಾಃ ।
ಯಾವತ್ಕುಲೇ ಭಕ್ತಿಯುತಃ ಸುತೋ ನೈವ ಪ್ರಜಾಯತೇ ॥ ೯ ॥
ತಾವದ್ವಿಜಾನಿ ಗರ್ಜಂತಿ ತಾವದ್ಗರ್ಜತಿ ಪಾತಕಂ ।
ತಾವತ್ತೀರ್ಥಾನ್ಯನೇಕಾನಿ ಯಾವದ್ಭಕ್ತಿಂ ನ ವಿಂದತಿ ॥ ೧೦ ॥
ಸ ಏವ ಜ್ಞಾನವಾಂಲ್ಲೋಕೇ ಯೋಗಿನಾಂ ಪ್ರಥಮೋ ಹಿ ಸಃ ।
ಮಹಾಕ್ರತೂನಾಮಾಹರ್ತಾ ಹರಿಭಕ್ತಿಯುತೋ ಹಿ ಸಃ ॥ ೧೧ ॥
ನಿಮಿಷಂ ನಿರ್ಣಯನ್ಮೇಷಂ ಯೋಗಃ ಸಮಭಿಜಾಯತೇ ।
ವಾಣೀಜಯೋ ಯೋಗಿನಸ್ತು ಗೋಮೇಧಶ್ಚ ಪ್ರಕೀರ್ತಿತಃ ॥ ೧೨ ॥

---

೬. ಮಹೇಶ್ವರಿ! ವಿಷ್ಣುವು ಕರ್ಮಗಳಿಗೆ ಒಡೆಯನಾಗಿರುವನೆಂದರಿ. ಅವನಲ್ಲಿ ಸಕಲ ಕರ್ಮಗಳನ್ನು ತ್ಯಜಿಸುವವನು ಸಕಲ ಸಂಸಾರಬಂಧನದಿಂದ ಮುಕ್ತನಾಗುವನು.

೭. ವಿಷ್ಣುವಿನಲ್ಲಿ ಕರ್ಮವನ್ನರ್ಪಿಸುವುದೇ ಉತ್ತಮಜ್ಞಾನವೂ, ತಪಸ್ಸೂ, ಶ್ರೇಯಸ್ಸೂ ಆಗಿರುವುದು.

೮. ಈ ನಿರ್ಮಲಯೋಗವು ನಿರ್ಗುಣವೆನ್ನಿಸಿಕೊಳ್ಳುವುದು. ಇದೇ ಕರ್ಮ ಜನ್ಯವಾದ ವಿಷ್ಣುವಿನ ಶುಭತ್ವವನ್ನು ಪ್ರತಿಪಾದಿಸುವುದು.

೯. ವಂಶದಲ್ಲಿ ಭಕ್ತಿಯುಳ್ಳ ಪುತ್ರನು ಜನಿಸುವವರೆಗೆ ಪಿತೃಗಳು ಪಿಂಡಾ ಸಕ್ತರಾಗಿ ಸಂಸಾರದಲ್ಲಿ ಸಂಚರಿಸುತ್ತಾರೆ.

೧೦. ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡುವವರೆಗೆ ಬ್ರಾಹ್ಮಣರೂ, ಪಾಪ ಗಳೂ, ಅನೇಕ ತೀರ್ಥಗಳೂ ಗರ್ಜಿಸುವುವು.

೧೧. ಹರಿಯಲ್ಲಿ ಭಕ್ತಿಯುಳ್ಳವನೇ ಲೋಕದಲ್ಲಿ ಜ್ಞಾನಿಯೂ, ಯೋಗಿ ಗಳಲ್ಲಿ ಮೊದಲನೆಯವನೂ, ಮಹಾ ಯಜ್ಞಗಳನ್ನು ಮಾಡುವವನೂ ಆಗಿರುವನು.

೧೨. ನಿಮಿಷಕಾಲ ರೆಪ್ಪೆಹಾಕದಿದ್ದರೆ ಯೋಗವಾಗುವುದು. ಯೋಗಿಯು ಮಾತನ್ನು ಜಯಿಸಿದರೆ ಗೋಮೇಧದ ಫಲವುಂಟಾಗುವುದು.

ಮನಸೋ ವಿಜಯೋ ನಿತ್ಯಮಶ್ವಮೇಧಫಲಂ ಲಭೇತ್ ।
ಕಲ್ಪನಾ ವಿಜಯಾನ್ನಿತ್ಯಂ ಯಜ್ಞಂ ಸೌತ್ರಾಮಣಿಂ ಲಭೇತ್ ॥ ೧೩ ॥
ದೇಹಸ್ಯೋತ್ಸರ್ಜನಾನ್ನಿತ್ಯಂ ನರಯಜ್ಞಃ ಪ್ರಕೀರ್ತಿತಃ ।
ಪಂಚೇಂದ್ರಿಯ ಪಶೂನ್ ಹತ್ವಾಽನಗ್ನೌ ಶೀರ್ಷೇ ಚ ಕುಂಡಲೇ ॥ ೧೪ ॥
ಗುರೂಪದೇಶವಿಧಿನಾ ಬ್ರಹ್ಮಭೂತತ್ವಮಶ್ನುತೇ ।
ಸ ಯೋಗೀ ನಿಯತಾಹಾರೋ ದಂಡತ್ರಿತಯಧಾರಕಃ ॥ ೧೫ ॥
ತ್ರಿದಂಡೀ ಸ ತು ವಿಜ್ಞೇಯೋ ಜ್ಞಾತೇ ದೇವೇ ನಿರಂಜನೇ ।
ಮನೋದಂಡಃ ಕರ್ಮದಂಡೋ ವಾಗ್ದಂಡೋ ಯಸ್ಯ ಯೋಗಿನಃ ॥೧೬॥
ಸ ಯೋಗೀ ಬ್ರಹ್ಮರೂಪೇಣ ಜೀವನ್ನೇವ ಸಮಾಪ್ಯತೇ ।
ಅಜ್ಞಾನೀ ಬಾಧ್ಯತೇ ನಿತ್ಯಂ ಕರ್ಮಭಿರ್ಬಂಧನಾತ್ಮಕೈಃ ॥ ೧೭ ॥
ಕುರ್ವನ್ನೇವ ಹಿ ಕರ್ಮಾಣಿ ಜ್ಞಾನೀ ಮುಕ್ತಿಂ ಪ್ರಯಾತಿ ಹಿ ।
ಯದಾ ಹಿ ಗುರುಭಿಃ ಸ್ಥಾನಂ ಬ್ರಹ್ಮಣಃ ಪ್ರತಿಪಾದ್ಯತೇ ॥ ೧೮ ॥
ತದೈಷ ಮುಕ್ತಿಮಾಪ್ನೋತಿ ದೇಹಸ್ತಿಷ್ಠತಿ ಕೇವಲಂ ।
ಯಾವದ್ಬ್ರಹ್ಮಫಲಾವಾಪ್ತ್ಯೈ ಪ್ರಯಾತಿ ಪುರುಷೋತ್ತಮಃ ॥ ೧೯ ॥

---

೧೩. ಮನಸ್ಸನ್ನು ಜಯಿಸುವುದರಿಂದ ಅಶ್ವಮೇಧಯಾಗದ ಫಲವು ಲಭಿಸುವುದು. ಕಲ್ಪನೆಯನ್ನು ಜಯಿಸುವುದರಿಂದ ಸೌತ್ರಾಮಣಿಯಜ್ಞದ ಫಲವು ದೊರೆಯುವುದು.

೧೪–೧೫. ದೇಹವನ್ನು ತ್ಯಜಿಸುವುದರಿಂದ ನರಯಜ್ಞವಾಗುವುದು. ಗುರೂಪದೇಶಕ್ರಮದಿಂದ ಅಗ್ನಿಯಿಲ್ಲದ ತಲೆಯೆಂಬ ಕುಂಡದಲ್ಲಿ ಪಂಚೇಂದ್ರಿಯಗಳೆಂಬ ಪಶುಗಳನ್ನು ವಧಿಸುವವನು ಬ್ರಹ್ಮನಾಗುವನು. ಮೂರು ದಂಡಗಳನ್ನು ಧರಿಸಿ ನಿಯತಾಹಾರಿಯಾದವನು ಯೋಗಿಯು.

೧೬. ಮನೋದಂಡ, ಕರ್ಮದಂಡ, ವಾಗ್ದಂಡ ಎಂಬ ಮೂರು ದಂಡಗಳುಳ್ಳವನಾಗಿ ದೋಷರಹಿತನಾದ ಬ್ರಹ್ಮನನ್ನರಿತವನು ತ್ರಿದಂಡಯೋಗಿಯು.

೧೭. ಆ ಯೋಗಿಯು ಬದುಕಿರುವಾಗಲೆ ಬ್ರಹ್ಮನಾಗುವನು. ಅಜ್ಞಾನಿಯು ಬಂಧನರೂಪಕರ್ಮಗಳಿಂದ ಬಾಧಿಸಲ್ಪಡುವನು.

೧೮–೨೦. ಜ್ಞಾನಿಯು ಕರ್ಮಗಳನ್ನಾಚರಿಸುತ್ತ ಮುಕ್ತಿಯನ್ನೈದುವನು. ಜ್ಞಾನಿಯು, ಗುರುಗಳು ಬ್ರಹ್ಮನ ಸ್ಥಾನವನ್ನು ಪ್ರತಿಪಾದಿಸುವಾಗಲೇ ಮುಕ್ತನಾಗುವನು. ಕೇವಲ ದೇಹಮಾತ್ರ ಇರುವುದು. ಪುರುಷನು ಬ್ರಹ್ಮಫಲವನ್ನು ಹೊಂದುವುದಕ್ಕೆ ಹೋಗುತ್ತಿರುವಷ್ಟರಲ್ಲಿ ಕರ್ಮಮಯವೃತ್ತಿಯು ಬ್ರಹ್ಮವೆಂಬ

ತಾವತ್ಕರ್ಮಮಯೀ ವೃತ್ತಿರ್ಬ್ರಹ್ಮಪೃಕ್ಷಾಂತರಾ ಭವೇತ್ ।
ಅವಾಂತರಾಣಿ ಪರ್ವಾಣಿ ಜ್ಞೇಯಾನಿ ಮುನಿಭಿಃ ಸದಾ ॥ ೨೦ ॥
ಮೋಕ್ಷಮಾರ್ಗೋ ದ್ವಿಜೈಶ್ಚೈವ ಶ್ರುತಿಸ್ಮೃತಿಸಮುಚ್ಚಯಾತ್ ।
ಮೋಕ್ಷೋಽಯಂ ನಗರಾಕಾರಶ್ಚತುರ್ದ್ವಾರ ಸಮಾಕುಲಃ ॥ ೨೧ ॥
ದ್ವಾರಪಾಲಾಸ್ತತ್ರ ನಿತ್ಯಂ ಚತ್ವಾರಸ್ತು ಶಮಾದಯಃ ।
ತ ಏವ ಪ್ರಥಮಂ ಸೇವ್ಯಾ ಮನುಜೈರ್ಮೋಕ್ಷದಾಯಕಾಃ ॥ ೨೨ ॥
ಶಮಶ್ಚ ಸದ್ವಿಚಾರಶ್ಚ ಸಂತೋಷಃ ಸಾಧುಸಂಗಮಃ ।
ಏತೇ ವೈ ಹಸ್ತಗಾ ಯಸ್ಯ ತಸ್ಯ ಸಿದ್ಧಿರ್ನ ದೂರತಃ ॥ ೨೩ ॥
ಯೋಗಸಿದ್ಧಿರ್ವಿಷ್ಣುಭಕ್ತ್ಯಾ ಸದ್ಧರ್ಮಾಚರಣೇ ಸ ಚ ।
ಪ್ರಾಪ್ಯತೇ ಮನುಜೈರ್ದೇವಿ ಹ್ಯೇತದಜ್ಞಾನಮುಲಂ ವಿದುಃ ॥ ೨೪ ॥
ಜ್ಞಾನಾರ್ಥಂ ಚ ಭ್ರಮನ್ ಮರ್ತ್ಯೋ ವಿದ್ಯಾಸ್ಥಾನೇಷು ಸರ್ವಶಃ ।
ಸದ್ಯೋಜ್ಞಾನಂ ಸದ್ಗುರುತೋ ದೀಪಾರ್ಚಿರಿವ ನಿರ್ಮಲಾ ॥ ೨೫ ॥
ಮುಹೂರ್ತಮಾತ್ರಮಪಿ ಯೋ ಲಯಂ ಚಿಂತಯತಿ ಧ್ರುವಂ ।
ತಸ್ಯ ಪಾಪಸಹಸ್ರಾಣಿ ವಿಲಯಂ ಯಾಂತಿ ತತ್ಕ್ಷಣಾತ್ ॥ ೨೬ ॥

---

ವೃಕ್ಷದ ಮಧ್ಯದಲ್ಲಿ ಬರುವುದು. ಮುನಿಗಳು ಅವಾಂತರ ಪರ್ವಗಳನ್ನು (ಶಾಖೆಗಳನ್ನು) ತಿಳಿಯಬೇಕು.

೨೧. ದ್ವಿಜರು ಮೋಕ್ಷಮಾರ್ಗವನ್ನು ಶ್ರುತಿ ಸ್ಮೃತಿಗಳ ಸಮೂಹಗಳಿಂದ ತಿಳಿಯಬೇಕು. ಈ ಮೋಕ್ಷಮಾರ್ಗವು ನಾಲ್ಕು ಬಾಗಿಲುಗಳುಳ್ಳ ಪಟ್ಟಣದಂತಿರುವುದು.

೨೨. ಅಲ್ಲಿ ಶಮೆ ಮೊದಲಾದ ನಾಲ್ಕು ಮಂದಿ ದ್ವಾರಪಾಲಕರಿರುವರು. ಮಾನವರು ಮೊದಲು ಮೋಕ್ಷವನ್ನು ಕೊಡುವ ಅವರನ್ನು ಸೇವಿಸಬೇಕು.

೨೩. ಶಮೆ, ಸದ್ವಿಚಾರ, ಸಂತೋಷ, ಸಾಧುಸಂಗಮ ಇವನ್ನು ವಶಪಡಿಸಿಕೊಂಡವರಿಗೆ ಸಿದ್ಧಿಯು ಸಮೀಪದಲ್ಲಿಯೇ ಆಗುವುದು.

೨೪. ಮಾನವರಿಗೆ ಯೋಗಸಿದ್ಧಿಯು ವಿಷ್ಣುಭಕ್ತಿಯಿಂದಲೂ, ಸದ್ಧರ್ಮಾಚರಣೆಯಿಂದಲೂ ಉಂಟಾಗುವುದು. ಇದನ್ನು ಅತಿಶಯಜ್ಞಾನವೆಂದು ತಿಳಿಯುತ್ತಾರೆ.

೨೫. ಜ್ಞಾನಕ್ಕಾಗಿ ಸಕಲ ವಿದ್ಯಾಸ್ಥಾನಗಳಲ್ಲಿ ಸಂಚರಿಸುತ್ತಿರುವ ಮಾನವನು ಕೂಡಲೆ ಆ ನಿರ್ಮಲ ಜ್ಞಾನದೀಪದ ಜ್ವಾಲೆಯಂತೆ ಸದ್ಗುರುವಿನಿಂದ ಪಡೆಯುವನು.

೨೬. ಒಂದು ಮುಹೂರ್ತಕಾಲ ಲಯರೂಪನಾದ ವಿಷ್ಣುವನ್ನು ಚಿಂತಿಸುವವನ ಅನೇಕ ಪಾಪಗಳು ಕೂಡಲೆ ನಾಶವಾಗುವುವು.

ರಾಗದ್ವೇಷೌ ಪರಿತ್ಯಜ್ಯ ಕ್ರೋಧಲೋಭವಿವರ್ಜಿತಃ ।
ಸರ್ವತ್ರ ಸಮದರ್ಶೀ ಚ ವಿಷ್ಣುಭಕ್ತಸ್ಯ ದರ್ಶನಂ ॥ ೨೭ ॥
ಸರ್ವೇಷಾಮಪಿ ಜೀವಾನಾಂ ದಯಾ ಯಸ್ಯ ಹೃದಿ ಸ್ಥಿರಾ ।
ಶೌಚಾಚಾರಸಮಾಯುಕ್ತೋ ಯೋಗೀ ದುಃಖಂ ನ ವಿಂದತಿ ॥ ೨೮ ॥
ಮಾಯಾಧಿಪಟಲೈರ್ಹೀನೋ ಮಿಥ್ಯಾವಸ್ತು ವಿರಾಗವಾನ್ ।
ಕುಸಂಸರ್ಗವಿಹೀನಶ್ಚ ಯೋಗಸಿದ್ಧೇಶ್ಚ ಲಕ್ಷಣಂ ॥ ೨೯ ॥
ಮಮತಾವಹ್ನಿ ಸಂಯೋಗೋ ನರಾಣಾಂ ತಾಪದಾಯಕಃ ।
ಉತ್ಪನ್ನಃ ಶಮನಂ ತಸ್ಯ ಯೋಗಿನಾಂ ಶಾಂತಿಕಾರಣಂ ॥ ೩೦ ॥
ಇಂದ್ರಿಯಾಣಾಮಥೋದ್ಧೃತ್ಯ ಮನಸೈವ ನಿಷೇಧಯೇತ್ ।
ಯಥಾ ಲೋಹೇನ ಲೋಹಂ ಚ ಘರ್ಷಿತಂ ತೀಕ್ಷ್ಣತಾಂ ವ್ರಜೇತ್ ॥ ೩೧ ॥
ಬುದ್ಧಿರ್ಹಿ ದ್ವಿವಿಧಾ ದೇಹೇ ದೇಯಾ ಗ್ರಾಹ್ಯಾ ವಿಶುದ್ಧಿದಾ ।
ಸಂಸಾರವಿಷಯಾ ತ್ಯಾಜ್ಯಾ ಪರಬ್ರಹ್ಮಣಿ ಸಾ ಶುಭಾ ॥ ೩೨ ॥
ಅಹಂಕಾರೋ ಯಥಾ ದೇವಿ ಪಾಪಪುಣ್ಯಪ್ರದಾಯಕಃ ।
ಜ್ಞಾತೇ ತತ್ವೇ ಶುಭಫಲೇ ಕೃತಃ ಸಂಧಾಯ ನಾಽನ್ಯಥಾ ॥ ೩೩ ॥

---

೨೭. ರಾಗ, ದ್ವೇಷ, ಕ್ರೋಧ, ಲೋಭ ಇವುಗಳಿಲ್ಲದೆ ಎಲ್ಲವನ್ನೂ ಸಮಾನವಾಗಿ ಕಾಣುವವನು ವಿಷ್ಣುಭಕ್ತನು.

೨೮. ಶುದ್ಧಹೃದಯನಾಗಿ ಸಮಸ್ತ ಜೀವಿಗಳಲ್ಲಿ ಸ್ಥಿರವಾದ ದಯೆಯುಳ್ಳವನಾಗಿ ಶೌಚಾಚಾರದಿಂದ ಕೂಡಿರುವ ಯೋಗಿಯು ದುಃಖವನ್ನು ಹೊಂದುವುದಿಲ್ಲ.

೨೯. ಮಾಯೆಯೆಂಬ ವ್ಯಾಧಿಯಿಲ್ಲದವನೂ, ಮಿಥ್ಯಾಭೂತವಾದ ವಸ್ತುಗಳಲ್ಲಿ ಪ್ರೀತಿಯಿಲ್ಲದವನೂ, ದುಷ್ಟಸಹವಾಸವಿಲ್ಲದವನೂ ಯೋಗಸಿದ್ಧನು.

೩೦. ಮಾನವರಿಗೆ ಮಮತೆಯೆಂಬ ಅಗ್ನಿಸಂಬಂಧವು ತಾಪವನ್ನುಂಟುಮಾಡುವುದು. ಯೋಗದಲ್ಲಿ ನಿರತರಾದವರಿಗೆ ಉಂಟಾಗುವ ಶಾಂತಿಯೇ ಆ ಅಗ್ನಿಯನ್ನು ಶಮನಗೊಳಿಸುವುದು.

೩೧. ಕಬ್ಬಿಣದಿಂದ ಉಜ್ಜಿದರೆ ಕಬ್ಬಿಣವು ಹರಿತವಾಗುವಂತೆ ಇಂದ್ರಿಯಗಳನ್ನು ಮನಸ್ಸಿನಿಂದಲೇ ತಡೆಯಬೇಕು.

೩೨–೩೩. ದೇಹದಲ್ಲಿ ಎರಡು ವಿಧವಾದ ಬುದ್ಧಿಯನ್ನು ಸ್ಥಿರಗೊಳಿಸಬೇಕು. ಅವುಗಳಲ್ಲಿ ಶುದ್ಧಿಯನ್ನೀಯುವ ಬುದ್ಧಿಯನ್ನು ಗ್ರಹಿಸಬೇಕು. ಸಂಸಾರವಿಷಯಕವಾದುದನ್ನು ತ್ಯಜಿಸಬೇಕು. ಆ ಬುದ್ಧಿಯು ಬ್ರಹ್ಮವಿಷಯಕವಾದರೆ ಪಾಪ ಪುಣ್ಯಗಳನ್ನು ಕೊಡುವ ಅಹಂಕಾರದಂತೆ ಶುಭಪ್ರದವಾಗುವುದು. ಶುಭಫಲವನ್ನು ನೀಡುವ ಬ್ರಹ್ಮತತ್ವವು ತಿಳಿದಕೂಡಲೆ ಅನ್ಯಥಾ ಫಲದಾಯಕವಾಗುವುದಿಲ್ಲ.

ಶ್ಯಾಮಲಂ ಚ ಉಪಸ್ಥಂ ಚ ರೂಪಾತೀತಾನ್ನರಾಃ ಶಿವಂ ।
ಹೃದಿಸ್ಥಂ ಶಿರಸಿಸ್ಥಂ ಚ ದ್ವಯಂ ಬಂಧವಿಮುಕ್ತಯೇ ॥ ೩೪ ॥
ಏತದಕ್ಷರಮವ್ಯಕ್ತಮಮೃತಂ ಸಕಲಂ ತವ ।
ರೂಪರೂಪ ವಿಷ್ಣುರೂಪ ರೂಪಮೂರ್ತಿನಿವೇದಿತಂ ॥ ೩೫ ॥
ಏವಂ ಜ್ಞಾತ್ವಾ ವಿಮುಚ್ಯೇತ ಯೋಗೀ ಸಂಸಾರಬಂಧನಾತ್ ।
ಗುರೂಪದೇಶಾದ್ಗೃಹಸ್ಥೋ ಲಭತೇ ನಾಽನ್ಯಥಾ ಕ್ವಚಿತ್ ॥ ೩೬ ॥
ಯದಾ ಗುರುಃ ಪ್ರಸನ್ನಾತ್ಮಾ ತಸ್ಯ ವಿಶ್ವಂ ಪ್ರಸೀದತಿ ।
ಗುರುಶ್ಚ ತೋಷಿತೋ ಯೇನ ಸಂತುಷ್ಟಾಃ ಪಿತೃದೇವತಾಃ ॥ ೩೭ ॥
ಗುರೂಪದೇಶಃ ಪ್ರತಿಮಾ ಸದ್ವಿಚಾರಃ ಸಮೋ ಮನಃ ।
ಕ್ರಿಯಾ ಚ ಜ್ಞಾನಸಹಿತಾ ಮೋಕ್ಷಸಿದ್ಧೇರ್ಹಿ ಲಕ್ಷಣಂ ॥ ೩೮ ॥
ಕ್ರಿಯಾಪತಿರ್ವಿಷ್ಣುರೇವ ಸ್ವಯಮೇವ ಹಿ ನಿಷ್ಕ್ರಿಯಃ ।
ಸ ಚ ಪ್ರಾಣವಿರೂಪಾಯ ದ್ವಾದಶಾಕ್ಷರ ಬೀಜಕಃ ॥ ೩೯ ॥
ದ್ವಾದಶಾಽಕ್ಷರಕಂ ಚಕ್ರಂ ಸರ್ವಪಾಪನಿಬರ್ಹಣಂ ।
ದುಷ್ಟಾನಾಂ ದಮನಂ ಚೈವ ಪರಬ್ರಹ್ಮಪ್ರದಾಯಕಂ ॥ ೪೦ ॥

---

೩೪. ಮಾನವರು ಶ್ಯಾಮಲನೂ, ಸಮೀಪಸ್ಥನೂ, ರೂಪರಹಿತನೂ ಆದ ಶಿವನನ್ನೂ, ಹೃದಯದಲ್ಲಿಯೂ, ಮಸ್ತಕದಲ್ಲಿಯೂ ಇರುವ ಶಿವನನ್ನೂ ಹೀಗೆ ಉಭಯರೂಪನನ್ನೂ ಬಂಧಮೋಕ್ಷಕ್ಕಾಗಿ ಧ್ಯಾನಿಸಬೇಕು.

೩೫. ದೇವಿ! ನಾನು ನಿನಗೆ ನಾಶರಹಿತವೂ, ಅವ್ಯಕ್ತವೂ, ಅಮೃತವೂ, ಸಕಲವೂ ಆದ ಅತಿಶಯ ಸುಂದರವಾದ ವಿಷ್ಣುವಿನ ಮೂರ್ತಿಯನ್ನು ತಿಳಿಸಿದ್ದೇನೆ.

೩೬. ಈರೀತಿ ತಿಳಿದುಕೊಂಡ ಯೋಗಿಯು ಸಂಸಾರಬಂಧನದಿಂದ ಮುಕ್ತನಾಗುವನು. ಗೃಹಸ್ಥನು ಗುರೂಪದೇಶದಿಂದ ಮುಕ್ತನಾಗುವನು. ಬೇರೆ ಯಾವ ರೀತಿಯಿಂದಲೂ ಆಗುವುದಿಲ್ಲ.

೩೭. ಗುರುವು ಪ್ರಸನ್ನನಾದರೆ ಅವನಿಗೆ ಪ್ರಪಂಚವೇ ಪ್ರಸನ್ನವಾಗುವುದು. ಗುರುವನ್ನು ಸಂತೋಷಗೊಳಿಸಿದವನಿಗೆ ಪಿತೃದೇವತೆಗಳು ಸಂತುಷ್ಟರಾಗುವರು.

೩೮. ಗುರೂಪದೇಶ, ಪ್ರತಿಮೆ, ಸಾಧುವಿಚಾರ, ಸಮವಾದ ಮನಸ್ಸು, ಜ್ಞಾನಸಹಿತವಾದ ಕ್ರಿಯೆ ಇವುಗಳು ಮೋಕ್ಷಸಿದ್ಧಿಯ ಚಿಹ್ನೆಗಳು.

೩೯. ವಿಷ್ಣುವು ಕ್ರಿಯಾಪತಿಯೂ, ಕ್ರಿಯಾರಹಿತನೂ, ಪ್ರಾಣವಿಲಕ್ಷಣನೂ, ದ್ವಾದಶಾಕ್ಷರ ಬೀಜನೂ ಆಗಿರುವನು.

೪೦. ದ್ವಾದಶಾಕ್ಷರ ಚಕ್ರವು ಸಕಲ ಪಾಪಗಳನ್ನು ನಿವಾರಿಸುವುದೂ, ದುಷ್ಟರನ್ನು ಶಿಕ್ಷಿಸುವುದೂ, ಪರಬ್ರಹ್ಮವನ್ನು ದೊರಕಿಸಿಕೊಡುವುದೂ ಆಗಿರುವುದು.

ಏತದೇವ ಪರಂ ಬ್ರಹ್ಮ ದ್ವಾದಶಾಽಕ್ಷರರೂಪಧೃಕ್ ।
ಮಯಾ ಪ್ರಕಾಶಿತಂ ದೇವಿ ಸ್ಕಂದೇ ಹಿ ವಿಮಲಂ ತವ ॥ ೪೧ ॥
ಏತತ್ಸಾರಂ ಯೋಗಿನಾಂ ಧ್ಯಾನರೂಪಂ
ಭಕ್ತಿಗ್ರಾಹ್ಯಂ ಶ್ರದ್ಧಯಾ ಚಿಂತಯೇಚ್ಚ ।
ಚಾತುರ್ಮಾಸ್ಯೇ ಜನ್ಮಕೋಟ್ಯಾಂ ಚ ಜಾತಂ
ಪಾಪಂ ದಗ್ಧ್ವಾ ಮುಕ್ತಿದಃ ಕೈಟಭಾರಿಃ ॥ ೪೨ ॥

ಬ್ರಹ್ಮೋವಾಚ :—

ಏತಸ್ಮಿನ್ನಗರೇ ತತ್ರ ಕ್ಷೀರಸಾಗರಮಧ್ಯತಃ ।
ಉಜ್ಜಹಾರ ವಿಮಾನಾಗ್ರೇ ತೇಜೋಭಾರಾಭಿಪೀಡಿತಃ ॥ ೪೩ ॥
ಉರೋ ಬಾಹುಕೃತಿಂ ಕುರ್ವನ್ ಸಾನ್ನಿಧ್ಯಂ ಸಮುಪಾಗತಃ ।
ಮಹಾಮತ್ಸ್ಯೋಽಜ್ಞಾತಪೂರ್ವಃ ಸನ್ನಿಧಾನೇಽನಹಂಕೃತಿಃ ॥ ೪೪ ॥
ಹುಂಕಾರ ಗರ್ಭೇ ಮತ್ಸ್ಯಂ ಚ ದೃಷ್ಟ್ವಾ ತಂ ಸ ಮಹೇಶ್ವರಃ ।
ತೇಜಸಾ ಸ್ತಂಭಯಾಮಾಸ ವಾಕ್ಯಮೇತದುವಾಚ ಹ ॥ ೪೫ ॥
ಕಸ್ತ್ವಂ ಮತ್ಸ್ಯೋದರಸ್ಥಶ್ಚ ದೇವೋ ಯಕ್ಷೋಽಥ ಮಾನುಷಃ ।
ಕಥಂ ಜೀವಸಿ ದೇಹಾಂತರ್ಗತೋ ಮಮ ವದ ಪ್ರಭೋ ॥ ೪೬ ॥

---

೪೧. ದೇವಿ! ನಾನು ನಿನ್ನ ಸುತನಾದ ಸ್ಕಂದನಲ್ಲಿ ದ್ವಾದಶಾಕ್ಷರ ರೂಪವನ್ನು ತಾಳಿರುವ ಬ್ರಹ್ಮನನ್ನು ಪ್ರಕಾಶಗೊಳಿಸಿರುವೆನು.

೪೨. ಚಾತುರ್ಮಾಸ್ಯದಲ್ಲಿ ಯೋಗಿಗಳಿಗೆ ಧ್ಯಾನಮಾಡಲು ಯೋಗ್ಯವಾದುದೂ, ಭಕ್ತಿಯಿಂದ ವಶಗೊಳಿಸಲು ಅರ್ಹವಾದುದೂ ಆದ ಈ ಬ್ರಹ್ಮರೂಪವನ್ನು ಧ್ಯಾನಮಾಡಿದವನಿಗೆ ವಿಷ್ಣುವು ಅನೇಕ ಕೋಟಿಜನ್ಮಗಳಲ್ಲೆಸಗಿದ ಪಾಪವನ್ನು ಪರಿಹರಿಸಿ ಮುಕ್ತಿಯನ್ನು ಕೊಡುವನು.

೪೩–೪೪. ಬ್ರಹ್ಮನು ಹೇಳುತ್ತಾನೆ:— ಈ ಸಮಯದಲ್ಲಿ ಕ್ಷೀರಸಾಗರಮಧ್ಯದಿಂದ ಅತ್ಯಂತ ತೇಜಸ್ವಿಯೂ, ಎದೆಯನ್ನು ತೋಳನಂತೆ ಮಾಡಿಕೊಂಡುದೂ, ಅಪರಿಚಿತವೂ, ಅಹಂಕಾರವಿಲ್ಲದುದೂ ಆದ ಒಂದು ದೊಡ್ಡ ಮೀನು ಮಹೇಶ್ವರನ ವಿಮಾನದ ಮುಂದೆ ಮೇಲಕ್ಕೆ ಹಾರಿತು.

೪೫. ಮಹೇಶ್ವರನು ಹುಂಕಾರ ಮಾಡುತ್ತಿರುವ ಆ ಮೀನನ್ನು ನೋಡಿ ತೇಜಸ್ಸಿನಿಂದ ಅದನ್ನು ಸ್ತಂಭಿಸಿ ಇಂತೆಂದನು.

೪೬. "ಈ ಮತ್ಸ್ಯದ ಹೊಟ್ಟೆಯಲ್ಲಿರುವ ನೀನು ದೇವತೆಯೊ? ಯಕ್ಷನೊ? ಮನುಷ್ಯನೊ? ಯಾರು? ನೀನು ಈ ಮೀನಿನೊಳಗೆ ಹೇಗೆ ಜೀವಿಸುತ್ತಿರುವೆ? ಹೇಳು."

ಮತ್ಸ್ಯ ಉವಾಚ :—
ಅಹಂ ಮತ್ಸ್ಯೋದರೇ ಕ್ಷಿಪ್ತಃ ಸಮುದ್ರೇ ಕ್ಷೀರಸಂಭವೇ ।
ಮಾತ್ರಾ ತು ಪಿತೃವಾಕ್ಯೇನ ನಾಽಯಂ ಮಮ ಕುಲಾನ್ವಿತಃ ॥ ೪೭ ॥
ಕುಲಕ್ಷಯಭಯಾತ್ತೇನ ಜಾತಂ ಸ್ವಕುಲನಾಶನಂ ।
ಗಂಡಾಂತಯೋಗಜನಿತೋ ಬಾಲೋ ನ ಗೃಹಕರ್ಮಕೃತ್ ॥ ೪೮ ॥
ಇತಿ ಮಾತ್ರಾ ದುಃಖಿತಯಾ ನಿರಸ್ತಃ ಶೃಣು ವಂಶಜಃ ।
ಝುಷೇಣಾಽಪಿ ಗೃಹೀತೋಽಸ್ಮಿ ಕಾಲೋ ಮೇಽತ್ರ ಮಹಾನಭೂತ್ ॥ ೪೯ ॥
ತವ ವಾಕ್ಯಾಮೃತೈರೇಭಿರ್ಜ್ಞಾನಯೋಗೋ ಮಹಾನಭೂತ್ ।
ತೇನ ತ್ವಂ ಸಕಲೋ ಜ್ಞಾತೋ ಮಯಾ ಮೂರ್ತೋಽಥ ಮೂರ್ತಗಃ ॥
ಅನುಜ್ಞಾಂ ಮಮ ದೇವೇಶ ದೇಹಿ ನಿಷ್ಕ್ರಮಣಾಯ ಚ ।
ಯಥಾಽಹಂ ಪಿತೃಪೋ ಬ್ರಹ್ಮನ್ ಭವಾನ್ಯಾಶ್ಚಾಽಪಿ ಲಕ್ಷ್ಯತೇ ॥ ೫೧ ॥
ಹರ ಉವಾಚ :—
ವಿಪ್ರೋಽಸಿ ಸುತರೂಪೋಽಸಿ ಪೂಜ್ಯೋಽಸ್ಯಾಸಿ ಬಭಾಷತಃ ।
ಬಹಿರ್ನಿಷ್ಕ್ರಮ ವೇಗೇನ ಸ್ತಂಭಿತೋಽಸಿ ಮಹಾಝುಷಃ ॥ ೫೨ ॥
ತತೋಽಸೌ ಶಿರಸಾ ಜಾತ ಉತ್ಕ್ಲೇಶಾನ್ ಮತ್ಸ್ಯಯೋಜಿತಃ ।
ತತೋ ಹಿ ವಿಕೃತಂ ವಕ್ತ್ರಂ ಕ್ಷಣಾದ್ಬಹಿರುಪಾಗತಃ ॥ ೫೩ ॥

---

೪೭–೪೯. ಮೀನು ಹೇಳುತ್ತದೆ :—ನನ್ನ ತಾಯಿಯು ತಂದೆಯ ಮಾತಿನಂತೆ ಗಂಡಾಂತಯೋಗದಲ್ಲಿ ಜನಿಸಿದ ಈ ಬಾಲಕನು ನಮ್ಮ ವಂಶವನ್ನು ನಾಶಗೊಳಿಸುವನು. ಇವನು ಗೃಹಕಾರ್ಯವನ್ನು ಮಾಡುವುದಿಲ್ಲ ಎಂದು ದುಃಖದಿಂದ ವಂಶದಲ್ಲಿ ಹುಟ್ಟಿದ ನನ್ನನ್ನು ಕ್ಷೀರಸಮುದ್ರದಲ್ಲಿ ಎಸೆದಳು. ನನ್ನನ್ನು ಈ ಮೀನು ನುಂಗಿ ಬಹಳಕಾಲವಾಯಿತು.

೫೦. ಈಗ ನಿನ್ನೀ ಅಮೃತದಂತಿರುವ ಮಾತುಗಳಿಂದ ಜ್ಞಾನಯೋಗವುಂಟಾಯಿತು. ಆದರಿಂದ ನಾನು ಸಕಲನೂ, ಅಮೂರ್ತನೂ, ಮೂರ್ತಗಳಲ್ಲಿರುವವನೂ ಆದ ನಿನ್ನನ್ನು ಅರಿತೆನು.

೫೧. ದೇವೇಶ! ನಾನು ಭವಾನಿಗೆ ಪಿತೃಪನಾಗಿ ಕಾಣುವಂತೆ ಹೊರಟು ಹೋಗಲು ನನಗೆ ಅನುಮತಿಯನ್ನು ಕೊಡು.

೫೨. ಹರನು ಹೇಳುತ್ತಾನೆ :—ಅಯ್ಯಾ! ಬ್ರಾಹ್ಮಣನೂ, ಮಗನಂತಿರುವವನೂ ಆದ ನೀನು ಪೂಜ್ಯನೂ ಆಗಿರುವೆ. ಮತ್ಸ್ಯವನ್ನು ಸ್ತಂಭಿಸಿರುವೆನು. ವೇಗದಿಂದ ಹೊರಗೆ ಬಾ.

೫೩. ಬಳಿಕ ಮೀನಿನೊಳಗೆ ಇರುವ ಅವನು ಕಷ್ಟದಿಂದ ತಲೆಯನ್ನು ಹೊರಗೆಡವಿದನು. ಕೂಡಲೆ ಅವನ ಮುಖವು ಹೊರಗೆ ಬಂದಿತು.

ರೂಪವಾನ್ ಪ್ರತಿಮೂಯುಕ್ತೋ ಮತ್ಸ್ಯಗಂಧೇನ ಸಂಯುತಃ ।
ಸೋಮಕಾಂತಿ ಸಮಸ್ತತ್ರ ಹ್ಯಭವದ್ದಿವ್ಯಗಂಧಭಾಕ್ ॥ ೫೪ ॥
ಉಮಾಽಪಿ ಪ್ರಣತಂ ಚಾಽಮುಂ ಸುತಂ ಸ್ವೋತ್ಸಂಗಭಾಜನಂ ।
ಚಕಾರ ತಸ್ಯ ನಾಮಾಽಪಿ ಹರಃ ಪರಮಹರ್ಷಿತಃ ॥ ೫೫ ॥
ಯಸ್ಮಾನ್ಮತ್ಸ್ಯೋದರಾಜ್ಜಾತೋ ಯೋಗಿನಾಂ ಪ್ರವರೋಹ್ಯಯಂ ।
ತಸ್ಮಾತ್ತು ಮತ್ಸ್ಯನಾಥೇತಿ ಲೋಕೇ ಖ್ಯಾತೋ ಭವಿಷ್ಯತಿ ॥ ೫೬ ॥
ಅಚ್ಛೇದ್ಯಃ ಸ್ಯಾನ್ನರತನುಜ್ಞಾನಯೋಗಸ್ಯ ಪಾರಗಃ ।
ನಿರ್ಮತ್ಸರೋಽಪಿ ನಿರ್ದ್ವಂದ್ವೋ ನಿರಾಶೋ ಬ್ರಹ್ಮಸೇವಕಃ ॥ ೫೭ ॥
ಜೀವನ್ಮುಕ್ತಶ್ಚ ಭವಿತಾ ಭುವನಾನಿ ಚತುರ್ದಶ ।
ಇತ್ಯುಕ್ತಶ್ಚ ಮಹೇಶಾನಂ ಪ್ರಣಮ್ಯಂಶ್ಚ ಪುನಃ ಪುನಃ ।
ಮಹೇಶ್ವರೇಣ ಸಹಿತೋ ಮಂದರಾಽಚಲಮಾಯಯೌ ॥ ೫೮ ॥

ಬ್ರಹ್ಮೋವಾಚ:—

ಕೃತ್ವಾ ಪ್ರದಕ್ಷಿಣಂ ದೇವೀಂ ಸ್ಕಂದಮಾಲಿಂಗ್ಯ ಸೋಽಗಮತ್ ॥ ೫೯ ॥
ತತಃ ಸಾ ಪಾರ್ವತೀ ಹೃಷ್ಟಾ ಪ್ರಾಪ್ಯ ಜ್ಞಾನಮನುತ್ತಮಂ ।
ಏವಂ ಸಾ ಪರಮಾಂ ಸಿದ್ಧಿಂ ಪ್ರಣವಸ್ಯ ಪ್ರಭಾಜನಂ ॥ ೬೦ ॥

---

೫೪. ಮೀನಿನ ವಾಸನೆಯುಳ್ಳ ಅವನು ಸುಂದರದೇಹವುಳ್ಳವನೂ, ಚಂದ್ರನಂತೆ ಕಾಂತಿಯುಳ್ಳವನೂ, ದಿವ್ಯಗಂಧವುಳ್ಳವನೂ ಆದನು.

೫೫. ಪಾರ್ವತಿಯೂ ನಮಸ್ಕಾರ ಮಾಡಿದ ಸುತನಾದ ಅವನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡಳು. ಹರನು ಸಂತೋಷದಿಂದ ಅವನಿಗೆ ನಾಮಕರಣ ಮಾಡಿದನು.

೫೬. ಯೋಗಿಗಳಲ್ಲಿ ಉತ್ತಮನಾದ ಇವನು ಮೀನಿನ ಉದರದಿಂದ ಹುಟ್ಟಿರುವುದರಿಂದ ಲೋಕದಲ್ಲಿ ಮತ್ಸ್ಯನಾಥನೆಂದು ವಿಖ್ಯಾತನಾಗುವನು.

೫೭—೫೮. ಇವನು ಅಚ್ಛೇದ್ಯನೂ, ಮನುಷ್ಯಶರೀರವುಳ್ಳವನೂ, ಜ್ಞಾನಯೋಗಪಾರಂಗತನೂ, ಮಾತ್ಸರ್ಯವಿಲ್ಲದವನೂ, ಸುಖದುಃಖವಿಲ್ಲದವನೂ, ಆಶಾರಹಿತನೂ, ಬ್ರಹ್ಮಸೇವಕನೂ, ಜೀವನ್ಮುಕ್ತನೂ, ಹದಿನಾಲ್ಕು ಲೋಕಗಳಲ್ಲಿ ಸಂಚರಿಸುವವನೂ ಆಗುವನು. ಶಂಕರನು ಹೀಗೆ ಹೇಳಲು, ಅವನು ಆತನನ್ನು ವಂದಿಸಿ ಆತನೊಡನೆ ಮಂದರಾಚಲಕ್ಕೆ ಬಂದನು.

೫೯. ಬ್ರಹ್ಮನು ಹೇಳುತ್ತಾನೆ:— ಅವನು ಪಾರ್ವತಿಯನ್ನು ಪ್ರದಕ್ಷಿಣೆ ಮಾಡಿ ವಂದಿಸಿ ಸ್ಕಂದನನ್ನು ಆಲಿಂಗಿಸಿ ಹೊರಟನು.

೬೦—೬೨. ಬಳಿಕ ಜಗನ್ಮಾತೆಯಾದ ಆ ಪಾರ್ವತಿಯು ಸಂತೋಷಗೊಂಡು ಉತ್ತಮಜ್ಞಾನವನ್ನು ಹೊಂದಿ ಪ್ರಣವೋ ದ್ವಾದಶಾಕ್ಷರ ಮಂತ್ರಜಪದಿಂದ

ಸಾ ಪ್ರಾಪ್ಯ ಜಗತಾಂ ಮಾತಾ ದ್ವಾದಶಾಽಕ್ಷರಜಾಂಬುನಾ ।
ಇಮಾಂ ಮತ್ಸ್ಯೇಂದ್ರನಾಥಸ್ಯ ಚೋತ್ಪತ್ತಿಂ ಯಃ ಶೃಣೋತಿ ಚ ॥ ೬೧ ॥
ಚಾತುರ್ಮಾಸ್ಯೇ ವಿಶೇಷೇಣ ಸೋಽಶ್ವಮೇಧಫಲಂ ಲಭೇತ್ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮತ್ಸ್ಯೇಂದ್ರನಾಥೋತ್ಪತ್ತಿಕಥನವರ್ಣನಂ" ನಾಮ
ತ್ರಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಚ್ಚಾರಣೆಗೆ ಯೋಗ್ಯವಾದ ಸಿದ್ಧಿಯನ್ನು ಹೊಂದಿದಳು. ಚಾತುರ್ಮಾಸ್ಯದಲ್ಲಿ ಈ ಮತ್ಸ್ಯೇಂದ್ರನಾಥನ ಉತ್ಪತ್ತಿಯನ್ನು ಕೇಳುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮತ್ಸ್ಯೇಂದ್ರನಾಥೋತ್ಪತ್ತಿಕಥನವರ್ಣನ"ವೆಂಬ
ಇನ್ನೂರ ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ತಾರಕಾಸುರವಧವರ್ಣನಂ

ಬ್ರಹ್ಮೋವಾಚ:—

ಕಾರ್ತಿಕೇಯಶ್ಚ ಪಾರ್ವತ್ಯಾಃ ಪ್ರಾಣೇಭ್ಯಶ್ಚಾಽತಿವಲ್ಲಭಃ ।
ಸಂಕ್ರೀಡತಿ ಸಮೀಪಸ್ಥೋ ನಾನಾಚೇಷ್ಟಾಭಿರುದ್ಯತಃ ॥ ೧ ॥
ರಕ್ತಕಾಂತಿರ್ಮಹಾತೇಜಾಃ ಷಣ್ಮುಖೋಽದ್ಭುತವಿಕ್ರಮಃ ।
ಕ್ವಚಿದ್ಗಾಯತಿ ಚಾಽತ್ಯರ್ಥಂ ಕ್ವಚಿನ್ನೃತ್ಯತಿ ಸ್ವೇಚ್ಛಯಾ ॥ ೨ ॥
ಮಾತರಂ ಪಿತರಂ ದೃಷ್ಟ್ವಾ ವಿನಯಾಽವನತಃ ಕ್ವಚಿತ್ ।
ಕ್ವಚಿಚ್ಚ ಗಂಗಾಪುಲಿನೇ ಸಿಕತಾಲೇಪನಾಕೃತಿಃ ॥ ೩ ॥
ಗಣೈಃ ಸಹ ವಿಚಿನ್ವಾನೋ ವಿವಿಧಾನ್ ವನಭೂರುಹಾನ್ ।
ಏವಂ ಪ್ರಕ್ರೀಡತಸ್ತಸ್ಯ ದಿವಸಾಃ ಪಂಚ ಜಜ್ಞಿರೇ ॥ ೪ ॥
ತತೋ ದೇವಾ ಮಹೇಂದ್ರಾದ್ಯಾಸ್ತಾರಕತ್ರಾಸವಿದ್ರುತಾಃ ।
ಸ್ತುವಂತಃ ಶಂಕರಂ ಸರ್ವೇ ತಾರಕಸ್ಯ ಜಿಘೃಕ್ಷಯಾ ॥ ೫ ॥

---

## ಕನ್ನಡದ ಅನುವಾದ

### ತಾರಕಾಸುರವಧವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಪಾರ್ವತಿಗೆ ಪ್ರಾಣಕ್ಕಿಂತಲೂ ಅತಿ ಪ್ರಿಯನಾದ ಕಾರ್ತಿಕೇಯನು ಹತ್ತಿರದಲ್ಲಿ ನಾನಾ ಕಾರ್ಯಗಳನ್ನೆಸಗುತ್ತ ಆಟವಾಡುತ್ತಿದ್ದನು.

೨. ಕೆಂಪು ಕಾಂತಿಯುಳ್ಳವನೂ, ಅತಿ ತೇಜಸ್ವಿಯೂ, ಆಶ್ಚರ್ಯಕರವಾದ ಪರಾಕ್ರಮವುಳ್ಳವನೂ ಆದ ಅವನು ಒಂದೆಡೆಯಲ್ಲಿ ಅತಿಶಯವಾಗಿ ಹಾಡುತ್ತಿದ್ದನು. ಇನ್ನೊಂದೆಡೆಯಲ್ಲಿ ಸ್ವೇಚ್ಛೆಯಿಂದ ಕುಣಿಯುತ್ತಿದ್ದನು.

೩. ಮತ್ತೊಂದೆಡೆಯಲ್ಲಿ ತಾಯಿ ತಂದೆಗಳನ್ನು ನೋಡಿ ವಿಧೇಯತೆಯಿಂದ ನಮ್ರನಾಗುತ್ತಿದ್ದನು. ಇನ್ನೊಂದೆಡೆಯಲ್ಲಿ ಗಂಗೆಯ ಪುಲಿನದಲ್ಲಿ ಮರಳುಗಳಿಂದ ಲಿಪ್ತನಾಗುತ್ತಿದ್ದನು.

೪. ಅವನು ಪ್ರಮಥಗಣಗಳೊಡನೆ ಬಗೆ ಬಗೆಯ ಮರಗಳನ್ನು ಹುಡುಕುತ್ತ ಆಡುತ್ತಿರಲು ಐದು ದಿನಗಳು ಕಳೆದುವು.

೫–೬. ಬಳಿಕ ಇಂದ್ರಾದಿ ದಿವಿಜರು ತಾರಕಾಸುರನ ಭಯದಿಂದ ಓಡಿಬಂದು ಅವನನ್ನು ಕೊಲ್ಲುವುದಕ್ಕಾಗಿ ಶಂಕರನನ್ನು ಸ್ತುತಿಸುತ್ತ ಪ್ರಮಥಗಣಗಳೊಡನೆ

ಚಕ್ರುಃ ಕುಮಾರಂ ಸೇನಾನ್ಯಂ ಜಾಹ್ನವ್ಯಾಂ ಸ್ವಗಣೈಃ ಸುರಾಃ ।
ಸಸ್ವನುರ್ದೇವವಾದ್ಯಾನಿ ಪುಷ್ಪವರ್ಷಂ ಪಪಾತಹ ॥ ೬ ॥
ವಹ್ನಿಸ್ತು ಸ್ವಾಂ ದದೌ ಶಕ್ತಿಂ ಹಿಮವಾನ್ ವಾಹನಂ ದದೌ ।
ಸರ್ವದೇವಸಮುದ್ಭೂತಗಣಕೋಟಿ ಸಮಾವೃತಃ ॥ ೭ ॥
ಪ್ರಣಮ್ಯ ಮುನಿಸಂಘೇಭ್ಯಃ ಪ್ರಯಯೌ ರಿಪುವಿಗ್ರಹೇ ।
ತಾಮ್ರವತ್ಯಾಂ ನಗರ್ಯಾಂ ಚ ಶಂಖಂ ದಧ್ಮೌ ಪ್ರತಾಪವಾನ್ ॥ ೮ ॥
ತತಸ್ತಾರಕ ಸೈನ್ಯಸ್ಯ ದೈತ್ಯದಾನವಕೋಟಯಃ ।
ಸಮಾಜಗ್ಮುಸ್ತಸ್ಯ ಪುರಾಚ್ಛಂಖನಾದ ಭಯಾತುರಾಃ ॥ ೯ ॥
ಸ್ವ ವಾಹನ ಸಮಾರೂಢಾಃ ಸಂಯುತಾ ಬಲದರ್ಪಿತಾಃ ।
ದೇವಾಃ ಸರ್ವೇಽಪಿ ಯುಯುಧುಃ ಸ್ಕಂದತೇಜೋಪಬೃಂಹಿತಾಃ ॥ ೧೦ ॥
ತದಾ ದಾನವ ಸೈನ್ಯಾನಿ ನಿಜಘಾನ ಚ ಸರ್ವಶಃ ।
ವಿಷ್ಣುಚಕ್ರೇಣ ತೇ ಭಿನ್ನಾಃ ಪೇತುರುರ್ವ್ಯಾಂ ಸಹಸ್ರಶಃ ॥ ೧೧ ॥
ತತೋ ಭಗ್ನಾಶ್ಚ ಶತಶೋ ದಾನವಾ ನಿಹತಾಸ್ತದಾ ।
ನದ್ಯಃ ಶೋಣಿತ ಸಂಭೂತಾ ಜಾತಾ ಬಹುವಿಧಾ ಮುನೇ ॥ ೧೨ ॥
ತದ್ಭಗ್ನಂ ದಾನವಬಲಂ ದೃಷ್ಟ್ವಾ ಸ ಯುಯುಧೇ ರಣೇ ।
ಬಭಂಜ ಸದ್ಯೋ ದೇವೇಶೋ ಬಾಣಜಾಲೈರನೇಕಧಾ ॥ ೧೩ ॥

---

ಸ್ಕಂದನನ್ನು ಸೇನಾಪತಿಯನ್ನಾಗಿ ಮಾಡಿದರು. ದೇವವಾದ್ಯಗಳು ಧ್ವನಿಗೈದುವು. ಹೂಮಳೆ ಸುರಿಯಿತು.

೭-೮. ಆ ಸ್ಕಂದನಿಗೆ ಅಗ್ನಿಯು ತನ್ನ ಶಕ್ತಿಯನ್ನೂ, ಹಿಮವಂತನು ವಾಹನವನ್ನು ಕೊಟ್ಟನು. ಆವನು ದೇವತೆಗಳಿಂದಲೂ, ಪ್ರಮಥಗಣಗಳಿಂದಲೂ ಸೇರಿ ಮುನಿವೃಂದಕ್ಕೆ ನಮಿಸಿ, ಶತ್ರುನಿಗ್ರಹಕ್ಕಾಗಿ ಹೊರಟು ತಾಮ್ರವತೀ ಪಟ್ಟಣದಲ್ಲಿ ಶಂಖವನ್ನು ಊದಿದನು.

೯. ಬಳಿಕ ತಾರಕನ ಸೈನ್ಯದಲ್ಲಿರುವ ಕೋಟಿಮಂದಿ ದೈತ್ಯದಾನವರು ಶಂಖನಾದದಿಂದ ಭಯಗೊಂಡವರಾಗಿ ಆ ಸ್ಕಂದನ ಮುಂದೆ ಬಂದರು.

೧೦. ಸ್ಕಂದನ ತೇಜಸ್ಸಿನಿಂದ ಉತ್ತೇಜಿತರಾದ ಸಮಸ್ತ ದೇವತೆಗಳು ತಮ್ಮ ತಮ್ಮ ವಾಹನಗಳನ್ನೇರಿ ದರ್ಪೋದ್ಧತರಾಗಿ ಕಾಳಗ ಮಾಡಿದರು.

೧೧. ಆಗ ಸ್ಕಂದನು ದಾನವಸೈನ್ಯವನ್ನೆಲ್ಲ ಸದೆಬಡಿದನು. ಆವರು ವಿಷ್ಣು ಚಕ್ರದಿಂದ ಭಿನ್ನರಾಗಿ ನೆಲದಮೇಲೆ ಬಿದ್ದರು.

೧೨. ಆ ದಾನವರು ತಾಡಿತರಾಗಿ ಸಾಯಲು ರಕ್ತದ ನದಿಗಳು ಬಹುವಿಧವಾಗಿ ಹರಿದುವು.

೧೩-೧೮. ಆ ತಾರಕನು ರಣದಲ್ಲಿ ದಾನವಬಲವು ನಾಶವಾದುದನ್ನು ನೋಡಿ ತಾನೇ ಯುದ್ಧಮಾಡಿದನು. ಕೃಷ್ಣಪ್ರೇರಿತನಾದ ಸ್ಕಂದನು ಕೂಡಲೆ ಶರಸಮೂಹ

ಶಕ್ತ್ಯಾಽಯುಧ್ಯ ಗಂಗಿನ್ಯಾಶ್ಚಿಕ್ಷೇಪ ಕೃಷ್ಣಪ್ರೇರಿತಾಃ ।
ಸರಥಂ ಚ ಸಯಂತಾರಂ ಚಕ್ರೇ ತಂ ಭಸ್ಮಸಾತ್ಕ್ಷಣಾತ್ ॥ ೧೪ ॥
ಶೇಷಾಃ ಪಾತಾಲಮಗಮನ್ ಹತಂ ದೃಷ್ಟ್ವಾಽಥ ತಾರಕಂ ।
ತತೋ ದೇವಗಣಾಃ ಸರ್ವೇ ಶಶಂಸುಸ್ತಸ್ಯ ವಿಕ್ರಮಂ ॥ ೧೫ ॥
ದೇವದುಂದುಭಯೋ ನೇದುಃ ಪುಷ್ಪವೃಷ್ಟಿಸ್ತಥಾಽಭವತ್ ।
ತೇ ಲಬ್ಧವಿಜಯಾಃ ಸರ್ವೇ ಮಹೇಶ್ವರ ಪುರೋಗಮಾಃ ॥ ೧೬ ॥
ಸಿಷಿಚುಃ ಸರ್ವದೇವಾನಾಂ ಸೇನಾಪತ್ಯೇ ಷಡಾನನಂ ।
ತತಃ ಸ್ಕಂದಂ ಸಮಾಲಿಂಗ್ಯ ಪಾರ್ವತೀ ಹರ್ಷಗದ್ಗದಾ ॥ ೧೭ ॥
ಮಾಂಗಲ್ಯಾನಿ ತದಾ ಚಕ್ರೇ ಸ್ವಸಖೀಭಿಃ ಸಮಾವೃತಾ ।
ಏವಂ ಚ ತಾರಕಂ ಹತ್ವಾ ಸಪ್ತಮೇಽಹನಿ ಬಾಲಕಃ ॥ ೧೮ ॥
ಮಂದರಾಚಲಮಾಸಾದ್ಯ ಪಿತರೌ ಸಂಪ್ರಹರ್ಷಯನ್ ।
ಉವಾಚ ಸಕಲಂ ಸ್ಕಂದಃ ಪರಮಾನಂದ ನಿರ್ಭರಃ ॥ ೧೯ ॥
ಕಾಲೇ ದಾರಕ್ರಿಯಾಂ ತಸ್ಯ ಚಿಂತಯಾಮಾಸ ಶಂಕರಃ ।
ಸ ಉವಾಚ ಪ್ರಸನ್ನಾತ್ಮಾ ಗಾಂಗೇಯಮಮಿತದ್ಯುತಿಂ ॥ ೨೦ ॥
ಪ್ರಾಪ್ತಃ ಕಾಲಸ್ತವ ವಿಭೋ ಪಾಣಿಗ್ರಹಣ ಸಂಮತಃ ।
ಕುರು ದಾರಾನ್ ಸಮಾಸಾದ್ಯ ಧರ್ಮಸ್ತೇ ಪುಂಸ ಸಂಮತಃ ॥ ೨೧ ॥

---

ಗಳಿಂದ ಅವನನ್ನು ಭಂಜಿಸಿದನು. ಶಕ್ತಿಯಿಂದ ಯುದ್ಧಮಾಡಿ ಆ ತಾರಕನನ್ನು ರಥ, ಸಾರಥಿಗಳೊಡನೆ ಸುಟ್ಟು ಬೂದಿಮಾಡಿದನು.

೧೫. ತಾರಕನು ಮಡಿದುದನ್ನು ನೋಡಿ ಉಳಿದ ದಾನವರು ಪಾತಾಳಕ್ಕೆ ಓಡಿದರು. ಬಳಿಕ ಸಕಲದೇವತೆಗಳು ಆ ತಾರಕನ ಶಕ್ತಿಯನ್ನು ಹೊಗಳಿದರು.

೧೬–೧೯. ದೇವತೆಗಳ ನಗಾರಿಗಳು ಮೊಳಗಿದುವು. ಪುಷ್ಪವೃಷ್ಟಿಯಾಯಿತು. ಆ ಇಂದ್ರಾದಿದೇವತೆಗಳೆಲ್ಲ ಜಯವನ್ನು ಪಡೆದು ಸ್ಕಂದನನ್ನು ಸಮಸ್ತದೇವತೆಗಳ ಸೇನಾಪತಿಯ ಪದವಿಯಲ್ಲಿ ಅಭಿಷೇಕ ಮಾಡಿದರು. ಬಳಿಕ ಪಾರ್ವತಿಯು ಸ್ಕಂದನನ್ನು ಅಪ್ಪಿಕೊಂಡು ಸಂತೋಷದಿಂದ ಗದ್ಗದ ಧ್ವನಿಯುಳ್ಳವಳಾಗಿ ತನ್ನ ಸಖಿಯರೊಡನೆ ಸ್ಕಂದನಿಗೆ ಮಂಗಳ ಕ್ರಿಯೆಗಳನ್ನು ಮಾಡಿದಳು. ಹೀಗೆ ಆ ಬಾಲಕನು ಏಳನೆಯ ದಿನದಲ್ಲಿ ತಾರಕಾಸುರನನ್ನು ವಧಿಸಿ ಮಂದರಪರ್ವತಕ್ಕೆ ಹೋಗಿ ತಂದೆ ತಾಯಿಗಳನ್ನು ಸಂತೋಷಗೊಳಿಸುತ್ತ ಆತ್ಯಾನಂದದಿಂದ ಅವರಿಗೆ ಎಲ್ಲವನ್ನೂ ಹೇಳಿದನು.

೨೦–೨೨. ಅನಂತರ ಶಂಕರನು ಸಕಾಲದಲ್ಲಿ ಅವನಿಗೆ ಮದುವೆ ಮಾಡ ಬೇಕೆಂದು ಆಲೋಚಿಸಿದನು. ಅವನು ಅಧಿಕ ಕಾಂತಿಯುಳ್ಳ ಸ್ಕಂದನನ್ನು ಕುರಿತು, "ಮಗು! ನಿನಗೆ ವಿವಾಹೋಚಿತವಾದ ಕಾಲವೊದಗಿದೆ. ನೀನು ಮದುವೆ

ಕ್ರೀಡಸ್ವ ವಿವಿಧೈರ್ಭೋಗೈರ್ವಿಮಾನೈಃ ಸಹ ಕಾಮಿಕೈಃ ।
ತಚ್ಛ್ರುತ್ವಾ ಭಗವಾನ್ ಸ್ಕಂದಃ ಪಿತರಂ ವಾಕ್ಯಮಬ್ರವೀತ್ ॥ ೨೨ ॥
ಅಹಮೇವ ಹಿ ಸರ್ವತ್ರ ದೃಶ್ಯಃ ಸರ್ವಗಣೇಷು ಚ ।
ದೃಶ್ಯಾಽದೃಶ್ಯ ಪದಾರ್ಥೇಷು ಕಿಂ ಗೃಹ್ಣಾಮಿ ತ್ಯಜಾಮಿ ಕಿಂ ॥ ೨೩ ॥
ಯಾಃ ಸ್ತ್ರಿಯಃ ಸಕಲಾ ವಿಶ್ವೇ ಪಾರ್ವತ್ಯಾ ತಾಃ ಸಮಾ ಹಿ ಮೇ ।
ನರಾಃ ಸರ್ವೇಽಪಿ ದೇವೇಶ ಭವದ್ವತ್ತಾನ್ತ್ರಿಲೋಕಯೋ ॥ ೨೪ ॥
ತ್ವಂ ಗುರುರ್ಮಾಂ ಚ ರಕ್ಷಸ್ವ ಪುನರ್ನರಕಮಜ್ಜನಾತ್ ।
ಯೇನ ಜ್ಞಾತಮಿದಂ ಜ್ಞಾನಂ ತ್ವತ್ಪ್ರಸಾದಾದಖಂಡಿತಂ ॥ ೨೫ ॥
ಪುನರೇವ ಮಹಾಘೋರ ಸಂಸಾರಾಬ್ಧೌ ನಿಮಜ್ಜಯೇ ।
ದೀಪಹಸ್ತೋ ಯಥಾ ವಸ್ತು ದೃಷ್ಟ್ವಾ ತತ್ಕರಣಂ ತ್ಯಜೇತ್ ॥ ೨೬ ॥
ತಥಾ ಜ್ಞಾನಮಧಿಪ್ರಾಪ್ಯ ಯೋಗೀ ತ್ಯಜತಿ ಸಂಸೃತಿಂ ।
ಜ್ಞಾತ್ವಾ ಸರ್ವಗತಂ ಬ್ರಹ್ಮ ಸರ್ವಜ್ಞ ಪರಮೇಶ್ವರ ॥ ೨೭ ॥
ನಿವರ್ತಂತೇ ಕ್ರಿಯಾಃ ಸರ್ವಾ ಯಸ್ಯ ತಂ ಯೋಗಿನಂ ವಿದುಃ ।
ವಿಷಯೇ ಲುಬ್ಧಚಿತ್ತಾನಾಂ ವನೇಪಿ ಜಾಯತೇ ರತಿಃ ॥ ೨೮ ॥

---

ಮಾಡಿಕೊಂಡು ಪುರುಷರಿಗೆ ಅರ್ಹವಾದ ಧರ್ಮವನ್ನು ಆಚರಿಸುತ್ತ ವಿವಿಧ ಭೋಗಗಳಿಂದಲೂ, ಸ್ವೇಚ್ಛೆಯಾಗಿ ಹೋಗುವ ವಿಮಾನಗಳಿಂದಲೂ ಕ್ರೀಡಿಸು." ಪೂಜ್ಯನಾದ ಸ್ಕಂದನು ಅದನ್ನು ಕೇಳಿ ತಂದೆಯನ್ನು ಕುರಿತು ಹೀಗೆಂದನು.

೨೩. "ನಾನೇ ಸಕಲ ಗಣಗಳಲ್ಲಿಯೂ, ದೃಶ್ಯಾದೃಶ್ಯ ಪದಾರ್ಥಗಳಲ್ಲಿಯೂ ಕಾಣಿಸುವೆನು. ಆದುದರಿಂದ ಯಾರನ್ನು ಪರಿಗ್ರಹಿಸಲಿ, ಯಾರನ್ನು ಬಿಡಲಿ.

೨೪. ಪ್ರಪಂಚದಲ್ಲಿರುವ ಸ್ತ್ರೀಯರೆಲ್ಲ ನನಗೆ ಪಾರ್ವತಿಯಂತಿರುವರು. ಪುರುಷರನ್ನೆಲ್ಲ ನಿನ್ನಂತೆಯೇ ಕಾಣುವೆನು.

೨೫. ಗುರುವಾದ ನೀನು ನರಕದಲ್ಲಿ ಮುಳುಗುವುದರಿಂದ ನನ್ನನ್ನು ರಕ್ಷಿಸು. ನಿನ್ನ ಅನುಗ್ರಹದಿಂದ ನನಗೀ ಅಖಂಡ ಜ್ಞಾನವುಂಟಾಯಿತು.

೨೬–೨೮. ಮರಳಿ ಮಹಾ ಘೋರ ಸಂಸಾರ ಸಮುದ್ರದಲ್ಲಿ ಮುಳುಗಲೆ? ಕೈಯಲ್ಲಿ ದೀಪವನ್ನು ಹಿಡಿದವನು ವಸ್ತುವನ್ನು ನೋಡಿದ ಕೂಡಲೆ ಅದಕ್ಕೆ ಕಾರಣವಾದ ದೀಪವನ್ನು ತ್ಯಜಿಸುವಂತೆ ಯೋಗಿಯು ಜ್ಞಾನವನ್ನು ಪಡೆದು ಸಂಸಾರವನ್ನು ತ್ಯಜಿಸುವನು. ಸರ್ವಜ್ಞನಾದ ಪರಮೇಶ್ವರನೆ! ಬ್ರಹ್ಮನು ಸರ್ವತ್ರ ಇರುವನೆಂದರಿತ ಯಾವನ ಸಕಲ ಕ್ರಿಯೆಗಳು ನಷ್ಟವಾಗುವುವೊ, ಅವನನ್ನು ಯೋಗಿಯೆಂದು ತಿಳಿಯುತ್ತಾರೆ. ವಿಷಯಾಸಕ್ತವಾದ ಮನಸ್ಸುಳ್ಳ ಮಾನವರಿಗೆ ವನದಲ್ಲಿಯೂ ಪ್ರೀತಿಯುಂಟಾಗುವುದು.

ಸರ್ವತ್ರ ಸಮದೃಷ್ಟೀನಾಂ ಗೇಹೇ ಮುಕ್ತಿರ್ಹಿ ಶಾಶ್ವತೀ ।
ಜ್ಞಾನಮೇವ ಮಹೇಶಾನ ಮನುಷ್ಯಾಣಾಂ ಸುದುರ್ಲಭಂ ॥ ೨೯ ॥
ಲಬ್ಧಂ ಜ್ಞಾನಂ ಕಥಮಪಿ ಪಂಡಿತೋ ನೈವ ಪಾತಯೇತ್ ।
ನಾಽಹಮಸ್ಮಿ ನ ಮಾತಾ ಮೇ ನ ಪಿತಾ ನ ಚ ಬಾಂಧವಃ ॥ ೩೦ ॥
ಜ್ಞಾನಂ ಪ್ರಾಪ್ಯ ಪೃಥಕ್ಭಾವಮಾಪನ್ನೋ ಭುವನೇಷ್ವಹಂ ।
ಪ್ರಾಪ್ಯಂ ಭಾಗಮಿದಂ ದೈವಾತ್ತ್ವಭಾವಾತ್ತ್ವ ನಾಽರ್ಹಸಿ ॥ ೩೧ ॥
ವಕ್ತುಮೇವಂ ವಿಧಂ ವಾಕ್ಯಂ ಮುಮುಕ್ಷೋರ್ಮೇ ನ ಸಂಶಯಃ ।
ಯದಾಗ್ರಹಪರಾ ದೇವೀ ಪುನಃ ಪುನರಭಾಷತ ॥ ೩೨ ॥
ತದಾ ತೌ ಪಿತರೌ ನತ್ವಾ ಗತೋಽಸೌ ಕ್ರೌಂಚಪರ್ವತಂ ।
ತತ್ರಾಽಽಶ್ರಮೇ ಮಹಾಪುಣ್ಯೇ ಚಚಾರ ಪರಮಂ ತಪಃ ॥ ೩೩ ॥
ಜಜಾಪ ಪರಮಂ ಬ್ರಹ್ಮ ದ್ವಾದಶಾಕ್ಷರ ಬೀಜಕಂ ।
ಪೂರ್ವಂ ಧ್ಯಾನೇನ ಸರ್ವಾಣಿ ವಶೀಕೃತ್ಯೇಂದ್ರಿಯಾಣಿ ಚ ॥ ೩೪ ॥
ಮಮತಾಂ ಸಂವಿಯುಜ್ಯಾಽಥ ಜ್ಞಾನಯೋಗಮವಾಪ್ತವಾನ್ ।
ಸಿದ್ಧಯಸ್ತಸ್ಯ ನಿರ್ವಿಘ್ನಾ ಅಣಿಮಾದ್ಯಾ ಯದಾಽಽಗತಾಃ ॥ ೩೫ ॥
ತದಾ ತಾಸಾಂ ಗಣಾ ಕ್ರುದ್ಧೋ ವಾಕ್ಯಮೇತದುವಾಚ ಹ ।
ಮಮಾಽಪಿ ದುಷ್ಟಭಾವೇನ ಯದಿ ಯೂಯಮುಪಾಗತಾಃ ॥ ೩೬ ॥

---

೨೯. ಸಮಸ್ತ ವಸ್ತುಗಳಲ್ಲಿಯೂ ಸಮಾನದೃಷ್ಟಿಯುಳ್ಳವರಿಗೆ ಶಾಶ್ವತವಾದ ಮುಕ್ತಿಯು ಮನೆಯಲ್ಲಿಯೇ ಲಭಿಸುವುದು. ಮಹೇಶ್ವರ! ಮನುಷ್ಯರಿಗೆ ಜ್ಞಾನವು ದುರ್ಲಭವಾದುದು.

೩೦. ಪಂಡಿತನು ತಾನು ಪಡೆದ ಜ್ಞಾನವನ್ನು ಹೇಗಾದರೂ ಕಳೆದುಕೊಳ್ಳಬಾರದು. ನಾನಿಲ್ಲ. ನನಗೆ ತಾಯಿ, ತಂದೆ, ಬಂಧುಗಳೂ ಇಲ್ಲ.

೩೧–೩೩. ನಾನು ಜ್ಞಾನವನ್ನು ಪಡೆದು ಲೋಕದಲ್ಲಿ ಪೃಥಗ್ಭಾವವನ್ನು ಹೊಂದಿರುವೆನು. ನಿನ್ನ ಪ್ರಭಾವದಿಂದ ಈ ಭಾಗ್ಯವನ್ನು ಪಡೆದಿರುವೆನು. ನೀನು ಮುಮುಕ್ಷುವಾದ ನನಗೆ ಇಂತಹ ಮಾತನ್ನು ಹೇಳಲರ್ಹನಲ್ಲ.'' ಪಾರ್ವತಿಯು ಆಗ್ರಹದಿಂದ ಮತ್ತೆ ಮತ್ತೆ ಅವನ್ನೇ ಹೇಳಲು ಅವನು ಆ ತಂದೆ ತಾಯಿಗಳನ್ನು ವಂದಿಸಿ ಕ್ರೌಂಚಾಚಲಕ್ಕೆ ಹೋಗಿ ಅಲ್ಲಿ ಪುಣ್ಯಾಶ್ರಮದಲ್ಲಿ ಉತ್ತಮ ತಪವನ್ನಾಚರಿಸಿದನು.

೩೪–೩೯. ಅವನು ದ್ವಾದಶಾಕ್ಷರ ಮಂತ್ರವನ್ನು ಜಪಿಸಿದನು. ಮೊದಲು ಧ್ಯಾನದಿಂದ ಸಕಲೇಂದ್ರಿಯಗಳನ್ನು ವಶಪಡಿಸಿಕೊಂಡು ಬಳಿಕ ಮಮತೆಯನ್ನು ಬಿಟ್ಟು ಜ್ಞಾನಯೋಗವನ್ನು ಹೊಂದಿದನು. ಆಗ ಅವನ ಬಳಿ ಅಣಿಮಾದಿ ಸಿದ್ಧಿಗಳು ಬರಲು ಅವುಗಳನ್ನು ಕುರಿತು ಕೋಪದಿಂದ ಇಂತೆಂದನು. "ನೀವು ದುಷ್ಟತನದಿಂದ ನನ್ನಹತ್ತಿರ ಬಂದದ್ದೇ ಆದರೆ ನನ್ನಂತಹ ಶಾಂತರನ್ನು ತಿರಸ್ಕರಿಸಲು

ತದಾಸ್ಮತ್ಸಮಶಾಂತಾನಾಂ ನಾಭಿಭೂತಿಂ ಕರಿಷ್ಯಥ ।
ಏವಂ ಜ್ಞಾತ್ವಾ ಮಹೇಶೋಽಪಿ ಯತೋ ಜ್ಞಾನಮಹೋದಯಂ ॥೩೭॥
ಮತ್ತೋಽಪಿ ಜ್ಞಾನಯೋಗೇನ ಸ್ಕಂದೋಽಪ್ಯಧಿಕಭಾವಭೃತ್ ।
ವಿಸ್ಮಯಾವಿಷ್ಟಹೃದಯಃ ಪಾರ್ವತೀಮನುಶಿಷ್ಟವಾನ್ ॥ ೩೮ ॥
ಪುತ್ರಶೋಕಪರಾಂಚೋಮಾಂ ಶುಭೈರ್ವಾಕ್ಯಾಮೃತೈರ್ಹರಃ ।
ಚಾತುರ್ಮಾಸಸ್ಯ ಮಾಹಾತ್ಮ್ಯಂ ಸರ್ವಪಾಪ ಪ್ರಣಾಶನಂ ॥ ೩೯ ॥
ಮಹೇಶ್ವರೋ ವಾ ಮಧುಕೈಟಭಾರಿ
ಹೃದ್ಯಾಶ್ರಿತೋ ಧ್ಯಾನಮಯೋಽದ್ವಿತೀಯಃ ।
ಅಭೇದ ಬುದ್ಧ್ಯಾ ಪರಮಾರ್ತಿಹಂತಾ
ರಿಪುಃ ಸ ಏವಾಽತಿಪ್ರಿಯೋ ಭವೇತ್ತತಃ ॥ ೪೦ ॥

ಸೂತ ಉವಾಚ:—

ಏತದ್ವಃ ಕಥಿತಂ ವಿಪ್ರಾಶ್ಚಾತುರ್ಮಾಸ್ಯಸಮುದ್ಭವಂ ।
ಮಾಹಾತ್ಮ್ಯಂ ವಿಸ್ತರೇಣೈವ ಕಿಮನ್ಯಚ್ಛ್ರೋತುಮಿಚ್ಛಥ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತಾರಕಾಸುರವಧವರ್ಣನಂ" ನಾಮ
ಚತುಃಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಶಕ್ತರಾಗುವುದಿಲ್ಲ. ಮಹೇಶ್ವರನು ಅವನ ಜ್ಞಾನದ ಮಹತ್ವವನ್ನರಿತು ಸ್ಕಂದನು ನನಗಿಂತಲೂ ಜ್ಞಾನಯೋಗದಿಂದ ಅಧಿಕನಾಗಿರುವನು ಎಂದು ಆಶ್ಚರ್ಯಗೊಂಡವನಾಗಿ ಪುತ್ರಶೋಕಾತುರಳಾದ ಪಾರ್ವತಿಗೆ ಮಂಗಳಕರವಾದ ವಾಕ್ಯಾಮೃತಗಳಿಂದ ಸಕಲ ಪಾಪಗಳನ್ನು ನಿವಾರಿಸುವ ಚಾತುರ್ಮಾಸ್ಯದ ಮಹಾತ್ಮ್ಯವನ್ನು ಹೇಳಿದನು.

೪೦. ಮನಸ್ಸಿನಲ್ಲಿ ಅಭೇದ ಬುದ್ಧಿಯಿಂದ ಪರಮ ದುಃಖವನ್ನು ನಿವಾರಿಸುವ ಶಂಕರನನ್ನಾಗಲಿ, ವಿಷ್ಣುವನ್ನಾಗಲಿ ಧ್ಯಾನಿಸುವವನಿಗೆ ಶತ್ರುವೂ ಅತಿಪ್ರಿಯನಾಗುವನು.

೪೧. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ನಿಮಗೆ ಈ ಚಾತುರ್ಮಾಸ್ಯದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳಿರುವೆನು. ಬೇರೆ ಏನನ್ನು ಕೇಳಲು ಬಯಸುವಿರಿ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತಾರಕಾಸುರವಧವರ್ಣನ"ವೆಂಬ
ಇನ್ನೂರ ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

## ಅಶೂನ್ಯಶಯನವ್ರತಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಪ್ರಭೂತಾನಿ ತ್ವಯೋಕ್ತಾನಿ ವ್ರತಾನಿ ನಿಯಮಾಸ್ತಥಾ ।
ಪ್ರಸುಪ್ತೇ ಪುಂಡರೀಕಾಕ್ಷೇ ಯೇಷಾಂ ಸಂಖ್ಯಾ ನ ವಿದ್ಯತೇ ॥ ೧ ॥
ಅಶಕ್ತ್ಯಾ ಹಿ ಶರೀರಸ್ಯ ನಿಯಮಾನಾಂ ಕಥಂ ಚರೇತ್ ।
ವ್ರತಂ ಹಿ ಸುಕುಮಾರಾಂಗೋ ದಾನೈರ್ವಾಽಪಿ ವದಸ್ವ ನಃ ॥ ೨ ॥

ಸೂತ ಉವಾಚ :—

ಅಶಕ್ತೋ ನಿಯಮಂ ಕರ್ತುಂ ಸುಕುಮಾರೋ ಭವೇತ್ತು ಯಃ ।
ತೇನ ತತ್ರ ಪ್ರಕರ್ತವ್ಯಂ ವಿಖ್ಯಾತಂ ಭೀಷ್ಮಪಂಚಕಂ ॥ ೩ ॥
ಕಾರ್ತಿಕಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ ।
ಪ್ರಾತರುತ್ಥಾಯ ವಿಪ್ರೇಂದ್ರ ಕರ್ತವ್ಯಂ ದಂತಧಾವನಂ ॥ ೪ ॥
ತತಸ್ತು ನಿಯಮಂ ಕುರ್ಯಾದ್ವಾಸುದೇವ ಪರಾಯಣಃ ।
ಪೂರ್ವೋಕ್ತಾನಾಂ ಚ ಸರ್ವೇಷಾಂ ನಿಯಮಾನಾಂ ದ್ವಿಜೋತ್ತಮಾಃ ॥ ೫ ॥

---

## ಕನ್ನಡದ ಅನುವಾದ

### ಅಶೂನ್ಯಶಯನವ್ರತಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಚಾತುರ್ಮಾಸ್ಯದಲ್ಲಿ ಬಹಳವಾಗಿ ವ್ರತನಿಯಮಗಳನ್ನು ಮಾಡಬೇಕೆಂದು ಹೇಳಿರುವೆ. ಅವು ಅಪರಿಮಿತವಾಗಿವೆ.

೨. ಶರೀರದಲ್ಲಿ ಶಕ್ತಿಯಿಲ್ಲದವನು ನಿಯಮಗಳನ್ನೂ, ಕೋಮಲಾಂಗನು ವ್ರತಗಳನ್ನೂ ಹೇಗೆ ಮಾಡಿಯಾನು? ಆದುದರಿಂದ ಅದಕ್ಕೆ ಪ್ರತಿಯಾಗಿ ಮಾಡಬಹುದಾದ ದಾನಗಳನ್ನು ನಮಗೆ ಹೇಳು.

೩. ಸೂತನು ಹೇಳುತ್ತಾನೆ:—ನಿಯಮವನ್ನು ಮಾಡಲಶಕ್ತನಾದ ಸುಕುಮಾರಾಂಗನು ಪ್ರಖ್ಯಾತವಾದ ಭೀಷ್ಮಪಂಚಕವನ್ನು ಮಾಡಬೇಕು.

೪. ಕಾರ್ತಿಕ ಶುಕ್ಲಪಕ್ಷದ ಏಕಾದಶೀದಿನ ಬೆಳಗ್ಗೆ ಎದ್ದು ದಂತಧಾವನವನ್ನು ಮಾಡಬೇಕು.

೫. ದ್ವಿಜವರ್ಯರೆ! ಅನಂತರ ವಿಷ್ಣುಭಕ್ತಿಯುಳ್ಳವನಾಗಿ ಹಿಂದೆ ಹೇಳಿದ ಸಕಲ ನಿಯಮಗಳನ್ನು ಆಚರಿಸಬೇಕು.

ಉಪವಾಸಃ ಪ್ರಕರ್ತವ್ಯಸ್ತಸ್ಮಿನ್ನಹನಿ ಭಕ್ತಿತಃ ।
ಅಶಕ್ತ್ಯಾ ವಾ ಶರೀರಸ್ಯ ಹೇಮಂ ದದ್ಯಾತ್ಸ್ವಶಕ್ತಿತಃ ॥ ೬ ॥
ಬ್ರಾಹ್ಮಣಾಯ ಹವಿಷ್ಯಾನ್ನಂ ದಾತವ್ಯಂ ವೈಷ್ಣವೈರ್ನರೈಃ ।
ಏವಂ ಪಂಚದಿನಂ ಯಾವತ್ಕರ್ತವ್ಯಂ ವ್ರತಮುತ್ತಮಂ ॥ ೭ ॥
ಪೂಜನೀಯೋ ಹೃಷೀಕೇಶೋ ಜಲಶಾಯಿಸ್ವರೂಪಧೃಕ್ ।
ಗಂಧೈರ್ಧೂಪೈಶ್ಚ ನೈವೇದ್ಯೈ ರಾತ್ರಿಜಾಗರಣೈರಪಿ ॥ ೮ ॥
ಷಷ್ಠೇಽಹನಿ ತತೋ ಜಾತೇ ಪೂಜಯೇದ್ಬ್ರಾಹ್ಮಣೋತ್ತಮಾನ್ ।
ತಾಂಶ್ಚ ವಸ್ತ್ರೈರ್ಹಿರಣ್ಯೇನ ಮಿಷ್ಟಾನ್ನೇನ ಪ್ರಭಕ್ತಿತಃ ॥ ೯ ॥
ತತಃ ಕೃತಾಂಜಲಿರ್ಭೂತ್ವಾ ಯಾಚಯೇದ್ಬ್ರಾಹ್ಮಣೋತ್ತಮಾನ್ ।
ಸರ್ವೇ ಮೇ ನಿಯಮಾಃ ಪ್ರಾಪ್ತಾ ಯುಷ್ಮಾಕಂ ಚ ಪ್ರಸಾದತಃ ॥ ೧೦ ॥
ತತಸ್ತೈರಪಿ ವಕ್ತವ್ಯಂ ಚತುರ್ಮಾಸೀ ಸಮುದ್ಭವಂ ।
ವ್ರತಾನಾಂ ನಿಯಮಾನಾಂ ಚ ವ್ರತಂ ಭೂಯಾತ್ತ್ವಸಾಽಖಿಲಂ ॥ ೧೧ ॥
ತತೋ ವಿಸರ್ಜ್ಯ ತಾನ್ ವಿಪ್ರಾನ್ ಭೋಜನಂ ಸ್ವಯಮಾಚರೇತ್ ।
ಸರ್ವಾಹಾರೇಣ ರಾಜೇಂದ್ರ ಪಂಚಗವ್ಯಪ್ರಪೂರ್ವಕಂ ॥ ೧೨ ॥

---

೬. ಆ ದಿನ ಭಕ್ತಿಯಿಂದ ಉಪವಾಸ ಮಾಡಬೇಕು. ಉಪವಾಸ ಮಾಡಲು ದೇಹದಲ್ಲಿ ಶಕ್ತಿಯಿಲ್ಲದಿದ್ದರೆ ಶಕ್ತ್ಯನುಸಾರ ಸುವರ್ಣವನ್ನು ದಾನಮಾಡಬೇಕು.

೭. ವೈಷ್ಣವರು ಬ್ರಾಹ್ಮಣನಿಗೆ ಹವಿಷ್ಯಾನ್ನವನ್ನು ದಾನಮಾಡಬೇಕು. ಹೀಗೆ ಐದು ದಿನ ಉತ್ತಮ ವ್ರತವನ್ನು ಮಾಡಬೇಕು.

೮. ಜಲಶಾಯಿಯ ರೂಪವನ್ನು ಧರಿಸಿರುವ ವಿಷ್ಣುವನ್ನು ಗಂಧ, ಧೂಪ, ನೈವೇದ್ಯ, ರಾತ್ರಿ ಜಾಗರಣೆ ಇವುಗಳಿಂದ ಪೂಜಿಸಬೇಕು.

೯. ಬಳಿಕ ಆರನೆಯ ದಿನ ಉತ್ತಮ ಬ್ರಾಹ್ಮಣರನ್ನು ವಸ್ತ್ರ, ಚಿನ್ನ, ಮಿಷ್ಟಾನ್ನ ಇವುಗಳಿಂದ ಭಕ್ತಿಯಿಂದ ಪೂಜಿಸಬೇಕು.

೧೦. ಅನಂತರ ಕೈಮುಗಿದುಕೊಂಡು ನಿಮ್ಮ ಅನುಗ್ರಹದಿಂದ ನನ್ನ ನಿಯಮಗಳು ಪೂರ್ತಿಯಾದುವು ಎಂದು ಬ್ರಾಹ್ಮಣೋತ್ತಮರನ್ನು ಪ್ರಾರ್ಥಿಸಬೇಕು.

೧೧. ಅವರು ನಿನ್ನ ಚಾತುರ್ಮಾಸ್ಯದ ವ್ರತ ಮತ್ತು ನಿಯಮಗಳು ಪೂರ್ತಿಯಾಗಲಿ ಎಂದು ಹೇಳಬೇಕು.

೧೨. ಅನಂತರ ಆ ಬ್ರಾಹ್ಮಣರನ್ನು ಕಳುಹಿಸಿ ತಾನು ಪಂಚಗವ್ಯಪೂರ್ವಕವಾಗಿ ಸಕಲಾಹಾರ ವಸ್ತುಗಳನ್ನು ಭುಂಜಿಸಬೇಕು.

ಯಃ ಕರೋತಿ ವ್ರತಂ ತಸ್ಯ ಫಲಂ ಸ್ಯಾದ್ಬಹುಪುಣ್ಯದಂ ।
ಯಃ ಪುನರ್ವ್ರತಮೇತದ್ಧಿ ಕುರುತೇ ದಿನಪಂಚಕಂ ।
ಉಪವಾಸಪರಸ್ತಸ್ಯ ಫಲಂ ಶತಗುಣಂ ಭವೇತ್ ॥ ೧೩ ॥
ಏಕಾದಶ್ಯಾಂ ಹರೇಃ ಪೂಜಾಂ ಜಾಜೀಪುಷ್ಪೈಃ ಸಮಾಚರೇತ್ ।
ದ್ವಾದಶ್ಯಾಂ ಬಿಲ್ವಪತ್ರೇಣ ಶತಪತ್ರ್ಯಾ ತತಃಪರಂ ।
ತ್ರಯೋದಶ್ಯಾಂ ಚತುರ್ದಶ್ಯಾಂ ಸುರಭ್ಯಾ ಭಕ್ತಿಪೂರ್ವಕಂ ॥ ೧೪ ॥
ಭೃಂಗರಾಜೇನ ಪುಷ್ಪೇಣ ಪೌರ್ಣಮಾಸ್ಯಾಂ ಪ್ರಪೂಜಯೇತ್ ।
ಪ್ರತಿಪದ್ದಿವಸೇ ಸರ್ವೈಃ ಪೂಜನೀಯೋ ಜನಾರ್ದನಃ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಃ ಕುಶೋದಕಂ ॥ ೧೫ ॥
ಪ್ರತಿಪದ್ದಿವಸೇ ಸರ್ವಾನ್ ಪ್ರಾಶಯೇತ್ಕಾಯಶುದ್ಧಯೇ ।
ಅಗರಂ ಗುಗ್ಗುಲಂ ಚೈವ ಕರ್ಪೂರಂ ತಗರಂ ತ್ವಚಾ ॥ ೧೬ ॥
ಏಕೈಕಂ ನಿರ್ವಪೇದ್ಧೂಪಂ ಪ್ರತಿಪದ್ದಿವಸೇಽಖಿಲಂ ।
ಜಲಶಾಯೀ ಜಗದ್ಯೋನಿಃ ಶೇಷಪರ್ಯಂಕಮಾಶ್ರಿತಃ ॥ ೧೭ ॥
ಅರ್ಘ್ಯಂ ಗೃಹ್ಣಾತು ಮೇ ದೇವೋ ಭೀಷ್ಮಪಂಚಕಸಿದ್ಧಯೇ ।
ಮಂತ್ರೇಣಾಽನೇನ ದಾತವ್ಯೋ ಹ್ಯರ್ಘ್ಯೋ ದೇವಸ್ಯ ಭಕ್ತಿತಃ ॥ ೧೮ ॥
ಶಂಖತೋಯಂ ಸಮಾದಾಯ ಸ ಪುಷ್ಪಫಲಚಂದನೈಃ ।
ನೈವೇದ್ಯಂ ಪರಮಾನ್ನಂ ಚ ಸ್ವಶಕ್ತ್ಯಾ ನಿರ್ವಪೇದ್ದ್ವಿಜಾಃ ॥ ೧೯ ॥

---

ಪುಣ್ಯವುಂಟಾಗುವುದು.
೧೩. ಈ ವ್ರತವನ್ನಾಚರಿಸಿದವನಿಗೆ ಅತಿಶಯ
ಉಪವಾಸದಿಂದ ಐದು ದಿನ ಈ ವ್ರತವನ್ನಾಚರಿಸಿದವನಿಗೆ ನೂರುಮಡಿ ಫಲ
ವುಂಟಾಗುವುದು.
೧೪–೧೮. ಏಕಾದಶೀ ದಿನ ಜಾಜಿಯ ಹೂವಿನಿಂದಲೂ, ದ್ವಾದಶೀ ದಿನ ಬಿಲ್ವ
ಪತ್ರೆಯಿಂದಲೂ, ತ್ರಯೋದಶೀ ದಿನ ತಾವರೆಹೂವಿನಿಂದಲೂ, ಚತುರ್ದಶೀ ದಿನ
ಸುವಾಸನೆಯಾದ ಇತರ ಹೂವುಗಳಿಂದಲೂ, ಹುಣ್ಣಿಮೆಯ ದಿನ ಭೃಂಗರಾಜ
ದಿಂದಲೂ, ಪಾಡ್ಯದ ದಿನ ಎಲ್ಲ ಹೂಗಳಿಂದಲೂ ವಿಷ್ಣುವನ್ನು ಅರ್ಚಿಸಬೇಕು.
ಮತ್ತು ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ದರ್ಭೋದಕ ಇವು
ಗಳನ್ನು ಶರೀರಶುದ್ಧಿಗಾಗಿ ಪ್ರಾಶನಮಾಡಬೇಕು. ಕ್ರಮವಾಗಿ ಅಗುರು, ಗುಗ್ಗುಳು,
ಕರ್ಪೂರ, ತಗರ, ಲವಂಗ ಇವುಗಳ ಧೂಪವನ್ನು ಅರ್ಪಿಸಬೇಕು. ಪಾಡ್ಯದ ದಿನ
ಸಕಲ ಧೂಪವನ್ನೂ ಕೊಡಬೇಕು. "ಜಲಶಾಯಿಯೂ, ಜಗತ್ಕಾರಣನೂ, ಶೇಷ
ಶಾಯಿಯೂ ಆದ ವಿಷ್ಣುವು ಭೀಷ್ಮಪಂಚಕ ಸಿದ್ಧಿಗಾಗಿ ಅರ್ಘ್ಯವನ್ನು ಸ್ವೀಕರಿಸಲಿ"
ಎಂಬ ಈ ಮಂತ್ರದಿಂದ ವಿಷ್ಣುವಿಗೆ ಅರ್ಘ್ಯವನ್ನು ಕೊಡಬೇಕು.
೧೯. ದ್ವಿಜರೆ! ಪುಷ್ಪ, ಫಲ, ಗಂಧಗಳೊಡನೆ ಶಂಖೋದಕವನ್ನು ತೆಗೆದು
ಕೊಂಡು ಪರಮಾನ್ನವನ್ನು ವಿಷ್ಣುವಿಗೆ ನಿವೇದಿಸಬೇಕು.

ಏತದ್ವೈ ಸರ್ವಮಾಖ್ಯಾತಂ ವ್ರತಂವೈ ಭೀಷ್ಮಪಂಚಕಂ ।
ಸಂಪ್ರಾಪ್ಯತೇ ಫಲಂ ಚೈವ ವ್ರತಾನಾಂ ನಿಯಮೈಃ ಸಹ ॥ ೨೦ ॥
ಋಷಯ ಊಚುಃ—
ಯದೇತದ್ಭವತಾ ಪ್ರೋಕ್ತಾಮಶೂನ್ಯಶಾಯಿನೀ ವ್ರತಂ ।
ಇಂದ್ರೇಣ ಯತ್ಕೃತಂ ಪೂರ್ವಂ ತುಷ್ಟ್ಯರ್ಥಂ ಚಕ್ರಪಾಣಿನಃ ।
ಪ್ರಸುಪ್ತಸ್ಯ ಮಹಾಭಾಗ ಫಲಂ ಚೈವ ಪ್ರಕೀರ್ತಿತಂ ॥ ೨೧ ॥
ಕಸ್ಮಿನ್‌ಕಾಲೇ ಪ್ರಕರ್ತವ್ಯಂ ಕೇನೈವ ವಿಧಿನಾ ತಥಾ ।
ತಸ್ಮಾತ್ಸೂತ ಮಹಾಭಾಗ ವಿಧಾನಂ ವಿಸ್ತರಾದ್ವದ ॥ ೨೨ ॥
ಸೂತ ಉವಾಚಃ—
ಶ್ರಾವಣ್ಯಾಂ ಸಮತೀತಾಯಾಂ ದ್ವಿತೀಯಾದಿವಸೇ ಸ್ಥಿತೇ ।
ಪ್ರಾತರುತ್ಥಾಯ ವಿಪ್ರೇಂದ್ರಾ ನಕ್ಷತ್ರೇ ವಿಷ್ಣುದೈವತೇ ।
ಪಾಪಿಷ್ಠೈಃ ಪತಿತೈರ್ಮ್ಲೇಚ್ಛೈಃ ಸಂಭಾಷಂ ನೈವ ಕಾರಯೇತ್ ॥ ೨೩ ॥
ತತೋ ಮಧ್ಯಾಹ್ನಸಮಯೇ ಸ್ನಾತ್ವಾ ಧೌತಾಂಬರಃ ಶುಚಿಃ ।
ಜಲಶಾಯಿನಮಾಸಾದ್ಯ ಮಂತ್ರೇಣಾನೇನ ಪೂಜಯೇತ್ ॥ ೨೪ ॥
ಶ್ರೀವತ್ಸಧಾರಿಂಛ್ರೀಕಾಂತ ಶ್ರೀಧಾಮಂಛ್ರೀಪತೇಽವ್ಯಯ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥ ೨೫ ॥

---

೨೦. ನಿಮಗೆ ಈ ಭೀಷ್ಮಪಂಚಕ ವ್ರತವನ್ನು ಹೇಳಿರುವೆನು. ಇದರಿಂದ ವ್ರತನಿಯಮಗಳ ಫಲವು ಲಭಿಸುವುದು.

೨೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಿಂದೆ ಮಹೇಂದ್ರನು ಸುಪ್ತನಾದ ವಿಷ್ಣುವಿನ ತೃಪ್ತಿಗಾಗಿ ಮಾಡಿದ ಅಶೂನ್ಯಶಾಯಿನೀ ವ್ರತವನ್ನೂ, ಅದರ ಫಲವನ್ನೂ ಹೇಳಿರುವೆ.

೨೨. ಆ ವ್ರತವನ್ನು ಯಾವಾಗ ಯಾವ ವಿಧಿಯಿಂದ ಮಾಡಬೇಕು? ಅದರ ವಿಧಾನವನ್ನು ವಿಸ್ತಾರವಾಗಿ ನಮಗೆ ಹೇಳು.

೨೩. ಸೂತನು ಹೇಳುತ್ತಾನೆ:—ಶ್ರಾವಣಶುದ್ಧ ಪೂರ್ಣಿಮೆಯು ಕಳೆಯಲು ಬಿದಿಗೆಯ ದಿನ ವಿಷ್ಣುದೇವತಾಕ ನಕ್ಷತ್ರದಲ್ಲಿ ಬೆಳಗ್ಗೆ ಎದ್ದು ಪಾಪಿಷ್ಠರು, ಪತಿತರು, ಮ್ಲೇಚ್ಛರು ಇವರೊಡನೆ ಸಂಭಾಷಣೆ ಮಾಡಕೂಡದು.

೨೪. ಬಳಿಕ ಮಧ್ಯಾಹ್ನದ ವೇಳೆಯಲ್ಲಿ ಮಿಂದು ಮಡಿಬಟ್ಟೆಯನ್ನುಟ್ಟು ಶುದ್ಧನಾಗಿ ವಿಷ್ಣುವನ್ನು ಈ ಮಂತ್ರದಿಂದ ಪೂಜಿಸಬೇಕು.

೨೫. ಶ್ರೀವತ್ಸಧಾರಿಯೂ, ಲಕ್ಷ್ಮೀಪತಿಯೂ, ಲಕ್ಷ್ಮೀನಿವಾಸನೂ, ಲಕ್ಷ್ಮೀಪ್ರಿಯನೂ, ನಾಶರಹಿತನೂ ಆದ ವಿಷ್ಣುವೇ! ಧರ್ಮಾರ್ಥಕಾಮವನ್ನೀಯುವ ನನ್ನ ಗಾರ್ಹಸ್ಥ್ಯವು ನಾಶವಾಗದಿರಲಿ.

ಪಿತರೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ಚಾಽಗ್ನಯಃ ।
ದೇವತಾ ಮಾ ಪ್ರಣಶ್ಯಂತು ಮತ್ತೋ ದಾಂಪತ್ಯಭೇದಕಃ ॥ ೨೬ ॥
ಲಕ್ಷ್ಮ್ಯಾ ವಿಯುಜ್ಯಸೇ ಕೃಷ್ಣ ನ ಕದಾಚಿದ್ಯಥಾ ಭವಾನ್ ।
ತಥಾ ಕಲತ್ರ ಸಂಬಂಧೋ ದೇವ ಮಾ ಮೇ ಪ್ರಣಶ್ಯತು ॥ ೨೭ ॥
ಲಕ್ಷ್ಮ್ಯಾಹ್ಯಶೂನ್ಯಂ ಶಯನಂ ಯಥಾ ತೇ ದೇವ ಸರ್ವದಾ ।
ಶಯ್ಯಾ ಮಮಾಽಪ್ಯಶೂನ್ಯಾಽಸ್ತು ತಥಾ ಜನ್ಮನಿ ಜನ್ಮನಿ ॥ ೨೮ ॥
ಏವಮರ್ಘಂ ನಿವೇದ್ಯಾಽಥ ತತೋ ವಿಪ್ರಂ ಪ್ರಪೂಜಯೇತ್ ।
ಯಥಾಶಕ್ತ್ಯಾ ದ್ವಿಜಶ್ರೇಷ್ಠಾ ವಿತ್ತಶಾಠ್ಯಂ ವಿವರ್ಜಯೇತ್ ॥ ೨೯ ॥
ಏವಂ ಭಾದ್ರಪದೇಮಾಸಿ ಆಶ್ವಿನೇ ಕಾರ್ತಿಕೇ ತಥಾ ।
ಪೂಜಯೇಚ್ಚ ಜಗನ್ನಾಥಂ ಜಲಶಾಯಿನಮಚ್ಯುತಂ ॥ ೩೦ ॥
ಅಕ್ಷಾರಭೋಜನಂ ಕಾರ್ಯಂ ವಿಶೇಷಾತ್ತೈಲವರ್ಜಿತಂ ।
ಸಮಾಪ್ತೌ ಚ ತತೋ ದದ್ಯಾದ್ಬ್ರಾಹ್ಮಣೇಂದ್ರಾಯ ಭಕ್ತಿತಃ ॥ ೩೧ ॥
ಫಲವ್ರೀಹಿ ಸಮೋಪೇತಾಂ ಶಯ್ಯಾಂ ವಸ್ತ್ರಸಮನ್ವಿತಾಂ ।
ಸುವರ್ಣಂ ದಕ್ಷಿಣಾಯಾಂ ಚ ತಥೈವ ಚ ಫಲಂ ಲಭೇತ್ ॥ ೩೨ ॥
ಏವಂ ಯಃ ಕುರುತೇ ಸಮ್ಯಗ್ವ್ರತಮೇತತ್ಸಮಾಹಿತಃ ।
ತಸ್ಯ ತುಷ್ಟಿಪಥಂ ಯಾತಿ ಜಲಶಾಯೀ ಜಗದ್ಗುರುಃ ॥ ೩೩ ॥

---

೨೬. ನನ್ನ ದಾಂಪತ್ಯವಿಚ್ಛೇದನದಿಂದ ಪಿತೃಗಳೂ, ಅಗ್ನಿಗಳೂ, ದೇವತೆಗಳೂ ನಾಶವಾಗದಿರಲಿ.

೨೭. ವಿಷ್ಣುವೆ! ನೀನು ಯಾವಾಗಲೂ ಲಕ್ಷ್ಮಿಯಿಂದ ಅಗಲದಿರುವಂತೆ ನನ್ನ ಪತ್ನೀ ಸಂಬಂಧವು ಹಾಳಾಗದಿರಲಿ.

೨೮. ಸ್ವಾಮಿ! ನಿನ್ನ ಶಯನವು ಲಕ್ಷ್ಮಿಯಿಂದ ಶೂನ್ಯವಾಗದಿರುವಂತೆ ನನ್ನ ಶಯ್ಯೆಯೂ ಪ್ರತಿ ಜನ್ಮದಲ್ಲಿಯೂ ಶೂನ್ಯವಾಗದಿರಲಿ.

೨೯. ಈ ವಿಷಯವನ್ನು ತಿಳಿಸಿ ಅನಂತರ ಶಕ್ತ್ಯನುಸಾರ ಬ್ರಾಹ್ಮಣನನ್ನು ಪೂಜಿಸಬೇಕು. ವಿತ್ತಶಾಠ್ಯವನ್ನು ಬಿಡಬೇಕು.

೩೦. ಹೀಗೆಯೇ ಭಾದ್ರಪದ, ಆಶ್ವಿನ, ಕಾರ್ತಿಕಮಾಸಗಳಲ್ಲಿ ಜಲಶಾಯಿಯೊದ ವಿಷ್ಣುವನ್ನು ಪೂಜಿಸಬೇಕು.

೩೧–೩೨. ಉಪ್ಪು ಎಣ್ಣೆಯಿಲ್ಲದೆ ಊಟಮಾಡಬೇಕು. ವ್ರತಸಮಾಪ್ತಿಯಲ್ಲಿ ಬ್ರಾಹ್ಮಣೋತ್ತಮರಿಗೆ ಭಕ್ತಿಯಿಂದ ಫಲ, ಬತ್ತ, ವಸ್ತ್ರಗಳೊಡನೆ ಹಾಸಿಗೆಯನ್ನು ದಾನಮಾಡಿ ಸುವರ್ಣವನ್ನು ದಕ್ಷಿಣೆಯಾಗಿ ಕೊಡಬೇಕು. ಇದರಿಂದ ಅಂತಹ ಫಲವು ದೊರೆಯುವುದು.

೩೩–೩೪. ಈ ವ್ರತವನ್ನು ಸಾವಧಾನ ಮನಸ್ಸಿನಿಂದ ಮಾಡಿದವನಿಗೆ

ಯಥಾ ಶಕ್ರಸ್ಯ ಸಂತುಷ್ಟಃ ಪೂರ್ವಮೇವ ದ್ವಿಜೋತ್ತಮಾಃ ।
ಅಶೂನ್ಯಂ ಶಯನಂ ತಸ್ಯ ಭವೇಜ್ಜನ್ಮನಿ ಜನ್ಮನಿ ॥ ೩೪ ॥
ಅಷ್ಟಮಾಸಕೃತಂ ಪಾಪಮಜ್ಞಾನಾಜ್ಞಾನತೋಽಪಿ ವಾ ।
ಅಶೂನ್ಯಶಯನಾತ್ಸರ್ವಂ ವ್ರತಾನ್ನಾಶಂ ಸಮೇತ್ಯಪಿಮಾನ್ ॥ ೩೫ ॥
ಪುತ್ರಹೀನಾ ಚ ಯಾ ನಾರೀ ಕಾಕವಂಧ್ಯಾ ಚ ಯಾ ಭವೇತ್ ।
ವಿಧವಾ ಯಾ ಕರೋತ್ಯೇತದ್ವ್ರತಮೇವಂ ಸಮಾಹಿತಾ ।
ತಸ್ಯಾಸ್ತುಷ್ಟೋ ಜಗನ್ನಾಥಃ ಕಾಯಶುದ್ಧಿಂ ಪ್ರಯಚ್ಛತಿ ॥ ೩೬ ॥
ನ ತಸ್ಯಾ ಜಾಯತೇ ಬುದ್ಧಿಃ ಕದಾಚಿತ್ಪಾಪಸಂಭವಾ ।
ಸ ಕಾಮೋಪಹತಾ ಬುದ್ಧಿಃ ಕಥಂಚಿದಪಿ ಜಾಯತೇ ॥ ೩೭ ॥
ಕುಮಾರಿಕಾಽಪಿ ಯಾ ಸಮ್ಯಗ್ವ್ರತಮೇತತ್ಸಮಾಚರೇತ್ ।
ಸಾ ಪತಿಂ ಲಭತೇ ವಿಪ್ರಾಃ ಕುಲೀನಂ ರೂಪಸಂಯುತಂ ॥ ೩೮ ॥
ನಿಷ್ಕಾಮಃ ಕುರುತೇ ಯಸ್ತು ವ್ರತಮೇತತ್ಸಮಾಹಿತಃ ।
ಚತುರ್ಮಾಸ್ಯುದ್ಭವಾನಾಂ ಚ ನಿಯಮಾನಾಂ ಫಲಂ ಲಭೇತ್ ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಶೂನ್ಯಶಯನವ್ರತಮಾಹಾತ್ಮ್ಯವರ್ಣನಂ" ನಾಮ
ಪಂಚಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ಜಗದ್ಗುರುವಾದ ವಿಷ್ಣುವು ಹಿಂದೆ ಇಂದ್ರನಿಗೆ ಸಂತುಷ್ಟನಾದಂತೆ ಸಂತುಷ್ಟನಾಗುವನು. ಅವನ ಶಯನವು ಪ್ರತಿ ಜನ್ಮದಲ್ಲಿಯೂ ಅಶೂನ್ಯವಾಗುವುದು.

೩೫. ಜ್ಞಾನದಿಂದಾಗಲಿ, ಅಜ್ಞಾನದಿಂದಾಗಲಿ ಎಂಟು ತಿಂಗಳು ಮಾಡಿದ ಪಾಪವನ್ನು ನರನು ಈ ಅಶೂನ್ಯಶಯನವ್ರತದಿಂದ ಹೋಗಲಾಡಿಸಿಕೊಳ್ಳುವನು.

೩೬. ಮಕ್ಕಳಿಲ್ಲದವಳೂ, ಬಂಜೆಯೂ, ವಿಧವೆಯೂ ಈ ವ್ರತವನ್ನು ಮಾಡಿದರೆ ಜಗನ್ನಾಥನು ಸಂತುಷ್ಟನಾಗಿ ಶರೀರವನ್ನು ಶುದ್ಧಿಗೊಳಿಸುವನು.

೩೭. ಅವಳಿಗೆ ಪಾಪಬುದ್ಧಿಯುಂಟಾಗುವುದಿಲ್ಲ. ಮತ್ತು ಬುದ್ಧಿಯು ಕಾಮದಿಂದ ಕೆಡುವುದಿಲ್ಲ.

೩೮-೩೯. ವಿಪ್ರರೆ! ಕನ್ಯೆಯು ಈ ವ್ರತವನ್ನಾಚರಿಸಿದರೆ ಕುಲೀನನೂ, ಸುಂದರನೂ ಆದ ಪತಿಯನ್ನು ಪಡೆಯುವಳು. ನರನು ನಿಷ್ಕಾಮನಾಗಿ ಈ ವ್ರತವನ್ನು ಮಾಡಿದರೆ ಚಾತುರ್ಮಾಸ್ಯದ ನಿಯಮಗಳ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಶೂನ್ಯಶಯನವ್ರತಮಾಹಾತ್ಮ್ಯವರ್ಣನ" ಎಂಬ
ಇನ್ನೂರ ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

## ಶಿವರಾತ್ರಿಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಶ್ರುತಾನಿ ಮುಖ್ಯತೀರ್ಥಾನಿ ತತ್ಕ್ಷೇತ್ರ ಪ್ರೋದ್ಭವಾನಿ ಚ ।
ಯೇಷು ಸ್ನಾತೋ ನರಃ ಸಮ್ಯಕ್ಸರ್ವತೀರ್ಥಫಲಂ ಲಭೇತ್ ॥ ೧ ॥
ಲಿಂಗಾನಿ ಚ ಮಹಾಭಾಗ ತತ್ರ ಮುಖ್ಯಾನಿ ಯಾನಿ ಚ ।
ಯೈರ್ದೃಷ್ಟೈರ್ಲಭ್ಯತೇ ಶ್ರೇಯಃ ಸರ್ವೇಷಾಂ ತಾನಿ ನೋ ವದ ॥ ೨ ॥

ಸೂತ ಉವಾಚ:—

ತತ್ರ ಚ ಮಂಕಣಾಖ್ಯಂತು ಲಿಂಗಮಸ್ತಿ ಸುಶೋಭನಂ ।
ತಥಾ ಸಿದ್ಧೇಶ್ವರಂ ನಾಮ ಗೌತಮೇಶ್ವರ ಸಂಯುತಂ ॥ ೩ ॥
ಕಪಾಲೇಶ್ವರಮನ್ಯಚ್ಚ ಚತುರ್ಥಂ ಪರಿಕೀರ್ತಿತಂ ।
ಏಕೈಕಂ ಸರ್ವಲಿಂಗಾನಾಂ ಫಲಂ ಯಚ್ಛತ್ಯಸಂಶಯಂ ।
ಯಥೋಕ್ತವಿಧಿನಾ ಸಮ್ಯಗ್ಯಥೋಕ್ತಂ ದ್ವಿಜಸತ್ತಮಾಃ ॥ ೪ ॥
ತತ್ರ ತಾವತ್ಪ್ರವಕ್ಷ್ಯಾಮಿ ಮಂಕಣೇಶ್ವರಜಂ ಫಲಂ ।
ಮಕಾರಾಕ್ಷರ ಯುಕ್ತಸ್ಯ ಲಿಂಗಸ್ಯಾತ್ರ ದ್ವಿಜೋತ್ತಮಾಃ ॥ ೫ ॥
ಶಿವರಾತ್ರಿಂ ಸಮಾಸಾದ್ಯ ಯಸ್ತಸ್ಯ ಪುರುಷೋ ದ್ವಿಜಾಃ ।
ಕುರ್ಯಾಜ್ಜಾಗರಣಂ ರಾತ್ರೌ ನಿರಾಹಾರಃ ಸ್ಥಿತಃ ಶುಚಿಃ ॥ ೬ ॥

---

## ಕನ್ನಡದ ಅನುವಾದ

### ಶಿವರಾತ್ರಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಆಯಾ ಕ್ಷೇತ್ರಗಳಲ್ಲಿರುವ ಮುಖ್ಯ ತೀರ್ಥಗಳನ್ನು ಕೇಳಿರುವೆವು. ಯಾವ ತೀರ್ಥಗಳಲ್ಲಿ ಮನುಷ್ಯನು ಮಿಂದರೆ ಸಕಲ ತೀರ್ಥಗಳಲ್ಲಿ ಮಿಂದ ಫಲವನ್ನು ಪಡೆಯುವನು?

೨. ಅವುಗಳಲ್ಲಿರುವ ಮುಖ್ಯ ಲಿಂಗಗಳಾವುವು? ಯಾವ ಲಿಂಗಗಳನ್ನು ನೋಡುವುದರಿಂದ ಸಕಲ ಲಿಂಗಗಳನ್ನು ದರ್ಶನಮಾಡಿದ ಫಲವು ದೊರೆಯುವುದು?

೩–೪. ಸೂತನು ಹೇಳುತ್ತಾನೆ:—ಅಲ್ಲಿ ಮಂಕಣ, ಸಿದ್ಧೇಶ್ವರ, ಗೌತಮೇಶ್ವರ, ಕಪಾಲೇಶ್ವರ ಎಂಬ ನಾಲ್ಕು ಲಿಂಗಗಳಿರುವುವು. ಇವುಗಳನ್ನು ವಿಧಿಯಂತೆ ಪೂಜಿಸಿದರೆ ಒಂದೊಂದೂ ಸಕಲ ಲಿಂಗಗಳ ಫಲವನ್ನು ಕೊಡುವುದು.

೫–೬. ಅವುಗಳಲ್ಲಿ ಮೊದಲು ಮಂಕಣೇಶ್ವರ ಲಿಂಗದ ಫಲವನ್ನು ಹೇಳುವೆನು. ಈ ಮಂಕಣೇಶ್ವರ ಲಿಂಗದ ಹತ್ತಿರ ಶಿವರಾತ್ರಿಯ ದಿನ ಉಪವಾಸ ಮಾಡಿ

ಸರ್ವಲಿಂಗೋದ್ಭವಂ ಚೈವ ಫಲಂ ದರ್ಶನಸಂಭವಂ ।
ಜಾಯತೇ ನಾಽತ್ರ ಸಂದೇಹ ಇತ್ಯುವಾಚ ಹರಃ ಸ್ವಯಂ ॥ ೭ ॥

ಋಷಯ ಊಚುಃ:—

ಶಿವರಾತ್ರಿರ್ಮಹಾಭಾಗ ಕಸ್ಮಿನ್ ಕಾಲೇತು ಸಾ ಭವೇತ್ ।
ವಿಧಾನಂ ಚೈವ ಮಾಹಾತ್ಮ್ಯಂ ಸರ್ವಂ ನೋ ವಿಸ್ತರಾದ್ವದ ॥ ೮ ॥

ಸೂತ ಉವಾಚ:—

ಮಾಘಸ್ಯ ಕೃಷ್ಣಪಕ್ಷೇ ಯಾ ತಿಥಿಶ್ಚೈವ ಚತುರ್ದಶೀ ।
ತಸ್ಯಾ ರಾತ್ರಿಃ ಸಮಾಖ್ಯಾತಾ ಶಿವರಾತ್ರಿಸಮುದ್ಭವಾ ॥ ೯ ॥
ತಸ್ಯಾಂ ಸರ್ವೇಷು ಲಿಂಗೇಷು ಸದಾ ಸಂಕ್ರಮತೇ ಹರಃ ।
ವಿಶೇಷಾತ್ಸರ್ವಪುಣ್ಯೇಷು ಖ್ಯಾತೇಯಂ ಮಂಕಣೇಶ್ವರೇ ॥ ೧೦ ॥

ಋಷಯ ಊಚುಃ:—

ಶಿವರಾತ್ರಿಃ ಕಥಂ ಜಾತಾ ಕೇನೈಷಾ ಚ ವಿನಿರ್ಮಿತಾ ।
ಕಸ್ಮಾದ್ಬಹುಫಲಾ ಜಾತಾ ಸರ್ವಂ ನೋ ವಿಸ್ತರಾದ್ವದ ॥ ೧೧ ॥

ಸೂತ ಉವಾಚ:—

ಅತ್ರ ವಃ ಕೀರ್ತಯಿಷ್ಯಾಮಿ ಪೂರ್ವವೃತ್ತಂ ಕಥಾನಕಂ ।
ಭರ್ತೃಯಜ್ಞಸ್ಯ ಸಂವಾದಮಶ್ವಸೇನಸ್ಯ ಭೂಪತೇಃ ॥ ೧೨ ॥

---

ಶುದ್ಧನಾಗಿ ರಾತ್ರಿ ಜಾಗರಣೆ ಮಾಡಿದವನು ನಿಶ್ಚಯವಾಗಿಯೂ ಸಕಲ ಲಿಂಗಗಳ ದರ್ಶನದಿಂದುಂಟಾದ ಫಲವನ್ನು ಪಡೆಯುವನು ಎಂದು ಹರನೇ ಸ್ವಂತವಾಗಿ ಹೇಳಿರುವನು.

೮. ಋಷಿಗಳು ಹೇಳುತ್ತಾರೆ:—ಮಹಾ ಭಾಗ್ಯಶಾಲಿಯೆ! ಶಿವರಾತ್ರಿಯು ಯಾವಾಗ ಬರುವುದು? ಅದರ ವಿಧಿ ಮತ್ತು ಫಲವನ್ನು ನಮಗೆ ವಿಸ್ತಾರ ವಾಗಿ ಹೇಳು.

೯. ಸೂತನು ಹೇಳುತ್ತಾನೆ:—ಮಾಘ ಕೃಷ್ಣ ಚತುರ್ದಶಿಯ ರಾತ್ರಿಯು ಶಿವರಾತ್ರಿಯೆನ್ನಿಸಿಕೊಳ್ಳುವುದು.

೧೦. ಆ ರಾತ್ರಿ ಹರನು ಸಕಲ ಪುಣ್ಯಕರವಾದ ಲಿಂಗಗಳಲ್ಲಿಯೂ, ವಿಶೇಷ ವಾಗಿ ಮಂಕಣೇಶ್ವರ ಲಿಂಗದಲ್ಲಿಯೂ ಸನ್ನಿಹಿತನಾಗಿರುವನು.

೧೧. ಋಷಿಗಳು ಹೇಳುತ್ತಾರೆ:—ಈ ಶಿವರಾತ್ರಿಯು ಹೇಗಾಯಿತು? ಇದನ್ನು ಯಾರು ನಿರ್ಮಿಸಿದರು? ಇದು ಅತಿಶಯ ಫಲವನ್ನು ಕೊಡುವುದು ಹೇಗಾಯಿತು? ಇವೆಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು.

೧೨. ಸೂತನು ಹೇಳುತ್ತಾನೆ:—ಈ ವಿಷಯದಲ್ಲಿ ಹಿಂದೆ ಭರ್ತೃಯಜ್ಞನು ಅಶ್ವಸೇನರಾಜನಿಗೆ ಹೇಳಿದ ಒಂದು ಕಥಾನಕವನ್ನು ಹೇಳುವೆನು.

ಆನರ್ತಾಧಿಪತಿಃ ಪೂರ್ವಮಶ್ವಸೇನ ಇತಿ ಸ್ಮೃತಃ ।
ಆಸೀದ್ಧರ್ಮಪರೋ ನಿತ್ಯಂ ವೇದವೇದಾಂಗಪಾರಗಃ ॥ ೧೩ ॥
ಭರ್ತೃಯಜ್ಞಃ ಪುರಾ ತೇನ ಇದಂ ಪೃಷ್ಟಃ ಕುತೂಹಲಾತ್ ।
ಕಲಿಕಾಲಂ ಸಮುದ್ವೀಕ್ಷ್ಯ ವರ್ಧಮಾನಂ ದಿನೇ ದಿನೇ ॥ ೧೪ ॥

ಅಶ್ವಸೇನ ಉವಾಚ:—

ಕಲಿಕಾಲಕೃತೇ ಕಿಂಚಿದ್ವ್ರತಂ ಮೇ ವದ ಸನ್ಮುನೇ ।
ಸ್ವಲ್ಪಾಯಾಸಂ ಮಹತ್ಪುಣ್ಯಂ ಸರ್ವಪಾಪಪ್ರಣಾಶನಂ ॥ ೧೫ ॥
ಸ್ವಲ್ಪಾಯುಷಃ ಸದಾ ಮರ್ತ್ಯಾ ಬ್ರಹ್ಮನ್ ಕೃತಯುಗೇ ಪುರಾ ।
ತ್ರೇತಾಯಾಂ ದ್ವಾಪರೇಚೈವ ಕಿಮು ಪ್ರಾಪ್ತೇ ಕಲೌ ಯುಗೇ ॥ ೧೬ ॥
ತಸ್ಮಾದ್ವರ್ಷವ್ರತಂ ತ್ಯಕ್ತ್ವಾ ಕಿಂಚಿದೇಕಾಹ್ನಿಕಂ ವದ ॥ ೧೭ ॥
ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಽಪರಾಹ್ಣಿಕಂ ।
ನ ಹಿ ಪ್ರತೀಕ್ಷ್ಯತೇ ಮೃತ್ಯುಃ ಕೃತಂ ವಾಽಸ್ಯ ನ ವಾ ಕೃತಂ ॥ ೧೮ ॥
ತಸ್ಯ ತದ್ವಚನಂ ಶ್ರುತ್ವಾ ಭರ್ತೃಯಜ್ಞ ಉದಾರಧೀಃ ।
ಅಬ್ರವೀತ್ಸುಚಿರಂ ಧ್ಯಾತ್ವಾ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೧೯ ॥

---

೧೩. ಹಿಂದೆ ಯಾವಾಗಲೂ ಧರ್ಮನಿರತನೂ, ವೇದವೇದಾಂಗ ಪಾರಂಗತನೂ ಆದ ಅಶ್ವಸೇನನೆಂಬ ದೊರೆಯಿದ್ದನು.

೧೪. ಅವನು ಪ್ರತಿದಿನವೂ ವೃದ್ಧಿಯಾಗುತ್ತಿರುವ ಕಲಿಕಾಲವನ್ನು ಕಂಡು ಕುತೂಹಲದಿಂದ ಹೀಗೆ ಪ್ರಶ್ನೆಮಾಡಿದನು.

೧೫. ಅಶ್ವಸೇನನು ಹೇಳುತ್ತಾನೆ:—ಮುನಿಯೆ! ಕಲಿಕಾಲಕ್ಕಾಗಿ ಸ್ವಲ್ಪಾಯಾಸವುಳ್ಳುದೂ, ಅತಿಶಯ ಪುಣ್ಯವನ್ನೀಯುವುದೂ, ಸಕಲ ಪಾಪಗಳನ್ನು ನಾಶಗೊಳಿಸುವುದೂ ಆದ ಒಂದು ವ್ರತವನ್ನು ನನಗೆ ಹೇಳು.

೧೬. ಮಾನವರು ಕೃತ, ತ್ರೇತ, ದ್ವಾಪರ ಯುಗಗಳಲ್ಲಿಯೇ ಅಲ್ಪಾಯುಷ್ಯವುಳ್ಳವರು. ಕಲಿಯುಗದಲ್ಲಿನ್ನೇನು.

೧೭. ಆದುದರಿಂದ ಒಂದು ವರ್ಷ ಮಾಡುವ ವ್ರತವನ್ನು ಬಿಟ್ಟು ಒಂದು ದಿನದ ವ್ರತವನ್ನು ಹೇಳು.

೧೮. ನಾಳೆ ಮಾಡುವುದನ್ನು ಈ ದಿನವೂ, ಅಪರಾಹ್ಣದ ಕಾರ್ಯವನ್ನು ಪೂರ್ವಾಹ್ಣದಲ್ಲಿಯೂ ಮಾಡಬೇಕು. ಇವನು ಮಾಡಿರುವನೆ ಇಲ್ಲವೆ ಎಂದು ಮೃತ್ಯುವು ನಿರೀಕ್ಷಿಸುವುದಿಲ್ಲ.

೧೯. ಉದಾರಬುದ್ಧಿಯುಳ್ಳ ಭರ್ತೃಯಜ್ಞನು ಅವನ ಆ ಮಾತನ್ನು ಕೇಳಿ ದಿವ್ಯದೃಷ್ಟಿಯಿಂದ ಬಹಳ ಹೊತ್ತು ಆಲೋಚಿಸಿ ಇಂತೆಂದನು.

ಅಸ್ತಿ ರಾಜನ್ ವ್ರತಂ ಪುಣ್ಯಂ ಶಿವರಾತ್ರೀತಿ ಸಂಜ್ಞಿತಂ ।
ಏಕಾಹ್ನಿಕಂ ಮಹಾರಾಜ ಸರ್ವಪಾತಕನಾಶನಂ ॥ ೨೦ ॥
ತತ್ರ ಯದ್ದೀಯತೇ ದಾನಂ ಹುತಂ ಜಪ್ತಂ ತಥೈವ ಚ ।
ಸರ್ವಮಕ್ಷಯತಾಂ ಯಾತಿ ರಾತ್ರಿ ಜಾಗರಣೇ ಕೃತೇ ॥ ೨೧ ॥
ಅಪುತ್ರೋ ಲಭತೇ ಪುತ್ರಾನಧನೋ ಧನಮಾಪ್ನುಯಾತ್ ।
ಸ್ವಲ್ಪಾಯುರ್ದೀರ್ಘಮಾಯುಷ್ಯಂ ಶತ್ರೂಣಾಂ ಚೈವ ಸಂಕ್ಷಯಂ ॥ ೨೨ ॥
ಯಂ ಯಂ ಕಾಮಮಭಿಧ್ಯಾಯನ್ ವ್ರತಮೇತತ್ಸಮಾಚರೇತ್ ।
ತಂ ತಂ ಸಮಾಪ್ನುಯಾನ್ಮರ್ತ್ಯೋ ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥
ಕಾರ್ಪಣ್ಯೇನಾಥ ವಿತ್ತೇನ ಯದಿ ಕುರ್ಯಾತ್ರ್ರಜಾಗರಂ ।
ತಥಾ ವರ್ಷಕೃತಾತ್ಪಾಪಾನ್ಮುಚ್ಯತೇ ನಾತ್ರಸಂಶಯಃ ॥ ೨೪ ॥
ಯಾನಿ ಕಾನ್ಯತ್ರ ಲಿಂಗಾನಿ ಸ್ಥಾವರಾಣಿ ಚರಾಣಿ ಚ ।
ತೇಷು ಸಂಕ್ರಮತೇ ದೇವಸ್ತಸ್ಯಾಂ ರಾತ್ರೌ ಯತೋ ಹರಃ ॥ ೨೫ ॥
ಶಿವರಾತ್ರಿಸ್ತತಃ ಪ್ರೋಕ್ತಾ ತೇನ ಸಾ ಹರವಲ್ಲಭಾ ।
ಪ್ರಾರ್ಥಿತಃ ಸ ಸುರೈಃ ಸರ್ವೈರ್ಲೋಕಾನುಗ್ರಹ ಕಾಮ್ಯಯಾ ॥ ೨೬ ॥

---

೨೦. ದೊರೆಯೆ! ಒಂದು ದಿನ ಮಾಡಲರ್ಹವಾದುದೂ, ಸಕಲ ಪಾಪಗಳನ್ನು ನೀಗಿಸುವುದೂ ಆದ ಶಿವರಾತ್ರಿಯೆಂಬ ಒಂದು ವ್ರತವಿದೆ.

೨೧. ಆ ದಿನ ರಾತ್ರಿ ಜಾಗರಣೆಮಾಡಿ ಕೊಟ್ಟ ದಾನವೂ, ಮಾಡಿದ ಹೋಮ, ಜಪಗಳೂ ಎಲ್ಲವೂ ಅಕ್ಷಯವಾಗುವುವು.

೨೨. ಮಕ್ಕಳಿಲ್ಲದವನು ಮಕ್ಕಳನ್ನೂ, ದರಿದ್ರನು ಧನವನ್ನೂ, ಅಲ್ಪಾಯುವು ದೀರ್ಘಾಯುಷ್ಯವನ್ನೂ ಹೊಂದುವನು. ಶತ್ರುಗಳು ನಾಶವಾಗುವರು.

೨೩. ಮಾನವನು ಯಾವ ಯಾವ ಇಷ್ಟಾರ್ಥಕ್ಕಾಗಿ ಈ ವ್ರತವನ್ನಾಚರಿಸುವನೊ, ಅವನು ಆ ಇಷ್ಟಾರ್ಥವನ್ನು ಪಡೆಯುವನು. ನಿಷ್ಕಾಮನು ಮೋಕ್ಷವನ್ನು ಹೊಂದುವನು.

೨೪. ಆ ದಿನ ಕಾರ್ಪಣ್ಯದಿಂದಾಗಲಿ, ದ್ರವ್ಯದಿಂದಾಗಲಿ ಜಾಗರಣೆ ಮಾಡಿದ ಮಾನವನು ನಿಶ್ಚಯವಾಗಿಯೂ ಒಂದು ವರ್ಷ ಮಾಡಿದ ಪಾಪದಿಂದ ಮುಕ್ತನಾಗುವನು.

೨೫. ಆ ದಿನ ರಾತ್ರಿ ಶಿವನು ಸ್ಥಾವರಜಂಗಮಾತ್ಮಕವಾದ ಸಕಲ ಲಿಂಗಗಳಲ್ಲಿಯೂ ಸನ್ನಿಹಿತನಾಗಿರುವನು.

೨೬. ಆದುದರಿಂದ ಆ ರಾತ್ರಿಯು ಶಿವನಿಗೆ ಪ್ರಿಯವಾದ ಶಿವರಾತ್ರಿಯೆನ್ನಿಸಿಕೊಳ್ಳುವುದು. ದೇವತೆಗಳು ಲೋಕಕ್ಕೆ ಅನುಗ್ರಹಮಾಡಲಿಚ್ಛೆಯಿಂದ ಶಿವನನ್ನು ಹೀಗೆ ಪ್ರಾರ್ಥಿಸಿದರು.

ಭಗವಾನ್ ಕಲಿಕಾಲೇಽಸ್ಮಿನ್ ಸರ್ವಪಾಪ ಸಮನ್ವಿತೇ ।
ವರ್ಷಪಾಪ ವಿಶುದ್ಧ್ಯರ್ಥಂ ದಿನಮೇಕಂ ಕ್ಷಿತೌ ವ್ರಜ ।
ಯೇನ ತ್ವತ್ಪೂಜಯಾ ಪೂತಾ ಮರ್ತ್ಯಾಃ ಶುದ್ಧಿಮವಾಪ್ನುಯುಃ ॥ ೨೭ ॥
ತತೋ ದತ್ತಂ ಹುತಂ ತೇಷಾಮಸ್ಮಾಕಮುಪತಿಷ್ಠತಿ ।
ಯದುಚ್ಛಿಷ್ಟಂ ನರೈರ್ದತ್ತಂ ತದ್ವೃಥಾ ಜಾಯತೇಽಖಿಲಂ ॥ ೨೮ ॥
ಕಲಿಕಾಲೇ ನಚಾಽಸ್ಮಾಕಂ ಕಿಂಚಿದೇವೋಪತಿಷ್ಠತಿ ।
ಅಶುದ್ಧೈರ್ಮಾನವೈರ್ದತ್ತಂ ಪ್ರಭೂತಮಪಿ ಶಂಕರ ॥ ೨೯ ॥

ಶ್ರೀ ಭಗವಾನುವಾಚ :—

ಮಾಘಮಾಸಸ್ಯ ಕೃಷ್ಣಾಯಾಂ ಚತುರ್ದಶ್ಯಾಂ ಸುರೇಶ್ವರ ।
ಅಹಂ ಯಾಸ್ಯಾಮಿ ಭೂಪೃಷ್ಠೇ ರಾತ್ರೌ ನೈವ ದಿವಾಕಲೌ ॥ ೩೦ ॥
ಲಿಂಗೇಷು ಚ ಸಮಸ್ತೇಷು ಚಲೇಷು ಸ್ಥಾವರೇಷು ಚ ।
ಸಂಕ್ರಮಿಷ್ಯಾಮ್ಯಸಂದಿಗ್ಧಂ ವರ್ಷಪಾಪವಿಶುದ್ಧಯೇ ॥ ೩೧ ॥
ತಸ್ಯಾಂ ರಾತ್ರೌ ಹಿ ಮೇ ಪೂಜಾಂ ಯಃ ಕರಿಷ್ಯತಿ ಮಾನವಃ ।
ಮಂತ್ರೈರೇತೈಃ ಸುರಶ್ರೇಷ್ಠ ವಿಪಾಪ್ಮಾ ಸ ಭವಿಷ್ಯತಿ ॥ ೩೨ ॥

ಓಂ ಸದ್ಯೋಜಾತಾಯ ನಮಃ । ಓಂ ವಾಮದೇವಾಯ ನಮಃ ।
ಓಂ ಘೋರಾಯ ನಮಃ । ಓಂ ತತ್ಪುರುಷಾಯ ನಮಃ ।
ಓಂ ಈಶಾನಾಯ ನಮಃ ।

---

೨೭. ಪೂಜ್ಯನೆ! ಸಕಲ ಪಾಪಗಳಿಂದ ಕೂಡಿದ ಈ ಕಲಿಕಾಲದಲ್ಲಿ ಒಂದು ವರ್ಷದಲ್ಲಿ ಮಾಡಿದ ಪಾಪಶುದ್ಧಿಗಾಗಿ ನೀನು ಒಂದು ದಿನ ಭೂಮಿಗೆ ಹೋಗು. ಅದರಿಂದ ಮಾನವರು ನಿನ್ನನ್ನು ಪೂಜಿಸಿ ಶುದ್ಧರಾಗುವರು.

೨೮. ಅವರಿಂದ ಅವರು ಕೊಟ್ಟುದೂ, ಹೋಮ ಮಾಡಿದುದೂ ನಮಗೆ ಸಲ್ಲುವುದು. ಹಾಗಿಲ್ಲದಿದ್ದರೆ ನರರು ಕೊಟ್ಟ ಉಚ್ಛಿಷ್ಟವು ವ್ಯರ್ಥವಾಗುವುದು.

೨೯. ಕಲಿಕಾಲದಲ್ಲಿ ಅಶುದ್ಧಮಾನವರಿತ್ತ ಅಧಿಕ ಹವಿರ್ಭಾಗವೂ ನಮಗೆ ಸೇರುವುದಿಲ್ಲ.

೩೦–೩೧. ಶ್ರೀ ಭಗವಂತನು ಹೇಳುತ್ತಾನೆ :—ಸುರೇಂದ್ರ ! ಕಲಿಯುಗದಲ್ಲಿ ನಾನು ಮಾಘಮಾಸದ ಕೃಷ್ಣಚತುರ್ದಶೀ ದಿನ ರಾತ್ರಿ ಭೂಮಿಗೆ ಹೋಗಿ ಒಂದು ವರ್ಷದ ಪಾಪಶುದ್ಧಿಗಾಗಿ ಸ್ಥಾವರಜಂಗಮಾತ್ಮಕವಾದ ಸಕಲ ಲಿಂಗಗಳಲ್ಲಿ ನಿಶ್ಚಯವಾಗಿಯೂ ಸನ್ನಿಹಿತನಾಗಿರುವೆನು.

೩೨–೩೪. ಆ ದಿನ ರಾತ್ರಿ, "ಓಂ ಸದ್ಯೋಜಾತಾಯ ನಮಃ, ಓಂ ವಾಮದೇವಾಯ ನಮಃ, ಓಂ ಘೋರಾಯ ನಮಃ, ಓಂ ತತ್ಪುರುಷಾಯ ನಮಃ, ಓಂ ಈಶಾನಾಯ ನಮಃ" ಎಂಬ ಮಂತ್ರಗಳಿಂದ ನನ್ನನ್ನು ಪೂಜಿಸಿದ ನರನು

ಏವಂ ವಕ್ತ್ರಾಣಿ ಸಂಪೂಜ್ಯ ಗಂಧಪುಷ್ಪಾನುಲೇಪನೈಃ ।
ವಸ್ತ್ರೈರ್ದೀಪೈಶ್ಚ ನೈವೇದ್ಯೈಸ್ತತೋಽರ್ಘ್ಯಂ ಸಂಪ್ರದಾಪಯೇತ್ ।
ಮಂತ್ರೇಣಾನೇನ ಸಂಪೂಜ್ಯ ಮಾಂ ಧ್ಯಾತ್ವಾ ಮನಸಿ ಸ್ಥಿತಂ ॥ ೩೩ ॥
ಗೌರೀವಲ್ಲಭ ದೇವೇಶ ಸರ್ವಾದ್ಯ ಶಶಿಶೇಖರ ।
ವರ್ಷಪಾಪ ವಿಶುದ್ಧ್ಯರ್ಥಮರ್ಘ್ಯೋ ಮೇ ಪ್ರತಿಗೃಹ್ಯತಾಂ ॥ ೩೪ ॥
ತತಃ ಸಂಪೂಜಯೇದ್ವಿಪ್ರಂ ಭೋಜನಾಚ್ಛಾದನಾದಿಭಿಃ ।
ದತ್ವಾಽಥ ದಕ್ಷಿಣಾಂ ತಸ್ಮೈ ವಿತ್ತಶಾಠ್ಯಂ ವಿವರ್ಜಯೇತ್ ॥ ೩೫ ॥
ಧರ್ಮಾಖ್ಯಾನಕಥಾಭಿಶ್ಚ ಸಲಾಸ್ಯೈಸ್ತಾಂಡವೈಸ್ತಥಾ ॥ ೩೬ ॥
ಏವಂ ಕರಿಷ್ಯತೇ ಯೋಽತ್ರ ವ್ರತಮೇತತ್ಸುರೇಶ್ವರ ।
ವರ್ಷಪಾಪ ವಿಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ಭವಿಷ್ಯತಿ ॥ ೩೭ ॥
ತಚ್ಛ್ರುತ್ವಾ ತ್ರಿದಶಾಃ ಸರ್ವೇ ಪ್ರಣಮ್ಯ ಶಶಿಶೇಖರಂ ।
ಸಂಪ್ರಹೃಷ್ಟಾ ಸುರಶ್ರೇಷ್ಠ ಸ್ವಾನಿಸ್ಥಾನಾನಿ ಭೇಜಿರೇ ॥ ೩೮ ॥
ಪ್ರೇಷಯಾಮಾಸುರುರ್ವ್ಯಾಂ ಚ ನಾರದಂ ಮುನಿಸತ್ತಮಂ ।
ಪ್ರಬೋಧನಾಯ ಲೋಕಾನಾಂ ಶಿವರಾತ್ರಿಕೃತೇ ಸದಾ ॥ ೩೯ ॥
ಸೋಽಪಿ ಗತ್ವಾ ಧರಾಪೃಷ್ಠಂ ಶ್ರಾವಯಾಮಾಸ ಸರ್ವತಃ ।
ಶಿವರಾತ್ರೇಸ್ತು ಮಾಹಾತ್ಮ್ಯಂ ಯದುಕ್ತಂ ಶೂಲಪಾಣಿನಾ ॥ ೪೦ ॥

---

ಪಾಪರಹಿತನಾಗುವನು. ಹೀಗೆ ಗಂಧ, ಪುಷ್ಪ, ಅನುಲೇಪನ, ವಸ್ತ್ರ, ದೀಪ, ನೈವೇದ್ಯಗಳಿಂದ ಪಂಚಮುಖಗಳನ್ನು ಪೂಜಿಸಿ ಬಳಿಕ ಧ್ಯಾನಮಾಡಿ ಈ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. "ಗೌರೀಪ್ರಿಯನೂ, ದೇವೇಶನೂ, ಸಕಲ ವಸ್ತುಗಳಿಗೆ ಆದಿಯೂ, ಚಂದ್ರಮೌಳಿಯೂ ಆದ ಶಂಕರ! ಒಂದು ವರ್ಷದ ಪಾಪಶುದ್ಧಿಗಾಗಿ ನನ್ನ ಅರ್ಘ್ಯವನ್ನು ಸ್ವೀಕರಿಸು."

೩೫. ಬಳಿಕ ಬ್ರಾಹ್ಮಣನನ್ನು ಭೋಜನ ವಸ್ತ್ರಾದಿಗಳಿಂದ ಪೂಜಿಸಿ ವಿತ್ತಶಾಠ್ಯವನ್ನು ಮಾಡದೆ ಅವನಿಗೆ ದಕ್ಷಿಣೆಯನ್ನು ಕೊಡಬೇಕು.

೩೬. ಧರ್ಮಾಖ್ಯಾನ ಮತ್ತು ಪುಣ್ಯಕಥೆಗಳಿಂದಲೂ, ಲಾಸ್ಯಸಹಿತವಾದ ತಾಂಡವನೃತ್ಯದಿಂದಲೂ ಕಾಲಕ್ಷೇಪ ಮಾಡಬೇಕು.

೩೭–೩೮. ಇಂದ್ರ! ಹೀಗೆ ಮಾಡುವ ಈ ಶಿವರಾತ್ರಿವ್ರತವು ಒಂದು ವರ್ಷದ ಪಾಪಶುದ್ಧಿಗೆ ಪ್ರಾಯಶ್ಚಿತ್ತವಾಗುವುದು. ಸಮಸ್ತ ದೇವತೆಗಳು ಆ ಮಾತನ್ನು ಕೇಳಿ ಚಂದ್ರಮೌಳೀಶ್ವರನನ್ನು ವಂದಿಸಿ ಸಂತೋಷದಿಂದ ತಮ್ಮ ಸ್ಥಾನಕ್ಕೆ ತೆರಳಿದರು.

೩೯. ಅವರು ಶಿವರಾತ್ರಿಯನ್ನು ಜನರಿಗೆ ತಿಳಿಸುವುದಕ್ಕಾಗಿ ನಾರದಮುನಿವರ್ಯನನ್ನು ಭೂಲೋಕಕ್ಕೆ ಕಳುಹಿಸಿದರು.

೪೦. ಅವನು ಭೂಲೋಕಕ್ಕೆ ಹೋಗಿ ಶಿವನುಸುರಿದ ಶಿವರಾತ್ರಿ ಮಾಹಾತ್ಮ್ಯವನ್ನು ಎಲ್ಲೆಡೆಯಲ್ಲಿಯೂ ತಿಳಿಸಿದನು.

ತತಃ ಪ್ರಭೃತಿ ಸಂಜಾತಾ ಶಿವರಾತ್ರಿರ್ಧರಾತಲೇ ।
ಸರ್ವಕಾಮಪ್ರದಾ ಪುಣ್ಯಾ ಸರ್ವಪಾತಕನಾಶಿನೀ ॥ ೪೧ ॥
ಅತ್ರ ವಃ ಕೀರ್ತಯಿಷ್ಯಾಮಿ ಪುರಾವೃತ್ತಂ ಕಥಾನಕಂ ।
ಯದ್ವೃತ್ತಂ ನೈಮಿಷಾರಣ್ಯೇ ಲುಬ್ಧಕಸ್ಯಾಽತ್ರ ಕಸ್ಯಚಿತ್ ॥ ೪೨ ॥
ತತ್ರಾಽಸೀಲ್ಲುಬ್ಧಕಃ ಕಶ್ಚಿಜ್ಜಾತಿಮಾತ್ರಾನ್ನ ಕರ್ಮತಃ ।
ವ್ಯಸನೇನಾಭಿಭೂತಾತ್ಮಾ ಪರವಿತ್ತಾಽಪಹಾರಕಃ ॥ ೪೩ ॥
ನ ಕದಾಚಿದ್ವ್ರತಂ ತೇನ ನ ದತ್ತಂ ನ ಜಪಃ ಕೃತಃ ।
ಕೇವಲಂ ಚ ಹೃತಂ ವಿತ್ತಂ ಲೋಕಾನಾಂ ಛಲಸಂಶ್ರಯಾತ್ ॥ ೪೪ ॥
ಕಸ್ಯಚಿತ್ತ್ವಥ ಕಾಲಸ್ಯ ಶಿವರಾತ್ರಿಃ ಸಮಾಗತಾ ।
ಮಾಘಮಾಸೇಽಸಿತೇ ಪಕ್ಷೇ ಸರ್ವಪಾತಕನಾಶಿನೀ ॥ ೪೫ ॥
ತತ್ರಾಽಸ್ತ್ಯಾಯತನಂ ಪುಣ್ಯಂ ದೇವದೇವಸ್ಯ ಶೂಲಿನಃ ।
ತತ್ರ ಜಾಗರಣಂ ರಾತ್ರೌ ಪ್ರಾರಬ್ಧಂ ಬಹುಭಿರ್ಜನೈಃ ॥ ೪೬ ॥
ನಾರೀಭಿರ್ನರಶಾರ್ದೂಲ ಭೂಷಿತಾಭಿಃ ಸುಭೂಷಣೈಃ ।
ಅಥಾಽಸೌ ಚಿಂತಯಾಮಾಸ ಚೋರೋ ದೃಷ್ಟ್ವಾಽಥಜಾಗರಂ ॥ ೪೭ ॥

---

೪೧. ಅದು ಮೊದಲ್ಗೊಂಡು ಭೂಲೋಕದಲ್ಲಿ ಸಕಲೇಷ್ಟಾರ್ಥಗಳನ್ನು ಕೊಡುವುದೂ, ಪುಣ್ಯಕರವಾದುದೂ, ಸಕಲ ಪಾಪಗಳನ್ನು ನಾಶಗೊಳಿಸುವುದೂ ಆದ ಶಿವರಾತ್ರಿಯುಂಟಾಯಿತು.

೪೨. ಈ ವಿಷಯದಲ್ಲಿ ನಿಮಗೆ ನೈಮಿಷಾರಣ್ಯದ ಒಬ್ಬ ಬೇಡನ ಕಥೆಯನ್ನು ಹೇಳುತ್ತೇನೆ.

೪೩. ಆ ನೈಮಿಷಾರಣ್ಯದಲ್ಲಿ ಜಾತಿಮಾತ್ರದಿಂದ ಬೇಡನಾದವನೊಬ್ಬ ನಿದ್ದನು. ಅವನು ಮದ್ಯಾದಿ ವ್ಯಸನವುಳ್ಳವನೂ, ಪರರ ದ್ರವ್ಯವನ್ನು ಅಪಹರಿಸುವವನೂ ಆಗಿದ್ದನು.

೪೪. ಅವನು ಒಂದು ದಿನವೂ ವ್ರತವನ್ನಾಗಲಿ, ದಾನವನ್ನಾಗಲಿ, ಜಪವನ್ನಾಗಲಿ ಮಾಡಲಿಲ್ಲ. ಮುಖ್ಯವಾಗಿ ಕಪಟದಿಂದ ಜನರ ದ್ರವ್ಯವನ್ನು ಅಪಹರಿಸುತ್ತಿದ್ದನು.

೪೫. ಒಂದಾನೊಂದು ಕಾಲದಲ್ಲಿ ಮಾಘಮಾಸದ ಕೃಷ್ಣಪಕ್ಷ ಚತುರ್ದಶೀ ದಿನ ಸಕಲ ಪಾಪಗಳನ್ನು ಪರಿಹರಿಸುವ ಶಿವರಾತ್ರಿಯು ಬಂದಿತು.

೪೬–೪೭. ಆ ನೈಮಿಷಾರಣ್ಯದಲ್ಲಿ ಪರಮೇಶ್ವರನ ದೇವಾಲಯವೊಂದಿದ್ದಿತು. ಅಲ್ಲಿ ಅನೇಕ ಮಂದಿ ಪುರುಷರೂ, ಒಡವೆಗಳಿಂದ ಅಲಂಕೃತರಾದ ನಾರಿಯರೂ ರಾತ್ರಿಯವೇಳೆಯಲ್ಲಿ ಜಾಗರಣೆ ಮಾಡಿದರು. ಆ ಜಾಗರಣೆಯನ್ನು ಈ ಕಳ್ಳನು ನೋಡಿ ಹೀಗೆ ಆಲೋಚಿಸಿದನು.

ಗಚ್ಛಾಮಿ ಯದಿ ಕಾಂಚಿತ್ ಸ್ತ್ರೀಂ ಭೂಷಣೈಃ ಪರಿಭೂಷಿತಾಂ ।
ನಿಷ್ಕ್ರಾಂತಾಂ ಬಾಹ್ಯತಶ್ಚಾಽಸ್ಯ ಪ್ರಾಸಾದಸ್ಯಾಪ್ನುಯಾಮಹಂ ॥ ೪೮ ॥
ತತೋ ಹತ್ವಾ ಸಮಾದಾಯ ಭೂಷಣಾನಿ ವ್ರಜಾಮ್ಯಹಂ ॥ ೪೯ ॥
ಏವಂ ನಿಶ್ಚಿತ್ಯ ಮನಸಾ ಗತಸ್ತಸ್ಯ ಸಮೀಪತಃ ।
ಕರ್ಣಿಕಾರಂ ಸಮಾರುಹ್ಯ ಸ್ಥಿತೋ ಗುಪ್ತಸ್ತತೋ ಹಿ ಸಃ ॥ ೫೦ ॥
ವೀಕ್ಷಮಾಣೋ ದಿಶಃ ಸರ್ವಾ ನಾರೀನಿಷ್ಕ್ರಮಣೋದ್ಭವಾಃ ।
ಚೌರಕರ್ಮ ಪ್ರವೃತ್ತಸ್ಯ ಶೀತಾರ್ತಸ್ಯ ವಿಶೇಷತಃ ॥ ೫೧ ॥
ಅಲ್ಪಾಽಪಿ ನಿದ್ರಾ ನಾಯಾತಾ ನ ಚ ನಾರೀ ವಿನಿರ್ಗತಾ ।
ತಸ್ಯಾಽಧಸ್ತಾತ್ತತೋ ಲಿಂಗಮಭವತ್ತು ಧರೋದ್ಭವಂ ।
ಗತ್ವಾ ಚ ಪತ್ರಾಣ್ಯಾದಾಯ ಪ್ರಚಿಕ್ಷೇಪಾಽಸ್ಯ ಚೋಪರಿ ॥ ೫೨ ॥
ಏತಸ್ಮಿನ್ನೇವ ಕಾಲೇತು ಪ್ರೋದ್ಗತಸ್ತೀಕ್ಷ್ಣದೀಧಿತಿಃ ।
ಅಸತೀನಾಂ ಚ ಚೌರಾಣಾಂ ಕಾಮಿನಾಮಸುಖಾವಹಃ ॥ ೫೩ ॥
ತತೋ ನರಾಶ್ಚ ನಾರ್ಯಶ್ಚ ಜಗ್ಮುಃ ಸ್ವಂ ಸ್ವಂ ನಿಕೇತನಂ ।
ಉಪಚಾರಪರಾಃ ಶಾಂತಾಃ ಪ್ರಣಿಪತ್ಯ ಮಹೇಶ್ವರಂ ॥ ೫೪ ॥

---

೪೮. ನಾನು ಅಲ್ಲಿಗೆ ಹೋದರೆ ದೇವಾಲಯದ ಹೊರಗೆ ಬಂದ ಒಡವೆಗಳಿಂದ ಅಲಂಕಾರಗೊಂಡ ಒಬ್ಬ ಹೆಂಗಸಾದರೂ ಸಿಕ್ಕಿಯಾಳು.

೪೯. ಅನಂತರ ನಾನು ಅವಳನ್ನು ಕೊಂದು ಒಡವೆಗಳನ್ನು ತೆಗೆದುಕೊಂಡು ಹೋಗುವೆನು.

೫೦–೫೨. ಅವನು ಹೀಗೆ ಮನಸ್ಸಿನಿಂದ ನಿಶ್ಚಯಿಸಿ ಆ ದೇವಾಲಯದ ಹತ್ತಿರ ಹೋಗಿ ಅಲ್ಲಿ ಒಂದು ಕರ್ಣಿಕಾರಗಿಡದ ಮೇಲೆ ಹತ್ತಿ ಅವಿತುಕೊಂಡು ಸ್ತ್ರೀಯರು ಹೊರಡುವ ದಿಕ್ಕನ್ನು ನೋಡುತ್ತಿದ್ದನು. ಚೌರ್ಯನಿರತನೂ, ಚಳಿಯಿಂದ ನಡುಗುವವನೂ ಆದ ಅವನಿಗೆ ಸ್ವಲ್ಪವೂ ನಿದ್ರೆ ಬರಲಿಲ್ಲ. ಯಾವ ಹೆಂಗಸೂ ಹೊರಗೆ ಹೊರಡಲಿಲ್ಲ. ಅವನು ಏರಿರುವ ಮರದ ಕೆಳಗೆ ಭೂಮಿಯಲ್ಲಿ ಒಂದು ಲಿಂಗವಿದ್ದಿತು. ಅವನು ಮರದ ಎಲೆಯನ್ನು ಕಿತ್ತು ಆ ಲಿಂಗದ ಮೇಲೆ ಎಸೆಯುತ್ತಿದ್ದನು.

೫೩. ಈ ಸಮಯದಲ್ಲಿ ವ್ಯಭಿಚಾರಿಣಿಯರು, ಕಳ್ಳರು, ಕಾಮಿಗಳು ಇವರಿಗೆ ದುಃಖವನ್ನುಂಟುಮಾಡುವ ಸೂರ್ಯನು ಉದಯಿಸಿದನು.

೫೪. ಬಳಿಕ ಶಿವಪೂಜೆಯಲ್ಲಿ ನಿರತರೂ, ಶಾಂತರೂ ಆದ ಗಂಡಸರೂ ಹೆಂಗಸರೂ ತಮ್ಮ ತಮ್ಮ ಮನೆಗೆ ಹೊರಟುಹೋದರು.

ಸೋಽಪಿ ಚೌರೋ ನಿರಾಶಶ್ಚ ಕ್ಷುತ್ಕ್ಷಾಮಃ ಶೀತನಿಹ್ವಲಃ ।
ಅವತೀರ್ಯ ದ್ರುಮಾತ್ತಸ್ಮಾದುಪಾಯಂ ಕಂಚಿದಾಶ್ರಿತಃ ॥ ೫೫ ॥
ತತಃ ಕಾಲೇನ ಮಹತಾ ಪಂಚತ್ವಂ ಸಮುಪದ್ಯತ ।
ಜಾತೋ ಜಾತಿಸ್ಮರಃ ಸೋಽಥ ದಶಾರ್ಣಾಧಿಪತೇರ್ಗೃಹೇ ॥ ೫೬ ॥
ಉಪವಾಸಪ್ರಭಾವೇನ ಬಲಾದಪಿ ಪ್ರಜಾಗರಾತ್ ।
ಶಿವರಾತ್ರೇಸ್ತಥಾ ತಸ್ಯ ಲಿಂಗಸ್ಯಾಽಪಿ ಪ್ರಪೂಜಯಾ ॥ ೫೭ ॥
ತತೋ ರಾಜ್ಯಂ ಸಮಾಸಾದ್ಯ ಪಿತೃಪೈತಾಮಹಂ ಮಹತ್ ।
ಕಾರಯಾಮಾಸ ಲಿಂಗಸ್ಯ ಪ್ರಾಸಾದಂ ತಸ್ಯ ಶೋಭನಂ ॥ ೫೮ ॥
ವರ್ಷೇ ವರ್ಷೇ ಸಮಾಶ್ರಿತ್ಯ ಶಿವರಾತ್ರೌ ಪ್ರಜಾಗರಾತ್ ।
ಉಪವಾಸಪರೋ ಭೂತ್ವಾ ಗೀತವಾದಿತ್ರ ನಿಃಸ್ವನೈಃ ॥ ೫೯ ॥
ಧರ್ಮಾಖ್ಯಾನ ಕಥಾಭಿಶ್ಚ ಗೀತಧ್ವನಿಭಿರೇವ ಚ ।
ಪೂರ್ವೋಕ್ತಮಂತ್ರೈಃ ಸಂಪೂಜ್ಯ ಅರ್ಘ್ಯಂ ದತ್ವಾ ವಿಧಾನತಃ ।
ಸಂತರ್ಪ್ಯ ಬ್ರಾಹ್ಮಣಾನ್ ಕಾಮೈರ್ಜಗಾಮ ನಿಲಯಂ ನಿಜಂ ॥ ೬೦ ॥
ಕಸ್ಯಚಿತ್ತ್ವಥ ಕಾಲಸ್ಯ ಶಿವರಾತ್ರೌ ಸಮಾಗತಾಃ ।
ಪ್ರಾಸಾದೇ ತತ್ರ ಮುನಯಃ ಪ್ರಾಪ್ತಾ ಶಾಂಡಿಲ್ಯಪೂರ್ವಕಾಃ ॥ ೬೧ ॥
ಶಾಂಡಿಲ್ಯೋಽಥ ಭರದ್ವಾಜೋ ಯವಕ್ರೀತೋಽಥ ಗಾಲವಃ ।
ಪುಲಸ್ತ್ಯಃ ಪುಲಹೋ ಗಾರ್ಗ್ಯಸ್ತಥಾಽನ್ಯೇ ಬಹವೋ ನೃಪ ॥ ೬೨ ॥

---

೫೫. ಕದಿಯಲು ಒಂದು ಉಪಾಯವನ್ನು ಆಶ್ರಯಿಸಿದ ಆ ಕಳ್ಳನು ನಿರಾಶನೂ, ಹಸಿವಿನಿಂದ ಕೃಶನೂ ಆಗಿ ಆ ಮರದಿಂದ ಇಳಿದು ತನ್ನ ಮನೆಗೆ ಹೋದನು.

೫೬–೫೭. ಅನಂತರ ಬಹುಕಾಲದಮೇಲೆ ಮಡಿದ ಅವನು ಬಲಾತ್ಕಾರವಾಗಿ ಮಾಡಿದ ಉಪವಾಸ, ಶಿವರಾತ್ರಿಜಾಗರಣೆ, ಲಿಂಗಪೂಜೆ ಇವುಗಳಿಂದ ದಶಾರ್ಣರಾಜನ ಮನೆಯಲ್ಲಿ ಪೂರ್ವಜಾತಿ ಸ್ಮರಣೆಯುಳ್ಳ ರಾಜಕುಮಾರನಾಗಿ ಹುಟ್ಟಿದನು.

೫೮. ಬಳಿಕ ಅವನು ಪಿತೃಪಿತಾಮಹ ಸಂಬಂಧವಾದ ಮಹಾರಾಜ್ಯವನ್ನು ಪಡೆದು ಆ ಲಿಂಗಕ್ಕೆ ಸುಂದರವಾದ ಪ್ರಾಸಾದವನ್ನು ಕಟ್ಟಿಸಿದನು.

೫೯–೬೦. ಪ್ರತಿವರ್ಷವೂ ಶಿವರಾತ್ರಿಯ ದಿನ ಉಪವಾಸಜಾಗರಣೆಗಳನ್ನು ಮಾಡಿ ಗೀತವಾದ್ಯಧ್ವನಿಗಳಿಂದಲೂ, ಧರ್ಮಾಖ್ಯಾನ ಕಥೆಗಳಿಂದಲೂ, ಸಂಗೀತ ಧ್ವನಿಗಳಿಂದಲೂ, ಹಿಂದೆ ಹೇಳಿದ ಮಂತ್ರಗಳಿಂದಲೂ ಪೂಜಿಸಿ ವಿಧಿಯಂತೆ ಅರ್ಘ್ಯವನ್ನಿತ್ತು ಸ್ವೇಚ್ಛೆಯಾಗಿ ಬ್ರಾಹ್ಮಣಸಂತರ್ಪಣೆ ಮಾಡಿಸಿ ತನ್ನ ಮನೆಗೆ ಹೋಗುತ್ತಿದ್ದನು.

೬೧–೬೨. ಒಂದಾನೊಂದು ಕಾಲದಲ್ಲಿ ಶಿವರಾತ್ರಿಯ ದಿನ ಆ ದೇವಾಲಯಕ್ಕೆ ಶಾಂಡಿಲ್ಯ, ಭರದ್ವಾಜ, ಯವಕ್ರೀತ, ಗಾಲವ, ಪುಲಸ್ತ್ಯ, ಪುಲಹ, ಗಾರ್ಗ್ಯ ಮೊದಲಾದ ಮುನಿಗಳು ಬಂದರು.

ಸೋಽಪಿ ರಾಜಾ ಬೃಹತ್ಸೇನೋ ದಶಾರ್ಣಾಧಿಪತೇಃ ಸುತಃ ।
ಸಂಪ್ರಾಪ್ತೋ ಜಾಗರಂ ಕರ್ತುಂ ತಸ್ಯ ಲಿಂಗಸ್ಯ ಚಾಽಗ್ರತಃ ॥ ೬೩ ॥
ಪೂಜಯಿತ್ವಾ ತತೋ ದೇವಂ ಪ್ರಣಿಪತ್ಯ ಮುನೀಶ್ವರಾನ್ ।
ಉಪವಿಷ್ಟಸ್ತಸ್ಯ ಚಾಽಗ್ರೇ ಹ್ಯನುಜ್ಞಾತೋ ದ್ವಿಜೋತ್ತಮೈಃ ॥ ೬೪ ॥
ತತಸ್ತಸ್ಯಾಗ್ರತಶ್ಚಕ್ರುಃ ಕಥಾಸ್ತೇ ಬಹುಧಾ ನೃಪ ।
ರಾಜರ್ಷೀಣಾಮತೀತಾನಾಂ ಬ್ರಹ್ಮರ್ಷೀಣಾಂ ವಿಶೇಷತಃ ॥ ೬೫ ॥
ಅಥ ಕಸ್ಮಿನ್ ಕಥಾಂತೇ ಸ ತೈಃ ಪೃಷ್ಟೋ ಬ್ರಹ್ಮವಾದಿಭಿಃ ।
ಕೌತುಕಾವಿಷ್ಟಚಿತ್ತೈಶ್ಚ ವಿಸ್ಮಯೋತ್ಫುಲ್ಲಲೋಚನೈಃ ॥ ೬೬ ॥
ರಾಜನ್ ಪೃಚ್ಛಾಮಹೇ ಸರ್ವೇ ವಯಂ ಕೌತೂಹಲಾನ್ವಿತಾಃ ।
ಯದಿ ಬ್ರವೀಷಿ ನಃ ಸತ್ಯಂ ದೇವತಾಯತನೇ ಸ್ಥಿತಃ ॥ ೬೭ ॥

ರಾಜೋವಾಚ :—

ಯದಿ ಜ್ಞಾಸ್ಯಾಮಿ ವಿಪ್ರೇಂದ್ರಾಃ ಕಥಯಿಷ್ಯಾಮ್ಯಸಂಶಯಂ ।
ದೇವಸ್ಯಾಗ್ರೇ ಚ ಸಂಪೃಷ್ಟಃ ಸತ್ಯೇನಾತ್ಮಾನಮಾಲಭೇ ॥ ೬೮ ॥

ಋಷಯ ಊಚುಃ :—

ಪುಷ್ಕಲಾನಿ ಪರಿತ್ಯಜ್ಯ ಕಸ್ಮಾದ್ದಾನಾನ್ಯನೇಕಶಃ ।
ಜಾಗರಂ ಕರ್ತುಕಾಮೋಽತ್ರ ಸ್ವದೇಶಾದುಪತಿಷ್ಠಸಿ ॥ ೬೯ ॥

---

೬೩. ದಶಾರ್ಣರಾಜನ ಸುತನಾದ ಬೃಹತ್ಸೇನನು ಆ ಲಿಂಗದ ಮುಂದೆ ಜಾಗರಣೆಮಾಡಲು ಅಲ್ಲಿಗೆ ಬಂದನು.

೬೪. ಅವನು ಶಿವನನ್ನು ಪೂಜಿಸಿ ಆ ಮುನಿವರ್ಯನನ್ನು ವಂದಿಸಿ ದ್ವಿಜವರ್ಯರ ಅಪ್ಪಣೆಯಿಂದ ಆ ಲಿಂಗದ ಮುಂದೆ ಕುಳಿತನು.

೬೫. ಅನಂತರ ಆ ಮುನಿಗಳು ಆ ಲಿಂಗದ ಮುಂದೆ ಹಿಂದಿನ ರಾಜರ್ಷಿಗಳ ಮತ್ತು ಬ್ರಹ್ಮರ್ಷಿಗಳ ಕಥೆಗಳನ್ನು ಬಹುವಾಗಿ ಹೇಳಿದರು.

೬೬–೬೭. ಒಂದಾನೊಂದು ಕಥೆಯ ಅವಸಾನದಲ್ಲಿ ಬ್ರಹ್ಮವಾದಿಗಳೂ, ಕುತೂಹಲಿಗಳೂ, ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳವರೂ ಆದ ಅವರು ಆ ರಾಜನನ್ನು ಹೀಗೆ ಪ್ರಶ್ನಿಸಿದರು. "ದೊರೆಯೆ! ದೇವಾಲಯದಲ್ಲಿರುವ ನೀನು ಸತ್ಯವನ್ನು ನುಡಿಯುವುದಾದರೆ ನಾವೆಲ್ಲ ಕುತೂಹಲದಿಂದ ನಿನ್ನನ್ನು ಪ್ರಶ್ನಿಸುವೆವು."

೬೮. ರಾಜನು ಹೇಳುತ್ತಾನೆ:—ವಿಪ್ರವರ್ಯರೆ! ನೀವು ದೇವರ ಮುಂದೆ ಕೇಳುತ್ತಿರುವ ವಿಷಯವನ್ನು ನಾನು ತಿಳಿದಿದ್ದರೆ ನಿಶ್ಚಯವಾಗಿಯೂ ನನ್ನ ಆಣೆಯಾಗಿ ಹೇಳುವೆನು.

೬೯–೭೦. ಋಷಿಗಳು ಹೇಳುತ್ತಾರೆ:—ದೊರೆಯೆ! ನೀನು ನಿನ್ನ ದೇಶದಲ್ಲಿ ದಾನಗಳನ್ನು ಮಾಡುವುದನ್ನು ಬಿಟ್ಟು ಪ್ರತಿವರ್ಷವೂ ಏತಕ್ಕೆ ಜಾಗರಣೆಮಾಡಲು

ವರ್ಷೇ ವರ್ಷೇ ಸದಾ ಪ್ರಾಪ್ತೇ ನೂನಂ ತ್ವಂ ವೇತ್ಸಿಕಾರಣಂ ।
ರಹಸ್ಯಂ ಯದಿ ತೇ ನಸ್ಯಾತ್ತದ್ಬ್ರವೀಹಿ ನರಾಧಿಪ ॥ ೨೦ ॥
ಸೂತ ಉವಾಚ :—
ಸ ವೈಲಕ್ಷ್ಯಂ ಸ್ಮಿತಂ ಕೃತ್ವಾ ತತಃ ಪ್ರಾಹ ಸ ದುರ್ಮನಾಃ ।
ರಹಸ್ಯಂ ಪರಮಂ ಹ್ಯೇತದವಾಚ್ಯಂ ಹಿ ದ್ವಿಜೋತ್ತಮಾಃ ॥ ೨೧ ॥
ತಥಾಽಪಿ ಚ ವದಿಷ್ಯಾಮಿ ಪೃಷ್ಟೋ ದೇವಾಗ್ರತೋ ಯತಃ ॥ ೨೨ ॥
ತತಃ ಸ ಕಥಯಾಮಾಸ ಪೂರ್ವದೇಹಸಮುದ್ಭವಂ ।
ಮಲಿಮ್ಲುಚಸ್ತತೋ ನೂನಂ ಶಿವರಾತ್ರಿಸಮುದ್ಭವಂ ॥ ೨೩ ॥
ಚೌರ್ಯಭಾವೇನ ದೇವಸ್ಯ ಪೂಜನಂ ಜಾಗರಸ್ತಥಾ ।
ಉಪವಾಸಂ ವಿನಾ ತೇನ ಶಿವರಾತ್ರೌ ಪುರಾ ಕೃತಂ ॥ ೨೪ ॥
ಜಾತಿಸ್ಮರಣಸಂಯುಕ್ತಂ ಜನ್ಮಜಾತಂ ಯಥಾತಥಂ ।
ತತಸ್ತೇ ಮುನಯಃ ಸರ್ವೇ ಸಾಧುವಾದಾನ್ ಪೃಥಗ್ವಿಧಾನ್ ॥ ೨೫ ॥
ನೃಪೋತ್ತಮಸ್ಯ ರಾಜರ್ಷೇರ್ದತ್ವಾಽಶೀರ್ಭಿಃ ಸಮನ್ವಿತಾನ್ ।
ರಾತ್ರೌ ಜಾಗರಣಂ ಕೃತ್ವಾ ಪ್ರಜಗ್ಮುಸ್ತೇ ನಿಜಾಶ್ರಮಾನ್ ॥ ೨೬ ॥
ಸೋಽಪಿ ರಾಜಾ ಸಮಭ್ಯರ್ಚ್ಯ ತಂ ದೇವಂ ತಾನ್ ದ್ವಿಜೋತ್ತಮಾನ್ ।
ಜಗಾಮ ಸ್ವಪುರಂ ಪಶ್ಚಾತ್ಕೃತ್ವಾ ರಾತ್ರೌ ಪ್ರಜಾಗರಂ ॥ ೨೭ ॥

---

ಇಲ್ಲಿಗೆ ಬಂದಿರುವೆ? ಅದಕ್ಕೆ ಕಾರಣವನ್ನು ನೀನು ತಿಳಿದಿರುವೆ. ರಹಸ್ಯವಲ್ಲ ದಿದ್ದರೆ ಅದನ್ನು ನಮಗೆ ಹೇಳು.

೨೧. ಸೂತನು ಹೇಳುತ್ತಾನೆ:— ದುಃಖಿತವಾದ ಮನಸ್ಸುಳ್ಳ ಅವನು ತರುವಾಯ ಆಶ್ಚರ್ಯದಿಂದ ನಸುನಕ್ಕು ಹೀಗೆಂದನು. ದ್ವಿಜವರ್ಯರೆ! ಇದು ಅತ್ಯಂತ ಗುಟ್ಟಾದುದು. ಆದುದರಿಂದ ಹೇಳತಕ್ಕುದಲ್ಲ.

೨೨. ಆದರೂ ನೀವು ದೇವರ ಮುಂದೆ ಕೇಳುತ್ತಿರುವುದರಿಂದ ಅದನ್ನು ಹೇಳುವೆನು.

೨೩–೨೬. ಅನಂತರ ಆ ರಾಜನು ತಾನು ಕಳ್ಳತನಮಾಡುವ ನೆಪದಿಂದ ಮಾಡಿದ ಶಿವರಾತ್ರಿ ಪೂಜೆ, ಉಪವಾಸವಿಲ್ಲದ ಜಾಗರಣೆ, ಜಾತಿಸ್ಮರಣೆಯಿಂದ ಕೂಡಿದ ರಾಜಜನ್ಮ ಇವುಗಳನ್ನು ಹೇಳಿದನು. ಬಳಿಕ ಮುನಿಗಳು ರಾಜನಿಗೆ ಆಶೀರ್ವಾದ ಸಹಿತವಾದ ನಾನಾವಿಧ ಸಾಧುವಾಕ್ಯಗಳನ್ನು ಆಡಿ ರಾತ್ರಿ ಜಾಗರಣೆ ಮಾಡಿ ತಮ್ಮ ತಮ್ಮ ಆಶ್ರಮಕ್ಕೆ ತೆರಳಿದರು.

೨೭. ಆ ಆನರ್ತರಾಜನೂ ಆ ಮಹೇಶ್ವರನನ್ನೂ, ದ್ವಿಜವರ್ಯರನ್ನೂ ಪೂಜಿಸಿ ರಾತ್ರಿ ಜಾಗರಣೆಮಾಡಿ ತನ್ನ ಪಟ್ಟಣಕ್ಕೆ ಹೋದನು.

ಭರ್ತೃಯಜ್ಞ ಉವಾಚ:—
ಶಿವರಾತ್ರಿಃ ಸಮುತ್ಪನ್ನಾ ಏವಂ ಭೂಮಿತಲೇ ನೃಪ ।
ಏವಂ ವಿಧಂ ಚ ಮಾಹಾತ್ಮ್ಯಂ ತಸ್ಯಾಸ್ತೇ ಪರಿಕೀರ್ತಿತಂ ॥ ೭೮ ॥
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಾ ಸಾ ನೃಪಸತ್ತಮ ।
ಕಲಿಕಾಲೇ ವಿಶೇಷೇಣ ಯ ಇಚ್ಛೇದ್ಭೂತಿಮಾತ್ಮನಃ ॥ ೭೯ ॥
ಏಷಾ ಕೃತಾ ದಿಲೀಪೇನ ನಲೇನ ನಹುಷೇಣ ಚ ।
ಮಾಂಧಾತ್ರಾ ಧುಂಧುಮಾರೇಣ ಸಗರೇಣ ಯುಯುತ್ಸುನಾ ॥ ೮೦ ॥
ತಥಾಽನ್ಯೈಶ್ಚ ವಿಶೇಷೇಣ ಸಮ್ಯಕ್ಛ್ರದ್ಧಾಸಮನ್ವಿತೈಃ ।
ಪ್ರಾಪ್ತಾಶ್ಚ ಪ್ರಾರ್ಥಿತಾಃ ಕಾಮಾ ಯೇ ದಿವ್ಯಾ ಯೇ ಚ ಮಾನುಷಾಃ ॥ ೮೧ ॥
ತಥಾ ಚೈವತು ಸಾವಿತ್ರ್ಯಾ ಶ್ರಿಯಾ ದೇವ್ಯಾ ತು ಸೀತಯಾ ।
ಅರುಂಧತ್ಯಾ ಸರಸ್ವತ್ಯಾ ಮೇನಯಾ ರಂಭಯಾ ತಥಾ ॥ ೮೨ ॥
ಇಂದ್ರಾಣ್ಯಾಽಥ ದೃಷದ್ವತ್ಯಾ ಸ್ವಧಯಾ ಸ್ವಾಹಯಾ ತಥಾ ।
ರತ್ಯಾ ಪ್ರೀತ್ಯಾ ಪ್ರಭಾವತ್ಯಾ ಗಾಯತ್ರ್ಯಾ ಚ ನೃಪೋತ್ತಮ ।
ಸರ್ವಾಃ ಪ್ರಾಪ್ತಾಃ ಪ್ರಿಯಾನ್ಕಾಮಾನತಿಸೌಭಾಗ್ಯಸಂಯುತಾನ್ ॥ ೮೩ ॥
ಯಸ್ತ್ವಿಮಾಂ ಪಠತೇ ನಿತ್ಯಂ ಭಾವೇನ ಶಿವಸನ್ನಿಧೌ ।
ವಿನಷ್ಟಾತ್ಪಾತಕಾತ್ಸೋಽಪಿ ಮುಚ್ಯತೇ ನಾತ್ರ ಸಂಶಯಃ ॥ ೮೪ ॥

---

೭೮. ಭರ್ತೃಯಜ್ಞನು ಹೇಳುತ್ತಾನೆ:—ದೊರೆಯೆ! ಹೀಗೆ ಭೂಮಿಯಲ್ಲಿ ಶಿವರಾತ್ರಿಯುಂಟಾಯಿತು. ಅದರ ಇಂತಹ ಮಾಹಾತ್ಮ್ಯವನ್ನು ನಿನಗೆ ಹೇಳಿರುವೆನು.

೭೯. ಆದುದರಿಂದ ತನಗೆ ಅಭ್ಯುದಯವನ್ನು ಬಯಸುವವನು ಕಲಿಕಾಲದಲ್ಲಿ ವಿಶೇಷವಾಗಿ ಶಿವರಾತ್ರಿ ವ್ರತವನ್ನಾಚರಿಸಬೇಕು.

೮೦-೮೧. ಈ ವ್ರತವನ್ನು ದಿಲೀಪ, ನಳ, ನಹುಷ, ಮಾಂಧಾತ, ಧುಂಧುಮಾರ, ಸಗರ, ಯುಯುತ್ಸು ಇವರೂ, ಇತರರೂ ಶ್ರದ್ಧೆಯಿಂದ ಆಚರಿಸಿ ದಿವ್ಯ ಮಾನುಷೇಷ್ಟಾರ್ಥಗಳನ್ನು ಪಡೆದಿರುವರು.

೮೨-೮೩. ಹಾಗೆಯೇ ಸಾವಿತ್ರಿ, ಶ್ರೀ, ಸೀತೆ, ಅರುಂಧತಿ, ಸರಸ್ವತಿ, ಮೇನೆ, ರಂಭೆ, ಶಚಿ, ದೃಷದ್ವತಿ, ಸ್ವಧೆ, ಸ್ವಾಹೆ, ರತಿ, ಪ್ರೀತಿ, ಪ್ರಭಾವತಿ, ಗಾಯತ್ರಿ ಇವರು ಆಚರಿಸಿ ಅತಿ ಸೌಭಾಗ್ಯಗಳಿಂದ ಕೂಡಿದ ಇಷ್ಟಾರ್ಥಗಳನ್ನು ಪಡೆದರು.

೮೪. ಈ ಫಲಶ್ರುತಿಯನ್ನು ಶಿವಸನ್ನಿಧಿಯಲ್ಲಿ ಭಕ್ತಿಯಿಂದ ಕೇಳುವವನು [illegible]

ನಾಸ್ತಿ ಗಂಗಾಸಮಂ ತೀರ್ಥಂ ನಾಽಸ್ತಿ ದೇವೋ ಹರೋಪಮಃ ।
ಶಿವರಾತ್ರೇಃ ಪರಂ ನಾಸ್ತಿ ತಪಃ ಸತ್ಯಂ ಮಯೋದಿತಂ ॥ ೮೫ ॥
ಸರ್ವರತ್ನಮಯೋ ಮೇರುಃ ಸರ್ವಾಶ್ಚರ್ಯಮಯಂ ತಪಃ ।
ಸರ್ವಧರ್ಮಮಯೀ ರಾಜಂಛಿವರಾತ್ರಿಃ ಪ್ರಕೀರ್ತಿತಾ ॥ ೮೬ ॥
ಗರುಡಃ ಪಕ್ಷಿಣಾಂ ಯದ್ವನ್ನದೀನಾಂ ಸಾಗರೋ ಯಥಾ ।
ಪ್ರಧಾನಃ ಸರ್ವಧರ್ಮಾಣಾಂ ಶಿವರಾತ್ರಿಸ್ತಥೋತ್ತಮಾ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಿವರಾತ್ರಿಮಾಹಾತ್ಮ್ಯವರ್ಣನಂ" ನಾಮ
ಷಟ್ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

೮೫. ಗಂಗೆಗೆ ಸಮವಾದ ತೀರ್ಥವೂ, ಹರನಿಗೆ ಸಮವಾದ ದೇವತೆಯೂ, ಶಿವರಾತ್ರಿಗೆ ಸಮವಾದ ತಪಸ್ಸೂ ಇಲ್ಲ. ನಾನು ಹೇಳಿರುವುದು ನಿಜ.

೮೬. ಜಗತ್ತಿನಲ್ಲಿ ಮೇರುಗಿರಿಯು ಸರ್ವರತ್ನಮಯವಾದುದು; ತಪಸ್ಸು ಸಕಲಾಶ್ಚರ್ಯಗಳಿಂದ ತುಂಬಿದುದು. ಶಿವರಾತ್ರಿಯಾದರೋ ಸಕಲ ಧರ್ಮಮಯ ವಾದುದೆಂದು ಕೀರ್ತಿತವಾಗಿರುವುದು.

೮೭. ಎಲೈ ದೊರೆಯೆ, ಪಕ್ಷಿಗಳಿಗೆಲ್ಲ ಗರುಡ ಪಕ್ಷಿಯೂ ನದಿಗಳಿಗೆಲ್ಲ ಸಾಗರವೂ ಹೇಗೆ ಪ್ರಧಾನವಾದುವೋ ಹಾಗೆ ಶಿವರಾತ್ರಿ ಧರ್ಮವು ಧರ್ಮಗಳಿಗೆಲ್ಲ ಪ್ರಧಾನವೂ, ಉತ್ತಮವೂ ಆದುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಿವರಾತ್ರಿಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಅರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ತುಲಾಪುರುಷದಾನಮಾಹಾತ್ಮ್ಯವರ್ಣನಂ

ಭರ್ತೃಯಜ್ಞ ಉವಾಚ :—

ತಸ್ಮಾದೇಷಾ ಮಹಾರಾಜ ಶಿವರಾತ್ರಿರ್ವಿಪಶ್ಚಿತಾ ।
ಕರ್ತವ್ಯಾ ಪುರುಷೇಣಾಽತ್ರ ಲೋಕದ್ವಯಮಭೀಪ್ಸುನಾ ॥ ೧ ॥

ಆನರ್ತ ಉವಾಚ :—

ಮಂಕಣೇಶ್ವರ ಮಾಹಾತ್ಮ್ಯಂ ಮಯಾ ವಿಸ್ತರತಃ ಶ್ರುತಂ ।
ಶಿವರಾತ್ರಿ ಸಮೋಪೇತಂ ಯತ್ತ್ವಯಾ ಪರಿಕೀರ್ತಿತಂ ॥ ೨ ॥
ಸಾಂಪ್ರತಂ ವದ ಮೇ ಕೃತ್ಸ್ನಂ ಸಿದ್ಧೇಶ್ವರಸಮುದ್ಭವಂ ।
ವಿಸ್ತರೇಣ ಮಹಾಭಾಗ ಪರಂ ಕೌತೂಹಲಂ ಹಿ ಮೇ ॥ ೩ ॥

ಭರ್ತೃಯಜ್ಞ ಉವಾಚ :—

ಸಿದ್ಧೇಶ್ವರ ಇತಿ ಖ್ಯಾತೋ ಮಹಾದೇವೋ ಮಹೀಪತೇ ।
ತಸ್ಯೋತ್ಪತ್ತಿಸ್ತ್ವಯಾ ಪೂರ್ವಂ ಶ್ರುತಾಽತ್ರ ವದತೋ ಮಮ ॥ ೪ ॥
ಸಾಂಪ್ರತಂ ತತ್ಫಲಂ ವಚ್ಮಿ ತಸ್ಮಿನ್ ದೃಷ್ಟೇ ತು ದಾನಜಂ ।
ಯತ್ಫಲಂ ಜಾಯತೇ ನೃಣಾಂ ಚಕ್ರವರ್ತಿತ್ವಸಂಭವಂ ॥ ೫ ॥

---

## ಕನ್ನಡದ ಅನುವಾದ

### ತುಲಾಪುರುಷದಾನಮಾಹಾತ್ಮ್ಯವರ್ಣನ

೧. ಭರ್ತೃಯಜ್ಞನು ಹೇಳುತ್ತಾನೆ:—ಮಹಾರಾಜ! ಆದುದರಿಂದ ಜ್ಞಾನಿಯಾದವನು ಇಹಪರಲೋಕಗಳ ಸುಖವನ್ನು ಬಯಸುವ ಮನುಷ್ಯನು ಶಿವರಾತ್ರಿ ವ್ರತವನ್ನಾಚರಿಸಬೇಕು.

೨. ಆನರ್ತನು ಹೇಳುತ್ತಾನೆ:—ನೀನು ಹೇಳಿದ ಶಿವರಾತ್ರಿ ಮಾಹಾತ್ಮ್ಯದಿಂದ ಕೂಡಿದ ಮಂಕಣೇಶ್ವರ ಮಾಹಾತ್ಮ್ಯವನ್ನು ವಿಸ್ತಾರವಾಗಿ ಕೇಳಿರುವೆನು.

೩. ಈಗ ಸಿದ್ಧೇಶ್ವರ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳು. ನನಗೆ ಅತ್ಯಂತ ಕುತೂಹಲವುಂಟಾಗಿದೆ.

೪. ಭರ್ತೃಯಜ್ಞನು ಹೇಳುತ್ತಾನೆ:— ದೊರೆಯೆ! ಸಿದ್ಧೇಶ್ವರನೆಂಬ ಮಹೇಶ್ವರನ ಉತ್ಪತ್ತಿಯನ್ನು ನಾನು ವಿಸ್ತಾರವಾಗಿ ಹೇಳಿರುವೆನು. ನೀನು ಅದನ್ನು ಕೇಳಿರುವೆ.

೫. ಈಗ ಫಲವನ್ನು ಹೇಳುವೆನು. ಅವನನ್ನು ದರ್ಶನಮಾಡಿದರೆ ಚಕ್ರವರ್ತಿತ್ವವನ್ನು ದಾನಮಾಡಿದ ಪುಣ್ಯವು ದೊರೆಯುವುದು.

ತುಲಾಪುರುಷದಾನಂ ಚ ತತ್ರ ರಾಜನ್ ಪ್ರಶಸ್ಯತೇ ।
ಯ ಇಚ್ಛೇಚ್ಚಕ್ರವರ್ತಿತ್ವಂ ಸಮಸ್ತೇ ಧರಣೀತಲೇ ॥ ೬ ॥
ಆನರ್ತ ಉವಾಚ:—
ತುಲಾಪುರುಷದಾನಸ್ಯ ಯೋ ವಿಧಿಃ ಪರಿಕೀರ್ತಿತಃ ।
ತಂ ಮೇ ಸರ್ವಂ ಸಮಾಚಕ್ಷ್ವ ವಿಸ್ತರೇಣ ಮಹಾಮುನೇ ॥ ೭ ॥
ಭರ್ತೃಯಜ್ಞ ಉವಾಚ:—
ಚಂದ್ರಸೂರ್ಯೋಪರಾಗೇ ವಾ ಅಯನೇ ವಿಷುವೇ ತಥಾ ।
ತೀರ್ಥೇ ವಾ ಪುರುಷಶ್ರೇಷ್ಠ ತುಲಾಪುರುಷಸಂಭವಂ ॥ ೮ ॥
ಪ್ರಶಂಸಂತಿ ವಿಧಿಂ ಸಮ್ಯಕ್ಪ್ರಾಪ್ತೇ ವಾ ಚೇಂದುಸಂಕ್ಷಯೇ ।
ಬ್ರಾಹ್ಮಣಾನಾಂ ಸುದಾಂತಾನಾಮನುಷ್ಠಾನವತಾಂ ಸತಾಂ ॥ ೯ ॥
ವೇದಾಧ್ಯಯನಯುಕ್ತಾನಾಂ ನಿರ್ದೋಷಾಣಾಂ ಚ ಪಾರ್ಥಿವ ।
ವಿಭಜ್ಯ ಸ ಭವೇದ್ದೇಯೋ ನೈಕಸ್ಯ ಚ ಕಥಂಚನ ॥ ೧೦ ॥
ಶುಚೌ ದೇಶೇ ಸಮೇ ಪುಣ್ಯೇ ಪೂರ್ವೋತ್ತರಪ್ಲವೇ ಶುಭೇ ।
ಮಂಡಪಂ ಕಾರಯೇದ್ವಿದ್ವಾನ್ ರಮ್ಯಂ ಷೋಡಶಹಸ್ತಕಂ ॥ ೧೧ ॥
ತನ್ಮಧ್ಯೇ ಕಾರಯೇದ್ವೇದಿಂ ಚತುರ್ಹಸ್ತಪ್ರಮಾಣತಃ ।
ಯಜಮಾನಸ್ಯ ಹಸ್ತೇನ ಹಸ್ತೈಕೇನ ಸಮುಚ್ಛ್ರಿತಾಂ ॥ ೧೨ ॥

---

೬. ಸಕಲ ಭೂಮಂಡಲದ ಸಾರ್ವಭೌಮ ಪದವಿಯನ್ನು ಅಪೇಕ್ಷಿಸುವವನು ಅಲ್ಲಿ ತುಲಾಪುರುಷದಾನವನ್ನು ಮಾಡಬೇಕು.

೭. ಆನರ್ತನು ಹೇಳುತ್ತಾನೆ:—ಮುನಿಯೆ! ತುಲಾಪುರುಷದಾನದ ವಿಧಿ ಯಾವುದು? ಅದನ್ನು ವಿಸ್ತಾರವಾಗಿ ನನಗೆ ಹೇಳು.

೮–೧೦. ಭರ್ತೃಯಜ್ಞನು ಹೇಳುತ್ತಾನೆ:—ಚಂದ್ರ ಸೂರ್ಯಗ್ರಹಣ, ಅಯನ ಸಂಕ್ರಾಂತಿ, ವಿಷುವಪುಣ್ಯಕಾಲ ಅಥವಾ ಅಮಾವಾಸ್ಯೆ ಈ ಸಮಯಗಳಲ್ಲಿ ಇಂದ್ರಿಯನಿಗ್ರಹವುಳ್ಳವರೂ, ಅನುಷ್ಠಾನಪರರೂ, ವೇದಾಧ್ಯಯನನಿರತರೂ, ನಿರ್ದುಷ್ಟರೂ ಆದ ಬ್ರಾಹ್ಮಣರಿಗೆ ತೀರ್ಥದಲ್ಲಿ ತುಲಾಪುರುಷದಾನ ಮಾಡುವುದನ್ನು ಹೊಗಳುವರು. ಅದನ್ನು ಅನೇಕ ಮಂದಿ ಬ್ರಾಹ್ಮಣರಿಗೆ ವಿಭಾಗಿಸಿ ದಾನ ಮಾಡಬೇಕು. ಒಬ್ಬನಿಗೆ ಮಾತ್ರ ಕೊಡಕೂಡದು.

೧೧. ಶುದ್ಧವೂ, ಸಮವೂ, ಪುಣ್ಯಕರವೂ, ಮಂಗಳಕರವೂ ಆದ ಸ್ಥಳದಲ್ಲಿ ಪೂರ್ವೋತ್ತರ ಹದಿನಾರು ಮೊಳಗಳುದ್ದದ ಮಂಡಪವನ್ನು ರಚಿಸಬೇಕು.

೧೨. ಅದರ ಮಧ್ಯದಲ್ಲಿ ಯಜಮಾನನ ಕೈಯ ನಾಲ್ಕು ಮೊಳ ಪ್ರಮಾಣದ ಒಂದು ಮೊಳ ಎತ್ತರದ ವೇದಿಯನ್ನು ರಚಿಸಬೇಕು.

ಚತುರ್ಹಸ್ತಾನಿ ಕುಂಡಾನಿ ಚತುರ್ದಿಕ್ಷು ಪ್ರಕಲ್ಪಯೇತ್ ।
ಏಕಹಸ್ತಪ್ರಮಾಣಾನಿ ಆಯಾಮವ್ಯಾಸವಿಸ್ತರಾತ್ ॥ ೧೩ ॥
ಐಶಾನ್ಯಾಮುಪರಾಂ ವೇದಿಂ ಹಸ್ತಮಾತ್ರಾಂ ನ್ಯಸೇಚ್ಛುಭಾಂ ।
ರತ್ನಿಮಾತ್ರೋಚ್ಛ್ರಿತಾಂ ಚೈವ ಗ್ರಹಾಂಸ್ತತ್ರ ಪ್ರಕಲ್ಪಯೇತ್ ॥ ೧೪ ॥
ಯುಗ್ಮಾಶ್ಚ ಋತ್ವಿಜಃ ಕಾರ್ಯಾಶ್ಚತುರ್ದಿಕ್ಷು ಯಥಾ ಕ್ರಮಂ ।
ಬಹ್ವೃಚೋಽಧ್ವರ್ಯವಶ್ಚೈವ ಛಂದೋಗಾಥರ್ವಣಾವಪಿ ॥ ೧೫ ॥
ತೂಷ್ಣೀಂ ತು ದೇವತಾಹೋಮಸ್ತೈಃ ಕಾರ್ಯಃ ಸುಸಮಾಹಿತೈಃ ।
ತಲ್ಲಿಂಗೈರ್ನೃಪತೇ ಮಂತ್ರೈಃ ಸ್ವಶಕ್ತ್ಯಾ ಜಪ ಏವ ಚ ॥ ೧೬ ॥
ಏಕಹಸ್ತಪ್ರವಿಷ್ಟಂ ತು ಚತುರ್ಹಸ್ತೋಚ್ಛ್ರಿತಂ ತಥಾ ।
ಸ್ತಂಭದ್ವಯಂ ತು ಕರ್ತವ್ಯಂ ವೇದಿಯಾಮ್ಯೋತ್ತರೇ ಸ್ಥಿತಂ ॥ ೧೭ ॥
ತನ್ಮಧ್ಯೇ ಸುಶುಭಂ ಕಾಷ್ಠಂ ಸ್ತಂಭಜಾತ್ಯಂ ದೃಢಂ ನ್ಯಸೇತ್ ।
ಚಂದನಃ ಖದಿರೋ ವಾಽಥ ಬಿಲ್ವೋ ವಾಽಶ್ವತ್ಥ ಏವ ವಾ ॥ ೧೮ ॥
ತಿಂದುಕೋ ದೇವದಾರುರ್ವಾ ಶ್ರೀಪರ್ಣೀ ವಾ ವಟೋಽಥವಾ ।
ಅಷ್ಟೌ ವೃಕ್ಷಾಃ ಶುಭಾಃ ಶಸ್ತಾಃ ಸ್ತಂಭಾರ್ಥಂ ನೃಪಸತ್ತಮ ॥ ೧೯ ॥
ಶಿಕ್ಯದ್ವಯ ಸಮೋಪೇತಾಂ ತನ್ಮಧ್ಯೇ ವಿನ್ಯಸೇತ್ತುಲಾಂ ।
ಸ್ನಾತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ॥ ೨೦ ॥

---

೧೩. ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮೊಳ ವಿಸ್ತೀರ್ಣದ ಒಂದು ಮೊಳ ಪ್ರಮಾಣದ ಕುಂಡಗಳನ್ನು ನಿರ್ಮಿಸಬೇಕು.

೧೪. ಈಶಾನ್ಯ ದಿಕ್ಕಿನಲ್ಲಿ ಒಂದು ಮೊಳ ಪ್ರಮಾಣದ ಹಿಡಿ ಕಡಮೆ ಮೊಳ ಎತ್ತರದ ವೇದಿಯನ್ನು ರಚಿಸಿ ಅಲ್ಲಿ ಗ್ರಹಗಳನ್ನು ಪ್ರತಿಷ್ಠಿಸಬೇಕು.

೧೫. ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಋಗ್ಯಜುಸ್ಸಾಮಾಥರ್ವಣ ವೇದದ ಇಬ್ಬರಿಬ್ಬರು ಋತ್ವಿಜರನ್ನು ನೇಮಿಸಬೇಕು.

೧೬–೧೭. ಆ ಋತ್ವಿಜರು ಸಾವಧಾನ ಮನಸ್ಸಿನಿಂದ ದೇವತಾ ಹೋಮವನ್ನೂ, ಶಕ್ತ್ಯನುಸಾರ ಆ ದೇವತೆಗಳನ್ನು ಸೂಚಿಸುವ ಮಂತ್ರಗಳಿಂದ ಜಪವನ್ನೂ ಮಾಡಬೇಕು. ಆ ವೇದಿಯ ಉತ್ತರ ದಕ್ಷಿಣ ದಿಕ್ಕುಗಳಲ್ಲಿ ಒಂದು ಮೊಳ ಸುತ್ತಳತೆಯುಳ್ಳ ನಾಲ್ಕು ಮೊಳ ಎತ್ತರದ ಎರಡು ಕಂಬಗಳನ್ನು ನೆಡಬೇಕು.

೧೮–೧೯. ಆ ಎರಡು ಕಂಬಗಳ ನಡುವೆ ಆ ಕಂಬಗಳ ಜಾತಿಯ ಮಂಗಳಕರವೂ, ದೃಢವೂ ಆದ ಒಂದು ದೂಲವನ್ನು ಅಡ್ಡಲಾಗಿ ಹಾಕಬೇಕು. ಈ ಕಂಬಗಳಿಗೆ ಚಂದನ, ಖದಿರ, ಬಿಲ್ವ, ಅಶ್ವತ್ಥ, ತಿಂದುಕ, ದೇವದಾರು, ಶ್ರೀಪರ್ಣಿ, ಆಲ ಈ ಎಂಟು ವೃಕ್ಷಗಳು ಶ್ರೇಷ್ಠವಾದುವು.

೨೦–೨೩. ಅದರ ನಡುವೆ ಎರಡು ಶಿಕ್ಯಗಳಿರುವ ತಕ್ಕಡಿಯನ್ನು ತೂಗಹಾಕಬೇಕು. ಯಜಮಾನನು ಮಿಂದು ಶುಕ್ಲ ವಸ್ತ್ರವನ್ನುಟ್ಟು ಬಿಳಿ ಹೂಮಾಲೆ,

ಪೂಜಯಿತ್ವಾ ಸಮಂತಾಚ್ಚ ಲೋಕಪಾಲಾನ್ ಯಥಾಕ್ರಮಂ ।
ಸ್ತಂಭಾನ್ ಸಂಪೂಜಯೇತ್ಪಶ್ಚಾದ್ಗಂಧಮಾಲ್ಯಾನುಲೇಪನೈಃ ॥ ೨೧ ॥
ತುಲಾಂ ಚ ಪಾರ್ಥಿವಶ್ರೇಷ್ಠ ಪುಣ್ಯಾಹಂ ಚ ಪ್ರಕೀರ್ತಯೇತ್ ।
ಯಜಮಾನೋ ನಿಜೈಃ ಸರ್ವೈರಾಯುಧೈಃ ಕಾಯಸಂಸ್ಥಿತೈಃ ॥ ೨೨ ॥
ಪಶ್ಚಿಮಾಂ ದಿಶಮಾಸ್ಥಾಯ ಪ್ರಾಙ್ಮುಖಃ ಶ್ರದ್ಧಯಾನ್ವಿತಃ ।
ಕೃತಾಂಜಲಿಪುಟೋ ಭೂತ್ವಾ ಇಮಂ ಮಂತ್ರಮುದೀರಯೇತ್ ॥ ೨೩ ॥
ಬ್ರಹ್ಮಣೋ ದುಹಿತಾ ನಿತ್ಯಂ ಸತ್ಯಂ ಪರಮಮಾಶ್ರಿತಾ ।
ಕಾಶ್ಯಪೀ ಗೋತ್ರತಶ್ಚೈವ ನಾಮತೋ ವಿಶ್ರುತಾ ತುಲಾ ॥ ೨೪ ॥
ತ್ವಂ ತುಲೇ ಸತ್ಯನಾಮಾಽಸಿ ಸ್ವಭೀಷ್ಟಂ ಚಾತ್ಮನಃ ಶುಭಂ ।
ಕರಿಷ್ಯಾಮಿ ಪ್ರಸಾದಂ ಮೇ ಸಾನ್ನಿಧ್ಯಂ ಕುರು ಸಾಂಪ್ರತಂ ॥ ೨೫ ॥
ತತಸ್ತಸ್ಯಾಂ ಸಮಾರುಹ್ಯ ಸ್ವಶಕ್ತ್ಯಾ ಯತ್ಸಮಾಹೃತಂ ।
ದಾನಾರ್ಥಂ ಪೂರ್ವಮಾಯೋಜ್ಯಂ ಶಿಕ್ಯೇಽನ್ಯಸ್ಮಿನ್ನರೋತ್ತಮ ॥ ೨೬ ॥
ಸುವರ್ಣಂ ರಜತಂ ವಾಽಥ ವಸ್ತ್ರಂ ಚಾಽನ್ಯದಭೀಪ್ಸಿತಂ ।
ಯಾವತ್ಸಾಮ್ಯಂ ಭವೇದ್ರಾಜನ್ನಾತ್ಮನೋಽಭ್ಯಧಿಕಂ ಚ ವಾ ॥ ೨೭ ॥
ತತೋಽಭೀಷ್ಟಾಂ ಸಮಾಸಾದ್ಯ ದೇವತಾಂ ಶಿಕ್ಯಮಾಶ್ರಿತಃ ।
ಉದಕಂ ಜಲಮಧ್ಯೇ ಚ ತದರ್ಥಂ ಪ್ರಕ್ಷಿಪೇದ್ಬುಧಃ ॥ ೨೮ ॥

---

ಗಂಧಗಳುಳ್ಳವನಾಗಿ ಸುತ್ತಲೂ ಕ್ರಮವಾಗಿ ಲೋಕಪಾಲಕರನ್ನೂ, ಕಂಬ, ತಕ್ಕಡಿಗಳನ್ನೂ ಗಂಧ, ಮಾಲೆ, ಅನುಲೇಪನಗಳಿಂದ ಪೂಜಿಸಿ ಪುಣ್ಯಾಹವಾಚನ ಮಾಡಿಸಿ ತನ್ನ ಶರೀರದಲ್ಲಿರುವ ಸಮಸ್ತ ಆಯುಧಗಳೊಡನೆ ತಕ್ಕಡಿಯ ಪಶ್ಚಿಮದಲ್ಲಿ ಪೂರ್ವಮುಖವಾಗಿ ಶ್ರದ್ಧೆಯಿಂದ ನಿಂತು ಕೈಮುಗಿದುಕೊಂಡು ಈ ಮಂತ್ರವನ್ನು ಜಪಿಸಬೇಕು.

೨೪. ಬ್ರಹ್ಮನ ಮಗಳೂ, ಸತ್ಯಕ್ಕೆ ಆಶ್ರಯವೂ, ಕಾಶ್ಯಪಗೋತ್ರವುಳ್ಳವಳೂ ಆದ ನೀನು ತುಲೆಯೆಂಬ ಹೆಸರಿನಿಂದ ಪ್ರಸಿದ್ಧಳಾಗಿರುವೆ.

೨೫. ತುಲೆಯೆ! ನೀನು ಸತ್ಯನಾಮಳಾಗಿರುವೆ. ನಿನಗೆ ಇಷ್ಟವನ್ನುಂಟು ಮಾಡುವೆನು. ನನ್ನಲ್ಲಿ ಅನುಗ್ರಹಮಾಡಿ ಇಲ್ಲಿ ಸನ್ನಿಹಿತಳಾಗು.

೨೬–೨೭. ತಾನು ಆ ಎರಡು ಶಿಕ್ಯಗಳಲ್ಲಿ ಒಂದು ಶಿಕ್ಯವನ್ನೇರಿ ದಾನಕ್ಕಾಗಿ ಸಿದ್ಧಪಡಿಸಿದ ಸುವರ್ಣ, ರಜತ, ವಸ್ತ್ರ ಅಥವಾ ಇಷ್ಟವಾದ ಯಾವುದಾದರೂ ಒಂದು ವಸ್ತುವನ್ನು ತನ್ನ ತೂಕದಷ್ಟು ಮತ್ತೊಂದು ಶಿಕ್ಯದಲ್ಲಿರಿಸಬೇಕು.

೨೮. ಬಳಿಕ ಶಿಕ್ಯದಲ್ಲಿರುವ ಯಜಮಾನನು ಅಭೀಷ್ಟದೇವತೆಯನ್ನುದ್ದೇಶಿಸಿ ಜಲಮಧ್ಯದಲ್ಲಿ ಉದಕವನ್ನು ಎಸೆಯಬೇಕು.

ಸತಿಲಂ ಸಹಿರಣ್ಯಂ ಚ ಸಾಕ್ಷತಂ ವಿಧಿಪೂರ್ವಕಂ ।
ಅವತೀರ್ಯ ತತಃ ಸರ್ವಂ ಬ್ರಾಹ್ಮಣೇಭ್ಯೋ ನಿವೇದಯೇತ್ ॥ ೨೯ ॥
ಯತ್ಫಲಂ ಪ್ರಾಪ್ಯತೇ ಪಶ್ಚಾತ್ತದಿಹೈಕಮನಾಃ ಶೃಣು ॥ ೩೦ ॥
ಅಜಾನತಾ ಜಾನತಾ ವಾ ಯತ್ಪಾಪಂ ತು ಭವೇತ್ಕೃತಂ ।
ತತ್ಸರ್ವಂ ನಾಶಯೇನ್ಮರ್ತ್ಯೋ ದಾನಸ್ಯಾಸ್ಯ ಪ್ರಭಾವತಃ ॥ ೩೧ ॥
ಯಾವನ್ಮಾತ್ರಂ ಕೃತಂ ಪಾಪಮತೀತಂ ನೃಪಸತ್ತಮ ।
ತಾವನ್ಮಾತ್ರಂ ಕ್ಷಯಂ ಯಾತಿ ತುಲಾಪುರುಷದಾನತಃ ॥ ೩೨ ॥
ಈಶ್ವರಾಣಾಂ ಸಮಾದಿಷ್ಟಂ ಕಾಯಕ್ಲೇಶಭಯಾತ್ಮನಾಂ ।
ಪುರಶ್ಚರಣಮೇತದ್ಧಿ ದಾನಂ ತೌಲ್ಯಸಮುದ್ಭವಂ ॥ ೩೩ ॥
ಏತದ್ದತ್ತಂ ದಿಲೀಪೇನ ಕಾರ್ತವೀರ್ಯೇಣ ಭೂಪತೇ ।
ಪೃಥುನಾ ಪುರುಕುತ್ಸೇನ ತಥಾಽನ್ಯೈರಪಿ ಪಾರ್ಥಿವೈಃ ॥ ೩೪ ॥
ಏತತ್ಪುಣ್ಯಂ ಪ್ರಶಸ್ಯಂ ಚ ಸರ್ವಕಾಮಪ್ರದಂ ನೃಣಾಂ ।
ತುಲಾಪುರುಷದಾನಂ ಚ ಸರ್ವೋಪದ್ರವನಾಶನಂ ॥ ೩೫ ॥
ಆಧಯೋ ವ್ಯಾಧಯೋ ನಸ್ಯುರ್ನ ವೈಧವ್ಯಂ ಗದೋದ್ಭವಂ ।
ಸಂಜಾಯತೇ ನೃಪಶ್ರೇಷ್ಠ ನ ವಿಯೋಗಃ ಸ್ವಬಂಧುಭಿಃ ।
ತುಲಾಪುರುಷದಾನಸ್ಯ ಫಲಮೇತದುದಾಹೃತಂ ॥ ೩೬ ॥

---

೨೯. ಬಳಿಕ ಇಳಿದು ಆ ದ್ರವ್ಯವನ್ನು ತಿಲ, ಹಿರಣ್ಯ, ಅಕ್ಷತಸಹಿತವಾಗಿ ವಿಧಿಯಂತೆ ಬ್ರಾಹ್ಮಣರಿಗೆ ದಾನ ಮಾಡಬೇಕು.

೩೦. ಅದರಿಂದ ಲಭಿಸುವ ಫಲವನ್ನು ಚಿತ್ತೈಕಾಗ್ರ್ಯದಿಂದ ಕೇಳು.

೩೧. ಈ ದಾನದ ಪ್ರಭಾವದಿಂದ ಮಾನವನು ತಾನು ತಿಳಿದು ಅಥವಾ ತಿಳಿಯದೆ ಮಾಡಿದ ಪಾಪವನ್ನು ಪರಿಹರಿಸಿಕೊಳ್ಳುವನು.

೩೨. ಈ ತುಲಾಪುರುಷದಾನದಿಂದ ಹಿಂದೆ ಮಾನವನು ಮಾಡಿದ ಪಾಪವೆಲ್ಲ ಪರಿಹಾರವಾಗುವುದು.

೩೩–೩೪. ಕಾಯಕ್ಲೇಶದಿಂದ ಭಯಪಡುವ ಧನಿಕರಿಗೆ ಈ ತುಲಾಪುರುಷ ದಾನವು ಪುರಶ್ಚರಣರೂಪವಾದುದು. ದಿಲೀಪ, ಕಾರ್ತವೀರ್ಯ, ಪೃಥು, ಪುರುಕುತ್ಸ ಮತ್ತು ಇತರ ರಾಜರು ಈ ತುಲಾಪುರುಷದಾನವನ್ನು ಮಾಡಿರುವರು.

೩೫. ಈ ತುಲಾಪುರುಷದಾನವು ಮಾನವರಿಗೆ ಶ್ರೇಷ್ಠವೂ, ಪುಣ್ಯಕರವೂ, ಸಕಲೇಷ್ಟಾರ್ಥಗಳನ್ನು ನೀಡುವುದೂ, ಎಲ್ಲ ತೊಂದರೆಗಳನ್ನು ನಾಶಗೊಳಿಸುವುದೂ ಆಗಿರುವುದು.

೩೬. ಇದರಿಂದ ಮನೋವ್ಯಾಧಿ, ರೋಗ, ವೈಧವ್ಯ, ರೋಗದಿಂದುಂಟಾದ ದುಃಖ ಇವುಗಳುಂಟಾಗುವುದಿಲ್ಲ. ಬಂಧುಗಳ ವಿಯೋಗವು ಸಂಭವಿಸುವುದಿಲ್ಲ. ಇದು ತುಲಾಪುರುಷದಾನದ ಫಲವಾಗಿರುವುದು.

ತುಲಾಪುರುಷದಾನಸ್ಯ ಪ್ರದತ್ತಸ್ಯ ನೃಪೋತ್ತಮ ।
ನ ಶಕ್ಯತೇ ಕಥಯಿತುಂ ಫಲಂ ಯತ್ಸ್ಯಾತ್ಕಲೌ ಯುಗೇ ॥ ೩೭ ॥
ದಕ್ಷಿಣಾಮೂರ್ತಿಮಾಸಾದ್ಯ ಸಿದ್ಧೇಶ್ವರವಿಭೋಃ ಪುರಃ ।
ಯಃ ಪ್ರಯಚ್ಛತಿ ಭೂಪಾಲ ಸಹಸ್ರಗುಣಿತಂ ಫಲಂ ॥ ೩೮ ॥
ತಸ್ಮಾತ್ಸರ್ವಪ್ರಯತ್ನೇನ ಪ್ರಾಪ್ಯ ಸಿದ್ಧೇಶ್ವರಂ ವಿಭುಂ ।
ತುಲಾಪುರುಷದಾನಂ ಚ ಕರ್ತವ್ಯಂ ಸುವಿವೇಕಿನಾ ॥ ೩೯ ॥
ಏಕತ್ರ ಸರ್ವತೀರ್ಥಾನಿ ಸರ್ವಾಣ್ಯಾಯತನಾನಿ ಚ ।
ಹಾಟಕೇಶ್ವರಜೇ ಕ್ಷೇತ್ರೇ ಕಥಿತಾನಿ ಸ್ವಯಂಭುವಾ ॥ ೪೦ ॥
ಸಿದ್ಧೇಶ್ವರಃ ಸುರಶ್ರೇಷ್ಠ ಏಕತ್ರ ಸಮುದಾಹೃತಃ ।
ತಸ್ಮಿನ್ ದೃಷ್ಟೇ ತಥಾ ಸ್ಪೃಷ್ಟೇ ಪೂಜಿತೇ ನೃಪಸತ್ತಮ ।
ಸರ್ವೇಷಾಂ ಲಭತೇ ಮರ್ತ್ಯಃ ಫಲಂ ಯತ್ಪರಿಕೀರ್ತಿತಂ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತುಲಾಪುರುಷದಾನಮಾಹಾತ್ಮ್ಯವರ್ಣನಂ" ನಾಮ
ಸಪ್ತಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

೩೭. ಕಲಿಯುಗದಲ್ಲಿ ತುಲಾಪುರುಷದಾನವನ್ನು ಮಾಡುವುದರಿಂದಾಗುವ ಫಲವನ್ನು ಹೇಳಲು ಸಾಧ್ಯವಿಲ್ಲ.

೩೮. ಸಿದ್ಧೇಶ್ವರನ ಮುಂದೆ ದಕ್ಷಿಣಾಮೂರ್ತಿಯನ್ನುದ್ದೇಶಿಸಿ ತುಲಾಪುರುಷ ದಾನವನ್ನು ಮಾಡಿದರೆ ಅದು ಸಾವಿರ ಮಡಿಯಷ್ಟು ಹೆಚ್ಚುಫಲವನ್ನು ಕೊಡುವುದು.

೩೯. ಆದುದರಿಂದ ವಿವೇಕಿಯು ಸಿದ್ಧೇಶ್ವರನೆಡೆಗೆ ಹೋಗಿ ತುಲಾಪುರುಷ ದಾನವನ್ನು ಮಾಡಬೇಕು.

೪೦. ಬ್ರಹ್ಮನು ಹಾಟಕೇಶ್ವರಕ್ಷೇತ್ರವೊಂದರಲ್ಲಿಯೇ ಸಕಲ ತೀರ್ಥಗಳೂ, ದೇವಾಲಯಗಳೂ ಇರುವುವು ಎಂದು ಹೇಳಿರುವನು.

೪೧. ಒಂದೆಡೆಯಲ್ಲಿರುವ ಸಿದ್ಧೇಶ್ವರನ ದರ್ಶನ, ಸ್ಪರ್ಶನ, ಪೂಜೆಯಿಂದಲೇ ಮಾನವನು ಸಕಲ ತೀರ್ಥಕ್ಷೇತ್ರಗಳ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತುಲಾಪುರುಷದಾನಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

### ಪೃಥ್ವೀದಾನಮಾಹಾತ್ಮ್ಯವರ್ಣನಂ

ಆನರ್ತ ಉವಾಚ:—

ಕರ್ಮಣಾ ಕೇನ ಮರ್ತ್ಯೇ ಚ ನರಾಣಾಂ ಜಾಯತೇ ವದ ।
ಚಕ್ರವರ್ತಿತ್ವಮಖಿಲಂ ಸರ್ವಶತ್ರುವಿಮರ್ದನಂ ॥ ೧ ॥

ಭರ್ತೃಯಜ್ಞ ಉವಾಚ:—

ದುರ್ಲಭಂ ಭೂಮಿಪಾಲತ್ವಂ ಸರ್ವಪಾಪೈರ್ನರಾಧಿಪ ।
ತಪೋಭಿರ್ನಿಯಮೈರ್ದಾನೈಸ್ತಥಾಽನ್ಯೈಶ್ಚ ಶುಭೈರ್ವ್ರತೈಃ ॥ ೨ ॥
ಯಃ ಪುನರ್ಭೂಪತಿರ್ಭೂತ್ವಾ ಪೃಥ್ವೀಂ ದದ್ಯಾದ್ಧಿರಣ್ಮಯೀಂ ।
ಗೌತಮೇಶ್ವರದೇವಸ್ಯ ಪುರತಃ ಶ್ರದ್ಧಯಾನ್ವಿತಃ ।
ಚಕ್ರವರ್ತೀ ಭವೇತ್ಸೂನನಮೇವಮಾಹ ಪಿತಾಮಹಃ ॥ ೩ ॥
ಮಾಂಧಾತಾ ಧುಂಧುಮಾರಶ್ಚ ಹರಿಶ್ಚಂದ್ರಃ ಪುರೂರವಾಃ ।
ಭರತಃ ಕಾರ್ತವೀರ್ಯಶ್ಚ ಷಡೇತೇ ಚಕ್ರವರ್ತಿನಃ ॥ ೪ ॥
ಪೃಥ್ವೀದಾನಂ ಪುರಾ ಕೃತ್ವಾ ಗೌತಮೇಶ್ವರಸನ್ನಿಧೌ ।
ದತ್ವಾ ಹಿರಣ್ಮಯೀಂ ಪೃಥ್ವೀಂ ಸಾರ್ವಭೌಮಾಸ್ತತಃ ಸ್ಥಿತಾಃ ॥ ೫ ॥

---

## ಕನ್ನಡದ ಅನುವಾದ

### ಪೃಥ್ವೀದಾನಮಾಹಾತ್ಮ್ಯವರ್ಣನ

೧. ಆನರ್ತನು ಹೇಳುತ್ತಾನೆ:—ಮಾನವರಿಗೆ ಯಾವ ಕಾರ್ಯದಿಂದ ಸಕಲ ಶತ್ರುಗಳನ್ನು ನಾಶಗೊಳಿಸುವ ಚಕ್ರವರ್ತಿತ್ವವುಂಟಾಗುವುದು.

೨. ಭರ್ತೃಯಜ್ಞನು ಹೇಳುತ್ತಾನೆ:—ದೊರೆಯೆ! ಪಾಪಿಗಳಿಗೆ ದೊರೆತನವು ದುರ್ಲಭವಾದುದು. ಅದು ತಪಸ್ಸು, ನಿಯಮ, ದಾನ, ಶುಭವ್ರತಗಳಿಂದ ಸಿಕ್ಕತಕ್ಕುದಲ್ಲ.

೩. ದೊರೆಯಾದವನು ಗೌತಮೇಶ್ವರನ ಮುಂದೆ ಶ್ರದ್ಧೆಯಿಂದ ಭೂದಾನ ಮಾಡಿದರೆ ಚಕ್ರವರ್ತಿಯಾಗುವನೆಂದು ಪಿತಾಮಹನು ಹೇಳಿರುವನು.

೪–೫. ಮಾಂಧಾತೃ, ಧುಂಧುಮಾರ, ಹರಿಶ್ಚಂದ್ರ, ಪುರೂರವ, ಭರತ, ಕಾರ್ತವೀರ್ಯ ಈ ಆರುಮಂದಿ ಚಕ್ರವರ್ತಿಗಳು ಹಿಂದೆ ಗೌತಮೇಶ್ವರನ ಸನ್ನಿಧಿಯಲ್ಲಿ ಸುವರ್ಣವನ್ನೂ ಭೂಮಿಯನ್ನೂ ದಾನಮಾಡಿ ಸಾರ್ವಭೌಮರಾದರು.

ಆನರ್ತ ಉವಾಚ :—

ಭಗವನ್ ಕೇನ ವಿಧಿನಾ ದಾತವ್ಯಾ ಸಾ ವಸುಂಧರಾ ।
ಅಹಂ ದಾಸ್ಯಾಮಿ ತಾಂ ನೂನಂ ಶ್ರದ್ಧಾ ಮೇ ಮಹತೀ ಸ್ಥಿತಾ ॥ ೬ ॥

ಭರ್ತೃಯಜ್ಞ ಉವಾಚ :—

ಕಾರ್ಯಾ ಪಲಶತೇನೋರ್ವೀ ವೃತ್ತಾಕಾರಾ ನೃಪೋತ್ತಮ ।
ತದರ್ಧೇನಾಽಥವಾ ಶಕ್ತ್ಯಾ ಪಂಚವಿಂಶತ್ಪಲಾತ್ಮಿಕಾ ॥ ೭ ॥
ಧರಾದಾನೇ ಮಹಾರಾಜ ವಿತ್ತಶಾಠ್ಯಂ ವಿವರ್ಜಯೇತ್ ॥ ೮ ॥
ನೈವ ಪಂಚಪಲಾದರ್ವಾಕ್ಕೃದಾತವ್ಯಾ ಕಥಂಚನ ।
ಲವಣೇಕ್ಷು ಸುರಾಸರ್ಪಿರ್ದಧಿದುಗ್ಧ ಜಲೋದ್ಭವಾಃ ।
ಸಮುದ್ರಾಃ ಸಪ್ತ ಚೈತಾಂಸ್ತು ಕಕ್ಷಾಯಾಂ ತತ್ರ ದರ್ಶಯೇತ್ ॥ ೯ ॥
ಜಂಬೂ ಪ್ಲಕ್ಷ ಕುಶ ಕ್ರೌಂಚ ಶಾಕ ಶಾಲ್ಮಲಿ ಪುಷ್ಕರಾಃ ।
ಸಮುದ್ರಾನ್ ಸರಿತಃ ಸಪ್ತದ್ವೈಗುಣ್ಯೇನ ಪ್ರಕಲ್ಪಯೇತ್ ॥ ೧೦ ॥
ಮಹೇಂದ್ರೋ ಮಲಯಃ ಸಹ್ಯೋ ಹಿಮವಾನ್ ಗಂಧಮಾದನಃ ।
ವಿಂಧ್ಯಃ ಶೃಂಗೀ ಚ ಸಪ್ತೈವ ಕಲ್ಪಯೇತ್ಕುಲಪರ್ವತಾನ್ ॥ ೧೧ ॥
ಮಧ್ಯೇ ಪ್ರಕಲ್ಪಯೇನ್ಮೇರುಂ ದಿಕ್ಷುವಿಷ್ಕಂಭಪರ್ವತಾನ್ ।
ಜಂಬೂ ನ್ಯಗ್ರೋಧ ನೀಪಾಂಶ್ಚ ಪ್ಲಕ್ಷಶ್ಚೈವ ತಥಾ ದ್ರುಮಾನ್ ॥ ೧೨ ॥

---

೬. ಆನರ್ತನು ಹೇಳುತ್ತಾನೆ:—ಪೂಜ್ಯನೆ! ಭೂಮಿಯನ್ನು ಯಾವ ವಿಧಿಯಿಂದ ದಾನ ಮಾಡಬೇಕು? ನಾನು ಭೂದಾನ ಮಾಡುವೆನು. ನನಗೆ ಅತ್ಯಂತ ಶ್ರದ್ಧೆಯುಂಟಾಗಿರುವುದು.

೭. ಭರ್ತೃಯಜ್ಞನು ಹೇಳುತ್ತಾನೆ:—ನೂರು, ಐವತ್ತು ಅಥವಾ ಇಪ್ಪತ್ತೈದು ತೊಲೆ ತೂಕದ ವರ್ತುಲಾಕಾರದ ಭೂಮಿಯನ್ನು ಮಾಡಿಸಬೇಕು.

೮–೯. ಮಹಾರಾಜ! ಭೂಮಿಯನ್ನು ದಾನ ಮಾಡುವಾಗ ವಿತ್ತಶಾಠ್ಯವನ್ನು ಮಾಡಬಾರದು. ಐದು ತೊಲೆಗಳಿಗಿಂತ ಕಡಿಮೆ ದಾನ ಮಾಡಬಾರದು. ಆ ಭೂಮಿಯ ಮೂಲೆಯಲ್ಲಿ ಉಪ್ಪು, ಕಬ್ಬು, ಮದ್ಯ, ಆಜ್ಯ, ಮೊಸರು, ಹಾಲು, ನೀರು ಇವುಗಳ ಸಮುದ್ರಗಳನ್ನು ತೋರಿಸಬೇಕು.

೧೦. ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ ದ್ವೀಪಗಳನ್ನೂ, ನದಿಗಳನ್ನೂ ಇಮ್ಮಡಿಯಾಗಿ ರಚಿಸಬೇಕು.

೧೧–೧೨. ಮಹೇಂದ್ರ, ಮಲಯ, ಸಹ್ಯ, ಹಿಮವಾನ್, ಗಂಧಮಾದನ, ವಿಂಧ್ಯ, ಶೃಂಗಿ ಈ ಸಪ್ತಪರ್ವತಗಳನ್ನೂ, ಮಧ್ಯದಲ್ಲಿ ಮೇರು, ವಿಷ್ಕಂಭಪರ್ವತಗಳನ್ನೂ, ಜಂಬೂ, ಆಲ, ನೀಪ, ಪ್ಲಕ್ಷವೃಕ್ಷಗಳನ್ನೂ, ಗಂಗಾದಿ ನದಿಗಳನ್ನೂ

ಗಂಗಾದ್ಯಾಃ ಸರಿತಸ್ತತ್ರ ಪ್ರಾಧಾನ್ಯೇನ ಪ್ರಕಲ್ಪಯೇತ್ ।
ಏವಂ ನಿರ್ಮಾಪ್ಯ ವಸುಧಾಂ ಸರ್ವಾಂ ಹೇಮಮಯೀಂ ನೃಪ ॥ ೧೩ ॥
ಮಂಡಪಂ ಕಾರಯೇತ್ಪಶ್ಚಾದ್ಯಥಾಪೂರ್ವಂ ಪ್ರಕಲ್ಪಿತಂ ॥ ೧೪ ॥
ಕುಂಡಾನಿ ತೋರಣಾನ್ಯೇವ ಬ್ರಾಹ್ಮಣ ಗ್ರಹಪೂಜನೇ ।
ಪೂರ್ವವತ್ಸಕಲಂ ಕೃತ್ವಾ ಮಧ್ಯೇ ವೇದಿಂ ಪ್ರಕಲ್ಪಯೇತ್ ॥ ೧೫ ॥
ತತ್ರ ಸಂಸ್ಥಾಪಯೇತ್ಪೃಥ್ವೀಂ ಪಂಚಗವ್ಯೇನ ಪಾರ್ಥಿವ ।
ಯಥೋಕ್ತಮಂತ್ರೈಸ್ತಲ್ಲಿಂಗೈಸ್ತತಃ ಶುದ್ಧೋದಕೇನ ತು ॥ ೧೬ ॥
ಇಮಂ ಮೇ ಗಂಗೇ ಯಮುನೇ ಪಂಚನದ್ಯಸ್ತ್ರಿಪುಷ್ಕರಂ ।
ಶ್ರೀಸೂಕ್ತಂ ಪಾವಮಾನಂ ಚ ಹೈಮೀಂ ಚ ತದನಂತರಂ ॥ ೧೭ ॥
ಸ್ನಾನಕರ್ಮಣಿ ಯೋಗ್ಯಾಂಶ್ಚ ಸ್ವಾದಿಷ್ಠಾಯನಮುತ್ತಮಂ ॥ ೧೮ ॥
ಏವಂ ಸಂಸ್ನಾಪ್ಯ ವಿಧಿವದ್ವಾಸಾಂಸಿ ಪರಿಧಾಪಯೇತ್ ।
ಯುವಾಸುವಾಸಾ ಮಂತ್ರೇಣ ಸೂಕ್ಷ್ಮಾಣಿ ವಿವಿಧಾನಿ ಚ ॥ ೧೯ ॥
ಯೇ ಭೂತಾನಾಮಧೀತ್ಯೇವಂ ತತಃ ಪ್ರೋಕ್ಷ್ಯ ಪ್ರಪೂಜಯೇತ್ ।
ಧೂರಸೀತಿ ಚ ಮಂತ್ರೇಣ ಧೂಪಂ ದದ್ಯಾತ್ಸಮಾಹಿತಃ ॥ ೨೦ ॥
ಅಗ್ನಿರ್ಜ್ಯೋತೀತಿ ಮಂತ್ರೇಣ ಕುರ್ಯಾದಾರಾರ್ತಿಕಂ ತತಃ ।
ಅಹಮಸ್ಮೀತಿ ಮಂತ್ರೇಣ ಸಪ್ತಧಾನ್ಯಂ ಪ್ರಕಲ್ಪಯೇತ್ ॥ ೨೧ ॥

---

ಮುಖ್ಯವಾಗಿ ರಚಿಸಬೇಕು. ಹೀಗೆ ಸಂಪೂರ್ಣವಾಗಿ ಸುವರ್ಣದಿಂದ ಭೂಮಿಯನ್ನು ನಿರ್ಮಿಸಿ ಮೊದಲಿನಂತೆಯೇ ಮಂಡಪವನ್ನು ರಚಿಸಬೇಕು.

೧೫. ಕುಂಡ, ತೋರಣ, ಬ್ರಾಹ್ಮಣ, ಗ್ರಹಪೂಜೆ ಇವುಗಳನ್ನೆಲ್ಲ ಮಾಡಿ ನಡುವೆ ವೇದಿಯನ್ನು ರಚಿಸಬೇಕು.

೧೬–೨೧. ಅದರಲ್ಲಿ ಪೃಥ್ವಿಯನ್ನು ಸ್ಥಾಪಿಸಿ ಪಂಚಗವ್ಯಸ್ನಾನವನ್ನೂ, ಶುದ್ಧೋದಕಸ್ನಾನವನ್ನೂ ಮಾಡಿಸಿ "ಇಮಂ ಮೇ ಗಂಗೆ ಯಮುನೆ" ಎಂಬ ಪಂಚನದೀಸೂಕ್ತ, ತ್ರಿಪುಷ್ಕರಸೂಕ್ತ, ಶ್ರೀಸೂಕ್ತ, ಪವಮಾನಸೂಕ್ತ, ಸ್ವರ್ಣಘರ್ಮಾನುವಾಕ ಮೊದಲಾದ ಅಭಿಷೇಕ ಸೂಕ್ತಗಳಿಂದಲೂ ಅಭಿಷೇಕಮಾಡಿ "ಯುವಾಸುವಾಸೇ"ತ್ಯಾದಿ ಮಂತ್ರದಿಂದ ವಿಧಿಯಂತೆ ಬಗೆಬಗೆಯ ಸೂಕ್ಷ್ಮವಸ್ತ್ರಗಳನ್ನು ಸಮರ್ಪಿಸಿ "ಯೇಭೂತಾನಾಮಿ"ತ್ಯಾದಿ ಮಂತ್ರದಿಂದ ಪೂಜಿಸಬೇಕು. "ಧೂರಸೀ"ತ್ಯಾದಿ ಮಂತ್ರದಿಂದ ಧೂಪವನ್ನಿತ್ತು "ಅಗ್ನಿರ್ಜ್ಯೋತಿ"ರಿತ್ಯಾದಿ ಮಂತ್ರದಿಂದ ಆರತಿಯನ್ನು ಮಾಡಿ "ಅಹಮಸ್ಮೀ"ತ್ಯಾದಿ ಮಂತ್ರದಿಂದ ಸಪ್ತಧಾನ್ಯಗಳನ್ನು ಅರ್ಪಿಸಬೇಕು.

ಏವಂ ಕೃತ್ವಾಽಖಿಲಂ ತಸ್ಯಾ ಯಜಮಾನಃ ಸಿತಾಂಬರಃ ।
ಪುರಃ ಸ್ಥಿತೋಂಜಲಿಂ ಬದ್ಧ್ವಾ ಮಂತ್ರಾನೇತಾನುದಾಹರೇತ್ ॥ ೨೨ ॥
ತ್ವಯಾ ಸಂಧಾರ್ಯತೇ ವಿಶ್ವಂ ಜಗದೇತಚ್ಚರಾಚರಂ ।
ತವ ದಾನಂ ಕರಿಷ್ಯಾಮಿ ಸಾನ್ನಿಧ್ಯಂ ಕುರು ಮೇದಿನಿ ॥ ೨೩ ॥
ಶರೀರೇಷ್ವಪಿ ಭೂತಾನಾಂ ತ್ವಂ ದೇವಿ ಪ್ರಥಮಂ ಸ್ಥಿತಾ ।
ತತಶ್ಚಾಽನ್ಯಾನಿ ಭೂತಾನಿ ಜಲಾದೀನಿ ವಸುಂಧರೇ ॥ ೨೪ ॥
ಯೇ ತ್ವಾಂ ಯಚ್ಛಂತಿ ತೇ ಭೂಯಸ್ತ್ವಾಂ ಲಭಂತೇ ನ ಸಂಶಯಃ ।
ಇಹಲೋಕೇ ಪರೇ ಚೈವ ಪಾರ್ಥಿವಂ ರೂಪಮಾಶ್ರಿತಾ ॥ ೨೫ ॥
ಏವಂ ಸ್ತುತ್ವಾ ಸಮಾದಾಯ ತೋಯಂ ಹೇಮಾಕೃತಿಂ ನೃಪ ।
ವಾಸುದೇವಂ ಹೃದಿ ಸ್ಥಾಪ್ಯ ಮಂತ್ರೇಣಾನೇನ ಕಲ್ಪಯೇತ್ ॥ ೨೬ ॥
ಪಾತಾಲಾದುದ್ಧೃತಾ ಯೇನ ಪೃಥ್ವೀ ಸಾ ಲೋಕಕಾರಿಣಾ ।
ಅಸ್ಯಾ ದಾನೇನ ಚ ಸದಾ ಪ್ರಿಯತಾಂ ಮೇ ಜನಾರ್ದನಃ ॥ ೨೭ ॥
ಏವಮುಚ್ಚಾರ್ಯ ತತ್ತೋಯಂ ತೋಯಮಧ್ಯೇ ಪರಿಕ್ಷಿಪೇತ್ ।
ನ ಭೂಮೌ ನೈವಹಸ್ತೇ ಚ ಬ್ರಾಹ್ಮಣಸ್ಯ ನೃಪೋತ್ತಮ ॥ ೨೮ ॥
ತತೋ ವಿಸರ್ಜಯೇದ್ದೇವೀಂ ಮಂತ್ರೇಣಾನೇನ ಭಾಗಶಃ ।
ಆಗತಾ ಚ ಯಥಾನ್ಯಾಯಂ ಪೂಜಿತಾ ಚ ಯಥಾವಿಧಿ ॥ ೨೯ ॥

---

೨೨. ಶ್ವೇತವಸ್ತ್ರಧಾರಿಯಾದ ಯಜಮಾನನು ಹೀಗೆ ಎಲ್ಲವನ್ನೂ ಮಾಡಿ ಮುಂದೆ ಕೈಮುಗಿದುಕೊಂಡು ಈ ಮಂತ್ರಗಳನ್ನು ಹೇಳಬೇಕು.

೨೩. ಭೂಮಿಯೆ! ನೀನು ಈ ಚರಾಚರ ಜಗತ್ತನ್ನು ಧರಿಸಿರುವೆ. ನಿನ್ನನ್ನು ದಾನಮಾಡುವೆನು. ಇದರಲ್ಲಿ ಸನ್ನಿಹಿತಳಾಗು.

೨೪–೨೫. ದೇವಿ! ನೀನು ಪ್ರಾಣಿಗಳ ದೇಹಗಳಲ್ಲಿ ಇರುವೆ. ಅನಂತರ ಇತರ ಜಲಾದಿಭೂತಗಳು ಇರುವುವು. ನಿನ್ನನ್ನು ದಾನ ಮಾಡುವವರು ಇಹಪರ ಲೋಕಗಳಲ್ಲಿ ರಾಜನ ರೂಪವನ್ನು ಧರಿಸಿ ಮರಳಿ ನಿನ್ನನ್ನು ಪಡೆಯುವರು.

೨೬. ಹೀಗೆ ಭೂಮಿಯನ್ನು ಸ್ತುತಿಸಿ ಚಿನ್ನದಂತಿರುವ ನೀರನ್ನು ತೆಗೆದುಕೊಂಡು ಮನಸ್ಸಿನಲ್ಲಿ ವಿಷ್ಣುವನ್ನು ಧ್ಯಾನಿಸುತ್ತ ಈ ಮಂತ್ರವನ್ನುಚ್ಚರಿಸಬೇಕು.

೨೭. ನಿನ್ನನ್ನು ಪಾತಾಳದಿಂದ ಎತ್ತಿದವನೂ, ಲೋಕವನ್ನು ಸೃಷ್ಟಿಸುವವನೂ ಆದ ವಿಷ್ಣುವು ಈ ಭೂದಾನದಿಂದ ಪ್ರೀತನಾಗಲಿ.

೨೮. ನರೇಂದ್ರ! ಹೀಗೆ ಹೇಳಿ ಆ ನೀರನ್ನು ನೀರಿನ ಮಧ್ಯದಲ್ಲಿ ಎಸೆಯಬೇಕು. ಭೂಮಿಯಲ್ಲಾಗಲಿ, ಬ್ರಾಹ್ಮಣನ ಕೈಯಲ್ಲಾಗಲಿ ಹಾಕಕೂಡದು.

೨೯–೩೦. ಬಳಿಕ ಭೂದೇವಿಯನ್ನು ಈ ಮಂತ್ರದಿಂದ ವಿಸರ್ಜಿಸಬೇಕು. "ನ್ಯಾಯದಂತೆ ಬಂದು ವಿಧಿಯಂತೆ ಪೂಜಿತಳಾದ ನೀನು ನಮ್ಮ ಹಿತಕ್ಕಾಗಿ

ಅಸ್ಮಾಕಂ ತ್ವಂ ಹಿತಾರ್ಥಾಯ ಯತ್ರೇಷ್ಟಂ ತತ್ರ ಗಮ್ಯತಾಂ ।
ಉಸ್ರಾ ವೇದೇತಿ ಮಂತ್ರೇಣ ಸಮುಚ್ಚಾರ್ಯ ತತಃ ಪರಂ ।
ಬ್ರಾಹ್ಮಣೇಭ್ಯಃ ಪ್ರದಾತವ್ಯಾ ಸಂವಿಭಜ್ಯ ನರಾಧಿಪ ॥ ೩೦ ॥
ಏವಂ ತೇ ಸರ್ವಮಾಖ್ಯಾತಂ ಪೃಥಿವೀದಾನಮುತ್ತಮಂ ।
ಶೃಣುಯಾತ್ಪಾರ್ಥಿವೋ ಭಾವೀ ದಾತಾ ಜನ್ಮನಿ ಜನ್ಮನಿ ॥ ೩೧ ॥
ಯೋ ರಾಜಾ ಪೃಥಿವೀಂ ದದ್ಯಾದ್ವಿಧಿನಾನೇನ ಪಾರ್ಥಿವ ।
ರಾಜ್ಯಭ್ರಂಶೋ ನ ವಂಶೇಽಪಿ ತಸ್ಯ ಸಂಜಾಯತೇ ಕ್ವಚಿತ್ ॥ ೩೨ ॥
ರಾಜ್ಯಭ್ರಂಶಸಮೋಪೇತಾ ಯೇ ದೃಶ್ಯಂತೇ ಮಹೀಭುಜಃ ।
ನ ತೈರ್ವಸುಂಧರಾ ದತ್ತಾ ಬ್ರಾಹ್ಮಣಾನಾಂ ಧೃತಾತ್ಮನಾಂ ॥ ೩೩ ॥
ತಸ್ಮಾತ್ಸರ್ವಪ್ರಯತ್ನೇನ ಪೃಥ್ವೀದಾನಂ ಸಮಾಚರೇತ್ ।
ನ ಹರೇತ್ಪರದತ್ತಾಂ ಚ ಕಥಂಚಿದಪಿ ಮೇದಿನೀಂ ॥ ೩೪ ॥
ಏತತ್ಪುಣ್ಯಂ ಪ್ರಶಸ್ಯಂ ಚ ಪೃಥಿವೀದಾನಮುತ್ತಮಂ ।
ಶೃಣ್ವತಾಮಪಿ ರಾಜೇಂದ್ರ ತದ್ದೇಹಾದ್ಯಘನಾಶನಂ ॥ ೩೫ ॥
ಆಸ್ತಾಂ ತಾವತ್ಪ್ರದಾನಂ ಚ ಪೃಥಿವ್ಯಾಃ ಪೃಥಿವೀಪತೇಃ ।
ದಾತುಃ ಸಂಪ್ರೇರಣಂ ಯಸ್ಯಾ ಅಜ್ಞಾನೌಘವಿನಾಶನಂ ॥ ೩೬ ॥

---

ಇಷ್ಟಬಂದ ಸ್ಥಳಕ್ಕೆ ಹೋಗು.'' ತರುವಾಯ "ಉಸ್ರಾವೇದೇ" ತ್ಯಾದಿ ಮಂತ್ರವನ್ನುಚ್ಚರಿಸಿ ಆ ಭೂಮಿಯನ್ನು ವಿಭಾಗಿಸಿ ಬ್ರಾಹ್ಮಣರಿಗೆ ದಾನ ಮಾಡಬೇಕು.

೩೧. ಹೀಗೆ ನಿನಗೆ ಉತ್ತಮವಾದ ಭೂದಾನವನ್ನು ಹೇಳಿದ್ದೇನೆ. ಇದನ್ನು ಕೇಳಿದವನು ಪ್ರತಿಜನ್ಮದಲ್ಲಿಯೂ ದಾನ ಮಾಡುವ ರಾಜನಾಗುವನು.

೩೨. ದೊರೆಯೆ! ಈ ವಿಧಿಯಿಂದ ಭೂಮಿಯನ್ನು ದಾನ ಮಾಡಿದವನ ವಂಶದಲ್ಲಿ ಯಾವಾಗಲೂ ರಾಜ್ಯಭ್ರಂಶವಾಗುವುದಿಲ್ಲ.

೩೩. ಭೂಮಿಯಲ್ಲಿ ರಾಜ್ಯಭ್ರಷ್ಟರಾಗಿ ಕಾಣುತ್ತಿರುವ ದೊರೆಗಳು ಜಿತೇಂದ್ರಿಯರಾದ ಬ್ರಾಹ್ಮಣರಿಗೆ ಭೂಮಿಯನ್ನು ದಾನ ಮಾಡಲಿಲ್ಲ.

೩೪. ಆದುದರಿಂದ ಭೂಮಿಯನ್ನು ದಾನ ಮಾಡಬೇಕು. ಇತರರು ಕೊಟ್ಟ ಭೂಮಿಯನ್ನು ತೆಗೆದುಕೊಳ್ಳಕೂಡದು.

೩೫. ಪುಣ್ಯಕರವೂ, ಶ್ರೇಷ್ಠವೂ ಆದ ಈ ಉತ್ತಮ ಭೂದಾನ ವಿಧಾನವನ್ನು ಕೇಳುವವರಿಗೆ ದೇಹವು ಹುಟ್ಟಿದ ಮೊದಲ್ಗೊಂಡು ಮಾಡಿದ ಪಾಪವು ಪರಿಹಾರವಾಗುವುದು.

೩೬. ರಾಜನು ಭೂಮಿಯನ್ನು ದಾನ ಮಾಡುವುದರಿಂದಾಗುವ ಫಲವು ಹಾಗಿರಲಿ. ದಾನ ಮಾಡುವವನನ್ನು ಪ್ರೇರಿಸುವವನ ಅಜ್ಞಾನವೂ ಪರಿಹಾರವಾಗುವುದು.

ರೂಪವಾನ್ ಸುಭಗಶ್ಚೈವ ತಥಾ ಚ ಪ್ರಿಯದರ್ಶನಃ ।
ಆಧಿವ್ಯಾಧಿವಿನಿರ್ಮುಕ್ತಃ ಪುತ್ರಪೌತ್ರಸಮನ್ವಿತಃ ॥ ೩೭ ॥
ಮೇಧಾವೀ ಜಾಯತೇ ಮರ್ತ್ಯೋ ದಾನಸ್ಯಾಽಸ್ಯ ಪ್ರಭಾವತಃ ।
ಇತ್ಥಂ ಭೂತಾ ಮಹಾರಾಜ ಕೃತ್ವಾ ರಾಜ್ಯಮಕಂಟಕಂ ॥ ೩೮ ॥
ಪ್ರೀತಾ ವಿಷ್ಣೋಃ ಪದಂ ಯಾಂತಿ ಶಾಶ್ವತಂ ಯನ್ನಿರಾಮಯಂ ।
ಅನ್ಯತ್ರಾಽಪಿ ಧರಾದಾನಾತ್ಪ್ರಕುರ್ಯಾಚ್ಚಕ್ರವರ್ತಿತಾಂ ॥ ೩೯ ॥
ಏಕಜನ್ಮಾಂತರಂ ಯಾವತ್ಸಮ್ಯಗ್ದತ್ತಂ ನೃಪೋತ್ತಮಃ ।
ಗೌತಮೇಶ್ವರದೇವಸ್ಯ ಯತ್ಪುರಾ ಪುರತಃ ಕೃತಂ ॥ ೪೦ ॥
ಸಪ್ತಜನ್ಮಾಂತರಂ ಯಾವತ್ಪ್ರಕರೋತಿ ನ ಸಂಶಯಃ ।
ತಸ್ಮಾತ್ಸರ್ವಪ್ರಯತ್ನೇನ ತತ್ರ ದೇಯಾ ಮಹೀ ನೃಪ ॥ ೪೧ ॥

ಇತಿ ಶ್ರೀ ಸ್ಕಾಂದೇಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪೃಥ್ವೀದಾನಮಾಹಾತ್ಮ್ಯವರ್ಣನಂ"
ನಾಮಾಽಷ್ಟಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

೩೭–೩೯. ಈ ದಾನದ ಪ್ರಭಾವದಿಂದ ಮಾನವನು ಸುಂದರನೂ, ಸುಭಗನೂ, ಪ್ರಿಯವಾದ ನೋಟವುಳ್ಳವನೂ, ಆಧಿವ್ಯಾಧಿಗಳಿಲ್ಲದವನೂ, ಪುತ್ರಪೌತ್ರರಿಂದ ಕೂಡಿದವನೂ, ಬುದ್ಧಿವಂತನೂ ಆಗುವನು. ಮಹಾರಾಜ! ಇಂತಹವರು ಸಂತೋಷದಿಂದ ನಿಷ್ಕಂಟಕರಾಜ್ಯವನ್ನಾಳಿ ಶಾಶ್ವತವೂ, ರೋಗವಿಲ್ಲದಿರುವುದೂ ಆದ ಸ್ಥಾನವನ್ನು ಹೊಂದುವರು. ಬೇರೆ ಜನ್ಮದಲ್ಲಿಯೂ ಭೂಮಿದಾನದಿಂದ ಚಕ್ರವರ್ತಿಯಾಗುವರು.

೪೦–೪೧. ಗೌತಮೇಶ್ವರನ ಮುಂದೆ ಒಂದು ಜನ್ಮದಲ್ಲಿ ಮಾಡಿದ ಈ ದಾನದಿಂದ ಏಳು ಜನ್ಮಗಳಲ್ಲಿ ಚಕ್ರವರ್ತಿಯಾಗುವನು. ಆದುದರಿಂದ ಪ್ರಯತ್ನಿಸಿ ಭೂಮಿಯನ್ನು ದಾನ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪೃಥ್ವೀದಾನಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ಕಪಾಲಮೋಚನೇಶ್ವರೋತ್ಪತ್ತಿವರ್ಣನಂ

**ಸೂತ ಉವಾಚ :—**

ಕಪಾಲೇಶಸ್ಯ ಮಾಹಾತ್ಮ್ಯಂ ಶ್ರೂಯತಾಮಧುನಾ ದ್ವಿಜಾಃ ।
ಚತುರ್ಥಸ್ಯ ಮಹಾಭಾಗಾಸ್ತತ್ರಕ್ಷೇತ್ರೇ ಸ್ಥಿತಸ್ಯ ಚ ॥ ೧ ॥
ಶ್ರುತಮಾತ್ರೇಣ ಯೇನಾಽತ್ರ ನರಃ ಪಾಪಾತ್ಪ್ರಮುಚ್ಯತೇ ॥ ೨ ॥

**ಋಷಯ ಊಚುಃ :—**

ತ್ರಯಾಣಾಂ ಚೈವ ಲಿಂಗಾನಾಂ ಪೂರ್ವೋಕ್ತಾನಾಂ ಮಹಾಮತೇ ।
ಶ್ರುತಾಽಸ್ಮಾಭಿಃ ಸಮುತ್ಪತ್ತಿಃ ಕಪಾಲೇಶ್ವರವರ್ಜಿತಾ ।
ಕೇನಾಽಯಂ ಸ್ಥಾಪಿತೋ ದೇವಃ ಕಪಾಲೇಶ್ವರ ಸಂಜ್ಞಿತಃ ॥ ೩ ॥
ತಸ್ಮಿನ್ ದೃಷ್ಟೇ ಫಲಂ ಕಿಂ ಸ್ಯಾತ್ಪೂಜಿತೇ ಚ ವದಸ್ವ ನಃ ॥ ೪ ॥

**ಸೂತ ಉವಾಚ :—**

ಇಂದ್ರೇಣ ಸ್ಥಾಪಿತಃ ಪೂರ್ವಮೇಷ ದೇವೋ ದ್ವಿಜೋತ್ತಮಾಃ ।
ಕಪಾಲೇಶ್ವರಸಂಜ್ಞಸ್ತು ಬ್ರಹ್ಮಹತ್ಯಾ ವಿಮುಕ್ತಯೇ ॥ ೫ ॥

---

## ಕನ್ನಡದ ಅನುವಾದ

### ಕಪಾಲಮೋಚನೇಶ್ವರೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜರೆ! ಈಗ ಆ ಕ್ಷೇತ್ರದಲ್ಲಿರುವ ನಾಲ್ಕನೆಯ ಕಪಾಲೇಶ್ವರನ ಮಾಹಾತ್ಮ್ಯವನ್ನು ಕೇಳಿರಿ.

೨. ಇದನ್ನು ಕೇಳುವುದರಿಂದಲೇ ಮಾನವನು ಪಾಪಮುಕ್ತನಾಗುವನು.

೩. ಋಷಿಗಳು ಹೇಳುತ್ತಾರೆ:—ನಾವು ಕಪಾಲೇಶ್ವರನನ್ನು ಬಿಟ್ಟು ಹಿಂದೆ ಹೇಳಿದ ಮೂರು ಲಿಂಗಗಳ ಮಾಹಾತ್ಮ್ಯವನ್ನು ಕೇಳಿದ್ದೇವೆ; ಈ ಕಪಾಲೇಶ್ವರನನ್ನು ಯಾರು ಪ್ರತಿಷ್ಠೆ ಮಾಡಿದರು?

೪. ಅವನನ್ನು ದರ್ಶನ ಮಾಡುವುದರಿಂದಲೂ, ಪೂಜಿಸುವುದರಿಂದಲೂ ಉಂಟಾಗುವ ಫಲವನ್ನು ನಮಗೆ ಹೇಳು.

೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಈ ಕಪಾಲೇಶ್ವರದೇವನನ್ನು ಇಂದ್ರನು ಬ್ರಹ್ಮಹತ್ಯಾ ಪರಿಹಾರಕ್ಕಾಗಿ ಹಿಂದೆ ಪ್ರತಿಷ್ಠೆ ಮಾಡಿರುವನು.

ತತ್ಪ್ರಭಾವಾತ್ಸುರಶ್ರೇಷ್ಠಸ್ತಯಾ ಮುಕ್ತೋ ದ್ವಿಜೋತ್ತಮಾಃ ।
ಪಾಪಂ ಪೂರುಷದಾನೇನ ಇತ್ಯೇಷಾ ವೈದಿಕೀ ಶ್ರುತಿಃ ॥ ೬ ॥
ಅನ್ಯೋಽಪಿ ಯೋ ನರಸ್ತಂ ಚ ಪೂಜಯಿತ್ವಾ ಪ್ರಭಕ್ತಿತಃ ।
ಪ್ರಯಚ್ಛೇದ್ಬ್ರಾಹ್ಮಣೇಂದ್ರಾಯ ಶುದ್ಧಯೇ ಪಾಪಪೂರುಷಂ ।
ಸ ಮುಚ್ಯೇತ್ಪಾತಕಾದ್ಘೋರಾದ್ಬ್ರಹತ್ಯಾ ಸಮುದ್ಭವಾತ್ ॥ ೭ ॥
ದಕ್ಷಿಣಾಮೂರ್ತಿಮಾಸಾದ್ಯ ಪ್ರೋವಾಚೇದಂ ಬೃಹಸ್ಪತಿಃ ।
ಹಾಟಕೇಶ್ವರಜೇ ಕ್ಷೇತ್ರೇ ಗತ್ವಾ ತಂ ವೀಕ್ಷ್ಯ ಶಂಕರಂ ॥ ೮ ॥
ಯೋ ದದಾತಿ ಶರೀರಂ ಚ ಕೃತ್ವಾ ಹೇಮಮಯಂ ತತಃ ।
ಮುಚ್ಯತೇ ನಾಽತ್ರ ಸಂದೇಹಃ ಪಾತಕೈಃ ಪೂರ್ವಸಂಯುತೈಃ ॥ ೯ ॥

ಋಷಯ ಊಚುಃ:—

ಬ್ರಹ್ಮಹತ್ಯಾ ಕಥಂ ಜಾತಾ ಸುರೇಂದ್ರಸ್ಯ ಹಿ ಸೂತಜ ।
ಏತನ್ನಃ ಸರ್ವಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೧೦ ॥
ಕಪಾಲೇಶ್ವರಸಂಜ್ಞಸ್ತು ಕಥಂ ದೇವೋಽತ್ರ ಸಂಸ್ಥಿತಃ ।
ಬ್ರಹ್ಮಹತ್ಯಾ ಕಥಂ ನಷ್ಟಾ ತತ್ಪ್ರಭಾವಾದ್ದಿವಸ್ಪತೇ ॥ ೧೧ ॥
ಸ ಪಾಪಪೂರುಷೋದೇಯೋ ವಿಧಿನಾ ಕೇನ ಸೂತಜ ।
ಕೈರ್ಮಂತ್ರೈಃ ಸಹಿ ದೇಯಃ ಸ್ಯಾತ್ಕೈಃ ಕೈಶ್ಚೈವಹ್ಯುಪಸ್ಕರೈಃ ॥ ೧೨ ॥

---

೬. ಅವನು ಆ ಕಪಾಲೇಶ್ವರನ ಪ್ರಭಾವದಿಂದ ಆ ಬ್ರಹ್ಮಹತ್ಯೆಯಿಂದ ಮುಕ್ತನಾದನು. ಪೂರುಷದಾನದಿಂದ ಪಾಪವು ಪರಿಹಾರವಾಗುವುದೆಂದು ವೇದವಾಕ್ಯವಿರುವುದು.

೭. ಇತರ ಮಾನವನೂ ಆ ಕಪಾಲೇಶ್ವರನನ್ನು ಭಕ್ತಿಯಿಂದ ಪೂಜಿಸಿ ಶುದ್ಧಿಗಾಗಿ ಬ್ರಾಹ್ಮಣೋತ್ತಮನಿಗೆ ಪಾಪಪೂರುಷನನ್ನು ದಾನ ಮಾಡಬೇಕು. ಅದರಿಂದವನು ಘೋರವಾದ ಬ್ರಹ್ಮಹತ್ಯೆಯಿಂದುಂಟಾಗುವ ಪಾತಕದಿಂದ ಮುಕ್ತನಾಗುವನು.

೮–೯. ಇದನ್ನು ಬೃಹಸ್ಪತಿಯು ದಕ್ಷಿಣಾಮೂರ್ತಿಯೆಡೆಗೆ ಹೋಗಿ ಹೇಳಿರುವನು. ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಆ ಶಂಕರನನ್ನು ನೋಡಿ ಸುವರ್ಣಮಯ ಶರೀರವನ್ನು ರಚಿಸಿ ದಾನ ಮಾಡುವವನು ಹಿಂದೆ ಮಾಡಿದ ಪಾಪದಿಂದ ಮುಕ್ತನಾಗುವನು.

೧೦. ಋಷಿಗಳು ಹೇಳುತ್ತಾರೆ:—ಸೂತ! ಇಂದ್ರನಿಗೆ ಬ್ರಹ್ಮಹತ್ಯೆಯು ಹೇಗುಂಟಾಯಿತು. ನಮಗೆ ಇದನ್ನೆಲ್ಲ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

೧೧–೧೨. ಕಪಾಲೇಶ್ವರನು ಇಲ್ಲಿ ಹೇಗೆ ನೆಲೆಸಿದನು ? ಅವನ ಪ್ರಭಾವದಿಂದ ಇಂದ್ರನ ಬ್ರಹ್ಮಹತ್ಯೆಯು ಹೇಗೆ ಪರಿಹಾರವಾಯಿತು ? ಯಾವ ವಿಧಿಯಿಂದ ಪಾಪಪೂರುಷನನ್ನು ದಾನ ಮಾಡಬೇಕು? ಅದರ ಮಂತ್ರ, ಉಪಕರಣಗಳಾವುವು ?

ದರ್ಶನಾತ್ಪೂಜನಾಚ್ಚಾಽಪಿ ಕಿಂ ಫಲಂ ಜಾಯತೇ ನೃಣಾಂ ।
ಅದತ್ವಾ ಸ್ವಶರೀರಂ ವಾ ಪೂಜಯಾ ಕೇವಲಂ ವದ ॥ ೧೩ ॥

ಸೂತ ಉವಾಚ :—

ಅಹಂ ವಃ ಕೀರ್ತಯಿಷ್ಯಾಮಿ ಕಥಾಮೇತಾಂ ಪುರಾತನೀಂ ।
ಯಾಂ ಶ್ರುತ್ವಾಽಪಿ ಮಹಾಭಾಗಾ ನರಃ ಪಾಪಾತ್ಪ್ರಮುಚ್ಯತೇ ॥ ೧೪ ॥
ಅಜ್ಞಾನಾ ಜ್ಞಾನತೋವಾಽಪಿ ವಿಹಿತೈರನ್ಯಜನ್ಮನಿ ।
ದೃಷ್ಟಮಾತ್ರೇಣ ಯೇನಾಽತ್ರ ಪಾತಕಾತ್ತದ್ದಿನೋದ್ಭವಾತ್ ।
ಮುಚ್ಯತೇ ನಾಽತ್ರ ಸಂದೇಹಃ ಸತ್ಯಮೇತನ್ಮಯೋದಿತಂ ॥ ೧೫ ॥
ಪುರಾ ತ್ವಷ್ಟುಃ ಸುತೋ ಜಜ್ಞೇ ವೃತ್ರೋ ಹಿ ದ್ವಿಜಸತ್ತಮಾಃ ।
ಪುಲೋಮದುಹಿತುಃ ಪಾರ್ಶ್ವಾದ್ವಿಭಾವರ್ಯಾಃ ಸುವೀರ್ಯವಾನ್ ॥ ೧೬ ॥
ಸ ಬಾಲ ಏವ ಧರ್ಮಾತ್ಮಾ ಆಸೀತ್ಸರ್ವಜನಪ್ರಿಯಃ ।
ದಾನವಂ ಭಾವಮುತ್ಸೃಜ್ಯ ದ್ವಿಜಭಕ್ತಿಪರಾಯಣಃ ॥ ೧೭ ॥
ಸ ಗತ್ವಾ ಪುಷ್ಕರಾರಣ್ಯಂ ಪರಮೇಣ ಸಮಾಧಿನಾ ।
ತೋಷಯಾಮಾಸ ದೇವೇಶಂ ಪದ್ಮಜಂ ತಪಸಿ ಸ್ಥಿತಃ ॥ ೧೮ ॥
ತಸ್ಯ ತುಷ್ಟಃ ಸ್ವಯಂ ಬ್ರಹ್ಮಾ ದೃಷ್ಟಿಗೋಚರಮಾಗತಃ ।
ಪ್ರೋವಾಚ ವರದೋಽಸ್ಮೀತಿ ಕಿಂ ತೇ ಕೃತ್ಯಂ ಕರೋಮ್ಯಹಂ ॥ ೧೯ ॥

---

೧೩. ಆ ಕಪಾಲೇಶ್ವರನ ದರ್ಶನ ಪೂಜೆಗಳಿಂದ ಮಾನವರಿಗೆ ಯಾವ ಫಲ ವುಂಟಾಗುವುದು?

೧೪–೧೫. ಸೂತನು ಹೇಳುತ್ತಾನೆ:—ನಾನು ನಿಮಗೆ ಈ ಪುರಾತನ ಕಥೆಯನ್ನು ಹೇಳುತ್ತೇನೆ. ಮಹಾ ಭಾಗ್ಯಶಾಲಿಯೆ! ಈ ಕಥೆಯನ್ನು ಕೇಳಿದ ಮಾನವನು ಜ್ಞಾನದಿಂದಾಗಲಿ, ಅಜ್ಞಾನದಿಂದಾಗಲಿ ಇತರ ಜನ್ಮದಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು. ಇವನನ್ನು ದರ್ಶನಮಾಡುವುದರಿಂದಲೇ ನರನು ಆ ದಿನದ ಪಾಪದಿಂದ ಮುಕ್ತನಾಗುವನು. ನಾನು ಹೇಳಿರುವುದು ನಿಜ.

೧೬. ದ್ವಿಜವರ್ಯರೆ! ಹಿಂದೆ ಪುಲೋಮನ ಮಗಳಾದ ವಿಭಾವರಿಯಲ್ಲಿ ತ್ವಷ್ಟೃವಿನಿಂದ ವೀರನಾದ ವೃತ್ರನು ಹುಟ್ಟಿದನು.

೧೭. ಅವನು ಬಾಲಕನಾಗಿಯೇ ದಾನವಭಾವವನ್ನು ತ್ಯಜಿಸಿ ಧರ್ಮಿಷ್ಠನೂ, ಸಕಲ ಜನರಿಗೆ ಪ್ರಿಯನೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ ಆಗಿದ್ದನು.

೧೮. ಅವನು ಪುಷ್ಕರಾರಣ್ಯಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಮಾಡುತ್ತ ಅತಿಶಯ ಸಮಾಧಿಯಿಂದ ಬ್ರಹ್ಮನನ್ನು ಸಂತೋಷಗೊಳಿಸಿದನು.

೧೯. ಬ್ರಹ್ಮನು ಅವನಿಗೆ ಪ್ರತ್ಯಕ್ಷನಾಗಿ ವರವನ್ನು ಕೊಡುವೆನು, ನಿನ್ನ ಯಾವ ಕೆಲಸವನ್ನು ಮಾಡಲಿ ಎಂದನು.

ವೃತ್ರ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ಬ್ರಾಹ್ಮಣತ್ವಂ ಪ್ರಯಚ್ಛ ಮೇ ।
ಬ್ರಾಹ್ಮಣತ್ವಂ ಸಮಾಸಾದ್ಯ ಸಾಧಯಾಮಿ ಪರಂ ಪದಂ ॥ ೨೦ ॥
ತೇನ ಕಿಂಚಿದಸಾಧ್ಯಂ ನ ಬ್ರಾಹ್ಮಣ್ಯೇನ ಭವೇನ್ಮಮ ।
ಬ್ರಾಹ್ಮಣೇನ ಸಮಂ ಚಾಽನ್ಯನ್ನಕಿಂಚಿತ್ಪ್ರತಿಭಾತಿ ಮೇ ॥ ೨೧ ॥
ಪರಮಂ ದೈವತಂ ಕಿಂಚಿನ್ನವಿಪ್ರಾದ್ವಿದ್ಯತೇ ಪರಂ ।
ತಸ್ಮಾನ್ಮೇ ಹೃತ್ಸ್ಥಿತಂ ಸಾಽನ್ಯದಪಿ ರಾಜ್ಯಂ ತ್ರಿವಿಷ್ಟಪೇ ॥ ೨೨ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ತುಷ್ಟಸ್ತಸ್ಯ ಪಿತಾಮಹಃ ।
ಬ್ರಾಹ್ಮಣತ್ವಂ ಸ್ವಯಂ ದತ್ವಾ ತತಃ ಪ್ರೋವಾಚ ಸಾದರಂ ॥ ೨೩ ॥
ಮಯಾ ತ್ವಂ ವಿಹಿತೋ ವಿಪ್ರ ಪುತ್ರ ಪ್ರಕುರು ವಾಂಛಿತಂ ।
ಪ್ರಸಾದಯಸ್ವ ಸತತಂ ಬ್ರಾಹ್ಮಣಾನ್ ಬ್ರಹ್ಮವಿತ್ತಮಾನ್ ॥ ೨೪ ॥
ಬ್ರಾಹ್ಮಣೈಃ ಸುಪ್ರಸನ್ನೈಶ್ಚ ಪ್ರೀಯಂ ತೇ ಸರ್ವದೇವತಾಃ ।
ತಸ್ಮಾತ್ಸರ್ವಪ್ರಯತ್ನೇನ ಪೂಜನೀಯಾ ದ್ವಿಜೋತ್ತಮಾಃ ॥ ೨೫ ॥

---

೨೦. ವೃತ್ರನು ಹೇಳುತ್ತಾನೆ:—ಸ್ವಾಮಿ! ನೀನು ನನ್ನಲ್ಲಿ ಸಂತುಷ್ಟನಾಗಿದ್ದರೆ ನನಗೆ ಬ್ರಾಹ್ಮಣತ್ವವನ್ನು ಕೊಡು. ಅದರಿಂದ ನಾನು ಉತ್ತಮ ಪದವಿಯನ್ನು ಸಾಧಿಸುವೆನು.

೨೧. ಆ ಬ್ರಾಹ್ಮಣ್ಯದಿಂದ ನನಗೆ ಅಸಾಧ್ಯವಾದುದು ಯಾವುದೂ ಇಲ್ಲ. ಲೋಕದಲ್ಲಿ ಆ ಬ್ರಾಹ್ಮಣ್ಯಕ್ಕೆ ಸಮಾನವಾದುದು ಯಾವುದೂ ಇಲ್ಲವೆಂದು ತೋರುತ್ತದೆ.

೨೨. ಬ್ರಾಹ್ಮಣನಿಗಿಂತ ಉತ್ತಮ ದೇವತೆಯೂ ಇಲ್ಲ. ಆದುದರಿಂದ ನನಗೆ ದೇವರಾಜ್ಯವು ಬೇಕೆಂದು ಮನಸ್ಸಿನಲ್ಲಿಲ್ಲ.

೨೩. ಸೂತನು ಹೇಳುತ್ತಾನೆ:—ಪಿತಾಮಹನು ಅವನಲ್ಲಿ ಸಂತುಷ್ಟನಾಗಿ ಅವನಿಗೆ ಬ್ರಾಹ್ಮಣತ್ವವನ್ನು ಕೊಟ್ಟು ಪ್ರೀತಿಯಿಂದ ಇಂತೆಂದನು.

೨೪. ಮಗು! ನಾನು ನಿನ್ನನ್ನು ಬ್ರಾಹ್ಮಣನನ್ನಾಗಿ ಮಾಡಿರುವೆನು. ನಿನ್ನ ಇಷ್ಟವನ್ನು ಸಾಧಿಸು. ಯಾವಾಗಲೂ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರನ್ನು ಸಂತೋಷಗೊಳಿಸು.

೨೫. ಬ್ರಾಹ್ಮಣರು ಪ್ರಸನ್ನರಾದರೆ ಸಕಲ ದೇವತೆಗಳೂ ಪ್ರಸನ್ನರಾಗುವರು. ಆದುದರಿಂದ ಪ್ರಯತ್ನದಿಂದ ಬ್ರಾಹ್ಮಣೋತ್ತಮರನ್ನು ಪೂಜಿಸಬೇಕು.

ಸೂತ ಉವಾಚ:—

ಏವಮುಕ್ತಸ್ತದಾ ತೇನ ವೃತ್ರೋಽಭೂದ್ಬ್ರಾಹ್ಮಣಸ್ತತಃ ।
ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮೋಪೇತೋ ಬ್ರಹ್ಮಚರ್ಯಪರಾಯಣಃ ॥ ೨೬ ॥
ತಸ್ಮಿಂಸ್ತಪಸಿ ಸಂಸ್ಥೇ ತು ಹತಾ ಇಂದ್ರೇಣ ದಾನವಾಃ ।
ವಂಶೋಚ್ಛೇದೇ ಸಮಾಪನ್ನೇ ದಾನವಾನಾಂ ಮಹಾತ್ಮನಾಂ ॥ ೨೭ ॥
ತತಸ್ತೇ ದಾನವಾಃ ಸರ್ವೇ ಪರಾಭೂತಾಃ ಸುರೈಸ್ತತಃ ।
ಸ್ವಂ ಸ್ಥಾನಂ ಸಂಪರಿತ್ಯಜ್ಯ ದುಃಖಶೋಕಸಮನ್ವಿತಾಃ ॥ ೨೮ ॥
ತನ್ಮಾತರಂ ಪುರಸ್ಕೃತ್ವಾ ತತ್ಸಕಾಶಮುಪಾಗತಾಃ ।
ಸ ಚ ತಾಂ ಮಾತರಂ ದೃಷ್ಟ್ವಾ ವೃತಾಂ ತೈಶ್ಚ ಸಮನ್ವಿತಃ ॥ ೨೯ ॥
ದಾನವೈಶ್ಚ ಪರಾಭೂತೈಸ್ತಥಾಭೂತಾಂ ಚ ಮಾತರಂ ।
ಕಿಮಾಗಮನಕೃತ್ಯಂ ಚ ದುಃಖಿತಾನಾಂ ಮಮಾಂತಿಕೇ ॥ ೩೦ ॥

ದಾನವಾ ಊಚುಃ:—

ವಯಂ ದೈವೈಃ ಪರಾಭೂತಾ ಭವಂತಂ ಶರಣಾಗತಾಃ ।
ಕ್ವ ಯಾಮೋಽನ್ಯತ್ರ ಚಾಽಸ್ಮಾಕಂ ತ್ವಾಂ ವಿನಾ ನಾಸ್ತಿ ಸಂಶ್ರಯಃ ॥ ೩೧ ॥
ತೇಷಾಂ ತದ್ವಚನಂ ಶ್ರುತ್ವಾ ವೃತ್ರಃ ಪ್ರೋವಾಚ ಸಾದರಂ ।
ದೇವಾನಹಂ ಹನಿಷ್ಯಾಮಿ ಗಮ್ಯತಾಂ ತತ್ರ ಮಾಚಿರಂ ॥ ೩೨ ॥
ತವಾಗಮನಕೃತ್ಯಂ ಚ ಮಾತಃ ಕಥಯ ಸಾಂಪ್ರತಂ ॥ ೩೩ ॥

---

೨೬. ಸೂತನು ಹೇಳುತ್ತಾನೆ:— ಬ್ರಹ್ಮನು ಹೀಗೆ ಹೇಳಲು ವೃತ್ರನು ಬ್ರಾಹ್ಮಣನಾಗಿ ಬ್ರಾಹ್ಮಣಕಾಂತಿಯಿಂದ ಕೂಡಿದವನೂ, ಬ್ರಹ್ಮಚರ್ಯನಿರತನೂ ಆದನು.

೨೭–೩೦. ಆ ವೃತ್ರನು ತಪಸ್ಸನ್ನು ಮಾಡುತ್ತಿರಲು ಇಂದ್ರನು ದಾನವರನ್ನು ಕೊಂದನು. ಮಹಾತ್ಮರಾದ ದಾನವರ ವಂಶನಾಶವುಂಟಾಗಲು ದೇವತೆಗಳಿಂದ ಪರಾಜಿತರಾದ ದಾನವರು ದುಃಖಗೊಂಡು ತಮ್ಮ ತಮ್ಮ ಸ್ಥಾನವನ್ನು ತೊರೆದು ವೃತ್ರನ ತಾಯಿಯನ್ನು ಮುಂದಿರಿಸಿಕೊಂಡು ಆ ವೃತ್ರನ ಹತ್ತಿರ ಬಂದರು. ಅವನು ಪರಾಜಿತರಾದ ದಾನವರೊಡನೆ ಬಂದ ಅಂತಹ ತಾಯಿಯನ್ನು ನೋಡಿ ದುಃಖಗೊಂಡ ನೀವು ನನ್ನ ಹತ್ತಿರ ಬರಲು ಕಾರಣವೇನು? ಎಂದು ಕೇಳಿದನು.

೩೧. ದಾನವರು ಹೇಳುತ್ತಾರೆ:—ದೇವತೆಗಳಿಂದ ಪರಾಜಿತರಾದ ನಾವು ನಿನ್ನನ್ನು ಮರೆಹೊಕ್ಕಿರುವೆವು. ನಾವು ಬೇರೆ ಎಲ್ಲಿಗೆ ಹೋಗೋಣ. ನಿನ್ನನ್ನು ಬಿಟ್ಟರೆ ನಮಗೆ ಬೇರೆ ಆಶ್ರಯವಿಲ್ಲ.

೩೨. ವೃತ್ರನು ಅವರ ಆ ಮಾತನ್ನು ಕೇಳಿ ಪ್ರೀತಿಯಿಂದ ಇಂತೆಂದನು- ನಾನು ದೇವತೆಗಳನ್ನು ಕೊಲ್ಲುವೆನು. ನೀವು ಶೀಘ್ರವಾಗಿ ಅಲ್ಲಿಗೆ ಹೋಗಿರಿ.

೩೩. ಅಮ್ಮ! ನೀನು ಈಗ ಇಲ್ಲಿಗೆ ಬರಲು ಕಾರಣವೇನು? ಹೇಳು.

ಮಾತೋವಾಚ :—

ತಥಾ ಕುರು ಮಹಾಭಾಗ ಶೀಘ್ರಂ ದಾರಪರಿಗ್ರಹಂ ।
ವಂಶವೃದ್ಧೌ ಪ್ರಮಾಣಂ ಚೇದ್ವಾಕ್ಯಂ ತವ ಮನೋದ್ಭವಂ ॥ ೩೪ ॥
ಏಷ ಏವ ಪರೋಧರ್ಮ ಏಷ ಏವ ಪರೋ ನಯಃ ।
ಪುತ್ರಸ್ಯ ಜನನೀವಾಕ್ಯಂ ಯತ್ಕರೋತಿ ಸಮಾಹಿತಃ ॥ ೩೫ ॥
ತಥಾ ಸ್ತ್ರೀಣಾಂ ಪತಿಂ ಮುಕ್ತ್ವಾ ನಾಽಸ್ಯಾಽಸ್ತಿ ಭುವಿ ದೇವತಾ ।
ಜನನ್ಯಾಂ ಜೀವಮಾನಾಯಾಂ ತಥೈವ ಚ ಸುತಸ್ಯ ಚ ॥ ೩೬ ॥
ಅತಿಕ್ರಮ್ಯ ಚ ಯಾ ನಾರೀ ಪತಿಂ ಧರ್ಮಪರಾ ಭವೇತ್ ।
ತತ್ಸರ್ವಂ ವಿಫಲಂ ತಸ್ಯಾ ಜಾಯತೇ ನಾಽತ್ರ ಸಂಶಯಃ ॥ ೩೭ ॥
ಪುತ್ರಃ ಸ್ವಜನನೀವಾಕ್ಯಂ ಯೋಽತಿಕ್ರಮ್ಯ ಯಥಾರುಚಿ ।
ಕರೋತಿ ಧರ್ಮಕೃತ್ಯಾನಿ ತಾನಿ ಸರ್ವಾಣಿ ತಸ್ಯ ಚ ॥ ೩೮ ॥
ಭವಂತಿ ಚ ತಥಾ ನೂನಂ ವೃಥಾ ಭಸ್ಮಹುತಂ ಯಥಾ ।
ಅರಣ್ಯೇ ರುದಿತಾನೀವ ಊಷರೇ ವಾಪಿತಾನಿ ಚ ॥ ೩೯ ॥
ಯಥೈವ ಬಧಿರಸ್ಯಾಗ್ರೇ ಗೀತಂ ನೃತ್ಯಮಚಕ್ಷುಷಃ ।
ತದ್ವನ್ಮಾತೃಮತಾದನ್ಯತ್ಕೃತಂ ಪುತ್ರಸ್ಯ ಧರ್ಮಜಂ ॥ ೪೦ ॥
ಸರ್ವಂ ಕರ್ಮ ನ ಸಂದೇಹಸ್ತೇನಾಽಹಂ ತ್ವಾಮುಪಾಗತಾ ।
ಬಂಧೂನಾಂ ವಚನಾತ್ಪುತ್ರ ದುಃಖಾರ್ತಾ ಚ ವಿಶೇಷತಃ ॥ ೪೧ ॥

---

೩೪. ತಾಯಿಯು ಹೇಳುತ್ತಾಳೆ:—"ಮಹಾಭಾಗ್ಯವಂತನೆ! ನನ್ನ ಮಾತು ನಿನಗೆ ಪ್ರಮಾಣವಾಗಿದ್ದರೆ ನೀನು ಬೇಗನೆ ವಂಶವೃದ್ಧಿಗಾಗಿ ಮದುವೆ ಮಾಡಿಕೊ.

೩೫—೩೬. ಮಗನಿಗೆ ತಾಯಿಯ ಮಾತನ್ನು ನಡೆಯಿಸುವುದೇ ಉತ್ತಮವಾದ ಧರ್ಮವೂ, ನೀತಿಯೂ ಆಗಿದೆ. ಹಾಗೆಯೇ ಸ್ತ್ರೀಯರಿಗೆ ಪತಿಯ ಹೊರತು ಬೇರೆ ದೇವತೆಯಿಲ್ಲ. ತಾಯಿಯು ಬದುಕಿರುವಾಗ ಮಗನಿಗೆ ಬೇರೆ ದೇವತೆಯಿಲ್ಲ.

೩೭. ನಾರಿಯು ಪತಿಯ ಮಾತನ್ನು ಮೀರಿ ಧರ್ಮನಿರತಳಾದರೆ ಅವಳ ಆ ಧರ್ಮಾನುಷ್ಠಾನವು ನಿಷ್ಫಲವಾಗುವುದು.

೩೮. ಮಗನೂ ತಾಯಿಯ ಮಾತನ್ನು ಮೀರಿ ಸ್ವೇಚ್ಛೆಯಾಗಿ ಧರ್ಮ ಕಾರ್ಯಗಳನ್ನು ಮಾಡಿದರೆ ಅವು ನಿಷ್ಫಲವಾಗುವುವು.

೩೯—೪೧. ಅವೆಲ್ಲ ಬೂದಿಯಲ್ಲಿ ಹೋಮಿಸಿದಂತೆಯೂ, ಅರಣ್ಯರೋದನ ದಂತೆಯೂ, ಬಂಜರು ಭೂಮಿಯಲ್ಲಿ ನೆಟ್ಟಂತೆಯೂ, ಕಿವುಡನ ಮುಂದೆ ಹಾಡಿ ದಂತೆಯೂ, ಕುರುಡನ ಮುಂದೆ ಕುಣಿದಂತೆಯೂ ವ್ಯರ್ಥವಾಗುವುವು. ಸಂದೇಹ ವಿಲ್ಲ. ಮಗು! ಆದುದರಿಂದ ದುಃಖಗೊಂಡ ನಾನು ಬಂಧುಗಳ ಮಾತಿನಂತೆ ನಿನ್ನೆಡೆಗೆ ಬಂದೆನು.

ಕಿಂ ವಾ ತೇ ಬಹುನೋಕ್ತೇನ ಭೂಯೋ ಭೂಯಶ್ಚ ಪುತ್ರಕ ।
ಆನೃಣ್ಯಂ ಜಾಯತೇ ಯದ್ವತ್ಪಿತೄಣಾಂ ತತ್ತಥಾ ಶೃಣು ॥ ೪೨ ॥
ತವ ವತ್ಸ ಪ್ರಮಾಣಂ ಚೇತ್ಕುರುಷ್ವ ಚ ವಚೋ ಮಮ ।
ತಸ್ಯಾಸ್ತದ್ವಚನಂ ಶ್ರುತ್ವಾ ವೃತ್ರಃ ಸಂಚಿಂತ್ಯ ಚೇತಸಿ ॥ ೪೩ ॥
ಶ್ರುತಿ ಸ್ಮೃತ್ಯುಕ್ತಮಾರ್ಗೇಣ ನ ಮಾತುರ್ವಿದ್ಯತೇ ಪರಂ ।
ಸ ತಥೇತಿ ಪ್ರತಿಜ್ಞಾಯ ಅಸಿನಾಯ ಪರಿಗ್ರಹಂ ॥ ೪೪ ॥
ತ್ವಷ್ಟಾ ತಸ್ಮೈ ದದೌ ಪ್ರೀತಸ್ತತೋ ರತ್ನಾನ್ಯನೇಕಶಃ ।
ಸಂಖ್ಯಾಹೀನಾನಿ ತಸ್ಯೈವ ಕುಪ್ಯಾಕುಪ್ಯಮನಂತಕಂ ॥ ೪೫ ॥
ಹಸ್ತ್ಯಶ್ವಯಾನ ಕೋಶಾಢ್ಯಂ ಸೋಽಭಿಷಿಕ್ತಃ ಪದೇ ನಿಜೇ ।
ದಾನವಾನಾಂ ಮಹಾವೀರ್ಯೋ ಬ್ರಾಹ್ಮಣ್ಯೇನ ಸಮನ್ವಿತಃ ॥ ೪೬ ॥
ಅಭಿಷಿಕ್ತಂ ತದಾ ವೃತ್ರಂ ಸ್ವರಾಜ್ಯೇ ತೇಽಸುರಾದಯಃ ।
ಶ್ರುತ್ವಾಽಭಿಷೇಕಂ ಸಂಹೃಷ್ಟಾಸ್ತಸ್ಯ ವೃತ್ರಸ್ಯ ಬಾಂಧವಾಃ ॥ ೪೭ ॥
ದಾನವಾಶ್ಚ ಸಮಾಜಗ್ಮುರ್ಯೇ ತತ್ರಾಸನ್ ಪುರೋಗತಾಃ ।
ಪಾತಾಲಾದ್ಗಿರಿದುರ್ಗಾಚ್ಚ ಸ್ಥಲದುರ್ಗೇಭ್ಯ ಏವ ಚ ।
ಕೃತವೈರಾಃ ಸಮಂ ದೇವೈಃ ಕೋಪೇನ ಮಹತಾವೃತಾಃ ॥ ೪೮ ॥
ತತಃ ಪ್ರೋತ್ಸಾಹಿತಃ ಸರ್ವೈರ್ದಾನವೈಃ ಸ ಮಹಾಬಲಃ ।
ಪ್ರಸ್ಥಿತಃ ಶತ್ರುನಾಶಾಯ ಮಹೇಂದ್ರಭವನಂ ಪ್ರತಿ ॥ ೪೯ ॥

---

೪೨. ಮಗು! ಮರಳಿ, ಮರಳಿ ಬಹುವಾಗಿ ಹೇಳಿ ಏನು ಪ್ರಯೋಜನ? ಹೇಗೆ ನೀನು ಪಿತೃಋಣಮುಕ್ತನಾಗುವೆ ಎಂಬುದನ್ನು ಕೇಳು.

೪೩-೪೪. ವತ್ಸ! ನಿನಗೆ ನನ್ನ ಮಾತು ಪ್ರಮಾಣವಾದರೆ ಅದನ್ನು ನೀನು ನಡಸು." ವೃತ್ರನು ಅವಳ ಆ ಮಾತನ್ನು ಕೇಳಿ ಶ್ರುತಿಸ್ಮೃತಿಗಳಲ್ಲಿ ಹೇಳಿದಂತೆ ತಾಯಿಗಿಂತ ಉತ್ತಮವಾದವರಿಲ್ಲ ಎಂದು ಮನಸ್ಸಿನಲ್ಲಿ ಆಲೋಚಿಸಿ ಹಾಗೆಯೇ ಆಗಲೆಂದು ಒಪ್ಪಿ ಮದುವೆ ಮಾಡಿಕೊಂಡನು.

೪೫-೪೬. ತ್ವಷ್ಟನು ಸಂತುಷ್ಟನಾಗಿ ಅವನಿಗೆ ಅನೇಕ ರತ್ನಗಳನ್ನೂ, ಚಿನ್ನ, ಬೆಳ್ಳಿ ಮೊದಲಾದುವುಗಳನ್ನೂ, ಆನೆ, ಕುದುರೆ, ವಾಹನ, ಬೊಕ್ಕಸಗಳನ್ನೂ ಕೊಟ್ಟು ಬ್ರಾಹ್ಮಣನಾದ ಅವನನ್ನು ತನ್ನ ಸ್ಥಾನದಲ್ಲಿ ಅಭಿಷೇಕ ಮಾಡಿದನು.

೪೭-೪೮. ಅವನು ರಾಜ್ಯಾಭಿಷಿಕ್ತನಾದುದನ್ನು ಕೇಳಿ ಸಂತೋಷಗೊಂಡ ಅವನ ಬಾಂಧವರೂ, ಹಿಂದೆ ಓಡಿಹೋದ ದೇವದ್ವೇಷಿಗಳಾದ ದಾನವರೂ ಪಾತಾಳ, ಗಿರಿದುರ್ಗ, ಸ್ಥಳದುರ್ಗ ಇವುಗಳಿಂದ ಅತಿ ಕುಪಿತರಾಗಿ ಅವನೆಡೆಗೆ ಬಂದರು.

೪೯. ಬಳಿಕ ಸಮಸ್ತ ದಾನವರೂ ಪ್ರೋತ್ಸಾಹಗೊಳಿಸಲು ಅತಿ ಬಲಿಷ್ಠನಾದ ಅವನು ಶತ್ರುನಾಶಕ್ಕಾಗಿ ಇಂದ್ರಭವನಕ್ಕೆ ತೆರಳಿದನು.

ಶಕ್ರೋಽಪಿ ವೃತ್ರಮಾಕರ್ಣ್ಯ ಸಮಾಯಾಂತಂ ಯುಯುತ್ಸಯಾ ।
ಸಮ್ಮುಖಃ ಪ್ರಯಯೌ ಹೃಷ್ಟಃ ಸರ್ವದೇವಸಮನ್ವಿತಃ ॥ ೫೦ ॥
ತತಃ ಸಮಭವದ್ಯುದ್ಧಂ ದೇವಾನಾಂ ದಾನವೈಃ ಸಹ ।
ಮೇರುಪೃಷ್ಠೇ ಸುವಿಸ್ತೀರ್ಣೇ ನಿತ್ಯಮೇವ ದಿವಾನಿಶಂ ॥ ೫೧ ॥
ನಿತ್ಯಂ ಪರಾಜಯೋ ಜಜ್ಞೇ ದೇವಾನಾಂ ದಾನವೈಃ ಸಹ ।
ತತೋಽವಾಚ ಗುರುಃ ಶಕ್ರ ಮಾ ಯುದ್ಧಂ ಕುರು ದೇವಪ ॥ ೫೨ ॥
ವೃತ್ರೋಽಯಂ ದಾರುಣೋ ಯುದ್ಧೇ ಬಲದ್ವಯಸಮನ್ವಿತಃ ।
ಚತ್ವಾರಶ್ಚಾಗ್ರತೋ ವೇದಾಃ ಪೃಷ್ಠತಃ ಸಶರಂ ಧನುಃ ॥ ೫೩ ॥
ತೇನಾ ಜೇಯತಮೋ ದೈತ್ಯಸ್ತ್ವಯೈವ ಚ ಮಹಾಹವೇ ।
ತಸ್ಮಾತ್ಸಂಧಾನಮೇತೇನ ತ್ವಂ ಕುರುಷ್ವ ಶಚೀಪತೇ ॥ ೫೪ ॥
ತತೋ ವಿಶ್ವಾಸಮಾಯಾತಂ ಜಹಿ ವಜ್ರೇಣ ದಾನವಂ ।
ಷಡುಪಾಯೈ ರಿಪುರ್ವಧ್ಯ ಇತಿ ಶಾಸ್ತ್ರ ನಿದರ್ಶನಂ ॥ ೫೫ ॥
ಭುಂಜಾನಶ್ಚ ಶಯಾನಶ್ಚ ದತ್ವಾ ಕನ್ಯಾಮಪಿ ಸ್ವಕಾಂ ।
ವಿಪ್ರದಾನೇನ ಸಂಯೋಜ್ಯ ಕೃತ್ವಾಽಪಿ ಶಪಥಂ ಗುರುಂ ।
ಮಾಯಾಪ್ರಪಂಚಮಾಸಾದ್ಯ ತಸ್ಮಾದೇವಂ ಸಮಾಚರ ॥ ೫೬ ॥

---

೫೦. ಇಂದ್ರನೂ ಯುದ್ಧಮಾಡಲು ಬಂದ ವೃತ್ರನನ್ನು ಕಂಡು ಸಂತೋಷಗೊಂಡವನಾಗಿ ಸಮಸ್ತ ದೇವತೆಗಳೊಡನೆ ಅವನಿಗೆ ಅಭಿಮುಖವಾಗಿ ಹೋದನು.

೫೧. ಅನಂತರ ದೇವತೆಗಳಿಗೆ ದಾನವರೊಡನೆ ಅತ್ಯಂತ ವಿಸ್ತೀರ್ಣವಾದ ಮೇರುಪರ್ವತದ ತಪ್ಪಲಲ್ಲಿ ಹಗಲು ರಾತ್ರಿ ಯುದ್ಧ ನಡೆಯಿತು.

೫೨. ದೇವತೆಗಳಿಗೆ ದಾನವರೊಡನೆ ನಿತ್ಯವೂ ಪರಾಜಯವುಂಟಾಯಿತು. ಆಗ ಬೃಹಸ್ಪತಿಯು ಇಂದ್ರನನ್ನು ಕುರಿತು, "ದೇವರಾಜ! ಯುದ್ಧಮಾಡಬೇಡ.

೫೩. ಈ ವೃತ್ರನು ಎರಡು ಬಲಗಳಿಂದ ಕೂಡಿದವನಾಗಿ ಯುದ್ಧದಲ್ಲಿ ಭಯಂಕರನಾಗಿರುವನು. ಇವನ ಮುಂದೆ ನಾಲ್ಕು ವೇದಗಳೂ, ಹಿಂದೆ ಬಾಣದಿಂದ ಸಹಿತವಾದ ಧನುಸ್ಸೂ ಇರುವುದು.

೫೪. ಆದುದರಿಂದ ಯುದ್ಧದಲ್ಲಿ ಈ ದೈತ್ಯನು ನಿನ್ನನ್ನು ಜಯಿಸುವನು. ಆದಕಾರಣ ಇವನೊಡನೆ ನೀನು ಸಂಧಿಯನ್ನು ಮಾಡಿಕೊ.

೫೫. ತರುವಾಯ ನಂಬಿಕೆಗೊಂಡ ಅವನನ್ನು ವಜ್ರಾಯುಧದಿಂದ ಕೊಲ್ಲು. ಶತ್ರುವನ್ನು ಆರು ಉಪಾಯಗಳಿಂದ ಕೊಲ್ಲಬೇಕೆಂದು ಶಾಸ್ತ್ರವು ಸಾರುತ್ತಿರುವುದು.

೫೬. ಭೋಜನಮಾಡುತ್ತಲೂ, ಮಲಗುತ್ತಲೂ, ತನ್ನ ಕನ್ಯೆಯನ್ನು ಕೊಟ್ಟು, ಬ್ರಾಹ್ಮಣನಿಗೆ ದಾನವನ್ನಿತ್ತು, ಗುರುವಿನ ಆಣೆಯನ್ನಿಟ್ಟು, ಕಪಟವನ್ನಾಚರಿಸಿ ಶತ್ರುವನ್ನು ಕೊಲ್ಲಬೇಕು. ಆದುದರಿಂದ ಹೀಗೆ ಮಾಡು."

ಇಂದ್ರ ಉವಾಚ :—

ಯದ್ಯೇವಂ ಚ ಸ್ವಯಂ ಗತ್ವಾ ತ್ವಂ ವಿಶ್ವಾಸೇ ನಿಯೋಜಯ ।
ತವ ವಾಕ್ಯೇನ ವಿಶ್ವಾಸಂ ನೂನಂ ಯಾಸ್ಯತಿ ದಾನವಃ ॥ ೫೭ ॥

ಸೂತ ಉವಾಚ :—

ಶಕ್ರಸ್ಯ ಮತಮಾಜ್ಞಾಯ ಪ್ರತಸ್ಥೇ ಚ ಬೃಹಸ್ಪತಿಃ ।
ಯತ್ರ ವೃತ್ರಃ ಸ್ಥಿತೋ ದೈತ್ಯೋ ಯುದ್ಧಾರ್ಥಂ ಕೃತನಿಶ್ಚಯಃ ॥ ೫೮ ॥
ವೃತ್ರೋಽಪಿ ತಂ ಸಮಾಲೋಕ್ಯ ಸ್ವಯಂ ಪ್ರಾಪ್ತಂ ಬೃಹಸ್ಪತಿಂ ।
ಸದೈವ ದ್ವಿಜಭಕ್ತಃ ಸ ಹೃಷ್ಟಾತ್ಮಾ ಸಮುಪದ್ಯತ ।
ವಿಶೇಷಾತ್ಪ್ರಣಿಪತ್ಯೋಚ್ಚೈರ್ವಾಕ್ಯಮೇತದಭಾಷತ ॥ ೫೯ ॥

ವೃತ್ರ ಉವಾಚ :—

ಸ್ವಾಗತಂ ತೇ ದ್ವಿಜಶ್ರೇಷ್ಠ ಕಿಂ ಕರೋಮಿ ಪ್ರಶಾಧಿ ಮಾಂ ।
ಪ್ರಿಯಾ ಮೇ ಬ್ರಾಹ್ಮಣಾ ಯಸ್ಮಾತ್ತಸ್ಮಾತ್ಕೀರ್ತಯ ಸಾಂಪ್ರತಂ ॥ ೬೦ ॥

ಬೃಹಸ್ಪತಿರುವಾಚ :—

ಸಂದಿಗ್ಧೋ ವಿಜಯೋ ಯುದ್ಧೇ ಯಸ್ಮಾದ್ದೈವೇನ ಸತ್ತಮ ।
ತಸ್ಮಾತ್ಕುರು ಮಹೇಂದ್ರೇಣ ವ್ಯವಸ್ಥಾಂ ವಚನಾನ್ಮಮ ॥ ೬೧ ॥
ತ್ವಂ ಭುಂಕ್ಷ್ವ ಭೂತಲಂ ಕೃತ್ಸ್ನಂ ಶಕ್ರಶ್ಚಾಽಪಿ ತ್ರಿವಿಷ್ಟಪಂ ।
ವ್ಯವಸ್ಥಯಾಽನಯಾ ನಿತ್ಯಂ ವರ್ತಿತವ್ಯಂ ಪರಸ್ಪರಂ ॥ ೬೨ ॥

---

೫೭. ಇಂದ್ರನು ಹೇಳುತ್ತಾನೆ:—ಹೀಗಾದರೆ ನೀನು ಹೋಗಿ ಅವನನ್ನು ವಿಶ್ವಾಸಗೊಳಿಸು. ನಿನ್ನ ಮಾತಿನಿಂದ ಆ ದಾನವನು ನಿಜವಾಗಿಯೂ ನಂಬುವನು.

೫೮. ಸೂತನು ಹೇಳುತ್ತಾನೆ:—ಬೃಹಸ್ಪತಿಯು ಶಕ್ರನ ಅಭಿಪ್ರಾಯವನ್ನರಿತು ಯುದ್ಧಮಾಡಲು ನಿಶ್ಚಯಿಸಿ ವೃತ್ರಾಸುರನೆಡೆಗೆ ಹೋದನು.

೫೯. ಯಾವಾಗಲೂ ಬ್ರಾಹ್ಮಣರಲ್ಲಿ ಭಕ್ತಿಯುಳ್ಳ ಆ ವೃತ್ರನು ತಾನಾಗಿ ಬಂದ ಬೃಹಸ್ಪತಿಯನ್ನು ಕಂಡು ಸಂತೋಷಗೊಂಡು ನಮಸ್ಕರಿಸಿ ಇಂತೆಂದನು.

೬೦. ವೃತ್ರನು ಹೇಳುತ್ತಾನೆ:—ದ್ವಿಜವರ್ಯನೆ! ನಿನಗೆ ಸುಖಾಗಮನವಾಗಲಿ. ಏನನ್ನು ಮಾಡಲಿ. ಆಜ್ಞೆಮಾಡು. ನನಗೆ ಬ್ರಾಹ್ಮಣರು ಪ್ರಿಯರಾದ್ದರಿಂದ ಈಗ ಅದನ್ನು ಹೇಳು.

೬೧. ಬೃಹಸ್ಪತಿಯು ಹೇಳುತ್ತಾನೆ:—ಸಾಧುವರ್ಯನೆ! ದೇವತೆಗಳೊಡನೆ ಯುದ್ಧದಲ್ಲಿ ಜಯವು ಸಂದಿಗ್ಧವಾದ್ದರಿಂದ ನನ್ನ ಮಾತಿನಿಂದ ನೀನು ಇಂದ್ರನೊಡನೆ ಒಂದು ನಿರ್ಣಯವನ್ನು ಮಾಡಿಕೊ.

೬೨. ನೀನು ಸಕಲ ಭೂಮಂಡಲವನ್ನು ಅನುಭವಿಸು. ಇಂದ್ರನು ದೇವಲೋಕವನ್ನಾಳಲಿ. ನೀವು ಈ ವ್ಯವಸ್ಥೆಯಿಂದ ಯಾವಾಗಲೂ ಇರಬೇಕು.

ವೃತ್ರ ಉವಾಚ :—

ಅಹಂ ತವ ವಚೋ ಬ್ರಹ್ಮನ್ ಕರಿಷ್ಯಾಮಿ ಸದೈವ ಹಿ ।
ಸಂಗಮಂ ಕುರು ಶಕ್ರೇಣ ಸಾಂಪ್ರತಂ ಮಮ ಸದ್ದ್ವಿಜ ॥ ೬೩ ॥

ಸೂತ ಉವಾಚ :—

ಅಥ ಶಕ್ರಂ ಸಮಾನೀಯ ಬೃಹಸ್ಪತಿರುದಾರಧೀಃ ।
ವೃತ್ರೇಣ ಸಹ ಸಂಧಾನಂ ಚಕ್ರೇ ಚೈವ ಪರಸ್ಪರಂ ॥ ೬೪ ॥
ಏಕಾರಿಮಿತ್ರತಾಂ ಗತ್ವಾ ತಾವುಭೌ ದೈತ್ಯದೇವಪೌ ।
ಪ್ರಹೃಷ್ಟೌ ಗತವಂತೌ ತೌ ತತಶ್ಚೈವ ನಿಜಂ ಗೃಹಂ ॥ ೬೫ ॥
ಅಥ ಶಕ್ರಶ್ಛಲಾನ್ವೇಷೀ ಸದಾ ವೃತ್ರಸ್ಯ ವರ್ತತೇ ।
ನ ಛಿದ್ರಂ ಲಭತೇ ಕ್ವಾಽಪಿ ವೀಕ್ಷಮಾಣೋಽಪಿ ಯತ್ನತಃ ॥ ೬೬ ॥
ಕಥಂಚಿದಪಿ ಸೋಽಭ್ಯೇತಿ ತತ್ಸಕಾಶಂ ಪುರಂದರಃ ।
ಕಿಂಚಿಚ್ಛಿದ್ರಂ ಸಮಾಸಾದ್ಯ ತತ್ಪ್ರತಾಪೇನ ದಹ್ಯತೇ ॥ ೬೭ ॥

ಇಂದ್ರ ಉವಾಚ :—

ನ ಶಕ್ನೋಮಿ ಚ ತಂ ದೈತ್ಯಂ ವೀಕ್ಷಿತುಂ ಚ ಕಥಂಚನ ।
ತೇಜಸಾ ಸರ್ವತೋ ವ್ಯಾಪ್ತಂ ತತ್ಕಥಂ ಸೂದಯಾಮ್ಯಹಂ ॥ ೬೮ ॥
ತಸ್ಮಾತ್ಕಂಚಿದುಪಾಯಂ ಮೇ ತದ್ವಧಾರ್ಥಂ ಪ್ರಕೀರ್ತಯ ।
ಯಥಾ ಶಕ್ನೋಮಿ ತತ್ಹಂತುಂ ತೇಜಸ್ತಸ್ಯ ದುರಾತ್ಮನಃ ॥ ೬೯ ॥

---

೬೩. ವೃತ್ರನು ಹೇಳುತ್ತಾನೆ:—ಬ್ರಾಹ್ಮಣನೆ! ನಾನು ನಿನ್ನ ಮಾತನ್ನು ಯಾವಾಗಲೂ ನಡಸುವೆನು. ನನಗೆ ಇಂದ್ರನೊಡನೆ ಸಂಗಮವನ್ನುಂಟುಮಾಡು.

೬೪–೬೫. ಸೂತನು ಹೇಳುತ್ತಾನೆ:— ಬಳಿಕ ಉದಾರಬುದ್ಧಿಯುಳ್ಳ ಬೃಹಸ್ಪತಿಯು ಇಂದ್ರನನ್ನು ಕರೆದುಕೊಂಡು ಬಂದು ವೃತ್ರನೊಡನೆ ಪರಸ್ಪರವಾಗಿ ಸಂಧಿಯನ್ನು ಮಾಡಿದನು. ಆ ದೈತ್ಯದೇವರಾಜರಿಬ್ಬರೂ ಪರಸ್ಪರ ಶತ್ರುಗಳಾಗಿದ್ದರೂ ಅತಿಶಯ ಮಿತ್ರರಾಗಿ ಸಂತೋಷದಿಂದ ತಮ್ಮ ತಮ್ಮ ಮನೆಗೆ ತೆರಳಿದರು.

೬೬. ಬಳಿಕ ಶಕ್ರನು ಯಾವಾಗಲೂ ವೃತ್ರನ ವಧೆಗೆ ಅವಕಾಶವನ್ನು ಹುಡುಕುತ್ತ ಪ್ರಯತ್ನದಿಂದ ನಿರೀಕ್ಷಿಸುತ್ತಿದ್ದರೂ ಅವಕಾಶವನ್ನು ಹೊಂದಲಿಲ್ಲ.

೬೭. ಇಂದ್ರನು ಹೇಗಾದರೂ ಒಂದು ಅವಕಾಶವನ್ನು ಹೊಂದಿ ಅವನೆಡೆಗೆ ಬಂದು ಅವನ ಪ್ರತಾಪದಿಂದ ಸುಡುತ್ತಿದ್ದನು.

೬೮. ಇಂದ್ರನು ಹೇಳುತ್ತಾನೆ:—ತೇಜಸ್ಸಿನಿಂದ ಸರ್ವತ್ರ ವ್ಯಾಪ್ತನಾದ ಆ ದೈತ್ಯನನ್ನು ನೋಡಲು ಸಮರ್ಥನಾಗುವುದಿಲ್ಲ. ಹೇಗೆ ಕೊಲ್ಲಲಿ.

೬೯. ಆದುದರಿಂದ ದುರಾತ್ಮನಾದ ಅವನ ತೇಜಸ್ಸನ್ನು ಸಹಿಸಿ ಅವನನ್ನು ಕೊಲ್ಲಲು ಒಂದುಪಾಯವನ್ನು ಹೇಳು.

ಸೂತ ಉವಾಚ:—

ತಸ್ಯ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಬೃಹಸ್ಪತಿಃ ।
ತತಃ ಪ್ರೋವಾಚ ತಂ ಶಕ್ರಂ ವಿನಯಾವನತಂ ಸ್ಥಿತಂ ॥ ೭೦ ॥

ಬೃಹಸ್ಪತಿರುವಾಚ:—

ತಸ್ಯ ಬ್ರಾಹ್ಮ್ಯಂ ಸ್ಥಿತಂ ತೇಜಃ ಸಮ್ಯಗ್ಗಾತ್ರೇ ಪುರಂದರ ।
ವೀಕ್ಷಿತುಂ ನೈವ ಶಕ್ನೋಷಿ ತೇನ ತ್ವಂ ತ್ರಿದಶಾಧಿಪ ॥ ೭೧ ॥
ತಥಾ ತೇ ಕೀರ್ತಯಿಷ್ಯಾಮಿ ತಸ್ಯೋಪಾಯಂ ವಧೋದ್ಭವಂ ।
ವಧಯಿಷ್ಯಸಿ ಯೇನಾಽತ್ರ ತಂ ತ್ವಂ ದಾನವಸತ್ತಮಂ ॥ ೭೨ ॥
ಪ್ರಾಚೀ ಸರಸ್ವತೀತೀರೇ ಪುಷ್ಕರಾರಣ್ಯಮಾಶ್ರಿತಃ ।
ದಧೀಚಿರ್ನಾಮ ವಿಪ್ರರ್ಷಿಃ ಶತಯೋಜನಮುಚ್ಛ್ರಿತಃ ॥ ೭೩ ॥
ತತ್ರ ನಿತ್ಯಂ ತಪಃ ಕುರ್ವನ್ ಸ್ತೌತಿ ನಿತ್ಯಂ ಪಿತಾಮಹಂ ।
ಸ ನಿರ್ವಿಣ್ಣೋ ಮುನಿಶ್ರೇಷ್ಠಃ ಪ್ರಾಣಾನಾಂ ಧಾರಣೇ ಹರೇ ॥ ೭೪ ॥
ಚಿರಂತನೋ ಮುನಿಃ ಸ ಸ್ಯಾಜ್ಜರಯಾಽತಿಸಮಾವೃತಃ ।
ತಂ ಪ್ರಾರ್ಥಯ ದ್ರುತಂ ಗತ್ವಾ ತಸ್ಯಾಽಸ್ಥೀನಿ ಗುರೂಣಿ ಚ ॥ ೭೫ ॥
ಸ ತೇ ದಾಸ್ಯತ್ಯಸಂದಿಗ್ಧಂ ತ್ಯಕ್ತ್ವಾ ಪ್ರಾಣಾನತಿಪ್ರಿಯಾನ್ ।
ತಸ್ಯಾಽಸ್ಥಿಭಿಃ ಪ್ರಹರಣಂ ವಜ್ರಾಖ್ಯಂ ತೇ ಭವಿಷ್ಯತಿ ॥ ೭೬ ॥

---

೭೦. ಸೂತನು ಹೇಳುತ್ತಾನೆ:—ಬೃಹಸ್ಪತಿಯು ಅವನ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ವಿನಯದಿಂದ ತಗ್ಗಿನಿಂತಿರುವ ಅವನನ್ನು ಕುರಿತು ಹೀಗೆಂದನು.

೭೧–೭೨. ಬೃಹಸ್ಪತಿಯು ಹೇಳುತ್ತಾನೆ:—ದೇವರಾಜ! ಅವನ ಶರೀರದಲ್ಲಿ ಬ್ರಾಹ್ಮಣತೇಜಸ್ಸಿರುವುದು. ಆದುದರಿಂದ ನೀನು ಅವನನ್ನು ನೋಡಲು ಸಮರ್ಥನಾಗುವುದಿಲ್ಲ. ಆದುದರಿಂದ ನಿನಗೆ ಅವನನ್ನು ಕೊಲ್ಲುವ ಉಪಾಯವನ್ನು ಹೇಳುವೆನು. ಅದರಿಂದ ನೀನು ಆ ದಾನವನನ್ನು ಕೊಲ್ಲುವೆ.

೭೩–೭೫. ಪೂರ್ವ ಸರಸ್ವತೀ ತೀರದಲ್ಲಿರುವ ಪುಷ್ಕರಾರಣ್ಯದಲ್ಲಿ ನೂರು ಯೋಜನ ಎತ್ತರವುಳ್ಳ ದಧೀಚಿಯೆಂಬ ಮಹರ್ಷಿಯು ನಿತ್ಯವೂ ತಪವನ್ನಾಚರಿಸುತ್ತ ಬ್ರಹ್ಮನನ್ನು ಸ್ತುತಿಸುತ್ತಿರುವನು. ಬಹಳ ಮುದುಕನಾದ ಆ ಮಹರ್ಷಿಯು ಬದುಕಿನಲ್ಲಿ ಜುಗುಪ್ಸೆಗೊಂಡಿರುವನು. ನೀನು ಅವನೆಡೆಗೆ ಹೋಗಿ ಅವನ ಅಸ್ಥಿಗಳನ್ನು ಪ್ರಾರ್ಥಿಸು.

೭೬–೭೭. ಅವನು ಅತಿ ಪ್ರಿಯವಾದ ತನ್ನ ಪ್ರಾಣಗಳನ್ನು ತ್ಯಜಿಸಿ ಅಸ್ಥಿಗಳನ್ನು ಕೊಡುವನು. ಅವನ ಆ ಅಸ್ಥಿಗಳಿಂದ ನಿನಗೆ ವಜ್ರವೆಂಬ ಅಮೋಘವಾದ ಆಯುಧವಾಗುವುದು. ಅದರಿಂದ ನೀನು ವೃತ್ರನನ್ನು ನಿಶ್ಚಯವಾಗಿಯೂ

ಅನೋಘಂ ತೇ ತತೋನೂನಂ ತ್ವಂ ವೃತ್ರಂ ಸೂದಯಿಷ್ಯಸಿ ।
ತಸ್ಯ ವಜ್ರಸ್ಯ ತತ್ತೇಜೋ ಬ್ರಹ್ಮತೇಜೋಽಭಿಬೃಂಹಿತಂ ।
ತೇನ ವೃತ್ರೋದ್ಭವಂ ತೇಜಃ ಪ್ರಶಮಂ ಸಂಪ್ರಯಾಸ್ಯತಿ ॥ ೭೭ ॥
ಸೂತ ಉವಾಚ :—
ತಚ್ಛ್ರುತ್ವಾ ಸತ್ವರಂ ಶಕ್ರಃ ಸರ್ವೈರ್ದೇವಗಣೈಃ ಸಹ ।
ಜಗಾಮ ಪುಷ್ಕರಾಽರಣ್ಯೇ ಯತ್ರ ಪ್ರಾಚೀ ಸರಸ್ವತೀ ॥ ೭೮ ॥
ತ್ರಯಸ್ತ್ರಿಂಶತ್ಸಮೋಪೇತಾ ತೀರ್ಥಾನಾಂ ಕೋಟಿಭಿರ್ಯುತಾ ।
ದಧೀಚೇರಾಶ್ರಮಂ ತತ್ರ ಸೋಽವಿಶಚ್ಚಿತ್ರಸಂಯುತಂ ॥ ೭೯ ॥
ಕ್ರೀಡಂತೇ ನಕುಲೈಃ ಸರ್ಪಾ ಯತ್ರ ತುಷ್ಟಿಂ ಗತಾ ಮಿಥಃ ।
ಮೃಗಾಃ ಪಂಚಾನನೈಃ ಸಾರ್ಧಂ ಪೃಷದಂಶಾಸ್ತಥಾಖುಭಿಃ ॥ ೮೦ ॥
ಉಲೂಕಸಹಿತಾಃ ಕಾಕಾ ಮಿಥೋ ದ್ವೇಷವಿವರ್ಜಿತಾಃ ।
ಪ್ರಭಾವಾತ್ತಸ್ಯ ತಪಸೋ ದಧೀಚೇಃ ಸುಮಹಾತ್ಮನಃ ॥ ೮೧ ॥
ದಧೀಚಿರಪಿ ಚಾಽಲೋಕ್ಯ ದೇವಾಂಛಕ್ರಪುರೋಗಮಾನ್ ।
ಸಮಾಯಾತಾನ್ ಪ್ರಹೃಷ್ಟಾತ್ಮಾ ಸತ್ವರಂ ಸಮ್ಮುಖೋಽಭ್ಯಗಾತ್ ॥ ೮೨ ॥
ತತಶ್ಚಾಽರ್ಘ್ಯಂ ಸಮಾದಾಯ ಪ್ರಣಿಪತ್ಯ ಮುಹುರ್ಮುಹುಃ ।
ಶಕ್ರಮಭ್ಯಾಗತಂ ಪ್ರಾಹ ಕಿಂ ತೇ ಕೃತ್ಯಂ ಕರೋಮ್ಯಹಂ ॥ ೮೩ ॥
ಗೃಹಾಽಯಾತಸ್ಯ ದೇವೇಶ ತಚ್ಛೀಘ್ರಂ ಮೇ ನಿವೇದಯ ॥ ೮೪ ॥

---

ಕೊಲ್ಲುವೆ. ಆ ವಜ್ರದ ತೇಜಸ್ಸು ಬ್ರಹ್ಮತೇಜಸ್ಸಿನಿಂದ ತುಂಬಿರುವುದು. ಅದರಿಂದ ವೃತ್ರನ ತೇಜಸ್ಸು ಶಾಂತವಾಗುವುದು.

೭೮–೭೯. ಸೂತನು ಹೇಳುತ್ತಾನೆ :—ಇಂದ್ರನು ಅದನ್ನು ಕೇಳಿ ಶೀಘ್ರವಾಗಿ ಸಕಲ ದೇವತೆಗಳೊಡನೆ ಪುಷ್ಕರಾರಣ್ಯಕ್ಕೆ ಹೋದನು. ಅಲ್ಲಿ ಪ್ರಾಚೀ ಸರಸ್ವತಿಯು ಮೂವತ್ತಮೂರು ಕೋಟಿ ತೀರ್ಥಗಳೊಡನೆ ಆಶ್ಚರ್ಯಕರವಾದ ದಧೀಚಿಯ ಆಶ್ರಮವನ್ನು ಪ್ರವೇಶಿಸಿದ್ದಳು.

೮೦–೮೧. ಆ ದಧೀಚಿಯ ತಪಃಪ್ರಭಾವದಿಂದ ಸರ್ಪಗಳು ಮುಂಗಸಿಗಳೊಡನೆಯೂ, ಜಿಂಕೆಗಳು ಸಿಂಹಗಳೊಡನೆಯೂ, ಬೆಕ್ಕುಗಳು ಇಲಿಗಳೊಡನೆಯೂ, ಕಾಗೆಗಳು ಗೂಬೆಗಳೊಡನೆಯೂ ಪರಸ್ಪರ ದ್ವೇಷವಿಲ್ಲದೆ ಸಂತೋಷಗೊಂಡಿದ್ದುವು.

೮೨. ದಧೀಚಿಯೂ ಬಂದಿರುವ ಇಂದ್ರನೇ ಮೊದಲಾದ ದೇವತೆಗಳನ್ನು ನೋಡಿ ಬೇಗನೆ ಅವರನ್ನು ಎದುರುಗೊಂಡನು.

೮೩–೮೪. ಬಳಿಕ ಆ ಮುನಿಯು ಇಂದ್ರನಿಗೆ ಅರ್ಘ್ಯವನ್ನಿತ್ತು ಬಾರಿ ಬಾರಿಗೂ ವಂದಿಸಿ ಮನೆಗೆ ಬಂದ ನಿನ್ನ ಯಾವ ಕೆಲಸವನ್ನು ಮಾಡಲಿ ಶೀಘ್ರವಾಗಿ ಅದನ್ನು ತಿಳಿಸು ಎಂದು ಪ್ರಶ್ನಿಸಿದನು.

ಇಂದ್ರ ಉವಾಚ :—
ಆತಿಥ್ಯಂ ಕುರು ವಿಪ್ರೇಂದ್ರ ಗೃಹಾಽಽಯಾತಸ್ಯ ಸನ್ಮುನೇ ।
ತ್ವದಸ್ಥೀನಿ ನಿಜಾನ್ಯಾಶು ಮಮ ದೇಹ್ಯವಿಕಲ್ಪಿತಂ ॥ ೮೫ ॥
ಏತದರ್ಥಮಹಂ ಪ್ರಾಪ್ತಸ್ತ್ವತ್ಸಕಾಶಂ ಮುನೀಶ್ವರ ।
ಅಸ್ಥಿಭಿಸ್ತೇ ಪರಂ ಕಾರ್ಯಂ ದೇವಾನಾಂ ಸಿದ್ಧಿಮೇಷ್ಯತಿ ॥ ೮೬ ॥
ಸೂತ ಉವಾಚ :—
ಇಂದ್ರಸ್ಯ ತದ್ವಚಃ ಶ್ರುತ್ವಾ ದಧೀಚಿಸ್ತೋಷಸಂಯುತಃ ।
ತತಃ ಪ್ರಾಹ ಸಹಸ್ರಾಕ್ಷಂ ಸರ್ವೈರ್ದೇವೈಃ ಸಮನ್ವಿತಃ ॥ ೮೭ ॥
ಅಹೋ ನಾಽಸ್ತಿ ಮಯಾ ತುಲ್ಯಃ ಸಾಂಪ್ರತಂ ಭುವಿ ಕಶ್ಚನ ।
ಪುಣ್ಯವಾನ್ ಯಸ್ಯ ದೇವೇಶಃ ಸ್ವಯಮರ್ಥೀ ಗೃಹಾಽಗತಃ ॥ ೮೮ ॥
ಧನ್ಯಾನಿ ಚ ಮಯಾಽಸ್ಥೀನಿ ಯಾನಿ ದೇವೇಶ ತೇ ಹಿತಂ ।
ಕರಿಷ್ಯಂತಿ ಸದಾ ಕಾರ್ಯಂ ರಕ್ಷಾರ್ಥಂ ತ್ರಿದಿವೌಕಸಾಂ ॥ ೮೯ ॥
ಏಷೋಽಹಂ ಸಂಪ್ರದಾಸ್ಯಾಮಿ ಪ್ರಿಯಾನ್ಪ್ರಾಣಾನ್ ಕೃತೇ ತವ ।
ಗೃಹಾಣ ಸ್ವೇಚ್ಛಯಾಽಸ್ಥೀನಿ ಸ್ವಕಾರ್ಯಾರ್ಥಂ ಪುರಂದರ ॥ ೯೦ ॥
ಏವಮುಕ್ತ್ವಾ ಮಹರ್ಷಿಃ ಸ ಧ್ಯಾನಮಾಶ್ರಿತ್ಯ ಸತ್ವರಂ ।
ಬ್ರಹ್ಮರಂಧ್ರೇಣ ನಿಃಸಾರ್ಯ ಪ್ರಾಣಮಾತ್ಮಾನಮತ್ಯಜತ್ ॥ ೯೧ ॥

---

೮೫. ಇಂದ್ರನು ಹೇಳುತ್ತಾನೆ:—ಮಹರ್ಷಿಯೆ! ಮನೆಗೆ ಬಂದ ನನಗೆ ಆತಿಥ್ಯವನ್ನು ಮಾಡು. ನಿನ್ನ ಮೂಳೆಯನ್ನು ನನಗೆ ಆಲೋಚಿಸದೆ ಕೊಡು.

೮೬. ಇದಕ್ಕಾಗಿಯೇ ನಾನು ನಿನ್ನೆಡೆಗೆ ಬಂದಿರುವೆನು. ನಿನ್ನ ಮೂಳೆಗಳಿಂದ ದೇವತೆಗಳಿಗೆ ಉತ್ತಮವಾದ ಕಾರ್ಯವು ಸಿದ್ಧಿಸುವುದು.

೮೭. ಸೂತನು ಹೇಳುತ್ತಾನೆ:—ದಧೀಚಿಯು ಇಂದ್ರನ ಆ ಮಾತನ್ನು ಕೇಳಿ ಸಂತೋಷಪಟ್ಟು ಸಕಲ ದೇವತೆಗಳಿಂದ ಸಹಿತನಾದ ಅವನನ್ನು ಕುರಿತು ಇಂತೆಂದನು.

೮೮. ಈಗ ಭೂಲೋಕದಲ್ಲಿ ದೇವೇಂದ್ರನೇ ಅರ್ಥಿಯಾಗಿ ಮನೆಗೆ ಬಂದ ನಾನು ಪುಣ್ಯವಂತನು. ನನಗೆ ಸರಿಯಾದವನು ಯಾವನೂ ಇಲ್ಲ.

೮೯. ದೇವೇಶ! ನನ್ನ ಮೂಳೆಗಳು ದೇವತೆಗಳ ರಕ್ಷಣೆಗಾಗಿ ನಿನಗೆ ಹಿತವಾದ ಕಾರ್ಯವನ್ನು ಮಾಡುವುದರಿಂದ ಧನ್ಯವಾದುವು.

೯೦. ನಾನು ನಿನಗಾಗಿ ಈ ನನ್ನ ಪ್ರಿಯಪ್ರಾಣಗಳನ್ನು ಅರ್ಪಿಸುವೆನು. ಇಂದ್ರಾ! ಅವುಗಳನ್ನು ನಿನ್ನ ಕೆಲಸಕ್ಕಾಗಿ ಸ್ವೇಚ್ಛೆಯಾಗಿ ಸ್ವೀಕರಿಸು.

೯೧. ದಧೀಚಿ ಮಹರ್ಷಿಯು ಹೀಗೆ ಹೇಳಿ ಧ್ಯಾನಮಾಡುತ್ತಾ ಶೀಘ್ರವಾಗಿ ಬ್ರಹ್ಮರಂಧ್ರದಿಂದ ಪ್ರಾಣವನ್ನು ಹೊರಡಿಸಿ ದೇಹವನ್ನು ತ್ಯಜಿಸಿದನು.

ತದಾತ್ಮನಾ ಪರಿತ್ಯಕ್ತಂ ತಸ್ಯ ಗಾತ್ರಂ ಚ ತತ್ಕ್ಷಣಾತ್ ।
ಪತಿತಂ ಮೇದಿನೀ ಪೃಷ್ಠೇ ವ್ಯಸು ತದ್ದ್ವಿಜಸತ್ತಮಾಃ ॥ ೯೨ ॥
ಏತಸ್ಮಿನ್ನೇವ ಕಾಲೇತು ತಸ್ಯಾಽಸ್ಥೀನಿ ಶತಕ್ರತುಃ ।
ಪ್ರಗೃಹ್ಯ ವಿಶ್ವಕರ್ಮಾಣಂ ತತಃ ಪ್ರೋವಾಚ ಸಾದರಂ ॥ ೯೩ ॥
ಏತೈರಸ್ಥಿಭಿಃ ಶೀಘ್ರಂ ಮೇ ಕುರು ತ್ವಂ ವಜ್ರಮಾಯುಧಂ ।
ಯೇನ ವ್ಯಾಪಾದಯಾಮ್ಯಾಶು ವೃತ್ರಂ ದಾನವಸತ್ತಮಂ ॥ ೯೪ ॥
ತಸ್ಯ ತದ್ವಚನಂ ಶ್ರುತ್ವಾ ವಿಶ್ವಕರ್ಮಾ ತ್ವರಾನ್ವಿತಃ ।
ಯಥಾಯುಧಂ ತಥಾ ಚಕ್ರೇ ವಜ್ರಾಖ್ಯಂ ದಾರುಣಾಕೃತಿ ॥ ೯೫ ॥
ಷಡಸ್ರಿ ಶತಪರ್ವಾಖ್ಯಂ ಮಧ್ಯೇ ಕ್ಷಾಮಂ ವಿಭೀಷಣಂ ।
ಪ್ರದದೌ ಚ ತತಸ್ತಸ್ಮೈ ಸಹಸ್ರಾಕ್ಷಾಯ ಧೀಮತೇ ॥ ೯೬ ॥
ಅಥ ತಂ ಸ ಸಮಾದಾಯ ದ್ವಾದಶಾರ್ಕಸಮಪ್ರಭಂ ।
ಸಮಾಧಿಸ್ಥಂ ಚರೈರ್ಜ್ಞಾತ್ವಾ ವೃತ್ರಂ ಸಂಧ್ಯಾರ್ಚನೇ ರತಃ ॥ ೯೭ ॥
ತತಶ್ಚ ಪೃಷ್ಠಭಾಗಂ ಸ ಸಮಾಶ್ರಿತ್ಯ ತ್ರಿಲೋಕರಾಟ್ ।
ಚಿಕ್ಷೇಪ ವಜ್ರಮುದ್ದಿಶ್ಯ ತದ್ವಧಾರ್ಥಂ ಸಮುತ್ಸುಕಃ ॥ ೯೮ ॥
ಸ ಹತಸ್ತೇನ ವಜ್ರೇಣ ದಾನವೋ ಭಸ್ಮಸಾದ್ಗತಃ ।
ಶಕ್ರೋಽಪಿ ಹತಮಜ್ಞಾತ್ವಾ ಭಯಾತ್ತಸ್ಯಾಽಥ ದುದ್ರುವೇ ॥ ೯೯ ॥

---

೯೨–೯೩. ಅವನ ಪ್ರಾಣದಿಂದ ತ್ಯಕ್ತವಾದ ದೇಹವು ಕೂಡಲೆ ಭೂಮಿಯಲ್ಲಿ ಬಿದ್ದಿತು. ಈ ಸಮಯದಲ್ಲಿ ದೇವೇಂದ್ರನು ಆ ಮುನಿಯ ಮೂಳೆಗಳನ್ನು ತೆಗೆದು ಕೊಂಡು ವಿಶ್ವಕರ್ಮನನ್ನು ಕುರಿತು ಇಂತೆಂದನು.

೯೪. ವಿಶ್ವಕರ್ಮಾ! ನೀನು ಬೇಗನೆ ಈ ಮೂಳೆಗಳಿಂದ ವಜ್ರಾಯುಧ ವನ್ನು ನಿರ್ಮಿಸು. ಅದರಿಂದ ನಾನು ದಾನವೋತ್ತಮನಾದ ವೃತ್ರಾಸುರನನ್ನು ಬೇಗನೆ ಕೊಲ್ಲುವೆನು.

೯೫–೯೬. ವಿಶ್ವಕರ್ಮನು ಅವನ ಆ ಮಾತನ್ನು ಕೇಳಿ ಆರು ಅಸ್ರ ವುಳ್ಳದ್ದೂ, ನೂರು ಗಂಟುಗಳುಳ್ಳದೂ, ಮಧ್ಯೆ ಕೃಶವಾದುದೂ, ಭಯಂಕರವೂ ಆದ ವಜ್ರಾಯುಧವನ್ನು ನಿರ್ಮಿಸಿ ಆ ಇಂದ್ರನಿಗೆ ಕೊಟ್ಟನು.

೯೭–೯೮. ಬಳಿಕ ಇಂದ್ರನು ದ್ವಾದಶಾದಿತ್ಯರಂತೆ ಉಜ್ಜ್ವಲವಾದ ಆ ವಜ್ರಾ ಯುಧವನ್ನು ತೆಗೆದುಕೊಂಡು ವೃತ್ರನು ಧ್ಯಾನಸ್ಥನೂ, ಸಂಧ್ಯಾವಂದನೆಯಲ್ಲಿ ನಿರತನೂ, ಆಗಿರುವುದನ್ನು ದೂತರಿಂದ ತಿಳಿದು ಅವನನ್ನು ಕೊಲ್ಲುವುದಕ್ಕಾಗಿ ಹಿಂಭಾಗದಿಂದ ಆ ವಜ್ರಾಯುಧವನ್ನು ಎಸೆದನು.

೯೯. ಆ ವಜ್ರಾಯುಧದಿಂದ ಆ ದಾನವನು ಹತನಾಗಿ ಬೂದಿಯಾದನು. ಶಕ್ರನು ಹತನಾದ ವೃತ್ರನನ್ನು ತಿಳಿಯದೆ ಅವನ ಭಯದಿಂದ ಓಡಿದನು.

ಮನುಷ್ಯ ರಹಿತೇ ದೇಶೇ ವಿಷಮೇ ಗುಲ್ಮಸಂವೃತೇ ।
ಲಿಲ್ಯೇ ಶಕ್ರಸ್ತದಾ ಸರ್ವಂ ಮೇನೇ ವೃತ್ರಮಯಂ ಜಗತ್ ॥ ೧೦೦ ॥
ಏತಸ್ಮಿನ್ನಂತರೇ ದೇವಾಃ ಪಶ್ಯಂತಃ ಸರ್ವತೋ ದಿಶಂ ।
ಸಿದ್ಧ ಚಾರಣಗಂಧರ್ವಾ ಆಜಗ್ಮುಶ್ಚ ಶತಕ್ರತುಂ ॥ ೧೦೧ ॥
ತತಃ ಕೃಚ್ಛ್ರಾಚ್ಚ ತೈರ್ದೃಷ್ಟಃ ಶಕ್ರೋಽಸೌ ಗಹನೇ ವನೇ ।
ನಿಲೀನೋ ಭಯಸಂತ್ರಸ್ತೋ ಗುಲ್ಮಮಧ್ಯೇ ವ್ಯವಸ್ಥಿತಃ ॥ ೧೦೨ ॥

ದೇವಾ ಊಚುಃ:—

ಕಿಂ ತ್ವಂ ಭೀತಃ ಸಹಸ್ರಾಕ್ಷ ವೃತ್ರೋಽಯಂ ಘಾತಿತಸ್ತ್ವಯಾ ।
ಪರಿವಾರೇಣ ಸರ್ವೇಣ ವೀಕ್ಷಿತೋಽಸ್ಮಾಭಿರೇವ ಚ ॥ ೧೦೩ ॥
ಅಸ್ಮಾದಾಗಚ್ಛ ಗಚ್ಛಾಮೋ ಗೃಹಂ ಪ್ರತಿ ಪುರಂದರ ।
ಕುರು ತ್ರೈಲೋಕ್ಯರಾಜ್ಯಂ ತ್ವಂ ಸಾಂಪ್ರತಂ ಹತಕಂಟಕಂ ॥ ೧೦೪ ॥
ತಚ್ಛ್ರುತ್ವಾಽಥ ವಿನಿಷ್ಕ್ರಾಂತೋ ಗುಲ್ಮಮಧ್ಯಾಚ್ಛತಕ್ರತುಃ ।
ಹೃಷ್ಟರೋಮಾ ಹತಂ ಶ್ರುತ್ವಾ ವೃತ್ರಂ ದಾನವಸತ್ತಮಂ ॥ ೧೦೫ ॥
ಅಥ ಪಶ್ಯಂತಿ ಯಾವತ್ತಂ ದೇವಾಃ ಸರ್ವೇ ಶತಕ್ರತುಂ ।
ತಾವತ್ತೇಜೋ ವಿಹೀನಂ ತದ್ಗಾತ್ರಂ ದುರ್ಗಂಧಿತಾಯುತಂ ॥ ೧೦೬ ॥

---

೧೦೦. ಅವನು ಮನುಷ್ಯರಿಲ್ಲದಿರುವುದೂ, ಪೊದೆಗಳಿಂದ ತುಂಬಿರುವುದೂ ಆದ ವಿಷಮಪ್ರದೇಶದಲ್ಲಿ ಅಡಗಿಕೊಂಡು ಜಗತ್ತನ್ನೆಲ್ಲ ವೃತ್ರನಿಂದ ತುಂಬಿರುವುದನ್ನಾಗಿ ತಿಳಿದನು.

೧೦೧. ಈ ಸಮಯದಲ್ಲಿ ದೇವತೆಗಳೂ, ಸಿದ್ಧ, ಚಾರಣ, ಗಂಧರ್ವರೂ ಎಲ್ಲಾ ದಿಕ್ಕುಗಳನ್ನು ನೋಡುತ್ತ ಇಂದ್ರನೆಡೆಗೆ ಬಂದರು.

೧೦೨. ಬಳಿಕ ಅವರು ಗೊಂಡಾರಣ್ಯದಲ್ಲಿ ಪೊದೆಯ ನಡುವೆ ಭಯದಿಂದ ಅಡಗಿಕೊಂಡಿರುವ ಇಂದ್ರನನ್ನು ಕಷ್ಟದಿಂದ ನೋಡಿದರು.

೧೦೩. ದೇವತೆಗಳು ಹೇಳುತ್ತಾರೆ:—ದೇವರಾಜ! ನೀನು ಏತಕ್ಕೆ ಭೀತನಾಗಿರುವೆ? ನೀನು ಈ ವೃತ್ರನನ್ನು ಕೊಂದಿರುವೆ. ಸಕಲ ಪರಿವಾರದವರೂ, ನಾವೂ ನೋಡಿದೆವು.

೧೦೪. ಪುರಂದರ! ಇಲ್ಲಿಂದ ಹೊರಡು, ಮನೆಗೆ ಹೋಗೋಣ. ನೀನೀಗ ಶತ್ರುಗಳಿಲ್ಲದ ತ್ರೈಲೋಕ್ಯರಾಜ್ಯವನ್ನು ಆಳು.

೧೦೫. ಬಳಿಕ ಇಂದ್ರನು ಆ ಮಾತನ್ನು ಕೇಳಿ ದಾನವೋತ್ತಮನಾದ ವೃತ್ರನು ಹತನಾದುದನ್ನರಿತು ರೋಮಾಂಚಗೊಂಡು ಪೊದೆಯ ಮಧ್ಯದಿಂದ ಹೊರಟನು.

೧೦೬–೧೦೮. ಅನಂತರ ಆ ದೇವತೆಗಳು ಇಂದ್ರನನ್ನು ನೋಡುವಷ್ಟರಲ್ಲಿ ಬ್ರಹ್ಮನು ತೇಜೋಹೀನನೂ, ದುರ್ಗಂಧವುಳ್ಳವನೂ ಆದ ಅವನನ್ನು ಕಂಡು

ದೃಷ್ಟ್ವಾ ಲೋಕಗುರುರ್ಬ್ರಹ್ಮಾ ದೇವಾನ್ ಸರ್ವಾನುವಾಚ ಹ ।
ಶಕ್ರೋಽಯಂ ಸಾಂಪ್ರತಂ ವ್ಯಾಪ್ತಃ ಪಾಪಯಾ ಬ್ರಹ್ಮಹತ್ಯಯಾ ॥೧೦೭॥
ಯದನೇನ ಹತೋ ವೃತ್ರೋ ಬ್ರಹ್ಮಭೂತಶ್ಛಲೇನ ಸಃ ।
ತಸ್ಮಾತ್ತ್ಯಾಜ್ಯಃ ಸುದೂರೇಣ ನೋಚೇತ್ಪಾಪಮವಾಪ್ಸ್ಯಥ ॥ ೧೦೮ ॥
ಬ್ರಹ್ಮಘ್ನೇನ ಸಮಂ ಸ್ಪರ್ಶಃ ಸಂಭಾಷೋಽಥ ವಿನಿರ್ಮಿತಃ ।
ಪಾಪಾಯ ಜಾಯತೇ ಪುಂಸಾಂ ತಸ್ಮಾತ್ತಂ ದೂರತಸ್ತ್ಯಜೇತ್ ॥ ೧೦೯ ॥
ಆಸ್ತಾಂ ಸಂಸ್ಪರ್ಶನಂ ತಸ್ಯ ಸಂಭಾಷೋ ವಾ ವಿಶೇಷತಃ ।
ದರ್ಶನಂ ವಾಽಪಿ ತಸ್ಯಾಽಹುಃ ಸರ್ವಪಾಪಪ್ರದಂ ನೃಣಾಂ ॥ ೧೧೦ ॥

ಸೂತ ಉವಾಚ:—

ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ಶಕ್ರೋ ದೃಷ್ಟ್ವಾಽತ್ಮನಸ್ತನುಂ ।
ತೇಜಸಾ ಸಂಪರಿತ್ಯಕ್ತಾಂ ದುರ್ಗಂಧೇನ ಸಮಾವೃತಾಂ ॥ ೧೧೧ ॥
ತತಃ ಪ್ರೋವಾಚ ಲೋಕೇಶಂ ದೀನಃ ಪ್ರಣತಕಂಧರಃ ।
ತವಾಽಹಂ ಕಿಂಕರೋ ದೇವ ತ್ವಯೇಂದ್ರತ್ವೇ ನಿಯೋಜಿತಃ ॥ ೧೧೨ ॥
ತಸ್ಮಾತ್ಕುರು ಪ್ರಸಾದಂ ಮೇ ಬ್ರಹ್ಮಹತ್ಯಾವಿನಾಶನಂ ।
ಪ್ರಾಯಶ್ಚಿತ್ತಂ ವಿಭೋ ಬ್ರೂಹಿ ಯೇನ ಶುದ್ಧಿಃ ಪ್ರಜಾಯತೇ ॥ ೧೧೩ ॥

---

ಸಕಲ ದೇವತೆಗಳನ್ನೂ ಕುರಿತು ಹೀಗೆಂದನು. ಈ ಇಂದ್ರನು ಕಪಟದಿಂದ ಬ್ರಾಹ್ಮಣನಾದ ವೃತ್ರನನ್ನು ಕೊಂದುದರಿಂದ ಬ್ರಹ್ಮಹತ್ಯಾವ್ಯಾಪ್ತನಾಗಿರುವನು. ಆದುದರಿಂದ ಇವನನ್ನು ದೂರದಲ್ಲಿಯೇ ತ್ಯಜಿಸಬೇಕು. ಹಾಗಿಲ್ಲದಿದ್ದರೆ ಪಾಪವನ್ನು ಹೊಂದುವಿರಿ.

೧೦೯. ಬ್ರಹ್ಮಹತ್ಯವನ್ನು ಮಾಡಿದವನನ್ನು ಮುಟ್ಟಿದರೂ, ಅವನೊಡನೆ ಮಾತಾಡಿದರೂ ಮಾನವರಿಗೆ ಪಾಪವುಂಟಾಗುವುದು. ಆದುದರಿಂದ ಅವನನ್ನು ದೂರದಲ್ಲಿಯೇ ಬಿಡಬೇಕು.

೧೧೦. ಅವನ ಸ್ಪರ್ಶ, ಸಂಭಾಷಣೆಗಳಂತಿರಲಿ, ಅವನ ದರ್ಶನವೂ ಮಾನವರಿಗೆ ಸಕಲ ಪಾಪಗಳನ್ನು ನಿವಾರಿಸುವುದು.

೧೧೧–೧೧೨. ಸೂತನು ಹೇಳುತ್ತಾನೆ:—ಇಂದ್ರನು ಬ್ರಹ್ಮನ ಆ ಮಾತನ್ನು ಕೇಳಿ ತೇಜಸ್ಸಿಲ್ಲದಿರುವುದೂ, ದುರ್ಗಂಧವುಳ್ಳುದೂ ಆದ ತನ್ನ ಶರೀರವನ್ನು ನೋಡಿ ಆ ಬ್ರಹ್ಮನನ್ನು ಕುರಿತು ದೀನನೂ, ನಮ್ರನೂ ಆಗಿ ಹೀಗೆಂದನು. "ಸ್ವಾಮಿ! ನಾನು ನಿನ್ನ ಸೇವಕನು. ನೀನು ನನ್ನನ್ನು ಇಂದ್ರಪದವಿಯಲ್ಲಿ ನೇಮಿಸಿರುವೆ.

೧೧೩. ಆದುದರಿಂದ ನೀನು ಬ್ರಹ್ಮಹತ್ಯೆಯನ್ನು ನಿವಾರಿಸಿ ನನಗೆ ಅನುಗ್ರಹ ಮಾಡು. ಇದು ಪರಿಹಾರವಾಗಲು ಪ್ರಾಯಶ್ಚಿತ್ತವನ್ನು ಹೇಳು".

ಶ್ರೀ ಬ್ರಹ್ಮೋವಾಚ:—
ಅಷ್ಟ ಷಷ್ಟಿಮು ತೀರ್ಥೇಷು ತ್ವಂ ಸ್ನಾತ್ವಾ ಬಲಸೂದನ ।
ಆತ್ಮಾನಂ ಹೇಮಜಂ ದೇಹಿ ಪಾಪಪೂರುಷಸಂಜ್ಞಿತಂ ॥ ೧೧೪ ॥
ಮಂತ್ರವತ್ತಂ ಯಥೋಕ್ತಂ ಚ ಬ್ರಾಹ್ಮಣಾಯ ಮಹಾತ್ಮನೇ ।
ಸ್ನಾತ್ವಾ ಪುಣ್ಯಜಲೇ ತೀರ್ಥೇ ಬ್ರಹ್ಮಘ್ನೋಽಹಮಿತಿಬ್ರುವನ್ ॥ ೧೧೫ ॥
ಸ್ನಾತಮಾತ್ರಸ್ಯ ತೇ ಹಸ್ತಾದ್ಯತ್ರ ತತ್ಪತತಿ ಕ್ಷಿತೌ ।
ತೇಜಃ ಸಂಜಾಯತೇ ಗಾತ್ರೇ ದುರ್ಗಂಧಶ್ಚ ಪ್ರಣಶ್ಯತಿ ॥ ೧೧೬ ॥
ತಸ್ಮಿಂಸ್ತೀರ್ಥೇ ತ್ವಯಾ ತಚ್ಚ ಸ್ಥಾಪ್ಯಂ ಶಕ್ರ ಕಪಾಲಕಂ ।
ಮಹೇಶ್ವರಸ್ಯ ನಾಮ್ನಾ ಚ ಪೂಜನೀಯಂ ತತಃ ಪರಂ ॥ ೧೧೭ ॥
ಪಂಚಭಿರ್ವಕ್ತ್ರಮಂತ್ರೈಶ್ಚ ತತೋ ದೇಯೋಽತ್ಮನಸ್ತನೂಃ ।
ಹೇಮೋದ್ಭವಾ ದ್ವಿಜೇಂದ್ರಾಯ ತತಃ ಶುದ್ಧಿಮವಾಪ್ಸ್ಯಸಿ ॥ ೧೧೮ ॥
ಶಕ್ರಸ್ತು ತದ್ವಚಃ ಶ್ರುತ್ವಾ ಬ್ರಹ್ಮಣೋಽವ್ಯಕ್ತಜನ್ಮನಃ ।
ಕಪಾಲಂ ವೃತ್ರಜಂ ಗೃಹ್ಯ ತೀರ್ಥಯಾತ್ರಾಂ ತತೋ ಗತಃ ॥ ೧೧೯ ॥
ಅಷ್ಟಷಷ್ಟಿಷು ತೀರ್ಥೇಷು ಗಚ್ಛನ್ ಸ ಚ ಸುರೇಶ್ವರಃ ।
ಹಾಟಕೇಶ್ವರಜೇ ಕ್ಷೇತ್ರೇ ಸಮಾಯಾತಃ ಕ್ರಮೇಣ ಚ ॥ ೧೨೦ ॥

---

೧೧೪–೧೧೬. ಶ್ರೀ ಬ್ರಹ್ಮನು ಹೇಳುತ್ತಾನೆ:— ದೇವರಾಜ! ನೀನು ಅರುವತ್ತೆಂಟು ತೀರ್ಥಗಳಲ್ಲಿ ಮಿಂದು ಸುವರ್ಣದ ಪಾಪಪೂರುಷವೆಂಬ ನಿನ್ನ ಶರೀರದ ಪ್ರತಿಮೆಯನ್ನು ಮಹಾತ್ಮನಾದ ಬ್ರಾಹ್ಮಣನಿಗೆ ವಿಧಿಮಂತ್ರಪೂರ್ವಕವಾಗಿ ದಾನಮಾಡು. ನೀನು ಪವಿತ್ರಜಲದಲ್ಲಿ ನಿಂತು, ನಾನು ಬ್ರಹ್ಮಹತ್ಯೆಮಾಡಿದವನೆಂದು ಹೇಳುತ್ತ ಸ್ನಾನಮಾಡುವಷ್ಟರಲ್ಲಿ ನಿನ್ನ ಕೈಯಿಂದ ಆ ಬ್ರಹ್ಮಹತ್ಯೆಯು ಕೆಳಗೆ ಬೀಳುವುದು. ಅನಂತರ ನಿನ್ನ ಶರೀರದಲ್ಲಿ ತೇಜಸ್ಸುಂಟಾಗುವುದು. ದುರ್ಗಂಧವು ಪರಿಹಾರವಾಗುವುದು.

೧೧೭–೧೧೮. ನೀನು ಆ ತೀರ್ಥದಲ್ಲಿ ಆ ಕಪಾಲವನ್ನು ಮಹೇಶ್ವರನ ಹೆಸರಿನಿಂದ ಸ್ಥಾಪಿಸಿ, ಪಂಚವಕ್ತ್ರಮಂತ್ರಗಳಿಂದ ಪೂಜಿಸಬೇಕು. ಅನಂತರ ಚಿನ್ನದ ನಿನ್ನ ಪ್ರತಿಮೆಯನ್ನು ನಿರ್ಮಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ಶುದ್ಧನಾಗುವೆ.

೧೧೯. ಇಂದ್ರನು ಬ್ರಹ್ಮನ ಆ ಮಾತನ್ನು ಕೇಳಿ ವೃತ್ರನ ಕಪಾಲವನ್ನು ತೆಗೆದುಕೊಂಡು ತೀರ್ಥಯಾತ್ರೆಗೆ ಹೊರಟನು.

೧೨೦. ಅವನು ಅರುವತ್ತೆಂಟು ತೀರ್ಥಗಳಲ್ಲಿ ಸಂಚರಿಸುತ್ತ ಕ್ರಮವಾಗಿ ಹಾಟಕೇಶ್ವರ ಕ್ಷೇತ್ರಕ್ಕೆ ಬಂದನು.

ವಿಶ್ವಾಮಿತ್ರಹ್ರದೇ ಸ್ನಾತ್ವಾ ಯಾವತ್ತಸ್ಮಾದ್ವಿನಿರ್ಗತಃ ।
ಕಪಾಲಂ ಪತಿತಂ ತಸ್ಮಾತ್ತಸ್ಯಯಮೇವ ಹತಾತ್ಮನಃ ॥ ೧೨೧ ॥
ತತಸ್ತಂ ಪೂಜಯಾಮಾಸ ಮಂತ್ರೈರ್ವಕ್ತ್ರಸಮುದ್ಭವೈಃ ।
ಸರ್ವಪಾಪಹರೈಃ ಪುಣ್ಯೈರ್ಯಥೋಕ್ತೈರ್ಬ್ರಹ್ಮಣಾ ಪುರಾ ॥ ೧೨೨ ॥
ಏತಸ್ಮಿನ್ನೇವ ಕಾಲೇತು ದುರ್ಗಂಧೋ ನಾಶಮಾಪ್ತವಾನ್ ।
ತಚ್ಛರೀರಾದ್ದ್ವಿಜಶ್ರೇಷ್ಠಾ ಮಹತ್ತೇಜೋ ವ್ಯಜಾಯತ ॥ ೧೨೩ ॥
ಏತಸ್ಮಿನ್ನಂತರೇ ಬ್ರಹ್ಮಾ ಸಹದೇವೈಃ ಸಮಾಗತಃ ।
ಬ್ರಹ್ಮಹತ್ಯಾವಿಮುಕ್ತಂ ತಂ ಜ್ಞಾತ್ವಾ ಸರ್ವ ಸುರಾಧಿಪಂ ॥ ೧೨೪ ॥
ಶ್ರೀ ಬ್ರಹ್ಮೋವಾಚ:—
ಬ್ರಹ್ಮಹತ್ಯಾಕೃತೋ ದೋಷೋ ಗತಸ್ತೇ ಸುರಸತ್ತಮ ।
ಶೇಷಪಾಪ ವಿಶುದ್ಧ್ಯರ್ಥಂ ಸ್ವರ್ಣದಾನಂ ಪ್ರಯಚ್ಛ ಭೋಃ ॥ ೧೨೫ ॥
ಕಪಾಲಮೇತದ್ದೇಶೋಽತ್ರ ಯತ್ತ್ವಯಾ ಪರಿಪೂಜಿತಂ ।
ವೃತ್ರಸ್ಯ ಪಂಚಭಿರ್ಮಂತ್ರೈರ್ಹರವಕ್ತ್ರ ಸಮುದ್ಭವೈಃ ॥ ೧೨೬ ॥
ಪ್ರದಾಸ್ಯಸಿ ತತೋ ಭಕ್ತ್ಯಾ ಹೇಮಜಾಮಾತ್ಮನಸ್ತನುಂ ।
ವಿಧಿನಾ ಮಂತ್ರಯುಕ್ತೇನ ತವ ಪಾಪಂ ಪ್ರಯಾಸ್ಯತಿ ।
ಯದ್ಯತ್ಪೂರ್ವಕೃತಂ ಕೃತ್ಸ್ನಂ ಪ್ರದಾಯ ಬ್ರಾಹ್ಮಣಾಯ ಭೋಃ ॥೧೨೭॥

---

೧೨೧. ಆ ಇಂದ್ರನು ವಿಶ್ವಾಮಿತ್ರಹ್ರದದಲ್ಲಿ ಮಿಂದು ಹೊರಡುವಷ್ಟರಲ್ಲಿ ಅವನಿಂದ ವೃತ್ರನ ಕಪಾಲವು ಕೆಳಗೆ ಬಿದ್ದಿತು.

೧೨೨. ತರುವಾಯ ದೇವರಾಜನು ಆ ಕಪಾಲವನ್ನು ಹಿಂದೆ ಬ್ರಹ್ಮನು ಹೇಳಿದ ಸಕಲ ಪಾಪಗಳನ್ನು ಪರಿಹರಿಸುವುದೂ, ಪುಣ್ಯಕರವೂ ಆದ ಸದ್ಯೋಜಾತೇತ್ಯಾದಿ ಮಂತ್ರಗಳಿಂದ ಪೂಜಿಸಿದನು.

೧೨೩. ಈ ಸಮಯದಲ್ಲಿ ಅವನ ಶರೀರದ ದುರ್ಗಂಧವು ನಾಶವಾಗಿ ಅತಿಶಯವಾದ ತೇಜಸ್ಸುಂಟಾಯಿತು.

೧೨೪. ಇಷ್ಟರಲ್ಲಿ ಬ್ರಹ್ಮನು ದೇವಾಧಿಪನು ಬ್ರಹ್ಮಹತ್ಯೆಯಿಂದ ಮುಕ್ತನಾಗಿರುವನೆಂದರಿತು ದೇವತೆಗಳೊಡನೆ ಅಲ್ಲಿಗೆ ಬಂದನು.

೧೨೫. ಶ್ರೀ ಬ್ರಹ್ಮನು ಹೇಳುತ್ತಾನೆ:—ಸುರರಾಜ! ನಿನ್ನ ಬ್ರಹ್ಮಹತ್ಯಾ ದೋಷವು ಪರಿಹಾರವಾಯಿತು. ಉಳಿದ ಪಾಪಶುದ್ಧಿಗಾಗಿ ಸುವರ್ಣವನ್ನು ದಾನಮಾಡು.

೧೨೬–೧೨೭. ನೀನು ಇಲ್ಲಿ ವೃತ್ರನ ಕಪಾಲವನ್ನು ಶಿವನ ಮುಖಗಳಿಂದ ಹೊರಟ ಐದು ಮಂತ್ರಗಳಿಂದ ಪೂಜಿಸಿರುವುದರಿಂದಲೂ, ಚಿನ್ನದ ನಿನ್ನ ಮೂರ್ತಿಯನ್ನು ಬ್ರಾಹ್ಮಣನಿಗೆ ಮಂತ್ರವಿಧಿಗಳಿಂದ ಭಕ್ತಿಯಿಂದ ದಾನಮಾಡುವುದರಿಂದಲೂ ಪೂರ್ವಕೃತವಾದ ಪಾಪವು ನಿವಾರಣೆಯಾಗುವುದು.

ಏವಮುಕ್ತಸ್ತತಃ ಶಕ್ರೋ ಬ್ರಹ್ಮಣಾ ಸುರಸನ್ನಿಧೌ ।
ತಥೇತ್ಯುಕ್ತ್ವಾ ತು ತತ್ಕಾಲಂ ಪಾಪಪಿಂಡಂ ನಿಜಂ ದದೌ ॥ ೧೨೮ ॥
ಕೃತ್ವಾ ಹೇಮಮಯಂ ವಿಪ್ರಾ ಬ್ರಾಹ್ಮಣಾಯ ಮಹಾತ್ಮನೇ ।
ಗರ್ತಾತೀರ್ಥ ಸಮುತ್ಥಾಯ ವಾತಾಖ್ಯಾಯಾಹಿತಾಗ್ನಯೇ ॥ ೧೨೯ ॥
ಏತಸ್ಮಿನ್ನಂತರೇ ವಿಪ್ರೋ ಗರ್ಹಿತಃ ಸೋಽತ್ರ ನಾಗರೈಃ ।
ಧಿಗ್ಧಿಗ್ಪಾಪ ವೃಥಾ ವೇದಾ ಯೇ ತ್ವಯಾ ಪಾಠಿತಾಃ ಪುರಾ ॥ ೧೩೦ ॥
ನಾಽಸ್ಮಾಭಿಃ ಸಹ ಸಂಪರ್ಕಂ ಕದಾಚಿತ್ತ್ವಂ ಕರಿಷ್ಯಸಿ ।
ಗೃಹೀತಂ ಯತ್ತ್ವಯಾ ದಾನಂ ಪಾಪಪಿಂಡಸಮುದ್ಭವಂ ॥ ೧೩೧ ॥
ತತಃ ಪ್ರೋವಾಚ ವಿಪ್ರಃ ಸ ಉಪಮನ್ಯು ಕುಲೋದ್ಭವಃ ।
ವಿವರ್ಣವದನೋ ಭೂತ್ವಾ ನಾಮ್ನಾ ಖ್ಯಾತಃ ಸ ವಾತಕಃ ॥ ೧೩೨ ॥
ತ್ವಯಾ ಶಕ್ರ ಪ್ರದತ್ತೋ ಮೇ ಪಾಪಪಿಂಡಃ ಸ್ವಕೋ ಯತಃ ।
ಮಯಾ ಪ್ರತಿಗ್ರಹಸ್ತೇನ ದಾಕ್ಷಿಣ್ಯೇನ ಕೃತಸ್ತವ ॥ ೧೩೩ ॥
ನ ಲೋಭೇನ ಸುರಶ್ರೇಷ್ಠ ಪಶ್ಯತಸ್ತೇ ವಿಗರ್ಹಿತಃ ।
ಅಹಂ ಚ ಬ್ರಾಹ್ಮಣೈಃ ಸರ್ವೈರೇತೈರ್ನಗರವಾಸಿಭಿಃ ॥ ೧೩೪ ॥
ತಸ್ಮಾನ್ನಾಽಹಂ ಗ್ರಹೀಷ್ಯಾಮಿ ಏತಂ ತವ ಪ್ರತಿಗ್ರಹಂ ॥ ೧೩೫ ॥

---

೧೨೮–೧೨೯. ಬ್ರಹ್ಮನು ಸುರರ ಸಮೀಪದಲ್ಲಿ ಶಕ್ರನಿಗೆ ಹೀಗೆ ಹೇಳಲು ಅವನು ಅದನ್ನು ಒಪ್ಪಿ ಆಗ ತನ್ನ ಸುವರ್ಣಮಯವಾದ ಪಾಪಪೂರುಷಮೂರ್ತಿಯನ್ನು ನಿರ್ಮಿಸಿ ಅದನ್ನು ಗರ್ತಾತೀರ್ಥದ ವಾತನೆಂಬ ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ದಾನಮಾಡಿದನು.

೧೩೦–೧೩೧. ಈ ಸಮಯದಲ್ಲಿ ನಾಗರ ಬ್ರಾಹ್ಮಣರು ಆ ವಾತನನ್ನು ಪಾಪಿ! ನೀನು ಸುವರ್ಣ ಪಾಪಪೂರುಷನನ್ನು ಪ್ರತಿಗ್ರಹಮಾಡಿರುವುದರಿಂದ ಅಧ್ಯಯನಮಾಡಿದ ವೇದಗಳು ನಿಷ್ಫಲವಾದುವು. ನಮ್ಮೊಡನೆ ಸಂಪರ್ಕಮಾಡಬೇಡ ಎಂದು ಹಳಿದರು.

೧೩೨–೧೩೪. ಬಳಿಕ ಉಪಮನ್ಯುವಂಶದಲ್ಲಿ ಹುಟ್ಟಿದ ಆ ವಾತನಾಮಕ ಬ್ರಾಹ್ಮಣನು ಕಳೆಗುಂದಿದ ಮುಖವುಳ್ಳವನಾಗಿ ಹೀಗೆಂದನು. ಇಂದ್ರ! ನೀನು ನನಗೆ ನಿನ್ನ ಪಾಪಪೂರುಷ ಪ್ರತಿಮೆಯನ್ನು ದಾನಮಾಡಿದೆ. ನಾನು ದಾಕ್ಷಿಣ್ಯದಿಂದ ಅದನ್ನು ಸ್ವೀಕರಿಸಿದೆನು. ಲೋಭದಿಂದಲ್ಲ. ನೀನು ನೋಡುತ್ತಿರುವಾಗಲೆ ಈ ನಗರವಾಸಿ ಬ್ರಾಹ್ಮಣರು ನನ್ನನ್ನು ನಿಂದಿಸುತ್ತಾರೆ.

೧೩೫. ಆದುದರಿಂದ ನಾನು ನಿನ್ನ ದಾನವನ್ನು ತೆಗೆದುಕೊಳ್ಳುವುದಿಲ್ಲ.

ಭೂಯೋಽಪಿ ತವ ದಾಸ್ಯಾಮಿ ನ ತ್ವಂ ಗೃಹ್ಣಾಸಿಚೇತ್ಪುನಃ ।
ಬ್ರಹ್ಮಶಾಪಂ ಪ್ರದಾಸ್ಯಾಮಿ ದಾರುಣಂ ಚ ಕ್ಷಯಾತ್ಮಕಂ ॥ ೧೩೬ ॥
ಇಂದ್ರ ಉವಾಚ:—
ವೇದಾಂಗಪಾರಗೋ ವಿಪ್ರೋ ಯದಿ ಕುರ್ಯಾತ್ಪ್ರತಿಗ್ರಹಂ ।
ನ ಸ ಪಾಪೇನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥ ೧೩೭ ॥
ತಸ್ಮಾತ್ತೇ ಪಾತಕಂ ನಾಽಸ್ತಿ ಶೃಣುಷ್ವಾತ್ರವಚೋ ಮಮ ।
ಏತೈಸ್ತ್ವಂ ಗರ್ಹಿತೋ ಯಸ್ಮಾದ್ಬ್ರಾಹ್ಮಣೈರ್ನಗರೋದ್ಭವೈಃ ॥ ೧೩೮ ॥
ಏತೇಷಾಂ ಸರ್ವಕೃತ್ಯೇಷು ಪ್ರಧಾನಸ್ತ್ವಂ ಭವಿಷ್ಯಸಿ ।
ಏತೇಷಾಂ ಪುತ್ರಪೌತ್ರಾ ಯೇ ಭವಿಷ್ಯಂತಿ ತಥಾ ತವ ॥ ೧೩೯ ॥
ತೇ ಸರ್ವೇ ಚಾಽಜ್ಞಯಾ ತೇಷಾಂ ವರ್ತಯಿಷ್ಯಂತ್ಯಸಂಶಯಂ ।
ಯುಷ್ಮದ್ವಾಕ್ಯವಿಹೀನಂ ಯತ್ಕೃತ್ಯಂ ಸ್ವಲ್ಪಮಪಿ ದ್ವಿಜ ॥ ೧೪೦ ॥
ತೇಷಾಂ ಸಂಪತ್ಸ್ಯತೇ ವಂಧ್ಯಂ ಯಥಾ ಭಸ್ಮಹುತಂ ತಥಾ ।
ಕಪಾಲಮೋಚನಂ ನಾಮ ಖ್ಯಾತಮೇತದ್ಭವಿಷ್ಯತಿ ॥ ೧೪೧ ॥
ಯೇಽತ್ರ ಸಂಸ್ಮೃತ್ಯ ಮನುಜಾಃ ಕಪಾಲಂ ಮಮ ಸದ್ದ್ವಿಜ ।
ತತ್ರ ಶ್ರಾದ್ಧಂ ಕರಿಷ್ಯಂತಿ ತೇ ನರಾ ಮುಕ್ತಿಸಂಯುತಾಃ ।
ಶ್ರಾದ್ಧಪಕ್ಷೇ ವಿಶೇಷೇಣ ಪ್ರಯಾಸ್ಯಂತಿ ಪರಾಂ ಗತಿಂ ॥ ೧೪೨ ॥

---

೧೩೬. ಮರಳಿ ನಿನಗೆ ಕೊಡುತ್ತೇನೆ. ನೀನು ತೆಗೆದುಕೊಳ್ಳದಿದ್ದರೆ ಭಯಂಕರ ಕ್ಷಯಾತ್ಮಕವಾದ ಬ್ರಹ್ಮಶಾಪವನ್ನು ಕೊಡುವೆನು.

೧೩೭. ಇಂದ್ರನು ಹೇಳುತ್ತಾನೆ:—ವೇದವೇದಾಂಗಪಾರಂಗತನಾದ ಬ್ರಾಹ್ಮಣನು ಪ್ರತಿಗ್ರಹಮಾಡಿದರೆ ಅವನು ತಾವರೆ ಎಲೆಯು ನೀರಿನಿಂದ ಅಂಟಿ ಕೊಳ್ಳದಂತೆ ಪಾಪಲಿಪ್ತನಾಗುವುದಿಲ್ಲ.

೧೩೮–೧೪೧. ಆದುದರಿಂದ ನಿನಗೆ ಪಾಪ ಸಂಭವಿಸುವುದಿಲ್ಲ. ಈ ವಿಷಯ ದಲ್ಲಿ ನನ್ನ ಮಾತನ್ನು ಕೇಳು. ಈ ನಾಗರ ಬ್ರಾಹ್ಮಣರು ನಿನ್ನನ್ನು ನಿಂದಿಸಿರು ವುದರಿಂದ ಇವರ ಸಕಲ ಕಾರ್ಯಗಳಲ್ಲಿ ನೀನು ಪ್ರಧಾನನಾಗುವೆ. ಇವರ ಪುತ್ರ ಪೌತ್ರರು ನಿನ್ನ ಪುತ್ರ ಪೌತ್ರರ ಅಪ್ಪಣೆಯಂತೆ ನಿಶ್ಚಯವಾಗಿಯೂ ನಡೆಯುವರು. ನಿನ್ನ ಮಾತನ್ನು ಮೀರಿ ಇವರು ಮಾಡಿದ ಅಲ್ಪಕಾರ್ಯವೂ ಬೂದಿಯಲ್ಲಿ ಹೋಮಿಸಿದಂತೆ ನಿಷ್ಫಲವಾಗುವುದು. ಈ ತೀರ್ಥವು ಕಪಾಲಮೋಚನವೆಂದು ಪ್ರಸಿದ್ಧವಾಗುವುದು.

೧೪೨. ಎಲೈ ಬ್ರಾಹ್ಮಣನೆ! ಕಪಾಲವನ್ನು ಸ್ಮರಿಸಿ ಇಲ್ಲಿ ಶ್ರಾದ್ಧಮಾಡು ವವರು ಮುಕ್ತಿಯನ್ನು ಪಡೆಯುವರು. ಅವರು ಶ್ರಾದ್ಧಪಕ್ಷದಲ್ಲಿ ವಿಶೇಷವಾಗಿ ಉತ್ತಮ ಗತಿಯನ್ನು ಹೊಂದುವರು.

ಸ್ಥಾನಬಾಹ್ಯದ್ವಿಜಾತೀನಾಂ ಕುಲೇ ದಾರಪರಿಗ್ರಹಂ ।
ಕೃತ್ವಾ ತ್ವದ್ಗೋತ್ರಸಂಭೂತಾ ಬ್ರಾಹ್ಮಣಾ ಮತ್ಪ್ರಸಾದತಃ ॥ ೧೪೩ ॥
ವ್ಯವಹಾರ್ಯಾ ಭವಿಷ್ಯಂತಿ ನಗರೇ ಸರ್ವಕರ್ಮಸು ।
ಏವಮುಕ್ತ್ವಾ ಸಹಸ್ರಾಕ್ಷಸ್ತತಶ್ಚಾಽದರ್ಶನಂ ಗತಃ ॥ ೧೪೪ ॥
ವಾತೋಽಪಿ ತೇನ ವಿತ್ತೇನ ಪ್ರತಿಗ್ರಹಕೃತೇನ ಚ ।
ಚಕಾರ ತತ್ರ ಪ್ರಾಸಾದಂ ದೇವದೇವಸ್ಯ ಶೂಲಿನಃ ॥ ೧೪೫ ॥
ತತಃ ಪ್ರೋವಾಚ ಶಕ್ರಸ್ತಾನ್ಬ್ರಾಹ್ಮಣಾನ್ನಗರೋದ್ಭವಾನ್ ।
ಕಪಾಲಮೋಚನೇ ಸ್ನಾತ್ವಾ ಯೋದೇವಂ ಹ್ಯರ್ಚಯಿಷ್ಯತಿ ॥ ೧೪೬ ॥
ಬ್ರಹ್ಮಹತ್ಯೋದ್ಭವಂ ಪಾಪಂ ತಸ್ಯ ನಶ್ಯತ್ಯಸಂಶಯಂ ।
ಮಹಾಪಾತಕಯುಕ್ತೋ ವಾ ವಿಪಾಪ್ಮಾ ಸಂಭವಿಷ್ಯತಿ ॥ ೧೪೭ ॥
ಸ ತಥೇತಿ ಪ್ರತಿಜ್ಞಾಯ ಬ್ರಾಹ್ಮಣಾನ್ನಗರೋದ್ಭವಾನ್ ।
ತತ್ರೈವ ಸ್ವಾಶ್ರಮಂ ಕೃತ್ವಾ ಪೂಜಯಾಮಾಸ ಶಂಕರಂ ॥ ೧೪೮ ॥
ತತಃ ಪ್ರಭೃತಿ ಯತ್ಕಿಂಚಿತ್ತೇಷಾಂ ಕೃತ್ಯಂ ಪ್ರಜಾಯತೇ ।
ತದ್ವಾಕ್ಯೇನ ಪ್ರಕುರ್ವಂತಿ ತತ್ರ ಯೇ ನಾಗರಾಃ ಸ್ಥಿತಾಃ ॥ ೧೪೯ ॥
ಏತಸ್ಮಾತ್ಕಾರಣಾಜ್ಜಾತೋ ಮಧ್ಯಗೋ ದ್ವಿತೀಯಸ್ತ್ವಿಹ ॥ ೧೫೦ ॥

---

೧೪೩–೧೪೪. ನಿನ್ನ ವಂಶದಲ್ಲಿ ಜನಿಸಿದ ಬ್ರಾಹ್ಮಣರು ನನ್ನ ಅನುಗ್ರಹದಿಂದ ಈ ಸ್ಥಾನಭ್ರಷ್ಟಬ್ರಾಹ್ಮಣರ ಕನ್ಯೆಯನ್ನು ವಿವಾಹಮಾಡಿಕೊಂಡು ನಗರದ ಸಮಸ್ತ ಕಾರ್ಯಗಳಲ್ಲಿ ವ್ಯವಹಾರ್ಯರಾಗುವರು. ಇಂದ್ರನು ಹೀಗೆ ಹೇಳಿ ಅದೃಶ್ಯನಾದನು.

೧೪೫. ವಾತಬ್ರಾಹ್ಮಣನು ಇಂದ್ರನು ಕೊಟ್ಟ ಆ ದ್ರವ್ಯದಿಂದ ಕಪಾಲಮೋಚನೇಶ್ವರನಿಗೆ ಆಲಯವನ್ನು ಕಟ್ಟಿಸಿದನು.

೧೪೬–೧೪೭. ಅನಂತರ ಶಕ್ರನು ಆ ನಗರ ಬ್ರಾಹ್ಮಣರನ್ನು ಕುರಿತು ಇಂತೆಂದನು. ಈ ಕಪಾಲಮೋಚನ ತೀರ್ಥದಲ್ಲಿ ಮಿಂದು ಕಪಾಲೇಶ್ವರನನ್ನು ಪೂಜಿಸಿದವನ ಬ್ರಹ್ಮಹತ್ಯೆಯು ನಿಶ್ಚಯವಾಗಿ ತೊಲಗುವುದು. ಮಹಾ ಪಾಪಿಯೂ ಪಾಪರಹಿತನಾಗುವನು.

೧೪೮. ವಾತನು ಹಾಗೆಯೇ ಆಗಲೆಂದು ನಾಗರ ಬ್ರಾಹ್ಮಣರನ್ನು ಒಪ್ಪಿಸಿ ಅಲ್ಲಿಯೇ ಆಶ್ರಮವನ್ನು ರಚಿಸಿಕೊಂಡು ಶಂಕರನನ್ನು ಪೂಜಿಸಿದನು.

೧೪೯. ಬಳಿಕ ಅಲ್ಲಿರುವ ನಾಗರ ಬ್ರಾಹ್ಮಣರು ತಮ್ಮ ಕಾರ್ಯವನ್ನೆಲ್ಲ ಆ ವಾತನ ಮಾತಿನಂತೆ ಮಾಡುತ್ತಿದ್ದರು.

೧೫೦. ಈ ಕಾರಣದಿಂದಲೇ ಇಲ್ಲಿ ಮಧ್ಯಗನೆಂಬ ಎರಡನೆಯ ಬ್ರಾಹ್ಮಣನಾದನು.

ಏತದ್ವಃ ಸರ್ವಮಾಖ್ಯಾತಮಾಖ್ಯಾನಂ ಪಾಪನಾಶನಂ ।
ಕಪಾಲೇಶ್ವರದೇವಸ್ಯ ಶೃಣ್ವತಾಂ ಪಠತಾಂ ನೃಣಾಂ ॥ ೧೫೧ ॥
ಯಥಾ ದೇವೇಶ್ವರಸ್ಯಾತ್ರ ಪಾಪಂ ನಷ್ಟಂ ಮಹಾತ್ಮನಃ ।
ಬ್ರಹ್ಮಹತ್ಯಾ ಯಥಾ ನಷ್ಟಾ ತಸ್ಮಿಂಸ್ತೀರ್ಥೇ ದ್ವಿಜೋತ್ತಮಾಃ ॥ ೧೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಪಾಲಮೋಚನೇಶ್ವರೋತ್ಪತ್ತಿರ್ವರ್ಣನಂ" ನಾಮ
ಏಕೋನಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೧೫೧–೧೫೨. ದ್ವಿಜವರ್ಯರೆ! ಕೇಳುತ್ತಿರುವ ನಿಮಗೆ ಮಹಾತ್ಮನಾದ ಇಂದ್ರನ ಪಾಪವೂ, ಬ್ರಹ್ಮಹತ್ಯೆಯೂ ಆ ತೀರ್ಥದಲ್ಲಿ ಹೇಗೆ ಪರಿಹಾರವಾಯಿ ತೆಂಬುದನ್ನು ಸಂಪೂರ್ಣವಾಗಿ ನಿಮಗೆ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಪಾಲಮೋಚನೇಶ್ವರೋತ್ಪತ್ತಿರ್ವರ್ಣನ"ವೆಂಬ
ಇನ್ನೂರ ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರ್ಯುತ್ತರದ್ವಿಶತತಮೋಽಧ್ಯಾಯಃ

### ಪಾಪಪಿಂಡಪ್ರದಾನವಿಧಾನವರ್ಣನಂ

ಆನರ್ತ ಉವಾಚ:—

ಮೂರ್ಖತ್ವಾದ್ವಾ ಪ್ರಮಾದಾದ್ವಾ ಕಾಮಾದ್ವಾಲಸ್ಯತೋಽಪಿವಾ ।
ಯೋ ನರಃ ಕುರುತೇ ಪಾಪಂ ಪ್ರಾಯಶ್ಚಿತ್ತಂ ಕರೋತಿ ನ ॥ ೧ ॥
ತಸ್ಯ ಪಾಪಕ್ಷಯಕರಂ ಪುಣ್ಯಂ ಬ್ರೂಹಿ ದ್ವಿಜೋತ್ತಮ ।
ಯೇನ ಮುಕ್ತಿರ್ಭವೇತ್ಸದ್ಯೋ ಯದಿ ತುಷ್ಟೋಽಸಿ ಮೇ ಪ್ರಭೋ ॥ ೨ ॥
ಲೋಭಮೋಹಪರೋ ಯೋಽಸೌ ಪಾಪಪಿಂಡಂ ಮಹಾಮುನೇ ।
ಪ್ರದದಾತಿ ವಿಧಿಂ ಬ್ರೂಹಿ ಯೇನ ಯಚ್ಛಾಮ್ಯಹಂ ದ್ರುತಂ ॥ ೩ ॥

ಭರ್ತೃಯಜ್ಞ ಉವಾಚ:—

ದದ್ಯಾತ್ಸ್ವಪಿಂಡಂ ಸೌವರ್ಣಂ ಪಂಚವಿಂಶತ್ಪಲಾತ್ಮಕಂ ॥ ೪ ॥
ವಿಧಾಯಾಽಪರ ಪಕ್ಷೇ ತು ಸ್ನಾಪಯಿತ್ವಾ ವಿಧಾನತಃ ।
ಮಂಡಪಾದ್ಯಂ ಚ ಪ್ರಾಕ್ ಕೃತ್ವಾ ಸ್ನಾತ್ವಾ ಧೌತಾಂಬರಃ ಶುಚಿಃ ॥ ೫ ॥
ತದಾ ಸ್ವರೂಪಂ ಪೃಥ್ವ್ಯಾದಿ ಪೂಜಯೇತ್ಪಾಪಕೃನ್ನರಃ ।
ತಥಾ ಸಮುಚ್ಯತೇ ಪಾಪಾತ್ತತ್ಕೃತಾದ್ಧಿ ನ ಸಂಶಯಃ ॥ ೬ ॥

---

### ಕನ್ನಡದ ಅನುವಾದ

### ಪಾಪಪಿಂಡಪ್ರದಾನವಿಧಾನವರ್ಣನ

೧-೨. ಆನರ್ತನು ಹೇಳುತ್ತಾನೆ:—ಮಹರ್ಷಿಯೆ! ನೀನು ತುಷ್ಟನಾಗಿದ್ದರೆ ಮೂರ್ಖತೆಯಿಂದಾಗಲಿ, ಪ್ರಮಾದದಿಂದಾಗಲಿ, ಕಾಮದಿಂದಾಗಲಿ, ಆಲಸ್ಯದಿಂದಾಗಲಿ ಪಾಪವನ್ನು ಮಾಡಿ ಪ್ರಾಯಶ್ಚಿತ್ತವನ್ನು ಮಾಡದ ಮಾನವನ ಪಾಪವನ್ನು ಪರಿಹರಿಸಿ ಮುಕ್ತಿಯನ್ನೀಯುವ ಪುಣ್ಯವನ್ನು ಹೇಳು.

೩. ಲೋಭಮೋಹಪರನಾದ ಇವನು ಪಾಪಪಿಂಡವನ್ನು ದಾನಮಾಡುವ ವಿಧಾನವನ್ನು ಹೇಳು. ಅದರಿಂದ ನಾನು ಕೂಡಲೆ ಪಾಪಪಿಂಡವನ್ನು ದಾನ ಮಾಡುವೆನು.

೪-೬. ಭರ್ತೃಯಜ್ಞನು ಹೇಳುತ್ತಾನೆ:—ಅಪರಪಕ್ಷದಲ್ಲಿ ಪಾಪಿಯಾದ ನರನು ಇಪ್ಪತ್ತೈದು ತೊಲೆ ತೂಕದ ಸುವರ್ಣಪ್ರತಿಮೆಯನ್ನು ನಿರ್ಮಿಸಿ ಅದನ್ನು ಅಭಿಷೇಕಮಾಡಿ ಮಂಡಪಾದಿಗಳನ್ನು ರಚಿಸಿ ಮಿಂದು ಮಡಿಬಟ್ಟೆಯನ್ನುಟ್ಟು ಶುದ್ಧನಾಗಿ ಪೃಥ್ವ್ಯಾದಿಸ್ವರೂಪವನ್ನು ಪೂಜಿಸಬೇಕು. ಅದರಿಂದವನು ನಿಜವಾಗಿಯೂ ಮುಕ್ತನಾಗುವನು.

ಚತುರ್ವಿಂಶತಿ ತತ್ವಾನಿ ಪೃಥಿವ್ಯಾದೀನಿ ಯಾನಿ ಚ ।
ತೇಷಾಂ ನಾಮಭಿಸ್ತತ್ಪಿಂಡಂ ಪೂಜಯೇತನ್ನರಾಧಿಪಃ ॥ ೭ ॥
ಓಂ ಪೃಥಿವ್ಯೈ ನಮಃ ॥ ಓಂ ಅದ್ಭ್ಯೋ ನಮಃ ॥ ಓಂ ತೇಜಸೇ ನಮಃ ॥ ಓಂ ವಾಯವೇ ನಮಃ ॥ ಓಂ ಆಕಾಶಾಯ ನಮಃ ॥ ಓಂ ಘ್ರಾಣಾಯ ನಮಃ ॥ ಓಂ ಜಿಹ್ವಾಯೈ ನಮಃ ॥ ಓಂ ಚಕ್ಷುಷೇ ನಮಃ ॥ ಓಂ ತ್ವಚೇ ನಮಃ ॥ ಓಂ ಶ್ರೋತ್ರಾಯ ನಮಃ ॥ ಓಂ ಗಂಧಾಯ ನಮಃ ॥ ಓಂ ರಸಾಯ ನಮಃ ॥ ಓಂ ರೂಪಾಯ ನಮಃ ॥ ಓಂ ಸ್ಪರ್ಶಾಯ ನಮಃ ॥ ಓಂ ಶಬ್ದಾಯ ನಮಃ ॥ ಓಂ ವಾಚೇ ನಮಃ ॥ ಓಂ ಪಾಣಿಭ್ಯಾಂ ನಮಃ ॥ ಓಂ ಪಾದಾಭ್ಯಾಂ ನಮಃ ॥ ಓಂ ಪಾಯವೇ ನಮಃ ॥ ಓಂ ಉಪಸ್ಥಾಯ ನಮಃ ॥ ಓಂ ಮನಸೇ ನಮಃ ॥ ಓಂ ಬುದ್ಧ್ಯೈ ನಮಃ ॥ ಓಂ ಚಿತ್ತಾಯ ನಮಃ ॥ ಓಂ ಅಹಂಕಾರಾಯ ನಮಃ ॥ ಓಂ ಕ್ಷೇತ್ರಾತ್ಮನೇ ನಮಃ ॥ ಓಂ ಪರಮಾತ್ಮನೇ ನಮಃ ॥

ಧೂಪಂ ಧೂರಸಿ ಮಂತ್ರೇಣ ಅಗ್ನಿರ್ಜ್ಯೋತೀತಿ ದೀಪಕಂ ।
ಯುವಾ ಸುವಾಸೇತಿ ಚ ತತೋ ವಾಸಾಂಸಿ ಪರಿಧಾಪಯೇತ್ ॥ ೮ ॥
ತತೋ ಬ್ರಾಹ್ಮಣಮಾನೀಯ ವೇದವೇದಾಂಗಪಾರಗಂ ।
ಪ್ರಕ್ಷಾಲ್ಯ ಚರಣೌ ತಸ್ಯ ವಾಸಾಂಸಿ ಪರಿಧಾಪಯೇತ್ ॥ ೯ ॥

---

೭. ಪೃಥಿವ್ಯಾದಿ ಚತುರ್ವಿಂಶತಿ ತತ್ವಗಳನ್ನು ಅವುಗಳ ನಾಮಗಳಿಂದ ಆ ಪ್ರತಿಮೆಯಲ್ಲಿ ಈ ಮಂತ್ರಗಳಿಂದ ಪೂಜಿಸಬೇಕು. ಓಂ ಪೃಥಿವ್ಯೈ ನಮಃ, ಓಂ ಅದ್ಭ್ಯೋ ನಮಃ, ಓಂ ತೇಜಸೇ ನಮಃ, ಓಂ ವಾಯವೇ ನಮಃ, ಓಂ ಆಕಾಶಾಯ ನಮಃ, ಓಂ ಘ್ರಾಣಾಯ ನಮಃ, ಓಂ ಜಿಹ್ವಾಯೈ ನಮಃ, ಓಂ ಚಕ್ಷುಷೇ ನಮಃ, ಓಂ ತ್ವಚೇ ನಮಃ, ಓಂ ಶ್ರೋತ್ರಾಯ ನಮಃ, ಓಂ ಗಂಧಾಯ ನಮಃ, ಓಂ ರಸಾಯ ನಮಃ, ಓಂ ರೂಪಾಯ ನಮಃ, ಓಂ ಸ್ಪರ್ಶಾಯ ನಮಃ, ಓಂ ಶಬ್ದಾಯ ನಮಃ, ಓಂ ವಾಚೇ ನಮಃ, ಓಂ ಪಾಣಿಭ್ಯಾಂ ನಮಃ, ಓಂ ಪಾದಾಭ್ಯಾಂ ನಮಃ, ಓಂ ಪಾಯವೇ ನಮಃ, ಓಂ ಉಪಸ್ಥಾಯ ನಮಃ, ಓಂ ಮನಸೇ ನಮಃ, ಓಂ ಬುದ್ಧ್ಯೈ ನಮಃ, ಓಂ ಚಿತ್ತಾಯ ನಮಃ, ಓಂ ಅಹಂಕಾರಾಯ ನಮಃ, ಓಂ ಕ್ಷೇತ್ರಾತ್ಮನೇ ನಮಃ, ಓಂ ಪರಮಾತ್ಮನೇ ನಮಃ.

೮. ಧೂರಸೀತ್ಯಾದಿ ಮಂತ್ರದಿಂದ ಧೂಪವನ್ನೂ, ಅಗ್ನಿರ್ಜ್ಯೋತಿರಿತ್ಯಾದಿ ಮಂತ್ರದಿಂದ ದೀಪವನ್ನೂ, ಯುವಾಸುವಾಸೇತ್ಯಾದಿ ಮಂತ್ರದಿಂದ ವಸ್ತ್ರವನ್ನೂ ಅರ್ಪಿಸಬೇಕು.

೯–೧೧. ಅನಂತರ ವೇದವೇದಾಂಗಪಾರಂಗತನಾದ ಬ್ರಾಹ್ಮಣನನ್ನು ಕರೆತಂದು ಅವನ ಚರಣಗಳನ್ನು ತೊಳೆದು ಬಟ್ಟೆಯನ್ನುಡಿಸಿ ಕೇಯೂರ, ಕಂಕಣ,

ಕೇಯೂರೈಃ ಕಂಕಣೈಶ್ಚೈವ ಅಂಗುಲೀಯಕಭೂಷಣೈಃ ॥ ೧೦ ॥
ಭೂಷಯಿತ್ವಾ ತನುಂ ತಸ್ಯ ತತೋ ಮೂರ್ತಿಂ ಸಮಾನಯೇತ್ ।
ಮಂತ್ರೇಣಾನೇನ ರಾಜೇಂದ್ರ ಬ್ರಾಹ್ಮಣಾಯ ನಿವೇದಯೇತ್ ॥ ೧೧ ॥
ಏಷ ಆತ್ಮಾ ಮಯಾ ದತ್ತಸ್ತವ ಹೇಮಮಯೋ ದ್ವಿಜ ।
ಯತ್ಕಿಂಚಿದ್ವಿಹಿತಂ ಪಾಪಂ ಪೂರ್ವಂ ಭೂಯಾತ್ತವಾಽಖಿಲಂ ॥ ೧೨ ॥

॥ ಇತಿ ದಾನಮಂತ್ರಃ ॥

ತತಸ್ತು ಬ್ರಾಹ್ಮಣೋ ರಾಜನ್ಮಂತ್ರಮೇತಂ ಸಮುಚ್ಚರೇತ್ ॥ ೧೩ ॥
ಯತ್ಕಿಂಚಿದ್ವಿಹಿತಂ ಪಾಪಂ ತ್ವಯಾ ಪೂರ್ವಂ ಮಯಾ ಹಿ ತತ್ ।
ಗೃಹೀತಂ ಮೂರ್ತಿರೂಪಂ ತತ್ತತಸ್ತ್ವಂ ಪಾಪವರ್ಜಿತಃ ॥ ೧೪ ॥

॥ ಇತಿ ಪ್ರತಿಗ್ರಹಮಂತ್ರಃ ॥

ಏವಂ ದತ್ವಾ ವಿಧಾನೇನ ತತೋ ವಿಪ್ರಂ ವಿಸರ್ಜಯೇತ್ ।
ಏವಂ ಕೃತೇ ತತೋ ರಾಜಂಸ್ತಸ್ಮೈ ದತ್ವಾಽಥ ದಕ್ಷಿಣಾಂ ॥ ೧೫ ॥
ಯಥಾ ತುಷ್ಟಿಂ ಸಮಭ್ಯೇತಿ ತತಃ ಪಾಪಂ ನಯತ್ಯಸೌ ।
ತಸ್ಮಿನ್ಕೃತೇ ಮಹಾರಾಜ ಪ್ರತ್ಯಯಸ್ತತ್ಕ್ಷಣಾದ್ಭವೇತ್ ॥ ೧೬ ॥
ಶರೀರಂ ಲಘುತಾಮೇತಿ ತೇಜೋವೃದ್ಧಿಶ್ಚ ಜಾಯತೇ ।
ಸ್ವಪ್ನೇ ಚ ವೀಕ್ಷತೇ ರಾತ್ರೌ ಸಂತುಷ್ಟಮನಸಃ ಸ್ಥಿತಾನ್ ॥ ೧೭ ॥

---

ಉಂಗುರಗಳಿಂದ ಅವನ ಶರೀರವನ್ನು ಅಲಂಕರಿಸಿ ಪಾಪಪೂರುಷಮೂರ್ತಿಯನ್ನು ತಂದು ಈ ಮಂತ್ರದಿಂದ ಆ ಬ್ರಾಹ್ಮಣನಿಗೆ ದಾನ ಮಾಡಬೇಕು.

೧೨. ಎಲೈ ದ್ವಿಜನೆ! ಸುವರ್ಣಮಯವಾದ ನನ್ನ ಶರೀರವನ್ನು ನಿನಗೆ ಕೊಟ್ಟಿರುವೆನು. ನಾನು ಹಿಂದೆ ಮಾಡಿದ ಪಾಪವೆಲ್ಲ ನಿನ್ನನ್ನು ಸೇರಲಿ. (ಇದು ದಾನಮಾಡುವ ಮಂತ್ರವು.)

೧೩. ದೊರೆಯೆ! ಅನಂತರ ಬ್ರಾಹ್ಮಣನು ಈ ಮಂತ್ರವನ್ನುಚ್ಚರಿಸಬೇಕು.

೧೪. ನೀನು ಹಿಂದೆ ಮಾಡಿದ ಪಾಪವನ್ನು ನಾನು ಮೂರ್ತಿರೂಪದಿಂದ ಸ್ವೀಕರಿಸಿರುವೆನು. ಆದುದರಿಂದ ನೀನು ಪಾಪರಹಿತನಾಗಿರುವೆ. (ಇದು ಪ್ರತಿಗ್ರಹಮಂತ್ರವು.)

೧೫–೧೬. ಹೀಗೆ ವಿಧಿಯಂತೆ ದಾನಮಾಡಿ ದಕ್ಷಿಣೆಯನ್ನಿತ್ತು ಬ್ರಾಹ್ಮಣನನ್ನು ಕಳುಹಿಸಿದರೆ ಅವನು ತಾನು ತೃಪ್ತಿಗೊಂಡಂತೆ ಯಜಮಾನನ ಪಾಪವನ್ನು ಪರಿಹರಿಸುವನು. ಮಹಾರಾಜ! ಅದನ್ನು ಮಾಡಿದರೆ ಕೂಡಲೆ ನಂಬಿಕೆ ಯುಂಟಾಗುವುದು.

೧೭–೧೮. ಶರೀರವು ಲಘುವಾಗುವುದು. ತೇಜಸ್ಸು ಹೆಚ್ಚುವುದು. ರಾತ್ರಿ ಸ್ವಪ್ನದಲ್ಲಿ ಶ್ವೇತವಸ್ತ್ರ, ಮಾಲ್ಯಾನುಲೇಪನಗಳಿಂದ ಅಲಂಕೃತರಾಗಿ

ನರಾನ್ ಸ್ತ್ರಿಯಃ ಸಿತೈರ್ವಸ್ತ್ರೈಃ ಶ್ವೇತಮಾಲ್ಯಾನುಲೇಪನೈಃ ।
ಶ್ವೇತಾನ್ಗೋವೃಷಭಾನಶ್ವಾಂಸ್ತೀರ್ಥಾನಿ ವಿವಿಧಾನಿ ಚ ॥ ೧೮ ॥
ಏತತ್ತೇ ಸರ್ವಮಾಖ್ಯಾತಂ ಪಾಪಪಿಂಡಸ್ಯ ದಾಪನಂ ।
ಶ್ರವಣಾದಪಿ ರಾಜೇಂದ್ರ ಯಸ್ಯ ಪಾಪೈಃ ಪ್ರಮುಚ್ಯತೇ ॥ ೧೯ ॥
ಅನ್ಯತ್ರಾಽಪಿ ಮಹಾದಾನಂ ಪಾಪಪಿಂಡೋ ಹರೇನ್ನೃಪ ॥ ೨೦ ॥
ಏಕಜನ್ಮಕೃತಂ ಪಾಪಂ ನಿಜಕಾಯೇನ ನಿರ್ಮಿತಂ ।
ಕಪಾಲೇಶ್ವರದೇವಸ್ಯ ಸಹಸ್ರಗುಣಿತಂ ಹರೇತ್ ॥ ೨೧ ॥
ಪೂರ್ವವಚ್ಚೈವ ಕರ್ತವ್ಯೋ ವೇದಿಮಂಡಪಯೋರ್ವಿಧಿಃ ।
ಪರಂ ಹೋಮಃ ಪ್ರಕರ್ತವ್ಯೋ ಗಾಯತ್ರ್ಯಾ ಕೇವಲಂ ನೃಪ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಾಪಪಿಂಡಪ್ರದಾನವಿಧಾನವರ್ಣನಂ" ನಾಮ
ಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

ಸಂತುಷ್ಟರಾದ ಸ್ತ್ರೀಪುರುಷರನ್ನೂ, ಶ್ವೇತವರ್ಣದ ಗೋವು, ವೃಷಭ, ಕುದುರೆ, ವಿವಿಧ ತೀರ್ಥಗಳು ಇವುಗಳನ್ನೂ ನೋಡುವನು.

೧೯. ಹೀಗೆ ನಿನಗೆ ಪಾಪಪಿಂಡದ ದಾನದ ವಿಧಿಯನ್ನು ಹೇಳಿದ್ದೇನೆ. ಇದನ್ನು ಕೇಳುವುದರಿಂದಲೇ ನರನು ಪಾಪಮುಕ್ತನಾಗುವನು.

೨೦–೨೧. ಇತರ ಸ್ಥಳದಲ್ಲಿಯೂ ಪಾಪಪಿಂಡದಾನವು ಒಂದು ಜನ್ಮದಲ್ಲಿ ತನ್ನ ಶರೀರದಿಂದ ಮಾಡಿದ ಪಾಪವನ್ನು ನೀಗಿಸುವುದು. ಕಪಾಲೇಶ್ವರದೇವನ ಹತ್ತಿರದಲ್ಲಿ ಸಾವಿರಮಡಿಯಷ್ಟು ಪಾಪವನ್ನು ಪರಿಹರಿಸುವುದು.

೨೨. ಮೊದಲಿನಂತೆಯೇ ವೇದಿಮಂಡಪಗಳನ್ನು ಮಾಡಿ ಕೇವಲ ಗಾಯತ್ರಿಯಿಂದ ಹೋಮ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಾಪಪಿಂಡಪ್ರದಾನವಿಧಾನವರ್ಣನ"ವೆಂಬ
ಇನ್ನೂರೆಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ಸಪ್ತಲಿಂಗೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥಾಽನ್ಯದಪಿ ತತ್ರಾಽಸ್ತಿ ಸುಪುಣ್ಯಂ ಲಿಂಗಸಪ್ತಕಂ ।
ಯೇನಾಽರ್ಚಿತೇನ ದೃಷ್ಟೇನ ಪೂಜಿತೇನ ವಿಶೇಷತಃ ॥ ೧ ॥
ದೀರ್ಘಾಯುರ್ಜಾಯತೇ ಮರ್ತ್ಯಃ ಸರ್ವರೋಗವಿವರ್ಜಿತಃ ।
ಮಾರ್ಕಂಡೇಶ್ವರ ಇತ್ಯುಕ್ತಸ್ತತ್ರದೇವೋ ಮಹೇಶ್ವರಃ ॥ ೨ ॥
ಇಂದ್ರದ್ಯುಮ್ನೇಶ್ವರೋಽನ್ಯಸ್ತು ಸರ್ವಪಾಪಹರೋ ಹರಃ ।
ಪಾಲೇಶ್ವರಸ್ತಥಾ ಚೈವ ಸರ್ವವ್ಯಾಧಿವಿನಾಶನಃ ॥ ೩ ॥
ತತೋ ಘಂಟಶಿವಃ ಖ್ಯಾತೋ ಯೋ ಘಂಟೇನ ಪ್ರತಿಷ್ಠಿತಃ ।
ಕಲಶೇಶ್ವರ ಸಂಜ್ಞಸ್ತು ವಾನರೇಶ್ವರ ಸಂಯುತಃ ॥ ೪ ॥
ಈಶಾನಶಿವ ಇತ್ಯುಕ್ತಸ್ತತ್ರಕ್ಷೇತ್ರೇಶ್ವರೇಶ್ವರಃ ।
ಪೂಜಿತೋ ಮಾನವೈರ್ಭಕ್ತ್ಯಾ ಕಾಮಾನ್ ಯಚ್ಛತ್ಯಮಾನುಷಾನ್ ॥ ೫ ॥
ವಾಂಛಿತಾನ್ ಮನಸಾ ಸರ್ವಾನ್ ಕಲಿಕಾಲೇಽಪಿ ಸಂಸ್ಥಿತೇ ॥ ೬ ॥

ಋಷಯ ಊಚುಃ :—

ಕೋಽಯಂ ಮಾರ್ಕಂಡಸಂಜ್ಞಸ್ತು ಯೇನ ಲಿಂಗಂ ಪ್ರತಿಷ್ಠಿತಂ ।
ಇಂದ್ರದ್ಯುಮ್ನೋ ಮಹೀಪಾಲಃ ಕತಮೋ ವದ ಸೂತಜ ॥ ೭ ॥

---

## ಕನ್ನಡದ ಅನುವಾದ

### ಸಪ್ತಲಿಂಗೋತ್ಪತ್ತಿಮಾಹಾತ್ಮ್ಯವರ್ಣನ

೧–೬. ಸೂತನು ಹೇಳುತ್ತಾನೆ :—ಅಲ್ಲಿ ಪುಣ್ಯಕರವಾದ ಇತರ ಏಳು ಲಿಂಗಗಳಿರುವುವು. ಅವುಗಳನ್ನು ಅರ್ಚಿಸುವುದರಿಂದಲೂ, ನೋಡುವುದರಿಂದಲೂ, ಪೂಜಿಸುವುದರಿಂದಲೂ ನರನು ಸಮಸ್ತ ರೋಗರಹಿತನಾಗಿ ದೀರ್ಘಾಯುಷ್ಮಂತನಾಗುವನು. ಅಲ್ಲಿರುವ ಮಾರ್ಕಂಡೇಶ್ವರ, ಸಕಲ ಪಾಪಗಳನ್ನು ಪರಿಹರಿಸುವ ಇಂದ್ರದ್ಯುಮ್ನೇಶ್ವರ, ಸಕಲ ರೋಗನಾಶಕನಾದ ಪಾಲೇಶ್ವರ, ಘಂಟನು ಸ್ಥಾಪಿಸಿದ ಘಂಟಾಶಿವ, ಕಲಶೇಶ್ವರ, ವಾನರೇಶ್ವರ, ಈಶಾನಶಿವ, ಕ್ಷೇತ್ರೇಶ್ವರೇಶ್ವರ ಇವರು ಮಾನವರು ಭಕ್ತಿಯಿಂದ ಪೂಜಿಸಿದರೆ ಕಲಿಕಾಲದಲ್ಲಿಯೂ ಅಮಾನುಷೇಷ್ಟಾರ್ಥಗಳನ್ನು ಕೊಡುವರು.

೭–೮. ಋಷಿಗಳು ಹೇಳುತ್ತಾರೆ :—ಮಾರ್ಕಂಡೇಶ್ವರ ಲಿಂಗವನ್ನು ಪ್ರತಿಷ್ಠೆ

ತಥಾ ಪಾಲಕನಾಮಾ ಚ ಯೇನಾಽಯಂ ಸ್ಥಾಪಿತೋ ಹರಃ ।
ತಥಾ ಯೋ ಘಂಟಿಸಂಜ್ಞಸ್ತು ಕಸ್ಮಿಂಜಾತಃ ಸ ಚಾಽನ್ವಯೇ ॥ ೮ ॥
ಕಲಶಾಖ್ಯಸ್ತು ಯಃ ಖ್ಯಾತೋ ವಾನರೇಣ ಸಮನ್ವಿತಃ ।
ಈಶಾನೋಽಪ್ಯಖಿಲಂ ಬ್ರೂಹಿ ಪರಂ ನಃ ಕೌತುಕಂ ಸ್ಥಿತಂ ॥ ೯ ॥
ಯತೋಽತ್ರ ಜಾಯತೇ ಶ್ರೇಯಃ ಪುನಃ ಪುಂಸಾಂ ಪ್ರಕೀರ್ತಯ ।
ಯ್ಯೈರೇತೈಃ ಸ್ಥಾಪಿತಾ ದೇವಾಃ ಕ್ಷೇತ್ರೇಽಸ್ಮಿನ್ಮಾನವೋತ್ತಮೈಃ ॥ ೧೦ ॥
ತಥಾ ತೇಷಾಂ ಸಮಾಚಾರಂ ಪ್ರಭಾವಂ ಚೈವ ಸೂತಜ ।
ದಾನಂ ವಾಽಪಿ ಯಥಾ ಕಾಲಂ ಮಂತ್ರಾಂಶ್ಚ ವಿಸ್ತರಾದ್ವದ ॥ ೧೧ ॥

ಸೂತ ಉವಾಚ :—

ಅಹಂ ವಃ ಕೀರ್ತಯಿಷ್ಯಾಮಿ ಕಥಾಮೇತಾಂ ಪುರಾತನೀಂ ।
ಕಥಿತಾಂ ಭರ್ತೃಯಜ್ಞೇನ ಆನರ್ತಾಧಿಪತೇಃ ಸ್ವಯಂ ॥ ೧೨ ॥
ಶ್ರುತಯಾಽಪಿ ಯಯಾ ಮರ್ತ್ಯೋ ದೀರ್ಘಾಯುರ್ಜಾಯತೇ ನರಃ ।
ನಾಽಪಮೃತ್ಯುಮವಾಪ್ನೋತಿ ಕಥಂಚಿತ್ತತ್ಪ್ರಭಾವತಃ ॥ ೧೩ ॥
ಯೋ ಮಾರ್ಕಂಡ ಇತಿ ಖ್ಯಾತಃ ಪ್ರಥಮಂ ಪರಿಕೀರ್ತಿತಃ ।
ಸಂಭೂತಿಸ್ತಸ್ಯ ಸಂಪ್ರೋಕ್ತಾ ಯುಷ್ಮಾಕಂ ಪಾಪನಾಶಿನೀ ॥ ೧೪ ॥

---

ಮಾಡಿದ ಮಾರ್ಕಂಡನಾವನು? ಇಂದ್ರದ್ಯುಮ್ನರಾಜನಾರು? ಪಾಲಕೇಶ್ವರನನ್ನು ಸ್ಥಾಪಿಸಿದ ಪಾಲಕನಾರು? ಘಂಟನು ಯಾವ ವಂಶದಲ್ಲಿ ಹುಟ್ಟಿದನು?

೯. ವಾನರನಿಂದ ಕೂಡಿದ ಕಲಶನೂ, ಈಶಾನನೂ ಯಾರು? ಇವೆಲ್ಲವನ್ನೂ ನಮಗೆ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

೧೦–೧೧. ಇಲ್ಲಿ ಮಾನವರಿಗೆ ಯಾವುದರಿಂದ ಶ್ರೇಯಸ್ಸುಂಟಾಗುವುದು? ಈ ಕ್ಷೇತ್ರದಲ್ಲಿ ಈ ದೇವತೆಗಳನ್ನು ಪ್ರತಿಷ್ಠೆಮಾಡಿದ ಮಾನವೋತ್ತಮರ ವೃತ್ತಾಂತವನ್ನೂ, ಪ್ರಭಾವವನ್ನೂ, ಸಕಾಲದಲ್ಲಿ ಮಾಡುವ ದಾನವನ್ನೂ, ಮಂತ್ರಗಳನ್ನೂ ವಿಸ್ತಾರವಾಗಿ ಹೇಳು.

೧೨. ಸೂತನು ಹೇಳುತ್ತಾನೆ:—ನಾನು ನಿಮಗೆ ಭರ್ತೃಯಜ್ಞನು ಆನರ್ತರಾಜನಿಗೆ ಹೇಳಿದ ಪುರಾತನವಾದ ಈ ಕಥೆಯನ್ನು ಹೇಳುವೆನು.

೧೩. ಇದನ್ನು ಕೇಳುವುದರಿಂದ ನರನು ದೀರ್ಘಾಯುಷ್ಮಂತನಾಗುವನು. ಇದರ ಪ್ರಭಾವದಿಂದ ಅಪಮೃತ್ಯುವನ್ನು ಹೊಂದುವುದಿಲ್ಲ.

೧೪. ಮಾರ್ಕಂಡನೆಂಬುವನ ಪಾಪವನ್ನು ಪರಿಹರಿಸುವ ಉತ್ಪತ್ತಿಯನ್ನು ನಿಮಗೆ ಹೇಳಿದ್ದೇನೆ.

ಇಂದ್ರದ್ಯುಮ್ನಂ ಪ್ರವಕ್ಷ್ಯಾಮಿ ಸಾಂಪ್ರತಂ ಮುನಿಸತ್ತಮಾಃ ।
ಯದ್ವಂಶೋ ಯತ್ಪ್ರಭಾವಶ್ಚ ಸರ್ವಭೂಪಾಲಮಾನಿತಃ ॥ ೧೪ ॥
ಇಂದ್ರದ್ಯುಮ್ನೋ ಮಹೀಪಾಲ ಆಸೀತ್ಪೂರ್ವಂ ದ್ವಿಜೋತ್ತಮಾಃ ।
ಬ್ರಾಹ್ಮಣಶ್ಚ ಶರಣ್ಯಶ್ಚ ಸಾಧುಲೋಕಪ್ರಪಾಲಕಃ ।
ಯಜ್ವಾ ದಾನಪತಿರ್ದಕ್ಷಃ ಸರ್ವಭೂತಹಿತೇ ರತಃ ॥ ೧೬ ॥
ನ ದುರ್ಭಿಕ್ಷಂ ನ ಚ ವ್ಯಾಧಿರ್ನ ಚ ಚೌರಕೃತಂ ಭಯಂ ।
ತಸ್ಮಿಂಛಾಸತಿ ಧರ್ಮಜ್ಞೇ ಆಸೀಲ್ಲೋಕಸ್ಯ ಕಸ್ಯಚಿತ್ ॥ ೧೭ ॥
ಯಥೈವ ವರ್ಷತೋ ಧಾರಾ ಯಥಾ ವಾ ದಿವಿ ತಾರಕಾಃ ।
ಗಂಗಾಯಾಂ ಸಿಕತಾ ಯದ್ವತ್ಸಂಖ್ಯಯಾ ಪರಿವರ್ಜಿತಾಃ ॥ ೧೮ ॥
ತದ್ವತ್ತೇನ ಕೃತಾ ಯಜ್ಞಾಃ ಸರ್ವೇ ಸಂಪೂರ್ಣ ದಕ್ಷಿಣಾಃ ।
ಅಗ್ನಿಷ್ಟೋಮೋಽತಿರಾತ್ರಶ್ಚ ಉಕ್ಥ್ಯಃ ಷೋಡಶಿಕಾಸ್ತಥಾ ॥ ೧೯ ॥
ಸೌತ್ರಾಮಣ್ಯಾಽಥ ಪಶವಶ್ಚಾತುರ್ಮಾಸ್ಯಾ ದ್ವಿಜೋತ್ತಮಾಃ ।
ವಾಜಪೇಯೋಽಶ್ವಮೇಧಾಶ್ಚ ರಾಜಸೂಯಾ ವಿಶೇಷತಃ ॥ ೨೦ ॥
ಪೌಂಡರೀಕಾಸ್ತಥೈವಾಽನ್ಯೇ ಶ್ರದ್ಧಾಪೂತೇನ ಚೇತಸಾ ॥ ೨೧ ॥
ತೇನ ದಾನಾನಿ ದತ್ತಾನಿ ತೀರ್ಥೇಷು ಚ ವಿಶೇಷತಃ ।
ಮಿಷ್ಟಾನ್ನಾನಿ ದ್ವಿಜೇಂದ್ರಾಣಾಂ ದಕ್ಷಿಣಾ ಸಹಿತಾನಿ ಚ ॥ ೨೨ ॥

---

೧೪. ಮುನಿವರ್ಯರೆ! ಈಗ ಇಂದ್ರದ್ಯುಮ್ನನ ವೃತ್ತಾಂತವನ್ನು ಹೇಳುವೆನು. ಅವನ ವಂಶವೂ, ಪ್ರಭಾವವೂ ಸಕಲ ಭೂಪತಿಗಳಿಂದ ಪೂಜ್ಯವಾಗಿದ್ದಿತು.

೧೬. ಹಿಂದೆ ಬ್ರಾಹ್ಮಣರನ್ನು ಪೋಷಿಸುವವನೂ, ಶರಣಾಗತರಕ್ಷಕನೂ, ಸಜ್ಜನ ಸಂರಕ್ಷಕನೂ, ಯಾಗಮಾಡುವವನೂ, ದಾನಶೌಂಡನೂ, ದಕ್ಷನೂ, ಸಕಲ ಪ್ರಾಣಿಗಳ ಹಿತದಲ್ಲಿ ನಿರತನೂ ಆದ ಇಂದ್ರದ್ಯುಮ್ನನೆಂಬ ದೊರೆಯಿದ್ದನು.

೧೭. ಧರ್ಮಜ್ಞನಾದ ಅವನು ರಾಜ್ಯವನ್ನಾಳುತ್ತಿರಲು ಯಾವ ಮನುಷ್ಯನಿಗೂ ದುರ್ಭಿಕ್ಷೆ, ವ್ಯಾಧಿ, ಚೋರಭಯವಿರಲಿಲ್ಲ.

೧೮–೨೨. ಮಳೆಯ ಧಾರೆಯೂ, ಆಕಾಶದಲ್ಲಿರುವ ನಕ್ಷತ್ರಗಳೂ, ಗಂಗೆಯ ಮರಳೂ, ಅಸಂಖ್ಯಾತವಾಗಿರುವಂತೆ ಅವನು ಮಾಡಿರುವ ಸಂಪೂರ್ಣ ದಕ್ಷಿಣೆಯುಳ್ಳ ಯಜ್ಞಗಳು ಅಪರಿಮಿತವಾಗಿರುವುವು. ಅವನು ಮುಖ್ಯವಾಗಿ ಅಗ್ನಿಷ್ಟೋಮ, ಅತಿರಾತ್ರ, ಉಕ್ಥ, ಷೋಡಶಿಕ, ಸೌತ್ರಾಮಣ್ಯ, ಪಶು, ಚಾತುರ್ಮಾಸ್ಯ, ವಾಜಪೇಯ, ಅಶ್ವಮೇಧ, ರಾಜಸೂಯ, ಪೌಂಡರೀಕ ಮೊದಲಾದ ಯಾಗಗಳನ್ನು ಮಾಡಿ ಶ್ರದ್ಧೆಗೊಂಡ ಮನಸ್ಸಿನಿಂದ ಉತ್ತಮ ಪಾತ್ರಗಳಲ್ಲಿ ದಾನಗಳನ್ನೂ, ದ್ವಿಜೇಂದ್ರರಿಗೆ ದಕ್ಷಿಣೆಯೊಡನೆ ಮಿಷ್ಟಾನ್ನವನ್ನೂ ಕೊಟ್ಟನು.

ನ ತದಸ್ತಿ ಧರಾಪೃಷ್ಠೇ ನಗರಂ ಪತ್ತನಂ ತಥಾ ।
ತೀರ್ಥಂ ವಾ ಯತ್ರ ನೋ ತಸ್ಯ ವಿದ್ಯತೇ ತ್ರಿದಶಾಲಯಃ ॥ ೨೩ ॥
ತೇನ ಕನ್ಯಾಸಹಸ್ರಾಣಿ ಅಚ್ಯುತಾನ್ಯರ್ಬುದಾನಿ ಚ ।
ಬ್ರಾಹ್ಮಣೇಭ್ಯಃ ಪ್ರದತ್ತಾನಿ ಬ್ರಾಹ್ಮಣಾನಾಂ ಧನಾರ್ಥಿನಾಂ ॥ ೨೪ ॥
ದಶಮೀ ದಿವಸೇ ತಸ್ಯ ರಾತ್ರೌ ಚ ಗಜಪೃಷ್ಠಗಃ ।
ದುಂದುಭಿಸ್ತಾಡ್ಯಮಾನಸ್ತು ಬಭ್ರಾಮ ಸಕಲಂ ಪುರಂ ॥ ೨೫ ॥
ಪ್ರತ್ಯೂಷೇ ವೈಷ್ಣವಂ ಭಾವಿ ಪಾಪಹಾರಿ ಚ ವಾಸರಂ ।
ಉಪವಾಸಃ ಪ್ರಕರ್ತವ್ಯೋ ಮುಕ್ತ್ವಾ ವೃದ್ಧಂ ಚ ಬಾಲಕಂ ।
ಅನ್ಯಥಾ ನಿಗ್ರಹಿಷ್ಯಾಮಿ ಭೋಜನಂ ಯಃ ಕರಿಷ್ಯತಿ ॥ ೨೬ ॥
ಇಂದ್ರದ್ಯುಮ್ನಃ ಸ ರಾಜರ್ಷಿಸ್ತದಾ ವಿಷ್ಣೋಃ ಪ್ರಸಾದತಃ ।
ತೇನೈವ ಸ್ವಶರೀರೇಣ ಬ್ರಹ್ಮಲೋಕಂ ತದಾ ಗತಃ ॥ ೨೭ ॥
ತತ್ರ ಕಲ್ಪ ಸಹಸ್ರಾಂತೇ ಸ ಪ್ರೋಕ್ತೋ ಬ್ರಹ್ಮಣಾ ಸ್ವಯಂ ।
ಇಂದ್ರದ್ಯುಮ್ನ ಧರಾಂ ಗಚ್ಛ ನ ಸ್ಥಾತವ್ಯಂ ತ್ವಯಾಽಧುನಾ ॥ ೨೮ ॥

ಇಂದ್ರದ್ಯುಮ್ನ ಉವಾಚ:—

ಕಸ್ಮಾಚ್ಚ್ಯಾವಯಸೇ ಬ್ರಹ್ಮನ್ನಿಜಲೋಕಾದ್ದ್ರುತಂ ಹಿ ಮಾಂ ।
ಅಪಾಪಮಪಿ ದೇವೇಶ ತಥಾ ಮೇ ವದ ಕಾರಣಂ ॥ ೨೯ ॥

---

೨೩. ಅವನು ನಿರ್ಮಿಸಿದ ದೇವಾಲಯವಿಲ್ಲದ ಪಟ್ಟಣ, ನಗರ, ತೀರ್ಥಗಳು ಭೂಮಿಯಲ್ಲಿರಲಿಲ್ಲ.

೨೪. ಧನಾರ್ಥಿಗಳಾದ ಬ್ರಾಹ್ಮಣರಿಗೆ ದ್ರವ್ಯಗಳನ್ನಿತ್ತು ಅವರಿಂದ ಬ್ರಾಹ್ಮಣರಿಗೆ ಅಸಂಖ್ಯಾತ ಕನ್ಯಾದಾನಗಳನ್ನು ಮಾಡಿಸಿದನು.

೨೫. ದಶಮೀ ದಿವಸ ರಾತ್ರಿ ಅವನ ನಗಾರಿಯು ಆನೆಯ ಮೇಲೆ ಧ್ವನಿಗೈಯುತ್ತ ಸಂಪೂರ್ಣನಗರದಲ್ಲಿ ಸುತ್ತುತ್ತಿದ್ದಿತು.

೨೬. ಅದರ ಮೂಲಕ ಅವನು "ಬೆಳಗ್ಗೆ ಏಕಾದಶಿಯು ಬರುವುದು. ಆಗ ಬಾಲಕರನ್ನೂ, ಮುದುಕರನ್ನೂ ಉಳಿದು ಎಲ್ಲರೂ ಉಪವಾಸ ಮಾಡಬೇಕು. ಉಪವಾಸಮಾಡದೆ ಭೋಜನ ಮಾಡಿದವನನ್ನು ನಿಗ್ರಹಿಸುವೆನು" ಎಂದು ಸಾರಿದನು.

೨೭. ಅದರಿಂದ ಆ ಇಂದ್ರದ್ಯುಮ್ನನು ವಿಷ್ಣುವಿನ ಅನುಗ್ರಹದಿಂದ ಶರೀರ ಸಹಿತವಾಗಿ ಬ್ರಹ್ಮಲೋಕಕ್ಕೆ ತೆರಳಿದನು.

೨೮. ಅಲ್ಲಿ ಸಾವಿರ ಕಲ್ಪಗಳ ತರುವಾಯ ಬ್ರಹ್ಮನು, "ಇಂದ್ರದ್ಯುಮ್ನ! ನೀನು ಈಗ ಭೂಮಿಗೆ ಹೋಗು. ಇಲ್ಲಿರಬೇಡ" ಎಂದನು.

೨೯. ಇಂದ್ರದ್ಯುಮ್ನನು ಹೇಳುತ್ತಾನೆ:—ಬ್ರಹ್ಮನೆ! ನೀನು ಪಾಪಮಾಡದ ನನ್ನನ್ನು ಏತಕ್ಕೆ ನಿನ್ನ ಲೋಕದಿಂದ ಹೊರಡಿಸುವೆ? ಕಾರಣವನ್ನು ಹೇಳು.

ಶ್ರೀ ಬ್ರಹ್ಮೋವಾಚ:—
ತವ ಕೀರ್ತಿಸಮುಚ್ಛೇದಃ ಸಂಜಾತೋಽದ್ಯ ಧರಾತಲೇ ।
ಯಾವತ್ಕೀರ್ತಿರ್ಧರಾಪೃಷ್ಠೇ ತಾವತ್ಸ್ವರ್ಗೇ ವಸೇನ್ನರಃ ॥ ೩೦ ॥
ಏತಸ್ಮಾತ್ಕಾರಣಾಲ್ಲೋಕಾಃ ಸ್ವನಾಮಾಂಕಾನಿ ಚಕ್ರಿರೇ ।
ವಾಪೀ ಕೂಪತಡಾಗಾನಿ ದೇವತಾಯತನಾನಿ ಚ ॥ ೩೧ ॥
ತಸ್ಮಾದ್ಗಚ್ಛ ಧರಾಪೃಷ್ಠಂ ಸ್ವಾಂ ಕೀರ್ತಿಂ ನೂತನಾಂ ಕುರು ।
ಯದಿ ವಾಂಛಸಿ ಲೋಕೇಽಸ್ಮಿನ್ಮಾಮಕೇ ವಸತಿಂ ಚಿರಂ ॥ ೩೨ ॥
ಅಥಾತ್ಮಾನಂ ಸ ರಾಜೇಂದ್ರೋ ಯಾವತ್ಪಶ್ಯತಿ ತತ್ಕ್ಷಣಾತ್ ।
ತಾವತ್ಪ್ರಾಪ್ತಂ ಧರಾಪೃಷ್ಠೇ ಕಾಂಪಿಲ್ಯನಗರಂ ಪ್ರತಿ ॥ ೩೩ ॥
ಅಥ ಪಪ್ರಚ್ಛ ಲೋಕಾನ್ ಸ ಕಿಮೇತನ್ನಗರಂ ಸ್ಮೃತಂ ।
ಕೋಽಯಂ ದೇಶಃ ಕೋಽತ್ರ ರಾಜಾ ಕಿಂ ಪುರಂ ನಗರಂ ಚ ಕಿಂ ॥ ೩೪ ॥
ತೇ ತಮೂಚುಃ ಪುರಂ ಚೈತತ್ಕಾಂಪಿಲ್ಯಮಿತಿ ವಿಶ್ರುತಂ ।
ಆನರ್ತನಾಮಾ ದೇಶೋಽಯಂ ರಾಜಾಽತ್ರ ಪೃಥಿವೀಜಯಃ ॥ ೩೫ ॥
ಕೋ ಭವಾನ್ಕಿಮಿಹಾಽಽಯಾತಃ ಕಿಂಚಿತ್ಕಾರ್ಯಂ ವದಸ್ವ ನಃ ॥ ೩೬ ॥

---

೩೦. ಶ್ರೀ ಬ್ರಹ್ಮನು ಹೇಳುತ್ತಾನೆ:—ಈಗ ಭೂಲೋಕದಲ್ಲಿ ನಿನ್ನ ಕೀರ್ತಿಯು ನಾಶವಾಗಿರುವುದು. ಕೀರ್ತಿಯು ಭೂಲೋಕದಲ್ಲಿರುವವರೆಗೆ ಮಾನವನು ಸ್ವರ್ಗದಲ್ಲಿ ವಾಸಿಸುವನು.

೩೧. ಈ ಕಾರಣದಿಂದ ಜನರು ವಾಪೀ, ಕೂಪ, ತಡಾಗ, ದೇವಾಲಯಗಳಿಗೆ ತಮ್ಮ ಹೆಸರನ್ನಿಡುವರು.

೩೨. ಆದುದರಿಂದ ನೀನು ನನ್ನ ಲೋಕದಲ್ಲಿ ಬಹುಕಾಲ ವಾಸಿಸಲು ಅಪೇಕ್ಷಿಸುವುದಾದರೆ ಭೂಮಿಗೆ ಹೋಗಿ ನಿನ್ನ ಕೀರ್ತಿಯನ್ನು ನೂತನವಾಗಿ ಮಾಡು.

೩೩. ಬಳಿಕ ಆ ರಾಜನು ತನ್ನನ್ನು ನೋಡುವಷ್ಟರಲ್ಲಿ ಭೂಲೋಕದಲ್ಲಿರುವ ಕಾಂಪಿಲ್ಯವೆಂಬ ನಗರವನ್ನು ಸೇರಿದ್ದನು.

೩೪. ಅವನು ಅಲ್ಲಿಯ ಜನರನ್ನು ಕುರಿತು ಈ ದೇಶವಾವುದು? ಇದಕ್ಕೆ ರಾಜನಾರು? ಈ ಪಟ್ಟಣ ಮತ್ತು ನಗರವಾವುದು? ಎಂದು ಪ್ರಶ್ನಿಸಿದನು.

೩೫. ಅವರು ಅವನನ್ನು ಕುರಿತು ಇದು ಕಾಂಪಿಲ್ಯವೆಂಬ ನಗರವು. ಆನರ್ತದೇಶಕ್ಕೆ ಸೇರಿದ್ದು. ಇದಕ್ಕೆ ಪೃಥಿವೀಜಯನೆಂಬುವನು ರಾಜನಾಗಿರುವನು.

೩೬. ನೀನಾರು? ಏತಕ್ಕೆ ಇಲ್ಲಿಗೆ ಬಂದಿರುವೆ? ಯಾವ ಕಾರ್ಯವಾಗಬೇಕು? ನಮಗೆ ಹೇಳು ಎಂದು ಕೇಳಿದರು.

ಇಂದ್ರದ್ಯುಮ್ನ ಉವಾಚ :—

ಇಂದ್ರದ್ಯುಮ್ನೋ ಮಹೀಪಾಲಃ ಪುರಾಽಸೀದ್ರೋಚಕೇ ಪುರೇ ।
ದೇಶೇ ವೈಜರುಕೇ ಪೂರ್ವಂ ಸ ದೇಶಃ ಕ್ವ ಚ ತತ್ಪುರಂ ॥ ೩೭ ॥

ಜನಾ ಊಚುಃ :—

ನ ವಯಂ ತತ್ಪುರಂ ವಿದ್ಮೋ ನ ದೇಶಂ ನ ಚ ಭೂಪತಿಂ ।
ಇಂದ್ರದ್ಯುಮ್ನಾಭಿಧಾನಂ ಚ ಯಂ ತ್ವಂ ಪೃಚ್ಛಸಿ ಭದ್ರಕ ॥ ೩೮ ॥

ಇಂದ್ರದ್ಯುಮ್ನ ಉವಾಚ :—

ಚಿರಾಯುರಸ್ತಿ ಕೋಽಪ್ಯತ್ರ ಯಸ್ತಂ ವೇತ್ತಿ ಮಹೀಪತಿಂ ।
ದೇಶಂ ವಾ ತತ್ಪುರಂ ವಾಽಪಿ ತನ್ಮೇ ವದಥ ಮಾಚಿರಂ ॥ ೩೯ ॥

ಜನಾ ಊಚುಃ :—

ಸಪ್ತಕಲ್ಪಸ್ಮರೋ ನಾಮ ಮಾರ್ಕಂಡೇಯೋ ಮಹಾಮುನಿಃ ।
ಶ್ರೂಯತೇ ನೈಮಿಷಾಽರಣ್ಯೇ ತಂ ಗತ್ವಾ ಪೃಚ್ಛ ವೇತ್ಸ್ಯಸಿ ॥ ೪೦ ॥
ಅಥಾಽಸೌ ಸತ್ವರಂ ಗತ್ವಾ ವ್ಯೋಮಮಾರ್ಗೇಣ ತಂ ಮುನಿಂ ।
ಪಪ್ರಚ್ಛ ಪ್ರಣಿಪತ್ಯೋಚ್ಚೈರ್ನೈಮಿಷಾರಣ್ಯಮಾಶ್ರಿತಂ ॥ ೪೧ ॥
ಇಂದ್ರದ್ಯುಮ್ನೇತಿ ವೈ ಭೂಪಸ್ತ್ವಯಾ ದೃಷ್ಟಃ ಶ್ರುತೋಽಥವಾ ।
ಚಿರಾಯುಸ್ತ್ವಂ ಶ್ರುತೋಽಸ್ಮಾಭಿಃ ಪೃಚ್ಛಾಮಸ್ತೇನ ಸನ್ಮುನೇ ॥ ೪೨ ॥

---

೩೭. ಇಂದ್ರದ್ಯುಮ್ನನು ಹೇಳುತ್ತಾನೆ:—ಹಿಂದೆ ವೈಜರುಕವೆಂಬ ದೇಶದಲ್ಲಿ ರೋಚಕವೆಂಬ ಪಟ್ಟಣದಲ್ಲಿ ಇಂದ್ರದ್ಯುಮ್ನನೆಂಬ ದೊರೆಯಿದ್ದನು. ಈಗ ಆ ದೇಶವೂ, ಆ ಪಟ್ಟಣವೂ ಎಲ್ಲಿ?

೩೮. ಜನರು ಹೇಳುತ್ತಾರೆ:—ಮಂಗಳಕರನೆ! ನೀನು ಕೇಳುವ ಆ ಪಟ್ಟಣ, ದೇಶ, ಇಂದ್ರದ್ಯುಮ್ನರಾಜ ಇವರನ್ನು ನಾವು ಅರಿಯೆವು.

೩೯. ಇಂದ್ರದ್ಯುಮ್ನನು ಹೇಳುತ್ತಾನೆ:—ಆ ದೊರೆಯನ್ನಾಗಲಿ, ಅವನ ದೇಶ ನಗರಗಳನ್ನಾಗಲಿ ತಿಳಿದ ಚಿರಂಜೀವಿಯಾದ ಯಾವನಾದರೂ ಇಲ್ಲಿರುವನೆ? ಅವನು ಶೀಘ್ರವಾಗಿ ನನಗೆ ತಿಳಿಸಲಿ.

೪೦. ಜನರು ಹೇಳುತ್ತಾರೆ:—ನೈಮಿಷಾರಣ್ಯದಲ್ಲಿ ಏಳು ಕಲ್ಪಗಳನ್ನು ಸ್ಮರಿಸುವ ಮಾರ್ಕಂಡೇಯನೆಂಬ ಮುನಿಯಿರುವನೆಂದು ಕೇಳಿದ್ದೇವೆ. ಅವನೆಡೆಗೆ ಹೋಗಿ ಪ್ರಶ್ನಿಸು. ಅವನಿಂದ ನೀನು ತಿಳಿದುಕೊಳ್ಳುವೆ.

೪೧. ಬಳಿಕ ಇಂದ್ರದ್ಯುಮ್ನನು ಬೇಗನೆ ಆಕಾಶಮಾರ್ಗದಿಂದ ನೈಮಿಷಾರಣ್ಯದಲ್ಲಿರುವ ಆ ಮಾರ್ಕಂಡೇಯನೆಡೆಗೆ ಹೋಗಿ ನಮಸ್ಕಾರಮಾಡಿ ಹೀಗೆ ಪ್ರಶ್ನಿಸಿದನು.

೪೨. ಮುನಿಯೆ! ನೀನು ಚಿರಂಜೀವಿಯೆಂದು ಕೇಳಿದ್ದೇನೆ. ಆದುದರಿಂದ ನಿನ್ನನ್ನು ಪ್ರಶ್ನೆಮಾಡುತ್ತೇನೆ. ಇಂದ್ರದ್ಯುಮ್ನನೆಂಬ ರಾಜನನ್ನು ನೀನು ನೋಡಿರುವೆಯಾ? ಅಥವಾ ಕೇಳಿರುವೆಯಾ?

ಶ್ರೀ ಮಾರ್ಕಂಡೇಯ ಉವಾಚ:—

ಸಪ್ತಕಲ್ಪಾಂತರೇ ಭೂಪೋ ನ ದೃಷ್ಟೋ ನ ಮಯಾ ಶ್ರುತಃ ।
ಇಂದ್ರದ್ಯುಮ್ನಾಭಿಧಾನೋಽತ್ರ ತತ್ರ ಕಿಂನು ವದಾಮಿ ತೇ ॥ ೪೩ ॥
ತಸ್ಯ ತದ್ವಚನಂ ಶ್ರುತ್ವಾ ನಿರಾಶಃ ಸ ಮಹೀಪತಿಃ ।
ವೈರಾಗ್ಯಂ ಪರಮಂ ಗತ್ವಾ ಮರಣೇ ಕೃತನಿಶ್ಚಯಃ ॥ ೪೪ ॥
ತೇನ ಚಾಽನೀಯ ದಾರೂಣಿ ಪ್ರಜ್ವಾಲ್ಯ ಚ ಹುತಾಶನಂ ।
ಪ್ರವೇಷ್ಟುಕಾಮಃ ಸ ಪ್ರೋಕ್ತ ಇಂದ್ರದ್ಯುಮ್ನೋ ಮಹೀಪತಿಃ ॥ ೪೫ ॥
ತ್ವಯಾ ಚಾತ್ರ ನ ಕರ್ತವ್ಯಮಹಂ ತೇ ಮಿತ್ರತಾಂ ಗತಃ ।
ನಾಶಯಿಷ್ಯಾಮಿ ತೇ ಮೃತ್ಯುಂ ಯದ್ಯಪಿ ಸ್ಯಾನ್ಮಹತ್ತರಂ ॥ ೪೬ ॥
ನೀರೋಗೋಽಪಿ ಸುಭವ್ಯೋಽಸಿ ಕಸ್ಮಾನ್ಮೃತ್ಯುಂ ಪ್ರವಾಂಛಸಿ ।
ವದ ಮೇ ಕಾರಣಂ ಮೃತ್ಯೋಃ ಪ್ರತೀಕಾರಂ ಕರೋಮಿ ತೇ ॥ ೪೭ ॥

ಇಂದ್ರದ್ಯುಮ್ನ ಉವಾಚ:—

ಚಿರಾಯುರ್ಮೇ ಭವಾನ್ ಪ್ರೋಕ್ತಃ ಕಾಂಪಿಲ್ಯಪುರವಾಸಿಭಿಃ ।
ತೇನಾಽಹಂ ತವ ಪಾರ್ಶ್ವೇಽತ್ರ ಸಮಾಯಾತೋ ಮಹಾಮುನೇ ॥ ೪೮ ॥

---

೪೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಈಗ ಏಳು ಕಲ್ಪಗಳ ನಡುವೆ ನಾನು ಇಂದ್ರದ್ಯುಮ್ನರಾಜನನ್ನು ನೋಡಲಿಲ್ಲ. ಕೇಳಲೂ ಇಲ್ಲ. ಅವನ ವಿಷಯದಲ್ಲಿ ಏನನ್ನು ಹೇಳಲಿ.

೪೪. ಆ ಇಂದ್ರದ್ಯುಮ್ನನು ಆ ಮಾರ್ಕಂಡೇಯನ ಆ ಮಾತನ್ನು ಕೇಳಿ ನಿರಾಶನಾಗಿ ಅತ್ಯಂತ ವೈರಾಗ್ಯಗೊಂಡು ಸಾಯುವುದಾಗಿ ನಿಶ್ಚಯಿಸಿದನು.

೪೫. ಕಟ್ಟಿಗೆಗಳನ್ನು ತಂದು ಅಗ್ನಿಯನ್ನು ಜ್ವಲಿಸುವಂತೆಮಾಡಿ ಪ್ರವೇಶಿಸಲು ಅಪೇಕ್ಷಿಸುತ್ತಿರುವ ಇಂದ್ರದ್ಯುಮ್ನರಾಜನನ್ನು ಕುರಿತು ಆ ಮಾರ್ಕಂಡೇಯನು ಇಂತೆಂದನು.

೪೬. ನೀನು ಇಲ್ಲಿ ಮಡಿಯಬಾರದು. ನಿನಗೆ ನಾನು ಮಿತ್ರನಾಗಿರುವೆನು. ಮಹತ್ತರವಾಗಿದ್ದರೂ ನಿನ್ನ ಮೃತ್ಯುವನ್ನು ನಾನು ನಿವಾರಿಸುವೆನು.

೪೭. ನೀನು ರೋಗವಿಲ್ಲದವನೂ, ಸುಂದರನೂ ಆಗಿರುವೆ. ಏಕೆ ಮರಣವನ್ನು ಬಯಸುವೆ? ಕಾರಣವನ್ನು ನನಗೆ ಹೇಳು. ನಿನ್ನ ಮೃತ್ಯುವಿಗೆ ಪ್ರತಿಕ್ರಿಯೆಯನ್ನು ಮಾಡುವೆನು.

೪೮. ಇಂದ್ರದ್ಯುಮ್ನನು ಹೇಳುತ್ತಾನೆ:—ಮಹರ್ಷಿಯೆ! ಕಾಂಪಿಲ್ಯ ನಗರದಲ್ಲಿ ವಾಸಿಸುವ ಜನರು ನೀನು ಚಿರಂಜೀವಿಯೆಂದು ಹೇಳಿರುವರು. ಆದುದರಿಂದ ನಾನು ನಿನ್ನ ಹತ್ತಿರಕ್ಕೆ ಬಂದಿರುವೆನು.

ಇಂದ್ರದ್ಯುಮ್ನೋದ್ಭವಾಂ ವಾರ್ತಾಂ ತ್ವಂ ವದಿಷ್ಯಸಿ ಸನ್ಮುನೇ ।
ಮತ್ಕೀರ್ತಿರ್ನ ಪರಿಜ್ಞಾತಾ ತತೋ ಮೃತ್ಯುಂ ವ್ರಜಾಮ್ಯಹಂ ॥ ೪೯ ॥
ಸೂತ ಉವಾಚ:—
ತಸ್ಯ ತಂ ನಿಶ್ಚಯಂ ಜ್ಞಾತ್ವಾ ದಯಾವಾನ್ ಸ ಮುನೀಶ್ವರಃ ।
ವೃಥಾ ಶ್ರಮಂ ಚ ತಂ ಜ್ಞಾತ್ವಾ ದಾಕ್ಷಿಣ್ಯಾದಿದಮಬ್ರವೀತ್ ॥ ೫೦ ॥
ಯದ್ಯೇವಂ ಮಾ ವಿಶಾಽಗ್ನಿಂ ತ್ವಮಹಂ ಜ್ಞಾಸ್ಯಾಮಿ ತಂ ನೃಪಂ ।
ನಾಡೀಜಂಘೋ ಬಕೋನಾಮ ಮಮಾಽಸ್ತಿ ಪರಮಃ ಸುಹೃತ್ ॥ ೫೧ ॥
ಚಿರಂತನಶ್ಚ ಸೋಽಸ್ಮಾಕಂ ನೂನಂ ಜ್ಞಾಸ್ಯತಿ ತಂ ನೃಪಂ ।
ತಸ್ಮಾದಾಗಚ್ಛ ಗಚ್ಛಾವಸ್ತಸ್ಯ ಪಾರ್ಶ್ವೇ ಹಿಮಾಚಲೇ ॥ ೫೨ ॥
ಸಾಧೂನಾಂ ದರ್ಶನಂ ಜಾತು ನ ವೃಥಾ ಜಾಯತೇ ಕ್ವಚಿತ್ ॥ ೫೩ ॥
ಏವಮುಕ್ತ್ವಾ ತತಸ್ತೌ ತು ಪ್ರಸ್ಥಿತೌ ಮುನಿಪಾರ್ಥಿವೌ ।
ವ್ಯೋಮಮಾರ್ಗೇಣ ಸಂತುಷ್ಟೌ ಬಕಂ ಪ್ರತಿ ಹಿಮಾಚಲೇ ॥ ೫೪ ॥
ಬಕೋಽಪಿ ತಂ ಸಮಾಲೋಕ್ಯ ಮಾರ್ಕಂಡೇಯಂ ಸಮಾಗತಂ ।
ಸಮ್ಮುಖಃ ಪ್ರಯಯೌ ತುಷ್ಟಃ ಸ್ವಾಗತೇನಾಽಭ್ಯಪೂಜಯತ್ ॥ ೫೫ ॥
ಧನ್ಯೋಽಹಂ ಕೃತಪುಣ್ಯೋಽಹಂ ಯಸ್ಯ ಮೇ ತ್ವತ್ಸಮಾಗಮಃ ।
ಭೋ ಭೋ ಬ್ರಹ್ಮವಿದಾಂಶ್ರೇಷ್ಠ ಆತಿಥ್ಯಂ ತೇ ಕರೋಮಿ ಕಿಂ ॥ ೫೬ ॥

---

೪೯. ನೀನು ಇಂದ್ರದ್ಯುಮ್ನನ ವೃತ್ತಾಂತವನ್ನು ಹೇಳುವೆ. ನನ್ನ ಕೀರ್ತಿಯನ್ನು ತಿಳಿಯಲಿಲ್ಲ. ಆದುದರಿಂದ ನಾನು ಸಾಯುವೆನು.

೫೦. ಸೂತನು ಹೇಳುತ್ತಾನೆ:—ದಯೆಯುಳ್ಳ ಆ ಮುನಿವರನು ಅವನ ಆ ನಿರ್ಣಯವನ್ನರಿತು ಅವನು ನಿಷ್ಫಲವಾಗಿ ಆಯಾಸಪಡುತ್ತಿರುವನೆಂದು ತಿಳಿದು ದಾಕ್ಷಿಣ್ಯದಿಂದ ಹೀಗೆಂದನು.

೫೧—೫೩. ಹೀಗಾದರೆ ನೀನು ಅಗ್ನಿಯನ್ನು ಪ್ರವೇಶಿಸಬೇಡ. ನಾನು ಆ ರಾಜನನ್ನು ತಿಳಿಯುವೆನು. ಚಿರಂಜೀವಿಯಾದ ನಾಡೀಜಂಘನೆಂಬ ಬಕನು ನನಗೆ ಅತ್ಯಂತ ಮಿತ್ರನಾಗಿರುವನು. ಅವನು ನಿಶ್ಚಯವಾಗಿಯೂ ಆ ದೊರೆಯನ್ನು ಅರಿಯುವನು. ಆದುದರಿಂದ ಬಾ. ಹಿಮಾಚಲದಲ್ಲಿರುವ ಅವನ ಸಮೀಪಕ್ಕೆ ಹೋಗೋಣ. ಸಜ್ಜನರ ದರ್ಶನವು ಯಾವಾಗಲೂ ವ್ಯರ್ಥವಾಗುವುದಿಲ್ಲ.

೫೪. ಆ ಮುನಿ ಮತ್ತು ರಾಜರು ಹೀಗೆ ಹೇಳಿ ಸಂತೋಷದಿಂದ ಹಿಮಾಚಲದಲ್ಲಿರುವ ಬಕದ ಹತ್ತಿರಕ್ಕೆ ಆಕಾಶಮಾರ್ಗದಿಂದ ಹೋದರು.

೫೫—೫೬. ಬಕವೂ ಬಂದಿರುವ ಆ ಮಾರ್ಕಂಡೇಯನನ್ನು ಕಂಡು ಎದುರುಗೊಂಡು ಸ್ವಾಗತವಿತ್ತು ಪೂಜಿಸಿತು. ನನ್ನ ಮನೆಗೆ ನೀನು ಬಂದಿರುವುದರಿಂದ ನಾನು ಧನ್ಯನೂ, ಪುಣ್ಯವಂತನೂ ಆಗಿರುವೆನು. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಮುನಿಯೆ! ನಿನಗೆ ಏನು ಆತಿಥ್ಯವನ್ನು ಮಾಡಲಿ.

ಶ್ರೀ ಮಾರ್ಕಂಡೇಯ ಉವಾಚ :—

ಮತ್ತೋಽಪಿ ತ್ವಂ ಚಿರಾಯುಶ್ಚ ಯತೋ ಮಿತ್ರಂ ವ್ಯವಸ್ಥಿತಃ ।
ಇಂದ್ರದ್ಯುಮ್ನೋ ಮಹೀಪಾಲಸ್ತ್ವಯಾ ದೃಷ್ಟಃ ಶ್ರುತೋಽಥವಾ ॥ ೫೭ ॥
ಏತಸ್ಯ ಮಮ ಮಿತ್ರಸ್ಯ ತೇನ ದೃಷ್ಟೇನ ಕಾರಣಂ ।
ಅನ್ಯಥಾ ಜಾಯತೇ ಮೃತ್ಯುಸ್ತತೋಽಹಂ ತ್ವಾಂ ಸಮಾಗತಃ ॥ ೫೮ ॥

ಬಕ ಉವಾಚ :—

ಸಪ್ತದ್ವಿಗುಣಿತಾನ್ಕಲ್ಪಾನ್ ಸ್ಮರಾಮ್ಯಹಮಸಂಶಯಂ ।
ನ ಸ್ಮರಾಮಿ ಕಥಾಮೇವ ಇಂದ್ರದ್ಯುಮ್ನ ಸಮುದ್ಭವಾಂ ॥ ೫೯ ॥
ಆಸ್ತಾಂ ಹಿ ದರ್ಶನಂ ತಾವತ್ಸತ್ಯಮೇತನ್ಮಯೋದಿತಂ ॥ ೬೦ ॥

ಇಂದ್ರದ್ಯುಮ್ನ ಉವಾಚ :—

ತಪಸಃ ಕಿಂ ಪ್ರಭಾವೋಽಯಂ ದಾನಸ್ಯ ನಿಯಮಸ್ಯ ಚ ।
ಯದಾಯುರೀದೃಶಂ ಜಾತಂ ಬಕತ್ವೇಽಪಿ ವದಸ್ವ ನಃ ॥ ೬೧ ॥

ಬಕ ಉವಾಚ :—

ಘೃತಕಂಬಲಮಾಹಾತ್ಮ್ಯಾದ್ದೇವದೇವಸ್ಯ ಶೂಲಿನಃ ।
ಮಮಾಯುರೀದೃಶಂ ಜಾತಂ ಬಕತ್ವಂ ಮುನಿಶಾಪತಃ ॥ ೬೨ ॥

---

೫೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನೀನು ನನಗಿಂತ ಚಿರಂಜೀವಿಯೂ, ಮಿತ್ರನೂ ಆಗಿರುವೆ. ನೀನು ಇಂದ್ರದ್ಯುಮ್ನರಾಜನನ್ನು ನೋಡಿರುವೆಯೊ? ಅಥವಾ ಕೇಳಿರುವೆಯೊ?

೫೮. ಈ ನನ್ನ ಸ್ನೇಹಿತನಿಗೆ ಇಂದ್ರದ್ಯುಮ್ನರಾಜನ ದರ್ಶನವನ್ನು ತಿಳಿಯುವುದರಿಂದ ಪ್ರಯೋಜನವಿದೆ. ಅದು ತಿಳಿಯದಿದ್ದರೆ ಇವನು ಮಡಿಯುವನು. ಆದುದರಿಂದ ನಾನು ನಿನ್ನೆಡೆಗೆ ಬಂದಿರುವೆನು.

೫೯. ಬಕವು ಹೇಳುತ್ತದೆ:—ನಾನು ಹದಿನಾಲ್ಕು ಕಲ್ಪಗಳನ್ನು ಸ್ಮರಿಸುವೆನು. ಈ ಇಂದ್ರದ್ಯುಮ್ನನ ಕಥೆಯನ್ನು ಸ್ಮರಿಸುವುದಿಲ್ಲ.

೬೦. ಅವನ ದರ್ಶನವೆಲ್ಲಿಯದು, ನಾನು ಹೇಳಿರುವುದು ಇದು ನಿಜ.

೬೧. ಇಂದ್ರದ್ಯುಮ್ನನು ಹೇಳುತ್ತಾನೆ:–ನೀನು ಬಕನಾಗಿದ್ದರೂ ಚಿರಂಜೀವಿಯಾಗಿರಲು ತಪಸ್ಸು, ದಾನ, ನಿಯಮ ಇವುಗಳ ಪ್ರಭಾವವು ಕಾರಣವಾಗಿರುವುದೊ?

೬೨. ಬಕವು ಹೇಳುತ್ತದೆ:—ಮಹೇಶ್ವರನಿಗೆ ಘೃತಕಂಬಲವನ್ನರ್ಪಿಸಿದ ಮಾಹಾತ್ಮ್ಯದಿಂದ ನನಗೆ ಇಷ್ಟು ಆಯುಸ್ಸುಂಟಾಯಿತು. ನಾನು ಮುನಿಶಾಪದಿಂದ ಬಕನಾಗಿರುವೆನು.

ಅಹಮಾಸಂ ಪುರಾ ಬಾಲೋ ಬ್ರಾಹ್ಮಣಸ್ಯ ನಿವೇಶನೇ ।
ಚಮತ್ಕಾರಪುರೇ ರಮ್ಯೇ ಪಾರಾಶರ್ಯಸ್ಯ ಧೀಮತಃ ॥ ೬೩ ॥
ನಾಮ್ನಾಚ ವಿಶ್ವರೂಪಾಖ್ಯೋ ನಾಮ್ನಾಽನ್ಯೇನ ಬಕಃ ಸ್ಮೃತಃ ।
ಅತೀವ ಚಪಲತ್ವೇನ ಸಂಯುಕ್ತಃ ಪಿತೃವಲ್ಲಭಃ ॥ ೬೪ ॥
ಕಸ್ಯಚಿತ್ತ್ವಥ ಕಾಲಸ್ಯ ಸಂಕ್ರಾಂತೌ ಮಕರಸ್ಯ ಭೋಃ ।
ಸಂಪ್ರಾಪ್ಯಾಽತೀವ ಚಾಪಲ್ಯಾಲ್ಲಿಂಗಂ ಜಾಗೇಶ್ವರಂ ಮಯಾ ।
ಘೃತಕುಂಭೇ ಪರಿಕ್ಷಿಪ್ತಂ ಪೂಜಿತಂ ಜನಕೇನ ಯತ್ ॥ ೬೫ ॥
ಅಥ ರಾತ್ರ್ಯಾಂ ವ್ಯತೀತಾಯಾಂ ಪೃಷ್ಟೋಽಹಂ ಜನಕೇನ ಚ ।
ತ್ವಯಾ ಪುತ್ರ ಪರಿಕ್ಷಿಪ್ತಂ ನೂನಂ ಜಾಗೇಶ್ವರಂ ಕ್ವಚಿತ್ ।
ತಸ್ಮಾದ್ವದ ಪ್ರಯಚ್ಛಾಮಿ ತೇನ ತೇ ಭಕ್ಷ್ಯಮುತ್ತಮಂ ॥ ೬೬ ॥
ತತೋ ಮಯಾಽಽಜ್ಯಕುಂಭಾಚ್ಚ ತಸ್ಮಾದಾದಾಯ ಸತ್ವರಂ ।
ಭಕ್ಷ್ಯೈ ಲೌಲ್ಯಾತ್ಪಿತುರ್ಹಸ್ತೇ ವಿನ್ಯಸ್ತಂ ಘೃತಸಂಪ್ಲುತಂ ॥ ೬೭ ॥
ಕಸ್ಯಚಿತ್ತ್ವಥ ಕಾಲಸ್ಯ ಪಂಚತ್ವಂ ಚ ಸಮಾಗತಃ ।
ಜಾತಿಸ್ಮರಸ್ತತೋ ಜಾತಸ್ತತ್ಪ್ರಭಾವಾನ್ನೃಪಾಲಯೇ ॥ ೬೮ ॥
ಆನರ್ತಾಧಿಪತೇರ್ಹರ್ಮ್ಯೇ ನಾಮ್ನಾ ಖ್ಯಾತಸ್ತ್ವಹಂ ಬಕಃ ।
ಚಮತ್ಕಾರಪುರೇ ದೇವೋ ಹರಃ ಸಂಸ್ಥಾಪಿತೋ ಮಯಾ ॥ ೬೯ ॥

---

೬೩–೬೪. ನಾನು ಹಿಂದೆ ಚಮತ್ಕಾರಪುರದಲ್ಲಿರುವ ಪಾರಾಶರ್ಯನೆಂಬ ಬ್ರಾಹ್ಮಣನ ಮನೆಯಲ್ಲಿ ವಿಶ್ವರೂಪ, ಬಕ ಎಂಬ ಎರಡು ನಾಮಧೇಯಗಳುಳ್ಳವನೂ, ಅತ್ಯಂತ ಚಪಲನೂ, ತಂದೆಗೆ ಪ್ರಿಯನೂ ಆದ ಬಾಲಕನಾಗಿದ್ದೆನು.

೬೫. ಒಂದಾನೊಂದು ಕಾಲದಲ್ಲಿ ಮಕರಸಂಕ್ರಾಂತಿಯದಿನ ನಾನು ತಂದೆಯು ಪೂಜಿಸಿದ ಜಾಗೇಶ್ವರಲಿಂಗವನ್ನು ಚಾಪಲ್ಯದಿಂದ ಘೃತಕುಂಭದಲ್ಲಿ ಎಸೆದೆನು.

೬೬. ಬಳಿಕ ರಾತ್ರಿಯು ಕಳೆಯಲು ನನ್ನನ್ನು ತಂದೆಯು, "ಮಗು! ನಿಶ್ಚಯವಾಗಿಯೂ ನೀನು ಜಾಗೇಶ್ವರಲಿಂಗವನ್ನು ಎಲ್ಲಿಯೊ ಎಸೆದಿರುವೆ. ಆದುದರಿಂದ ಅದು ಎಲ್ಲಿದೆಯೆಂಬುದನ್ನು ಹೇಳು. ನಿನಗೆ ಉತ್ತಮವಾದ ತಿಂಡಿಯನ್ನು ಕೊಡುವೆನು" ಎಂದು ಕೇಳಿದನು.

೬೭. ಅನಂತರ ನಾನು ತಿಂಡಿಯ ಆಶೆಯಿಂದ ಆ ತುಪ್ಪದ ಕೊಡದಿಂದ ತುಪ್ಪದಿಂದ ಒದ್ದೆಯಾದ ಆ ಲಿಂಗವನ್ನು ತೆಗೆದು ತಂದೆಯ ಕೈಯಲ್ಲಿಟ್ಟೆನು.

೬೮–೬೯. ಕೆಲವು ಕಾಲದ ಮೇಲೆ ಮಡಿದ ನಾನು ಆನರ್ತರಾಜನ ಅರಮನೆಯಲ್ಲಿ ಹುಟ್ಟಿ ಆ ಲಿಂಗದ ಪ್ರಭಾವದಿಂದ ಅನ್ಯಜಾತಿಯ ಸ್ಮರಣೆಯುಳ್ಳವನಾಗಿ ಬಕನೆಂದು ಪ್ರಸಿದ್ಧನಾಗಿ ಚಮತ್ಕಾರಪುರದಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದೆನು.

ತತ್ಪ್ರಭಾವೇನ ವಿಪ್ರೇಂದ್ರ ಪ್ರಾಪ್ತಃ ಪೈತಾಮಹಂ ಪದಂ ॥ ೭೦ ॥
ತತೋ ಯಾನಿ ಧರಾಪೃಷ್ಠೇ ಸುಲಿಂಗಾನಿ ಸ್ಥಿತಾನಿ ಚ ।
ಘೃತೇನ ಛಾದಯಾಮ್ಯೇವ ಮಕರಸ್ಥೇ ದಿವಾಕರೇ ।
ಮಯಾ ಯತ್ಸ್ಥಾಪಿತಂ ಲಿಂಗಂ ಚಮತ್ಕಾರಪುರೇ ಶುಭಂ ॥ ೭೧ ॥
ಆರಾಧಿತಂ ದಿವಾ ನಕ್ತಂ ರಾಜ್ಯೇ ಸಂಸ್ಥಾಪ್ಯ ಪುತ್ರಕಂ ।
ನಿಯೋಜ್ಯ ಸರ್ವತೋ ಭೃತ್ಯಾನ್ ಧನವಸ್ತ್ರಸಮನ್ವಿತಾನ್ ॥ ೭೨ ॥
ತತಃ ಕಾಲೇನ ಮಹತಾ ತುಷ್ಟೋ ಮೇ ಭಗವಾಂಛಿವಃ ।
ಮತ್ಸಮೀಪಂ ಸಮಾಸಾದ್ಯ ವಾಕ್ಯಮೇತದುವಾಚ ಸಃ ॥ ೭೩ ॥
ಪರಿತುಷ್ಟೋಽಸ್ಮಿ ಭದ್ರಂ ತೇ ತವ ಪಾರ್ಥಿವಸತ್ತಮ ।
ಘೃತಕಂಬಲದಾನೇನ ಸಂಖ್ಯಯಾ ರಹಿತೇನ ಚ ॥ ೭೪ ॥
ತಸ್ಮಾದ್ವರಯ ಭದ್ರಂ ತೇ ವರಂ ಯನ್ಮನಸಿ ಸ್ಥಿತಂ ।
ಅದೇಯಮಪಿ ದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೭೫ ॥
ತತೋ ಮಯಾ ಹರಃ ಪ್ರೋಕ್ತೋ ಯದಿ ತುಷ್ಟೋಽಸಿ ಮೇ ಪ್ರಭೋ ।
ಕುರುಷ್ವ ಮಾಂ ಗಣಂ ದೇವ ನಾಽನ್ಯತ್ಕಿಂಚಿದ್ವೃಣೋಮ್ಯಹಂ ॥ ೭೬ ॥

ಶ್ರೀ ಭಗವಾನುವಾಚ :-

ಬಕೈಹಿ ತ್ವಂ ಮಹಾಭಾಗ ಕೈಲಾಸಂ ಪರ್ವತೋತ್ತಮಂ ।
ಮಯಾ ಸಾರ್ಧಮನೇನೈವ ಶರೀರೇಣ ಗಣೋ ಭವ ॥ ೭೭ ॥

---

೭೦. ಅದರಿಂದ ನಾನು ಬ್ರಹ್ಮಲೋಕವನ್ನು ಹೊಂದಿದೆನು.

೭೧-೭೨. ನಾನು ಭೂಲೋಕದಲ್ಲಿರುವ ಲಿಂಗಗಳಿಗೆಲ್ಲ ಮಕರಸಂಕ್ರಾಂತಿಯ ದಿನ ಘೃತಾಭಿಷೇಕ ಮಾಡುತ್ತಿದ್ದೆನು. ರಾಜ್ಯದಲ್ಲಿ ಮಗನನ್ನು ಇರಿಸಿ ಚಮತ್ಕಾರ ಪುರದಲ್ಲಿ ಲಿಂಗವನ್ನು ಸ್ಥಾಪಿಸಿ ಭೃತ್ಯರಿಗೆ ಧನ ವಸ್ತ್ರಾದಿಗಳನ್ನಿತ್ತು ಅವರನ್ನು ಎಲ್ಲೆಡೆಯಲ್ಲಿಯೂ ನೇಮಿಸಿ ಹಗಲು ರಾತ್ರಿ ಆ ಲಿಂಗವನ್ನು ಆರಾಧಿಸುತ್ತಿದ್ದೆನು.

೭೩. ಅನಂತರ ಬಹುಕಾಲದ ತರುವಾಯ ಶಿವನು ನನ್ನಲ್ಲಿ ಸಂತುಷ್ಟನಾಗಿ ನನ್ನ ಬಳಿಗೆ ಬಂದು ಇಂತೆಂದನು.

೭೪. "ಮಹಾರಾಜ! ನೀನು ಅಮಿತ ಘೃತಕಂಬಲವನ್ನು ದಾನಮಾಡಿರು ವುದರಿಂದ ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನಗೆ ಮಂಗಳವಾಗಲಿ.

೭೫. ಆದುದರಿಂದ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಅದು ಕೊಡ ಲನರ್ಹವಾಗಿದ್ದರೂ, ದುರ್ಲಭವಾಗಿದ್ದರೂ ಕೊಡುವೆನು."

೭೬. ಬಳಿಕ ನಾನು, "ಸ್ವಾಮಿ! ನೀನು ನನ್ನಲ್ಲಿ ಸಂತುಷ್ಟನಾಗಿದ್ದರೆ ನನ್ನನ್ನು ನಿನ್ನ ಗಣವನ್ನಾಗಿಸು. ಬೇರೆ ಏನನ್ನೂ ವರಿಸುವುದಿಲ್ಲ" ಎಂದೆನು.

೭೭. ಶ್ರೀ ಭಗವಂತನು ಹೇಳುತ್ತಾನೆ:—ಮಹಾಭಾಗ್ಯವಂತನಾದ ಬಕನೆ! ನೀನು ನನ್ನೊಡನೆ ಕೈಲಾಸಪರ್ವತಕ್ಕೆ ಬಾ. ಈ ಶರೀರದಿಂದಲೆ ನನ್ನ ಗಣನಾಗು.

ಅನ್ಯೋಽಪಿ ಮರ್ತ್ಯಲೋಕೇಽತ್ರ ಯಃ ಕರಿಷ್ಯತಿ ಮಾನವಃ ।
ಮಕರಸ್ಥೇ ರವೌ ಮಹ್ಯಂ ಸಂಕ್ರಾಂತೌ ರಜನೀಮುಖೇ ।
ಸ ನೂನಂ ಮದ್ಗಣೋ ಭಾವೀ ಸಕೃತ್ಕೃತ್ವಾಽಥ ಕಂಬಲಂ ॥ ೭೮ ॥
ತ್ವಂ ಪುನರ್ಮಾಮಕಂ ಲಿಂಗಂ ಸಮಂ ಕುರ್ವನ್ ಭವಿಷ್ಯಸಿ ।
ಧರ್ಮಸೇನೇತಿ ವಿಖ್ಯಾತೋ ವಿಕೃತ್ಯಾ ಪರಿವರ್ಜಿತಃ ॥ ೭೯ ॥
ಏವಮುಕ್ತ್ವಾ ಸ ಭಗವಾನ್ಮಾಮಾದಾಯ ತತಃ ಪರಂ ।
ಕೈಲಾಸಂ ಪರ್ವತಂ ಗತ್ವಾ ಗಣಕೋಟೀಶತಾಮದಾತ್ ॥ ೮೦ ॥
ಕಸ್ಯಚಿತ್ತ್ವಥ ಕಾಲಸ್ಯ ಭ್ರಮಮಾಣೋ ಯದೃಚ್ಛಯಾ ।
ಗತೋಽಹಂ ಪರ್ವತಶ್ರೇಷ್ಠಂ ಹಿಮವಂತಂ ಮಹಾಗಿರಿಂ ॥ ೮೧ ॥
ಯತ್ರಾಸ್ತೇ ಗಾಲವೋನಾಮ ಸದೈವ ತಪಸಿ ಸ್ಥಿತಃ ।
ತಸ್ಯ ಭಾರ್ಯಾ ವಿಶಾಲಾಕ್ಷೀ ಸರ್ವಲಕ್ಷಣಲಕ್ಷಿತಾ ॥ ೮೨ ॥
ಸಪ್ತರಕ್ತಾ ತ್ರಿಗಂಭೀರಾ ಗೂಢಗುಲ್ಫಾ ಕೃಶೋದರೀ ।
ತಾಂ ದೃಷ್ಟ್ವಾ ಮನ್ಮಥಾವಿಷ್ಟಃ ಸಂಜಾತೋಽಹಂ ಮುನೀಶ್ವರ ॥ ೮೩ ॥
ಚಿಂತಿತಂ ಚ ಮಯಾ ಚಿತ್ತೇ ಕಥಮೇತಾಂ ಹರಾಮ್ಯಹಂ ।
ತಸ್ಮಾಚ್ಛಿಷ್ಯತ್ವಮಾಸಾದ್ಯ ಭಕ್ತಿಮಸ್ಯ ಕರೋಮ್ಯಹಂ ॥ ೮೪ ॥
ಶುಶ್ರೂಷಾ ನಿರತೋ ಭೂತ್ವಾ ಯೇನ ಪ್ರಾಪ್ನೋತಿ ಭಾಮಿನೀಂ ॥ ೮೫ ॥

---

೭೮. ಇತರ ಮಾನವನೂ ಮಕರ ಸಂಕ್ರಾತಿಯ ದಿನ ಸಾಯಂಕಾಲ ಒಂದು ಸಾರಿ ನನಗೆ ಘೃತಕಂಬಲವನ್ನಿತ್ತರೆ ಅವನು ನನ್ನ ಗಣನಾಗುವನು.

೭೯. ನೀನು ನನ್ನ ಲಿಂಗವನ್ನು ಸರಿಮಾಡಿ ವಿಕಾರರಹಿತನಾಗಿ ಧರ್ಮಸೇನನೆಂದು ವಿಖ್ಯಾತನಾಗುವೆ.

೮೦. ಪೂಜ್ಯನಾದ ಮಹೇಶನು ಹೀಗೆ ಹೇಳಿ ನನ್ನನ್ನು ಕರೆದುಕೊಂಡು ಕೈಲಾಸಪರ್ವತಕ್ಕೆ ಹೋಗಿ ಕೋಟಿಗಣಗಳಿಗೆ ಅಧಿಪತಿಯನ್ನಾಗಿ ಮಾಡಿದನು.

೮೧. ಒಂದಾನೊಂದು ದಿನ ನಾನು ಸ್ವೇಚ್ಛೆಯಾಗಿ ಸಂಚರಿಸುತ್ತ ಹಿಮವತ್ಪರ್ವತಕ್ಕೆ ಹೋದೆನು.

೮೨—೮೩. ಅಲ್ಲಿ ಗಾಲವನೆಂಬ ತಪಸ್ವಿಯಿದ್ದನು. ಅವನಿಗೆ ವಿಶಾಲನೇತ್ರವುಳ್ಳವಳೂ, ಸಮಸ್ತ ಲಕ್ಷಣಗಳಿಂದ ಕೂಡಿದವಳೂ, ಸಪ್ತಸ್ಥಾನದಲ್ಲಿ ರಕ್ತವರ್ಣಳೂ, ಮೂರು ಸ್ಥಳಗಳಲ್ಲಿ ಗಂಭೀರಳೂ, ಗೂಢವಾದ ಪಾದದ ಗೆಣ್ಣುಗಳುಳ್ಳವಳೂ, ಕೃಶೋದರಿಯೂ ಆದ ಪತ್ನಿಯಿದ್ದಳು. ಮುನೀಶ್ವರ! ನಾನು ಅವಳನ್ನು ನೋಡಿ ಕಾಮಪೀಡಿತನಾದೆನು.

೮೪—೮೫. ಅದರಿಂದ ನಾನು ಇವಳನ್ನು ಹೇಗೆ ಅಪಹರಿಸಲೆಂದು ಆಲೋಚಿಸಿದೆನು. ಆ ದರಂತೆ ನಾನು ಇವನಿಗೆ ಶಿಷ್ಯನಾಗಿ ಸೇವೆಗೈಯುತ್ತ ಭಕ್ತಿಯನ್ನು ತೋರಿಸಿ ಪತ್ನಿಯನ್ನು ಅಪಹರಿಸುವೆನೆಂದು ನಿಶ್ಚಯಿಸಿದೆನು.

ತತೋ ಬಟುಕರೂಪೇಣ ಸಂಪ್ರಾಪ್ತೋ ಗಾಲವೋ ಮಯಾ ।
ಸಂಸಾರಸ್ಯ ವಿರಕ್ತೋಽಹಂ ಕರಿಷ್ಯಾಮಿ ಮಹತ್ತಪಃ ॥ ೮೬ ॥
ದೀಕ್ಷಾಂ ಯಚ್ಛ ವಿಭೋ ಮಹ್ಯಂ ಯೇನ ಶಿಷ್ಯೋ ಭವಾಮಿ ತೇ ॥ ೮೭ ॥
ಆಹರಿಷ್ಯಾಮ್ಯಹಂ ದರ್ಭಾಂಸ್ತಥಾ ಸುಮನಸಃ ಸದಾ ।
ಸಮಿಧಶ್ಚ ಸದೈವಾಽಹಂ ಫಲಾನಿ ಜಲಮೇವ ಚ ॥ ೮೮ ॥
ಸ ಮಾಂ ವಿನಯಸಂಪನ್ನಂ ಜ್ಞಾತ್ವಾ ಬ್ರಾಹ್ಮಣರೂಪಿಣಂ ।
ದದೌ ದೀಕ್ಷಾಂ ತತೋ ಮಹ್ಯಂ ಶಾಸ್ತ್ರದೃಷ್ಟೇನ ಕರ್ಮಣಾ ॥ ೮೯ ॥
ಅಥ ದೀಕ್ಷಾಂ ಸಮಾಸಾದ್ಯ ತೋಷಯಾಮಿ ದಿನೇ ದಿನೇ ।
ತಂ ಚೈವ ತಸ್ಯ ಪತ್ನೀಂ ತಾಂ ಯಥೋಕ್ತಪರಿಚರ್ಯಯಾ ।
ಅಶುದ್ಧೇನಾಽಪಿ ಚಿತ್ತೇನ ಛಿದ್ರಾನ್ವೇಷಣತತ್ಪರಃ ॥ ೯೦ ॥
ಅನ್ಯಸ್ಮಿನ್ದಿವಸೇ ಪ್ರಾಪ್ತೇ ಸಾ ಸ್ತ್ರೀ ಧರ್ಮಸಮನ್ವಿತಾ ।
ಉಟಜಂ ದೂರತಸ್ತ್ಯಕ್ತ್ವಾ ರಾತ್ರೌ ಸುಪ್ತಾ ಮನಸ್ವಿನೀ ॥ ೯೧ ॥
ಸೋಽಹಂ ರೂಪಂ ಮಹತ್ಕೃತ್ವಾ ತಾಮಾದಾಯ ತಪಸ್ವಿನೀಂ ।
ಸುಖಸುಪ್ತಾಂ ಸುವಿಶ್ರಬ್ಧಾಂ ಪ್ರಸ್ಥಿತೋ ದಕ್ಷಿಣಾಮುಖಃ ॥ ೯೨ ॥

---

೮೬–೮೭. ಅನಂತರ ನಾನು ವಟುವಾಗಿ ಗಾಲವನೆಡೆಗೆ ಹೋಗಿ "ನಾನು ಸಂಸಾರದಿಂದ ವೈರಾಗ್ಯಗೊಂಡಿದ್ದೇನೆ. ಮಹಾತಪವನ್ನಾಚರಿಸುವೆನು. ನನಗೆ ದೀಕ್ಷೆಯನ್ನು ಕೊಡು. ಅದರಿಂದ ನಾನು ನಿನಗೆ ಶಿಷ್ಯನಾಗುವೆನು.

೮೮. ನಾನು ದರ್ಭೆಗಳನ್ನೂ, ಹೂವುಗಳನ್ನೂ, ಕಟ್ಟಿಗೆಗಳನ್ನೂ, ಫಲ ಜಲಗಳನ್ನೂ ತರುವೆನು.

೮೯. ಅವನು ನನ್ನನ್ನು ವಿನೀತನಾದ ಬ್ರಾಹ್ಮಣನನ್ನಾಗಿ ತಿಳಿದು ಶಾಸ್ತ್ರರೀತಿಯಿಂದ ದೀಕ್ಷೆಯನ್ನಿತ್ತನು.

೯೦. ಬಳಿಕ ನಾನು ದೀಕ್ಷೆಯನ್ನು ಹೊಂದಿ ಅಶುದ್ಧಮನಸ್ಸಿನಿಂದ ಛಿದ್ರವನ್ನು ಹುಡುಕುತ್ತ ಪ್ರತಿದಿನವೂ ಅವನನ್ನೂ, ಅವನ ಪತ್ನಿಯನ್ನೂ ವಿಧ್ಯುಕ್ತ ಶುಶ್ರೂಷೆಯಿಂದ ಸಂತೋಷಗೊಳಿಸುತ್ತಿದ್ದೆನು.

೯೧. ಇನ್ನೊಂದು ದಿನ ಆ ಮುನಿಪತ್ನಿಯು ರಜಸ್ವಲೆಯಾಗಿ ರಾತ್ರಿವೇಳೆಯಲ್ಲಿ ಪರ್ಣಶಾಲೆಯನ್ನು ತ್ಯಜಿಸಿ ದೂರದಲ್ಲಿ ಮಲಗಿದಳು.

೯೨. ನಾನು ರೂಪವನ್ನು ದೊಡ್ಡದಾಗಿ ಮಾಡಿಕೊಂಡು ಸುಖವಾಗಿ ಮಲಗಿದ್ದವಳೂ, ವಿಶ್ವಾಸವುಳ್ಳವಳೂ ಆದ ಆ ತಪಸ್ವಿನಿಯನ್ನು ಎತ್ತಿಕೊಂಡು ದಕ್ಷಿಣಮುಖವಾಗಿ ಹೊರಟೆನು.

ಅಥಾಽಸೌ ಸಂಪರಿತ್ಯಕ್ತಾ ಸಂಸ್ಪರ್ಶಾನ್ಮಮ ನಿದ್ರಯಾ ।
ಚೌರರೂಪಂ ಪರಿಜ್ಞಾಯ ಮಾಂ ಶಿಷ್ಯಂ ಪ್ರರುರೋದಹ ॥ ೯೩ ॥
ಸಾಽಬ್ರವೀಚ್ಚ ಸ್ವಭರ್ತಾರಂ ಗಾಲವಂ ಮುನಿಸತ್ತಮಂ ।
ಏಷ ಶಿಷ್ಯೋ ದುರಾಚಾರೋ ಹರತೇ ಮಾಮಿತಃ ಪ್ರಭೋ ॥ ೯೪ ॥
ತಸ್ಮಾದ್ರಕ್ಷ ಮಹಾಭಾಗ ಯಾವದ್ದೂರಂ ನ ಗಚ್ಛತಿ ॥ ೯೫ ॥
ತಚ್ಛ್ರುತ್ವಾ ಗಾಲವಃ ಪ್ರಾಹ ತಿಷ್ಠ ತಿಷ್ಠೇತಿ ಚಾಽಸಕೃತ್ ।
ಪಾಪಾಚಾರ ಸುದುಷ್ಟಾತ್ಮನ್ ಗತಿಸ್ತೇ ಸ್ತಂಭಿತಾ ಮಯಾ ॥ ೯೬ ॥
ತಸ್ಯ ವಾಕ್ಯಾತ್ತತೋ ಮಹ್ಯಂ ಗತಿಸ್ತಂಭೋ ವ್ಯಜಾಯತ ।
ಯದ್ವಲ್ಲಿಖಿತ ಏವಾಽಹಂ ಪ್ರತಿಷ್ಠಾಮಿ ಸುನಿಶ್ಚಲಃ ॥ ೯೭ ॥
ತತಸ್ತೇನ ಚ ಶಪ್ತೋಽಹಂ ಗಾಲವೇನ ಮಹಾತ್ಮನಾ ।
ವಂಚಿತೋಽಹಂ ತ್ವಯಾ ಯಸ್ಮಾದ್ಬಕೋ ಭವ ಸುದುರ್ಮತೇ ॥ ೯೮ ॥
ತತಃ ಪಶ್ಯಾಮಿ ಚಾಽಽತ್ಮಾನಂ ಸಹಸಾ ಬಕರೂಪಿಣಂ ।
ಬಕತ್ವೇಽಪಿ ನ ಮೇ ನಷ್ಟಾ ಯಾ ಸ್ಮೃತಿಃ ಪೂರ್ವಸಂಭವಾ ॥ ೯೯ ॥
ತತಃ ಸಾಽಪಿ ಚ ತತ್ಪತ್ನೀ ಸಚೈಲಂ ಸ್ನಾನಮಾಶ್ರಿತಾ ।
ಮತ್ಸ್ಪರ್ಶಾದ್ದುಃಖಿತಾಂಗೀ ಚ ಶಾಪಾಯ ಸಮುಪಸ್ಥಿತಾ ॥ ೧೦೦ ॥

---

೯೩. ಅವಳು ನನ್ನ ಸ್ಪರ್ಶದಿಂದ ನಿದ್ರಾರಹಿತಳಾಗಿ ಶಿಷ್ಯನಾದ ನಾನು ಚೋರರೂಪನಾಗಿರುವುದನ್ನು ತಿಳಿದು ಅತ್ತಳು.

೯೪. ಪತಿಯಾದ ಗಾಲವನನ್ನು ಕುರಿತು, "ನಾಥ! ದುರಾಚಾರಿಯಾದ ಈ ಶಿಷ್ಯನು ನನ್ನನ್ನು ಇಲ್ಲಿಂದ ಅಪಹರಿಸಿಕೊಂಡು ಹೋಗುತ್ತಿರುವನು.

೯೫. ಮಹಾಭಾಗ್ಯವಂತನೆ! ಇವನು ದೂರ ಹೋಗದಿರುವಷ್ಟರಲ್ಲಿ ನನ್ನನು ರಕ್ಷಿಸು."

೯೬. ಗಾಲವನು ಅದನ್ನು ಕೇಳಿ, "ಪಾಪಚರಿತನೆ! ನಿಲ್ಲು ನಿಲ್ಲು ನಾನ್ನು ನಿನ್ನ ಗಮನವನ್ನು ತಡೆದಿರುವೆನು" ಎಂದು ಅನೇಕ ಬಾರಿ ಹೇಳಿದನು.

೯೭. ಅವನ ಮಾತಿನಿಂದ ನನ್ನ ಗಮನವು ತಡೆದು ಬರೆಯಲ್ಪಟ್ಟವನಂತೆ ಅಲ್ಲಾಡದೆ ನಿಂತೆನು.

೯೮. ತರುವಾಯ ಗಾಲವನು "ನೀನು ನನ್ನನ್ನು ಮೋಸಗೊಳಿಸಿದ ರಿಂದ ಬಕನಾಗು" ಎಂದು ನನ್ನನ್ನು ಶಪಿಸಿದನು.

೯೯. ಕೂಡಲೆ ನಾನು ಬಕನಾಗಿರುವುದನ್ನು ನೋಡಿದೆನು. ಬಕದ ಸ್ಥಿತಿಯಲ್ಲಿಯೂ ನನ್ನ ಹಿಂದಿನ ಸ್ಮರಣೆಯು ಹಾಳಾಗಲಿಲ್ಲ.

೧೦೦. ತರುವಾಯ ಗಾಲವನ ಪತ್ನಿಯು ನನ್ನ ಸ್ಪರ್ಶದಿಂದ ದುಃಖಿತಳಾಗಿ ಸಚೇಲಸ್ನಾನಮಾಡಿ ನನಗೆ ಶಾಪವನ್ನು ಕೊಡಲುದ್ಯುಕ್ತಳಾದಳು.

ಯಸ್ಮಾತ್ಪಾಪ ತ್ವಯಾ ಸ್ಪೃಷ್ಟಾ ಪ್ರಸುಪ್ತಾಽಹಂ ರಜಸ್ವಲಾ ।
ಬಕಧರ್ಮಂ ಸಮಾಶ್ರಿತ್ಯ ಭರ್ತಾ ಮೇ ವಂಚಿತಸ್ತ್ವಯಾ ।
ಅನ್ಯರೂಪಂ ಸಮಾಸ್ಥಾಯ ತಸ್ಮಾತ್ತ್ವಂ ಬಕೋ ಭವ ॥ ೧೦೧ ॥
ಏವಂ ಶಪ್ತಸ್ತತೋ ದ್ವಾಭ್ಯಾಂ ತಾಭ್ಯಾಂ ವೈ ದುಃಖಸಂಯುತಃ ।
ಚರಣಾಭ್ಯಾಂ ಪ್ರಲಗ್ನಸ್ತು ಗಾಲವಸ್ಯ ಮಹಾತ್ಮನಃ ॥ ೧೦೨ ॥
ಗಣೋಽಹಂ ದೇವದೇವಸ್ಯ ತ್ರಿಣೇತ್ರಸ್ಯ ಮಹಾತ್ಮನಃ ।
ಪಾಲಕೇತಿ ಚ ವಿಖ್ಯಾತೋ ಗಣಕೋಟಿ ಪ್ರಭುಃ ಸ್ಥಿತಃ ॥ ೧೦೩ ॥
ಸೋಽಹಮತ್ರ ಸಮಾಯಾತಃ ಪ್ರಭೋಃ ಕಾರ್ಯೇಣ ಕೇನಚಿತ್ ।
ತವ ಭಾರ್ಯಾಂ ಸಮಾಲೋಕ್ಯ ಕಾಮದೇವವಶಂ ಗತಃ ॥ ೧೦೪ ॥
ಕ್ಷಮಾಪರಾಧಂ ತ್ವಂ ಮಹ್ಯಮೇವಂ ಜ್ಞಾತ್ವಾ ಮುನೀಶ್ವರ ।
ದುರ್ವಿನೀತಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ಚ ॥ ೧೦೫ ॥
ನ ತಿಷ್ಠತಿ ಚಿರಂ ಸ್ಥಾನೇ ಯಥಾಽಹಂ ಮದಗರ್ವಿತಃ ।
ಶಿಷ್ಯರೂಪಂ ಸಮಾಸ್ಥಾಯ ತತಃ ಪ್ರಾಪ್ತಸ್ತವಾಂತಿಕಂ ॥ ೧೦೬ ॥
ಅಸ್ಯಾ ಹರಣಹೇತೋಶ್ಚ ಮಹಾಸತ್ಯಾ ಮುನೀಶ್ವರ ।
ತಸ್ಮಾತ್ಕುರು ಪ್ರಸಾದಂ ಮೇ ದೀನಸ್ಯ ಪ್ರಣತಸ್ಯ ಚ ॥ ೧೦೭ ॥

---

೧೦೧. "ಪಾಪಿಷ್ಠನೆ! ನೀನು ರಜಸ್ವಲೆಯಾಗಿ ನಿದ್ರಿಸುತ್ತಿದ್ದ ನನ್ನನ್ನು ಮುಟ್ಟಿದ್ದರಿಂದಲೂ, ಅನ್ಯರೂಪದಿಂದ ಬಕಧರ್ಮವನ್ನಾಶ್ರಯಿಸಿ ನನ್ನ ಪತಿಯನ್ನು ವಂಚಿಸಿದ್ದರಿಂದಲೂ ನಿಜವಾಗಿಯೂ ಬಕನಾಗು."

೧೦೨. ಹೀಗೆ ನಾನು ಅವರಿಬ್ಬರಿಂದಲೂ ಶಪ್ತನಾಗಿ ದುಃಖದಿಂದ ನಡೆಯಲಾರದೆ ನಿಂತೆನು.

೧೦೩. ನಾನು ದೇವಾಧೀಶನೂ, ತ್ರಿಣಯನನೂ, ಮಹಾತ್ಮನೂ ಆದ ಮಹೇಶ್ವರನ ಗಣನು. ಕೋಟಿಗಣಗಳಿಗೆ ಸ್ವಾಮಿಯಾದ ಪಾಲಕನೆಂಬುವನು.

೧೦೪. ಸ್ವಾಮಿಕಾರ್ಯದ ಸಲುವಾಗಿ ಇಲ್ಲಿಗೆ ಬಂದ ನಾನು ನಿನ್ನ ಪತ್ನಿಯನ್ನು ನೋಡಿ ಮನ್ಮಥಪರವಶನಾದೆನು.

೧೦೫–೧೦೭. ಮುನಿವರ್ಯನೆ! ನೀನು ನನ್ನ ಅಪರಾಧವನ್ನರಿತು ಅದನ್ನು ಕ್ಷಮಿಸು. ದುರ್ವಿನೀತನು ಸಂಪತ್ತು, ವಿದ್ಯೆ, ಐಶ್ವರ್ಯಗಳನ್ನು ಹೊಂದಿ ಮದದಿಂದ ನನ್ನಂತೆಯೇ ಸ್ವಸ್ಥಾನದಲ್ಲಿರುವುದಿಲ್ಲ. ನಾನು ಅತ್ಯಂತ ಪತಿವ್ರತೆಯಾದ ನಿನ್ನೀ ಸತಿಯನ್ನು ಅಪಹರಿಸುವುದಕ್ಕಾಗಿ ಶಿಷ್ಯನ ರೂಪದಿಂದ ನಿನ್ನ ಬಳಿಗೆ ಬಂದೆನು. ಆದುದರಿಂದ ದೀನನೂ, ನಮ್ರನೂ ಆದ ನನಗೆ ಅನುಗ್ರಹಮಾಡು.

ಅನುಗ್ರಹ ಪ್ರದಾನೇನ ಕ್ಷಮಾ ಯಸ್ಮಾತ್ತಪಸ್ವಿನಾಂ ।
ಕೋಕಿಲಾನಾಂ ಸ್ವರೋ ರೂಪಂ ನಾರೀರೂಪಂ ಪತಿವ್ರತಾ ।
ವಿದ್ಯಾರೂಪಂ ಕುರೂಪಾಣಾಂ ಕ್ಷಮಾರೂಪಂ ತಪಸ್ವಿನಾಂ ॥ ೧೦೮ ॥

ಸೂತ ಉವಾಚ :—

ತಸ್ಯ ತತ್ಕೃಪಣಂ ಶ್ರುತ್ವಾ ಸೋಽಪಿ ಮಾಹೇಶ್ವರೋ ಮುನಿಃ ।
ಜ್ಞಾತ್ವಾ ತಂ ಬಾಂಧವಸ್ಥಾನೇ ದಯಾಂ ಕೃತ್ವಾಽಬ್ರವೀದ್ವಚಃ ॥ ೧೦೯ ॥
ಸತ್ಯವಾಕ್ತಿಷ್ಠತೇ ವಿಪ್ರಶ್ಚಮತ್ಕಾರಪುರೇ ಶುಭೇ ॥ ೧೧೦ ॥
ಭರ್ತೃಯಜ್ಞ ಇತಿ ಖ್ಯಾತಸ್ತದಾ ತಸ್ಯೋಪದೇಶತಃ ।
ಬಕತ್ವಂ ಯಾಸ್ಯತೇ ನೂನಂ ಮಮ ವಾಕ್ಯಾದಸಂಶಯಂ ॥ ೧೧೧ ॥
ತತಃ ಪಶ್ಯಾಮಿ ಚಾಽಽತ್ಮಾನಂ ಬಕತ್ವೇನ ಸಮಾಶ್ರಿತಂ ॥ ೧೧೨ ॥
ಏವಂ ಮೇ ದೀರ್ಘಮಾಯುಷ್ಯಂ ಸಂಜಾತಂ ಶಿವಭಕ್ತಿತಃ ।
ಘೃತ ಕಂಬಲಮಾಹಾತ್ಮ್ಯಾದ್ಬಕತ್ವಂ ಮುನಿಶಾಪತಃ ॥ ೧೧೩ ॥

ಇಂದ್ರದ್ಯುಮ್ನ ಉವಾಚ :—

ಏತದರ್ಥಂ ಸಮಾನೀತಸ್ತ್ವತ್ಸಕಾಶಂ ವಿಹಂಗಮ ।
ಇಂದ್ರದ್ಯುಮ್ನಸ್ಯ ವಾರ್ತಾರ್ಥಂ ಮರಣೇ ಕೃತನಿಶ್ಚಯಃ ॥ ೧೧೪ ॥

---

೧೦೮. ತಪಸ್ವಿಗಳು ಅನುಗ್ರಹಿಸುವುದರಿಂದ ಕ್ಷಮೆಯುಳ್ಳವರು. ಕೋಕಿಲೆಗಳಿಗೆ ಸ್ವರವೂ, ನಾರಿಗೆ ಪಾತಿವ್ರತ್ಯವೂ, ಕುರೂಪಿಗಳಿಗೆ ವಿದ್ಯೆಯೂ, ಮುನಿಗಳಿಗೆ ಕ್ಷಮೆಯೂ ರೂಪವಾಗಿರುವುದು.

೧೦೯. ಸೂತನು ಹೇಳುತ್ತಾನೆ:— ಮಹೇಶ್ವರ ಭಕ್ತನಾದ ಆ ಗಾಲವ ಮುನಿಯು ಅವನ ಆ ದೀನ ವಾಕ್ಯವನ್ನು ಕೇಳಿ ಅವನು ಬಾಂಧವನೆಂದರಿತು ಕರುಣಿಸಿ ಹೀಗೆಂದನು.

೧೧೦–೧೧೧. ಮಂಗಳಕರವಾದ ಚಮತ್ಕಾರಪುರದಲ್ಲಿ ಸತ್ಯವಾಗಿ ನುಡಿಯುವ ಭರ್ತೃಯಜ್ಞನೆಂಬ ಮುನಿವರನಿರುವನು. ನನ್ನ ಮಾತಿನಂತೆ ಅವನ ಉಪದೇಶದಿಂದ ನಿಜವಾಗಿಯೂ ನಿನ್ನ ಬಕತ್ವವು ಹೋಗುವುದು.

೧೧೨. ಬಳಿಕ ನಾನು ಬಕನಾಗಿರುವುದನ್ನು ನೋಡಿದೆನು.

೧೧೩. ಹೀಗೆ ನನಗೆ ಶಿವಭಕ್ತಿಯಿಂದಲೂ, ಘೃತಕಂಬಲಮಾಹಾತ್ಮ್ಯದಿಂದಲೂ ದೀರ್ಘಾಯುಷ್ಯವೂ, ಮುನಿಶಾಪದಿಂದ ಬಕತ್ವವೂ ಉಂಟಾಯಿತು.

೧೧೪. ಇಂದ್ರದ್ಯುಮ್ನನು ಹೇಳುತ್ತಾನೆ:—ಪಕ್ಷಿಯೆ! ಇದಕ್ಕಾಗಿಯೇ ಮಾರ್ಕಂಡೇಯನು ಸಾಯಲು ನಿಶ್ಚಯಿಸಿದ ನನ್ನನ್ನು ಇಂದ್ರದ್ಯುಮ್ನನ ವೃತ್ತಾಂತಕ್ಕಾಗಿ ನಿನ್ನೆಡೆಗೆ ಕರೆತಂದನು.

ಸಾ ತ್ವಯಾ ನೈವ ವಿಜ್ಞಾತಾ ಮಮಾಭಾಗ್ಯೈರ್ವಿಹಂಗಮ ।
ಸೇವಯಿಷ್ಯಾಮ್ಯಹಂ ತಸ್ಮಾತ್ಪ್ರದೀಪ್ತಂ ಹವ್ಯವಾಹನಂ ॥ ೧೧೫ ॥
ಪ್ರತಿಜ್ಞಾತಂ ಮಯಾ ಪೂರ್ವಮೇತನ್ನಿಶ್ಚಿತ್ಯ ಚೇತಸಿ ।
ಇಂದ್ರದ್ಯುಮ್ನೇಽಹ್ಯವಿಜ್ಞಾತೇ ಸಂಸೇವ್ಯಃ ಪಾವಕೋ ಮಯಾ ॥ ೧೧೬ ॥
ತಸ್ಮಾದ್ದೇಹಿ ಮಮಾದೇಶಂ ಮಾರ್ಕಂಡೇಯ ಸಮನ್ವಿತಃ ।
ಪ್ರವಿಶಾಮಿ ಯಥಾ ವಹ್ನಿಂ ಭ್ರಷ್ಟಕೀರ್ತಿರಹಂ ಬಕ ॥ ೧೧೭ ॥

ಮಾರ್ಕಂಡೇಯ ಉವಾಚ:—

ವೇತ್ಸಿ ಚಾಽನ್ಯಂ ನರಂ ಕಂಚಿದ್ವಯಸಾ ಚಾಽಽತ್ಮನೋಽಧಿಕಂ ।
ಪೃಚ್ಛಾಮಿ ಯೇನ ತಂ ಗತ್ವಾ ಕೃತೇ ಹ್ಯಸ್ಯ ಮಹಾತ್ಮನಃ ॥ ೧೧೮ ॥
ಶ್ರದ್ಧಯಾ ಪರಯಾ ಯುಕ್ತಃ ಸಂಪ್ರಾಪ್ತೋಽಯಂ ಮಯಾ ಸಹ ।
ತತ್ಕಥಂ ತ್ಯಜತಿ ಪ್ರಾಣಾನ್ ಸಹಾಯೇ ಮಯಿ ಸಂಸ್ಥಿತೇ ॥ ೧೧೯ ॥
ಅಪರಂ ಚ ಕ್ಷಮಂ ವಾಕ್ಯಂ ಯತ್ತ್ವಾಂ ವಚ್ಮಿ ವಿಹಂಗಮ ।
ಅಯಂ ದುಃಖೇನ ಸಂಯುಕ್ತಃ ಸಾಧಯಿಷ್ಯತಿ ಪಾವಕಂ ।
ಅಹಮೇನಮನುದ್ಧೃತ್ಯ ಕಸ್ಮಾದ್ಗಚ್ಛಾಮಿ ಚಾಽಽಶ್ರಮಂ ॥ ೧೨೦ ॥

---

೧೧೫. ನನ್ನ ದುರದೃಷ್ಟದಿಂದ ಅದು ನಿನಗೆ ಗೊತ್ತಿಲ್ಲ. ಆದುದರಿಂದ ನಾನು ಜ್ವಲಿಸುತ್ತಿರುವ ಅಗ್ನಿಯನ್ನು ಸೇವಿಸುವೆನು.

೧೧೬. ನಾನು ಹಿಂದೆ ಇಂದ್ರದ್ಯುಮ್ನನ ವೃತ್ತಾಂತವು ತಿಳಿಯದಿದ್ದರೆ ಅಗ್ನಿಯನ್ನು ಪ್ರವೇಶಿಸುವೆನೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಪ್ರತಿಜ್ಞೆಮಾಡಿದ್ದೇನೆ.

೧೧೭. ಆದುದರಿಂದ ಭ್ರಷ್ಟಕೀರ್ತಿಯುಳ್ಳ ನಾನು ಅಗ್ನಿಯನ್ನು ಪ್ರವೇಶಿಸಲು ಮಾರ್ಕಂಡೇಯನೊಡನೆ ಆಣತಿಯನ್ನು ಕೊಡು.

೧೧೮. ಮಾರ್ಕಂಡೇಯನು ಹೇಳುತ್ತಾನೆ:—ನೀನು ನನಗಿಂತ ಹೆಚ್ಚು ವಯಸ್ಸಿನ ಬೇರೆ ಯಾವನಾದರೂ ಮನುಷ್ಯನನ್ನು ತಿಳಿದಿರುವೆಯಾ? ಹಾಗಾದರೆ ನಾನು ಇವನಿಗಾಗಿ ಆ ಮಹಾತ್ಮನೆಡೆಗೆ ಹೋಗಿ ಕೇಳುವೆನು.

೧೧೯. ಇವನು ಅತಿ ಶ್ರದ್ಧೆಯಿಂದ ಇಲ್ಲಿಗೆ ನನ್ನೊಡನೆ ಬಂದಿರುವನು. ಆದುದರಿಂದ ಸಹಾಯಕನಾದ ನಾನಿರುವಾಗ ಹೇಗೆ ಪ್ರಾಣವನ್ನು ಬಿಡುವನು?

೧೨೦. ವಿಹಂಗಮ! ನಾನು ನಿನಗೆ ಇನ್ನೊಂದು ಉಚಿತವಾದ ಮಾತನ್ನು ಹೇಳುವೆನು. ಇವನು ದುಃಖದಿಂದ ಅಗ್ನಿಯನ್ನು ಪ್ರವೇಶಿಸುವನು. ನಾನು ಇವನನ್ನು ಉದ್ಧರಿಸದೆ ಹೇಗೆ ಆಶ್ರಮಕ್ಕೆ ಹೋಗುವೆನು?

ಸೂತ ಉವಾಚ:—

ತಯೋಸ್ತಂ ನಿಶ್ಚಯಂ ಜ್ಞಾತ್ವಾ ಬಕಃ ಪರಮದುರ್ಮನಾಃ ।
ಸುಚಿರಂ ಚಿಂತಯಾಮಾಸ ಕಥಂ ಸ್ಯಾದೇತಯೋಃ ಸುಖಂ ॥ ೧೨೧ ॥
ತತೋ ರಾಜಾ ಮುನಿಶ್ಚೈವ ದಾರೂಣ್ಯಾಹೃತ್ಯ ಪಾವಕಂ ।
ಪ್ರವೇಷ್ಟುಕಾಮೌ ತೌ ದೃಷ್ಟ್ವಾ ಬಕೋ ವಚನಮಬ್ರವೀತ್ ॥ ೧೨೨ ॥
ಮಮ ವಾಕ್ಯಂ ಕುರು ಪ್ರಾಜ್ಞ ಯದಿ ಜೀವಿತುಮಿಚ್ಛಸಿ ।
ಜ್ಞಾತಃ ಸೋಽದ್ಯ ಮಯಾ ವ್ಯಕ್ತಮಿಂದ್ರದ್ಯುಮ್ನಂ ನರಾಧಿಪಂ ॥ ೧೨೩ ॥
ಯೋ ಜ್ಞಾಸ್ಯತಿ ಮಮ ಜ್ಯೇಷ್ಠಃ ಸರ್ವಶಾಸ್ತ್ರವಿಚಕ್ಷಣಃ ।
ತತ್ತ್ವಮೇನಂ ಸಮಾದಾಯ ಮರಣೇ ಕೃತನಿಶ್ಚಯಂ ॥ ೧೨೪ ॥
ನಿಃಶ್ವಸಂತಂ ಯಥಾ ನಾಗಂ ಬಾಷ್ಪವ್ಯಾಕುಲಲೋಚನಂ ।
ಸಮಾಗಚ್ಛ ಮಯಾ ಸಾರ್ಧಂ ಕೈಲಾಸಂ ಪರ್ವತಂ ಪ್ರತಿ ॥ ೧೨೫ ॥
ಯತ್ರಾಽಸ್ತಿ ದಯಿತೋ ಮಹ್ಯಮುಲೂಕಶ್ಚಿರಜೀವಭಾಕ್ ।
ಸ ನೂನಂ ಜ್ಞಾಸ್ಯತೇ ತಂ ಹಿ ಮಾ ವೃಥಾ ಮರಣಂ ಕೃಥಾಃ ॥ ೧೨೬ ॥
ತತೋಽಸೌ ತೇನ ಸಂಯುಕ್ತೋ ಬಕೇನ ಸುಮಹಾತ್ಮನಾ ।
ಮಾರ್ಕಂಡೇಯೇನ ಸಂಪ್ರಾಪ್ತಃ ಕೈಲಾಸಂ ಪರ್ವತೋತ್ತಮಂ ॥ ೧೨೭ ॥

---

೧೨೧. ಸೂತನು ಹೇಳುತ್ತಾನೆ:—ಬಕನು ಅವರಿಬ್ಬರ ಆ ನಿಶ್ಚಯವನ್ನು ತಿಳಿದು ಅತ್ಯಂತ ದುಃಖಿತನಾಗಿ ಇವರಿಬ್ಬರಿಗೆ ಹೇಗೆ ಸುಖವಾದೀತೆಂದು ಬಹಳ ಹೊತ್ತು ಆಲೋಚಿಸಿದನು.

೧೨೨. ಬಳಿಕ ಅವನು ಕಟ್ಟಿಗೆಗಳನ್ನು ತಂದು ಅಗ್ನಿಯನ್ನು ಪ್ರವೇಶಿಸಲು ಅಪೇಕ್ಷೆಯುಳ್ಳ ಮುನಿ ಮತ್ತು ರಾಜನನ್ನು ನೋಡಿ ಇಂತೆಂದನು.

೧೨೩–೧೨೫. ಪ್ರಾಜ್ಞ! ನೀನು ಜೀವಿಸಲು ಬಯಸುವುದಾದರೆ ನನ್ನ ಮಾತನ್ನು ನಡೆಯಿಸು. ಇಂದ್ರದ್ಯುಮ್ನರಾಜನನ್ನು ತಿಳಿದ ಸಕಲ ಶಾಸ್ತ್ರ ನಿಪುಣನಾದ ನನ್ನ ಅಣ್ಣನು ಸ್ಮರಣೆಗೆ ಬಂದನು. ಆದುದರಿಂದ ನೀನು ಮಡಿಯಲು ನಿಶ್ಚಯಿಸಿರುವವನೂ, ಸರ್ಪದಂತೆ ಉಸಿರಾಡುತ್ತಿರುವವನೂ, ಕಣ್ಣೀರಿನಿಂದ ವ್ಯಾಕುಲಗೊಂಡ ಕಣ್ಣುಳ್ಳವನೂ ಆದ ಇವನನ್ನು ಕರೆದುಕೊಂಡು ನನ್ನೊಡನೆ ಕೈಲಾಸಪರ್ವತಕ್ಕೆ ಬಾ.

೧೨೬. ಅಲ್ಲಿ ನನಗೆ ಪ್ರಿಯವೂ, ಚಿರಂಜೀವಿಯೂ ಆದ ಗೂಬೆಯಿರುವುದು. ಅದು ನಿಶ್ಚಯವಾಗಿಯೂ ಆ ಇಂದ್ರದ್ಯುಮ್ನನನ್ನು ತಿಳಿದಿರುವುದು. ವ್ಯರ್ಥವಾಗಿ ಮಡಿಯಬೇಡ.

೧೨೭. ಬಳಿಕ ಇವನು ಮಹಾತ್ಮನಾದ ಬಕ ಮತ್ತು ಮಾರ್ಕಂಡೇಯನೊಡನೆ ಕೈಲಾಸಪರ್ವತವನ್ನು ಸೇರಿದನು.

ಸೋಽಪಿ ದೃಷ್ಟ್ವಾ ಬಕಂ ಪ್ರಾಪ್ತಂ ಮಿತ್ರಂ ಪರಮಸಮ್ಮತಂ ।
ಸಮಾಗಚ್ಛದಸೌ ಹೃಷ್ಟಃ ಸ್ವಾಗತೇನಾಽಭ್ಯನಂದಯತ್ ॥ ೧೨೮ ॥
ಅಥ ತಂ ಚೈವ ವಿಶ್ರಾಂತಂ ಸಮಾಲಿಂಗ್ಯ ಮುಹುರ್ಮುಹುಃ ।
ಪ್ರಾಕಾರವರ್ಣನಾಮಾಽಸೌ ವಾಕ್ಯಮೇತದುವಾಚ ಹ ॥ ೧೨೯ ॥
ಸ್ವಾಗತಂ ತೇ ದ್ವಿಜಶ್ರೇಷ್ಠ ಭೂಪ ಸುಸ್ವಾಗತಂ ಚ ತೇ ।
ಸಖ್ಯೇಽದ್ಯ ಯಚ್ಛ ತೇ ಕಾರ್ಯಂ ಪದಾಽಽಗಮನಕಾರಣಂ ॥ ೧೩೦ ॥
ಕಾವೇತೌ ಪುರುಷೌ ಪ್ರಾಪ್ತೌ ತ್ವಯಾ ಸಾರ್ಧಂ ಮಮಾಂತಿಕಂ ।
ದಿವ್ಯರೂಪೌ ಮಹಾಭಾಗೌ ತೇಜಸಾ ಪರಿವಾರಿತೌ ॥ ೧೩೧ ॥

ಬಕ ಉವಾಚ:—

ಏಷ ಮಾರ್ಕಂಡ ಸಂಜ್ಞೋಽತ್ರ ಪ್ರಸಿದ್ಧೋ ಭುವನತ್ರಯೇ ।
ಮಹೇಶ್ವರಪ್ರಸಾದೇನ ಸಂಸಿದ್ಧಿಂ ಪರಮಾಂ ಗತಃ ।
ದ್ವಿತೀಯೋಽಸೌ ಸುಹೃಚ್ಚಾಽಸ್ಯ ಕಶ್ಚಿನ್ನೋ ವೇದ್ಮಿತತ್ವತಃ ।
ಮಾರ್ಕಂಡೇನ ಸಮಾಯಾತಃ ಸುಹೃದಾ ಚ ಮಮಾಂತಿಕಂ ॥ ೧೩೨ ॥
ಇಂದ್ರದ್ಯುಮ್ನಂ ಪ್ರಷ್ಟುಕಾಮೋ ಸ ವಿಜ್ಞಾತೋ ಮಯಾ ಸಖೇ ॥೧೩೩॥
ತತೋ ವೈರಾಗ್ಯಮಾಪನ್ನೋ ವಾಂಛಮಾನೋ ಹುತಾಽಶನಂ ।
ತದ್ವಾರ್ತಾರ್ಥಂ ಸಮಾನೀತೋ ಮಯಾಽತ್ರೈವ ವಿಹಂಗಮ ॥ ೧೩೪ ॥

---

೧೨೮. ಆ ಗೂಬೆಯು ಪರಮಮಿತ್ರನಾದ ಬಕನು ಬಂದಿರುವುದನ್ನು ನೋಡಿ ಅತಿ ಸಂತೋಷದಿಂದ ಸ್ವಾಗತವನ್ನು ನೀಡಿ ಸಂತೋಷಗೊಳಿಸಿತು.

೧೨೯. ಬಳಿಕ ಪ್ರಾಕಾರವರ್ಣನೆಂಬ ಆ ಗೂಬೆಯು ವಿಶ್ರಾಂತಿಗೊಂಡ ಬಕನನ್ನು ಬಾರಿಬಾರಿಗೂ ಆಲಿಂಗಿಸಿ ಹೀಗೆಂದಿತು.

೧೩೦. ಮುನಿಯೇ! ದೊರೆಯೆ! ನಿಮಗೆ ಸುಖಾಗಮನವಾಗಲಿ. ಸ್ನೇಹಿತನಾದ ನನ್ನಿಂದ ನಿಮಗೇನಾಗಬೇಕು? ನೀವು ಬರಲು ಕಾರಣವೇನು ತಿಳಿಸಿರಿ.

೧೩೧. ದಿವ್ಯರೂಪವುಳ್ಳವರೂ, ಮಹಾಭಾಗ್ಯವಂತರೂ, ತೇಜಸ್ವಿಗಳೂ ಆಗಿ ನನ್ನೆಡೆಗೆ ಬಂದ ಈ ಪುರುಷರಾರು?

೧೩೨. ಬಕನು ಹೇಳುತ್ತಾನೆ:—ಇವನು ಮಹೇಶ್ವರನ ಅನುಗ್ರಹದಿಂದ ಅತಿಶಯ ತೃಪ್ತಿಯನ್ನು ಹೊಂದಿದ ಮೂರು ಲೋಕಗಳಲ್ಲಿ ಪ್ರಸಿದ್ಧನಾದ ಮಾರ್ಕಂಡನು. ಮಿತ್ರನಾದ ಇವನೊಡನೆ ನನ್ನ ಹತ್ತಿರ ಬಂದ ಇವನ ಮಿತ್ರನಾದ ಈ ಎರಡನೆಯವನು ಯಾರೆಂಬುದನ್ನು ಅರಿಯೆನು.

೧೩೩–೧೩೪. ಇವನು ಇಂದ್ರದ್ಯುಮ್ನನನ್ನು ತಿಳಿಯಲು ಬಂದಿರುವನು. ನಾನು ಅವನನ್ನರಿಯೆನು. ಅದರಿಂದ ಇವನು ವೈರಾಗ್ಯಗೊಂಡು ಅಗ್ನಿಯನ್ನು ಪ್ರವೇಶಿಸಲು ಇಚ್ಛಿಸುವನು. ನಾನು ಅವನ ವೃತ್ತಾಂತವನ್ನು ತಿಳಿಯುವುದಕ್ಕಾಗಿ ನನ್ನೊಡನೆ ಇಲ್ಲಿಗೆ ಕರೆದುಕೊಂಡು ಬಂದಿರುವೆನು.

ಯದಿ ಜಾನಾಸಿ ತಂ ಭೂಪಮಿಂದ್ರದ್ಯುಮ್ನಂ ಮಹಾಮತೇ ।
ತತ್ತ್ವಂ ಕೀರ್ತಯಯೇನಾಽಸೌ ಮರಣಾದ್ವಿನಿವರ್ತತೇ ॥ ೧೩೫ ॥
ಚಿರಾಯುಸ್ತ್ವಂ ಮಯಾ ಜ್ಞಾತೋ ಹ್ಯತಃ ಪ್ರಾಪ್ತೋಽಸ್ಮಿ ತೇಽಂತಿಕಂ ॥

ಉಲೂಕ ಉವಾಚ :—

ಅಷ್ಟಾವಿಂಶತ್ಪ್ರಮಾಣೇನ ಕಲ್ಪಾ ಜಾತಸ್ಯ ಮೇ ಸ್ಥಿತಾಃ ।
ನ ದೃಷ್ಟೋ ನ ಶ್ರುತಃ ಕಶ್ಚಿದಿಂದ್ರದ್ಯುಮ್ನೋ ಮಹೀಪತಿಃ ॥ ೧೩೭ ॥

ಇಂದ್ರದ್ಯುಮ್ನ ಉವಾಚ :—

ತವ ಕಸ್ಮಾದುಲೂಕತ್ವಂ ಶೀಘ್ರಂ ತನ್ಮೇ ಪ್ರಕೀರ್ತಯ ।
ಏತನ್ಮೇ ಕೌತುಕಂ ಭಾವಿ ಯತ್ತೇಽಹ್ಯಾಯುರಸಂತಕಂ ।
ಉಲೂಕತ್ವಂ ಚ ಸಂಜಾತಂ ರೌದ್ರಂ ಲೋಕ ವಿಗರ್ಹಿತಂ ॥ ೧೩೮ ॥

ಉಲೂಕ ಉವಾಚ :—

ಶೃಣು ತೇಽಹಂ ಪ್ರವಕ್ಷ್ಯಾಮಿ ದೀರ್ಘಾಯುರ್ಮೇ ಯಥಾಸ್ಥಿತಂ ।
ಮಹೇಶ್ವರ ಪ್ರಸಾದೇನ ಬಿಲ್ವಪತ್ರಾರ್ಚನಾನ್ಮಯಾ ।
ಉಲೂಕತ್ವಂ ಮಯಾ ಪ್ರಾಪ್ತಂ ಭೃಗೋಃ ಶಾಪಾನ್ಮಹಾತ್ಮನಃ ॥ ೧೩೯ ॥
ಅಹಮಾಸಂ ಪುರಾ ವಿಪ್ರಃ ಸರ್ವವಿದ್ಯಾಸು ಪಾರಗಃ ।
ಚಮತ್ಕಾರಪುರೇ ಶ್ರೇಷ್ಠೋ ನಾಮ್ನಾ ಖ್ಯಾತಸ್ತು ಘಂಟಿಕಃ ।
ಬ್ರಹ್ಮಚಾರೀ ದಮೋಪೇತೋ ಹರಪೂಜಾರ್ಚನೇ ರತಃ ॥ ೧೪೦ ॥

---

೧೩೫. ಪ್ರಾಜ್ಞನೆ! ನೀನು ಇಂದ್ರದ್ಯುಮ್ನರಾಜನನ್ನು ತಿಳಿದಿದ್ದರೆ ಹೇಳು. ಆದರಿಂದ ಇವನು ಮಡಿಯುವುದಿಲ್ಲ.

೧೩೬. ನೀನು ಚಿರಂಜೀವಿಯೆಂದು ತಿಳಿದು ನಿನ್ನ ಹತ್ತಿರಕ್ಕೆ ಬಂದಿದ್ದೇನೆ.

೧೩೭. ಗೂಬೆಯು ಹೇಳುತ್ತದೆ:—ನಾನು ಹುಟ್ಟಿ ಇಪ್ಪತ್ತೆಂಟು ಕಲ್ಪಗಳಾದುವು. ಇಂದ್ರದ್ಯುಮ್ನರಾಜನನ್ನು ನೋಡಲೂ ಇಲ್ಲ. ಕೇಳಲೂ ಇಲ್ಲ.

೧೩೮. ಇಂದ್ರದ್ಯುಮ್ನನು ಹೇಳುತ್ತಾನೆ:—ನಿನಗೆ ಈ ಲೋಕನಿಂದ್ಯವಾದ ಭಯಂಕರ ಉಲೂಕತ್ವವೂ, ದೀರ್ಘಾಯುಷ್ಯವೂ ಹೇಗುಂಟಾಯಿತು? ಬಹಳ ಕುತೂಹಲವುಂಟಾಗಿದೆ. ಅದನ್ನು ನನಗೆ ಹೇಳು.

೧೩೯. ಗೂಬೆಯು ಹೇಳುತ್ತದೆ:—ಕೇಳು. ಹೇಳುತ್ತೇನೆ. ನಾನು ಮಹೇಶ್ವರನನ್ನು ಬಿಲ್ವಪತ್ರದಿಂದ ಅರ್ಚಿಸಿರುವುದರಿಂದ ಅವನ ಅನುಗ್ರಹದಿಂದ ದೀರ್ಘಾಯುಷ್ಮಂತನಾದೆನು. ಮಹಾತ್ಮನಾದ ಭೃಗುವಿನ ಶಾಪದಿಂದ ಗೂಬೆಯಾದೆನು.

೧೪೦. ಸಕಲ ವಿದ್ಯಾಪಾರಂಗತನೂ, ಬ್ರಹ್ಮಚಾರಿಯೂ, ಜಿತೇಂದ್ರಿಯನೂ, ಶಿವಪೂಜಾನಿರತನೂ ಆದ ಘಂಟಿಕನೆಂಬ ನಾನು ಹಿಂದೆ ಚಮತ್ಕಾರಪುರದಲ್ಲಿದ್ದೆನು.

ಅಖಂಡಿತೈರ್ಬಿಲ್ವಪತ್ರೈರಗ್ರಜಾತೈಸ್ತ್ರಿಪತ್ರಕೈಃ ।
ತ್ರಿಕಾಲಂ ಪೂಜಿತಃ ಶಂಭುರ್ಲಕ್ಷಮಾತ್ರೈಃ ಸದಾ ಮಯಾ ॥ ೧೪೧ ॥
ತತೋ ವರ್ಷಸಹಸ್ರಾಂತೇ ತುಷ್ಟೋ ಮೇ ಭಗವಾನ್ ಹರಃ ।
ಪ್ರೋವಾಚ ದರ್ಶನಂ ಗತ್ವಾ ಮೇಘಗಂಭೀರಯಾ ಗಿರಾ ॥ ೧೪೨ ॥
ಅಹಂ ತುಷ್ಟೋಽಸ್ಮಿ ತೇ ವತ್ಸ ವರಂ ವರಯ ಸುವ್ರತ ।
ಅಖಂಡಿತೈರ್ಬಿಲ್ವಪತ್ರೈಸ್ತ್ರಿಕಾಲೇ ಯತ್ತ್ವಯಾರ್ಚಿತಃ ॥ ೧೪೩ ॥
ಬಿಲ್ವಸ್ಯ ಪ್ರಸವಾಗ್ರೇಣ ತ್ರಿಪತ್ರೇಣ ಪ್ರಜಾಯತೇ ।
ಏಕೇನಾಪಿ ಯಥಾ ತುಷ್ಟಿಸ್ತಥಾಽನ್ಯೇಷಾಂ ನ ಕೋಟಿಭಿಃ ॥ ೧೪೪ ॥
ಪುಷ್ಪಾಣಾಮಪಿ ಭದ್ರಂತೇ ಸುಗಂಧಾನಾಮಪಿ ಧ್ರುವಂ ।
ಸಖೇ ಮಯಾ ಪ್ರಣಮ್ಯೋಚ್ಚೈಃ ಸಪ್ರೋಕ್ತಃ ಶಶಿಶೇಖರಃ ॥ ೧೪೫ ॥
ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ತನ್ಮಾಂಕುರು ಜಗನ್ನಾಥ ಜರಾಮರಣವರ್ಜಿತಂ ॥ ೧೪೬ ॥
ಸ ತಥೇತಿ ಪ್ರತಿಜ್ಞಾಯ ಮಹಾದೇವೋ ಮಹೇಶ್ವರಃ ।
ಕೈಲಾಸಂ ಪ್ರತಿ ದೇವೇಶಃ ಕ್ಷಣಾಚ್ಚಾಽದರ್ಶನಂ ಗತಃ ॥ ೧೪೭ ॥
ತತೋಽಹಂ ಪರಿತುಷ್ಟೋಽಥ ವರಂ ಪ್ರಾಪ್ಯ ಮಹೇಶ್ವರಾತ್ ।
ಕೃತಕೃತ್ಯಮಿವಾತ್ಮಾನಂ ಚಿಂತಯಾಮಿ ಪ್ರಹರ್ಷಿತಃ ॥ ೧೪೮ ॥

---

೧೪೧. ತ್ರಿಕಾಲದಲ್ಲಿಯೂ ಮಹೇಶ್ವರನನ್ನು ಕೊನೆಯಲ್ಲಿ ಹುಟ್ಟಿದ ಮೂರು ಎಲೆಗಳುಳ್ಳ ಅಖಂಡಿತ ಲಕ್ಷ ಬಿಲ್ವಪತ್ರೆಗಳಿಂದ ಯಾವಾಗಲೂ ಪೂಜಿಸಿದೆನು.

೧೪೨–೧೪೩. ಬಳಿಕ ಸಾವಿರ ವರ್ಷಗಳಾದಮೇಲೆ ಪೂಜ್ಯನಾದ ಶಂಕರನು ಸಂತೋಷಗೊಂಡು ಪ್ರತ್ಯಕ್ಷನಾಗಿ ಮೇಘದಂತೆ ಗಂಭೀರವಾದ ವಾಣಿಯಿಂದ ಹೀಗೆಂದನು. "ನೀನು ತ್ರಿಕಾಲದಲ್ಲಿ ಅಖಂಡಿತ ಬಿಲ್ವಪತ್ರಗಳಿಂದ ನನ್ನನ್ನು ಪೂಜಿಸಿರುವುದರಿಂದ ನಿನ್ನಲ್ಲಿ ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ.

೧೪೪–೧೪೫. ಮೂರು ದಳಗಳುಳ್ಳ ಒಂದು ಬಿಲ್ವದ ಕುಡಿಯಿಂದ ಸಂತೋಷ ವಾಗುವಂತೆ ಇತರ ಕೋಟಿ ಸುಗಂಧಪುಷ್ಪಗಳಿಂದ ತೃಪ್ತಿಯಾಗುವುದಿಲ್ಲ." ಮಿತ್ರನೆ! ನಾನು ಶಿವನನ್ನು ವಂದಿಸಿ ಇಂತೆಂದೆನು.

೧೪೬. ಸ್ವಾಮಿ! ನೀನು ಸಂತುಷ್ಟನಾಗಿದ್ದರೆ, ವರವನ್ನು ಕೊಡುವುದಾದರೆ ನನಗೆ ಮುಪ್ಪು ಮರಣವಿಲ್ಲದಂತೆ ಮಾಡು.

೧೪೭. ಶಂಕರನು ಹಾಗೆಯೇ ಆಗಲೆಂದು ಹೇಳಿ ಅದೃಶ್ಯನಾಗಿ ಕೈಲಾಸಕ್ಕೆ ತೆರಳಿದನು.

೧೪೮. ಬಳಿಕ ಮಹೇಶ್ವರನಿಂದ ವರವನ್ನು ಪಡೆದ ನಾನು ಸಂತೋಷ ಗೊಂಡು ಧನ್ಯನಾದೆನೆಂದು ತಿಳಿದೆನು.

ಏತಸ್ಮಿನ್ನೇವ ಕಾಲೇತು ಭಾರ್ಗವೋ ಮುನಿಸತ್ತಮಃ ।
ಕುಶಲಃ ಸರ್ವಶಾಸ್ತ್ರೇಷು ವೇದವೇದಾಂಗ ಪಾರಗಃ ॥ ೧೪೯ ॥
ತಸ್ಯ ಭಾರ್ಯಾಽಭವತ್ಸಾಧ್ವೀ ನಾಮ್ನಾ ಖ್ಯಾತಾ ಸುದರ್ಶನಾ ।
ಪ್ರಾಣೇಭ್ಯೋಽಪಿ ಪ್ರಿಯಾ ತಸ್ಯ ಗಾಲವಸ್ಯ ಮುನೇಃ ಸುತಾ ॥ ೧೫೦ ॥
ತಸ್ಯ ಕನ್ಯಾ ಸಮಭವದ್ರೂಪೇಣಾ ಪ್ರತಿಮಾ ಭುವಿ ।
ಸಾ ಮಯಾ ಸಹಸಾ ದೃಷ್ಟ್ವಾ ಕ್ರೀಡಮಾನಾ ಯಥೇಚ್ಛಯಾ ॥ ೧೫೧ ॥
ಮಧ್ಯಕ್ಷಾಮಾ ಸುಕೇಶೀ ಚ ಬಿಂಬೋಷ್ಠೀ ದೀರ್ಘಲೋಚನಾ ।
ತಾಮಹಂ ವೀಕ್ಷಯಿತ್ವಾತು ಕಾಮದೇವವಶಂ ಗತಃ ॥ ೧೫೨ ॥
ತತಃ ಪೃಷ್ಟಾ ಮಯಾ ಕಸ್ಯ ಕನ್ಯೇಯಂ ಚಾರುಲೋಚನಾ ।
ವಿಭಕ್ತಸರ್ವಾಽವಯವಾ ದೇವಕನ್ಯೇವ ರಾಜತೇ ॥ ೧೫೩ ॥
ಸಖೀಭಿಃ ಕೀರ್ತಿತಾ ಮಹ್ಯಂ ಭಾರ್ಗವಸ್ಯ ಮುನೇಃ ಸುತಾ ।
ಏಷಾ ಚಾಽದ್ಯಾಽಪಿ ಕನ್ಯಾತ್ವೇ ವರ್ತತೇ ಚಾರುಹಾಸಿನೀ ॥ ೧೫೪ ॥
ತತೋಽಹಂ ಭಾರ್ಗವಂ ಗತ್ವಾ ವಿನಯೇನ ಸಮನ್ವಿತಃ ।
ಯಯಾಚೇ ಕನ್ಯಕಾಂ ತಾಂ ಚ ಕೃತಾಂಜಲಿಪುಟಃ ಸ್ಥಿತಃ ॥ ೧೫೫ ॥
ಸವರ್ಣಂ ಮಾಂ ಪರಿಜ್ಞಾಯ ಸೋಽಪಿ ಭಾರ್ಗವನಂದನಃ ।
ದತ್ತವಾಂಸ್ತಾಂ ಮಹಾಭಾಗ ವಿರೂಪಸ್ಯಾಽಪಿ ಕನ್ಯಕಾಂ ॥ ೧೫೬ ॥

---

೧೪೯. ಈ ಸಮಯದಲ್ಲಿ ಸಕಲ ಶಾಸ್ತ್ರಗಳಲ್ಲಿ ಕುಶಲನೂ, ವೇದವೇಂದಾಂಗ ಪಾರಂಗತನೂ ಆದ ಭಾರ್ಗವನೆಂಬ ಮುನಿವರ್ಯನಿದ್ದನು.

೧೫೦. ಅವನಿಗೆ ಪತಿವ್ರತೆಯೂ, ಪ್ರಾಣಕ್ಕಿಂತ ಪ್ರಿಯಳೂ, ಗಾಲವ ಮುನಿಯ ಮಗಳೂ ಆದ ಸುದರ್ಶನೆಯೆಂಬುವಳು ಪತ್ನಿಯಾಗಿದ್ದಳು.

೧೫೧. ಅವನಿಗೆ ಸುಂದರಿಯಾದ ಕನ್ಯೆಯಿದ್ದಳು. ಅವಳು ಸ್ವೇಚ್ಛೆಯಾಗಿ ಆಡುತ್ತಿರಲು ನಾನು ನೋಡಿದೆನು.

೧೫೨. ಕೃಶಮಧ್ಯಳೂ, ಸುಕೇಶಿಯೂ, ತೊಂಡೆಯ ಹಣ್ಣಿನಂತೆ ತುಟಿಯುಳ್ಳ ವಳೂ, ವಿಶಾಲಾಕ್ಷಿಯೂ ಆದ ಅವಳನ್ನು ನೋಡಿದ ನಾನು ಕಾಮವಶನಾದೆನು.

೧೫೩. ಬಳಿಕ ನಾನು ಸುಂದರಿಯಾದ ದೇವಕನ್ಯೆಯಂತೆ ವಿರಾಜಿಸುವ ಈ ಕನ್ಯೆಯಾರು? ಎಂದು ಅವಳ ಸಖಿಯರನ್ನು ಕೇಳಿದೆನು.

೧೫೪. ಆ ಸಖಿಯರು ಈ ಸುಂದರಿಯು ಭಾರ್ಗವನ ಮಗಳು. ಇನ್ನೂ ಕನ್ಯೆಯಾಗಿರುವಳು ಎಂದರು.

೧೫೫. ಬಳಿಕ ನಾನು ಭಾರ್ಗವನೆಡೆಗೆ ಹೋಗಿ ವಿನಯದಿಂದ ಕೈಮುಗಿದು ಕೊಂಡು ಆ ಕನ್ಯೆಯನ್ನು ಕೊಡಬೇಕೆಂದು ಬೇಡಿದೆನು.

೧೫೬. ಆ ಭಾರ್ಗವ ಮುನಿಯು ನಾನು ಸವರ್ಣವರನೆಂದರಿತು ಕುರೂಪಿ ಯಾಗಿದ್ದರೂ ಆ ಕನ್ಯೆಯನ್ನು ನನಗೆ ಕೊಟ್ಟನು.

ಅಥ ಸಾ ಕನ್ಯಕಾ ಜ್ಞಾತ್ವಾ ಪಿತ್ರಾ ದತ್ತಾಽಸ್ಮಿ ಧರ್ಮತಃ ।
ವಿರೂಪಾಯ ತತೋ ಗತ್ವಾ ಮಾತರಂ ವಾಕ್ಯಮಬ್ರವೀತ್ ॥ ೧೫೭ ॥
ಸಲಜ್ಜಾ ಸಾಽತಿದುಃಖಾರ್ತಾ ಪಶ್ಯಾಂಬ ಜನಕೇನ ಚ ।
ವಿರೂಪಾಯ ಪ್ರದತ್ತಾಽಸ್ಮಿ ನಾಽಹಂ ಜೀವಿತುಮುತ್ಸಹೇ ॥ ೧೫೮ ॥
ವಿಷಂ ವಾ ಭಕ್ಷಯಿಷ್ಯಾಮಿ ಪ್ರವೇಕ್ಷ್ಯಾಮಿ ಹುತಾಶನಂ ।
ತಸ್ಯಾಸ್ತದ್ವಚನಂ ಶ್ರುತ್ವಾ ನಿಷಿದ್ಧಃ ಸ ದ್ವಿಜಸ್ತಯಾ ॥ ೧೫೯ ॥
ಕಸ್ಮಾನ್ನಾಥ ಪ್ರದತ್ತಾಽಸೌ ವಿರೂಪಾಯ ತ್ವಯಾ ವಿಭೋ ।
ಕನ್ಯಕೇಯಂ ಸುರೂಪಾಢ್ಯಾ ಸರ್ವಲಕ್ಷಣ ಸಂಯುತಾ ॥ ೧೬೦ ॥
ಏತಚ್ಛ್ರುತ್ವಾ ತು ವಚನಂ ಭಾರ್ಗವೋ ಮುನಿಸತ್ತಮಃ ।
ತತಸ್ತಾಂ ಭರ್ತ್ಸಯಿತ್ವಾಽಸೌ ಧಿಙ್ನಾರೀ ಪುರುಷಾಯತೇ ॥ ೧೬೧ ॥
ಅನೇನ ಪ್ರಾರ್ಥಿತಾ ಕನ್ಯಾ ಮಯಾ ಚಾಽಸ್ಮೈ ಪ್ರದೀಯತೇ ।
ತತ್ಕಿಂ ನಿಷೇಧಯಸಿ ಮಾಂ ದೀಯಮಾನಾಂ ಸುತಾಮಿಮಾಂ ॥ ೧೬೨ ॥
ಇತ್ಯುಕ್ತ್ವಾ ಸ ಪ್ರಸುಷ್ವಾಪ ಪತ್ನ್ಯಾಽಥ ಕನ್ಯಯಾ ಸಮಂ ॥ ೧೬೩ ॥
ತತೋಽರ್ಧರಾತ್ರೇ ಚಾಽಽಗತ್ಯ ಮಯಾ ಸುಪ್ತಾ ಚ ಭಾರ್ಗವೀ ।
ಹೃತ್ವಾ ಸ್ವಭವನೇ ನೀತಾ ನಿಶಿ ಸುಪ್ತೇ ಜನೇ ತದಾ ॥ ೧೬೪ ॥
ನಿಯುಕ್ತಾ ಕಾಮಧರ್ಮೇಣ ಹ್ಯನಿಚ್ಛಂತೀ ಬಲಾನ್ಮಯಾ ।
ವಿಪ್ರಃ ಪ್ರಾತರ್ಜಜಾಗಾರ ಪಿತಾ ತಸ್ಯಾಸ್ತತಃ ಪರಂ ॥ ೧೬೫ ॥

---

೧೫೭-೧೬೦. ಬಳಿಕ ಆ ಕನ್ಯೆಯು ಇದನ್ನರಿತು ತಾಯಿಯ ಹತ್ತಿರ ಹೋಗಿ ಲಜ್ಜಾ ದುಃಖಗಳಿಂದ ಕೂಡಿ ಇಂತೆಂದಳು. ಅಮ್ಮ! ತಂದೆಯು ನನ್ನನ್ನು ಕುರೂಪಿಯಾದ ವರನಿಗೆ ಕೊಟ್ಟಿರುವನು. ನಾನು ಬದುಕಲಿಚ್ಛಿಸುವುದಿಲ್ಲ. ವಿಷವನ್ನಾದರೂ ಕುಡಿಯುವೆನು. ಅಗ್ನಿಯನ್ನಾದರೂ ಪ್ರವೇಶಿಸುವೆನು. ಕನ್ಯೆಯ ಆ ಮಾತನ್ನು ಕೇಳಿ ತಾಯಿಯು ಪತಿಯನ್ನು ಕುರಿತು ನಾಥ! ಸುಂದರಿಯೂ ಸಮಸ್ತ ಲಕ್ಷಣ ಸಂಪನ್ನಳೂ ಆದ ನಮ್ಮ ಕನ್ಯೆಯನ್ನು ಕುರೂಪಿಗೆ ಏಕೆ ದಾನಮಾಡಿದೆ? ಎಂದು ಹೇಳಿ ತಡೆದಳು.

೧೬೧-೧೬೨. ಭಾರ್ಗವ ಮುನಿಯು ಈ ಮಾತನ್ನು ಕೇಳಿ ಹೆಂಗಸು ಗಂಡಸಿನಂತಾಗಿರುವಳು ಎಂದು ಆ ಪತ್ನಿಯನ್ನು ನಿಂದಿಸಿ ಇವನು ಕನ್ಯೆಯನ್ನು ಬೇಡಿದನು. ನಾನು ಇವನಿಗೆ ಕೊಡುತ್ತೇನೆ. ನೀನೇಕೆ ಮಗಳನ್ನು ಕೊಡುವುದನ್ನು ತಡೆಯುತ್ತಿರುವೆ?

೧೬೩. ಅವನು ಹೀಗೆ ಹೇಳಿ ಪತ್ನಿ, ಕನ್ಯೆಯರೊಡನೆ ನಿದ್ರಿಸಿದನು.

೧೬೪-೧೬೮. ಅನಂತರ ಅರ್ಧರಾತ್ರಿವೇಳೆಯಲ್ಲಿ ಜನರೆಲ್ಲ ಮಲಗಿರಲು ನಾನು ಅಲ್ಲಿಗೆ ಬಂದು, ಮಲಗಿರುವ ಭಾರ್ಗವಿಯನ್ನು ಅಪಹರಿಸಿ ನನ್ನ ಮನೆಗೆ

ಕ್ವಾಽಸೌ ಸಾ ದುಹಿತಾ ಕೇನ ಹೃತಾ ನಷ್ಟಾ ಮದೀಯಕಾ ।
ಅಥಾಽಸೌ ವೀಕ್ಷಿತುಂ ಬಾಹ್ಯೇ ಬಭ್ರಾಮ ಸ್ವವನಾಂತಿಕಂ ॥ ೧೬೬ ॥
ಪದ್ಧಸಂಹತಿಮಾರ್ಗೇಣ ಮುನಿಭಿರ್ಬಹುಭಿರ್ವೃತಃ ।
ತೇನ ದೃಷ್ಟಾಽಥ ಸಾ ಕನ್ಯಾ ಕೃತಕೌತುಕಮಂಗಲಾ ॥ ೧೬೭ ॥
ರುದಂತೀ ಸಸ್ವನಂ ತತ್ರ ಲಜ್ಜಮಾನಾ ಹ್ಯಧೋಮುಖೀ ।
ತತಃ ಕೋಪಪರೀತಾತ್ಮಾ ಮಾಂ ಪ್ರೋವಾಚ ಸ ಭಾರ್ಗವಃ ॥ ೧೬೮ ॥
ನಿಶಾಚರಸ್ಯ ಧರ್ಮೇಣ ಯಸ್ಮಾದೂಢಾ ಸುತಾ ಮಮ ।
ನಿಶಾಚರೋ ಭವಾನಸ್ತು ಕರ್ಮಣಾಽನೇನ ಸಾಂಪ್ರತಂ ॥ ೧೬೯ ॥

ಘಂಟಕ ಉವಾಚ:—

ನಿರ್ದೋಷಂ ಮಾಂ ದ್ವಿಜಶ್ರೇಷ್ಠ ಕಸ್ಮಾತ್ತ್ವಂ ಶಪಸಿ ದ್ರುತಂ ।
ತ್ವಯೈವೈಷಾ ಮೇ ಸ್ವಯಂ ದತ್ತಾ ತೇನ ರಾತ್ರೌ ಹೃತಾ ಮಯಾ ॥ ೧೭೦ ॥
ಯೋ ದತ್ವಾ ಕನ್ಯಕಾಂ ಪೂರ್ವಂ ಪಶ್ಚಾದ್ಯಚ್ಛೇನ್ನ ದುರ್ಮತಿಃ ।
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಂ ॥ ೧೭೧ ॥
ಅಥಾಽಸೌ ಚಿಂತಯಾಮಾಸ ಸತ್ಯಮೇತೇನ ಜಲ್ಪಿತಂ ।
ಪಶ್ಚಾತ್ತಾಪಸಮೋಪೇತೋ ವಾಕ್ಯಮೇತದುವಾಚಹ ॥ ೧೭೨ ॥

---

ಒಯ್ದು ಅವಳು ಒಪ್ಪದಿದ್ದರೂ ಬಲಾತ್ಕಾರವಾಗಿ ಕಾಮಧರ್ಮದಲ್ಲಿ ನಿಯೋಜಿಸಿದೆನು. ಅವಳ ತಂದೆಯು ಬೆಳಗ್ಗೆ ಎದ್ದು ಮಗಳೆಲ್ಲಿ! ಯಾರು ಅಪಹರಿಸಿದರು? ಎಂದು ನೋಡಲು ಹೆಜ್ಜೆಯ ದಾರಿಯಿಂದ ಅನೇಕ ಮುನಿಗಳೊಡನೆ ತನ್ನ ಕಾಡಿನ ಹತ್ತಿರ ಸಂಚರಿಸಿದನು. ಅವನು ಕಟ್ಟಿದ ಕೌತುಕ ಮಂಗಳವುಳ್ಳವಳೂ, ಗಟ್ಟಿಯಾಗಿ ಅಳುತ್ತಿರುವವಳೂ, ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡಿರುವವಳೂ ಆದ ಆ ಕನ್ಯೆಯನ್ನು ಕಂಡು ಕುಪಿತನಾಗಿ ನನ್ನನ್ನು ಕುರಿತು ಹೀಗೆಂದನು.

೧೬೯. ನೀನು ರಾಕ್ಷಸ ಧರ್ಮದಿಂದ ನನ್ನ ಮಗಳನ್ನು ಮದುವೆಮಾಡಿಕೊಂಡಿರುವುದರಿಂದ ಈಗಲೇ ರಾಕ್ಷಸನಾಗು.

೧೭೦. ಘಂಟಕನು ಹೇಳುತ್ತಾನೆ:—ದ್ವಿಜವರ್ಯನೇ! ತಪ್ಪಿಲ್ಲದ ನನ್ನನ್ನು ನೀನು ಏತಕ್ಕೆ ಶಪಿಸುವೆ? ನೀನಾಗಿ ಕೊಟ್ಟ ಕನ್ಯೆಯನ್ನು ನಾನು ರಾತ್ರಿವೇಳೆ ಅಪಹರಿಸಿರುವೆನು.

೧೭೧. ಮೊದಲು ಕನ್ಯಾದಾನಮಾಡಿ ತರುವಾಯ ಕೊಡದ ದುಷ್ಟನು ಪ್ರಳಯಕಾಲದವರೆಗೆ ಘೋರ ನರಕಕ್ಕೆ ತೆರಳುವನು.

೧೭೨. ತರುವಾಯ ಭಾರ್ಗವ ಮುನಿಯು ಘಂಟಕನು ಹೇಳಿದ ಸತ್ಯವಾದ ಮಾತನ್ನು ಚಿಂತಿಸಿ ಪಶ್ಚಾತ್ತಾಪದಿಂದ ಕೂಡಿದವನಾಗಿ ಹೀಗೆಂದನು.

ಸತ್ಯಮೇತತ್ತ್ವಯಾ ಪ್ರೋಕ್ತಂ ನ ಮೇ ವಚನಮನ್ಯಥಾ ।
ಉಲೂಕರೂಪಸಂಯುಕ್ತೋ ಭವಿಷ್ಯಸಿ ನ ಸಂಶಯಃ ॥ ೧೭೩ ॥
ಉತ್ಪತ್ಸ್ಯತೇ ಯದಾಚಾಽತ್ರ ಭರ್ತೃಯಜ್ಞೋ ಮಹಾಮುನಿಃ ।
ತಸ್ಯೋಪದೇಶಮಾಸಾದ್ಯ ಭೂಯಃ ಪ್ರಾಪ್ಸ್ಯಸಿ ಸ್ವಾಂ ತನುಂ ॥ ೧೭೪ ॥
ತತಃ ಕೌಶಿಕರೂಪಂ ತು ಪಶ್ಯಾಮ್ಯಾತ್ಮಾನಮೇವ ಚ ।
ತಥಾಽಪಿ ನ ಸ್ಮೃತಿರ್ನಷ್ಟಾ ಮಮ ಯಾ ಪೂರ್ವಸಂಭವಾ ॥ ೧೭೫ ॥
ಅಥ ಯಾ ತತ್ಸುತಾ ಚೋಢಾ ಮಯಾ ತಸ್ಮಿನ್ಗಿರೌ ತದಾ ।
ಸಾಽಪಿ ಮಾಂ ಸನ್ನಿರೀಕ್ಷ್ಯಾಽಥ ತದ್ರೂಪಂ ದುಃಖಸಂಯುತಾ ।
ಪ್ರವಿಷ್ಟಾ ಹವ್ಯವಾಹಂ ಸಾ ವಿಧವಾತ್ವಮನಿಚ್ಛತೀ ॥ ೧೭೬ ॥
ಏವಂ ಮೇ ಕೌಶಿಕತ್ವಂ ಹಿ ಸಂಜಾತಂ ತು ಮಹಾದ್ಯುತೇ ।
ಭಾರ್ಗವಸ್ಯತು ಶಾಪೇನ ಕನ್ಯಾರ್ಥೇ ಯತ್ತ್ವಯೋದಿತಂ ॥ ೧೭೭ ॥
ಅಖಂಡಬಿಲ್ವಪತ್ರೇಣ ಪೂಜಿತೋ ಯನ್ಮಹೇಶ್ವರಃ ।
ಚಿರಾಯುಸ್ತೇನ ಸಂಜಾತಂ ಸತ್ಯಮೇತನ್ಮಯೋದಿತಂ ॥ ೧೭೮ ॥
ಸತ್ಯಂ ಕಥಯ ಯತ್ಕೃತ್ಯಂ ಗೃಹಾಯಾತಸ್ಯ ಕಿಂ ತವ ।
ಪ್ರಕರೋಮಿ ಮಹಾಭಾಗ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೭೯ ॥

---

೧೭೩. ನೀನು ಹೇಳಿದ ಮಾತು ನಿಜ. ಆದರೂ ನನ್ನ ಮಾತು ಸುಳ್ಳಾಗುವುದಿಲ್ಲ. ನೀನು ನಿಜವಾಗಿಯೂ ಗೂಬೆಯಾಗುವೆ.

೧೭೪. ಇಲ್ಲಿ ಭರ್ತೃಯಜ್ಞ ಮುನಿಯು ಹುಟ್ಟುವನು. ಅವನ ಉಪದೇಶವನ್ನು ಪಡೆದು ಮರಳಿ ನೀನು ನಿನ್ನ ಶರೀರವನ್ನು ಪಡೆಯುವೆ.

೧೭೫. ತರುವಾಯ ನಾನು ಗೂಬೆಯ ರೂಪವಾಗಿರುವುದನ್ನು ನೋಡಿದೆನು. ಆದರೂ ನನ್ನ ಹಿಂದಿನ ಜನ್ಮದ ಸ್ಮರಣೆಯು ನಷ್ಟವಾಗಲಿಲ್ಲ.

೧೭೬. ಬಳಿಕ ನಾನು ಮದುವೆಮಾಡಿಕೊಂಡ ಆ ಕನ್ಯೆಯೂ ಆ ಪರ್ವತದಲ್ಲಿ ಗೂಬೆಯಾಗಿರುವ ನನ್ನನ್ನು ನೋಡಿ ವಿಧವೆಯಾಗಿರಲಿಚ್ಛೆಯಿಲ್ಲದೆ ದುಃಖದಿಂದ ಅಗ್ನಿಯನ್ನು ಪ್ರವೇಶಿಸಿದಳು.

೧೭೭. ತೇಜಸ್ವಿಯೆ! ಹೀಗೆ ಕನ್ಯೆಗಾಗಿ ಭಾರ್ಗವನು ಕೊಟ್ಟ ಶಾಪದಿಂದ ನೀನು ಕೇಳಿದ ಗೂಬೆಯ ಜನ್ಮವು ನನಗುಂಟಾಯಿತು.

೧೭೮. ಮಹೇಶ್ವರನನ್ನು ಅಖಂಡಬಿಲ್ವಪತ್ರದಿಂದ ಪೂಜಿಸಿದ್ದರಿಂದ ಚಿರಂಜೀವಿಯಾದೆನು. ನಾನು ಹೇಳಿರುವುದು ನಿಜ.

೧೭೯. ಮಹಾಭಾಗ್ಯವಂತನೆ! ಸತ್ಯವಾಗಿಯೂ ಹೇಳು. ಮನೆಗೆ ಬಂದ ನಿನಗೆ ನನ್ನಿಂದ ಏನಾಗಬೇಕು; ಅದು ದುರ್ಲಭವಾಗಿದ್ದರೂ ಮಾಡುವೆನು

ಇಂದ್ರದ್ಯುಮ್ನ ಉವಾಚ :—

ಇಂದ್ರದ್ಯುಮ್ನಸ್ಯ ಜ್ಞಾನಾಯ ಪ್ರಾಪ್ತೋಽಹಂ ಯತ್ತವಾಂತಿಕಂ ।
ನಾಡೀಜಂಘೇನ ಚಾಽನೀತೋ ಮರಣೇ ಕೃತನಿಶ್ಚಯಃ ॥ ೧೮೦ ॥
ಯದಿ ನೋ ಜ್ಞಾಸ್ಯತಿ ಭವಾಂಸ್ತಂ ಕೀರ್ತ್ಯಾ ಚ ಕುಲೇನ ಚ ।
ಪ್ರವಿಶಾಮಿ ತತೋ ನೂನಂ ಪ್ರದೀಪ್ತಂ ಹವ್ಯವಾಹನಂ ॥ ೧೮೧ ॥
ನೋಚೇತ್ಕೀರ್ತಿಯ ಮೇ ಕಂಚಿದನ್ಯಂ ತು ಚಿರಜೀವಿನಂ ।
ಪೃಚ್ಛಾಮಿ ತೇನ ತಂ ಗತ್ವಾ ಯೇಽಸವೇತ್ತಿನವಾ ಚ ಸಃ ॥ ೧೮೨ ॥

ಬಕ ಉವಾಚ :—

ಯುಕ್ತಮುಕ್ತಮನೇನಾಽದ್ಯ ತತ್ಕುರುಷ್ವ ವದಾಽಸ್ಯಭೋಃ ।
ಯದಿ ಜಾನಾಸಿ ಕಂಚಿತ್ತ್ವಮಾತ್ಮನಶ್ಚಿರಜೀವಿನಂ ॥ ೧೮೩ ॥
ನೋಚೇದಹಮಪಿ ಕ್ಷಿಪ್ರಂ ಪ್ರವಿಶಾಮಿ ಹುತಾಶನಂ ।
ಮಾರ್ಕಂಡೇನಾಽಪಿ ಸಹಿತಃ ಸಾಂಪ್ರತಂ ತವ ಪಶ್ಯತಃ ॥ ೧೮೪ ॥
ಏವಂ ಜ್ಞಾತ್ವಾ ಮಹಾಭಾಗ ಚಿಂತಯಸ್ವ ಚಿರಂತನಂ ।
ಕಂಚಿದ್ಭೂಮಿತಲೇಽಸ್ಯತ್ರ ಯತಸ್ತ್ವಂ ಚಿರಜೀವಧೃಕ್ ॥ ೧೮೫ ॥
ಆಶಯಾ ಪರಯಾ ಪ್ರಾಪ್ತಸ್ತವಾಽಹಂ ಕಿಲ ಮಂದಿರೇ ।
ಪುಮಾನೇಷ ವಿಶೇಷೇಣ ಮಾರ್ಕಂಡೇಯಃ ಪ್ರಿಯೋ ಮಮ ॥ ೧೮೬ ॥

---

೧೮೦. ಇಂದ್ರದ್ಯುಮ್ನನು ಹೇಳುತ್ತಾನೆ:— ನಾನು ಇಂದ್ರದ್ಯುಮ್ನನನ್ನು ತಿಳಿಯಲು ನಿನ್ನ ಬಳಿಗೆ ಬಂದಿರುವೆನು. ಸಾಯಲು ನಿಶ್ಚಯಿಸಿದ ನನ್ನನ್ನು ನಾಡೀಜಂಘನು ಇಲ್ಲಿಗೆ ಕರೆತಂದನು.

೧೮೧–೧೮೨. ನೀನು ಆ ಇಂದ್ರದ್ಯುಮ್ನನ ಕೀರ್ತಿ, ಕುಲಗಳನ್ನರಿತಿಲ್ಲದಿದ್ದರೆ ನಾನು ಉರಿಯುತ್ತಿರುವ ಅಗ್ನಿಯನ್ನು ಪ್ರವೇಶಿಸುವೆನು. ಹಾಗಿಲ್ಲದಿದ್ದರೆ ನೀನು ಇನ್ನೊಬ್ಬ ಚಿರಂಜೀವಿಯನ್ನಾದರೂ ನನಗೆ ಹೇಳು. ಆದರಿಂದ ನಾನು ಅವನೆಡೆಗೆ ಹೋಗಿ ಅವನು ಈ ವಿಷಯವನ್ನು ತಿಳಿದಿರುವನೊ? ಇಲ್ಲವೊ? ಪ್ರಶ್ನಿಸುವೆನು.

೧೮೩–೧೮೪. ಬಕನು ಹೇಳುತ್ತಾನೆ:— ಇವನು ಈಗ ಉಚಿತವಾದುದನ್ನು ಹೇಳಿದ್ದಾನೆ. ಅದನ್ನು ಮಾಡು. ಇನ್ನೊಬ್ಬ ಚಿರಂಜೀವಿಯನ್ನು ತಿಳಿದಿದ್ದರೆ ಇವನಿಗೆ ಹೇಳು. ಹಾಗಿಲ್ಲದಿದ್ದರೆ ನಾನೂ ಮಾರ್ಕಂಡೇಯನೊಡನೆ ನೀನು ನೋಡುತ್ತಿರುವಾಗಲೆ ಅಗ್ನಿಯನ್ನು ಪ್ರವೇಶಮಾಡುವೆನು.

೧೮೫. ಮಹಾಭಾಗ್ಯಶಾಲಿಯೆ! ನೀನು ಚಿರಂಜೀವಿಯಾದ್ದರಿಂದ ಇದನ್ನರಿತು ಭೂಮಿಯಲ್ಲಿ ಇನ್ನೊಂದೆಡೆ ಚಿರಂಜೀವಿಯಾಗಿರುವವನನ್ನು ಚಿಂತಿಸು.

೧೮೬. ನಾನು ಅತ್ಯಂತ ಆಶೆಯಿಂದ ನಿನ್ನ ಮನೆಗೆ ಬಂದಿರುವೆನು. ಈ ಮಾರ್ಕಂಡೇಯನು ನನಗೆ ಅತಿ ಪ್ರಿಯನಾಗಿರುವನು.

ಸಂತ್ಯತ್ರ ಪರ್ವತಶ್ರೇಷ್ಠಾಃ ಶತಶೋಽಥ ಸಹಸ್ರಶಃ ।
ಯೇಷು ಸಂತಿ ಮಹಾಭಾಗಾಸ್ತಾಪಸಾಶ್ಚಿರಜೀವಿನಃ ।
ನಾಽನ್ಯಥಾ ಜೀವಿತಂ ಚಾಽಸ್ಯ ಕಥಂಚಿತ್ಸಂಭವಿಷ್ಯತಿ ॥ ೧೮೭ ॥
ಇಂದ್ರದ್ಯುಮ್ನಸ್ಯ ರಾಜರ್ಷೇರ್ಹಿತಂ ಪರಮಕಂ ಭವೇತ್ ।
ತಥಾಽವಯೋರ್ದ್ವಯೋಶ್ಚಾಽಪಿ ತಸ್ಮಾಚ್ಚಿಂತಯ ಸತ್ವರಂ ॥ ೧೮೮ ॥
ತಸ್ಯ ತಂ ನಿಶ್ಚಯಂ ಜ್ಞಾತ್ವಾ ಮರಣಾರ್ಥಂ ಮಹೀಪತೇಃ ।
ಸ ಉಲೂಕಃ ಕೃಪಾಂ ಗತ್ವಾ ತತೋ ವಚನಮಬ್ರವೀತ್ ॥ ೧೮೯ ॥
ಯದ್ಯೇವಂತು ಮಹಾಭಾಗ ಮರ್ತುಕಾಮೋಽಸಿ ಸಾಂಪ್ರತಂ ।
ತದಾಗಚ್ಛ ಮಯಾ ಸಾರ್ಧಂ ಗಂಧಮಾದನಪರ್ವತಂ ॥ ೧೯೦ ॥
ತತ್ರ ಸಂತಿಷ್ಠತೇಗೃಧ್ರಃ ಸ ಚ ಮೇ ಪರಮಃ ಸುಹೃತ್ ।
ಚಿರಂತನಸ್ತಥಾ ಸಮ್ಯಕ್ಸತೇ ಜ್ಞಾಸ್ಯತಿ ತಂ ನೃಪಂ ।
ಕಥಯಿಷ್ಯತ್ಯಸಂದಿಗ್ಧಂ ಮಮ ವಾಕ್ಯಾದಸಂಶಯಂ ॥ ೧೯೧ ॥
ತಸ್ಯ ತದ್ವಚನಂ ಶ್ರುತ್ವಾ ಮಾರ್ಕಂಡೇಯಾದಿಭಿಸ್ತ್ರಿಭಿಃ ।
ಪ್ರೋಕ್ತಸ್ಸರ್ವೈರ್ಮಹಾಭಾಗ ಮಾ ತ್ವಂ ಪ್ರವಿಶ ಪಾವಕಂ ॥ ೧೯೨ ॥
ವಯಂ ಯಾಸ್ಯಾಮಹೇ ಸರ್ವೇ ತ್ವಯಾ ಸಾರ್ಧಂ ಚ ತತ್ರಹಿ ।
ಕದಾಚಿತ್ಸೋಽಪಿ ಜಾನಾತಿ ಇಂದ್ರದ್ಯುಮ್ನಂ ಮಹೀಪತಿಂ ॥ ೧೯೩ ॥

---

೧೮೭–೧೮೮. ಇಲ್ಲಿ ಸಾವಿರಾರು ಪರ್ವತಗಳಿರುವುವು. ಅವುಗಳಲ್ಲಿ ಭಾಗ್ಯವಂತರೂ, ಚಿರಂಜೀವಿಗಳೂ ಆದ ಮುನಿಗಳು ವಾಸಿಸುವರು. ಈ ಇಂದ್ರದ್ಯುಮ್ನ ರಾಜನು ತನ್ನ ಇಷ್ಟಾರ್ಥವು ನೆರವೇರದಿದ್ದರೆ ಬದುಕುವುದಿಲ್ಲ. ಹಾಗೆಯೇ ನಾವಿಬ್ಬರೂ ಬದುಕುವುದಿಲ್ಲ. ಆದುದರಿಂದ ಬೇಗನೆ ಆಲೋಚಿಸು.

೧೮೯. ಆ ಗೂಬೆಯು ಆ ಇಂದ್ರದ್ಯುಮ್ನನು ಸಾಯಲು ನಿಶ್ಚಯಿಸಿರುವುದನ್ನರಿತು ಕರುಣೆಯಿಂದ ಹೀಗೆಂದಿತು.

೧೯೦. ಭಾಗ್ಯಶಾಲಿಯೆ! ನೀನೀಗ ಸಾವಿನ ಸಂಕಲ್ಪವನ್ನು ಬಿಡು. ನನ್ನೊಡನೆ ಗಂಧಮಾದನಪರ್ವತಕ್ಕೆ ಬಾ.

೧೯೧. ಅಲ್ಲಿ ನನ್ನ ಬಹುಕಾಲದ ಮಿತ್ರನಾದ ಗೃಧ್ರಸಿರುವನು. ಅವನು ಆ ಇಂದ್ರದ್ಯುಮ್ನನ ವೃತ್ತಾಂತವನ್ನು ಚೆನ್ನಾಗಿ ತಿಳಿದಿದ್ದಾನೆ. ಅವನು ನನ್ನ ಮಾತಿನಿಂದ ನಿಶ್ಚಯವಾಗಿಯೂ ಹೇಳಿಯಾನು.

೧೯೨. ಗೂಬೆಯ ಆ ಮಾತನ್ನು ಕೇಳಿ ಮಾರ್ಕಂಡೇಯನೇ ಮೊದಲಾದ ಮೂವರೂ, ದೊರೆಯೆ! ನೀನು ಅಗ್ನಿಯನ್ನು ಪ್ರವೇಶಮಾಡಬೇಡ ಎಂದರು.

೧೯೩. ನಾವು ಒಟ್ಟಿಗೆ ಅಲ್ಲಿಗೆ ಹೋಗೋಣ. ಒಂದುವೇಳೆ ಅವನು ಇಂದ್ರದ್ಯುಮ್ನನನ್ನು ತಿಳಿದಿರಬಹುದು ಎಂದರು.

ತೇಷಾಂ ತದ್ವಚನಂ ಶ್ರುತ್ವಾ ಆಶಯಾ ಪರಯಾ ಯುತಃ ।
ಸ ರಾಜಾ ಸಹ ತೈಃ ಸರ್ವೈಃ ಪ್ರಯಯೌ ಗಂಧಮಾದನಂ ॥ ೧೯೪ ॥
ಗೃಧ್ರರಾಜೋಽಪಿ ತಾನ್ ದೃಷ್ಟ್ವಾ ಸರ್ವಾನೇವ ಕೃತಾಂಜಲಿಃ ।
ಉಲೂಕಂ ಪುರತೋ ದೃಷ್ಟ್ವಾ ಪ್ರಹೃಷ್ಟಃ ಸನ್ಮುಖೋ ಯಯೌ ॥೧೯೫॥
ತತೋಽಬ್ರವೀತ್ಪ್ರಹೃಷ್ಟಾತ್ಮಾ ಸ್ವಾಗತಂ ತೇ ದ್ವಿಜೋತ್ತಮ ।
ಚಿರಕಾಲಾತ್ಪ್ರದೃಷ್ಟೋಽಸಿ ಕ ಏತೇಽನ್ಯೇಽತ್ರ ಯೇ ಸ್ಥಿತಾಃ ॥ ೧೯೬ ॥

ಉಲೂಕ ಉವಾಚ :—

ಏಷ ಮೇ ಪರಮಂ ಮಿತ್ರಂ ನಾಡೀಜಂಘೋ ಬಕಃ ಸ್ಮೃತಃ ।
ಏತಸ್ಯಾಽಪಿ ತು ಮಾರ್ಕಂಡಃ ಸಂಸ್ಥಿತಃ ಪರಮಃ ಸುಹೃತ್ ॥ ೧೯೭ ॥
ಅಸೌ ತ್ರೈಲೋಕ್ಯವಿಖ್ಯಾತಃ ಸಪ್ತಕಲ್ಪಸ್ಮರೋಽಭುವಿ ।
ಏತಸ್ಯಾಽಪಿ ಸುಹೃತ್ಕಶ್ಚಿನ್ನೈನಂ ಜಾನಾಮಿ ಸತ್ವರಂ ॥ ೧೯೮ ॥
ಮ್ರಿಯಮಾಣೋ ಮಯಾ ಹ್ಯೇಷ ಸಮಾನೀತಸ್ತವಾಂತಿಕಂ ।
ಅಯಂ ಜೀವತಿ ವಿಜ್ಞಾತ ಇಂದ್ರದ್ಯುಮ್ನೇ ನರೇಶ್ವರೇ ।
ನೋ ಚೇತ್ಪ್ರವಿಶತಿ ಕ್ಷಿಪ್ರಂ ಪ್ರದೀಪ್ತಂ ಹವ್ಯವಾಹನಂ ॥ ೧೯೯ ॥

---

೧೯೪. ಆ ಇಂದ್ರದ್ಯುಮ್ನನು ಅವರ ಆ ಮಾತನ್ನು ಕೇಳಿ ಅತ್ಯಂತ ಆಶೆಯಿಂದ ಅವರೊಡನೆ ಗಂಧಮಾದನಪರ್ವತಕ್ಕೆ ಹೋದನು.

೧೯೫. ಗೃಧ್ರನು ಗೂಬೆಯನ್ನು ಮುಂದಿರಿಸಿಕೊಂಡು ಬಂದಿರುವ ಅವರೆಲ್ಲರನ್ನೂ ನೋಡಿ ಸಂತೋಷದಿಂದ ಎದುರುಗೊಂಡನು.

೧೯೬. ಅವನು ಅನಂತರದಲ್ಲಿ ಸಂತೋಷದಿಂದ, "ದ್ವಿಜವರ್ಯನೆ! ನಿನಗೆ ಸುಖಾಗಮನವಾಗಲಿ. ಬಹುಕಾಲದ ಮೇಲೆ ನೋಡಲ್ಪಟ್ಟಿರುವೆ. ನಿನ್ನೊಡನೆ ಇರುವ ಇವರಾರು?

೧೯೭. ಗೂಬೆಯು ಹೇಳುತ್ತದೆ:—ಇವನು ನನ್ನ ಅತ್ಯಂತ ಸ್ನೇಹಿತನಾದ ನಾಡೀಜಂಘನೆಂಬ ಬಕನು. ಇವನಿಗೆ ಈ ಮಾರ್ಕಂಡೇಯನು ಪರಮಮಿತ್ರನಾಗಿರುವನು.

೧೯೮. ಇವನು ಏಳು ಕಲ್ಪಗಳನ್ನು ಸ್ಮರಿಸುವವನೆಂದು ಮೂರು ಲೋಕಗಳಲ್ಲಿ ವಿಖ್ಯಾತನಾಗಿರುವನು. ಮತ್ತೊಬ್ಬನು ಇವನ ಮಿತ್ರನು. ಇವನನ್ನು ನಾನರಿಯೆನು.

೧೯೯. ಸಾಯಲು ನಿಶ್ಚಯಿಸಿರುವ ಇವನನ್ನು ನಾನು ನಿನ್ನೆಡೆಗೆ ಕರೆತಂದೆನು. ಇವನು ಇಂದ್ರದ್ಯುಮ್ನರಾಜನ ವೃತ್ತಾಂತವು ತಿಳಿದರೆ ಬದುಕುವನು. ಇಲ್ಲದಿದ್ದರೆ ಉರಿಯುತ್ತಿರುವ ಅಗ್ನಿಯನ್ನು ಶೀಘ್ರವಾಗಿ ಪ್ರವೇಶಿಸುವನು.

ಸ ತ್ವಂ ಜಾನಾಸಿ ಚೇದ್ಬ್ರೂಹಿ ಇಂದ್ರದ್ಯುಮ್ನಂ ಮಹೀಪತಿಂ ।
ಚಿರಂತನೋ ಮಯಾಽಪಿ ತ್ವಂ ತೇನ ಪೃಷ್ಟಂ ಸಮಾಗತಃ ॥ ೨೦೦ ॥

ಗೃಧ್ರ ಉವಾಚ:—

ಇಂದ್ರದ್ಯುಮ್ನೇತಿ ವಿಖ್ಯಾತಂ ರಾಜಾನಂ ನ ಸ್ಮರಾಮ್ಯಹಂ ।
ನ ದೃಷ್ಟೋ ನ ಶ್ರುತಶ್ಚಾಽಪಿ ಇಂದ್ರದ್ಯುಮ್ನೋ ಮಹೀಪತಿಃ ॥ ೨೦೧ ॥
ತಸ್ಯ ತದ್ವಚನಂ ಶ್ರುತ್ವಾ ಸೋಽಪಿ ರಾಜಾ ಸುದುರ್ಮನಾಃ ।
ಮನಸಾ ಚಿಂತಯಾಮಾಸ ಮರಣೇ ಕೃತನಿಶ್ಚಯಃ ॥ ೨೦೨ ॥
ತತಸ್ತು ಕೌತುಕಾವಿಷ್ಟಸ್ತಂ ಪಪ್ರಚ್ಛ ದ್ವಿಜೋತ್ತಮಂ ।
ಕರ್ಮಣಾ ಕೇನ ಸಂಪ್ರಾಪ್ತಮಾಯುಷ್ಯಂ ಚೇದೃಶಂ ವದ ॥ ೨೦೩ ॥
ತತಃ ಸಂಭಾವಯಿಷ್ಯಾಮಿ ಶ್ರುತ್ವಾ ತೇಽಹಂ ವಿಭಾವಸುಂ ॥ ೨೦೪ ॥

ಗೃಧ್ರ ಉವಾಚ:—

ಅಹಮಾಸಂ ಚಮತ್ಕಾರಪುರೇ ಮರ್ಕಟಿಕಃ ಕಿಲ ।
ಉಪತ್ಯಕಾಯಾಂ ತತ್ರೈವ ರಕ್ತಶೃಂಗಸ್ಯ ಭೂಭೃತಃ ॥ ೨೦೫ ॥
ತತ್ರೈವಾಽಸ್ತಿ ಮಹಚ್ಛಂಭೋರ್ಮಂದಿರಂ ಮಂದರೋಪಮಂ ।
ಚಿತ್ರೇಶ್ವರಾಭಿಧಾನಂ ಚ ಸರ್ವಪಾತಕನಾಶನಂ ॥ ೨೦೬ ॥
ವಸಂತೇ ತತ್ರ ಸಂಪ್ರಾಪ್ತೇ ಪೌರಜಾನಪದೈಸ್ತಥಾ ।
ಆಗತ್ಯ ಚೈವ ಸುಮಹಾನುತ್ಸವೋ ವಿಹಿತೋಽಭವತ್ ॥ ೨೦೭ ॥

---

೨೦೦. ನೀನು ಇಂದ್ರದ್ಯುಮ್ನರಾಜನನ್ನು ತಿಳಿದಿದ್ದರೆ ಹೇಳು. ನನಗಿಂತ ನೀನು ವೃದ್ಧನಾಗಿರುವುದರಿಂದ ನಿನ್ನನ್ನು ಕೇಳಲು ಬಂದಿರುವೆನು.

೨೦೧. ಗೃಧ್ರವು ಹೇಳುತ್ತದೆ:—ನಾನು ಇಂದ್ರದ್ಯುಮ್ನರಾಜನನ್ನು ಸ್ಮರಿಸಲಾರೆ. ಅವನನ್ನು ನೋಡಲೂ ಇಲ್ಲ. ಕೇಳಲೂ ಇಲ್ಲ.

೨೦೨. ಅವನ ಆ ಮಾತನ್ನು ಕೇಳಿ ಇಂದ್ರದ್ಯುಮ್ನನು ವ್ಯಥೆಗೊಂಡವನಾಗಿ ಮನಸ್ಸಿನಲ್ಲಿ ಸಾಯುವುದಾಗಿ ನಿಶ್ಚಯಿಸಿ ಆಲೋಚಿಸಿದನು.

೨೦೩–೨೦೪. ಬಳಿಕ ಕುತೂಹಲಗೊಂಡವನಾಗಿ ಆ ಪಕ್ಷಿಯನ್ನು ಕುರಿತು ನೀನು ಯಾವ ಕರ್ಮದಿಂದ ಇಂತಹ ಆಯುಷ್ಯವನ್ನು ಹೊಂದಿರುವೆ? ನಿನ್ನೀ ವಿಷಯವನ್ನು ತಿಳಿದು ಅನಂತರ ಅಗ್ನಿಯನ್ನು ಸಂಭಾವಿಸುವೆನು.

೨೦೫. ಗೃಧ್ರವು ಹೇಳುತ್ತದೆ:—ನಾನು ಚಮತ್ಕಾರಪುರದಲ್ಲಿರುವ ರಕ್ತಶೃಂಗಪರ್ವತದ ತಪ್ಪಲಲ್ಲಿ ಕಪಿಯಾಗಿದ್ದೆನು.

೨೦೬. ಅಲ್ಲಿ ಸಕಲ ಪಾಪವನ್ನು ಪರಿಹರಿಸುವ ಚಿತ್ರೇಶ್ವರವೆಂಬ ಮಂದರಪರ್ವತದಂತಿರುವ ಶಿವದೇವಾಲಯವಿರುವುದು.

೨೦೭–೨೧೧. ವಸಂತಕಾಲದಲ್ಲಿ ಅಲ್ಲಿಗೆ ಪಟ್ಟಣಿಗರೂ, ಹಳ್ಳಿಯವರೂ ಬಂದು ಲಿಂಗದ ಸನ್ನಿಧಿಯಲ್ಲಿ ದೊಡ್ಡ ಉತ್ಸವವನ್ನು ಮಾಡಿದರು. ಅವರು ಸಕಲ

ಲಿಂಗಸ್ಯ ಸನಿಧೇ ರಮ್ಯೇ ಸರ್ವರ್ತುಫಲಿತದ್ರುಮೇ ।
ಕಾನನೇ ಕಾಮಿನೀಲೋಕಕಾಂತೇ ಜನಮನೋಹರೇ ।
ಲಿಂಗಮಾರೋಪಿತಂ ಚಾರುತರೋರಾಂದೋಲಿತೇಮುದಾ ॥ ೨೦೮ ॥
ಕೃತ್ವಾ ದಮನಕೇನಾರ್ಚಾಂ ಸ್ವಾಧ್ವ್ಯಾಂದೋಲೇ ಸುಯಂತ್ರಿತೇ ।
ಯಯುಸ್ತೇ ಸ್ವಗೃಹಂ ಪಶ್ಚಾದರ್ಚಯಿತ್ವಾ ತ್ರಿಲೋಚನಂ ॥ ೨೦೯ ॥
ತತೋಽಹಂ ರಜನೀವಕ್ತ್ರೇ ತಾಂ ದೋಲಾಂ ಸುಮನೋಹರಾಂ ।
ಕೌತುಕಾವಿಷ್ಟಹೃದಯೋ ದೋಲಯಾಮಿ ಮುಹುರ್ಮುಹುಃ ॥ ೨೧೦ ॥
ಏವಂ ಸಂದೋಲಯಾನಸ್ಯ ಮಮ ಪ್ರಾಪ್ತಾ ನರಾಸ್ತದಾ ।
ಕೈಶ್ಚಿತ್ತ್ರೈಸ್ತ್ರಾಸಿತೋ ಹತ್ವಾ ಲಗುಡೈಃ ಸರ್ವತೋ ದಿಶಂ ॥ ೨೧೧ ॥
ತತಃ ಪಂಚತ್ವಮಾಪನ್ನಸ್ತತ್ರೈವಾಯತನೇ ದ್ರುತಂ ।
ತತೋ ಜಾತಿಸ್ಮರೋ ಭೂತ್ವಾ ಸಂಜಾತೋ ನೃಪಮಂದಿರೇ ॥ ೨೧೨ ॥
ಕೋಟೀಶ್ವರಸ್ಯ ವಿಖ್ಯಾತೋ ನಾಮ್ನಾ ಚೈವ ಕುಶಧ್ವಜಃ ।
ಪಿತೃಪೈತಾಮಹಂ ರಾಜ್ಯಂ ಮಯಾ ಪ್ರಾಪ್ತಂ ತತಃ ಕ್ರಮಾತ್ ॥ ೨೧೩ ॥
ಕೋಟೀಶೇ ಸಮನುಪ್ರಾಪ್ತೇ ಪರಲೋಕಂ ಸ್ವಕರ್ಮಣಾ ।
ಜಾಗೇಶ್ವರಂ ಮಹಾಭಾಗಂ ದೋಲಯಾಮಿ ಯಥೇಚ್ಛಯಾ ॥ ೨೧೪ ॥
ಶಿವಸಿದ್ಧಾಂತಜೈರ್ಮಂತ್ರೈರ್ಗುರುಣಾ ಸನ್ನಿವೇದಿತೈಃ ।
ತತಃ ಕಾಲೇನ ಮಹತಾ ತುಷ್ಟೋ ದೇವೋ ಹರೋ ಮಮ ।
ಭವತೋ ವರದಶ್ಚಾಸ್ಮಿ ವಾಕ್ಯಮೇತದುವಾಚಹ ॥ ೨೧೫ ॥

---

ಋತುಗಳಲ್ಲಿಯೂ ಫಲಿಸುವ ಮರಗಳುಳ್ಳದೂ, ಕಾಮಿನಿಯರಿಂದ ಮನೋಹರವಾದುದೂ, ಜನರನ್ನು ಸಂತೋಷಗೊಳಿಸುವುದೂ ಆದ ಆ ಕಾಡಿನಲ್ಲಿ ಒಂದು ಮರಕ್ಕೆ ಉಯ್ಯಾಲೆಯನ್ನು ಕಟ್ಟಿ ಅದರಲ್ಲಿ ಲಿಂಗವನ್ನಿಟ್ಟು ಅದನ್ನು ದವನದಿಂದ ಪೂಜಿಸಿ ತಮ್ಮ ಮನೆಗೆ ತೆರಳಿದರು. ನಾನು ಸಾಯಂಕಾಲ ಮನೋಹರವಾದ ಆ ಉಯ್ಯಾಲೆಯನ್ನು ಕುತೂಹಲದಿಂದ ಬಾರಿಬಾರಿಗೂ ತೂಗುತ್ತಿದ್ದೆನು.

೨೧೧. ಹೀಗೆ ನಾನು ಉಯ್ಯಾಲೆಯನ್ನು ತೂಗುತ್ತಿರಲು ಕೆಲವು ಜನರು ಬಂದು ನನ್ನನ್ನು ದೊಣ್ಣೆಯಿಂದ ಹೊಡೆದು ಹೆದರಿಸಿ ಓಡಿಸುತ್ತಿದ್ದರು.

೨೧೨–೨೧೩. ಬಳಿಕ ಅದೇ ದೇವಾಲಯದಲ್ಲಿ ಮಡಿದ ನಾನು ಕೋಟೀಶ್ವರ ರಾಜನ ಮನೆಯಲ್ಲಿ ಜನಿಸಿ ಕುಶಧ್ವಜನೆಂದು ಹೆಸರನ್ನಾಂತು ಪೂರ್ವಜಾತಿ ಸ್ಮರಣೆಯುಳ್ಳವನಾಗಿ ಕ್ರಮದಿಂದ ಪಿತೃರಾಜ್ಯವನ್ನು ಪಡೆದೆನು.

೨೧೪–೨೧೫. ಕೋಟೀಶ್ವರನು ತನ್ನ ಕರ್ಮದಿಂದ ಪರಲೋಕವನ್ನು ಹೊಂದಲು ನಾನು ಜಾಗೇಶ್ವರನನ್ನು ಗುರುವು ತಿಳಿಸಿದ ಶಿವಸಿದ್ಧಾಂತ ಮಂತ್ರಗಳಿಂದ ಸ್ವೇಚ್ಛೆಯಾಗಿ ತೂಗುತ್ತಿದ್ದೆನು. ಅನಂತರ ಬಹುಕಾಲದ ಮೇಲೆ

ಕುಶಧ್ವಜ ಪ್ರತುಷ್ಟೋಽಸ್ಮಿ ಶ್ರದ್ಧಯಾ ಪರಯಾ ತವ ।
ವರಂ ವೃಣೀಷ್ವ ಭದ್ರಂ ತೇ ಯಃ ಸದಾ ಮನಸಿ ಸ್ಥಿತಃ ॥ ೨೧೬ ॥
ತತೋ ಮಯಾ ಪ್ರಣಮ್ಯೋಚ್ಚೈಃ ಸ ಪ್ರೋಕ್ತೋ ಭಗವಾನ್ ಹರಃ॥೨೧೭॥
ಯದಿ ತುಷ್ಟೋಽಸಿ ಮೇ ದೇವ ತಸ್ಮಾಂ ಕುರು ನಿಜಂ ಗಣಂ ।
ತ್ರೈಲೋಕ್ಯರಾಜ್ಯಮಪಿ ಮೇ ನಾಽನ್ಯತ್ಸಂಪ್ರತಿ ರೋಚತೇ ॥ ೨೧೮ ॥
ಏವಮುಕ್ತೋ ಮಯಾದೇವೋ ವಿಮಾನೇ ಮಾಂ ನಿಧಾಯ ಸಃ ।
ಶಿವಲೋಕಂ ಮಹಾಪುಣ್ಯಂ ಸಹಸಾ ಮಾಂ ಸಮಾನಯತ್ ॥ ೨೧೯ ॥
ತತಃ ಪ್ರಸಾದತಶ್ಚಾಽಹಂ ಭವಾನ್ಯಾಶ್ಚ ಹರಸ್ಯ ಚ ।
ಕ್ರೀಡಾಮಿ ಸ್ವೇಚ್ಛಯಾ ತತ್ರ ಗಣಮಧ್ಯೇ ವ್ಯವಸ್ಥಿತಃ ॥ ೨೨೦ ॥
ಕಸ್ಯಚಿತ್ತ್ವಥ ಕಾಲಸ್ಯ ವಿಮಾನ ವರಮಾಶ್ರಿತಃ ।
ಸ್ವೇಚ್ಛಯಾ ಭ್ರಮಮಾಣಸ್ತು ಪ್ರಾಪ್ತೋಽತ್ರೈವ ಮಹಾಗಿರೌ ॥ ೨೨೧ ॥
ವಸಂತಸಮಯೇ ಪ್ರಾಪ್ತೇ ಪ್ರವೃತ್ತೇ ದಕ್ಷಿಣಾನಿಲೇ ।
ಅಗ್ನಿವೇಶ್ಯಸುತಾ ದೃಷ್ಟಾ ವಿವಸ್ತ್ರಾ ಜಲಮಧ್ಯಗಾ ॥ ೨೨೨ ॥
ಆಲಿಭಿರ್ಬಹುಭಿರ್ಯುಕ್ತಾ ಕ್ರೀಡಮಾನಾ ಯಥೇಚ್ಛಯಾ ।
ಮುಷ್ಟಿಗ್ರಾಹ್ಯಾ ತು ಮಧ್ಯೇ ಸಾ ಬಿಂಬೋಷ್ಠೀ ವಾರಿಜೇಕ್ಷಣಾ ॥ ೨೨೩ ॥

---

ಸಂತುಷ್ಟನಾದ ಶಿವನು, "ಕುಶಧ್ವಜ! ನಿನ್ನ ಅತಿಶಯ ಶ್ರದ್ಧೆಯಿಂದ ನಾನು ಸಂತೋಷಗೊಂಡಿರುವೆನು. ವರವನ್ನು ಕೊಡುವೆನು. ಮನಸ್ಸಿನಲ್ಲಿರುವ ವರವನ್ನು ಕೇಳಿಕೊ ಎಂದನು.

೨೧೭–೨೧೮. ಅನಂತರ ನಾನು ನಮಸ್ಕರಿಸಿ ಶಿವನನ್ನು ಕುರಿತು ಹೀಗೆಂದೆನು. ಸ್ವಾಮಿ! ನೀನು ಸಂತುಷ್ಟನಾಗಿದ್ದರೆ ನನ್ನನ್ನು ನಿನ್ನ ಗಣನನ್ನಾಗಿಸು. ನನಗೆ ಇತರ ತ್ರೈಲೋಕ್ಯರಾಜ್ಯವೂ ಇಷ್ಟವಾಗುವುದಿಲ್ಲ.

೨೧೯. ನಾನು ಹೀಗೆ ಹೇಳಲು ಶಿವನು ನನ್ನನ್ನು ವಿಮಾನದಲ್ಲಿ ಕುಳ್ಳಿರಿಸಿ ಕೊಂಡು ಪುಣ್ಯಕರವಾದ ಶಿವಲೋಕಕ್ಕೆ ಕರೆದುಕೊಂಡುಹೋದನು.

೨೨೦. ಬಳಿಕ ನಾನು ಪಾರ್ವತೀ ಪರಮೇಶ್ವರರ ಅನುಗ್ರಹದಿಂದ ಗಣಗಳ ನಡುವೆ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದೆನು.

೨೨೧. ಒಂದಾನೊಂದು ಕಾಲದಲ್ಲಿ ಉತ್ತಮ ವಿಮಾನದಲ್ಲಿ ಕುಳಿತು ಸ್ವೇಚ್ಛೆಯಾಗಿ ಸಂಚರಿಸುತ್ತ ಈ ಪರ್ವತಕ್ಕೆ ಬಂದೆನು.

೨೨೨–೨೨೪. ವಸಂತಕಾಲದಲ್ಲಿ ದಕ್ಷಿಣಾನಿಲವು ಬೀಸುತ್ತಿರಲು ನೀರಿನ ನಡುವೆ ನಗ್ನಳಾಗಿರುವವಳೂ, ಬಹುಮಂದಿ ಸಖಿಯರೊಡನೆ ಸ್ವೇಚ್ಛೆಯಾಗಿ ಆಡುತ್ತಿರುವವಳೂ, ಕೃಶಮಧ್ಯಳೂ, ಬಿಂಬೋಷ್ಠಿಯೂ, ಕಮಲಾಕ್ಷಿಯೂ, ಬಿಲ್ವಫಲದಂತೆ ಸ್ತನವುಳ್ಳವಳೂ, ಚಂದ್ರಮುಖಿಯೂ, ಸಮಸ್ತ ಲಕ್ಷಣಗಳಿಂದ

ಬಿಲ್ವಸ್ತನೀ ಶಶಾಂಕಾಸ್ಯಾ ಸರ್ವಲಕ್ಷಣ ಲಕ್ಷಿತಾ ।
ತತೋಽಹಂ ಮನ್ಮಥಾವಿಷ್ಟಃ ಸಮಭೂವಂ ಹಿ ತತ್ಕ್ಷಣಾತ್ ॥ ೨೨೪ ॥
ಅವತೀರ್ಯ ವಿಮಾನಾಗ್ರ್ಯಾದ್ಗೃಹೀತಾಽಥ ಕರೇ ಮಯಾ ।
ಪ್ರಕುರ್ವಾಣಾಽಥ ಕರುಣಂ ಪಕ್ಷಿಣೀ ಕುರರೀ ಯಥಾ ॥ ೨೨೫ ॥
ತತಃ ಕನ್ಯಾ ಮುನೀಂದ್ರಾಣಾಂ ಯಾಃ ಸ್ಥಿತಾಸ್ತತ್ರವಾರಿಣಿ ।
ರುದಂತ್ಯಃ ಸಂಪ್ರಯಾತಾಸ್ತಾ ಅಗ್ನಿವೇಶ್ಯಸ್ಯ ಸನ್ನಿಧೌ ॥ ೨೨೬ ॥
ನೀಯತೇ ತ್ವತ್ಸುತಾ ಬ್ರಹ್ಮನ್ ವಿಮಾನವರಮಾಶ್ರಿತಾ ।
ವೈಮಾನಿಕೇನ ಕೇನಾಽಪಿ ಕ್ರಂದಮಾನಾ ನಿರರ್ಗಲಂ ॥ ೨೨೭ ॥
ತಚ್ಛ್ರುತ್ವಾ ಕುಪಿತಃ ಸೋಽಥ ವ್ಯೋಮಮಾರ್ಗಾಽವಲೋಕನಃ ।
ಸ್ವಾಽಶ್ರಮಾತ್ಸಂಪ್ರಯಾತಃ ಸ ಭರ್ತ್ಸಮಾನೋ ಮುಹುರ್ಮುಹುಃ ॥
ತಿಷ್ಠ ತಿಷ್ಠೇತಿ ಚ ಪ್ರೋಚ್ಯ ಸ್ತಂಭಯಾಮಾಸ ಸರ್ವತಃ ।
ತಪಸೋಗ್ರೇಣ ವಿಪ್ರಸ್ಯ ವಿಮಾನಂ ಮಮ ಸಂಸ್ಥಿತಂ ॥ ೨೨೯ ॥
ಅಬ್ರವೀಚ್ಚ ತತೋ ಮಾಂ ಸ ಕೋಪೇನ ಮಹತಾನ್ವಿತಃ ।
ಯಸ್ಮಾತ್ಪಾಪ ತ್ವಯಾಕನ್ಯಾ ಕ್ರೀಡಂತೀ ವಿಹೃತಾಽಧುನಾ ॥ ೨೩೦ ॥

---

ಸಹಿತಳೂ ಆದ ಅಗ್ನಿವೇಶ್ಯನ ಮಗಳನ್ನು ನೋಡಿದೆನು. ಅದರಿಂದ ನಾನು ಕೂಡಲೆ ಮನ್ಮಥಪೀಡಿತನಾದೆನು.

೨೨೫. ಬಳಿಕ ನಾನು ವಿಮಾನದಿಂದ ಇಳಿದು ಕುರರಿಯಂತೆ ದೀನವಾಗಿ ಕೂಗುತ್ತಿರುವ ಅವಳ ಕೈಯನ್ನು ಹಿಡಿದುಕೊಂಡೆನು.

೨೨೬. ಬಳಿಕ ಆ ನೀರಿನಲ್ಲಿದ್ದ ಮುನಿವರ್ಯರ ಕನ್ಯೆಯರು ಅಳುತ್ತ ಅಗ್ನಿವೇಶ್ಯನ ಹತ್ತಿರಕ್ಕೆ ಹೋದರು.

೨೨೭. ಅವರು, "ಮುನಿಯೆ! ಯಾವನೋ ಒಬ್ಬ ವೈಮಾನಿಕನು ಅತಿಶಯವಾಗಿ ಅಳುತ್ತಿರುವ ನಿನ್ನ ಮಗಳನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಒಯ್ಯುತ್ತಿರುವನು" ಎಂದರು.

೨೨೮–೨೨೯. ಅಗ್ನಿವೇಶ್ಯನು ಆ ಮಾತನ್ನು ಕೇಳಿ ಕುಪಿತನಾಗಿ ಆಕಾಶ ಮಾರ್ಗವನ್ನು ನೋಡಿ ತನ್ನ ಆಶ್ರಮದಿಂದ ಹೊರಟು ಬಾರಿಬಾರಿಗೂ ಗದರಿಸುತ್ತ ನಿಲ್ಲು, ನಿಲ್ಲು ಎಂದು ಹೇಳಿ ತನ್ನ ಉಗ್ರತಪಸ್ಸಿನಿಂದ ನನ್ನ ವಿಮಾನವನ್ನು ತಡೆದನು.

೨೩೦–೨೩೧. ಬಳಿಕ ಅವನು ಅತ್ಯಂತ ಕೋಪದಿಂದ ಕೂಡಿ ನನ್ನನ್ನು ಕುರಿತು, "ಪಾಪಿಯೆ! ನೀನು ಕಾಮರಹಿತಳಾದ ಆಡುತ್ತಿರುವ ನನ್ನ ಕನ್ಯೆಯನ್ನು ಪರಾಂಗನ ಮುದ್ದೆಯನ್ನು ಗೃಧ್ರವು ತೆಗೆದುಕೊಂಡುಹೋಗುವಂತೆ

ಆಕ್ರಾಮಾ ಮಾಂಸಪೇಶೀವ ಯಥಾ ಗೃಧ್ರೇಣ ದುರ್ಮತೇ ।
ತಸ್ಮಾದ್ಗೃಧ್ರೋ ಭವತ್ವಾಶು ಮಮ ವಾಕ್ಯಾದಸಂಶಯಂ ॥ ೨೩೧ ॥
ಏವಮುಕ್ತಸ್ತತಸ್ತೇನ ಲಜ್ಜಯಾಽಹಂ ಪರಿಪ್ಲುತಃ ।
ನಿವೇದ್ಯ ಕನ್ಯಕಾಂ ತಸ್ಮೈ ಪ್ರಣಿಪತ್ಯ ಮುಹುರ್ಮುಹುಃ ॥ ೨೩೨ ॥
ತತಃ ಪ್ರೋಕ್ತೋ ಮಯಾ ವಿಪ್ರಸ್ತ್ವಗ್ನಿವೇಶ್ಯೋ ಮಹಾತಪಾಃ ।
ಸ ಮಯಾ ತೇ ಸುತಾ ಜ್ಞಾತಾ ನ ಕೋಪಯಿತುಮರ್ಹಸಿ ॥ ೨೩೩ ॥
ಗೃಧ್ರತ್ವಂ ಮೇ ಯಥಾ ನಸ್ಯಾತ್ತಥಾ ಕುರು ಮುನೀಶ್ವರ ॥ ೨೩೪ ॥
ತತೋಽಹಂ ತೇನ ಚ ಪ್ರೋಕ್ತೋ ನ ಮಿಥ್ಯಾ ವಚನಂ ಮಮ ।
ಕಥಂಚಿಜ್ಜಾಯತೇ ತಸ್ಮಾದ್ಗೃಧ್ರತ್ವಂ ಪ್ರಭವಿಷ್ಯತಿ ॥ ೨೩೫ ॥
ಆನರ್ತಸ್ಯೋಪದೇಶೇನ ಯದಾ ಯಾಸ್ಯಸಿ ಭೋಽಧಮ ।
ಭರ್ತೃಯಜ್ಞಂ ಮಹಾಭಾಗಮುಪದೇಶಕೃತೇ ತದಾ ॥ ೨೩೬ ॥
ತಸ್ಮಾಚ್ಚ ನಿಷ್ಕೃತಿಂ ಪ್ರಾಪ್ಯ ಗೃಧ್ರತ್ವಂ ತೇ ಪ್ರಯಾಸ್ಯತಿ ।
ಸ ಮಯಾಽನ್ವೇಷಮಾಣೇನ ನ ದೃಷ್ಟೋ ನೈವ ಚ ಶ್ರುತಃ ।
ನಿರ್ವಿಣ್ಣೋ ಗೃಧ್ರಭಾವೇನ ಶಾಪಾಂತೋ ನ ಚ ಮೇಽಭವತ್ ॥ ೨೩೭ ॥

ಗೃಧ್ರ ಉವಾಚ :—

ಏತತ್ತೇ ಸರ್ವಮಾಖ್ಯಾತಂ ಗೃಧ್ರತ್ವಸ್ಯ ಚ ಕಾರಣಂ ।
ಆಯುಷ್ಯಂ ಚ ಯಥಾಜಾತಂ ಮಮ ಸಂಖ್ಯಾ ವಿವರ್ಜಿತಂ ॥ ೨೩೮ ॥

---

ಅಪಹರಿಸುತ್ತಿರುವುದರಿಂದ ನನ್ನ ಮಾತಿನಿಂದ ನಿಶ್ಚಯವಾಗಿಯೂ ಶೀಘ್ರವಾಗಿ ಗೃಧ್ರನಾಗು" ಎಂದು ಶಪಿಸಿದನು.

೨೩೨-೨೩೪. ಅವನು ಹೀಗೆ ಶಪಿಸಲು ನಾನು ನಾಚಿಕೆಗೊಂಡು ಕನ್ಯೆಯನ್ನು ಅವನಿಗಿತ್ತು ಬಾರಿಬಾರಿಗೂ ವಂದಿಸಿ ಮಹಾತಪಸ್ವಿಯಾದ ಆ ಅಗ್ನಿವೇಶ್ಯ ನನ್ನು ಕುರಿತು ನಾನು ಇವಳು ನಿನ್ನ ಮಗಳೆಂದು ತಿಳಿಯಲಿಲ್ಲ. ನೀನು ಕೋಪಿಸಿಕೊಳ್ಳಬೇಡ. ನಾನು ಗೃಧ್ರನಾಗದಿರುವಂತೆ ಮಾಡೆಂದು ಹೇಳಿದೆನು.

೨೩೫-೨೩೭. ಬಳಿಕ ಅವನು ನನ್ನ ಮಾತು ಸುಳ್ಳಾಗುವುದಿಲ್ಲ. ಆದುದರಿಂದ ನೀನು ಗೃಧ್ರನಾಗುವೆ. ನೀನು ಆನರ್ತನ ಉಪದೇಶದಿಂದ ಮಹಾಭಾಗ್ಯವಂತನಾದ ಭರ್ತೃಯಜ್ಞನನ್ನು ಉಪದೇಶಕ್ಕಾಗಿ ಹೊಂದಿದಾಗ ಪಾಪವು ಪರಿಹಾರವಾಗಿ ನಿನ್ನ ಗೃಧ್ರತ್ವವು ಹೋಗುವುದು. ಆ ಆನರ್ತನನ್ನು ಹುಡುಕುತ್ತಿರುವ ನಾನು ಅವನನ್ನು ನೋಡಲಿಲ್ಲ. ಕೇಳಲೂ ಇಲ್ಲ. ಗೃಧ್ರತ್ವವನ್ನು ಹೊಂದಿ ನಿರ್ವಿಣ್ಣನಾದ ನನ್ನ ಶಾಪವು ಅವಸಾನಗೊಳ್ಳಲಿಲ್ಲ.

೨೩೮. ಗೃಧ್ರವು ಹೇಳುತ್ತದೆ:—ನಾನು ಗೃಧ್ರನಾಗುವುದಕ್ಕೂ, ದೀರ್ಘಾಯುಷ್ಮಂತನಾಗುವುದಕ್ಕೂ ಕಾರಣವನ್ನು ನಿನಗೆ ಹೇಳಿರುವೆನು.

ಇಂದ್ರದ್ಯುಮ್ನ ಉವಾಚ :—

ಅನುಜ್ಞಾಂ ದೇಹಿ ಮೇ ಶೀಘ್ರಂ ಪ್ರವಿಶಾಮಿ ಹುತಾಶನಂ ।
ಯೇನ ವೈರಾಗ್ಯಮಾಪನ್ನೋ ನ ಹಿ ಜೀವಿತುಮುತ್ಸಹೇ ॥ ೨೩೯ ॥
ಏವಮುಕ್ತಃ ಸ ತೇನಾಽಥ ಚಿಂತಯಾಮಾಸ ಚೇತಸಿ ।
ಮಮಾಂತಿಕಂ ಸಮಾಯಾತ ಏಷಂ ಮಿತ್ರಸಮನ್ವಿತಃ ।
ತತ್ಕರೋಮಿ ಯಥಾಶಕ್ತ್ಯಾ ಸ್ವೋಪಕಾರಂ ಸುದುರ್ಲಭಂ ॥ ೨೪೦ ॥
ತತಃ ಪ್ರೋವಾಚ ತಂ ಪ್ರೀತ್ಯಾ ದಾಕ್ಷಿಣ್ಯಂ ಪರಮಂ ಗತಃ ।
ಮಾ ತ್ವಂ ಸಾಧಯ ಚಾಽಗ್ನಿಂ ಭೋಃ ಶೃಣು ತಾವದ್ವಚೋ ಮಮ ॥ ೨೪೧ ॥
ಅಹಂ ತೇ ಕೀರ್ತಯಿಷ್ಯಾಮಿ ಮತ್ತೋ ಯೋಽಪಿ ಚಿರಂತನಃ ॥ ೨೪೨ ॥
ಯೋ ಜ್ಞಾಸ್ಯತಿ ನ ಸಂದೇಹ ಇಂದ್ರದ್ಯುಮ್ನಂ ಮಹೀಪತಿಂ ॥ ೨೪೩ ॥
ತದಾಗಚ್ಛ ಮಯಾ ಸಾರ್ಧಂ ತತ್ಸಮೀಪಂ ಮಹಾತ್ಮನಃ ।
ಸಹಾಯೈಃ ಸಹಿತಃ ಸರ್ವೈರ್ಮಯಾ ಸಾರ್ಧಂ ತಥೈವ ಚ ॥ ೨೪೪ ॥

ಇಂದ್ರದ್ಯುಮ್ನ ಉವಾಚ :—

ಕಸ್ತ್ವತ್ತೋಽಪ್ಯಧಿಕೋಽಪ್ಯಸ್ತಿ ಜೀವಿತವ್ಯೇನ ಸದ್ದ್ವಿಜ ।
ಏತನ್ಮೇ ಕೌತುಕಂ ಭೂರಿ ತಸ್ಮಾದ್ವದ ಮಹಾಮತೇ ॥ ೨೪೫ ॥

---

೨೩೯. ಇಂದ್ರದ್ಯುಮ್ನನು ಹೇಳುತ್ತಾನೆ:—ನನಗೆ ಶೀಘ್ರವಾಗಿ ಅನುಮತಿಯನ್ನು ಕೊಡು. ಅಗ್ನಿಯನ್ನು ಪ್ರವೇಶಿಸುವೆನು. ವಿರಕ್ತನಾದ ನಾನು ಬದುಕಲಿಚ್ಛಿಸುವುದಿಲ್ಲ.

೨೪೦—೨೪೧. ಇಂದ್ರದ್ಯುಮ್ನನು ಹಾಗೆ ಹೇಳಲು ಗೃಧ್ರವು ಮನಸ್ಸಿನಲ್ಲಿ "ಇವನು ಮಿತ್ರರೊಡನೆ ನನ್ನೆಡೆಗೆ ಬಂದಿರುವನು. ಆದುದರಿಂದ ಶಕ್ತ್ಯನುಸಾರ ದುರ್ಲಭೋಪಕಾರವನ್ನು ಮಾಡುವೆನು" ಎಂದು ಆಲೋಚಿಸಿ, ಅನಂತರ ಆ ರಾಜನನ್ನು ಕುರಿತು ಅತಿ ದಾಕ್ಷಿಣ್ಯದಿಂದ ಇಂತೆಂದಿತು, "ನೀನು ಅಗ್ನಿಯನ್ನು ಪ್ರವೇಶಿಸಬೇಡ. ನನ್ನ ಮಾತನ್ನು ಕೇಳು.

೨೪೨—೨೪೪. ನಾನು ನನಗಿಂತ ಚಿರಂಜೀವಿಯಾದವನನ್ನು ನಿನಗೆ ಹೇಳುವೆನು. ಅವನು ನಿಶ್ಚಯವಾಗಿಯೂ ಇಂದ್ರದ್ಯುಮ್ನ ರಾಜನನ್ನು ತಿಳಿಯುವನು. ಆದುದರಿಂದ ನೀನು ನನ್ನೊಡನೆಯೂ ಇವರೆಲ್ಲರೊಡನೆಯೂ ಮಹಾತ್ಮನಾದ ಅವನ ಹತ್ತಿರಕ್ಕೆ ಬಾ."

೨೪೫. ಇಂದ್ರದ್ಯುಮ್ನನು ಹೇಳುತ್ತಾನೆ:—ದ್ವಿಜನೇ! ನಿನಗಿಂತ ಹೆಚ್ಚು ಕಾಲದಿಂದ ಬದುಕಿರುವವನು ಯಾವನಿರುವನು? ಈ ವಿಷಯದಲ್ಲಿ ನನಗೆ ಬಹಳ ಕುತೂಹಲವುಂಟಾಗಿದೆ. ಆದುದರಿಂದ ಹೇಳು.

ಗೃಧ್ರ ಉವಾಚ:—

ಅಸ್ತಿ ಮಂಥರಕೋ ನಾಮ ಕಮಠಶ್ಚಿರಜೀವಿತಃ ।
ಮಾನಸೇ ಸರಸಿ ಖ್ಯಾತ ಇಂದ್ರದ್ಯುಮ್ನಂ ಸವೇತ್ಸ್ಯತಿ ॥ ೨೪೬ ॥
ತಸ್ಯ ತದ್ವಚನಂ ಶ್ರುತ್ವಾ ಮಾರ್ಕಂಡಾದ್ಯಾಶ್ಚ ತೇ ತ್ರಯಃ ।
ತಮೂಚುಃ ಪಾರ್ಥಿವಶ್ರೇಷ್ಠಂ ಮರಣೇ ಕೃತನಿಶ್ಚಯಂ ॥ ೨೪೭ ॥
ಯುಕ್ತಮುಕ್ತಂ ಮಹಾಭಾಗ ಗೃಧ್ರರಾಜೇನ ಧೀಮತಾ ।
ತತ್ರ ಯಾಸ್ಯಾಮಹೇ ಸರ್ವೇ ಯತ್ರಾಽಸೌ ಕಮಠಃ ಸ್ಥಿತಃ ॥ ೨೪೮ ॥
ಅನಿರ್ವೇದಃ ಶ್ರಿಯೋ ಮೂಲಂ ಯತಃ ಶಂಸಂತಿ ಪಂಡಿತಾಃ ।
ನೀತಿಶಾಸ್ತ್ರವಿದಃ ಸರ್ವೇ ತಸ್ಮಾದಾಗಚ್ಛ ಗಮ್ಯತಾಂ ॥ ೨೪೯ ॥

ಸೂತ ಉವಾಚ:—

ತೇಷಾಂ ತದ್ವಚನಂ ಶ್ರುತ್ವಾ ಕೃಚ್ಛ್ರಾನ್ನಿರ್ವರ್ತ್ಯ ಪಾರ್ಥಿವಃ ।
ಮರಣಾದ್ಬ್ರಾಹ್ಮಣಶ್ರೇಷ್ಠಾ ವೈರಾಗ್ಯಂ ಪರಮಂ ಗತಃ ॥ ೨೫೦ ॥
ಅಥ ತೇ ಪ್ರಸ್ಥಿತಾಃ ಸರ್ವೇ ಗಂಧಮಾದನಪರ್ವತಾತ್ ।
ಪಂಚಾಽಪಿ ಚ ಸಮಾದಿಶ್ಯ ಮಾನಸಂ ಸರ ಉತ್ತಮಂ ।
ಅಥ ಪ್ರಾಪ್ತಾಃ ಕ್ರಮೇಣೈವ ಗಚ್ಛಮಾನಾ ವಿಹಾಯಸಾ ॥ ೨೫೧ ॥
ಮಾನಸಂ ತತ್ಸರೋ ರಮ್ಯಂ ಕೂರ್ಮಸ್ತೋಯಾದ್ವಿನಿರ್ಗತಃ ।
ನಿದಾಘಂ ಸೇವಮಾನಸ್ತು ಸಂತಿಷ್ಠತಿ ಯದೃಚ್ಛಯಾ ॥ ೨೫೨ ॥

---

೨೪೬. ಗೃಧ್ರವು ಹೇಳುತ್ತದೆ:—ಮಾನಸ ಸರೋವರದಲ್ಲಿ ಮಂಥರಕವೆಂಬ ಚಿರಂಜೀವಿಯಾದ ಒಂದು ಆಮೆಯಿದೆ. ಅದು ಇಂದ್ರದ್ಯುಮ್ನನನ್ನು ಅರಿತಿರುವುದು.

೨೪೭. ಮಾರ್ಕಂಡೇಯನೇ ಮೊದಲಾದ ಆ ಮೂವರು ಗೃಧ್ರನ ಆ ಮಾತನ್ನು ಕೇಳಿ ಸಾಯಲು ನಿಶ್ಚಯಿಸಿರುವ ಇಂದ್ರದ್ಯುಮ್ನನನ್ನು ಕುರಿತು ಇಂತೆಂದರು.

೨೪೮. ಮಹಾಭಾಗ್ಯವಂತನೆ! ಬುದ್ಧಿವಂತನಾದ ಗೃಧ್ರನು ಯುಕ್ತವಾಗಿ ನುಡಿದಿರುವನು. ನಾವೆಲ್ಲ ಆಮೆಯೆಡೆಗೆ ಹೋಗೋಣ.

೨೪೯. ವೈರಾಗ್ಯಗೊಳ್ಳದಿರುವುದು ಸಂಪತ್ತಿಗೆ ಕಾರಣವೆಂದು ನೀತಿಶಾಸ್ತ್ರವನ್ನರಿತ ಪಂಡಿತರು ಹೇಳುತ್ತಾರೆ. ಆದುದರಿಂದ ಬಾ ಹೋಗೋಣ.

೨೫೦. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮರೆ! ಆ ಇಂದ್ರದ್ಯುಮ್ನನು ಅವರ ಆ ಮಾತನ್ನು ಕೇಳಿ ಕಷ್ಟಪಟ್ಟು ಮರಣದಿಂದ ಹಿಂದಿರುಗಿ ಅಧಿಕ ವೈರಾಗ್ಯವನ್ನು ಹೊಂದಿದನು.

೨೫೧—೨೫೨. ಬಳಿಕ ಆ ಐದು ಜನರೂ ಗಂಧಮಾದನಪರ್ವತದಿಂದ ಮಾನಸ ಸರೋವರವನ್ನುದ್ದೇಶಿಸಿ ಹೊರಟು ಆಕಾಶಮಾರ್ಗದಿಂದ ಹೋಗುತ್ತ ಕ್ರಮವಾಗಿ ಮಾನಸಸರೋವರವನ್ನು ಸೇರಿದರು. ಆಗ ಆ ಕೂರ್ಮವು ನೀರಿನಿಂದ ಹೊರಗೆ ಬಂದು ಸ್ವೇಚ್ಛೆಯಾಗಿ ಉಷ್ಣವನ್ನು ಸೇವಿಸುತ್ತಿದ್ದಿತು.

ಸ ಚ ತಾಂಶ್ಚತುರೋ ದೃಷ್ಟ್ವಾ ಸುಚಿರಂ ಚ ನಿರೀಕ್ಷ್ಯತಾನ್ ।
ಪರಿಜ್ಞಾಯ ತತಃ ಸರ್ವಾನ್ ಪ್ರನಷ್ಟಃ ಸಲಿಲಂಪ್ರತಿ ॥ ೨೫೨ ॥
ಅಥ ತಂ ಕೌಶಿಕಃ ಪ್ರಾಹ ಗಚ್ಛಮಾನಂ ಪರಾಙ್ಮುಖಂ ।
ಭೋ ಭೋ ಮಿತ್ರಾದ್ಯ ಮಾಂ ದೃಷ್ಟ್ವಾ ಸಂಜಾತೋಽಸಿ ಪರಾಙ್ಮುಖಃ ॥
ಸುನೀಚೋಽಪಿ ಗೃಹಂ ಪ್ರಾಪ್ತೋ ಭವೇತ್ಪೂಜ್ಯತಮಃ ಸತಾಂ ॥ ೨೫೪ ॥
ಅಥಾಽಸೌ ತೋಯ ಮಧ್ಯಸ್ಥಃ ಶಿರೋಮಾತ್ರಂ ಬಹಿರ್ಗತಃ ।
ಪ್ರತ್ಯುವಾಚಾಽಥ ತಂ ಗೃಧ್ರಂ ವಿನಯಾದ್ದ್ವಿಜಸತ್ತಮಾಃ ॥ ೨೫೫ ॥
ನಾಽಹಂ ಪರಾಙ್ಮುಖೋ ಜಾತಸ್ತ್ವಾಂ ದೃಷ್ಟ್ವಾಽಸಂತರಾವುಭೌ ।
ಪಂಚಮೋಽಯಂ ಸಮಭ್ಯೇತಿ ಯೋ ಯುಷ್ಮಾಕಂ ಮಹಾಪುಮಾನ್ ॥
ಭಯಾತ್ತಸ್ಯ ಪ್ರಣಷ್ಟೋಽಹಮಿಂದ್ರದ್ಯುಮ್ನಸ್ಯ ಭೂಪತೇಃ ।
ಅನೇನ ತು ಪ್ರದಗ್ಧಾ ಮೇ ಪುರಾ ಪೃಷ್ಠಿರ್ಮಖಾಗ್ನಿನಾ ।
ಸತತಂ ಯಜಮಾನೇನ ರೋಚಕೇ ಸತ್ಪುರೋತ್ತಮೇ ॥ ೨೫೮ ॥
ಏತದೀಯಂ ಪುನಃ ಸ್ಮೃತ್ವಾ ಭಯಂ ಮೇ ಸುಮಹತ್ಸ್ಥಿತಂ ।
ಇಂದ್ರದ್ಯುಮ್ನಸ್ಯ ರಾಜರ್ಷೇಃ ಕೀರ್ತಿಸಂಶ್ರಯಣಂ ಮಹತ್ ॥ ೨೫೯ ॥
ಇತ್ಯೇವಮುಕ್ತೇ ವಚನೇ ಕಮಠೇನ ತದಾ ದಿವಃ ।
ದೇವದೂತಃ ಸಮಾಗಚ್ಛಚ್ಛಾಸನಾತ್ಪರಮೇಷ್ಠಿನಃ ॥ ೨೬೦ ॥

---

೨೫೨. ಅದು ಆ ನಾಲ್ಕು ಮಂದಿಯನ್ನು ಬಹಳ ಹೊತ್ತು ನೋಡಿ ಎಲ್ಲರನ್ನೂ ಗುರುತಿಸಿ ನೀರಿನಲ್ಲಿ ಅದೃಶ್ಯವಾಯಿತು.

೨೫೩. ಗೂಬೆಯು ಅನಭಿಮುಖವಾದ ಕೂರ್ಮವನ್ನು ನೋಡಿ, "ಎಲೈ ಮಿತ್ರನೆ! ನನ್ನನ್ನು ನೋಡಿ ನೀನು ಅನಭಿಮುಖನಾಗಿರುವೆ.

೨೫೪–೨೫೫. ಸಜ್ಜನರಿಗೆ ಮನೆಗೆ ಬಂದವನು ನೀಚನಾಗಿದ್ದರೂ ಪೂಜ್ಯನೇ" ಎಂದಿತು. ಬ್ರಾಹ್ಮಣವರ್ಯರೆ! ಬಳಿಕ ನೀರಿನ ಮಧ್ಯದಲ್ಲಿರುವ ಆ ಆಮೆಯು ತಲೆಯನ್ನು ಮಾತ್ರ ಹೊರಗೆ ಚಾಚಿ ಆ ಗೃಧ್ರವನ್ನು ಕುರಿತು ವಿನಯದಿಂದ ಇಂತೆಂದಿತು.

೨೫೬–೨೫೮. "ನಾನು ನಿಮ್ಮ ನಾಲ್ಕು ಮಂದಿಯನ್ನು ನೋಡಿ ಅನಭಿಮುಖನಾಗಲಿಲ್ಲ. ನಿಮ್ಮಲ್ಲಿ ಐದನೆಯವನಾದ ಈ ಇಂದ್ರದ್ಯುಮ್ನರಾಜನ ಭಯದಿಂದ ಅದೃಶ್ಯನಾದೆನು. ಇವನು ಹಿಂದೆ ರೋಚಕನಗರದಲ್ಲಿ ಯಾವಾಗಲೂ ಯಾಗ ಮಾಡುತ್ತ ಯಜ್ಞದ ಅಗ್ನಿಯಿಂದ ನನ್ನ ಬೆನ್ನನ್ನು ಸುಟ್ಟಿರುವನು.

೨೫೯. ಈ ಇಂದ್ರದ್ಯುಮ್ನರಾಜನ ಮಹಾ ಕೀರ್ತಿಯನ್ನು ಸ್ಮರಿಸಿ ನನಗೆ ಮಹಾ ಭಯವುಂಟಾಗಿದೆ."

೨೬೦. ಆಮೆಯು ಹೀಗೆ ಹೇಳಲು ಬ್ರಹ್ಮನ ಅಪ್ಪಣೆಯಿಂದ ದೇವಲೋಕದಿಂದ ದೇವದೂತನು ಬಂದನು.

ದೇವದೂತ ಉವಾಚ:—

ಆಗಚ್ಛಾಗಚ್ಛ ರಾಜರ್ಷೇ ಸಾಂಪ್ರತಂ ಬ್ರಾಹ್ಮಣೋಽಂತಿಕಂ ।
ಉಕ್ತೋಽಹಂ ಬ್ರಹ್ಮಣಾ ರಾಜನ್ ಕೀರ್ತಿಶ್ಚಾಽಸ್ಯ ಪೃಥಗ್ವಿಧಾ ॥ ೨೬೧ ॥
ಯದಾ ಪ್ರಕಾಶತಾಂ ಯಾತಿ ಸ್ವಲ್ಪಾಽಪಿ ಜಗತೀತಲೇ ।
ತದಾಽನೇಯೋ ದ್ರುತಂ ರಾಜಾ ಮಮ ಲೋಕೇ ಸುದುರ್ಲಭೇ ॥ ೨೬೨ ॥
ತಸ್ಮಾದಾಗಚ್ಛ ಗಚ್ಛಾವೋ ವಿಮಾನಾರೋಹಣಂ ಕುರು ।
ನಯಾಮಿ ಯೇನ ತತ್ಪಾರ್ಶ್ವಂ ಬ್ರಹ್ಮಣೋಽವ್ಯಕ್ತಜನ್ಮನಃ ॥ ೨೬೩ ॥

ಇಂದ್ರದ್ಯುಮ್ನ ಉವಾಚ:—

ಯದ್ಯೇತೇ ಸುಹೃದೋ ಮಹ್ಯಂ ಬಕ ಕೌಶಿಕ ಕಚ್ಛಪಾಃ ।
ಮಾರ್ಕಂಡೇಯೇನ ಸಹಿತಾ ಆಗಚ್ಛಂತಿ ಮಯಾ ಸಹ ॥ ೨೬೪ ॥
ಆಗಚ್ಛಾಮಿ ತ್ವಯಾ ಸಾರ್ಧಂ ತದಹಂ ಬ್ರಹ್ಮಣೋಽಂತಿಕಂ ।
ಅನ್ಯಥಾ ನಾಗಮಿಷ್ಯಾಮಿ ಸತ್ಯಮೇತನ್ಮಯೋದಿತಂ ॥ ೨೬೫ ॥

ದೇವದೂತ ಉವಾಚ:—

ಏತೇ ಹರಗಣಾಃ ಸರ್ವೇ ಶಾಪಭ್ರಷ್ಟಾಃ ಕ್ಷಿತಿಂ ಗತಾಃ ।
ಶಾಪಾಂತೇ ಹರಪಾರ್ಶ್ವೇ ತು ಭೂಯೋ ಯಾಸ್ಯಂತ್ಯಸಂಶಯಂ ॥ ೨೬೬ ॥
ತಸ್ಮಾದಾಗಚ್ಛ ಗಚ್ಛಾವೋ ಮುಕ್ತ್ವಾಽತ್ರೈತಾನ್ದ್ರುತಂ ನೃಪ ।
ನ ಹ್ಯೇಷಾಂ ರೋಚತೇ ಸ್ವರ್ಗೋ ಮುಕ್ತ್ವಾ ದೇವಂ ಮಹೇಶ್ವರಂ ॥ ೨೬೭ ॥

---

೨೬೧–೨೬೨. ದೇವದೂತನು ಹೇಳುತ್ತಾನೆ:—ರಾಜರ್ಷಿಯೆ! ಈಗ ಬ್ರಹ್ಮನ ಹತ್ತಿರಕ್ಕೆ ಬಾ. ಬ್ರಹ್ಮನು ಇವನ ನಾನಾವಿಧ ಕೀರ್ತಿಯು ಸ್ವಲ್ಪವಾದರೂ ಭೂಮಿಯಲ್ಲಿ ಪ್ರಕಾಶಗೊಂಡಾಗ ಇವನನ್ನು ನನ್ನ ಲೋಕಕ್ಕೆ ಕರೆದು ಕೊಂಡು ಬಾ ಎಂದಿರುವನು.

೨೬೩. ಆದುದರಿಂದ ಬಾ. ಹೋಗೋಣ. ವಿಮಾನವನ್ನೇರು. ನಿನ್ನನ್ನು ಬ್ರಹ್ಮನೆಡೆಗೆ ಕರೆದುಕೊಂಡು ಹೋಗುವೆನು.

೨೬೪–೨೬೫. ಇಂದ್ರದ್ಯುಮ್ನನು ಹೇಳುತ್ತಾನೆ:—ನನ್ನ ಸ್ನೇಹಿತರಾದ ಈ ಬಕ, ಕೌಶಿಕ, ಕಮಠರು ಮಾರ್ಕಂಡೇಯನೊಡನೆ ಬರುವುದಾದರೆ ನಾನೂ ಅವರೊಡನೆ ಬ್ರಹ್ಮನೆಡೆಗೆ ಬರುವೆನು. ಹಾಗಿಲ್ಲದಿದ್ದರೆ ಬರುವುದಿಲ್ಲ. ನಾನು ಹೇಳಿರುವುದು ನಿಜ.

೨೬೬. ದೇವದೂತನು ಹೇಳುತ್ತಾನೆ:—ಮಹೇಶ್ವರನ ಗಣಗಳಾದ ಇವರು ಶಾಪಗ್ರಸ್ತರಾಗಿ ಭೂಮಿಗೆ ಬಂದಿರುವರು. ಶಾಪದ ಕೊನೆಯಲ್ಲಿ ಮರಳಿ ಆ ಶಿವನ ಸನ್ನಿಧಿಗೇ ಹೋಗುವರು.

೨೬೭. ಆದುದರಿಂದ ಇವರನ್ನು ಬಿಟ್ಟು ಶೀಘ್ರವಾಗಿ ಬಾ. ಹೋಗೋಣ. ಇವರಿಗೆ ಮಹೇಶ್ವರನನ್ನು ಬಿಟ್ಟು ಸ್ವರ್ಗವು ರುಚಿಸುವುದಿಲ್ಲ.

ಇಂದ್ರದ್ಯುಮ್ನ ಉವಾಚ :—

ಯದ್ಯೇವಂ ಗಚ್ಛತೇ ಭದ್ರಂ ನಾಽಹಂ ಗಂತಾ ತ್ರಿವಿಷ್ಟಪಂ ।
ತಥಾ ತಥಾ ಯತಿಷ್ಯಾಮಿ ಭವಿಷ್ಯಾಮಿ ಯಥಾ ಗಣಃ ॥ ೨೬೮ ॥
ತತ್ರಸ್ಥಸ್ಯ ಧ್ರುವಂ ಭಾವಿ ನಿತ್ಯಂ ಚ ಪತನಾದ್ಭಯಂ ।
ಏವಮುಕ್ತಃ ಸ ತೇನಾಽಥ ಸಮಾದಾಯ ವಿಮಾನಕಂ ॥ ೨೬೯ ॥
ಬ್ರಹ್ಮಲೋಕಂ ಗತೋ ದೂತೋ ವೈಲಕ್ಷ್ಯಂ ಪರಮಂ ಗತಃ ।
ಇಂದ್ರದ್ಯುಮ್ನೋಽಪಿ ಪಪ್ರಚ್ಛ ತಂ ಕೂರ್ಮಂ ವಿನಯಾನ್ವಿತಃ ॥ ೨೭೦ ॥
ಆಖ್ಯಾಹಿ ಕೂರ್ಮ ಸ್ತ್ವಂ ಕರ್ಮ ಯದೀದೃಕ್ತ್ವಂ ಚಿರಂತನಃ ।
ಕರ್ಮಣಾ ಕೇನ ತತ್ಪ್ರಾಪ್ತಂ ಕೂರ್ಮತ್ವಂ ಶಂಸ ಮೇ ದ್ರುತಂ ॥ ೨೭೧ ॥

ಕೂರ್ಮ ಉವಾಚ :—

ಅಹಮಾಸಂ ಪುರಾ ವಿಪ್ರೋ ಬಾಲಭಾವೇ ವ್ಯವಸ್ಥಿತಃ ।
ಚಮತ್ಕಾರಪುರೇ ರಮ್ಯೇ ಶಾಂಡಿಲ್ಯೋನಾಮ ವಿಶ್ರುತಃ ॥ ೨೭೨ ॥
ಬಾಲಕ್ರೀಡಾಸು ಸರ್ವಾಸು ಕ್ರೀಡಮಾನೋ ಯದೃಚ್ಛಯಾ ।
ಪಕ್ವೇಷ್ಟಿಕಮಯಂ ಶಂಭೋಃ ಕ್ರೀಡಿತಾ ನಿರ್ಮಿತಂ ಗೃಹಂ ।
ತತ್ರ ಚಾಗೇಶ್ವರಂ ಲಿಂಗಂ ಕೃತ್ವಾಽಥ ವಿನಿವೇಶಿತಂ ॥ ೨೭೩ ॥
ತತೋಽಹಂ ಭಕ್ತಿಸಂಯುಕ್ತಃ ಪೂಜಯಾಮಿ ದಿನೇ ದಿನೇ ।
ಕ್ರೀಡಮಾನೋ ವಿನಾ ಮಂತ್ರೈಃ ಶಿಶುಭಿಃ ಪರಿವಾರಿತಃ ॥ ೨೭೪ ॥

---

೨೬೮. ಇಂದ್ರದ್ಯುಮ್ನನು ಹೇಳುತ್ತಾನೆ:—ಹೀಗಾದರೆ ನೀನು ಹೋಗು. ನಿನಗೆ ಮಂಗಳವಾಗಲಿ. ನಾನು ಸ್ವರ್ಗಕ್ಕೆ ಬರುವುದಿಲ್ಲ. ನಾನೂ ಶಂಕರನ ಗಣನಾಗಲು ಪ್ರಯತ್ನಿಸುವೆನು.

೨೬೯—೨೭೧. ಸ್ವರ್ಗವಾಸಿಗೆ ನಿಶ್ಚಯವಾಗಿಯೂ ಪತನಭಯವಿರುವುದು. ರಾಜನು ಹೀಗೆ ಹೇಳಲು ಆ ದೇವದೂತನು ವಿಮಾನವನ್ನು ತೆಗೆದುಕೊಂಡು ಆಶ್ಚರ್ಯದಿಂದ ಬ್ರಹ್ಮಲೋಕಕ್ಕೆ ಹೋದನು. ಇಂದ್ರದ್ಯುಮ್ನನು ವಿನಯದಿಂದ ಆ ಕೂರ್ಮನನ್ನು ಕುರಿತು, 'ಕೂರ್ಮ! ನೀನು ದೀರ್ಘಾಯುಷ್ಮಂತನೂ, ಕೂರ್ಮನೂ ಆಗಲು ಕಾರಣವನ್ನು ಶೀಘ್ರವಾಗಿ ನನಗೆ ಹೇಳು' ಎಂದು ಪ್ರಶ್ನೆಮಾಡಿದನು.

೨೭೨—೨೭೩. ಕೂರ್ಮನು ಹೇಳುತ್ತಾನೆ:—ನಾನು ಹಿಂದೆ ಚಮತ್ಕಾರಪುರದಲ್ಲಿ ಶಾಂಡಿಲ್ಯನೆಂಬ ಬಾಲಕನಾಗಿದ್ದೆನು. ನಾನು ಸ್ವೇಚ್ಛೆಯಾಗಿ ಆಡುತ್ತ ಪಕ್ವವಾದ ಇಟ್ಟಿಗೆಗಳಿಂದ ಶಂಕರನ ದೇವಾಲಯವನ್ನು ನಿರ್ಮಿಸಿ ಅದರಲ್ಲಿ ಚಾಗೇಶ್ವರಲಿಂಗವನ್ನು ಸ್ಥಾಪಿಸಿದೆನು.

೨೭೪. ಬಳಿಕ ನಾನು ಪ್ರತಿದಿನವೂ ಹುಡುಗರೊಡನೆ ಆಡುತ್ತ ಮಂತ್ರವಿಲ್ಲದೆ ಭಕ್ತಿಯಿಂದ ಪೂಜಿಸುತ್ತಿದ್ದೆನು.

ಕಸ್ಯಚಿತ್ತ್ವಥ ಕಾಲಸ್ಯ ಮರಣೇ ಸಮುಪಸ್ಥಿತೇ ।
ಜಾತಿಸ್ಮರೋಽಹ್ಯಹಂ ವಿಪ್ರೋ ಜಾತೋ ವೈ ವೈದಿಶೇಪುರೇ ॥ ೨೭೫ ॥
ತತೋ ಮೇಽಭ್ಯಧಿಕಾ ಜಾತಾ ಭಕ್ತಿರ್ದೇವಂ ಹರಂ ಪ್ರತಿ ।
ಕೃತ್ವಾ ಭಿಕ್ಷಾಟನಂ ನಿತ್ಯಂ ಯಾಚಯಿತ್ವಾ ಧನಂ ಬಹು ॥ ೨೭೬ ॥
ಕೃತ್ವಾ ಪ್ರಾಸಾದಮಾತ್ರಂ ತು ಲಿಂಗಂ ಸಂಸ್ಥಾಪಿತಂ ಮಯಾ ।
ಪೂಜಯಾಮಿ ತತೋ ಭಕ್ತ್ಯಾ ದೇವಂ ಪಶುಪತಿಂ ಹರಂ ॥ ೨೭೭ ॥
ಬ್ರಹ್ಮವಿದ್ಯಾ ಸಮೋಪೇತೋ ಭಿಕ್ಷಾನ್ನಕೃತಭೋಜನಃ ।
ಬ್ರಹ್ಮಚರ್ಯ ಸಮೋಪೇತಸ್ತ್ರಿಕಾಲಂ ಚ ಜಪಂಛಿವಂ ॥ ೨೭೮ ॥
ತತಸ್ತೇನ ಪ್ರಭಾವೇನ ಸಂಜಾತೋಽಹಂ ಭವಾಂತರೇ ।
ಸಾರ್ವಭೌಮೋ ಮಹೀಪಾಲೋ ಜಾತಿಸ್ಮರಣಸಂಯುತಃ ॥ ೨೭೯ ॥
ತತಃ ಸಂಖ್ಯಾವಿಹೀನಾಶ್ಚ ಪ್ರಾಸಾದಾಃ ಕಾರಿತಾ ಮಯಾ ।
ತ್ರಿಣೇತ್ರಸ್ಯ ಮಹಾರಾಜ ಕೈಲಾಸಶಿಖರೋಪಮಾಃ ॥ ೨೮೦ ॥
ತಥಾ ನಿರೂಪಿತಾ ಪೂಜಾ ಬಹುಪುಷ್ಪಸಮುದ್ಭವಾ ।
ನಾಽಸ್ತ್ಯತ್ಕಿಂಚಿತ್ಕರೋಮ್ಯತ್ರ ಧರ್ಮಂ ದಾನಾದಿಕಂ ನೃಪ ॥ ೨೮೧ ॥
ತತಃ ಕಾಲೇನ ಮಹತಾ ತುಷ್ಟೋ ಮೇ ಶಶಿಶೇಖರಃ ।
ತತಃ ಪ್ರೋವಾಚ ರಾಜರ್ಷೇ ಪ್ರಹಸಂಛ್ಲಕ್ಷ್ಣಯಾ ಗಿರಾ ॥ ೨೮೨ ॥

---

೨೭೫. ಕೆಲವು ಕಾಲದಮೇಲೆ ಮರಣವು ಸಂಭವಿಸಲು ನಾನು ವೈದಿಶ ಪಟ್ಟಣದಲ್ಲಿ ಪೂರ್ವಜಾತಿಯ ಸ್ಮರಣೆಯುಳ್ಳ ಬ್ರಾಹ್ಮಣನಾಗಿ ಜನಿಸಿದೆನು.

೨೭೬–೨೭೭. ಬಳಿಕ ನನಗೆ ಶಿವನಲ್ಲಿ ಅಧಿಕ ಭಕ್ತಿಯುಂಟಾಯಿತು. ಭಿಕ್ಷಾಟನಮಾಡಿ ಬಹು ಧನವನ್ನು ಯಾಚನೆಯಿಂದ ಸಂಗ್ರಹಿಸಿ ಪ್ರಾಸಾದವನ್ನು ರಚಿಸಿ ಲಿಂಗವನ್ನು ಸ್ಥಾಪಿಸಿ ಭಕ್ತಿಯಿಂದ ಪಶುಪತಿಯನ್ನು ಪೂಜಿಸುತ್ತಿದ್ದೆನು.

೨೭೮. ವೇದಾಂತವನ್ನು ಓದಿದವನೂ, ಭಿಕ್ಷಾನ್ನವನ್ನು ಭುಂಜಿಸುವವನೂ, ಬ್ರಹ್ಮಚಾರಿಯೂ ಆಗಿ ತ್ರಿಕಾಲದಲ್ಲಿ ಶಿವಮಂತ್ರವನ್ನು ಜಪಿಸುತ್ತಿದ್ದೆನು.

೨೭೯. ಬಳಿಕ ನಾನು ಅದರ ಪ್ರಭಾವದಿಂದ ಮತ್ತೊಂದು ಜನ್ಮದಲ್ಲಿ ಜಾತಿಸ್ಮರಣೆಯುಳ್ಳ ಚಕ್ರವರ್ತಿಯಾದೆನು.

೨೮೦. ಅನಂತರ ನಾನು ಮಹೇಶ್ವರನಿಗೆ ಕೈಲಾಸಶಿಖರದಂತಿರುವ ಅನೇಕ ಪ್ರಾಸಾದಗಳನ್ನು ನಿರ್ಮಿಸಿದೆನು.

೨೮೧. ಹಾಗೆಯೇ ಅನೇಕ ಪುಷ್ಪಗಳಿಂದ ರಚಿಸಿದ ಅವನ ಪೂಜೆಯನ್ನು ನೋಡಿದೆನು. ಇತರ ದಾನಧರ್ಮಾದಿಗಳನ್ನು ಮಾಡಲಿಲ್ಲ.

೨೮೨. ರಾಜರ್ಷಿಯೆ! ಬಳಿಕ ಬಹುಕಾಲದ ಮೇಲೆ ಸಂತುಷ್ಟನಾದ ಚಂದ್ರಶೇಖರನು ನಗುತ್ತ ಮೃದುವಚನದಿಂದ ಇಂತೆಂದನು.

ಜಯದತ್ತ ಪ್ರತುಷ್ಟೋಽಸ್ಮಿ ತವ ಪಾರ್ಥಿವ ಸತ್ತಮ ।
ಭಕ್ತ್ಯಾಽನಯಾ ದ್ರುತಂ ಬ್ರೂಹಿ ಕಿಂ ತೇ ಯಚ್ಛಾಮಿ ವಾಂಛಿತಂ ॥ ೨೮೩ ॥
ಪ್ರಣಿಪತ್ಯ ತತೋಽಷ್ಟಾಂಗಂ ಸ್ತುತ್ವಾ ಚೈವ ಪೃಥಗ್ವಿಧಂ ।
ಮಯಾ ಪ್ರೋಕ್ತೋ ಹರೋ ರಾಜನ್ ಕುರುಮಾಮಜರಾಽಮರಂ ।
ಸ ತಥೇತಿ ಪ್ರತಿಜ್ಞಾಯ ಗತೋಽಂತರ್ಧಾನಮೇವ ಹಿ ॥ ೨೮೪ ॥
ಅಪ್ರಮೇಯ ಗತಿರ್ದೇವಶ್ಚತುರ್ದಶಜಗತ್ಪತಿಃ ।
ತತೋಽಹಂ ತುಷ್ಟಿಸಂಯುಕ್ತೋ ಜರಾಮರಣವರ್ಜಿತಃ ।
ವಿಚರಾಮಿ ಮಹೀಪೃಷ್ಠೇ ಸ್ವೇಚ್ಛಯಾ ಶತ್ರುವರ್ಜಿತಃ ॥ ೨೮೫ ॥
ತತಃ ಕಾಲೇನ ಮಹತಾ ಗತೇನ ನೃಪಸತ್ತಮ ।
ಬಹುಕಾಮಾಗ್ನಿಸಂತಪ್ತಃ ಶಿವಭಕ್ತಿವಿವರ್ಜಿತಃ ॥ ೨೮೬ ॥
ಯಾಂ ಯಾಂ ಪಶ್ಯಾಮಿ ರೂಪಾಢ್ಯಾಂ ಪರನಾರೀಂ ಮನೋರಮಾಂ ।
ತಾಂ ತಾಂ ನಿರೀಕ್ಷ್ಯ ಸುಚಿರಂ ಧರ್ಷಯಾಮಿ ತತಃ ಪರಂ ॥ ೨೮೭ ॥
ಧರ್ಮರಾಜಭಯತ್ಯಕ್ತಃ ಪಾರ್ಥಿವತ್ವಂ ಸಮಾಶ್ರಿತಃ ॥ ೨೮೮ ॥
ಏತಸ್ಮಿನ್ನಂತರೇ ರಾಜನ್ ಮಮ ಪಾಪೇನ ಕರ್ಮಣಾ ।
ಹಾಹಾಕಾರಸ್ತತೋ ಜಾತಃ ಸಮಗ್ರೇ ಧರಣೀತಲೇ ॥ ೨೮೯ ॥
ಏತಸ್ಮಿನ್ನಂತರೇ ಪ್ರಾಪ್ತೋ ಧರ್ಮರಾಜಃ ಶಿವಾಂತಿಕಂ ।
ಅಬ್ರವೀತ್ಪ್ರಣಿಪತ್ಯೋಚ್ಚೈರ್ದುಃಖಿತಸ್ತದನಂತರಂ ॥ ೨೯೦ ॥

---

೨೮೩. ಜಯದತ್ತ! ನಿನ್ನ ಭಕ್ತಿಯಿಂದ ಸಂತುಷ್ಟನಾಗಿದ್ದೇನೆ. ನಿನಗೆ ಯಾವ ಇಷ್ಟಾರ್ಥವನ್ನೀಯಲಿ.

೨೮೪–೨೮೫. ದೊರೆಯೆ! ನಾನು ಹರನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಸ್ತುತಿಸಿ, ಸ್ವಾಮಿ! ನನ್ನನ್ನು ಜರಾಮರಣವಿಲ್ಲದವನನ್ನಾಗಿ ಮಾಡೆಂದು ಬೇಡಿಕೊಂಡೆನು. ತಿಳಿಯಲಾಗದ ಗಮನವುಳ್ಳವನೂ, ಹದಿನಾಲ್ಕು ಲೋಕಗಳಿಗೆ ಒಡೆಯನೂ ಆದ ಶಂಕರನು ಹಾಗೆಯೇ ಆಗಲೆಂದು ಹೇಳಿ ಕಣ್ಮರೆಯಾದನು. ಅನಂತರ ನಾನು ಸಂತೋಷಗೊಂಡವನೂ, ಜರಾಮರಣವಿಲ್ಲದವನೂ, ಶತ್ರುರಹಿತನೂ ಆಗಿ ಸ್ವೇಚ್ಛೆಯಿಂದ ಭೂಮಿಯಲ್ಲಿ ಸಂಚರಿಸುತ್ತಿದ್ದೆನು.

೨೮೬–೨೮೮. ಅನಂತರ ಬಹುಕಾಲ ಕಳೆಯಲು ದೊರೆಯಾದ ನಾನು ಅತ್ಯಂತ ಕಾಮಪೀಡಿತನೂ, ಶಿವಭಕ್ತಿರಹಿತನೂ ಯಮ ಭಯವಿಲ್ಲದವನೂ ಆಗಿ ಸುಂದರಿಯೂ, ಮನೋಹರಳೂ ಆದ ಯಾವ ಯಾವ ಪರನಾರಿಯನ್ನು ನೋಡುವೆನೊ, ಅವರನ್ನೆಲ್ಲ ಬಹುಕಾಲ ಕೆಡಿಸಿದೆನು.

೨೮೯–೨೯೦. ದೊರೆಯೆ! ಈ ಸಮಯದಲ್ಲಿ ನನ್ನ ಪಾಪಕಾರ್ಯದಿಂದ ಸಮಗ್ರಭೂಮಂಡಲದಲ್ಲಿ ಹಾಹಾಕಾರವುಂಟಾಯಿತು. ಈ ಸಮಯದಲ್ಲಿ ಯಮನು ಶಿವನ ಸನ್ನಿಧಿಗೆ ಬಂದು ನಮಸ್ಕರಿಸಿ ಹೀಗೆಂದನು.

ತ್ವಯಾ ದೇವ ಮಹೀಪಾಲೋ ಜಯದತ್ತೋ ಮಹೀತಲೇ ।
ಯೋ ನಿರ್ಮಿತಃ ಪ್ರತುಷ್ಟೇನ ಜರಾಮರಣವರ್ಜಿತಃ ॥ ೨೯೧ ॥
ಸ ಸತೀನಾಂ ಸತೀತ್ವಂ ಚ ಬಲಾನ್ನಾಶಯತೇ ಕುಧೀಃ ।
ಸರ್ವೋ ಭೂಪಭಯಾಲ್ಲೋಕಃ ಸರ್ವಧರ್ಮಬಹಿಷ್ಕೃತಃ ॥ ೨೯೨ ॥
ಸಂಜಾತೋ ವಿಬುಧಶ್ರೇಷ್ಠ ನ ಸ್ವಭಾವಾತ್ಕಥಂಚನ ।
ತಸ್ಯೈಕಮಪಿ ಮೇ ನಾಽಸ್ತಿ ಭಯಂ ಸತ್ಯಂ ಬ್ರವೀಮಿ ತೇ ॥ ೨೯೩ ॥
ತಸ್ಮಾದ್ವಾರಯ ತಂ ಶೀಘ್ರಂ ಯಾವದ್ಧರ್ಮೋ ನ ನಶ್ಯತಿ ।
ಮರ್ತ್ಯಲೋಕಾದಶೇಷೇಣ ಸತೀನಾಂ ಧರ್ಷಣೇನ ಚ ॥ ೨೯೪ ॥
ಏವಮುಕ್ತಸ್ತತೋ ದೇವಃ ಕೋಪೇನ ಮಹತಾನ್ವಿತಃ ।
ಶಶಾಪ ಮಾಂ ಸಮಾನೀಯ ವೇಪಮಾನಂ ಕೃತಾಂಜಲಿಂ ॥ ೨೯೫ ॥
ಯಸ್ಮಾದ್ದುಷ್ಟಸಮಾಚಾರ ಕೃತಂ ಕರ್ಮ ವಿಗರ್ಹಿತಂ ।
ತಸ್ಮಾನ್ಮಚ್ಛಾಪನಿರ್ದಗ್ಧಃ ಕಮಠೋ ವೈ ಭವಿಷ್ಯಸಿ ॥ ೨೯೬ ॥
ತತೋ ಮಯಾ ಸುದೀನೇನ ಪ್ರಾರ್ಥಿತಃ ಪರಮೇಶ್ವರಃ ।
ಶಾಪಾಂತಂ ಮೇ ಕುರುಷ್ವೇಶ ಕುರುಷ್ವ ಚ ದಯಾಂ ಮಮ ॥ ೨೯೭ ॥
ತತಸ್ತೇನ ಪುನಃ ಪ್ರೋಕ್ತಂ ಕಲ್ಪಾಂತೇ ಷಷ್ಠಿಸಂಜ್ಞಿತೇ ।
ಸ್ವಶರೀರಂ ಪುನಃ ಪ್ರಾಪ್ಯ ಮದ್ಗಣಸ್ತ್ವಂ ಭವಿಷ್ಯಸಿ ॥ ೨೯೮ ॥

---

೨೯೧. ಸ್ವಾಮಿ! ನೀನು ಭೂಮಿಯಲ್ಲಿ ಜಯದತ್ತನ ವಿಷಯದಲ್ಲಿ ಸಂತುಷ್ಟನಾಗಿ ಅವನನ್ನು ಜರಾಮರಣವಿಲ್ಲದವನನ್ನಾಗಿ ಮಾಡಿರುವೆ.

೨೯೨–೨೯೩. ದುಷ್ಟಬುದ್ಧಿಯುಳ್ಳ ಅವನು ಪತಿವ್ರತೆಯರ ಪಾತಿವ್ರತ್ಯವನ್ನು ಬಲಾತ್ಕಾರದಿಂದ ನಾಶಗೊಳಿಸುವನು. ಎಲ್ಲ ಜನರೂ ದೊರೆಯ ಭಯದಿಂದ ಸಕಲ ಧರ್ಮಬಹಿಷ್ಕೃತರಾಗಿರುವರು. ಸ್ವಭಾವದಿಂದ ಹಾಗೆ ಆಗಲಿಲ್ಲ. ಆ ಜಯದತ್ತನಿಗೆ ನನ್ನಿಂದ ಯಾವ ಭಯವೂ ಇಲ್ಲ. ನಿಜವಾಗಿಯೂ ನಿನಗೆ ಹೇಳುತ್ತೇನೆ.

೨೯೪. ಆದುದರಿಂದ ಸತಿಯರ ತಿರಸ್ಕಾರದಿಂದ ಭೂಲೋಕದಲ್ಲಿ ಧರ್ಮವು ನಾಶವಾಗದಿರುವಷ್ಟರಲ್ಲಿ ಶೀಘ್ರವಾಗಿ ಅವನನ್ನು ತಡೆ.

೨೯೫. ಯಮನು ಹೀಗೆನ್ನಲು, ಶಿವನು ಅತ್ಯಂತ ಕೋಪಗೊಂಡು ನನ್ನನ್ನು ಕರೆಯಿಸಿ ಕೈಮುಗಿದುಕೊಂಡು ನಡುಗುತ್ತಿರುವ ನನ್ನನ್ನು ಹೀಗೆ ಶಪಿಸಿದನು.

೨೯೬. ದುರುಳ! ನೀನು ನಿಂದ್ಯವಾದ ಕಾರ್ಯವನ್ನೆಸಗಿರುವುದರಿಂದ ನನ್ನ ಶಾಪದಿಂದ ದಗ್ಧನಾಗಿ ಆಮೆಯಾಗುವೆ.

೨೯೭. ತರುವಾಯ ಅತಿ ದೀನನಾದ ನಾನು ಈಶ್ವರ! ನನ್ನ ಶಾಪವನ್ನು ಕೊನೆಗಾಣಿಸು. ದಯೆಮಾಡು ಎಂದು ಬೇಡಿಕೊಂಡೆನು.

೨೯೮. ಬಳಿಕ ಅವನು ಅರುವತ್ತನೆ ಕಲ್ಪದ ಕೊನೆಯಲ್ಲಿ ನಿನ್ನ ಶರೀರವನ್ನು ಮರಳಿ ಹೊಂದಿ ನನ್ನ ಗಣನಾಗುವೆ.

ಏತಸ್ಮಿನ್ನಂತರೇ ಕೂರ್ಮಃ ಸಂಜಾತೋಽಹಂ ಮಹೀಪತೇ ।
ಸಮುದ್ರಸಲಿಲಂ ಪ್ರಾಪ್ಯ ಸಂಸ್ಥಿತೋ ದುಃಖಿತೋಽನಿಶಂ ॥ ೨೯೯ ॥
ಕಸ್ಯಚಿತ್ತ್ವಥ ಕಾಲಸ್ಯ ರಾಜಂಸ್ತ್ವಂ ಭೂತಲೇ ಸ್ಥಿತಃ ।
ಯಜನಾರ್ಥಂ ಸಮಾನೀತಃ ಸಮುದ್ರಸಲಿಲಸ್ತ್ವಯಾ ॥ ೩೦೦ ॥
ಸ್ಥಾಪಿತೋ ಭೂಮಿಪೃಷ್ಠೇತು ಮಂತ್ರೈಃ ಸಂಸ್ತಂಭಿತಸ್ತಥಾ ।
ಮಮೋಪರಿ ತತೋ ಯಜ್ಞಾಃ ಕೃತಾಃ ಶತಸಹಸ್ರಶಃ ॥ ೩೦೧ ॥
ಕ್ರಿಯಮಾಣೈಶ್ಚ ಯೈರ್ದಗ್ಧಾ ಮಮ ಪೃಷ್ಠಿಃ ಸಮಂತತಃ ।
ದಹ್ಯತೋಽಪಿ ಮಹಾರಾಜ ತೇನ ಯಜ್ಞಾಗ್ನಿನಾ ತದಾ ।
ಪ್ರಸಾದನಾನ್ಮಹೇಶಸ್ಯ ನ ಮೇ ಪ್ರಾಣಾತ್ಯಯೋಽಭವತ್ ॥ ೩೦೨ ॥
ಕೇವಲಂ ಜಾಯತೇ ದಾಹೋ ಯಥಾ ಪಾಪಂ ಪುರಾಕೃತಂ ।
ಅನುಭೂತಂ ಚ ತತ್ಸರ್ವಂ ಹರಕೋಪಾದಸಂಶಯಂ ॥ ೩೦೩ ॥
ಅಥ ಪ್ರಾಪ್ತೇ ದಿವಂ ಚೈವ ತ್ವಯಿ ಪಾರ್ಥಿವಸತ್ತಮ ।
ಏಕಾರ್ಣವೇತು ಸಂಜಾತೇ ಜಲಪೂರ್ಣೇ ಧರಾತಲೇ ।
ಸಂಪ್ರಾಪ್ತಃ ಪ್ಲವಮಾನಸ್ತು ತತೋಽಹಂ ಮಾನಸಂ ಸರಃ ॥ ೩೦೪ ॥
ಷಟ್ಪಂಚಾಶತ್ಪ್ರಮಾಣೇನ ಕಲ್ಪಾ ಮಮ ಚ ಸಂಸ್ಥಿತಾಃ ।
ಚತುರ್ಭಿರಪರೈರ್ನೋಕ್ಷ್ಣಃ ಕೂರ್ಮತ್ವಾತ್ಸಂಭವಿಷ್ಯತಿ ॥ ೩೦೫ ॥

---

೨೯೯. ದೊರೆಯೆ! ಇಷ್ಟರಲ್ಲಿ ನಾನು ಕೂರ್ಮನಾಗಿ ಸಮುದ್ರಜಲವನ್ನು ಸೇರಿ ಯಾವಾಗಲೂ ದುಃಖಗೊಳ್ಳುತ್ತಿದ್ದೆನು.

೩೦೦–೩೦೧. ದೊರೆಯೆ! ಕೆಲವು ಕಾಲದ ಮೇಲೆ ಭೂಲೋಕದಲ್ಲಿರುವ ನೀನು ಯಾಗಕ್ಕಾಗಿ ಸಮುದ್ರದ ನೀರನ್ನು ತೆಗೆದುಕೊಂಡುಬಂದು ಅವನ್ನು ಮಂತ್ರಗಳಿಂದ ಭೂಮಿಯಲ್ಲಿ ತಡೆದು ನನ್ನ ಮೇಲೆ ಸಾವಿರಾರು ಯಜ್ಞಗಳನ್ನು ಮಾಡಿದೆ.

೩೦೨. ಆ ಯಜ್ಞಗಳನ್ನು ಮಾಡುವುದರಿಂದ ನನ್ನ ಬೆನ್ನು ಎಲ್ಲೆಡೆಯಲ್ಲಿಯೂ ಸುಟ್ಟುಹೋಯಿತು. ಯಜ್ಞಾಗ್ನಿಯಿಂದ ಹಾಗೆ ಸುಡುತ್ತಿದ್ದರೂ ಈಶ್ವರನ ಅನುಗ್ರಹದಿಂದ ನಾನು ಸಾಯಲಿಲ್ಲ.

೩೦೩. ಶರೀರವು ಮಾತ್ರ ಸುಡುತ್ತಿದ್ದಿತು. ಹಿಂದೆ ಪಾಪವನ್ನು ಮಾಡಿರುವುದರಿಂದ ಅದನ್ನೆಲ್ಲ ಹರನ ಕೋಪದಿಂದ ಆ ಯಾತನೆಗಳನ್ನೆಲ್ಲ ಅನುಭವಿಸಿದೆನು.

೩೦೪. ಪಾರ್ಥಿವೋತ್ತಮ! ನೀನು ಸ್ವರ್ಗಕ್ಕೆ ಹೋಗಲು ನೀರು ತುಂಬಿ ಭೂಮಿಯು ಸಮುದ್ರದೊಡನೆ ಒಂದಾಗಲು ನಾನು ಈಜುತ್ತ ಮಾನಸ ಸರೋವರಕ್ಕೆ ಬಂದೆನು.

೩೦೫. ಈಗ ನನಗೆ ಐವತ್ತಾರು ಕಲ್ಪಗಳು ಕಳೆದುವು. ಇನ್ನು ನಾಲ್ಕು ಕಲ್ಪಗಳಲ್ಲಿ ಈ ಕೂರ್ಮತ್ವವು ಹೋಗುವುದು.

ಏತತ್ತೇ ಸರ್ವಮಾಖ್ಯಾತಂ ದೀರ್ಘಾಯುಷ್ಯಸ್ಯ ಕಾರಣಂ ।
ಹರಪ್ರಸಾದಕರಣಾದ್ಬಹುಪುಷ್ಪಾರ್ಚನಾದ್ವಿಭೋಃ ॥ ೩೦೬ ॥
ಕೂರ್ಮತ್ವಂ ಚ ಯಥಾ ಜಾತಂ ಕಾಮದೇವಸ್ಯ ಕೋಪತಃ ।
ಸತ್ವಂ ವದ ಮಹಾಭಾಗ ಗೃಹಾಯಾತಸ್ಯ ಕಿಂ ತವ ।
ಕರೋಮಿ ಸಾಂಪ್ರತಂ ಕೃತ್ಯಂ ಶತ್ರೋರಪಿ ಹೃದಿ ಸ್ಥಿತಂ ॥ ೩೦೭ ॥
ತ್ವಯಾ ಮೇ ಸುಚಿರಂ ಕಾಲಂ ದಗ್ಧಾ ಪೃಷ್ಠಿರ್ಮಖಾಗ್ನಿನಾ ।
ಅದ್ಯಾಽಪಿ ಚ ಪ್ರಪಶ್ಯಾಮಿ ತಾಂ ಜ್ವಲಂತೀಮಿವ ಸ್ಥಿತಾಂ ॥ ೩೦೮ ॥
ಏತಸ್ಮಾತ್ಕಾರಣಾನ್ನಷ್ಟಸ್ತ್ವಾಂ ದೃಷ್ಟ್ವಾಽಹಂ ಮಹೀಪತೇ ।
ಕಸ್ಮಾತ್ತ್ವಂ ನ ಗತಃ ಸ್ವರ್ಗಂ ವಿಮಾನೇಽಪಿ ಸಮಾಗತೇ ।
ಏತಸ್ಮಾತ್ಕಾರಣಾದ್ಧರ್ಮಂ ಪ್ರಕುರ್ವಂತಿ ನರಾಧಿಪಾಃ ॥ ೩೦೯ ॥

ಇಂದ್ರದ್ಯುಮ್ನ ಉವಾಚ:—

ಸ್ವರ್ಗಸ್ಥಾನೇ ಚ ಲೋಕಾನಾಂ ನಿತ್ಯಂ ಚ ಪತನಾದ್ಭಯಂ ।
ತನ್ಮಯಾಸ್ಯಾಮ್ಯಹಂ ತತ್ರ ಯತಿಷ್ಯಾಮಿ ವಿಮುಕ್ತಯೇ ॥ ೩೧೦ ॥
ಸ ತ್ವಂ ಕರೋಷಿ ಚೇತ್ಕೃತ್ಯಂ ಗೃಹಾಯಾತಸ್ಯ ಮೇ ಸಖೇ ।
ಚಿರಂತನಂ ಕಥಯ ಮೇ ಯದ್ಯಸ್ತಿ ತವ ಸೌಹೃದಂ ॥ ೩೧೧ ॥

---

೩೦೬–೩೦೭. ಹೀಗೆ ಪುಷ್ಪದಿಂದ ಹರನನ್ನು ಪೂಜಿಸಿ ಆತನ ಅನುಗ್ರಹದಿಂದ ಚಿರಂಜೀವಿಯಾದುದನ್ನೂ, ಕಾಮದೇವನ ಕೋಪದಿಂದ ಕೂರ್ಮನಾದುದನ್ನೂ ನಿನಗೆ ಹೇಳಿರುವೆನು. ಮಹಾಭಾಗ್ಯಶಾಲಿಯೆ! ಶತ್ರುವಾದರೂ ಮನೆಗೆ ಬಂದ ನಿನಗೆ ಈಗ ಏನನ್ನು ಮಾಡಲಿ. ಮನಸ್ಸಿನಲ್ಲಿರುವುದನ್ನು ನನಗೆ ಹೇಳು.

೩೦೮. ನೀನು ಬಹುಕಾಲ ಯಜ್ಞಾಗ್ನಿಯಿಂದ ನನ್ನ ಬೆನ್ನನ್ನು ಸುಟ್ಟಿರುವೆ. ಈಗಲೂ ಆ ಬೆಂಕಿಯು ಉರಿಯುತ್ತಿರುವಂತೆಯೇ ತೋರುವುದು.

೩೦೯. ದೊರೆಯೆ! ಈ ಕಾರಣದಿಂದ ನಾನು ನಿನ್ನನ್ನು ನೋಡಿ ಅದೃಶ್ಯನಾದೆನು. ನೀನು ವಿಮಾನವು ಬಂದರೂ ಸ್ವರ್ಗಕ್ಕೇಕೆ ಹೋಗಲಿಲ್ಲ? ದೊರೆಗಳು ಈ ಸ್ವರ್ಗಕ್ಕಾಗಿಯೇ ಧರ್ಮವನ್ನಾಚರಿಸುವರು.

೩೧೦. ಇಂದ್ರದ್ಯುಮ್ನನು ಹೇಳುತ್ತಾನೆ:—ಸ್ವರ್ಗದಲ್ಲಿರುವ ಜನರಿಗೆ ಯಾವಾಗಲೂ ಪತನ ಭಯವಿರುತ್ತದೆ. ಆದುದರಿಂದ ನಾನು ಅಲ್ಲಿಗೆ ಹೋಗುವುದಿಲ್ಲ. ಮುಕ್ತಿಗಾಗಿ ಯತ್ನಿಸುವೆನು.

೩೧೧. ನೀನು ಮನೆಗೆ ಬಂದ ನನ್ನ ಕಾರ್ಯವನ್ನು ಮಾಡಿಕೊಡುವುದಾದರೆ ನಿನಗಿಂತ ಚಿರಂಜೀವಿಯಾದ ಮಿತ್ರನಿದ್ದರೆ ಅವನನ್ನು ನನಗೆ ಹೇಳು.

ಕೂರ್ಮ ಉವಾಚ :—

ಲೋಮಶೋ ನಾಮ ವಿಪ್ರರ್ಷಿಃ ಸ ಮತ್ತೋಽಸ್ತಿ ಚಿರಂತನಃ ।
ಶ್ರೂಯತೇ ಸ ಮಯಾ ದೃಷ್ಟೋ ನದೀತೀರಂ ಸಮಾಶ್ರಿತಃ ॥ ೩೧೨ ॥

ಇಂದ್ರದ್ಯುಮ್ನ ಉವಾಚ :—

ತದಾಗಚ್ಛತ ಗಚ್ಛಾಮೋ ಯತಃ ಸರ್ವೇ ದ್ರುತಂ ಸ್ವಯಂ ।
ಪೃಚ್ಛಾಮೋ ಬಹುಕಾಲಸ್ಯ ಜೀವಿತಸ್ಯ ಚ ಕಾರಣಂ ॥ ೩೧೩ ॥
ಅಥ ತೇ ಸಹಿತಾಃ ಪಂಚ ವ್ಯೋಮಮಾರ್ಗೇಣ ಸಂಸ್ಥಿತಾಃ ।
ಅಥ ತೇ ದದೃಶುಸ್ತತ್ರ ಲೋಮಶಂ ಚ ನಿರಾಶ್ರಯಂ ॥ ೩೧೪ ॥
ಸ್ವಾಧ್ಯಾಯನಿರತಂ ದಾಂತಂ ಜಪಹೋಮಪರಾಯಣಂ ।
ಸವ್ಯಹಸ್ತೇ ತೃಣೌಘೇನ ಛಾಯಾರ್ಥಂ ವಿಧೃತೇನ ಚ ॥ ೩೧೫ ॥
ದಧತಂ ಚಾಽಕ್ಷಮಾಲಾಂ ಚ ದಕ್ಷಿಣೇನ ಕರೇಣ ಹಿ ।
ತೇ ತಂ ದೃಷ್ಟ್ವಾ ಮಹಾತ್ಮಾನಂ ಕೃತ್ವಾ ತಸ್ಯ ಪ್ರದಕ್ಷಿಣಾಂ ।
ಉಪವಿಷ್ಟಾಸ್ತತಃ ಸರ್ವೇ ಸ್ವಾಗತೇನಾಽಭಿನಂದಿತಾಃ ॥ ೩೧೬ ॥
ಪೃಷ್ಟಾಸ್ತೇನ ತತಶ್ಚೈವ ಕೇ ಯೂಯಂ ಕಿಮಿಹಾಽಽಗತಾಃ ।
ವಿಶ್ರಬ್ಧಂ ಕಥ್ಯತಾಂ ಮಹ್ಯಂ ಯೇನ ಸರ್ವಂ ಕರೋಮ್ಯಹಂ ॥ ೩೧೭ ॥

---

೩೧೨. ಕೂರ್ಮನು ಹೇಳುತ್ತಾನೆ:—ಲೋಮಶನೆಂಬ ವಿಪ್ರರ್ಷಿಯು ನನಗಿಂತ ಚಿರಂಜೀವಿಯಾಗಿರುವನೆಂದು ಕೇಳಿದ್ದೇನೆ. ನದೀತೀರದಲ್ಲಿರುವ ಅವನನ್ನು ನಾನು ನೋಡಿರುವೆನು.

೩೧೩. ಇಂದ್ರದ್ಯುಮ್ನನು ಹೇಳುತ್ತಾನೆ:—ಹಾಗಾದರೆ ಬನ್ನಿರಿ. ಎಲ್ಲರೂ ಅವನೆಡೆಗೆ ಬೇಗನೆ ಹೋಗೋಣ. ಅವನು ಬಹುಕಾಲದಿಂದ ಜೀವಿಸಿರಲು ಕಾರಣವನ್ನು ಕೇಳೋಣ.

೩೧೪–೩೧೬. ಬಳಿಕ ಅವರು ಐವರೂ ಒಟ್ಟಿಗೆ ಆಕಾಶಮಾರ್ಗದಿಂದ ಹೊರಟು ಆಶ್ರಯವಿಲ್ಲದವನೂ, ವೇದಾಧ್ಯಯನನಿರತನೂ, ಜಿತೇಂದ್ರಿಯನೂ, ಜಪಹೋಮದಲ್ಲಿ ಆಸಕ್ತನೂ, ನೆರಳಿಗಾಗಿ ಎಡಗೈಯಲ್ಲಿ ಹುಲ್ಲಿನ ಕಟ್ಟನ್ನು ಹಿಡಿದವನೂ, ಬಲಗೈಯಲ್ಲಿ ಜಪಮಾಲೆಯನ್ನು ಹಿಡಿದಿರುವವನೂ ಆದ ಆ ಮಹಾತ್ಮನಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಕುಳಿತುಕೊಳ್ಳಲು ಮುನಿಯು ಅವರನ್ನು ಸ್ವಾಗತದಿಂದ ಅಭಿನಂದಿಸಿದನು.

೩೧೭. ಬಳಿಕ, "ನೀವು ಯಾರು? ಏತಕ್ಕೆ ಇಲ್ಲಿಗೆ ಬಂದಿರಿ? ನನ್ನಲ್ಲಿ ವಿಶ್ವಾಸವಿಟ್ಟು ಹೇಳಿರಿ. ಅದೆಲ್ಲವನ್ನೂ ಮಾಡುವೆನು" ಎಂದು ಕೇಳಿದನು.

ಕೂರ್ಮ ಉವಾಚ:—

ಮಾರ್ಕಂಡೋ ನಾಮ ವಿಪ್ರರ್ಷಿಃ ಸಪ್ತಕಲ್ಪಸ್ಮರೋಽಪ್ಯಯಂ ।
ಇಂದ್ರದ್ಯುಮ್ನೇನ ಚಾಽನೀತೋ ಭೂಭುಜಾಽನೇನ ಸನ್ಮನೇ ॥ ೩೧೮ ॥
ಬಕಸ್ಯಾಽಸ್ಯ ಸಮೀಪೇತು ನಾಡೀಜಂಘಸ್ಯ ಧೀಮತಃ ।
ಚಿರಾಯುರಿತಿ ವಿಜ್ಞಾಯ ಆತ್ಮನಶ್ಚಾಽಽಯುರುತ್ತಮಂ ।
ಇಂದ್ರದ್ಯುಮ್ನಸ್ಯ ವಾರ್ತಾರ್ಥಂ ದ್ವಿಗುಣಾಯುಷಮಾತ್ಮನಃ ॥ ೩೧೯ ॥
ಅಥ ತೇನ ನ ವಿಜ್ಞಾತೋ ಯದಾ ಸ ಪೃಥಿವೀಪತಿಃ ।
ತದಾ ದ್ವಾವಪಿ ಚಾಯಾತಾ ಉಲೂಕಸ್ಯಾಽಸ್ಯ ಸನ್ನಿಧೌ ॥ ೩೨೦ ॥
ದ್ವಿಗುಣಾಸ್ತತ್ಪ್ರಮಾಣೇನ ಕಲ್ಪಾಶ್ಚಾಽಸ್ಯ ಮಹಾತ್ಮನಃ ।
ವರ್ತಂತೇ ನೈವ ವಿಜ್ಞಾತೋ ನೃಪೋ ಹ್ಯೇತೇನ ಸದ್ದ್ವಿಜ ॥ ೩೨೧ ॥
ತತಸ್ತ್ರಯೋಽಪಿ ಚಾಽನೀತಾ ಗೃಧ್ರರಾಜಸ್ಯ ಚಾಂತಿಕಂ ॥ ೩೨೨ ॥
ಷಟ್ಪಂಚಾಶತ್ಪ್ರಮಾಣೇನ ಕಲ್ಪಾಶ್ಚಾಽಸ್ಯ ಮಹಾತ್ಮನಃ ।
ವರ್ತಂತೇ ನೈವ ವಿಜ್ಞಾತೋ ನೃಪೋ ಹ್ಯೇತೇನ ಸದ್ದ್ವಿಜ ॥ ೩೨೩ ॥
ಚತ್ವಾರೋಽಪಿ ಸಮಾನೀತಾ ಏತೇನೈವ ಮಮಾಂತಿಕಂ ।
ಚಿರಾಯುಷಂ ಚ ಮಾಂ ಜ್ಞಾತ್ವಾ ಮಿತ್ರಭಾವೇನ ತೇ ದ್ವಿಜ ॥ ೩೨೪ ॥
ಮಯಾಪ್ಯಸೌ ಪರಿಜ್ಞಾತೋ ದೂರಾದೇವ ಸಮಾಗತಃ ।
ಇಂದ್ರದ್ಯುಮ್ನೋ ಧ್ರುವಂ ಹ್ಯೇಷ ದಗ್ಧಾಪೃಷ್ಠಿಃ ಪುರಾ ಮಮ ॥ ೩೨೫ ॥

---

೩೧೮–೩೧೯. ಕೂರ್ಮನು ಹೇಳುತ್ತಾನೆ:—ಇವನು ಏಳು ಕಲ್ಪಗಳನ್ನು ಸ್ಮರಿಸುವ ಮಾರ್ಕಂಡೇಯನೆಂಬ ವಿಪ್ರರ್ಷಿಯು. ಈ ಇಂದ್ರದ್ಯುಮ್ನರಾಜನು ಇವನನ್ನು ಇವನಿಗಿಂತ ಇಮ್ಮಡಿ ಆಯುಸ್ಸುಳ್ಳ ನಾಡೀಜಂಘನೆಂಬ ಈ ಬಕನೆಡೆಗೆ ಇಂದ್ರದ್ಯುಮ್ನನ ವೃತ್ತಾಂತವನ್ನು ತಿಳಿಯಲು ಕರೆದುಕೊಂಡುಬಂದನು.

೩೨೦. ಈ ಬಕನಿಗೆ ಆ ರಾಜನ ವೃತ್ತಾಂತವು ತಿಳಿಯದಿರಲು ಇಬ್ಬರೂ ಸೇರಿ ಈ ಉಲೂಕನ ಬಳಿಗೆ ಬಂದರು.

೩೨೧. ಈ ಉಲೂಕನು ಬಕನಿಗಿಂತ ಇಮ್ಮಡಿ ಕಲ್ಪಗಳ ಆಯುಸ್ಸುಳ್ಳವನಾಗಿದ್ದರೂ ಆ ರಾಜನ ವೃತ್ತಾಂತವನ್ನು ತಿಳಿಯಲಿಲ್ಲ.

೩೨೨. ಬಳಿಕ ಮೂವರೂ ಈ ಗೃಧ್ರರಾಜನ ಬಳಿಗೆ ಬಂದರು.

೩೨೩. ಇವನು ಐವತ್ತಾರು ಕಲ್ಪಗಳ ಆಯುಸ್ಸುಳ್ಳವನಾಗಿದ್ದರೂ ಇಂದ್ರದ್ಯುಮ್ನನನ್ನು ತಿಳಿಯಲಿಲ್ಲ.

೩೨೪. ಈ ಗೃಧ್ರನು ನಾನು ಚಿರಂಜೀವಿಯಾಗಿರುವೆನೆಂದು ತಿಳಿದು ಮೈತ್ರಿಯಿಂದ ಈ ನಾಲ್ಕು ಮಂದಿಯನ್ನೂ ನನ್ನೆಡೆಗೆ ಕರೆತಂದನು.

೩೨೫–೩೨೬. ಹಿಂದೆ ಮಂತ್ರಗಳಿಂದ ಭೂಮಿಯ ಕೆಳಗೆ ನನ್ನನ್ನು ತಡೆದು

ಯೇನ ಯಜ್ಞಾಗ್ನಿನಾ ಮಂತ್ರೈಃ ಸ್ತಂಭಯಿತ್ವಾ ಕ್ಷಿತೇರಥಃ ।
ತತೋಽಹಂ ತದ್ಭಯಾನ್ನಷ್ಟೋ ಗೃಧ್ರಾದ್ಯೈಶ್ಚ ನಿವಾರಿತಃ ॥ ೩೨೬ ॥
ಉಪಾಲಂಭೈಸ್ತು ಬಹುಭಿಃ ಪ್ರಣಯಾಜ್ಜಲಮಾವಿಶಂ ।
ಮಯೋಕ್ತೋಽಥ ಸ ಭೂಯೋಽಪಿ ನಾಽಹಂ ತವ ಪರಾಙ್ಮುಖಃ ॥೩೨೭॥
ಇಂದ್ರದ್ಯುಮ್ನೇನ ಮೇ ಪೃಷ್ಠಿರ್ಯೇನ ದಗ್ಧಾ ಮುಖಾಗ್ನಿನಾ ।
ಏತಸ್ಮಿನ್ನಂತರೇ ಸ್ವರ್ಗಾದ್ದೇವದೂತೋ ಮಹಾಮನಾಃ ।
ವಿಮಾನವರಮಾರೂಢಃ ಪ್ರಾಪ್ತಶ್ಚಾಽಸ್ಯ ಮಹಾತ್ಮನಃ ॥ ೩೨೮ ॥
ಕೀರ್ತಿಲೋಪಾಚ್ಚ್ಯುತಃ ಸ್ವರ್ಗಾದಯಮಾಸೀನ್ಮಹೀಪತಿಃ ।
ತತೋ ವಿಮಾನಮಾಯಾತ ಮುಕ್ತಮಾತ್ರೇ ಮಯಾ ದಿವಃ ॥ ೩೨೯ ॥
ಅಥಾಽಸೌ ನ ಗತಃ ಸ್ವರ್ಗಂ ವಿನಾಽಸ್ಮಾಭಿರ್ದ್ವಿಜೋತ್ತಮ ।
ಮಾರ್ಕಂಡೇಯಂ ಪರಿತ್ಯಜ್ಯ ತಿರ್ಯಗ್ಯೋನಿಗತೈಸ್ತ್ರಿಭಿಃ ॥ ೩೩೦ ॥
ಪೃಚ್ಛತೋಽಸ್ಯ ಮಯಾ ಪ್ರೋಕ್ತಮಾಯುಷ್ಯಂ ಚಾಽತ್ಮನಃ ಪುನಃ ।
ಷಣ್ಣವತಿಪ್ರಮಾಣೇನ ಕಲ್ಪಾ ಮೇ ಜೀವತೋ ಗತಾಃ ॥ ೩೩೧ ॥
ಪೃಷ್ಟೋಽಹಂ ಪೂರ್ವಮೇವಾಽತ್ರ ಸಂಸ್ಥಿತಸ್ತವ ಪಾರ್ಶ್ವತಃ ।
ಚಿರಂತನತಮೋ ಬ್ರೂಹಿ ಮಯಾ ತ್ವಂ ತು ನಿವೇದಿತಃ ॥ ೩೩೨ ॥
ಏತಸ್ಮಾತ್ಕಾರಣಾತ್ಪ್ರಾಪ್ತಾ ವಯಂ ಸರ್ವೇ ತವಾಂತಿಕಂ ।
ತಸ್ಮಾದ್ಯತ್ಪೃಚ್ಛತೇ ಭೂಪ ಏಷ ತ್ವಾಂ ತತ್ಪ್ರಕೀರ್ತಯ ॥ ೩೩೩ ॥

---

ಯಜ್ಞಾಗ್ನಿಯಿಂದ ನನ್ನ ಬೆನ್ನನ್ನು ಸುಟ್ಟ ಇಂದ್ರದ್ಯುಮ್ನನೆಂದು ದೂರದಿಂದಲೇ ನೋಡಿ ತಿಳಿದು ಅವನ ಭಯದಿಂದ ಜಲವನ್ನು ಪ್ರವೇಶಿಸಲು ಈ ಗೃಧ್ರಾದಿಗಳು ಬಹಳ ನಿಂದಾವಾಕ್ಯಗಳಿಂದ ನನ್ನನ್ನು ತಡೆದರು. ಆಗ, "ನಾನು ನಿನಗೆ ಅನಭಿಮುಖನಾಗಲಿಲ್ಲ. ಇಂದ್ರದ್ಯುಮ್ನನು ಯಜ್ಞಾಗ್ನಿಯಿಂದ ನನ್ನ ಬೆನ್ನನ್ನು ಸುಟ್ಟಿರುವುದರಿಂದ ಅದೃಶ್ಯನಾದೆ"ನೆಂದೆನು. ಹೀಗೆ ನಾನು ಕೀರ್ತಿಯ ನಾಶದಿಂದ ಸ್ವರ್ಗದಿಂದ ಬಿದ್ದ ಈ ಇಂದ್ರದ್ಯುಮ್ನನ ವೃತ್ತಾಂತವನ್ನು ಹೇಳುತ್ತಿರುವಷ್ಟರಲ್ಲಿಯೇ ಇವನನ್ನು ಮರಳಿ ಸ್ವರ್ಗಕ್ಕೆ ಕರೆದುಕೊಂಡುಹೋಗುವುದಕ್ಕಾಗಿ ದೇವದೂತನು ವಿಮಾನವನ್ನೇರಿ ಬಂದನು.

೩೩೦. ಬಳಿಕ ಇವನು ಮಾರ್ಕಂಡೇಯನನ್ನೂ, ತಿರ್ಯಗ್ಯೋನಿಗಳಾದ ನಮ್ಮನ್ನೂ ಬಿಟ್ಟು ಸ್ವರ್ಗಕ್ಕೆ ಹೋಗಲಿಲ್ಲ.

೩೩೧. ಇವನು ನನ್ನ ಆಯುಸ್ಸಿನ ಪ್ರಮಾಣವನ್ನು ಕೇಳಲು ನಾನು ಜೀವಿಸುತ್ತಿರುವಾಗ ತೊಂಬತ್ತಾರು ಕಲ್ಪಗಳು ಕಳೆದುವು ಎಂದೆನು.

೩೩೨–೩೩೩. ನಿನ್ನ ಬಳಿಯಿರುವ ಮತ್ತೊಬ್ಬ ಚಿರಂಜೀವಿಯನ್ನು ಹೇಳೆನ್ನಲು ನಾನು ನಿನ್ನ ವಿಷಯವನ್ನು ತಿಳಿಸಿದೆನು. ಈ ಕಾರಣದಿಂದ ನಾವೆಲ್ಲ ನಿನ್ನೆಡೆಗೆ ಬಂದಿರುವೆವು. ಆದುದರಿಂದ ಈ ದೊರೆಯು ಕೇಳಿದ್ದನ್ನು ಹೇಳು.

ಭರ್ತೃಯಜ್ಞ ಉವಾಚ:—

ಲೋಮಶೋಽಪ್ಯಥ ತಂ ಪ್ರಾಹ ವಿಶ್ರಬ್ಧಂ ಪೃಚ್ಛ ಪಾರ್ಥಿವ ।
ಅವಶ್ಯಂ ಕಥಯಿಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ॥ ೩೩೪ ॥

ಇಂದ್ರದ್ಯುಮ್ನ ಉವಾಚ:—

ಕಸ್ಮಾತ್ತ್ವಂ ಗ್ರೀಷ್ಮಕಾಲೇಽಪಿ ಮಧ್ಯಂ ಪ್ರಾಪ್ತೇ ದಿವಾಕರೇ ।
ನಿವಾಸಾರ್ಥಂ ಗೃಹಂ ರಮ್ಯಂ ಕಿಮರ್ಥಂ ನ ಕರಿಷ್ಯಸಿ ॥ ೩೩೫ ॥

ಲೋಮಶ ಉವಾಚ:—

ಕಸ್ಯಾರ್ಥೇ ಕ್ರಿಯತೇ ಗೇಹಮನಿತ್ಯಂ ಜೀವಿತಂ ಯತಃ ।
ಯದಿಸ್ಯಾಚ್ಛಾಶ್ವತೋ ದೇಹಸ್ತದರ್ಥಂ ಕ್ರಿಯತೇ ಚ ತತ್ ॥ ೩೩೬ ॥

ಇಂದ್ರದ್ಯುಮ್ನ ಉವಾಚ:—

ಸರ್ವೇಷಾಮೇವ ಲೋಕಾನಾಂ ಚಿರಾಯುಃ ಶ್ರೂಯತೇ ಭವಾನ್ ।
ತೇನಾಽಹಮಪಿ ಸಂಪ್ರಾಪ್ತೋ ಭವದ್ದರ್ಶನಕಾಮ್ಯಯಾ ॥ ೩೩೭ ॥

ಲೋಮಶ ಉವಾಚ:—

ಕಲ್ಪೇ ಕಲ್ಪೇ ತು ಸಂಪ್ರಾಪ್ತೇ ರೋಮಕಂ ಮಮ ನಶ್ಯತಿ ।
ಅಭಾವೇ ಸರ್ವರೋಮ್ಣಾಂ ಚ ತತೋ ನಾಶೋ ಭವಿಷ್ಯತಿ ॥ ೩೩೮ ॥

---

೩೩೪. ಭರ್ತೃಯಜ್ಞನು ಹೇಳುತ್ತಾನೆ:—ಲೋಮಶನೂ, "ದೊರೆಯೆ! ನಂಬಿಕೆಯಿಂದ ಕೇಳು. ನೀನು ಕೇಳಿದ್ದನ್ನು ಅವಶ್ಯವಾಗಿ ಹೇಳುವೆನು" ಎಂದನು.

೩೩೫. ಇಂದ್ರದ್ಯುಮ್ನನು ಹೇಳುತ್ತಾನೆ:—ಮಹರ್ಷಿಯೆ! ನೀನು ಗ್ರೀಷ್ಮ ಕಾಲದಲ್ಲಿಯೂ ಮಧ್ಯಾಹ್ನದ ವೇಳೆ ನಿವಾಸಕ್ಕಾಗಿ ರಮ್ಯವಾದ ಮನೆಯನ್ನು ಏತಕ್ಕಾಗಿ ನಿರ್ಮಿಸುವುದಿಲ್ಲ?

೩೩೬. ಲೋಮಶನು ಹೇಳುತ್ತಾನೆ:—ಜೀವಿತವು ಅನಿತ್ಯವಾದುದರಿಂದ ಯಾರಿಗಾಗಿ ಮನೆಯನ್ನು ನಿರ್ಮಿಸಬೇಕು? ದೇಹವು ಶಾಶ್ವತವಾಗಿದ್ದರೆ ಅದಕ್ಕಾಗಿ ಮನೆಯನ್ನು ನಿರ್ಮಿಸಬೇಕು.

೩೩೭. ಇಂದ್ರದ್ಯುಮ್ನನು ಹೇಳುತ್ತಾನೆ:—ಸಮಸ್ತ ಲೋಕಗಳಲ್ಲಿ ನೀನು ಚಿರಂಜೀವಿಯೆಂದು ಕೇಳಿದ್ದೇನೆ. ಆದುದರಿಂದ ನಾನು ನಿನ್ನನ್ನು ನೋಡಲು ಬಂದಿರುವೆನು.

೩೩೮. ಲೋಮಶನು ಹೇಳುತ್ತಾನೆ:—ಪ್ರತಿಕಲ್ಪಗಳಲ್ಲಿಯೂ ನನ್ನ ರೋಮವು ನಾಶವಾಗುವುದು. ಸಮಸ್ತ ರೋಮಗಳು ನಾಶವಾದಮೇಲೆ ನಾನು ಸಾಯುವೆನು.

ಪಶ್ಯ ತ್ವಂ ಮಚ್ಛರೀರೇಽಸ್ಮಿನ್ ಪ್ರಕಾಶಂ ರೋಮವರ್ಜಿತಂ ।
ನ ಕರೋಮಿ ಗೃಹಂ ತೇನ ಕಾರಣೇನ ಮಹಾಮತೇ ॥ ೩೩೯ ॥

ಇಂದ್ರದ್ಯುಮ್ನ ಉವಾಚ :—

ಕಿಂ ತ್ವಯಾ ವಿಹಿತಂ ಕರ್ಮ ಯೇನೇದೃಗ್ಜೀವಿತಂ ಸ್ಥಿತಂ ।
ಕಿಂ ದಾನಸ್ಯ ಪ್ರಭಾವೋಽಯಂ ತಪಸೋ ನಿಯಮಸ್ಯ ವಾ ॥ ೩೪೦ ॥

ಲೋಮಶ ಉವಾಚ:—

ಅಹಮಾಸಂ ಪುರಾ ಶೂದ್ರೋ ದರಿದ್ರೇಣ ಪರಿಪ್ಲುತಃ ।
ಭ್ರಮಾಮಿ ಮೇದಿನೀಪೃಷ್ಠ ಉದರಸ್ಯ ಕೃತೇ ಸದಾ ॥ ೩೪೧ ॥
ಕರ್ಮಯೋಗೇನ ಮಹತಾ ಸಂಪ್ರಾಪ್ತೋ ಹಾಟಕೇಶ್ವರಂ ।
ಕ್ಷುತ್ಕ್ಷಾಮಸ್ತು ಪಿಪಾಸಾರ್ತೋ ಯತ್ರೈತಲ್ಲಿಂಗಮುತ್ತಮಂ ।
ಅವಧೂತಂ ತತೋ ಲಿಂಗಂ ಮಯಾ ದೃಷ್ಟ್ವಾ ಸ್ವಯಂಭು ತತ್ ॥ ೩೪೨॥
ಸ್ನಾಪಿತಂ ತೋಯಮಾದಾಯ ಶೀತಮೇತತ್ಸುನಿರ್ಮಲಂ ।
ತತಸ್ತು ಕಮಲೈರೇತೈರ್ಮಯಾ ಪೂಜಾ ವಿನಿರ್ಮಿತಾ ॥ ೩೪೩ ॥
ಅಥ ಪೂಜಾಂ ವಿನಿರ್ವರ್ತ್ಯ ಯಾವನ್ಮಾರ್ಗಂ ಸಮಾಶ್ರಿತಃ ।
ಕ್ಷುತ್ಕ್ಷಾಮಕಂಠಸ್ಯ ತತಃ ಪ್ರಾಣಾ ನಷ್ಟಾಸ್ತದಾ ಮಮ ॥ ೩೪೪ ॥
ಅಥಾಽಹಂ ಬ್ರಾಹ್ಮಣಗೃಹೇ ಜಾತೋ ಜಾತಿಸ್ಮರಸ್ತತಃ ।
ಸರ್ವಂ ಸ್ಮರಾಮಿ ಭೂಪಾಲ ದೇವದೇವಸ್ಯ ಪೂಜನಾತ್ ॥ ೩೪೫ ॥

---

೩೩೯. ಪ್ರಕೃತದಲ್ಲಿ ನನ್ನ ಶರೀರ ನೀರೋಮವಾಗಿರುವುದನ್ನು ನೋಡು. ಎಲೈ ಪ್ರಾಜ್ಞನೆ! ಆದುದರಿಂದ ನಾನು ಮನೆಯನ್ನು ರಚಿಸುವುದಿಲ್ಲ.

೩೪೦. ಇಂದ್ರದ್ಯುಮ್ನನು ಹೇಳುತ್ತಾನೆ:—ನಿನಗೆ ಇಂತಹ ಚಿರಂಜೀವಿತ್ವ ವುಂಟಾಗಲು ದಾನದ ಪ್ರಭಾವ, ತಪಸ್ಸು, ನಿಯಮ ಇವುಗಳಲ್ಲಿ ಯಾವುದು ಕಾರಣ?

೩೪೧. ಲೋಮಶನು ಹೇಳುತ್ತಾನೆ:—ನಾನು ಹಿಂದೆ ದರಿದ್ರಶೂದ್ರನಾಗಿ ಜೀವನಕ್ಕಾಗಿ ಭೂಮಿಯಲ್ಲಿ ಸಂಚರಿಸುತ್ತಿದ್ದೆನು.

೩೪೨—೩೪೩. ಮಹಾ ಕರ್ಮವಶದಿಂದ ಹಾಟಕೇಶ್ವರಕ್ಷೇತ್ರಕ್ಕೆ ಬಂದು ಹಸಿದವನೂ, ಬಾಯಾರಿದವನೂ ಆಗಿ ಈ ಮಹೇಶ್ವರನ ಈ ಅವಧೂತಲಿಂಗವನ್ನು ಕಂಡು ನಿರ್ಮಲವೂ ತಣ್ಣಗೂ ಇರುವ ನೀರನ್ನು ತಂದು ಅಭಿಷೇಕಮಾಡಿ ಕಮಲ ಗಳಿಂದ ಪೂಜಿಸಿದೆನು.

೩೪೪. ಅನಂತರ ನಾನು ಮಾರ್ಗದಲ್ಲಿ ನಡೆಯುತ್ತ ಹಸಿವಿನಿಂದ ಪೀಡಿತ ನಾಗಿ ಮೃತನಾದೆನು.

೩೪೫. ಬಳಿಕ ಬ್ರಾಹ್ಮಣನ ಮನೆಯಲ್ಲಿ ಜನಿಸಿ ಪೂರ್ವಜನ್ಮದ ಸ್ಮರಣೆ ಯುಳ್ಳವನಾಗಿ ಶಂಕರನ ಪೂಜೆಯಿಂದ ಎಲ್ಲವನ್ನೂ ಸ್ಮರಿಸುತ್ತಿದ್ದೆನು.

ತತೋ ಮೂಕತ್ವಮಾಪನ್ನೋ ನೈವ ಜಲ್ಪಾಮಿ ಕಿಂಚನ ।
ಈಶಾನ ಇತಿ ಮೇ ನಾಮ ಪಿತಾ ಚಕ್ರೇ ಪ್ರಹರ್ಷಿತಃ ॥ ೩೪೬ ॥
ಈಶಾನೇನ ಯತೋ ದತ್ತಃ ಪೂರ್ವಮಾರಾಧಿತೇನ ಚ ।
ವೈರಾಗ್ಯಂ ಪರಮಂ ಪ್ರಾಪ್ತೋ ದೃಷ್ಟ್ವಾ ಸಂಸಾರಸಂಸ್ಥಿತಿಂ ॥ ೩೪೭ ॥
ಪಿತಾ ಮೇ ಬಹುವಾತ್ಸಲ್ಯಾದ್ಭೇಷಜಾನಿ ಪ್ರಯೋಜಯತ್ ।
ವಾಚಾರ್ಥಂ ಮಂತ್ರವಾದಾಂಶ್ಚ ತಥಾ ಚೈವೋಪಯಾಚಿತಂ ।
ಬ್ರಾಹ್ಮಣಾನ್ ಪೃಚ್ಛತೇ ನಿತ್ಯಂ ದಿವಾರಾತ್ರಮತಂದ್ರಿತಃ ॥ ೩೪೮ ॥
ತತೋ ಮೇ ಜಾಯತೇ ಹಾಸ್ಯಂ ನಿಜಚಿತ್ತೇ ನರಾಧಿಪ ।
ದೃಷ್ಟ್ವಾ ಸಂಸಾರಸಂಸಕ್ತಿಂ ಪಿತುರ್ಮಾತುಶ್ಚ ಭೂರಿಶಃ ॥ ೩೪೯ ॥
ತತಶ್ಚ ಯೌವನಂ ಪ್ರಾಪ್ತಃ ಕ್ರಮೇಣ ನೃಪಸತ್ತಮ ।
ಯದಾ ತದಾ ನಿಶಿ ತ್ಯಕ್ತ್ವಾ ತಾವುಭೌ ಚಾಽತ್ರ ಸಂಗತಃ ॥ ೩೫೦ ॥
ತತೋ ಹೃಷ್ಟಮನಾ ನಿತ್ಯಂ ಪೂಜಯಾಮಿ ಸಮಾಹಿತಃ ।
ಈಶಾನಂ ಪರಯಾ ಭಕ್ತ್ಯಾ ಸಂಸ್ನಾಪ್ಯ ಸಲಿಲೇನ ಚ ॥ ೩೫೧ ॥
ಬ್ರಾಹ್ಮಣೇ ತೀರ್ಥಜಾತೇನ ತ್ರಿಕಾಲಂ ನೃಪಸತ್ತಮ ।
ಶಿಲೋಂಛವೃತ್ತಿಮಾಸಾದ್ಯ ಪ್ರಾಣಯಾತ್ರಾಂ ಸಮಾಚರನ್ ।
ನೀವಾರೈರ್ಬದರೈಃ ಶಾಕೈಶ್ಚಿರ್ಭಟೈಃ ಫಲಪತ್ರಕೈಃ ॥ ೩೫೨ ॥

---

೩೪೬–೩೪೭. ತರುವಾಯ ನಾನು ಮೂಕನಾಗಿ ಮಾತನಾಡುತ್ತಿರಲಿಲ್ಲ. ಹಿಂದೆ ಪೂಜಿಸಿದ ಈಶಾನನು ಅನುಗ್ರಹಿಸಿ ನನ್ನನ್ನು ಪುತ್ರನನ್ನಾಗಿ ಕೊಟ್ಟದ್ದರಿಂದ ನನ್ನ ತಂದೆಯು ನನಗೆ ಈಶಾನ ಎಂದು ಹೆಸರನ್ನಿಟ್ಟನು. ನಾನು ಈ ಸಂಸಾರ ಸ್ಥಿತಿಯನ್ನು ಕಂಡು ಅತಿ ವೈರಾಗ್ಯಗೊಂಡೆನು.

೩೪೮. ನನ್ನ ತಂದೆಯು ಅಧಿಕ ಪ್ರೀತಿಯಿಂದ ನನಗೆ ಮಾತು ಬರುವುದಕ್ಕಾಗಿ ಔಷಧವನ್ನು ಕೊಡಿಸಿದನು. ಮಂತ್ರವಾದಗಳನ್ನು ಮಾಡಿಸಿದನು. ಹಗಲು ರಾತ್ರಿ ಆಲಸ್ಯವಿಲ್ಲದೆ ಬ್ರಾಹ್ಮಣರನ್ನು ಪ್ರಶ್ನಿಸುತ್ತಿದ್ದನು.

೩೪೯. ನನಗೆ ತಂದೆ ತಾಯಿಗಳ ಸಂಸಾರಾಸಕ್ತಿಯನ್ನು ನೋಡಿ ಮನಸ್ಸಿನಲ್ಲಿ ಹಾಸ್ಯವುಂಟಾಯಿತು.

೩೫೦. ಬಳಿಕ ನಾನು ಕ್ರಮದಿಂದ ಯೌವನವನ್ನು ಹೊಂದಿ ಯಾವಾಗಲೋ ಒಂದು ದಿನ ರಾತ್ರಿ ತಾಯಿ ತಂದೆಗಳನ್ನು ತ್ಯಜಿಸಿ ಇಲ್ಲಿಗೆ ಬಂದೆನು.

೩೫೧–೩೫೨. ಬಳಿಕ ಸಂತೋಷದಿಂದ ಸಾವಧಾನ ಮನಸ್ಕನಾಗಿ ಈಶ್ವರನನ್ನು ಅತಿ ಭಕ್ತಿಯಿಂದ ಬ್ರಾಹ್ಮಣೀತೀರ್ಥದ ನೀರಿನಿಂದ ಅಭಿಷೇಕಮಾಡಿ ತ್ರಿಕಾಲವೂ ಪೂಜಿಸಿದೆನು. ಭೂಮಿಯಲ್ಲಿ ಬಿದ್ದ ಕಾಳುಗಳು, ನೀವಾರ, ಬದರಿ, ತರಕಾರಿ, ಚಿರ್ಭಟ, ಹಣ್ಣು, ಎಲೆ ಇವುಗಳಿಂದ ಜೀವಿಸುತ್ತಿದ್ದೆನು.

ತತೋ ಮೇ ಭಗವಾನ್ರುದ್ರಃ ಸರ್ವದೇವೇಶ್ವರೋ ಹರಃ ।
ಅಬ್ರವೀದ್ದರ್ಶನಂ ಗತ್ವಾ ಮೇಘಗಂಭೀರಯಾ ಗಿರಾ ॥ ೩೫೩ ॥
ಪರಿತುಷ್ಟೋಽಸ್ಮಿ ತೇ ವತ್ಸ ವರಂ ವರಯ ಸುವ್ರತ ।
ಅದೇಯಮಪಿ ದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩೫೪ ॥
ತತಸ್ತಂ ಪ್ರಣಿಪತ್ಯೋಚ್ಚೈಃ ಸ್ತುತ್ವಾ ವಾಕ್ಯೈಃ ಪೃಥಗ್ವಿಧೈಃ ।
ಮಯಾ ಪ್ರೋಕ್ತಂ ಕುರು ವಿಭೋ ಜರಾಮರಣವರ್ಜಿತಂ ॥ ೩೫೫ ॥

ಶ್ರೀ ಭಗವಾನುವಾಚ :—

ಅಮರತ್ವಂ ಯತೋ ನಾಽಸ್ತಿ ಮರ್ತ್ಯಲೋಕೇಽತ್ರ ಕರ್ಹಿಚಿತ್ ।
ಮರ್ಯಾದಾಂ ಕುರು ತಸ್ಮಾತ್ತ್ವಂ ಜೀವಿತಸ್ಯ ಸ್ವಕಸ್ಯವೈ ॥ ೩೫೬ ॥
ತತೋ ಮೇ ಭಗವಾನುಕ್ತಃ ಕಲ್ಪಾಂತೇ ಸಮುಪಸ್ಥಿತೇ ।
ರೋಮ್ಣ ಏಕಸ್ಯ ಮೇ ನಾಶೋ ಜಾಯತಾಂ ತ್ರಿದಶೇಶ್ವರ ॥ ೩೫೭ ॥
ಯದಾ ಚ ಸರ್ವರೋಮ್ಣಾಂ ಮೇ ವಿನಾಶಃ ಸಂಪ್ರಜಾಯತೇ ।
ತದಾ ಮಮ ಗಣತ್ವಂ ಚ ಜಾಯತಾಂ ತಾವಕಂ ವಿಭೋ ॥ ೩೫೮ ॥
ಏವಂ ಭವಿಷ್ಯತೀತ್ಯುಕ್ತಂ ಪರಂ ಲಿಂಗಂ ಸದಾ ಮಮ ।
ಸ್ನಾಪ್ಯಂ ಜಲೇನ ಚೈತೇನ ಬ್ರಾಹ್ಮಣೇಸಂಭವೇನ ಚ ॥ ೩೫೯ ॥

---

೩೫೩. ತರುವಾಯ ಪೂಜ್ಯನಾದ ಮಹೇಶ್ವರನು ಪ್ರತ್ಯಕ್ಷನಾಗಿ ಮೇಘದಂತೆ ಗಂಭೀರವಾದ ವಾಣಿಯಿಂದ ಇಂತೆಂದನು.

೩೫೪. ಮಗು! ನಾನು ನಿನ್ನ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ವರವನ್ನು ಕೇಳಿಕೊ. ದುರ್ಲಭವಾದಾಗ್ಯೂ, ಕೊಡಲನರ್ಹವಾದಾಗ್ಯೂ ಅದನ್ನು ಕೊಡುವೆನು.

೩೫೫. ಬಳಿಕ ನಾನು ಅವನನ್ನು ವಂದಿಸಿ ನಾನಾವಿಧವಾಕ್ಯಗಳಿಂದ ಸ್ತುತಿಸಿ ಸ್ವಾಮಿ! ನನಗೆ ಮುಪ್ಪುಮರಣಗಳಿಲ್ಲದಂತೆ ಅನುಗ್ರಹಿಸು ಎಂದೆನು.

೩೫೬. ಶ್ರೀ ಭಗವಂತನು ಹೇಳುತ್ತಾನೆ :—ಭೂಲೋಕದಲ್ಲಿ ಎಲ್ಲಿಯೂ ಅಮರತ್ವವಿಲ್ಲದಿರುವುದರಿಂದ ನಿನ್ನ ಆಯುಷ್ಯಕ್ಕೆ ಒಂದು ಅವಧಿಯನ್ನು ಕಲ್ಪಿಸು.

೩೫೭. ಬಳಿಕ ನಾನು ಮಹೇಶ್ವರನನ್ನು ಕುರಿತು, "ಶಂಕರ! ಕಲ್ಪಾಂತಕಾಲದಲ್ಲಿ ನನ್ನ ಒಂದು ರೋಮವು ನಾಶವಾಗಲಿ.

೩೫೮. ನನ್ನ ಸಕಲ ರೋಮಗಳೂ ನಾಶವಾದಾಗ ನಾನು ನಿನ್ನ ಗಣನಾಗುವಂತೆ ಮಾಡು" ಎಂದೆನು.

೩೫೯—೩೬೦. ಶಂಕರನು ಇಂತೆಂದನು. ಹಾಗೆಯೇ ಆಗುವುದು. ಆದರೆ ನೀನು ಬ್ರಹ್ಮಾದಿಗಳು ತ್ರಿಕಾಲದಲ್ಲಿ ಪೂಜಿಸಲರ್ಹವಾದ ನನ್ನ ಈ ಲಿಂಗವನ್ನು

F

ಬ್ರಹ್ಮಾದ್ಯೈಃ ಪೂಜನೀಯಂ ಚ ತ್ರಿಕಾಲಂ ದ್ವಿಜಸತ್ತಮ ।
ಮನ್ಯೈಕವಾಸರಂ ಯಾವತ್ತವ ಚಾಽಽಯುರ್ಭವಿಷ್ಯತಿ ॥ ೩೬೦ ॥
ಅನ್ಯೋಽಪಿ ಯೋ ನರೋ ಭಕ್ತ್ಯಾ ಪೂಜಯಿಷ್ಯತಿ ಮಾಮಿಹ ।
ಸ್ನಾಪಯಿಷ್ಯತಿ ಸದ್ಭಕ್ತ್ಯಾ ವಿಪಾಪ್ಮಾ ಸ ಭವಿಷ್ಯತಿ ॥ ೩೬೧ ॥
ನಾಽಪಮೃತ್ಯುರ್ಭವೇತ್ತಸ್ಯ ಕದಾಚಿದ್ದ್ವಿಜಸತ್ತಮ ।
ಸಕೃತ್ಸಂಪೂಜಿತೇಽಪ್ಯೇವಂ ಬ್ರಹ್ಮಾದ್ಯೈರ್ಮತ್ಕಲೇವರೇ ॥ ೩೬೨ ॥
ಸಕೃತ್ಪಿಬತಿ ಯಸ್ತೋಯಂ ಬ್ರಹ್ಮತೀರ್ಥಸಮುದ್ಭವಂ ।
ಸರ್ವಪಾಪವಿಶುದ್ಧಾತ್ಮಾ ತತ್ಕ್ಷಣಾಜ್ಜಾಯತೇ ಹಿ ಸಃ ॥ ೩೬೩ ॥
ಏವಮುಕ್ತ್ವಾಽಥ ದೇವೇಶಸ್ತತಶ್ಚಾಽದರ್ಶನಂ ಗತಃ ॥ ೩೬೪ ॥
ಅಹಂ ತು ಸಂಸ್ಥಿತಶ್ಚಾಽತ್ರ ತತಃಪ್ರಭೃತಿ ಪಾರ್ಥಿವ ।
ಪೂಜಯಾನಶ್ಚ ಸದ್ಭಕ್ತ್ಯಾ ಲಿಂಗಮೇತತ್ಸದೈವ ಹಿ ॥ ೩೬೫ ॥
ಏತಸ್ಮಾತ್ಕಾರಣಾಜ್ಜಾತಂ ಮಮಾಯುರತಿ ವಿಸ್ತೃತಂ ।
ಶಂಕರಸ್ಯ ಪ್ರಸಾದೇನ ನಾಽನ್ಯದಸ್ತೀಹ ಕಾರಣಂ ॥ ೩೬೬ ॥

ಇಂದ್ರದ್ಯುಮ್ನ ಉವಾಚ:—

ಅಹಮಪ್ಯರ್ಚಯಿಷ್ಯಾಮಿ ಲಿಂಗಮೇತತ್ತ್ವಯಾ ಸಹ ।
ನಾಽನ್ಯತ್ರ ವಾ ಗಮಿಷ್ಯಾಮಿ ಮನ್ಯೈವಂ ಹೃದಿ ನಿಶ್ಚಯಃ ॥ ೩೬೭ ॥

---

ಒಂದು ದಿನ ಬ್ರಾಹ್ಮಣೀ ತೀರ್ಥದಿಂದ ಅಭಿಷೇಕ ಮಾಡಿದರೆ ನಿನಗೆ ಆಯುಸ್ಸುಂಟಾಗುವುದು.

೩೬೧–೩೬೨. ನನ್ನ ಲಿಂಗವನ್ನು ಭಕ್ತಿಯಿಂದ ಅಭಿಷೇಕಮಾಡಿ ಪೂಜಿಸಿದ ಇತರ ಮಾನವನೂ ಪಾಪರಹಿತನಾಗುವನು. ಬ್ರಹ್ಮಾದಿಗಳು ಪೂಜಿಸಿದ ಈ ಲಿಂಗವನ್ನು ಒಂದುಸಾರಿ ಪೂಜಿಸಿದವನಿಗೆ ಯಾವಾಗಲೂ ಅಪಮೃತ್ಯುವುಂಟಾಗುವುದಿಲ್ಲ.

೩೬೩. ಬ್ರಹ್ಮತೀರ್ಥದ ಜಲವನ್ನು ಒಂದುಸಾರಿ ಪಾನಮಾಡಿದವನು ಕೂಡಲೆ ಸಕಲ ಪಾಪಗಳಿಂದ ಶುದ್ಧನಾಗುವನು.

೩೬೪. ಶಂಕರನು ಹೀಗೆ ಹೇಳಿ ಅದೃಶ್ಯನಾದನು.

೩೬೫. ನಾನು ಅದು ಮೊದಲ್ಗೊಂಡು ಈ ಲಿಂಗವನ್ನು ಯಾವಾಗಲೂ ಪೂಜಿಸುತ್ತ ಅಲ್ಲಿಯೇ ಇದ್ದೆನು.

೩೬೬. ಇದರಿಂದ ಶಂಕರನ ಅನುಗ್ರಹವಾಗಿ ನನಗೆ ದೀರ್ಘಾಯುಸ್ಸುಂಟಾಯಿತು. ಇದಕ್ಕೆ ಬೇರಾವ ಕಾರಣವೂ ಇಲ್ಲ.

೩೬೭. ಇಂದ್ರದ್ಯುಮ್ನನು ಹೇಳುತ್ತಾನೆ:—ಈ ಲಿಂಗವನ್ನು ನಾನು ನಿನ್ನೊಡನೆ ಪೂಜಿಸುವೆನು. ಬೇರೆ ಕಡೆಗೆ ಹೋಗುವುದಿಲ್ಲ. ಇದು ನನ್ನ ನಿಶ್ಚಯ.

ಲೋಮಶ ಉವಾಚ:—

ಏವಂ ಕುರು ಮಹಾಭಾಗ ತ್ವಮುಪ್ಸ್ಯಾಪ್ಸ್ಯಸಿ ವಾಂಛಿತಂ ।
ಹರಭಕ್ತಸ್ಯ ಲೋಕಸ್ಯ ವಾಂಛಿತಂ ನಾಸ್ತಿ ದುರ್ಲಭಂ ॥ ೩೬೮ ॥
ನಾಡೀಜಂಘೋ ಗೃಹಂ ಯಾತು ಮಾರ್ಕಂಡ ಗೃಧ್ರ ಕೌಶಿಕಾಃ ।
ಕಚ್ಛಪೇನ ಸಮಾಯುಕ್ತಸ್ತ್ವಂ ಹಿ ತಿಷ್ಠ ಮಮಾಶ್ರಮೇ ॥ ೩೬೯ ॥
ತತಃ ಪ್ರೋಚುಶ್ಚ ತೇ ಸರ್ವೇ ನ ವಯಂ ತು ನರೇಶ್ವರ ।
ತ್ವಾಂ ವಿನಾ ಸಂಪ್ರಯಾಸ್ಯಾಮೋ ಭೂಯ ಏವ ನಿಜಾಲಯಂ ।
ಲಿಂಗಮಾರಾಧಯಿಷ್ಯಾಮೋ ಯದೇತದ್ಭವತಾರ್ಚಿತಂ ॥ ೩೭೦ ॥
ಏವಮುಕ್ತ್ವಾ ತು ತೇ ಸರ್ವೇ ಲೋಮಶಸ್ಯ ವರಾಶ್ರಮೇ ।
ತಸ್ಥುಃ ಸಂಪೂಜಯಾಮಾಸುಸ್ತ್ರಿಕಾಲಂ ಲಿಂಗಮೇವ ತತ್ ॥ ೩೭೧ ॥
ಸಂಸ್ನಾಪ್ಯ ಬ್ರಾಹ್ಮಣೀತೋಯೈಃ ಪದ್ಮಾದ್ಯೈಃ ಪೂಜಯಂತಿ ಚ ॥ ೩೭೨ ॥
ಕಸ್ಯಚಿತ್ತ್ವಥ ಕಾಲಸ್ಯ ನಾರದೋ ಮುನಿಸತ್ತಮಃ ।
ತೀರ್ಥಯಾತ್ರಾಪ್ರಸಂಗೇನ ಸಂಪ್ರಾಪ್ತಸ್ತತ್ರ ಯತ್ರ ತೇ ॥ ೩೭೩ ॥
ಅಥ ತೇ ನಾರದಂ ದೃಷ್ಟ್ವಾ ಕೃತ್ವಾಚೈವಾಽರ್ಹಣಕ್ರಿಯಾಂ ।
ವಿಶ್ರಾಂತಂ ಚ ತತೋ ಜ್ಞಾತ್ವಾ ಪಪ್ರಚ್ಛುರ್ವಿನಯಾನ್ವಿತಾಃ ॥ ೩೭೪ ॥
ಶಾಪಭ್ರಷ್ಟಾ ವಯಂ ಸರ್ವೇ ಯತಃ ಸಂವರ್ತದರ್ಶನಾತ್ ।
ಬಕಾದ್ಯಾಶ್ಚೈವ ಚತ್ವಾರಃ ಕೂರ್ಮಾಂತಾಶ್ಚ ಮಹಾಮುನೇ ॥ ೩೭೫ ॥

---

೩೬೮. ಲೋಮಶನು ಹೇಳುತ್ತಾನೆ:—ಮಹಾಭಾಗನೆ! ನೀನೂ ಇಷ್ಟಾರ್ಥವನ್ನು ಹೊಂದುವೆ. ಶಿವಭಕ್ತನಿಗೆ ದುರ್ಲಭವಾದ ಇಷ್ಟಾರ್ಥವಿರುವುದಿಲ್ಲ.

೩೬೯–೩೭೦. ನಾಡೀಜಂಘ, ಮಾರ್ಕಂಡೇಯ ಗೃಧ್ರ, ಕೌಶಿಕರು ಮನೆಗೆ ಹೋಗಲಿ. ನೀನು ಆಮೆಯೊಡನೆ ನನ್ನ ಆಶ್ರಮದಲ್ಲಿರು. ಬಳಿಕ ಅವರೆಲ್ಲ ನರೇಂದ್ರ! ನಾವು ನಿನ್ನನ್ನು ಬಿಟ್ಟು ನಮ್ಮ ಮನೆಗೆ ಹೋಗುವುದಿಲ್ಲ. ನೀನು ಪೂಜಿಸಿದ ಲಿಂಗವನ್ನು ಪೂಜಿಸುವೆವು.

೩೭೧–೩೭೨. ಅವರೆಲ್ಲ ಹೀಗೆಂದು ಲೋಮಶನ ಆಶ್ರಮದಲ್ಲಿದ್ದು ತ್ರಿಕಾಲದಲ್ಲಿಯೂ ಆ ಶಿವಲಿಂಗವನ್ನು ಬ್ರಾಹ್ಮಣೀತೀರ್ಥದ ಜಲದಿಂದ ಅಭಿಷೇಕಮಾಡಿ ಕಮಲ ಮೊದಲಾದ ಪುಷ್ಪಗಳಿಂದ ಪೂಜಿಸಿದರು.

೩೭೩. ಒಂದಾನೊಂದು ಕಾಲದಲ್ಲಿ ನಾರದಮುನಿವರ್ಯನು ತೀರ್ಥಯಾತ್ರಾ ನಿಮಿತ್ತದಿಂದ ಅವರಿರುವ ಸ್ಥಳಕ್ಕೆ ಬಂದನು.

೩೭೪. ಬಳಿಕ ಆ ಮಾರ್ಕಂಡೇಯನೇ ಮೊದಲಾದವರು ನಾರದನನ್ನು ನೋಡಿ ಪೂಜಿಸಿ ವಿಶ್ರಾಂತನಾಗಿರುವನೆಂದರಿತು ವಿನಯದಿಂದ ಆತನನ್ನು ಹೀಗೆ ಪ್ರಶ್ನಿಸಿದರು.

೩೭೫. ಮಹರ್ಷಿಯೆ! ಬಕನೇ ಮೊದಲಾದ ನಾವು ನಾಲ್ವರು ಸಂವರ್ತನನ ದರ್ಶನದವರೆಗೆ ಶಾಪಭ್ರಷ್ಟರಾಗಿರುವೆವು.

ನ ಸ ವಿಜ್ಞಾಯತೇ ಕ್ವಾಽಪಿ ಕಸ್ಮಿನ್‌ಸ್ಥಾನೇ ವ್ಯವಸ್ಥಿತಃ ।
ಕಿಂ ರೂಪಃ ಕಿಂ ಪ್ರಮಾಣಶ್ಚ ಕಿಮಾಚಾರಃ ಕ್ವ ಸಂಸ್ಥಿತಃ ॥ ೩೭೬ ॥
ಸ ತ್ವಂ ಯದಿ ವಿಜಾನಾಸಿ ಯತ್ರ ತಂ ಸಂಸ್ಥಿತಂ ಮುನಿಂ ।
ತದ್ವದಸ್ವ ಮಹಾಭಾಗ ನ ಕಿಂಚಿತ್ತೇಽಸ್ತ್ಯಗೋಚರಂ ॥ ೩೭೭ ॥

ಶ್ರೀ ನಾರದ ಉವಾಚ:—

ಅಹಂ ಜಾನಾಮಿ ತಂ ಸಮ್ಯಕ್ಸಂವರ್ತಂ ಮುನಿಸತ್ತಮಂ ।
ಗುಪ್ತಾಚಾರೇಣ ತಿಷ್ಠಂತಂ ನಾಽನ್ಯೋ ವೇತ್ತಿ ಕಥಂಚನ ॥ ೩೭೮ ॥
ವಾರಾಣಸ್ಯಾಂ ಸ್ಥಿತೋ ನಿತ್ಯಂ ಸೋಽವಧೂತೋ ಮಹಾಮುನಿಃ ।
ವಿವಸ್ತ್ರೋ ಮಲದಿಗ್ಧಾಂಗಃ ಸದಾಽರಣ್ಯಂ ಸಮಾಶ್ರಿತಃ ॥ ೩೭೯ ॥
ಭಿಕ್ಷಾರ್ಥಂ ಕುತಪೇ ಕಾಲೇ ಸಮಾಗಚ್ಛತಿ ತಾಂ ಪುರೀಂ ।
ಪಾಣಿಪಾತ್ರಕೃತಾಹಾರೋ ಗೃಹೈಃ ಕೈಶ್ಚಿತ್ಸದೈವ ಹಿ ॥ ೩೮೦ ॥
ಭೂಯೋಽಪಿ ಯಾತಿ ಸಾಯಾಹ್ನೇ ಕಿಂಚಿದೇವ ವನಾಂತರಂ ।
ತಸ್ಯಾಂ ಪುರ್ಯಾಂ ತಥಾ ರೂಪಾಃ ಶತಶೋಽಥ ಸಹಸ್ರಶಃ ॥ ೩೮೧ ॥
ತಿಷ್ಠಂತಿ ತಾಪಸಶ್ರೇಷ್ಠಾಸ್ತಸ್ಯ ವಕ್ಷ್ಯಾಮಿ ಲಕ್ಷಣಂ ।
ಭವದ್ಭಿಃ ಸ ತಥಾ ಜ್ಞೇಯೋ ಮಮ ವಾಕ್ಯಾದಸಂಶಯಂ ॥ ೩೮೨ ॥

---

೩೭೬. ಆ ಸಂವರ್ತನನು ಎಲ್ಲಿರುವನು? ಹೇಗಿರುವನು? ಎಷ್ಟು ಪ್ರಮಾಣದವನು? ಎಂತಹ ಆಚಾರವುಳ್ಳವನೆಂಬುದು ತಿಳಿಯಲಿಲ್ಲ.

೩೭೭. ಮಹಾಭಾಗ್ಯವಂತನೆ! ನೀನು ಅವನೆಲ್ಲಿರುವನೆಂಬುದನ್ನರಿತಿದ್ದರೆ ಹೇಳು. ನಿನಗೆ ಅಗೋಚರವಾದುದು ಯಾವುದೂ ಇಲ್ಲ.

೩೭೮. ಶ್ರೀ ನಾರದನು ಹೇಳುತ್ತಾನೆ:—ನಾನು ಗುಪ್ತಾಚಾರದಿಂದಿರುವ ಆ ಸಂವರ್ತಮುನಿವರ್ಯನನ್ನು ಬಲ್ಲೆನು. ಬೇರೆ ಯಾರೂ ಅವನನ್ನರಿತಿರುವುದಿಲ್ಲ.

೩೭೯. ಆ ಮುನಿಯು ಕಾಶಿಯಲ್ಲಿ ಅವಧೂತನೂ, ವಸ್ತ್ರವಿಲ್ಲದವನೂ, ಮಲದಿಂದ ಲಿಪ್ತವಾದ ಅವಯವಗಳುಳ್ಳವನೂ ಆಗಿ ಯಾವಾಗಲೂ ಕಾಡಿನಲ್ಲಿ ವಾಸಿಸುತ್ತಿರುವನು.

೩೮೦. ಅವನು ಆ ಪಟ್ಟಣಕ್ಕೆ ಭಿಕ್ಷೆಗಾಗಿ ಕುತಪಕಾಲದಲ್ಲಿ ಬಂದು ಕೆಲವು ಮನೆಗಳಲ್ಲಿ ಭಿಕ್ಷೆಬೇಡಿ ಅಂಗೈಯಲ್ಲಿ ಅದನ್ನು ತಿನ್ನುವನು.

೩೮೧—೩೮೨. ಅವನು ಮರಳಿ ಸಾಯಂಕಾಲ ಯಾವುದೋ ಕಾಡಿಗೆ ಹೋಗುವನು. ಆ ಪಟ್ಟಣದಲ್ಲಿ ಅಂತಹ ಸಾವಿರಾರು ಮಂದಿ ಮುನಿಗಳಿರುವರು. ನೀವು ನನ್ನ ಮಾತಿನಿಂದ ತಿಳಿಯಲರ್ಹವಾದ ಅವನ ಲಕ್ಷಣವನ್ನು ಹೇಳುವೆನು.

ವಾರಾಣಸ್ಯಾಃ ಪ್ರತೋಲ್ಯಾಂ ಚ ಸ್ಥಾಪನೀಯಂ ಸುಯತ್ನತಃ ।
ಕುಣಪಂ ಚೈವ ಗುಪ್ತಂ ಚ ಯಥಾ ನೋ ವೇತ್ತಿ ಕಶ್ಚನ ॥ ೩೪೩ ॥
ಯಾಸ್ಯಂತಿ ತಾಪಸಾಃ ಸರ್ವೇ ತಮತಿಕ್ರಮ್ಯ ಭೂರಿಶಃ ।
ಸಂವರ್ತೋ ದಿವ್ಯದೃಷ್ಟಿಸ್ತು ಶಲ್ಯಂ ನಾಽತಿಕ್ರಮಿಷ್ಯತಿ ॥ ೩೪೪ ॥
ನಿವರ್ತನಂ ತು ಯಶ್ಚಕ್ರೇ ಭೂಭಾಗಾತ್ಕುಣಪಾಶ್ರಯಾತ್ ।
ಸ ಸಂವರ್ತಃ ಪರಿಜ್ಞೇಯಃ ಪ್ರಷ್ಟವ್ಯಶ್ಚ ತತಃ ಪರಂ ॥ ೩೪೫ ॥
ಯದಿ ಪೃಚ್ಛತಿ ಕೇನಾಽಹಂ ಭವತಾಂ ಸನ್ನಿವೇದಿತಃ ।
ನಾರದೇನ ತತೋ ವಾಚ್ಯಂ ಸ ತ್ವಾಂ ಜಾನಾತಿ ವೈ ಸದಾ ॥ ೩೪೬ ॥
ಯದಿ ಪೃಚ್ಛತಿ ಭೂಯಃ ಸ ನಾರದಃ ಕ್ವ ಸ ತಿಷ್ಠತಿ ॥ ೩೪೭ ॥
ತತೋ ವಾಚ್ಯೋ ನಿವೇದ್ಯ ತ್ವಾಂ ಪ್ರತಿಷ್ಟೋ ಹವ್ಯವಾಹನಂ ॥ ೩೪೮ ॥
ತಚ್ಛ್ರುತ್ವಾ ನಾರದವಚಃ ಸರ್ವೇ ವೈ ಲೋಮಶಾದಯಃ ।
ವಾರಾಣಸೀಂ ಪುರೀಂ ಪ್ರಾಪ್ತಾಸ್ತಸ್ಯ ದರ್ಶನಲಾಲಸಾಃ ॥ ೩೪೯ ॥
ಪ್ರತೋಲ್ಯಾಂ ಕುಣಪಂ ಸ್ಥಾಪ್ಯ ಗುಪ್ತಂ ಲೋಕೈರಲಕ್ಷಿತಂ ।
ಸ್ವಯಂ ಚೈವ ಸ್ಥಿತಾ ದೂರಂ ಪ್ರೇಕ್ಷಮಾಣಾಃ ಪ್ರಯತ್ನತಃ ॥ ೩೫೦ ॥
ತತಸ್ತು ಕುತಪೇಕಾಲೇ ಸಂವರ್ತಸ್ತು ಸಮಾಗತಃ ।
ಯಾದೃಗ್ರೂಪಃ ಪುರಾ ಪ್ರೋಕ್ತೋ ನಾರದೇನ ಮಹಾತ್ಮನಾ ॥ ೩೫೧ ॥

---

೩೪೩. ನೀವು ಕಾಶೀ ನಗರದ ಬೀದಿಯಲ್ಲಿ ಯಾರೂ ತಿಳಿಯದಂತೆ ಒಂದು ಶವವನ್ನು ಇಡಿರಿ.

೩೪೪. ಅನೇಕ ಮಂದಿ ಮುನಿಗಳು ಆ ಶವವನ್ನು ದಾಟಿಕೊಂಡುಹೋಗುವರು. ದಿವ್ಯದೃಷ್ಟಿಯುಳ್ಳ ಸಂವರ್ತನು ಮಾತ್ರ ಅದನ್ನು ದಾಟುವುದಿಲ್ಲ.

೩೪೫–೩೪೬. ಶವವಿರುವ ಸ್ಥಳದಿಂದ ಹಿಂದಿರುಗುವವನು ಸಂವರ್ತನೆಂದರಿತು ಅವನನ್ನು ಪ್ರಶ್ನಿಸಬೇಕು. ಅವನು, ನನ್ನನ್ನು. ನಿಮಗೆ ಯಾರು ತಿಳಿಸಿದರೆಂದು ಕೇಳಿದರೆ ನಾರದನು ತಿಳಿಸಿದನು. ಅವನು ನಿನ್ನನ್ನು ಯಾವಾಗಲೂ ತಿಳಿಯುವನೆಂದು ಹೇಳಿರಿ.

೩೪೭–೩೪೮. ಅವನು ಪುನಃ ನಾರದನು ಎಲ್ಲಿರುವನೆಂದು ಕೇಳಿದರೆ ನಿಮ್ಮನ್ನು ತಿಳಿಸಿ ಅವನು ಅಗ್ನಿಯನ್ನು ಪ್ರವೇಶಮಾಡಿದನೆಂದು ಹೇಳಿರಿ.

೩೪೯. ಲೋಮಶನೇ ಮೊದಲಾದವರು ನಾರದನ ಆ ಮಾತನ್ನು ಕೇಳಿ ಆ ಸಂವರ್ತನನ್ನು ನೋಡಲೋಸುಗ ಕಾಶೀನಗರವನ್ನು ಸೇರಿದರು.

೩೫೦. ಅವರು ರಾಜಬೀದಿಯಲ್ಲಿ ಶವವನ್ನು ಯಾರೂ ನೋಡದಂತೆ ಇಟ್ಟು ತಾವು ದೂರದಲ್ಲಿ ನೋಡುತ್ತ ನಿಂತರು.

೩೫೧. ಬಳಿಕ, ಮಹಾತ್ಮನಾದ ನಾರದನು ಹೇಳಿದಂತಹ ಲಕ್ಷಣಗಳುಳ್ಳ ಆ ಸಂವರ್ತನು ಕುತಪಕಾಲದಲ್ಲಿ ಅಲ್ಲಿಗೆ ಬಂದನು.

ಸ ದೃಷ್ಟ್ವಾ ಕುಣಪಂ ತತ್ರ ದಿವ್ಯದೃಷ್ಟ್ಯಾ ಮಹಾಮುನಿಃ ।
ನಿವೃತ್ತಃ ಕ್ಷುತ್ಪಿಪಾಸಾರ್ತೋ ನೈವ ಶಲ್ಯಮಲಂಘಯತ್ ॥ ೩೯೨ ॥
ಅಥ ತೇ ತಂ ಸಮುದ್ದಿಶ್ಯ ಪೃಷ್ಠತೋಽನುಯಯುಸ್ತದಾ ।
ತಿಷ್ಠ ತಿಷ್ಠೇತಿ ಜಲ್ಪಂತಃ ಪ್ರಸಾದಃ ಕ್ರಿಯತಾಮಿತಿ ॥ ೩೯೩ ॥
ಸೋಽಪಿ ನಿರ್ಭರ್ತ್ಸಯನ್ನೇತಾನ್ನಿವರ್ತಧ್ವಮಿತಿ ಬ್ರುವನ್ ।
ಮಾಽಽಗಚ್ಛತ ಮತ್ಸಮೀಪಮಿತಿ ಪ್ರೋಚ್ಯ ಪಲಾಯಿತಂ ॥ ೩೯೪ ॥
ಅಥ ದೂರತರಂ ಗತ್ವಾ ಸ ಪ್ರೋವಾಚ ಕ್ಷುಧಾನ್ವಿತಃ ॥ ೩೯೫ ॥
ಕೇನಾಽಽದಿಷ್ಟೋಽಸ್ಮಿ ಯುಷ್ಮಾಕಂ ಸ ಶೀಘ್ರಂ ಮೇ ನಿವೇದ್ಯತಾಂ ।
ಶಾಪಾಽಗ್ನೌ ಯೇನ ತಂ ಪಾಪಂ ಭಸ್ಮಸಾತ್ಪ್ರಕರೋಮ್ಯಹಂ ॥ ೩೯೬ ॥

ತ ಊಚುಃ:—

ನಾರದೇನ ಸಮಾಖ್ಯಾತೋ ಭವಾನತ್ರ ಸ್ಥಿತೋ ಹಿ ನಃ ।
ಕಥಯಿತ್ವಾ ತತೋ ವಹ್ನೌ ಸಂಪ್ರವಿಷ್ಟಃ ಸ ತತ್ಕ್ಷಣಾತ್ ॥ ೩೯೭ ॥

ಸಂವರ್ತ ಉವಾಚ :—

ಅಹಂ ತದೇವ ಕರ್ತಾಚ ತಸ್ಯ ದುಷ್ಟಸ್ಯ ಸಾಂಪ್ರತಂ ।
ನಿರ್ದಿಷ್ಟೋ ಯೇನ ಯುಷ್ಮಾಕಂ ಗುಪ್ತಾಚಾರಂ ಸಮಾಶ್ರಿತಃ ॥ ೩೯೮ ॥

---

೩೯೨. ಅವನು ದಿವ್ಯದೃಷ್ಟಿಯಿಂದ ಅಲ್ಲಿರುವ ಶವವನ್ನು ಕಂಡು ಹಸಿವು ಬಾಯಾರಿಕೆಯಿಂದ ಪೀಡಿತನಾಗಿ ಹಿಂದಿರುಗಿದನು. ಅಡ್ಡಿಯಾಗಿರುವ ಆ ಶವ ವನ್ನು ದಾಟಲಿಲ್ಲ.

೩೯೩. ಬಳಿಕ ಅವರು ಅವನನ್ನು ಕುರಿತು, "ನಿಲ್ಲು, ನಿಲ್ಲು, ಅನುಗ್ರಹಿಸು" ಎಂದು ಹೇಳುತ್ತ ಹಿಂಬಾಲಿಸಿದರು.

೩೯೪. ಅವನೂ ಇವರನ್ನು, "ಹಿಂದಿರುಗಿರಿ. ನನ್ನೆಡೆಗೆ ಬರಬೇಡಿರಿ" ಎಂದು ಗದರಿಸುತ್ತ ಓಡಿದನು.

೩೯೫–೩೯೬. ಬಳಿಕ ಅವನು ದೂರಹೋಗಿ ಹಸಿವುಗೊಂಡವನಾಗಿ, "ನಿಮಗೆ ನನ್ನ ವಿಷಯವನ್ನು ಯಾರು ತಿಳಿಸಿದರು? ಬೇಗನೆ ತಿಳಿಸಿರಿ. ಅವನನ್ನು ಶಾಪಾಗ್ನಿ ಯಿಂದ ಬೂದಿಮಾಡುವೆನು" ಎಂದನು.

೩೯೭. ಅವರು ಹೇಳುತ್ತಾರೆ:—ನೀನು ಇಲ್ಲಿರುವೆಯೆಂದು ನಾರದನು ನಮಗೆ ಹೇಳಿ ಕೂಡಲೆ ಅಗ್ನಿಯನ್ನು ಪ್ರವೇಶಮಾಡಿದನು.

೩೯೮. ಸಂವರ್ತನು ಹೇಳುತ್ತಾನೆ:—ಗುಪ್ತವಾಗಿರುವ ನನ್ನನ್ನು ತಿಳಿಸಿದ ಆ ದುಷ್ಟನಿಗೆ ನಾನು ಅದನ್ನೇ ಮಾಡತಕ್ಕವನಾಗಿದ್ದೆನು.

ತ ಊಚುಃ:—

ಭಗವನ್ನಾರದೇನೋಕ್ತಸ್ತ್ವಮಸ್ಮಾಕಂ ಮಹಾಮುನೇ ।
ಚಿರಾದನ್ವೇಷ್ಯಮಾಣಾನಾಂ ನಾಽನ್ಯಸ್ತ್ವಾಂ ವೇತ್ತಿ ಕಶ್ಚನ ॥ ೩೯೯ ॥
ತಾವನ್ನಿವೇದ್ಯ ಚಾಽಸ್ಮಾಕಂ ಪ್ರವಿಷ್ಟೋ ಹವ್ಯವಾಹನಂ ।
ತತ್ಕ್ಷಣಾದೇವ ವಿಪ್ರೇಂದ್ರ ನ ವಿದ್ಮಸ್ತತ್ರಕಾರಣಂ ॥ ೪೦೦ ॥

ಸಂವರ್ತ ಉವಾಚ:—

ಅಹಮಪ್ಯತಿಸಂಕ್ರುದ್ಧಃ ಶಾಪಾತ್ಕರ್ತುಂ ಸಮುದ್ಯತಃ ॥ ೪೦೧ ॥
ಏತದೇವ ಹಿ ತಸ್ಮಾಚ್ಚ ಸ್ವಯಮೇವ ಕೃತಂ ಚ ಯತ್ ।
ತಸ್ಮಾದ್ವದಥ ಮೇ ಶೀಘ್ರಂ ಕಸ್ಮಾದ್ಯೂಯಂ ಸಮಾಗತಾಃ ॥ ೪೦೨ ॥
ಚಿರಂ ಸ್ಥಾಸ್ಯಾಮಿ ನಾಽತ್ರಾಽಹಂ ಭ್ರಮಿಷ್ಯಾಮಿ ಪುರೀಂ ಪ್ರತಿ ।
ಪ್ರಾಣಯಾತ್ರಾಕೃತೇ ಭಿಕ್ಷಾಂ ಕರಿಷ್ಯಾಮಿ ಸ್ವಯಂ ಯತಃ ॥ ೪೦೩ ॥
ವಿಶಲ್ಯಃ ಕ್ರಿಯತಾಂ ಮಾರ್ಗಃ ಕುಣಪಂ ಹ್ರಿಯತಾಂ ಚ ಯತ್ ।
ನೋಚೇಚ್ಛಾಪಂ ಪ್ರದಾಸ್ಯಾಮಿ ಯದ್ಯೇವಂ ನ ಕರಿಷ್ಯಥ ॥ ೪೦೪ ॥
ತಥಾಽಹಂ ನೈವ ವಕ್ತವ್ಯಃ ಕಸ್ಯಚಿಚ್ಚಾಽತ್ರ ಸಂಸ್ಥಿತಃ ।
ಅನ್ವೇಷಯತಿ ಮಾಂ ನಿತ್ಯಂ ಮರುತ್ತಃ ಪೃಥಿವೀಪತಿಃ ॥ ೪೦೫ ॥
ಯಜ್ಞಾರ್ಥಂ ನೈವ ತಂ ಭೂಪಂ ಯಾಜಯಿಷ್ಯೇ ಕಥಂಚನ ।
ಧಿಷಣೇನ ಪರಿತ್ಯಕ್ತೋ ಗುರುಣಾ ಸ ಮಹೀಪತಿಃ ॥ ೪೦೬ ॥

---

೩೯೯. ಅವರು ಹೇಳುತ್ತಾರೆ:—ಮಹರ್ಷಿಯೆ! ಬಹುಕಾಲದಿಂದ ನಿನ್ನನ್ನು ಹುಡುಕುತ್ತಿರುವ ನಮಗೆ ನಾರದನು ನಿನ್ನನ್ನು ತಿಳಿಸಿರುವನು. ಬೇರೆ ಯಾರೂ ನಿನ್ನನ್ನು ಅರಿಯರು.

೪೦೦. ನಾರದನು ನಮಗೆ ತಿಳಿಸಿದ ಕೂಡಲೆ ಅಗ್ನಿಯನ್ನು ಪ್ರವೇಶಿಸಿದನು. ಅದಕ್ಕೆ ಕಾರಣವು ತಿಳಿಯಲಿಲ್ಲ.

೪೦೧—೪೦೨. ಸಂವರ್ತನು ಹೇಳುತ್ತಾನೆ:—ನಾನು ಅತಿಕ್ರುದ್ಧನಾಗಿ ಶಾಪದಿಂದ ಇದನ್ನೇ ಮಾಡಲುದ್ಯುಕ್ತನಾಗಿದ್ದೆನು. ಆದುದರಿಂದ ಅವನೇ ಇದನ್ನು ಮಾಡಿಕೊಂಡನು. ನೀವು ಇಲ್ಲಿಗೇಕೆ ಬಂದಿದ್ದೀರಿ? ನನಗೆ ಬೇಗನೆ ಹೇಳಿರಿ.

೪೦೩. ನಾನು ಇಲ್ಲಿ ಬಹಳ ಹೊತ್ತು ಇರುವುದಿಲ್ಲ. ಜೀವನಕ್ಕಾಗಿ ಭಿಕ್ಷಾಟನೆಮಾಡಲು ಪಟ್ಟಣದಲ್ಲಿ ಸಂಚರಿಸುವೆನು.

೪೦೪. ಹೆಣವನ್ನು ತೆಗೆದು ಮಾರ್ಗವನ್ನು ಅಡ್ಡಿಯಿಲ್ಲದಂತೆ ಮಾಡಿರಿ. ಹೀಗೆ ಮಾಡದಿದ್ದರೆ ಶಾಪವನ್ನು ಕೊಡುವೆನು.

೪೦೫—೪೦೬. ಹಾಗೆಯೇ ನಾನಿಲ್ಲಿರುವೆನೆಂದು ಯಾರಿಗೂ ಹೇಳಬಾರದು.

ಗುರುಪುತ್ರಂ ಚ ಮಾಂ ಜ್ಞಾತ್ವಾ ತತೋಽನ್ವೇಷಯತೇ ಹಿ ಮಾಂ ॥೪೦೭॥

ತ ಊಚುಃ:—

ಶಾಪಭ್ರಷ್ಟಾ ವಯಂ ಸರ್ವೇ ಚತ್ವಾರೋಽಪಿ ಬಕಾದಯಃ ।
ಪಕ್ಷಿತ್ವಂ ಚೈವ ಸಂಪ್ರಾಪ್ತಾ ಬ್ರಹ್ಮಶಾಪೇನ ಸನ್ಮುನೇ ॥ ೪೦೮ ॥
ಮಹೇಶ್ವರಗಣಾಶ್ಚೈವ ವಯಂ ತ್ರೈಲೋಕ್ಯವಂದಿತಾಃ ।
ತಿರ್ಯಗ್ಯೋನಿಂ ಸಮಾನೀತಾ ವೈರಾಗ್ಯಂ ಪರಮಂ ಗತಾಃ ॥ ೪೦೯ ॥
ಶಾಪಾಂತಸ್ತು ಸಮಾದಿಷ್ಟಸ್ತೈರ್ವಿಪ್ರೈಃ ಸ್ತ್ರೀಸಮುದ್ಭವಃ ।
ತವೋಪದೇಶತಸ್ತೇನ ಬಕಾದ್ಯಾಃ ಶರಣಂ ಗತಾಃ ॥ ೪೧೦ ॥
ತಸ್ಮಾತ್ತ್ರಾಹಿ ಮಹಾಭಾಗ ಪಕ್ಷಿತ್ವಾತ್ಸಾಂಪ್ರತಂ ವಿಭೋ ॥ ೪೧೧ ॥
ನಿರ್ವಿಣ್ಣಾಶ್ಚಿರಕಾಲಂ ಚ ಪಕ್ಷಿತ್ವಸ್ಯ ನಿಷೇವಣಾತ್ ।
ಏತಚ್ಚ ಕಾರಣಂ ನಾಽನ್ಯತ್ತ್ವ ಸಂಗಸಮುದ್ಭವಂ ॥ ೪೧೨ ॥

ಸಂವರ್ತ ಉವಾಚ:—

ಯದ್ಯೇವಂ ಗಮ್ಯತಾಂ ಶೀಘ್ರಂ ಚಮತ್ಕಾರಪುರಂ ಪ್ರತಿ ।
ಭರ್ತೃಯಜ್ಞಃ ಸ್ಥಿತೋಽಪ್ಯತ್ರ ಸರ್ವಸಂದೇಹ ಹಾರಕಃ ॥ ೪೧೩ ॥

---

ನನ್ನನ್ನು ಯಾವಾಗಲೂ ಮರುತ್ತರಾಜನು ಯಜ್ಞಕ್ಕಾಗಿ ಹುಡುಕುತ್ತಿರುವನು. ಬ್ರಹ್ಮನು ತ್ಯಜಿಸಿರುವ ಅವನಿಂದ ನಾನು ಯಾಗಮಾಡಿಸುವುದಿಲ್ಲ.

೪೦೭. ನಾನು ಬೃಹಸ್ಪತಿಯ ಮಗನೆಂದರಿತು ಅವನು ನನ್ನನ್ನು ಹುಡುಕುತ್ತಿರುವನು.

೪೦೮. ಅವರು ಹೇಳುತ್ತಾರೆ:—ಮುನಿಯೆ! ಬಕನೇ ಮೊದಲಾದ ಈ ನಾವು ನಾಲ್ವರೂ ಬ್ರಾಹ್ಮಣಶಾಪದಿಂದ ಪಕ್ಷಿಗಳಾಗಿದ್ದೇವೆ.

೪೦೯. ತ್ರಿಲೋಕವಂದಿತನಾದ ಮಹೇಶ್ವರನ ಗಣಗಳಾದ ನಾವು ತಿರ್ಯಗ್ಜಂತುಗಳಾಗಿ ಅತ್ಯಂತ ವೈರಾಗ್ಯಗೊಂಡಿದ್ದೇವೆ.

೪೧೦. ನಮಗೆ ಶಾಪವನ್ನಿತ್ತ ಆ ಬ್ರಾಹ್ಮಣರು, ಆ ಸ್ತ್ರೀಯರಸಲುವಾಗಿ ನಮಗೆ ಬಂದ ಶಾಪವು ನಿನ್ನ ಉಪದೇಶದಿಂದ ಪರಿಹಾರವಾಗುವುದೆಂದು ಹೇಳಿದ್ದಾರೆ. ಆದುದರಿಂದ ನಾವು ನಿನ್ನನ್ನು ಮರೆಹೊಕ್ಕಿದ್ದೇವೆ.

೪೧೧–೪೧೨. ಮಹಾಭಾಗ್ಯವಂತನೆ! ಬಹುಕಾಲ ಪಕ್ಷಿಗಳಾಗಿ ವ್ಯಥೆಗೊಂಡಿರುವ ನಮ್ಮನ್ನು ಪಕ್ಷಿತ್ವದಿಂದ ಕಾಪಾಡು. ನಿನ್ನ ಬಳಿಗೆ ಬರಲು ಇದೇ ಕಾರಣವಾಗಿರುವುದು. ಬೇರೆ ಕಾರಣವಿಲ್ಲ.

೪೧೩. ಸಂವರ್ತನು ಹೇಳುತ್ತಾನೆ:—ಹೀಗಾದರೆ ಬೇಗನೆ ಚಮತ್ಕಾರಪುರಕ್ಕೆ ಹೋಗಿರಿ. ಅಲ್ಲಿ ಸಕಲ ಸಂದೇಹಗಳನ್ನೂ ನಿವಾರಿಸುವ ಭರ್ತೃಯಜ್ಞನಿರುವನು.

ಸ ವೈ ದಾಸ್ಯತಿ ಸರ್ವೇಷಾಮುಪದೇಶಂ ಸುಶೋಭನಂ ।
ತೇನ ಪ್ರಾಪ್ಸ್ಯಥ ಸಂದೇಹಂ ಪೂರ್ವೀಯಂ ಚ ಯಥಾ ಸ್ಥಿತಂ ॥ ೪೧೪ ॥
ಸ ಪೂರ್ವಂ ಯಾಜ್ಞವಲ್ಕ್ಯೋಽಭೂತ್ಸರ್ವಶಾಸ್ತ್ರಾರ್ಥಪಾರಗಃ ।
ತತೋ ಭವಾಂತರೇಽನ್ಯಸ್ಮಿನ್ಕಾತ್ಯಾಯನ ಇತಿ ಸ್ಮೃತಃ ॥ ೪೧೫ ॥
ತತೋ ದೇಹಾಂತರಂ ಪ್ರಾಪ್ಯ ಖ್ಯಾತೋ ವರರುಚಿರ್ದ್ವಿಜಃ ।
ತತೋ ದೇಹಾಂತರೇಽನ್ಯಸ್ಮಿನ್ವೇಶ್ಯಾಪುತ್ರೋ ಬಭೂವ ಹ ॥ ೪೧೬ ॥
ಆರಾಧಿತಾ ಬ್ರಹ್ಮಸುತಾ ದೇವೀ ವಾಗ್ರೂಪಿಣೀ ಸದಾ ।
ನ ಚ ತುಷ್ಟಾ ಸ್ವಯಂ ದೇವೀ ಕಾರಣಂ ವೀಕ್ಷ್ಯ ಕಿಂಚನ ॥ ೪೧೭ ॥
ಬ್ರಾಹ್ಮಣೇನ ಪ್ರಜಾತಸ್ತು ದೇಹಾಂತಂ ಪ್ರಾಪ್ಯ ಕಿಂಚನ ।
ತಸ್ಯ ವಕ್ತ್ರಂ ಸಮಾಪನ್ನಾ ಸ್ವಯಮೇವ ಸರಸ್ವತೀ ॥ ೪೧೮ ॥
ಪೂರ್ವಮಾರಾಧಿತಾ ನಿತ್ಯಂ ನ ಸಾ ತ್ಯಜತಿ ಕರ್ಹಿಚಿತ್ ।
ತಸ್ಯಾಶ್ಚರ್ಯಮಭೂಚ್ಚಾಽನ್ಯದ್ಯಜ್ಞೇ ವೇಶ್ಯಾಸುತಸ್ಯ ಹಿ ॥ ೪೧೯ ॥
ಬ್ರಹ್ಮಸೂತ್ರಂ ಸಮಭ್ಯೇತಿ ಸ್ಕಂಧೇ ನಿರ್ಯಾತಿ ಗಚ್ಛತಿ ॥ ೪೨೦ ॥
ಪೂರ್ವೇಷಾಮೇವ ಲೋಕಾನಾಂ ಯಜ್ಞಕರ್ಮಸು ಸಂಸ್ಥಿತಾನ್ ।
ಸ ಸಂದೇಹಾನ್ ಹರತ್ಯೇವ ಯಥಾ ನಾಽನ್ಯೋಽತ್ರ ಕಶ್ಚನ ॥ ೪೨೧ ॥

---

೪೧೪. ಅವನು ನಿಮ್ಮೆಲ್ಲರಿಗೂ ಮಂಗಳಕರವಾದ ಉಪದೇಶವನ್ನು ಮಾಡುವನು. ಅದರಿಂದ ಹಿಂದಿನ ನಿಮ್ಮ ಶರೀರವನ್ನು ಹೊಂದುವಿರಿ.

೪೧೫. ಅವನು ಹಿಂದೆ ಸಕಲ ಶಾಸ್ತ್ರಪಾರಂಗತನಾದ ಯಾಜ್ಞವಲ್ಕ್ಯನಾಗಿದ್ದನು. ಅನಂತರ ಬೇರೆ ಜನ್ಮದಲ್ಲಿ ಕಾತ್ಯಾಯನನಾಗಿದ್ದನು.

೪೧೬. ಬಳಿಕ ದೇಹಾಂತರವನ್ನು ಪಡೆದು ವರರುಚಿಯೆಂದು ಪ್ರಸಿದ್ಧನಾದನು. ತರುವಾಯ ಮತ್ತೊಂದು ಜನ್ಮದಲ್ಲಿ ವೇಶ್ಯೆಯ ಮಗನಾದನು.

೪೧೭. ಅವನು ಬ್ರಹ್ಮನ ಮಗಳಾದ ವಾಗ್ದೇವಿಯನ್ನು ಆರಾಧಿಸಿದನು. ಅವಳು ಯಾವುದೋ ಕಾರಣವನ್ನು ನೋಡಿ ಅವನಿಗೆ ತುಷ್ಟಳಾಗಲಿಲ್ಲ.

೪೧೮–೪೨೧. ಅವನು ಆ ಶರೀರದ ಅವಸಾನವನ್ನು ಹೊಂದಿ ಬ್ರಾಹ್ಮಣನಿಂದ ಜನಿಸಲು ಹಿಂದೆ ಪೂಜಿಸಲ್ಪಟ್ಟ ಸರಸ್ವತಿಯು ತಾನೇ ಅವನ ಬಾಯಿಯನ್ನು ಸೇರಿ ಯಾವಾಗಲೂ ಅವನನ್ನು ಬಿಡಲಿಲ್ಲ. ವೇಶ್ಯಾಸುತನಾದ ಅವನಿಗೆ ಯಜ್ಞದಲ್ಲಿ ಯಜ್ಞೋಪವೀತವು ಹೆಗಲಿಗೆ ಬಂದು ಸೇರಿ ಹೋಗುತ್ತಿರುವುದು ಆಶ್ಚರ್ಯವನ್ನುಂಟುಮಾಡಿತು. ಅವನು ಹಿಂದಿನ ಜನರಿಗೆ ಯಜ್ಞಕರ್ಮದಲ್ಲಿ ಉಂಟಾದ ಸಂದೇಹವನ್ನು ನಿವಾರಿಸುವಂತೆ ಬೇರೆ ಯಾರೂ ಪರಿಹರಿಸುತ್ತಿರಲಿಲ್ಲ.

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಪ್ರಣಿಪತ್ಯ ಮುಹುರ್ಮುಹುಃ ।
ಗತಾಸ್ತೇ ಕುಣಪಂ ಯತ್ರ ಸಂವರ್ತೇನ ಪ್ರಣೋದಿತಾಃ ॥ ೪೨೨ ॥
ತಚ್ಚಾಕೃಷ್ಯ ತತಃ ಸರ್ವೇ ಚಮತ್ಕಾರಪುರಂ ಗತಾಃ ।
ವಾಸ್ತುಸ್ಥಾನಪದೇ ತೀರ್ಥೇ ತಂ ದೃಷ್ಟ್ವಾ ತತ್ರ ಸಂಸ್ಥಿತಂ ॥ ೪೨೩ ॥
ಪ್ರಣಿಪತ್ಯ ತತಃ ಪ್ರೋಚುಃ ಸರ್ವೇ ವಿನಯಸಂಸ್ಥಿತಾಃ ।
ಬ್ರಹ್ಮಶಾಪೇನ ನಿರ್ದಗ್ಧಾ ವಯಂ ಚತ್ವಾರ ಏವ ಹಿ ॥ ೪೨೪ ॥
ಪಕ್ಷಿತ್ವಂ ಸಮುಸಂಪ್ರಾಪ್ತಾಸ್ತ್ರಯಃ ಕೂರ್ಮತ್ವಮನ್ಯಕಃ ।
ಯ ಏತೇ ಚ ತ್ರಯೋಽಸ್ಮಾಕಂ ಸ್ಥಿತಾಃ ಪಾರ್ಶ್ವೇ ಮಹತ್ತರಾಃ ॥ ೪೨೫ ॥
ಮಾರ್ಕಂಡಃ ಕಥಿತೋ ಹ್ಯೇಷ ಇಂದ್ರದ್ಯುಮ್ನಸ್ತಥಾಪರಃ ।
ತೃತೀಯೋ ಲೋಮಶೋ ನಾಮ ವಿಖ್ಯಾತಃ ಸುಮಹಾ ತಪಾಃ ॥ ೪೨೬ ॥
ಜೀವಿತವ್ಯಸ್ಯ ನಿರ್ವಿಣ್ಣಾಸ್ತ್ರಯ ಏವ ಚ ಸಾಂಪ್ರತಂ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೪೨೭ ॥

ಸೂತ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಭರ್ತೃಯಜ್ಞೋ ಮಹಾಮುನಿಃ ।
ಅಬ್ರವೀತ್ಸುಚಿರಂ ಧ್ಯಾತ್ವಾ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೪೨೮ ॥
ಯೂಯಂ ಸಪ್ತೈವ ಲಿಂಗಾನಿ ಸ್ಥಾಪಯಧ್ವಂ ಸಮಾಗತಾಃ ।
ಹಾಟಕೇಶ್ವರಜೇ ಕ್ಷೇತ್ರೇ ನಾಮ್ನಾ ಚೈವಾಂತಿಕೇ ವಿಭೋಃ ॥ ೪೨೯ ॥

---

೪೨೨–೪೨೬. ಸೂತನು ಹೇಳುತ್ತಾನೆ:—ಆ ಬಕಾದಿಗಳು ಸಂವರ್ತನ ಮಾತನ್ನು ಕೇಳಿ ಬಾರಿ ಬಾರಿಗೂ ನಮಸ್ಕಾರಮಾಡಿ ಅವನ ಪ್ರೇರಣೆಯಂತೆ ದಾರಿಯಲ್ಲಿರುವ ಶವವನ್ನು ತೆಗೆದು ಚಮತ್ಕಾರಪುರಕ್ಕೆ ಹೋಗಿ ವಾಸ್ತುಸ್ಥಾನ ತೀರ್ಥದಲ್ಲಿರುವ ಆ ಭರ್ತೃಯಜ್ಞನನ್ನು ಕಂಡು ವಂದಿಸಿ ವಿನಯದಿಂದ ಹೀಗೆಂದರು. ನಾವು ನಾಲ್ಕು ಮಂದಿಯೂ ಬ್ರಾಹ್ಮಣನ ಶಾಪದಿಂದ ದಗ್ಧರಾಗಿ ಮೂವರು ಪಕ್ಷಿಗಳೂ, ಇನ್ನೊಬ್ಬನು ಆಮೆಯೂ ಆಗಿದ್ದೇವೆ. ನಮ್ಮ ಬಳಿಯಿರುವ ಈ ಮಹಾತ್ಮರು ಮಾರ್ಕಂಡೇಯ, ಇಂದ್ರದ್ಯುಮ್ನ, ಲೋಮಶ ಎಂಬುವರು.

೪೨೭. ಈ ಮೂವರೂ ಈಗ ಬದುಕುವುದರಲ್ಲಿ ಆಶೆಯಿಲ್ಲದವರಾಗಿದ್ದಾರೆ. ಆದುದರಿಂದ ಉಪದೇಶಮಾಡಿ ಅನುಗ್ರಹಿಸು.

೪೨೮–೪೨೯. ಸೂತನು ಹೇಳುತ್ತಾನೆ:— ಭರ್ತೃಯಜ್ಞನು ಅವರ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ದಿವ್ಯದೃಷ್ಟಿಯಿಂದ ವಿಚಾರವನ್ನು ತಿಳಿದು ಇಂತೆಂದನು. "ನೀವು ಮಹೇಶ್ವರನ ಹೆಸರಿನಿಂದ ಹಾಟಕೇಶ್ವರ ಕ್ಷೇತ್ರದಲ್ಲಿ ಏಳು ಲಿಂಗಗಳನ್ನು ಪ್ರತಿಷ್ಠೆಮಾಡಿರಿ.

ತತೋ ದಾನಾನಿ ಸಪ್ತೈವ ತೇಷಾಮಗ್ರೇ ಪ್ರಯಚ್ಛತ ।
ಕುಲಪರ್ವತಸಂಜ್ಞಾನಿ ಸರ್ವಪಾಪಹರಾಣಿ ಚ ॥ ೪೩೦ ॥
ತತಃ ಪ್ರಾಪ್ಸ್ಯಥ ಚಾಽಭೀಷ್ಟಂ ವಪುರ್ದಿವ್ಯಂ ಮನೋರಮಂ ।
ಗಣತ್ವಂ ದೇವದೇವಸ್ಯ ತ್ರಿಣೇತ್ರಸ್ಯ ಮಹಾತ್ಮನಃ ॥ ೪೩೧ ॥

ತ ಊಚುಃ :—

ಪ್ರಕೀರ್ತಯ ವಿಭೋ ದಾನಂ ತೇಷಾಂ ಯಚ್ಛಾಮಹೇ ಯಥಾ ।
ಪ್ರಮಾಣಂ ಚ ವಿಧಾನಂ ಚ ವಿಸ್ತರೇಣ ಮಹಾಮುನೇ ॥ ೪೩೨ ॥

ಭರ್ತೃಯಜ್ಞ ಉವಾಚ :—

ದೇಯೋ ಹೇಮಮಯೋ ಮೇರುಃ ಕೈಲಾಸೋ ರಜತೋದ್ಭವಃ ।
ಕಾರ್ಪಾಸೇನ ಹಿಮಾದ್ರಿಸ್ತು ಗುಡಜೋ ಗಂಧಮಾದನಃ ॥ ೪೩೩ ॥
ಸುವೇಲಸ್ತು ತಿಲೈರ್ದೇಯೋ ವಿಂಧ್ಯಃ ಶರ್ಕರಯಾ ತಥಾ ।
ಲವಣೇನ ತಥಾ ಶೃಂಗೀ ಯಥೋಕ್ತವಿಧಿನಾ ತತಃ ॥ ೪೩೪ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸಂಸ್ಥಾಪ್ಯ ವಿಧಿಪೂರ್ವಕಂ ।
ಸಪ್ತಲಿಂಗಾನಿ ತೈಃ ಪಶ್ಚಾತ್ಪ್ರದತ್ತಾಃ ಕುಲಪರ್ವತಾಃ ॥ ೪೩೫ ॥
ಇಂದ್ರದ್ಯುಮ್ನೇಶ್ವರಸ್ಯಾಗ್ರೇ ಇಂದ್ರದ್ಯುಮ್ನಃ ಪ್ರತಾಪವಾನ್ ।
ಮೇರುಂ ಹೇಮಮಯಂ ಕೃತ್ವಾ ಭರ್ತೃಯಜ್ಞಮತೇ ಸ್ಥಿತಃ ॥ ೪೩೬ ॥

---

೪೩೦. ಅನಂತರ ಸಕಲ ಪಾಪಗಳನ್ನು ಪರಿಹರಿಸುವ ಕುಲಪರ್ವತವೆಂಬ ಸಪ್ತ ದಾನಗಳನ್ನು ಆ ಲಿಂಗಗಳ ಸನ್ನಿಧಿಯಲ್ಲಿ ಮಾಡಿರಿ.

೪೩೧. ಅನಂತರ ನೀವು ಮನೋಹರವಾದ ದಿವ್ಯ ಶರೀರವನ್ನು ಪಡೆದು ಮಹಾತ್ಮನಾದ ಶಂಕರನ ಗಣಗಳಾಗುವಿರಿ.

೪೩೨. ಅವರು ಹೇಳುತ್ತಾರೆ:—ಮಹರ್ಷಿಯೆ! ಆ ದಾನದ ಪ್ರಮಾಣ ಮತ್ತು ವಿಧಾನವನ್ನು ವಿಸ್ತಾರವಾಗಿ ನಮಗೆ ಹೇಳು. ಆ ದಾನವನ್ನು ಕೊಡುವೆವು.

೪೩೩—೪೩೪. ಭರ್ತೃಯಜ್ಞನು ಹೇಳುತ್ತಾನೆ:—ಚಿನ್ನದ ಮೇರುಪರ್ವತ, ಬೆಳ್ಳಿಯ ಕೈಲಾಸ, ಹತ್ತಿಯ ಹಿಮಾಲಯ, ಬೆಲ್ಲದ ಗಂಧಮಾದನ, ಎಳ್ಳಿನ ಸುವೇಲ, ಸಕ್ಕರೆಯ ವಿಂಧ್ಯ, ಉಪ್ಪಿನ ಶೃಂಗಿ ಈ ಪರ್ವತಗಳನ್ನು ವಿಧಿಯಂತೆ ದಾನಮಾಡಬೇಕು.

೪೩೫. ಸೂತನು ಹೇಳುತ್ತಾನೆ:—ಅವರು ಆ ಭರ್ತೃಯಜ್ಞನ ಮಾತನ್ನು ಕೇಳಿ ವಿಧಿಯಂತೆ ಏಳು ಶಿವಲಿಂಗಗಳನ್ನು ಸ್ಥಾಪಿಸಿ ಕುಲಪರ್ವತಗಳನ್ನು ದಾನ ಮಾಡಿದರು.

೪೩೬. ಪ್ರತಾಪಶಾಲಿಯಾದ ಇಂದ್ರದ್ಯುಮ್ನನು ಭರ್ತೃಯಜ್ಞನ ಅಭಿಪ್ರಾಯ

ಮಾರ್ಕಂಡೇಶ್ವರ ದೇವಸ್ಯ ಮಾರ್ಕಂಡೇನ ಚ ಧೀಮತಾ ।
ಕೈಲಾಸೋ ರಾಜತೋ ದತ್ತೋ ಭಕ್ತಿಪೂರ್ವಂ ದ್ವಿಜೋತ್ತಮಾಃ ॥೪೩೭॥
ಕಾರ್ಪಾಸೋ ಹಿಮವಾನ್ ದತ್ತಃ ಪಾಲಕೇನ ದ್ವಿಜಾತಯೇ ।
ಗಂಧಮಾದನ ಸಂಜ್ಞಸ್ತು ಪ್ರದತ್ತೋ ಗುಡಜಃ ಪುರಃ ॥ ೪೩೮ ॥
ಘಂಟಿಕೇಶ್ವರ ದೇವಸ್ಯ ಘಂಟಿಕೇನ ದ್ವಿಜೋತ್ತಮಾಃ ।
ಕಚ್ಛಪೇನ ತು ಸಂದತ್ತಃ ಸುವೇಲಃ ಪರ್ವತೋತ್ತಮಃ ॥ ೪೩೯ ॥
ಕಚ್ಛಪೇಶ್ವರದೇವಸ್ಯ ಪುರಸ್ತಿಲಮಯಸ್ತಥಾ ।
ಶಾರ್ಕರಸ್ತು ತದಾ ಶೈಲಃ ಪ್ರದತ್ತೋ ಭಕ್ತಿಪೂರ್ವಕಂ ॥ ೪೪೦ ॥
ಶೈಲ ಈಶಾನಸಂಜ್ಞೇನ ನಿಜದೇವಸ್ಯ ಚಾಗ್ರತಃ ।
ವಾನರೇಶ್ವರ ದೇವಸ್ಯ ಪುರತೋ ದ್ವಿಜಸತ್ತಮಾಃ ॥ ೪೪೧ ॥
ಗೃಧ್ರೇಣಾಥ ಪ್ರದತ್ತಸ್ತು ಲವಣಾಖ್ಯೋ ಮಹಾಗಿರಿಃ ।
ಶೃಂಗೀನಾಮ ಮಹಾಭಾಗಃ ಶ್ರದ್ಧಾಪೂತೇನ ಚೇತಸಾ ॥ ೪೪೨ ॥
ತತ್ರಾಶ್ಚರ್ಯಮಭೂದ್ವಿಪ್ರಾ ದತ್ತಮಾತ್ರೈರ್ನಗೋತ್ತಮೈಃ ।
ಪಕ್ಷಿತ್ವಂ ನಿರ್ಗತಂ ತೇಷಾಂ ಕೂರ್ಮತ್ವಮಿತರಸ್ಯ ಚ ॥ ೪೪೩ ॥
ಏತಸ್ಮಿನ್ನೇವ ಕಾಲೇತು ಸರ್ವೇ ತೇ ತತ್ಪ್ರಭಾವತಃ ।
ದಿವ್ಯಮಾಲ್ಯಾಂಬರಧರಾ ದಿವ್ಯಗಂಧಾನುಲೇಪನಾಃ ।
ಸಂಜಾತಾ ಬ್ರಾಹ್ಮಣಶ್ರೇಷ್ಠಾ ಯೇ ಚ ತತ್ಸಂಮುಖೇ ಸ್ಥಿತಾಃ ॥ ೪೪೪ ॥

---

ದಂತೆ ಇಂದ್ರದ್ಯುಮ್ನನ ಮುಂದೆ ಸುವರ್ಣ ಮೇರುಪರ್ವತವನ್ನು ದಾನ ಮಾಡಿದನು.

೪೩೭. ಮಾರ್ಕಂಡೇಯನು ಮಾರ್ಕಂಡೇಶ್ವರನ ಮುಂದೆ ಭಕ್ತಿಪೂರ್ವಕ ವಾಗಿ ಬೆಳ್ಳಿಯ ಕೈಲಾಸಪರ್ವತವನ್ನು ದಾನಮಾಡಿದನು.

೪೩೮–೪೪೨. ಪಾಲಕನು ಹತ್ತಿಯ ಹಿಮವತ್ಪರ್ವತವನ್ನು ದಾನಮಾಡಿದನು. ಘಂಟಕನು ಘಂಟಕೇಶ್ವರನ ಮುಂದೆ ಬೆಲ್ಲದ ಗಂಧಮಾದನಪರ್ವತವನ್ನು ದಾನಮಾಡಿದನು. ಆಮೆಯು ಕಚ್ಛಪೇಶ್ವರನ ಮುಂದೆ ಎಳ್ಳಿನ ಸುವೇಲ ಪರ್ವತವನ್ನು ದಾನಮಾಡಿತು. ಈಶಾನನು ಈಶಾನೇಶ್ವರನ ಮುಂದೆ ಸಕ್ಕರೆಯ ಪರ್ವತವನ್ನು ಭಕ್ತಿಪೂರ್ವಕವಾಗಿ ದಾನಮಾಡಿದನು. ಗೃಧ್ರನು ವಾನರೇಶ್ವರನ ಮುಂದೆ ಶ್ರದ್ಧೆಯಿಂದ ಲವಣದ ಶೃಂಗಿಯೆಂಬ ಪರ್ವತವನ್ನು ದಾನಮಾಡಿದನು.

೪೪೩. ವಿಪ್ರರೆ! ಅವರು ಪರ್ವತಗಳನ್ನು ದಾನಮಾಡಿದ ಕೂಡಲೆ ಮೂವರ ಪಕ್ಷಿತ್ವವೂ, ಕೂರ್ಮದ ಕೂರ್ಮತ್ವವೂ ತೊಲಗಿ ಆಶ್ಚರ್ಯವುಂಟಾಯಿತು.

೪೪೪. ಅದರ ಪ್ರಭಾವದಿಂದ ಅವರೆಲ್ಲ ಈ ಸಮಯದಲ್ಲಿ ದಿವ್ಯಮಾಲೆ, ದಿವ್ಯಗಂಧಗಳನ್ನು ಧರಿಸಿ ಉತ್ತಮ ಬ್ರಾಹ್ಮಣರಾಗಿ ಆ ಲಿಂಗಗಳ ಮುಂದೆ ನಿಂತರು.

ವಿಮಾನಾನಿ ಚ ಸರ್ವೇಷಾಂ ಸಮಾಯಾತಾನಿ ತತ್ಕ್ಷಣಾತ್ ।
ಭರ್ತೃಯಜ್ಞಮುಸುಪ್ರಾಪ್ಯ ಪ್ರಣಿಪತ್ಯ ಚ ತಾನ್ ದ್ವಿಜಾನ್ ।
ಕೈಲಾಸಂ ಪರ್ವತಂ ಪ್ರಾಪ್ತಾ ವಿಮಾನವರಮಾಶ್ರಿತಾಃ ॥ ೪೪೫ ॥
ಏತದ್ವಃ ಸರ್ವಮಾಖ್ಯಾತಂ ಯಥಾ ತಲ್ಲಿಂಗಸಪ್ತಕಂ ।
ಹಾಟಕೇಶ್ವರಜೇ ಕ್ಷೇತ್ರೇ ಸಂಜಾತಂ ಪಾಪನಾಶನಂ ॥ ೪೪೬ ॥
ಅನ್ಯೋಽಪಿ ಯಃ ಪುನಸ್ತೇಷಾಂ ಲಿಂಗಾನಾಂ ಭಕ್ತಿಸಂಯುತಃ ।
ಕುಲಪರ್ವತದಾನಂ ಚ ಕುರ್ಯಾತ್ಸೋಽಪಿ ಶಿವಂ ವ್ರಜೇತ್ ॥ ೪೪೭ ॥
ತಾನಿ ಲಿಂಗಾನಿ ಯೋ ಮರ್ತ್ಯಃ ಪ್ರಾತರುತ್ಥಾಯ ವೀಕ್ಷತೇ ।
ಅಜ್ಞಾನವಿಹಿತಾತ್ಪಾಪಾತ್ಸೋಽಪಿ ಮುಕ್ತಿಮವಾಪ್ನುಯಾತ್ ॥ ೪೪೮ ॥
ಯಶ್ಚೈತಾನ್ ಪರ್ವತಾನ್ ಸಪ್ತ ಕ್ರಮೇಣಾಽತ್ರ ಪ್ರಯಚ್ಛತಿ ।
ದ್ವಿಜಾತಿಭ್ಯಃ ಸ್ವಲಿಂಗಾನಾಂ ಪುರತಸ್ತ್ರಿದಿವಂ ವ್ರಜೇತ್ ॥ ೪೪೯ ॥
ಸ್ಥಿತ್ವಾ ಕಲ್ಪಾಂತರಂ ತತ್ರ ಸಂಸೇವ್ಯ ಚ ವರಾಪ್ಸರಾಃ ।
ದಿವ್ಯಾನ್ ಭೋಗಾಂಶ್ಚ ಸಂಸೇವ್ಯ ಯದಾ ಭೂಮೌ ಪ್ರಜಾಯತೇ ।
ಚಕ್ರವರ್ತಿತ್ವಮಾಸಾದ್ಯ ಸಾರ್ವಭೌಮಃ ಪ್ರಜಾಯತೇ ॥ ೪೫೦ ॥
ಏಕೇನ ತು ಪ್ರದತ್ತೇನ ಜಾಯತೇ ಪಾಪಸಂಕ್ಷಯಃ ।
ದ್ವಾಭ್ಯಾಂ ಪುತ್ರಾಶ್ಚ ಪೌತ್ರಾಶ್ಚ ವಾಂಛಿತಾನಿ ಫಲಾನಿ ಚ ॥ ೪೫೧ ॥

---

೪೪೫. ಅವರಿಗೆಲ್ಲ ತತ್‌ಕ್ಷಣದಲ್ಲಿಯೇ ವಿಮಾನಗಳು ಬಂದುವು. ಭರ್ತೃಯಜ್ಞನನ್ನು ಹೊಂದಿ ಆ ಬ್ರಾಹ್ಮಣರನ್ನು ವಂದಿಸಿ ಅವರೆಲ್ಲರೂ ವಿಮಾನವನ್ನೇರಿ ಕೈಲಾಸಪರ್ವತವನ್ನು ಸೇರಿದರು.

೪೪೬. ಹೀಗೆ ನಿಮಗೆ ಆ ಹಾಟಕೇಶ್ವರ ಕ್ಷೇತ್ರದಲ್ಲಿ ಆ ಏಳು ಲಿಂಗಗಳು ಹೇಗಾದುವು? ಎಂಬುದನ್ನು ಹೇಳಿರುವೆನು.

೪೪೭. ಇತರ ಮಾನವನೂ ಆ ಶಿವಲಿಂಗಗಳ ಮುಂದೆ ಭಕ್ತಿಯಿಂದ ಕುಲಪರ್ವತಗಳನ್ನು ದಾನಮಾಡಿದರೆ ಅವನೂ ಶಿವನನ್ನು ಸೇರುವನು.

೪೪೮. ಆ ಶಿವಲಿಂಗಗಳನ್ನು ಬೆಳಗ್ಗೆ ಎದ್ದು ದರ್ಶನಮಾಡಿದ ಮಾನವನು ಅಜ್ಞಾನದಿಂದ ಮಾಡಿದ ಪಾಪದಿಂದ ಮುಕ್ತನಾಗುವನು.

೪೪೯. ಈ ಲಿಂಗಗಳ ಮುಂದೆ ಕ್ರಮವಾಗಿ ಸಪ್ತಪರ್ವತಗಳನ್ನು ಬ್ರಾಹ್ಮಣರಿಗೆ ದಾನಮಾಡಿದವನು ಸ್ವರ್ಗವನ್ನು ಸೇರುವನು.

೪೫೦. ಅಲ್ಲಿ ಅವನು ಕಲ್ಪಕಾಲದವರೆಗೆ ಉತ್ತಮ ಅಪ್ಸರೆಯರನ್ನೂ, ದಿವ್ಯ ಭೋಗಗಳನ್ನೂ ಅನುಭವಿಸಿ ಭೂಮಿಯಲ್ಲಿ ಚಕ್ರವರ್ತಿಯಾಗಿ ಜನಿಸುವನು.

೪೫೧—೪೫೩. ಒಂದು ಪರ್ವತವನ್ನು ದಾನಮಾಡುವುದರಿಂದ ಪಾಪನಾಶವೂ, ಎರಡರಿಂದ ಪುತ್ರಪೌತ್ರರೂ, ಇಷ್ಟವಾದ ಫಲಗಳೂ, ಮೂರರಿಂದ ರಾಜನೂ,

ತ್ರಿಭಿಃ ಸಂಜಾಯತೇ ರಾಜಾ ಚತುರ್ಭಿರ್ಮಂಡಲೇಶ್ವರಃ ।
ಭಾರತಸ್ಯ ಚ ಖಂಡಸ್ಯ ಸ್ವಾಮೀ ಭವತಿ ಪಂಚಭಿಃ ॥ ೪೫೨ ॥
ಜಂಬುದ್ವೀಪಸ್ಯಾಧಿಪಃ ಷಡ್ಭಿಶ್ಚಕ್ರವರ್ತೀ ಚ ಸಪ್ತಭಿಃ
ವಿಧಿವತ್ಪರ್ವತೈರ್ದತ್ತೈರೇತದಾಹ ಪಿತಾಮಹಃ ॥ ೪೫೩ ॥
ನರಃ ಸ್ಯಾದ್ಬ್ರಾಹ್ಮಣಶ್ರೇಷ್ಠಾಃ ಸದಾ ಜನ್ಮನಿ ಜನ್ಮನಿ ।
ನ ದುಃಖಿತೋ ದರಿದ್ರೋ ವಾ ವ್ಯಾಧಿತೋ ವಾ ಪ್ರಜಾಯತೇ ॥ ೪೫೪ ॥
ಸೌಭಾಗ್ಯಸುಖಸಂಯುಕ್ತಃ ಸುದೇಹೋ ರತ್ನವಾನ್ ಭವೇತ್ ।
ಸರ್ವಶತ್ರುವಿನಿರ್ಮುಕ್ತಃ ಪ್ರತಾಪೀ ವಿಜಿತೇಂದ್ರಿಯಃ ॥ ೪೫೫ ॥
ತಸ್ಮಾತ್ಸರ್ವಪ್ರಯತ್ನೇನ ಭೂಮಿಪಾಲೈರ್ವಿಶೇಷತಃ ।
ಏತೇ ಚ ಪರ್ವತಾ ದೇಯಾ ಉದ್ದಿಶ್ಯ ನಿಜದೇವತಾಃ ॥ ೪೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಪ್ತಲಿಂಗೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಏಕಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

ನಾಲ್ಕರಿಂದ ಮಂಡಲಾಧಿಪನೂ, ಐದರಿಂದ ಭರತಖಂಡದ ಸ್ವಾಮಿಯೂ, ಆರರಿಂದ ಜಂಬುದ್ವೀಪದೊಡೆಯನೂ, ಏಳರಿಂದ ಚಕ್ರವರ್ತಿಯೂ ಆಗುವನು ಎಂದು ಬ್ರಹ್ಮನು ಹೇಳಿರುವನು.

೪೫೪. ಬ್ರಾಹ್ಮಣೋತ್ತಮರೆ! ಇದರಿಂದ ಮಾನವನು ಪ್ರತಿ ಜನ್ಮದಲ್ಲಿಯೂ ದುಃಖಿತನಾಗಲಿ, ದರಿದ್ರನಾಗಲಿ, ರೋಗಿಯಾಗಲಿ ಆಗುವುದಿಲ್ಲ.

೪೫೫. ಸೌಭಾಗ್ಯಸುಖಗಳಿಂದ ಕೂಡಿದವನೂ, ಸುಂದರ ಶರೀರವುಳ್ಳವನೂ, ರತ್ನವುಳ್ಳವನೂ, ಸಕಲ ಶತ್ರುರಹಿತನೂ, ಪ್ರತಾಪಶಾಲಿಯೂ, ಜಿತೇಂದ್ರಿಯನೂ ಆಗುವನು.

೪೫೬. ಆದುದರಿಂದ ರಾಜರು ಪ್ರಯತ್ನಿಸಿ ತಮ್ಮ ದೇವತೆಗಳನ್ನುದ್ದೇಶಿಸಿ ಈ ಪರ್ವತಗಳನ್ನು ದಾನಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಪ್ತಲಿಂಗೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ಇನ್ನೂರ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ಯುಗಸ್ವರೂಪವರ್ಣನಂ

ಋಷಯ ಊಚುಃ :—

ಯದೇತದ್ಭಗವತಾ ಪ್ರೋಕ್ತಮೀಶಾನಸ್ಯ ಮಹೀಪತೇಃ ।
ಈಶ್ವರೇಣ ಪುರಾ ದತ್ತಮಾಯುರ್ಯಾವತ್ಸ್ವವಾಸರಂ ।
ಕಿಂ ಪ್ರಮಾಣಂ ಭವೇತ್ತಸ್ಯ ದಿವಸಸ್ಯ ಬ್ರವೀಹಿ ನಃ ॥ ೧ ॥

ಸೂತ ಉವಾಚ :—

ಅಹಂ ವಃ ಕೀರ್ತಯಿಷ್ಯಾಮಿ ಪ್ರಮಾಣಂ ದಿವಸಸ್ಯ ತು ॥ ೨ ॥
ಮಾಹೇಶ್ವರಸ್ಯ ವಿಪ್ರೇಂದ್ರಾಃ ಶ್ರೂಯತಾಂ ಗದತಃ ಸ್ಫುಟಂ ।
ನಿಮೇಷಸ್ಯ ಚತುರ್ಭಾಗಸ್ತ್ರುಟಿಃ ಸ್ಯಾತ್ತದ್ದ್ವಯಂ ಲವಃ ॥ ೩ ॥
ಲವದ್ವಯಂ ಯವಃ ಪ್ರೋಕ್ತಃ ಕಾಷ್ಠಾ ತೇ ದಶಪಂಚ ಚ ।
ತ್ರಿಂಶತ್ಕಾಷ್ಠಾಃ ಕಲಾಮಾಹುಃ ಕ್ಷಣಸ್ತ್ರಿಂಶತ್ಕಲೋ ಮತಃ ॥ ೪ ॥
ಕ್ಷಣೈಃ ಷಷ್ಟ್ಯಾ ಫಲಂ ಪ್ರೋಕ್ತಂ ಷಷ್ಟ್ಯಾ ತೇಷಾಂ ಚ ನಾಡಿಕಾ ।
ನಾಡಿಕಾದ್ವಿತಯೇನೈವ ಮುಹೂರ್ತಂ ಪರಿಕೀರ್ತಿತಂ ॥ ೫ ॥
ತ್ರಿಂಶನ್ಮುಹೂರ್ತಮುದ್ದಿಷ್ಟಮಹೋರಾತ್ರಂ ಮನೀಷಿಭಿಃ ।
ಮಾಸಸ್ತ್ರಿಂಶದಹೋರಾತ್ರೈರ್ದ್ವೌ ದ್ವೌ ಮಾಸಾವೃತುಂ ವಿದುಃ ॥ ೬ ॥

---

## ಕನ್ನಡದ ಅನುವಾದ

### ಯುಗಸ್ವರೂಪವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಿಂದೆ ಈಶಾನರಾಜನಿಗೆ ಶಂಕರನು ತನ್ನ ಒಂದು ದಿವಸದ ಆಯುಷ್ಯವನ್ನು ಕೊಟ್ಟಿದ್ದಾನೆಂದು ಹೇಳಿರುವೆ. ಆ ಈಶ್ವರನ ದಿವಸವು ಎಷ್ಟು ಪ್ರಮಾಣವುಳ್ಳದು? ಅದನ್ನು ನಮಗೆ ಹೇಳು.

೨–೬. ಸೂತನು ಹೇಳುತ್ತಾನೆ:—ವಿಪ್ರವರ್ಯರೆ! ನಾನು ನಿಮಗೆ ಈಶ್ವರನ ದಿವಸದ ಪ್ರಮಾಣವನ್ನು ಹೇಳುವೆನು. ಸ್ಪಷ್ಟವಾಗಿ ಹೇಳುತ್ತಿರುವ ನನ್ನಿಂದ ಅದನ್ನು ಕೇಳಿರಿ. ನಾಲ್ಕು ನಿಮೇಷಗಳಿಂದ ಒಂದು ತ್ರುಟಿಯೂ, ಎರಡು ತ್ರುಟಿಗಳಿಂದ ಒಂದು ಲವವೂ, ಎರಡು ಲವಗಳಿಂದ ಒಂದು ಯವವೂ, ಹದಿನೈದು ಯವಗಳಿಂದ ಒಂದು ಕಾಷ್ಠವೂ, ಮೂವತ್ತು ಕಾಷ್ಠಗಳಿಂದ ಒಂದು ಕಲೆಯೂ, ಮೂವತ್ತು ಕಲೆಗಳಿಂದ ಒಂದು ಕ್ಷಣವೂ, ಅರುವತ್ತು ಕ್ಷಣಗಳಿಂದ ಒಂದು ಫಲವೂ, ಅರುವತ್ತು ಫಲಗಳಿಂದ ಒಂದು ನಾಡಿಯೂ, ಎರಡು ನಾಡಿಗಳಿಂದ

ಋತುತ್ರಯಂ ಚಾಪ್ಯಯನಮಯನೇ ದ್ವೇ ತು ವತ್ಸರಂ ।
ಮಾನುಷಾಣಾಂ ಹಿ ಸರ್ವೇಷಾಂ ಸ ಏವ ಪರಿಕೀರ್ತಿತಃ ॥ ೭ ॥
ಸ ದೇವಾನಾಮಹೋರಾತ್ರಂ ಪುರಾಣಜ್ಞಾಃ ಪ್ರಚಕ್ಷತೇ ।
ಅಯನಂ ಚೋತ್ತರಂ ಶುಕ್ಲಂ ಯದ್ದೇವಾನಾಂ ದಿನಂ ಚ ತತ್ ।
ಯದ್ದಕ್ಷಿಣಂ ತು ಸಾ ರಾತ್ರಿಃ ಶುಭಕರ್ಮವಿಗರ್ಹಿತಾ ॥ ೮ ॥
ಯಥಾ ಸುಪ್ತೋ ನ ಗೃಹ್ಣಾತಿ ಕಿಂಚಿದ್ಭೋಗಾದಿಕಂ ನರಃ ।
ತಥಾ ದೇವಾಶ್ಚ ಯಜ್ಞಾಂಶಾನ್ನಗೃಹ್ಣಂತಿ ಕಥಂಚನ ॥ ೯ ॥
ಅನೇನೈವ ತು ಮಾನೇನ ಮಾನವೇನ ದ್ವಿಜೋತ್ತಮಾಃ ।
ಲಕ್ಷೈಃ ಸಪ್ತದಶಾಖ್ಯೈಸ್ತು ವತ್ಸರಾಣಾಂ ಪ್ರಕೀರ್ತಿತಂ ॥ ೧೦ ॥
ಅಷ್ಟಾವಿಂಶತ್ಸಹಸ್ರೈಸ್ತು ವತ್ಸರಾಣಾಂ ಕೃತಂ ಯುಗಂ ।
ತಸ್ಮಿಂಶ್ವೇತೋಽಭವದ್ವಿಷ್ಣುರ್ಭಗವಾನ್ಯೋ ಜಗದ್ಗುರುಃ ॥ ೧೧ ॥
ಲೋಕಾಃ ಪಾಪವಿನಿರ್ಮುಕ್ತಾಃ ಶಾಂತಾ ದಾಂತಾ ಜಿತೇಂದ್ರಿಯಾಃ ।
ದೀರ್ಘಾಯುಷಸ್ತಥಾ ಸರ್ವೇ ಸದೈವ ತಪಸಿ ಸ್ಥಿತಾಃ ॥ ೧೨ ॥
ಯೋ ಯಥಾ ಜನ್ಮ ಚಾಽಽಪ್ನೋತಿ ತಥಾ ಸ ಮ್ರಿಯತೇ ನರಃ ।
ಸ ಪುತ್ರಸಂಭವೋ ಮೃತ್ಯುರ್ವೀಕ್ಷ್ಯತೇ ಜನಕೈಃ ಕ್ವಚಿತ್ ॥ ೧೩ ॥

---

ಒಂದು ಮುಹೂರ್ತವೂ, ಅರುವತ್ತು ಮುಹೂರ್ತಗಳಿಂದ ಒಂದು ದಿನವೂ, ಮೂವತ್ತು ದಿನಗಳಿಂದ ಒಂದು ತಿಂಗಳೂ, ಎರಡು ತಿಂಗಳಿಂದ ಒಂದು ಋತುವೂ, ಮೂರು ಋತುಗಳಿಂದ ಒಂದು ಅಯನವೂ, ಎರಡು ಅಯನಗಳಿಂದ ಒಂದು ಮನುಷ್ಯವರ್ಷವೂ ಆಗುವುದು.

೮. ಪುರಾಣಜ್ಞರು ಇದು ದೇವತೆಗಳ ದಿನವೆನ್ನುವರು. ಉತ್ತರಾಯಣವು ದೇವತೆಗಳಿಗೆ ಹಗಲೂ, ದಕ್ಷಿಣಾಯನವು ಅವರಿಗೆ ರಾತ್ರಿಯೂ ಆಗಿರುವುದು. ಆ ದಕ್ಷಿಣಾಯನವು ಶುಭಕರ್ಮಗಳಿಗೆ ಅನರ್ಹವಾದುದು.

೯. ನಿದ್ರಿಸಿದ ಮನುಷ್ಯನು ಯಾವ ಭೋಗಗಳನ್ನೂ ಅನುಭವಿಸದಿರುವಂತೆ ದೇವತೆಗಳೂ ಯಜ್ಞಾಂಶಗಳನ್ನು ದಕ್ಷಿಣಾಯನದಲ್ಲಿ ಸ್ವೀಕರಿಸುವುದಿಲ್ಲ.

೧೦–೧೧. ಈ ಮಾನವ ಪ್ರಮಾಣದ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳಿಂದ ಕೃತಯುಗವಾಗುವುದು. ಅದರಲ್ಲಿ ಪೂಜ್ಯನೂ, ಜಗದ್ಗುರುವೂ ಆದ ವಿಷ್ಣುವು ಶ್ವೇತವರ್ಣವುಳ್ಳವನಾದನು.

೧೨. ಜನರು ಪಾಪರಹಿತರೂ, ಶಾಂತರೂ, ದಾನ್ತರೂ, ಜಿತೇಂದ್ರಿಯರೂ, ದೀರ್ಘಾಯುಷ್ಮಂತರೂ, ಯಾವಾಗಲೂ ತಪೋನಿರತರೂ ಆಗುವರು.

೧೩. ಮನುಷ್ಯನು ಹುಟ್ಟಿದಂತೆಯೇ ಸುಖವಾಗಿ ಸಾಯುವನು. ತಂದೆಯು ಪುತ್ರ ಮರಣವನ್ನು ನೋಡುವುದಿಲ್ಲ.

ಕಾಮಃ ಕ್ರೋಧಸ್ತಥಾ ಲೋಭೋ ದಂಭೋ ಮತ್ಸರ ಏವ ಚ ।
ನ ಜಾಯತೇ ನೃಣಾಂ ತತ್ರ ಯುಗೇ ತು ದ್ವಿಜಸತ್ತಮಾಃ ॥ ೧೪ ॥
ತತಸ್ತ್ರೇತಾಯುಗಂ ಭಾವಿ ದ್ವಿತೀಯಂ ಮುನಿಸತ್ತಮಾಃ ।
ಪಾದೇನೈಕೇನ ಪಾಪಂ ತು ರೌದ್ರಂ ಧರ್ಮೇ ತದಾಽವಿಶತ್ ॥ ೧೫ ॥
ತತೋ ರಕ್ತತ್ವಮಭ್ಯೇತಿ ಭಗವಾನ್ ಮಧುಸೂದನಃ ।
ಪಾಪಾಂಶೇಽಪಿ ಚ ಸಂಪ್ರಾಪ್ತೇ ಸಸ್ಪರ್ಧೋ ಜಾಯತೇ ಜನಃ ॥ ೧೬ ॥
ಸ್ವರ್ಗಮಾರ್ಗಕೃತೇ ಸರ್ವೇ ಚಕ್ರುರ್ಯಜ್ಞಾಂಸ್ತತಃ ಪರಂ ।
ಅಗ್ನಿಷ್ಟೋಮಾದಿಕಾಂಸ್ತತ್ರ ಬಹುಹೋಮಾದಿಕಾಂಸ್ತಥಾ ॥ ೧೭ ॥
ದೇವಲೋಕಾಂಸ್ತತೋ ಯಾಂತಿ ಮೂಲಾದ್ಯಾವಚ್ಚತುರ್ದಶ ।
ಬ್ರಹ್ಮಲೋಕಸ್ಯ ಪರ್ಯಂತಂ ಸ್ವಕೀಯೈರ್ಯಜ್ಞಕರ್ಮಭಿಃ ॥ ೧೮ ॥
ಕಿಂಚಿತ್ಸ್ವಲ್ಪಾಯುಷಸ್ತತ್ರ ಜಾಯಂತೇ ಸ್ಪರ್ಧಯಾನ್ವಿತಾಃ ।
ಪರಂ ತತ್ರಾಽಪಿ ನೋ ಯಾಂತಿ ಮೃತ್ಯುಂ ಪುತ್ರಾಃ ಕಥಂಚನ ॥ ೧೯ ॥
ಜನಕೇ ವಿದ್ಯಮಾನೇ ಚ ಸ್ವಲ್ಪದೋಷಾಃ ಪ್ರಕೀರ್ತಿತಾಃ ।
ಕಾಮಕ್ರೋಧಾದಯೋ ಯೇ ಚ ಭವಂತಿ ನ ಭವಂತಿ ಚ ॥ ೨೦ ॥
ಏಕಯಾ ವೇಲಯಾ ತತ್ರ ವಾಪಿತಂ ಸಸ್ಯಮುತ್ತಮಂ ।
ಸಪ್ತವಾರಾನ್ ಪ್ರಗೃಹ್ಣಂತಿ ವೈಶ್ಯಾಃ ಕೃಷಿಪರಾಯಣಾಃ ॥ ೨೧ ॥

---

೧೪. ದ್ವಿಜವರ್ಯರೆ! ಆ ಯುಗದಲ್ಲಿ ಮನುಷ್ಯರಿಗೆ ಕಾಮ, ಕ್ರೋಧ, ಲೋಭ, ದಂಭ, ಮಾತ್ಸರ್ಯಗಳುಂಟಾಗುವುದಿಲ್ಲ.

೧೫. ಮುನಿವರ್ಯರೆ! ಬಳಿಕ ಎರಡನೆಯ ತ್ರೇತಾಯುಗವುಂಟಾಗುವುದು. ಆಗ ಭಯಂಕರಪಾಪವು ಒಂದು ಪಾದದಿಂದ ಧರ್ಮದಲ್ಲಿ ಪ್ರವೇಶಿಸುವುದು.

೧೬. ಬಳಿಕ ಪೂಜ್ಯನಾದ ವಿಷ್ಣುವು ರಕ್ತವರ್ಣವುಳ್ಳವನಾಗುವನು. ಪಾಪದ ಅಂಶದ ಸಂಬಂಧದಿಂದ ಜನರು ಪರಸ್ಪರ ಸ್ಪರ್ಧಿಸುವರು.

೧೭. ಎಲ್ಲರೂ ಸ್ವರ್ಗಕ್ಕಾಗಿ ಅಗ್ನಿಷ್ಟೋಮ ಮೊದಲಾದ ಅನೇಕ ಯಾಗಗಳನ್ನು ಮಾಡುವರು.

೧೮. ತಮ್ಮ ಯಜ್ಞಕರ್ಮಗಳಿಂದಲೇ ಬ್ರಹ್ಮಲೋಕದವರೆಗೆ ಹದಿನಾಲ್ಕು ಲೋಕಗಳನ್ನು ಹೊಂದುವರು.

೧೯–೨೦. ಆ ಯುಗದಲ್ಲಿ ಜನರು ಸ್ವಲ್ಪ ಕಡಮೆ ಆಯುಸ್ಸುಳ್ಳವರಾಗಿ ಪರಸ್ಪರ ಸ್ಪರ್ಧಿಸುವರು. ಆದರೆ ಆ ಯುಗದಲ್ಲಿಯೂ ತಂದೆಯಿರುವಾಗ ಪುತ್ರರು ಮಡಿಯುವುದಿಲ್ಲ. ಜನರು ಸ್ವಲ್ಪ ದೋಷವುಳ್ಳವರಾಗುವರು. ಕಾಮಕ್ರೋಧಾದಿಗಳು ಉಂಟಾಗುವುದೂ ಉಂಟು. ಉಂಟಾಗದಿರುವುದೂ ಉಂಟು.

೨೧. ಕೃಷಿನಿರತರಾದ ಬ್ರಾಹ್ಮಣರು ಒಂದುಸಾರಿ ನೆಟ್ಟ ಸಸ್ಯಗಳಿಂದ ಏಳು ಸಾರಿ ಫಲವನ್ನು ಪಡೆಯುವರು.

ಸರ್ವಾ ಘಟಸ್ರವಾ ಗಾವೋ ಮಹಿಷ್ಯಶ್ಚ ಚತುರ್ಗುಣಾಃ ।
ಪ್ರಯಚ್ಛಂತಿ ತಥಾ ಕ್ಷೀರಮುಷ್ಟ್ರ್ಯಸ್ತಾಸಾಂ ಚತುರ್ಗುಣಂ ॥ ೨೨ ॥
ಆಜಾವಿಕಾಸ್ತಥಾಪಾದಂ ನಾರ್ಯಃ ಸರ್ವಾಸ್ತಥೈವ ಚ ।
ವೇದಾಽಧ್ಯಯನ ಸಂಪನ್ನಾಃ ಪ್ರತಿಗ್ರಹವಿವರ್ಜಿತಾಃ ।
ಶಾಪಾಽನುಗ್ರಹ ಕೃತ್ಯೇಷು ಸಮರ್ಥಾಃ ಸಂಭವಂತಿ ಚ ॥ ೨೩ ॥
ಕ್ಷತ್ರಿಯಾಃ ಕ್ಷಾತ್ರಧರ್ಮೇಣ ಪಾಲಯಂತಿ ವಸುಂಧರಾಂ ।
ನ ತತ್ರ ದೃಶ್ಯತೇ ಚೌರೋ ನ ಚ ಜಾರಃ ಕಥಂಚನ ।
ಸ್ವಧರ್ಮನಿರತಾಃ ಸರ್ವೇ ವರ್ಣಾಶ್ಚೈವ ವ್ಯವಸ್ಥಿತಾಃ ॥ ೨೪ ॥
ತಚ್ಚ ದ್ವಾದಶಭಿರ್ಲಕ್ಷೈರ್ವತ್ಸರಾಣಾಂ ಪ್ರಕೀರ್ತಿತಂ ।
ಷಣ್ಣವತ್ಯಾ ಸಹಸ್ರೈಸ್ತು ದ್ವಿತೀಯಂ ಯುಗಮುತ್ತಮಂ ॥ ೨೫ ॥
ತತಶ್ಚ ದ್ವಾಪರಂ ಭಾವಿ ತೃತೀಯಂ ದ್ವಿಜಸತ್ತಮಾಃ ।
ದ್ವೌ ಪಾದೌ ತತ್ರ ಪಾಪಸ್ಯ ದ್ವೌ ಚ ಧರ್ಮಸ್ಯ ಸಂಸ್ಥಿತೌ ।
ಭಗವಾನ್ ವಾಸುದೇವಶ್ಚ ಕಪಿಲಸ್ತತ್ರ ಜಾಯತೇ ॥ ೨೬ ॥
ತಚ್ಚಾಽಷ್ಟಲಕ್ಷಮಾನೇನ ವತ್ಸರಾಣಾಂ ಪ್ರಕೀರ್ತಿತಂ ।
ಚತುಃ ಷಷ್ಟಿಭಿರನ್ಯೈಸ್ತು ಸಹಸ್ರಾಣಾಂ ದ್ವಿಜೋತ್ತಮಾಃ ॥ ೨೭ ॥

---

೨೨. ಗೋವುಗಳು ಕಲಶ ತುಂಬುವಷ್ಟು ಹಾಲನ್ನು ಕೊಡುವುವೂ, ಎಮ್ಮೆಗಳು ನಾಲ್ಕರಷ್ಟು ಹಾಲನ್ನು ಕೊಡುವುವೂ, ಒಂಟೆಗಳು ಅವುಗಳ ನಾಲ್ಕರಷ್ಟು ಹಾಲನ್ನು ಕೊಡುವುವೂ ಆಗುವುವು.

೨೩. ಆಡು ಕುರಿಗಳೂ, ಮನುಷ್ಯಸ್ತ್ರೀಯರೂ ಅವುಗಳ ನಾಲ್ಕನೆ ಒಂದರಷ್ಟು ಹಾಲನ್ನು ಕೊಡುವವರು ಆಗುವರು. ಬ್ರಾಹ್ಮಣರು ವೇದಾಧ್ಯಯನ ಸಂಪನ್ನರೂ, ಪ್ರತಿಗ್ರಹವಿಲ್ಲದವರೂ, ಶಾಪಾನುಗ್ರಹಶಕ್ತಿಯುಳ್ಳವರೂ ಆಗುವರು.

೨೪. ಕ್ಷತ್ರಿಯರು ಕ್ಷತ್ರಿಯ ಧರ್ಮದಿಂದ ಭೂಮಿಯನ್ನು ಪಾಲಿಸುವರು. ಆ ಯುಗದಲ್ಲಿ ಚೋರರೂ, ಜಾರರೂ ಕಾಣಿಸುವುದಿಲ್ಲ. ಸಕಲ ಜಾತಿಯವರೂ ಸ್ವಧರ್ಮನಿರತರಾಗಿರುವರು.

೨೫. ಈ ಎರಡನೆಯ ಯುಗವು ಹನ್ನೆರಡು ಲಕ್ಷದ ತೊಂಬತ್ತಾರು ವರ್ಷಗಳ ಪರಿಮಾಣವುಳ್ಳುದು.

೨೬. ದ್ವಿಜವರ್ಯರೆ! ಬಳಿಕ ಮೂರನೆಯ ದ್ವಾಪರಯುಗವು ಬರುವುದು. ಅದರಲ್ಲಿ ಎರಡು ಪಾದ ಧರ್ಮವೂ, ಎರಡು ಪಾದ ಪಾಪವೂ ಇರುವುದು. ಪೂಜ್ಯನಾದ ವಿಷ್ಣುವು ಕಪಿಲವರ್ಣನಾಗುವನು.

೨೭. ಆ ಯುಗವು ಎಂಟು ಲಕ್ಷದ ಅರುವತ್ತುಸಾವಿರ ವರ್ಷ ಪ್ರಮಾಣವುಳ್ಳುದು.

ಕಾಮಃ ಕ್ರೋಧಸ್ತಥಾ ಲೋಭೋ ದಂಭೋ ಮತ್ಸರ ಏವ ಚ ।
ಷಡೇತೇ ತತ್ರ ಜಾಯಂತೇ ಈರ್ಷ್ಯಾ ಚೈವ ತು ಸಪ್ತಮೀ ॥ ೨೮ ॥
ಅಥ ಸಂಸೇವಿತಾಸ್ತೈಸ್ತು ಮಾನವಾಶ್ಚ ಪರಸ್ಪರಂ ।
ವಿರುದ್ಧಾಂಶ್ಚ ಪ್ರಕುರ್ವಂತಿ ನಾಽಽಪ್ನುವಂತಿ ಯಥಾ ದಿವಂ ॥ ೨೯ ॥
ಕೇಚಿತ್ತತ್ರಾಽಪಿ ಜಾಯಂತೇ ಶಾಂತಾ ದಾಂತಾ ಜಿತೇಂದ್ರಿಯಾಃ ।
ನ ಸರ್ವೇಽಪಿ ದ್ವಿಜಶ್ರೇಷ್ಠಾ ಯತೋಽರ್ಧಂ ಪಾತಕಸ್ಯ ತು ॥ ೩೦ ॥
ತತಃ ಕಲಿಯುಗಂ ಪ್ರೋಕ್ತಂ ಚತುರ್ಥಂ ಚ ಸುದಾರುಣಂ ।
ಏಕಪಾದೋ ವೃಷೋ ಯತ್ರ ಪಾಪಂ ಪಾದೈಸ್ತ್ರಿಭಿಃ ಸ್ಥಿತಂ ॥ ೩೧ ॥
ಕೃಷ್ಣತ್ವಂ ಯಾತಿ ದೇವೋಽಪಿ ತತ್ರ ಚೈವ ಚತುರ್ಭುಜಃ ।
ಏಕಪಾದೋಽಪಿ ಧರ್ಮಸ್ಯ ಯಾವತ್ತಾವತ್ಪ್ರವರ್ತತೇ ॥ ೩೨ ॥
ಪಶ್ಚಾನ್ನಾಶಂ ಸಮಭ್ಯೇತಿ ಯಾವತ್ತಾವಚ್ಛನೈಃ ಶನೈಃ ।
ಪ್ರಮಾಣಂ ತಸ್ಯ ನಿರ್ದಿಷ್ಟಂ ಲಕ್ಷಾಶ್ಚತ್ವಾರ ಏವ ಹಿ ॥ ೩೩ ॥
ದ್ವಾತ್ರಿಂಶಚ್ಚ ಸಹಸ್ರಾಣಿ ಯುಗಸ್ಯೈವಾಂತಿಮಸ್ಯ ಚ ।
ಕಲಿನಾ ತತ್ರ ಸಂಸ್ಪೃಷ್ಟಾ ಮರ್ತ್ಯಾಃ ಸರ್ವೇ ಪರಸ್ಪರಂ ॥ ೩೪ ॥
ವಿಬುಧ್ಯೈಸ್ತೇ ಪ್ರವರ್ತಂತೇ ರಾಗದ್ವೇಷಪರಾಯಣಾಃ ।
ಯಸ್ಯ ಯಸ್ಯ ಗೃಹೇ ವಿತ್ತಂ ತಥಾ ನಾರ್ಯೋ ಮನೋರಮಾಃ ॥ ೩೫ ॥

---

೨೮. ಅಲ್ಲಿ ಕಾಮ, ಕ್ರೋಧ, ಲೋಭ, ದಂಭ, ಮಾತ್ಸರ್ಯ, ಅಸೂಯಾ ಈ ಆರೂ ಉಂಟಾಗುವುವು.

೨೯. ಇವುಗಳನ್ನು ಆಶ್ರಯಿಸಿದ ಮಾನವರು ಸ್ವರ್ಗವನ್ನು ಹೊಂದದಿರುವಂತೆ ಪರಸ್ಪರ ದ್ವೇಷಮಾಡುವರು.

೩೦. ಅದರಲ್ಲಿಯೂ ಕೆಲವರು ಶಾಂತರೂ, ದಾಂತರೂ, ಜಿತೇಂದ್ರಿಯರೂ ಆಗಿರುವರು. ಪಾಪವು ಅರ್ಧವಾಗಿರುವುದರಿಂದ ಎಲ್ಲರೂ ಹಾಗಿರುವುದಿಲ್ಲ.

೩೧. ಬಳಿಕ ನಾಲ್ಕನೆಯ ಭಯಂಕರವಾದ ಕಲಿಯುಗವು ಬರುವುದು. ಅದರಲ್ಲಿ ಧರ್ಮವು ಒಂದು ಪಾದದಿಂದಲೂ, ಪಾಪವು ಮೂರು ಪಾದಗಳಿಂದಲೂ ಇರುವುದು.

೩೨–೩೫. ವಿಷ್ಣುವು ಕೃಷ್ಣನಾಗಿರುವನು. ಒಂದು ಪಾದದಿಂದಿರುವ ಧರ್ಮವೂ ಮೆಲ್ಲಮೆಲ್ಲನೆ ನಾಶವಾಗುವುದು. ಅದು ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷ ಪ್ರಮಾಣವುಳ್ಳದು. ಮಾನವರೆಲ್ಲ ಈ ಕಲಿಯುಗದಲ್ಲಿ ಕಲಿಸ್ಪರ್ಶದಿಂದ ಪರಸ್ಪರ ರಾಗದ್ವೇಷನಿರತರಾಗಿರುವರು. ಯಾವನ ಮನೆಯಲ್ಲಿ ದ್ರವ್ಯವೂ, ಸುಂದರರಾದ ಸ್ತ್ರೀಯರೂ ಇರುವರೊ, ಜನರು ಅವರೊಡನೆ ಸ್ನೇಹ ಮಾಡುವರು. ಚಿತ್ತಶುದ್ಧಿಯಿಲ್ಲದಿರುವುದರಿಂದ ವಿಧವೆಯರೂ, ಯತಿಗಳೂ,

ತೇನ ತೇನ ಸಮಂ ಮೈತ್ರೀಂ ಕಲೌ ಕುರ್ವಂತಿ ಮಾನವಾಃ ।
ವಿಧವಾನಾಂ ಯತೀನಾಂ ಚ ಸರ್ವೇಷಾಂ ಚ ತಪಸ್ವಿನಾಂ ॥ ೩೬ ॥
ಲೋಕದ್ವಯವಿನಾಶಃ ಸ್ಯಾದ್ಯತಶ್ಚೇತೋ ನ ಶುಧ್ಯತಿ ।
ಪ್ರಾವೃಟ್ಕಾಲೇಽಪಿ ಸಂಪ್ರಾಪ್ತೇ ದುರ್ಭಿಕ್ಷೇಣ ಪ್ರಪೀಡಿತಾಃ ॥ ೩೭ ॥
ಭ್ರಮಂತಿ ಚ ಕಲೌ ಲೋಕಾ ಗಗನಾಸಕ್ತ ದೃಷ್ಟಯಃ ।
ಜಾನಾತಿ ಚಾಽಪಿ ತನಯಃ ಪಿತಾ ಚೇನ್ನಿಧನಂ ವ್ರಜೇತ್ ॥ ೩೮ ॥
ತತೋಽಹಂ ಗೃಹಪೋ ಭೂಯಾಂ ಬಾಂಧವೋಽಪ್ಯಪಿ ಬಾಂಧವಂ ।
ಸ್ನುಷಾಽಪಿ ವೇತ್ತಿ ಚಿತ್ತೇನ ಯದಿ ಶ್ವಶ್ರೂಃ ಕ್ಷಯಂ ವ್ರಜೇತ್ ॥ ೩೯ ॥
ಮಮಸ್ಯಾದ್ಗೃಹ ಐಶ್ವರ್ಯಂ ತತ್ಸರ್ವಂ ನಾಽನ್ಯಥಾ ವ್ರಜೇತ್ ।
ಕಾವ್ಯೈರುಪಹತಾ ವೇದಾಃ ಪುತ್ರಾ ಜಾಮಾತೃಕೈಸ್ತಥಾ ॥ ೪೦ ॥
ಶಾಲಕೈರ್ಬಾಂಧವಾಶ್ಚೈವ ಹ್ಯಸತೀಭಿಃ ಕುಲಸ್ತ್ರಿಯಃ
ಶೂದ್ರಾಸ್ತಪಸ್ವಿನಶ್ಚೈವ ಶೂದ್ರಾ ಧರ್ಮಸ್ಯ ಸೂಚಕಾಃ ॥ ೪೧ ॥
ಬ್ರಾಹ್ಮಣಾನಾಂ ತತಃ ಶೂದ್ರಾ ಉಪದೇಶಂ ವದಂತಿ ಚ ।
ಅಲ್ಪೋದಕಾಸ್ತಥಾ ಮೇಘಾ ಅಲ್ಪಸಸ್ಯಾ ಚ ಮೇದಿನೀ ॥ ೪೨ ॥
ಅಲ್ಪಕ್ಷೀರಾಸ್ತಥಾ ಗಾವಃ ಕ್ಷೀರೇ ಸರ್ಪಿಸ್ತಥಾಽಲ್ಪಕಂ ।
ಸರ್ವಭಕ್ಷಾಸ್ತಥಾ ವಿಪ್ರಾ ನೃಪಾ ನಿಷ್ಕರುಣಾಸ್ತತಃ ।
ಕೃಷ್ಯಾಲ್ಲಜ್ಜಂತಿ ವೈಶ್ಯಾಶ್ಚ ಶೂದ್ರಾ ಬ್ರಾಹ್ಮಣಪ್ರೇಷಕಾಃ ॥ ೪೩ ॥

---

ತಪಸ್ವಿಗಳೂ ಉಭಯ ಲೋಕಭ್ರಷ್ಟರಾಗುವರು. ಮಳೆಗಾಲದಲ್ಲಿಯೂ ಜನರು ದುರ್ಭಿಕ್ಷದಿಂದ ಪೀಡಿತರಾಗಿ ಆಕಾಶವನ್ನು ನೋಡುತ್ತ ಸಂಚರಿಸುವರು. ಮಗನು ತಂದೆಯು ಮೃತನಾದರೆ ನಾನು ಮನೆಯ ಯಜಮಾನನಾಗುವೆನೆಂದರಿಯುವನು. ಬಾಂಧವನು ಬಾಂಧವನ ಮರಣವನ್ನು ಬಯಸುವನು. ಸೊಸೆಯು ಅತ್ತೆಯು ಮಡಿದರೆ ಮನೆಯ ಐಶ್ವರ್ಯವೆಲ್ಲ ನನ್ನ ವಶವಾಗುವುದು. ಇಲ್ಲದಿದ್ದರೆ ಆಗಲಾರದೆಂದು ತಿಳಿಯುವಳು. ವೇದಗಳು ಕಾವ್ಯಗಳಿಂದಲೂ, ಪುತ್ರರು ಅಳಿಯಂದಿರಿಂದಲೂ, ಬಾಂಧವರು ಭಾವಮೈದುನರಿಂದಲೂ, ವ್ಯಭಿಚಾರಿಣಿಯರಿಂದ ಕುಲಾಂಗನೆಯರೂ ಕೆಡಿಸಲ್ಪಡುವರು. ಶೂದ್ರರು ತಪಸ್ವಿಗಳೂ, ಧರ್ಮ ಬೋಧಕರೂ ಆಗುವರು.

೪೨–೪೩. ಶೂದ್ರರು ಬ್ರಾಹ್ಮಣರಿಗೆ ಉಪದೇಶ ಮಾಡುವರು. ಮೇಘಗಳು ಅಲ್ಪೋದಕವುಳ್ಳವೂ, ಭೂಮಿಯು ಅಲ್ಪಸಸ್ಯವುಳ್ಳದೂ, ಗೋವುಗಳು ಸ್ವಲ್ಪ ಹಾಲನ್ನು ಕೊಡುವುವೂ, ಹಾಲು ಸ್ವಲ್ಪ ತುಪ್ಪವುಳ್ಳದೂ ಆಗುವುವು. ಬ್ರಾಹ್ಮಣರು ಸರ್ವವನ್ನು ಭಕ್ಷಿಸುವವರೂ, ರಾಜರು ದಯೆಯಿಲ್ಲದವರೂ, ವೈಶ್ಯರು ಕೃಷಿಯಿಂದ ಲಜ್ಜೆಗೊಳ್ಳುವವರೂ, ಶೂದ್ರರು ಬ್ರಾಹ್ಮಣಸೇವಕರುಳ್ಳವರೂ ಆಗುವರು.

ಹೇತುವಾದರತಾ ಯೇ ಚ ಭಂಡವಿದ್ಯಾಪರಾಶ್ಚ ಯೇ ।
ತೇ ತೇಽಸ್ಯುರ್ಭೂಮಿಪಾಲಸ್ಯ ಸದಾಽಭೀಷ್ಟಾಃ ಕಲೌ ಯುಗೇ ॥ ೪೪ ॥
ಶ್ವಃ ಶ್ವಃ ಪಾಪೀಯದಿವಸಾಃ ಪೃಥಿವೀ ಗತಯೌವನಾ ।
ಅತಿಕ್ರಾಂತಶುಭಾಃ ಕಾಲಾಃ ಪರ್ಯುಪಸ್ಥಿತದಾರುಣಾಃ ॥ ೪೫ ॥
ಯಥಾ ಯಥಾ ಯುಗಂ ಭಾವಿ ವೃದ್ಧಿಂ ಯಾಂತಿ ಸ್ತ್ರಿಯೋ ನರಾಃ ।
ತಥಾ ತಥಾ ಪ್ರಯಾಂತಿಸ್ಮ ಲಘುತಾಂ ಜಂತುಭಿಃ ಸಹ ॥ ೪೬ ॥
ವರ್ಷೇ ದ್ವಾದಶಮೇ ಚೈವ ಕನ್ಯಾಸ್ಯಾದ್ಭರ್ತೃಸಂಯುತಾ ॥ ೪೭ ॥
ತತಃ ಷೋಡಶಮೇ ವರ್ಷೇ ನರಾಃ ಪಲಿತಯೌವನಾಃ ।
ಶೌಚಾಚಾರಪರಿತ್ಯಕ್ತಾ ನಿಜಕಾರ್ಯಪರಾಸ್ತಥಾ ॥ ೪೮ ॥
ಭವಿಷ್ಯಂತಿ ಯುಗಸ್ಯಾಂತೇ ನರಾ ಅಂಗುಷ್ಠಮಾತ್ರಕಾಃ ।
ಗೃಹಂ ಚ ತೇಽಥ ಕುರ್ವಂತಿ ಬಿಲೈರಾಖುಸಮುದ್ಭವೈಃ ॥ ೪೯ ॥
ತಥಾ ಪ್ರಾವರಣಂ ತೇಷಾಂ ಕೃಮಿವಸ್ತ್ರಂ ಭವಿಷ್ಯತಿ ।
ಏಕವರ್ಣಾ ಭವಿಷ್ಯಂತಿ ವರ್ಣಾಃ ಸರ್ವೇ ತತಃಪರಂ ।
ಮ್ಲೇಚ್ಛೀಭೂತಾ ದುರಾಚಾರಾ ಧರ್ಮಕೃತ್ಯವಿದೂಷಕಾಃ ॥ ೫೦ ॥

---

೪೪. ಕಲಿಯುಗದಲ್ಲಿ ಹೇತುವಾದದಲ್ಲಿ ನಿರತರೂ, ಹೊಲಸುಮಾತನ್ನಾಡುವವರೂ ರಾಜನಿಗೆ ಯಾವಾಗಲೂ ಇಷ್ಟರಾಗಿರುವರು.

೪೫. ದಿನಗಳು ಮುಂದೆಮುಂದೆ ಹೆಚ್ಚು ಪಾಪವುಳ್ಳವೂ, ಭೂಮಿಯು ಯೌವನವಿಲ್ಲದಿರುವುದೂ, ಕಾಲಗಳು ಶುಭವಿಲ್ಲದುವೂ, ಭಯಂಕರಗಳೂ ಆಗುವುವು.

೪೬. ಯುಗವು ವೃದ್ಧಿಯಾದಹಾಗೆಲ್ಲ ಸ್ತ್ರೀಪುರುಷರು ಪ್ರಾಣಿಗಳೊಡನೆ ಲಾಘವವನ್ನು ಹೊಂದುವರು.

೪೭–೪೮. ಕನ್ಯೆಯು ಹನ್ನೆರಡನೆಯ ವಯಸ್ಸಿನಲ್ಲಿ ಪತಿಯೊಡನೆ ಸೇರುವಳು. ಪುರುಷರು ಹದಿನಾರನೆಯ ವಯಸ್ಸಿನಲ್ಲಿ ಮುದುಕರೂ, ಶೌಚಾಚಾರರಹಿತರೂ, ಸ್ವಕಾರ್ಯನಿರತರೂ ಆಗುವರು.

೪೯. ಆ ಯುಗದ ಕೊನೆಯಲ್ಲಿ ಪುರುಷರು ಅಂಗುಷ್ಠಪರಿಮಾಣರಾಗಿ ಇಲಿಗಳು ಮಾಡಿದ ಬಿಲಗಳನ್ನು ಮನೆಯಾಗಿ ಮಾಡಿಕೊಳ್ಳುವರು.

೫೦. ಅವರಿಗೆ ಕೃಮಿಗಳು ಮಾಡಿದ ವಸ್ತ್ರವು ಬಟ್ಟೆಯಾಗುವುದು. ಸಕಲ ಜಾತಿಯವರೂ ಒಂದೇ ಜಾತಿಯವರಾಗಿ ಮ್ಲೇಚ್ಛರೂ, ದುರ್ನಡತೆಯುಳ್ಳವರೂ, ಧರ್ಮಕಾರ್ಯದ್ವೇಷಿಗಳೂ ಆಗುವರು.

ಏವಂ ಜಾತೇ ತತೋ ಲೋಕೇ ಬ್ರಾಹ್ಮಣೋ ಹರಿಪಿಂಗಲಃ ।
ಕಲ್ಕಿಗೋತ್ರಸಮುತ್ಪನ್ನಸ್ತಾನ್ ಸರ್ವಾನ್ ಸೂದಯೇತ್ತತಃ ॥ ೫೧ ॥
ಪಶ್ಚಾತ್ಕೃತಯುಗಂ ಭಾವಿ ಭೂಯೋಽಪಿ ದ್ವಿಜಸತ್ತಮಾಃ ॥ ೫೨ ॥
ಏವಂ ಯುಗಸಹಸ್ರೇಣ ಸಂಪ್ರಾಪ್ತೇನ ತತಃಪರಂ ।
ಬ್ರಹ್ಮಣೋ ದಿವಸಂ ಭಾವಿ ರಾತ್ರಿಶ್ಚೈವ ತತಃಪರಂ ॥ ೫೩ ॥
ತತಶ್ಚಾಽನೇನ ಮಾನೇನ ಷಷ್ಟ್ಯಾಯುಕ್ತೈಸ್ತ್ರಿಭಿಃ ಶತೈಃ ।
ಬ್ರಹ್ಮಣೋ ವತ್ಸರಂ ಭಾವಿ ಕೇಶವಸ್ಯ ಚ ತದ್ದಿನಂ ॥ ೫೪ ॥
ಆತ್ಮೀಯೇ ಜೀವಿತೇ ಬ್ರಹ್ಮಾ ಯಾವದ್ವರ್ಷಶತಂ ಸ್ಥಿತಃ ।
ಕೇಶವೋಽಪಿ ಸ್ವಮಾನೇನ ವರ್ಷಾಣಾಂ ಜೀವಿತೇ ಶತಂ ॥ ೫೫ ॥
ವರ್ಷೇಣ ವಾಸುದೇವಸ್ಯ ದಿನಂ ಮಾಹೇಶ್ವರಂ ಭವೇತ್ ।
ನಿಜಮಾನೇನ ಸೋಽಪ್ಯತ್ರ ಯಾವದ್ವರ್ಷಶತಂ ಸ್ಥಿತಃ ॥ ೫೬ ॥
ತತಃ ಶಕ್ತಿಸ್ವರೂಪಃ ಸ್ಯಾತ್ಸೋಽಕ್ಷಯೀ ಕೀರ್ತ್ಯತೇ ಯತಃ ।
ಸದಾಶಿವಸ್ಯ ನಿಃಶ್ವಾಸಃ ಶೈವಂ ವರ್ಷಶತಂ ಭವೇತ್ ।
ಉಚ್ಛ್ವಾಸಸ್ತು ಪುನಸ್ತಸ್ಯ ಶಕ್ತಿರೂಪೇಣ ಸಂಸ್ಥಿತಃ ॥ ೫೭ ॥

---

೫೧. ಲೋಕವು ಹೀಗಾಗಲು ಕಲ್ಕಿಗೋತ್ರದಲ್ಲಿ ಹುಟ್ಟಿದ ಹರಿಪಿಂಗಲ ಬ್ರಾಹ್ಮಣನು ಅವರನ್ನೆಲ್ಲ ಕೊಲ್ಲುವನು.

೫೨–೫೩. ದ್ವಿಜವರ್ಯರೆ! ಅನಂತರ ಮರಳಿ ಕೃತಯುಗವಾಗುವುದು. ಹೀಗೆ ಸಾವಿರ ಯುಗಗಳಾಗಲು ಬ್ರಹ್ಮನಿಗೆ ಒಂದು ಹಗಲೂ ರಾತ್ರಿಯೂ ಆಗುವುದು.

೫೪. ಇಂತಹ ಮುನ್ನೂರ ಅರುವತ್ತು ದಿವಸಗಳಿಂದ ಬ್ರಹ್ಮನಿಗೆ ಒಂದು ವರ್ಷವೂ, ವಿಷ್ಣುವಿಗೆ ಒಂದು ದಿನವೂ ಆಗುವುದು.

೫೫. ಬ್ರಹ್ಮನು ಇಂತಹ ನೂರು ವರ್ಷಗಳ ಕಾಲವೂ, ವಿಷ್ಣುವು ತನ್ನ ಕಾಲಪರಿಮಾಣದಂತೆ ನೂರು ವರ್ಷಕಾಲವೂ ಜೀವಿಸುವರು.

೫೬. ವಿಷ್ಣುವಿನ ಒಂದು ವರ್ಷದಿಂದ ಮಹೇಶ್ವರನಿಗೆ ಒಂದು ದಿನವಾಗುವುದು. ಅವನೂ ಸಹ ತನ್ನ ಕಾಲಪರಿಮಾಣದಂತೆ ನೂರು ವರ್ಷಗಳ ಕಾಲ ಜೀವಿಸುವನು.

೫೭. ಆ ಈಶ್ವರನು ನಾಶವಿಲ್ಲದವನಾದ್ದರಿಂದ ತರುವಾಯ ಶಕ್ತಿರೂಪನಾಗುವನು. ಸದಾಶಿವನ ನಿಃಶ್ವಾಸವು ಶಿವನ ನೂರು ವರ್ಷಗಳಾಗುವುವು. ಅವನ ಉಚ್ಛ್ವಾಸವು ಶಕ್ತಿರೂಪವಾಗಿರುವುದು.

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಶಿವಶಕ್ತಿಸಮುದ್ಭವಂ ।
ಯಾವದಾಯುಃ ಪ್ರಮಾಣಂ ಚ ಮಾನುಷಾದ್ಯಂ ಚ ಯದ್ಭವೇತ್ ॥೨೮॥
ಭವದ್ಭಿಃ ಶಾಂಕರಂ ಪೃಷ್ಟೋ ದ್ವಿಜಾ ಅಸ್ಮಿ ದಿನಂ ಪುರಾ ।
ಮಯಾ ಪುನಸ್ತು ಸರ್ವೇಷಾಂ ಮರ್ತ್ಯಾದೀನಾಂ ತು ಕೀರ್ತಿತಂ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯುಗಸ್ವರೂಪವರ್ಣನಂ" ನಾಮ
ದ್ವಿಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೨೮. ಸೂತನು ಹೇಳುತ್ತಾನೆ:—ಶಿವನ ಶಕ್ತಿಯಿಂದ ಮನುಷ್ಯನಿಗಾಗುವ ಆಯುಸ್ಸಿನ ಪ್ರಮಾಣವನ್ನು ನಿಮಗೆ ಹೇಳಿರುತ್ತೇನೆ.

೨೯. ದ್ವಿಜರೆ! ನೀವು ನನ್ನನ್ನು ಶಂಕರನ ದಿನದ ಪ್ರಮಾಣವನ್ನು ಪ್ರಶ್ನೆ ಮಾಡಿದಿರಿ. ನಾನು ಮನುಷ್ಯ ಮೊದಲಾದ ಎಲ್ಲರ ಕಾಲಪರಿಮಾಣವನ್ನೂ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯುಗಸ್ವರೂಪವರ್ಣನ" ವೆಂಬ ಇನ್ನೂರ ಎಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ಯುಗಪ್ರಮಾಣವರ್ಣನಂ

ಸೂತ ಉವಾಚ :—

ಏತೇಷಾಂ ತು ಸಹಸ್ರೇಣ ಭವೇದ್ಬ್ರಾಹ್ಮಂ ದಿನಂ ದ್ವಿಜಾಃ ।
ಚತುರ್ದಶ ಸಹಸ್ರಾಕ್ಷಾ ಜಾಯಂತೇ ತತ್ರ ವಾಸರೇ ॥ ೧ ॥
ಸಪ್ತಮಸ್ತು ಸಹಸ್ರಾಕ್ಷಃ ಸಾಂಪ್ರತಂ ವರ್ತತೇಽತ್ರ ಯಃ ।
ಏಕಸಪ್ತತಿ ಸಂವರ್ತ ಚತುರ್ದಶದಿನೇ ವಿಧೇಃ ॥ ೨ ॥
ಯುಗಾನಾಂ ಕುರುತೇ ರಾಜ್ಯಂ ಮನವಶ್ಚ ತಥಾ ಪರೇ ।
ಸ್ವಾಯಂಭುವ ಪ್ರಭೃತಯೋ ಯಥಾ ಶಕ್ರಾಸ್ತಥಾ ಸ್ಥಿತಾಃ ॥ ೩ ॥
ಜಾಯಂತೋ ನಾಮ ಶಕ್ರೋಽಯಂ ಸಾಂಪ್ರತಂ ವರ್ತತೇ ತು ಯಃ ।
ವೈವಸ್ವತೋ ಮನುಶ್ಚೈವ ಅಷ್ಟಾವಿಂಶತ್ಪ್ರಮಾಣಕಃ ॥ ೪ ॥
ಚತುರ್ಯುಗಸ್ಯ ಸಂಜಾತೋ ಗತೇಽಸ್ಮಿಂಛೇಷಮಾತ್ರಕೇ ।
ಭವಿಷ್ಯತಿ ಬಲಿಃ ಶಕ್ರೋ ವಾಸುದೇವ ಪ್ರಸಾದತಃ ॥ ೫ ॥
ತೇನ ತಸ್ಯ ಪ್ರತಿಜ್ಞಾತಂ ರಾಜ್ಯಂ ಚೈವಾಽಷ್ಟಮೇ ಮನೌ ॥ ೬ ॥

---

### ಕನ್ನಡದ ಅನುವಾದ

#### ಯುಗಪ್ರಮಾಣವರ್ಣನ

೧–೩. ಸೂತನು ಹೇಳುತ್ತಾನೆ:—ದ್ವಿಜರೆ! ಇಂತಹ ಸಾವಿರ ಯುಗಗಳಿಂದ ಬ್ರಹ್ಮನಿಗೆ ಒಂದು ದಿನವಾಗುವುದು. ಆ ದಿನದಲ್ಲಿ ಹದಿನಾಲ್ಕು ಮಂದಿ ಇಂದ್ರರು ಆಗುವರು. ಈಗ ಇರುವವನು ಏಳನೆಯ ಇಂದ್ರನು. ಬ್ರಹ್ಮನ ಎಪ್ಪತ್ತೊಂದನೆಯ ಕಲ್ಪದ ಹದಿನಾಲ್ಕನೆಯ ದಿನದಲ್ಲಿ ಇಂದ್ರರಂತೆ ಸ್ವಾಯಂಭುವ ಮೊದಲಾದ ಮನುಗಳು ರಾಜ್ಯವಾಳುವರು.

೪. ಈಗ ಜಾಯಂತನೆಂಬ ಇಂದ್ರನೂ, ಇಪ್ಪತ್ತೆಂಟನೆಯ ಮನುವೂ ಇರುವರು.

೫. ಚತುರ್ಯುಗದ ಉಳಿದ ಕಾಲವು ಕಳೆಯಲು ಬಲಿಯು ವಿಷ್ಣುವಿನ ಅನುಗ್ರಹದಿಂದ ಇಂದ್ರನಾಗುವನು.

೬. ಆ ವಿಷ್ಣುವು ಎಂಟನೆಯ ಮನ್ವಂತರದಲ್ಲಿ ಬಲಿಗೆ ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞೆ ಮಾಡಿರುವನು.

ಏವಂ ಸರ್ವೇ ಸುರಾಶ್ಚಾಽನ್ಯೇ ತ್ರಯಸ್ತ್ರಿಂಶತ್ಪ್ರಮಾಣತಃ ।
ಕೋಟಯಃ ಪ್ರಭವಿಷ್ಯಂತಿ ಯಥಾ ಚೈವ ತಥಾ ಪುರಾ ॥ ೭ ॥
ಯೋಽಯಂ ಬ್ರಹ್ಮಾ ಸ್ಥಿತೋ ವಿಪ್ರಾಃ ಸಾಂಪ್ರತಂ ಸೃಷ್ಟಿಕಾರಕಃ ।
ತಸ್ಯಾಽನೇನ ಪ್ರಮಾಣೇನ ಜಾತಂ ಸಂವತ್ಸರಾಷ್ಟಕಂ ॥ ೮ ॥
ಷಣ್ಮಾಸಾಶ್ಚ ದಿನಾರ್ಧಂ ಚ ಪ್ರಥಮಂ ಶುಕ್ಲಪೂರ್ವಕಂ ।
ಸೌರಸಾವನ ಚಂದ್ರಾರ್ಕ್ಷೈರ್ಮಾನೈರೇಭಿಶ್ಚತುರ್ವಿಧೈಃ ॥ ೯ ॥
ಕಲೌ ನಿಯಾತಿ ಸರ್ವೇಷಾಂ ಭೂತಾನಾಂ ಕ್ಷಿತಿಮಂಡಲೇ ।
ಪಂಚ ಷಷ್ಟ್ಯಾಽಧಿಕಶ್ಚೈವ ದಿನಾನಾಂ ಚ ಶತೈಸ್ತ್ರಿಭಿಃ ।
ಭವೇತ್ಸಂವತ್ಸರಂ ಸೌರಂ ಪಂಚೋನೈಸ್ತೈಶ್ಚ ಸಾವನಂ ॥ ೧೦ ॥
ಚಾಂದ್ರ ಏಕದಶೋನಸ್ತು ತ್ರಿಂಶದ್ಧೀನ ಉಡೂದ್ಭವಃ ।
ಶೀತಾಽಽತಪೌ ತಥಾ ವೃಷ್ಟಿಃ ಸೌರಮಾನೇನ ಜಾಯತೇ ॥ ೧೧ ॥
ವೃಕ್ಷಾಣಾಂ ಫಲನಿಷ್ಪತ್ತಿಃ ಸಸ್ಯಾನಾಂ ಚ ತಥಾ ಪರಾ ।
ಅಗ್ನಿಷ್ಟೋಮಾದಯೋ ಯಜ್ಞಾ ವರ್ತಂತೇ ಯೇ ಧರಾತಲೇ ॥ ೧೨ ॥
ಉತ್ಸಾಹಾಶ್ಚ ವಿವಾಹಾಶ್ಚ ಸಾವನೇನ ಭವಂತಿ ಚ ।
ಕುಸೀದಾದ್ಯಾಶ್ಚ ಯೇ ಕೇಚಿದ್ವ್ಯವಹಾರಾಶ್ಚ ವೃತ್ತಿಜಾಃ ॥ ೧೩ ॥
ಅಧಿಮಾಸ ಪ್ರಯುಕ್ತೇನ ತೇಽಸ್ಯುಶ್ಚಾಂದ್ರೇಣ ನಿರ್ಮಿತಾಃ ।
ನಾಕ್ಷತ್ರೇಣ ತು ಮಾನೇನ ಸಿಧ್ಯಂತೇ ಗ್ರಹಚಾರಿಕಾಃ ॥ ೧೪ ॥

---

೭. ಹೀಗೆ ಮೂವತ್ತಮೂರುಕೋಟಿ ದೇವತೆಗಳು ಮೊದಲಿನಂತೆಯೇ ಹುಟ್ಟುವರು.

೮–೯. ಈಗ ಸೃಷ್ಟಿಯನ್ನು ಮಾಡುತ್ತಿರುವ ಬ್ರಹ್ಮನಿಗೆ ಎಂಟು ವರ್ಷ ಆರು ತಿಂಗಳ ಶುಕ್ಲಪಕ್ಷದಲ್ಲಿ ಅರ್ಧ ದಿನವಾಗಿರುವುದು. ಭೂಮಂಡಲದಲ್ಲಿರುವ ಸಕಲ ಪ್ರಾಣಿಗಳಿಗೆ ಸೌರ, ಸಾವನ, ಚಾಂದ್ರ, ಅಕ್ಷ ಎಂಬ ನಾಲ್ಕುವಿಧ ಕಾಲ ಮಾನವಿರುವುದು.

೧೦–೧೪. ಮುನ್ನೂರ ಅರುವತ್ತಾರು ದಿನಗಳಿಂದ ಸೌರಮಾನವೂ, ಮುನ್ನೂರ ಅರುವತ್ತೊಂದು ದಿವಸಗಳಿಂದ ಸಾವನಮಾನವೂ, ಮುನ್ನೂರ ಐವತ್ತೈದು ದಿವಸಗಳಿಂದ ಚಾಂದ್ರಮಾನವೂ, ಮುನ್ನೂರ ಮೂವತ್ತಾರು ದಿವಸಗಳಿಂದ ಅಕ್ಷಮಾನವೂ ಆಗುವುದು. ಶೀತ, ಬಿಸಿಲು, ಮಳೆ ಇವೆಲ್ಲ ಸೌರಮಾನದಿಂದಾಗುವುದು. ವೃಕ್ಷಗಳಲ್ಲಿ ಫಲೋತ್ಪತ್ತಿ, ಸಸ್ಯಗಳ ಬೆಳವಣಿಗೆ, ಅಗ್ನಿಷ್ಟೋಮಾದಿ ಯಜ್ಞಗಳು, ಉತ್ಸಾಹ ವಿವಾಹಗಳು ಸಾವನಮಾನದಿಂದಾಗುವುವು. ಬಡ್ಡಿ ಮೊದಲಾದ ವೃತ್ತಿಜನ್ಯ ವ್ಯವಹಾರಗಳೂ, ಅಧಿಕಮಾಸದ ಕಾರ್ಯಗಳೂ ಚಾಂದ್ರಮಾನದಿಂದಾಗುವುವು. ಗ್ರಹಚಾರಸಂಬಂಧವಾದ ಕಾರ್ಯಗಳು ನಕ್ಷತ್ರಮಾನದಿಂದ ನಡೆಯುವುವು.

ನಾಽನ್ಯತ್ಕಿಂಚಿದ್ಧರಾಪೃಷ್ಠ ಏತನ್ಮಾನ ಚತುಷ್ಟಯಾತ್ ।
ಏತೇನ ತು ಪ್ರಮಾಣೇನ ದೇವದೈತ್ಯಾಶ್ಚ ಮಾನವಾಃ ॥ ೧೫ ॥
ವರ್ತಂತೇ ಬ್ರಾಹ್ಮಣಶ್ರೇಷ್ಠಾಃ ಶ್ರುತಿರೇಷಾ ಪುರಾತನೀ ।
ಏತದ್ಯುಗಪ್ರಮಾಣಂ ತು ಯಃಪಠೇದ್ಭಕ್ತಿಸಂಯುತಃ ॥ ೧೬ ॥
ಏತೇಷಾಮೇವ ಲಿಂಗಾನಾಂ ಸಪ್ತಾನಾಂ ಬ್ರಾಹ್ಮಣೋತ್ತಮಾಃ ।
ನಾಽಪಮೃತ್ಯುಭಯಂ ತಸ್ಯ ಕಥಂಚಿತ್ಸಂಭವಿಷ್ಯತಿ ॥ ೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯುಗಪ್ರಮಾಣವರ್ಣನಂ" ನಾಮ
ತ್ರಿಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೧೫–೧೭. ಈ ನಾಲ್ಕು ಮಾನಗಳಿಗಿಂತ ಬೇರೆ ಮಾನಗಳು ಭೂಮಿಯಲ್ಲಿಲ್ಲ. ದೇವ ದೈತ್ಯ ದಾನವರು ಈ ಕಾಲಪ್ರಮಾಣದಿಂದಲೇ ಕಾರ್ಯದಲ್ಲಿ ತೊಡಗುವರು ಎಂದು ಪುರಾತನ ಶ್ರುತಿಯಿರುವುದು. ಈ ಸಪ್ತಲಿಂಗಗಳ ಮುಂದೆ ಈ ಯುಗ ಪ್ರಮಾಣವನ್ನು ಭಕ್ತಿಯಿಂದ ಪಠಿಸುವವನಿಗೆ ಅಪಮೃತ್ಯುಭಯವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯುಗಪ್ರಮಾಣವರ್ಣನ" ವೆಂಬ ಇನ್ನೂರ ಎಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಃಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

## ದುಃಶ್ಶೀಲೇಶ್ವರಸಂಜ್ಞಾ ಪ್ರಾಪ್ತಿ ಕಾರಣವೃತಾಂತವರ್ಣನಂ

ಸೂತ ಉವಾಚ :—

ತಥಾಽನ್ಯದಪಿ ತತ್ರಾಽಸ್ತಿ ದುರ್ವಾಸಸಸ್ಥಾಪಿತಂ ಪುರಾ ।
ತಲ್ಲಿಂಗಂ ದೇವದೇವಸ್ಯ ತ್ರಿಣೇತ್ರಸ್ಯ ಮಹಾತ್ಮನಃ ॥ ೧ ॥
ಚೈತ್ರಮಾಸಿ ನರೋ ಯಸ್ತು ತಮಾರಾಧಯತೇ ದ್ವಿಜಾಃ ।
ನೃತ್ಯಗೀತ ಪ್ರವಾದ್ಯೈಶ್ಚ ತ್ರಿಕಾಲಂ ವಿಹಿತಕ್ಷಣಃ ।
ಸ ನೂನಂ ತತ್ಪ್ರಸಾದೇನ ಗಂಧರ್ವಾಧಿಪತಿರ್ಭವೇತ್ ॥ ೨ ॥

ಋಷಯ ಊಚುಃ :—

ದುರ್ವಾಸಾ ನಾಮ ಕಶ್ಚಾಽಯಂ ಕೇನಾಯಂ ಸ್ಥಾಪಿತೋ ಹರಃ ।
ಕಸ್ಮಿನ್ಕಾಲೇ ಮಹಾಭಾಗ ಸರ್ವಂ ನೋ ವಿಸ್ತರಾದ್ವದ ॥ ೩ ॥

ಸೂತ ಉವಾಚ :—

ಆಸೀತ್ಪುರಾ ನಿಂಬಶುಚೋ ವೈದಿಶೇ ಚ ಪುರೋತ್ತಮೇ ॥ ೪ ॥
ಸ ಚ ಪೂಜಯತೇ ಲಿಂಗಂ ಕಂಚಿನ್ಮಠಪತಿಃ ಸ್ಥಿತಃ ।
ಸ ಯತ್ಕಿಂಚಿದವಾಪ್ನೋತಿ ವಸ್ತ್ರಾದ್ಯಂ ಚ ತಥಾಪರಂ ॥ ೫ ॥

---

### ಕನ್ನಡದ ಅನುವಾದ

#### ದುಃಶ್ಶೀಲೇಶ್ವರಸಂಜ್ಞಾ ಪ್ರಾಪ್ತಿ ಕಾರಣವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ :—ಅಲ್ಲಿ ದುರ್ವಾಸನು ಸ್ಥಾಪಿಸಿದ ಮಹೇಶ್ವರನ ಮತ್ತೊಂದು ಲಿಂಗವಿದೆ.

೨. ದ್ವಿಜರೆ! ಚೈತ್ರಮಾಸದಲ್ಲಿ ತ್ರಿಕಾಲದಲ್ಲಿ ನೃತ್ಯ, ಗೀತ, ವಾದ್ಯಗಳಿಂದ ಆ ಮಹೇಶ್ವರನನ್ನು ಆರಾಧಿಸಿ ಉತ್ಸವವನ್ನು ಮಾಡಿದವನು ನಿಶ್ಚಯವಾಗಿಯೂ ಅವನ ಅನುಗ್ರಹದಿಂದ ಗಂಧರ್ವ ರಾಜನಾಗುವನು.

೩. ಋಷಿಗಳು ಹೇಳುತ್ತಾರೆ :—ಮಹಾ ಭಾಗ್ಯವಂತನೆ! ದುರ್ವಾಸನೆಂಬವನಾರು? ಈ ಮಹೇಶ್ವರ ಲಿಂಗವನ್ನು ಅವನು ಯಾವಾಗ ಸ್ಥಾಪಿಸಿದನು? ಎಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು.

೪-೬. ಸೂತನು ಹೇಳುತ್ತಾನೆ :—ಹಿಂದೆ ವೈದಿಶವೆಂಬ ಪುರದಲ್ಲಿ ನಿಂಬಶುಚನೆಂಬ ಬ್ರಾಹ್ಮಣನಿದ್ದನು. ಅವನು ಮಠಾಧಿಪತಿಯಾಗಿ ಒಂದು ಲಿಂಗವನ್ನು ಪೂಜಿಸುತ್ತಿದ್ದನು. ಅವನು ವಸ್ತ್ರ ಮೊದಲಾದ ಯಾವುದಾದರೂ ಒಂದು ವಸ್ತು

ಮಾಹೇಶ್ವರಸ್ಯ ಲೋಕಸ್ಯ ವಿಕ್ರೀಣೀತೇ ತತಸ್ತತಃ ।
ತತೋ ಗೃಹ್ಣಾತಿ ನಿತ್ಯಂ ಸ ಹೇಮಮೂಲ್ಯೇನ ತಸ್ಯ ಚ ॥ ೬ ॥
ನ ಕರೋತಿ ವ್ಯಯಂ ತಸ್ಯ ಕೇವಲಂ ಸಂಚಯೇ ರತಃ ।
ತತಃ ಕಾಲೇನ ಮಹತಾ ಮಂಜೂಷಾಽಸ್ಯ ನಿರರ್ಗಲಾ ।
ಜಾತಾ ಹೇಮಮಯೀ ವಿಪ್ರಾಃ ಕಾರ್ಪಣ್ಯನಿರತಸ್ಯ ಚ ॥ ೭ ॥
ಅಥ ಸಂಸ್ಥಾಪ್ಯ ಭೂಮಧ್ಯೇ ಮಂಜೂಷಾಂ ತಾಂ ಪ್ರಪೂರಿತಾಂ ।
ಕರೋತಿ ವ್ಯವಹಾರಂ ಸ ಕಕ್ಷಾಂ ತಾಂ ನೈವ ಮುಂಚತಿ ॥ ೮ ॥
ಕದಾಚಿದ್ದೇವಪೂಜಾಯಾಂ ಸೋಽಪಿ ಬ್ರಾಹ್ಮಣಸತ್ತಮಾಃ ।
ವಿಶ್ವಾಸಂ ನೈವ ನಿರ್ಯಾತಿ ಕಸ್ಯಚಿಚ್ಚ ಕಥಂಚನ ॥ ೯ ॥
ಕಸ್ಯಚಿತ್ತ್ವಥ ಕಾಲಸ್ಯ ಪರವಿತ್ತಾಪಹಾರಕಃ ।
ಅಲಕ್ಷದ್ಬ್ರಾಹ್ಮಣಸ್ತಚ್ಚ ದುಶ್ಶೀಲಾಖ್ಯೋ ವ್ಯಚಿಂತಯತ್ ॥ ೧೦ ॥
ತತಃ ಶಿಷ್ಯೋ ಭವಿಷ್ಯಾಮಿ ವಿಶ್ವಾಸಾರ್ಥಂ ದುರಾತ್ಮನಃ ।
ಸುದೀನೈಃ ಕೃಪಣೈರ್ವಾಕ್ಯೈಶ್ಚಾಟುಕಾರೈಃ ಪೃಥಗ್ವಿಧೈಃ ॥ ೧೧ ॥
ಆಲಸ್ಯಂ ಚ ದಿವಾನಕ್ತಂ ಸಾಧಯಿಷ್ಯಾಮ್ಯಸಂಶಯಂ ।
ಅನ್ಯಸ್ಮಿನ್ನಹನಿ ಪ್ರಾಪ್ತೇ ದೃಷ್ಟ್ವಾ ತಂ ಮಠಮಧ್ಯಗಂ ॥ ೧೨ ॥
ತತಃ ಸಮೀಪಮಾಗಮ್ಯ ದಂಡಾಕಾರಂ ಪ್ರಣಮ್ಯ ಚ ।
ಅಬ್ರವೀತ್ಪ್ರಾಂಜಲಿರ್ಭೂತ್ವಾ ವಿನಯಾವನತಃ ಸ್ಥಿತಃ ॥ ೧೩ ॥

---

ವನ್ನು ಪಡೆದರೆ ಅದನ್ನು ಮಹೇಶ್ವರನ ಭಕ್ತರಿಗೆ ಮಾರಿ ಮೂಲ್ಯವಾಗಿ ಸುವರ್ಣ ವನ್ನು ತೆಗೆದುಕೊಳ್ಳುತ್ತಿದ್ದನು.

೭. ಯಾವಾಗಲೂ ಸಂಪಾದಿಸುವುದರಲ್ಲಿ ಆಸಕ್ತನಾದ ಅವನು ವೆಚ್ಚ ಮಾಡುತ್ತಿರಲಿಲ್ಲ. ಅನಂತರ ಬಹುಕಾಲದಮೇಲೆ ಕೃಪಣನಾದ ಇವನ ಪೆಟ್ಟಿಗೆಯು ಸುವರ್ಣದಿಂದ ತುಂಬಿತು.

೮. ಬಳಿಕ ಅವನು ಸುವರ್ಣದಿಂದ ತುಂಬಿದ ಆ ಪೆಟ್ಟಿಗೆಯನ್ನು ಭೂಮಿ ಯಲ್ಲಿ ಸ್ಥಾಪಿಸಿ ವ್ಯವಹಾರ ಮಾಡುತ್ತಿದ್ದನು. ಆ ಕೋಣೆಯನ್ನು ಬಿಡುತ್ತಿರಲಿಲ್ಲ.

೯. ಬ್ರಾಹ್ಮಣವರ್ಯರೆ! ಅವನು ದೇವರ ಪೂಜೆಯನ್ನು ಮಾಡುವಾಗಲೂ ಯಾರನ್ನೂ ನಂಬುತ್ತಿರಲಿಲ್ಲ.

೧೦. ಕೆಲವು ಕಾಲದಮೇಲೆ ಪರದ್ರವ್ಯವನ್ನು ಅಪಹರಿಸುವವನಾದ ದುಶ್ಶೀಲ ನೆಂಬ ಬ್ರಾಹ್ಮಣನು ಅದನ್ನು ನೋಡಿ ಹೀಗೆ ಆಲೋಚಿಸಿದನು.

೧೧-೧೩. ಈ ನಿಂಬಶುಚನ ನಂಬಿಕೆಗಾಗಿ ಅವನ ಶಿಷ್ಯನಾಗಿ ದೀನವೂ, ಕೃಪಣವೂ ಆದ ನಾನಾವಿಧ ಪ್ರಿಯವಾಕ್ಯಗಳಿಂದ ಹಗಲು ರಾತ್ರಿ ಅವನಿಗೆ ಆಲಸ್ಯವನ್ನುಂಟುಮಾಡುವೆನು ಎಂದು ಯೋಚಿಸಿ, ಒಂದು ದಿನ ಆ ದುಶ್ಶೀಲನು

ಭಗವಂಸ್ತೇ ಪ್ರಭಾವೋಽದ್ಯ ತಪಸಾ ವೈ ಮಯಾ ಶ್ರುತಃ ॥ ೧೪ ॥
ಯದನ್ಯಸ್ತಾಪಸೋ ನಾಸ್ತಿ ಈದೃಶೋಽತ್ರ ಧರಾತಲೇ ।
ತೇನಾಽಹಂ ದೂರತಃ ಪ್ರಾಪ್ತೋ ವೈರಾಗ್ಯೇಣ ಸಮನ್ವಿತಃ ॥ ೧೫ ॥
ಸಂಸಾರಾಽಸಾರತಾಂ ಜ್ಞಾತ್ವಾ ಜನ್ಮಮೃತ್ಯುಜರಾತ್ಮಿಕಾಂ ।
ಅರ್ಥಾತ್ಸ್ವಪ್ನಪ್ರತೀಕಾಶಂ ಯೌವನಂ ಚ ನೃಣಾಮಿಹ ॥ ೧೬ ॥
ಯದ್ವತ್ಪರ್ವತಸಂಜಾತಾ ನದೀ ಚ ಕ್ಷಣಭಂಗುರಾ ।
ಪುತ್ರಾಃ ಕಲತ್ರಾಣಿ ಚ ವಾ ಯೇ ಚಾಽನ್ಯೇ ಬಾಂಧವಾದಯಃ ॥ ೧೭ ॥
ತೇ ಸರ್ವೇ ಚ ಪರಿಜ್ಞೇಯಾ ಯಥಾ ಪಾಪಸಮಾಗಮಾಃ ।
ತತ್ಸಂಸಾರಸಮುದ್ರಸ್ಯ ತಾರಣಾರ್ಥಂ ಬ್ರವೀಹಿ ಮೇ ॥ ೧೮ ॥
ಉಪಾಯಂ ಕಂಚಿದದ್ಯೈವ ಉಪದೇಶೇ ವ್ಯವಸ್ಥಿತಂ ।
ತರಾಮಿ ಯೇನ ಸಂಸಾರಂ ಪ್ರಸಾದಾತ್ತವ ಸುವ್ರತ ॥ ೧೯ ॥
ತಸ್ಯ ತದ್ವಚನಂ ಶ್ರುತ್ವಾ ರೋಮಾಂಚಿತತನೂರುಹಃ ।
ಜ್ಞಾತ್ವಾ ಮಾಹೇಶ್ವರಃ ಕೋಽಯಂ ಚಿಂತಾವಾನ್ ಸಮುಪಸ್ಥಿತಃ ॥ ೨೦ ॥
ಯಥಾ ಬ್ರವೀಷಿ ಧನ್ಯೋಽಸಿ ಯಸ್ಯ ತೇ ಮತಿರೀದೃಶೀ ।
ತಾರುಣ್ಯೇ ವರ್ತಮಾನಸ್ಯ ಸುಕುಮಾರಸ್ಯ ಚೈವ ಹಿ ॥ ೨೧ ॥

---

ಮಠದ ಮಧ್ಯದಲ್ಲಿರುವ ನಿಂಬಶುಚನನ್ನು ಕಂಡು ಅವನ ಸಮೀಪಕ್ಕೆ ಹೋಗಿ ಸಾಷ್ಟಾಂಗ ಪ್ರಣಾಮಗೈದು ವಿನಯದಿಂದ ಕೈಮುಗಿದುಕೊಂಡು ಹೀಗೆಂದನು.

೧೪–೧೬. "ಪೂಜ್ಯನೆ! ನಾನು ತಪಸ್ಸಿನಿಂದ ನಿನ್ನ ಪ್ರಭಾವವನ್ನು ಕೇಳಿರುವೆನು. ನಿನ್ನಂತಹ ಮುನಿಯು ಭೂಮಿಯಲ್ಲಿ ಮತ್ತೊಬ್ಬನಿಲ್ಲ. ಆದುದರಿಂದ ಜನ್ಮಮರಣಜರಾರೂಪವಾದ ಸಂಸಾರವು ಅಸಾರವೆಂದು ತಿಳಿದು ವೈರಾಗ್ಯಗೊಂಡ ನಾನು ದೂರದಿಂದ ನಿನ್ನ ಹತ್ತಿರ ಬಂದಿರುವೆನು. ಈ ಪ್ರಪಂಚದಲ್ಲಿ ಮಾನವರ ಯೌವನವು ಸ್ವಪ್ನದಂತಿರುವುದು.

೧೭. ಪರ್ವತದಿಂದ ಹುಟ್ಟಿದ ನದಿಯು ಕ್ಷಣಕಾಲದಲ್ಲಿ ನಾಶವಾಗುವಂತೆ ಪುತ್ರರು, ಪತ್ನಿಯರು, ಇತರ ಬಾಂಧವಾದಿಗಳು ಸ್ವಲ್ಪಕಾಲದಲ್ಲಿಯೇ ನಾಶವಾಗುವರು.

೧೮–೧೯. ಅವರೆಲ್ಲ ಪಾಪದಿಂದ ಬಂದು ಸೇರುವರೆಂದು ತಿಳಿಯಬೇಕು. ಆದುದರಿಂದ ಸಂಸಾರಸಮುದ್ರವನ್ನು ದಾಟಲು ಉಪದೇಶದಲ್ಲಿರುವ ಒಂದು ಉಪಾಯವನ್ನು ನನಗೆ ಹೇಳು. ಅದರಿಂದ ನಿನ್ನ ಅನುಗ್ರಹವನ್ನು ಪಡೆದು ಸಂಸಾರವನ್ನು ದಾಟುವೆನು.

೨೦–೨೧. ನಿಂಬಶುಚನು ಅವನ ಆ ಮಾತನ್ನು ಕೇಳಿ ರೋಮಾಂಚಗೊಂಡವನಾಗಿ ಮಹೇಶ್ವರನ ಭಕ್ತನಾದ ಯಾಪಸೊ ಒಬ್ಬನು ಚಿಂತಾಗ್ರಸ್ತನಾಗಿ

ತಾರುಣ್ಯೇ ವರ್ತಮಾನೋ ಯಃ ಶಾಂತಃ ಸೋऽತ್ರ ನಿಗದ್ಯತೇ ।
ಧಾತುಷು ಕ್ಷೀಯಮಾಣೇಷು ಶಮಃ ಕಸ್ಯ ನ ಜಾಯತೇ ॥ ೨೨ ॥
ಯದ್ಯೇವಂ ಸುವಿರಕ್ತಿಃ ಸ್ಯಾತ್ಸಂಸಾರೋಪರಿ ಸಂಸ್ಥಿತಾ ।
ಸಮಾರಾಧಯ ದೇವೇಶಂ ಶಂಕರಂ ಶಶಿಶೇಖರಂ ॥ ೨೩ ॥
ನಾನ್ಯಥಾ ಘೋರಜಾಪ್ಯೇನ ತೀರ್ಯತೇ ಭವಸಾಗರಃ ।
ಮಯಾ ಸಮ್ಯಕ್ಪರಿಜ್ಞಾತಮೇತಚ್ಛಾಸ್ತ್ರಸಮಾಗಮಾತ್ ॥ ೨೪ ॥
ಶೂದ್ರೋ ವಾ ಯದಿ ವಾ ವಿಪ್ರೋ ಮ್ಲೇಚ್ಛೋ ವಾ ಪಾಪಕೃನ್ನರಃ ।
ಶಿವದೀಕ್ಷಾಸಮೋಪೇತಃ ಪುಷ್ಪಮೇಕಂ ತು ಯೋ ನ್ಯಸೇತ್ ॥ ೨೫ ॥
ಷಡಕ್ಷರೇಣ ಮಂತ್ರೇಣ ಲಿಂಗಸ್ಯೋಪರಿ ಭಕ್ತಿತಃ ।
ಸ ತಾಂ ಗತಿಮವಾಪ್ನೋತಿ ಯಾಂ ಯಾಂ ಯಾಂತೀಹ ಯಜ್ವಿನಃ ॥ ೨೬ ॥
ಯೋ ದದಾತಿ ಪ್ರಭಕ್ತ್ಯಾ ಚ ಶಿವದೀಕ್ಷಾನ್ವಿತಾಯ ಚ ।
ವಸ್ತ್ರೋಪಾನಹ ಕೌಪೀನಂ ಸ ಯಜ್ಞೈಃ ಕಿಂ ಕರಿಷ್ಯತಿ ॥ ೨೭ ॥
ತಚ್ಛ್ರುತ್ವಾ ಚರಣೌ ತಸ್ಯ ದುಶ್ಶೀಲೋऽಸೌ ತದಾऽऽದದೇ ।
ವಿನ್ಯಸ್ಯ ಸ್ವಶಿರಸ್ತಾಭ್ಯಾಂ ತತೋ ವಾಕ್ಯಮುವಾಚ ಹ ॥ ೨೮ ॥

---

ಬಂದಿರುವನೆಂದರಿತು ತರುಣನೂ, ಸುಕುಮಾರನೂ ಆದ ನಿನಗೆ ಇಂತಹ ಬುದ್ಧಿಯುಂಟಾಗಿ ಹೀಗೆ ಹೇಳುತ್ತಿರುವುದರಿಂದ ನೀನು ಧನ್ಯನಾಗಿರುವೆ.

೨೨. ತರುಣನು ಶಾಂತಿಯನ್ನು ಹೊಂದಿದ್ದರೆ ಅವನು ಶಾಂತನೆನ್ನಿಸಿಕೊಳ್ಳುವನು. ಧಾತುಗಳು ಕ್ಷೀಣವಾದ ಮೇಲೆ ಯಾವನಿಗೆ ಶಾಂತಿಯುಂಟಾಗುವುದಿಲ್ಲ?

೨೩. ನಿನಗೆ ಸಂಸಾರದ ಮೇಲೆ ಇಂತಹ ವೈರಾಗ್ಯವುಂಟಾಗಿದ್ದರೆ ಚಂದ್ರಮೌಳೀಶ್ವರನನ್ನು ಆರಾಧಿಸು.

೨೪. ಹಾಗಿಲ್ಲದೆ ಯಾವ ಘೋರಮಂತ್ರಜಪದಿಂದಲೂ ಸಂಸಾರಸಾಗರವನ್ನು ದಾಟಲು ಸಾಧ್ಯವಿಲ್ಲ. ನಾನು ಇದನ್ನು ಶಾಸ್ತ್ರವನ್ನು ಓದಿ ಚೆನ್ನಾಗಿ ತಿಳಿದಿರುವೆನು.

೨೫-೨೬. ಪಾಪ ಮಾಡಿದ ಮಾನವನು ಶೂದ್ರನಾಗಲಿ, ಬ್ರಾಹ್ಮಣನಾಗಲಿ, ಮ್ಲೇಚ್ಛನಾಗಲಿ ಶಿವದೀಕ್ಷೆಯನ್ನು ಹೊಂದಿ ಷಡಕ್ಷರ ಮಂತ್ರದಿಂದ ಲಿಂಗದ ಮೇಲೆ ಭಕ್ತಿಯಿಂದ ಒಂದು ಪುಷ್ಪವನ್ನು ಇಟ್ಟರೆ ಯಾಗ ಮಾಡಿದವರು ಪಡೆಯುವ ಗತಿಯನ್ನು ಹೊಂದುವರು.

೨೭. ಶಿವದೀಕ್ಷೆಯಿಂದ ಕೂಡಿದವನಿಗೆ ಭಕ್ತಿಯಿಂದ ವಸ್ತ್ರ, ಪಾದರಕ್ಷೆ, ಕೌಪೀನ ಇವುಗಳನ್ನು ದಾನಮಾಡಿದವನಿಗೆ ಯಜ್ಞಗಳಿಂದೇನು ಪ್ರಯೋಜನ?''

೨೮. ಆಗ ದುಶ್ಶೀಲನು ಆ ಮಾತನ್ನು ಕೇಳಿ ಅವನ ಪಾದಗಳನ್ನು ಹಿಡಿದುಕೊಂಡು ಅವುಗಳ ಮೇಲೆ ತನ್ನ ತಲೆಯನ್ನಿಟ್ಟು ಇಂತೆಂದನು.

ಶಿವದೀಕ್ಷಾಪ್ರಮಾಣೇನ ಪ್ರಸಾದಂ ಕುರು ಮೇ ಪ್ರಭೋ ।
ಶುಶ್ರೂಷಾಂ ಯೇನ ತೇ ನಿತ್ಯಂ ಪ್ರಕರೋಮಿ ಸಮಾಹಿತಃ ॥ ೨೯ ॥
ತತೋಽಸೌ ತಾಪಸೋ ವಿಪ್ರಾಶ್ಚಿಂತಯಾಮಾಸ ಚೇತಸಿ ।
ದಕ್ಷೋಽಯಂ ದೃಶ್ಯತೇ ಕೋಽಪಿ ಪುಮಾಂಶ್ಚೈವ ಸಮಾಗತಃ ॥ ೩೦ ॥
ಮಮಾಽಸ್ತಿ ನಾಽಪರಃ ಶಿಷ್ಯಸ್ತಸ್ಮಾದೇನಂ ಕರೋಮ್ಯಹಂ ।
ತತೋಽಬ್ರವೀತ್ಕರೇ ಗೃಹ್ಯ ಯದ್ಯೇವಂ ವತ್ಸ ಮೇ ಸಮಂ ।
ಸಮಯಂ ಕುರು ಯೇನ ತ್ವಾಂ ದೀಕ್ಷಯಾಮ್ಯದ್ಯ ಚೈವ ಹಿ ॥ ೩೧ ॥
ತ್ವಯಾ ಕುಟೀರಕಂ ಕಾರ್ಯಂ ಮಠಸ್ಯಾಸ್ಯ ವಿದೂರತಃ ।
ಪ್ರವೇಶೋ ನೈವ ಕಾರ್ಯಸ್ತು ಮಮಾಽತ್ರಾಽಸ್ತಂ ಗತೇ ರವೌ ॥ ೩೨ ॥

ದುಶ್ಶೀಲ ಉವಾಚ:—

ತವಾಽಽದೇಶಃ ಪ್ರಮಾಣಂ ಮೇ ಕೇವಲಂ ತಾಪಸೋತ್ತಮ ।
ಕಿಂ ಮಠೇನ ಕರಿಷ್ಯಾಮಿ ವಿಶೇಷಾದ್ರಾತ್ರಿಸಂಗಮೇ ॥ ೩೩ ॥
ಯಃ ಶಿಷ್ಯೋ ಗುರುವಾಕ್ಯಂ ತು ನ ಕರೋತಿ ಯಥೋದಿತಂ ।
ತಸ್ಯ ವ್ರತಂ ಚ ತದ್ವ್ಯರ್ಥಂ ನರಕಂ ಚ ತತಃ ಪರಂ ॥ ೩೪ ॥
ತಚ್ಛ್ರುತ್ವಾ ತುಷ್ಟಿಮಾಪನ್ನಃ ಶಿವದೀಕ್ಷಾಂ ತತೋ ದದೌ ।
ತಸ್ಮೈ ವಿನಯಯುಕ್ತಾಯ ತದಾ ನಿಂಬಶುಚೋ ಮುನಿಃ ॥ ೩೫ ॥

---

೨೯. ನನಗೆ ಶಿವದೀಕ್ಷೆಯನ್ನಿತ್ತು ಅನುಗ್ರಹಿಸು. ಅದರಿಂದ ನಾನು ನಿತ್ಯವೂ ನಿನ್ನನ್ನು ಸೇವಿಸುವೆನು.

೩೦–೩೧. ಬಳಿಕ ಆ ಮುನಿಯು, "ಬಂದಿರುವ ಇವನು ಕುಶಲನಾಗಿ ಕಾಣುವನು. ನನಗೆ ಇತರ ಶಿಷ್ಯರಿಲ್ಲ. ಆದುದರಿಂದ ಇವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುವೆನು" ಎಂದು ಆಲೋಚಿಸಿ ಅವನ ಕೈಯನ್ನು ಹಿಡಿದುಕೊಂಡು ಹೀಗೆಂದನು. "ಮಗು! ಹೀಗಾದರೆ ನನ್ನೊಡನೆ ಒಂದು ಸಂಕೇತವನ್ನು ಮಾಡು. ಈಗ ನಿನಗೆ ಶಿವದೀಕ್ಷೆಯನ್ನು ಕೊಡುವೆನು.

೩೨. ನೀನು ಈ ಮಠಕ್ಕೆ ದೂರದಲ್ಲಿ ಗುಡಿಸಲನ್ನು ರಚಿಸಿಕೊಳ್ಳಬೇಕು. ಸೂರ್ಯನು ಮುಳುಗಿದಮೇಲೆ ನನ್ನೀಮಠಕ್ಕೆ ಬರಬಾರದು."

೩೩. ದುಶ್ಶೀಲನು ಹೇಳುತ್ತಾನೆ:— ಮುನಿವರ್ಯನೆ! ನನಗೆ ನಿನ್ನ ಅಪ್ಪಣೆಯೆ ಪ್ರಮಾಣವಾಗಿರುವುದು. ರಾತ್ರಿಯಲ್ಲಿ ನನಗೆ ಮಠದಿಂದ ಏನಾಗಬೇಕು.

೩೪. ಗುರುವು ಹೇಳಿದಂತೆ ಅವನ ಮಾತನ್ನು ನಡೆಯಿಸದ ಶಿಷ್ಯನ ವ್ರತವು ವ್ಯರ್ಥವಾಗುವುದು. ಅವನು ನರಕವನ್ನು ಹೊಂದುವನು.

೩೫. ನಿಂಬಶುಚಮುನಿಯು ಆ ಮಾತನ್ನು ಕೇಳಿ ಸಂತೋಷಗೊಂಡು ವಿನೀತನಾದ ಅವನಿಗೆ ಶಿವದೀಕ್ಷೆಯನ್ನಿತ್ತನು.

ತತಃ ಪ್ರಭೃತಿ ಸೋಽತೀವ ತಸ್ಯ ಶುಶ್ರೂಷಣೇ ರತಃ ।
ರಂಜಯಾಮಾಸ ತಚ್ಚಿತ್ತಂ ಪರಿಚರ್ಯಾಪರಾಯಣಃ ॥ ೩೬ ॥
ಮನಸಾ ಚಿಂತಯಾನಸ್ತು ತನ್ಮಾತ್ರಾರ್ಥಂ ದಿನೇ ದಿನೇ ।
ನ ಛಿದ್ರಂ ವೀಕ್ಷತೇ ಕಿಂಚಿದ್ವೀಕ್ಷಮಾಣೋಽಪಿ ಯತ್ನತಃ ॥ ೩೭ ॥
ಶೈವೋಽಪಿ ಚ ಸ ಕಕ್ಷ್ಯಾಂ ತಾಂ ತಾಂ ಮಾತ್ರಾಂ ಹೇಮಸಂಭವಾಂ ।
ಕಥಂಚಿನ್ಮೋಕ್ಷತೇ ಭೂಮೌ ಭೋಜ್ಯೇ ದೇವಾರ್ಚನೇಽಪಿ ನ ॥ ೩೮ ॥
ತತೋಽಸೌ ಚಿಂತಯಾಮಾಸ ದುಶ್ಶೀಲೋ ನಿಜಚೇತಸಿ ।
ಮಠೇ ತಾವತ್ಪ್ರವೇಶೋಽಸ್ತಿ ನೈವ ರಾತ್ರೌ ಕಥಂಚನ ॥ ೩೯ ॥
ಸೂರ್ಯಾಸ್ತಮಾನವೇಲಾಯಾಂ ಯತ್ಪ್ರಯಚ್ಛತಿ ತತ್ಕ್ಷಣಾತ್ ।
ಪರಿಘಂ ಸುದೃಢಂ ಪಾಪಸ್ತತ್ಕರೋಮಿ ಚ ಕಿಂ ಪುನಃ ॥ ೪೦ ॥
ಮಠೋಽಯಂ ಸುಶಿಲಾಬದ್ಧೋ ನೈವ ಖಾತಂ ಪ್ರಜಾಯತೇ ।
ತುಂಗತ್ವಾನ್ನ ಪ್ರವೇಶಃ ಸ್ಯಾದುಪಾಯೈರ್ವಿವಿಧೈಃ ಪರೈಃ ॥ ೪೧ ॥
ತತ್ಕಿಂ ವಿಷಂ ಪ್ರಯಚ್ಛಾಮಿ ಶಸ್ತ್ರೈರ್ವ್ಯಾಪಾದಯಾಮಿ ಕಿಂ ।
ದಿವಾಽಪಿ ಪಶುಮಾರೇಣ ಪಂಚತ್ವಂ ವಾ ನಯಾಮಿ ಕಿಂ ॥ ೪೨ ॥

---

೩೬. ಆ ದುಶ್ಶೀಲನು ಅದು ಮೊದಲ್ಗೊಂಡು ಅತಿಶಯವಾಗಿ ಅವನ ಸೇವೆಯಲ್ಲಿ ನಿರತನಾದನು. ಹಾಗೆ ಸೇವೆಯಲ್ಲಿ ಆಸಕ್ತನಾಗಿ ಅವನ ಮನಸ್ಸನ್ನು ಸಂತೋಷಗೊಳಿಸಿದನು.

೩೭. ಆ ನಿಂಬಶುಚನ ದ್ರವ್ಯದ ಗಂಟನ್ನು ಮನಸ್ಸಿನಲ್ಲಿ ಪ್ರತಿದಿನವೂ ಚಿಂತಿಸುತ್ತ ಅವಕಾಶವನ್ನು ನಿರೀಕ್ಷಿಸಿದರೂ ಹೊಂದಲಿಲ್ಲ.

೩೮. ಆ ಶೈವನೂ ಭೋಜನ, ದೇವಪೂಜೆಗಳ ಸಮಯದಲ್ಲಿಯೂ ಆ ಚಿನ್ನದ ಗಂಟನ್ನು ಭೂಮಿಯಲ್ಲಿಡಲಿಲ್ಲ.

೩೯. ಬಳಿಕ ಈ ದುಶ್ಶೀಲನು ತನ್ನ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. "ರಾತ್ರಿಯಲ್ಲಿಯೂ ನನಗೆ ಮಠದಲ್ಲಿ ಪ್ರವೇಶವಿಲ್ಲ.

೪೦. ಈ ಪಾಪಿಯು ಸೂರ್ಯಾಸ್ತಮಯ ಸಮಯದಲ್ಲಿಯೇ ಗಟ್ಟಿಯಾಗಿ ಅಗಣಿಯನ್ನು ಹಾಕಿಕೊಳ್ಳುವನು. ಆದುದರಿಂದ ನಾನು ಏನನ್ನು ಮಾಡಲಿ?

೪೧. ಕಲ್ಲಿನಿಂದ ಕಟ್ಟಿರುವ ಈ ಮಠದಲ್ಲಿ ಕನ್ನವುಂಟಾಗುವುದಿಲ್ಲ. ಎತ್ತರವಾಗಿರುವುದರಿಂದ ನಾನಾ ಉಪಾಯಗಳಿಂದಲೂ ಪ್ರವೇಶಮಾಡಲು ಸಾಧ್ಯವಿಲ್ಲ.

೪೨. ಆದುದರಿಂದ ಇವನಿಗೆ ವಿಷವನ್ನು ಕೊಡಲೆ? ಆಯುಧಗಳಿಂದ ಇವನನ್ನು ಕೊಲ್ಲಲೊ? ಹಗಲಿನಲ್ಲಿಯೇ ಪಶುವನ್ನು ಕೊಲ್ಲುವಂತೆ ಕೊಲ್ಲಲೊ?"

ಏವಂ ಚಿಂತಯತಸ್ತಸ್ಯ ಪ್ರಾವೃಟ್ಕಾಲ ಉಪಸ್ಥಿತಃ ।
ಶ್ರಾವಣಸ್ಯಾಽಸಿತೇ ಪಕ್ಷೇ ಕರ್ಕಟಸ್ಥೇ ದಿವಾಕರೇ ॥ ೪೩ ॥
ಪ್ರಾಪ್ತೋ ಮಹೇಶ್ವರಸ್ತಸ್ಯ ಕೋಽಪಿ ತತ್ರ ಧನೀ ದ್ರುತಂ ।
ತೇನೋಕ್ತಂ ಪ್ರಣಿಪತ್ಯೋಚ್ಚೈಃ ಕರಿಷ್ಯಾಮಿ ಪವಿತ್ರಕಂ ॥ ೪೪ ॥
ಚತುರ್ದಶ್ಯಾಮಹಂ ಸ್ವಾಮಿನ್ ಯದ್ಯಾದೇಶೋ ಭವೇತ್ತವ ।
ಯದ್ಯಾಗಚ್ಛಸಿ ಮೇ ಗ್ರಾಮಂ ಪ್ರಸಾದೇನ ಸಮನ್ವಿತಃ ॥ ೪೫ ॥

ಸೂತ ಉವಾಚ:—

ತಚ್ಛ್ರುತ್ವಾ ತುಷ್ಟಿಮಾಪನ್ನಸ್ತತೋ ನಿಂಬಶುಚೋ ಮುನಿಃ ।
ತಥೇತಿ ಚೈವಮುಕ್ತ್ವಾತಂ ಪ್ರೇಷಯಾಮಾಸ ತತ್‍ಕ್ಷಣಾತ್ ॥ ೪೬ ॥
ಆಗಮಿಷ್ಯಾಮ್ಯಹಂ ಕಾಲೇ ಸ್ವಶಿಷ್ಯೇಣ ಸಮನ್ವಿತಃ ।
ಕರಿಷ್ಯಾಮಿ ಪರಂ ಶ್ರೇಯಸ್ತವ ವತ್ಸ ನ ಸಂಶಯಃ ॥ ೪೭ ॥
ಅಥ ಕಾಲೇ ತು ಸಂಪ್ರಾಪ್ತೇ ಚಿಂತಯಿತ್ವಾ ಪ್ರಭಾತಿಕಂ ।
ಪ್ರಭಾತಸಮಯೇ ಪ್ರಾಪ್ತೇ ನ ಶೈವಃ ಪ್ರಸ್ಥಿತಸ್ತದಾ ।
ದುಶ್ಶೀಲೇನ ಸಮಾಯುಕ್ತಃ ಸಂಪ್ರಹೃಷ್ಟ ತನೂರುಹಃ ॥ ೪೮ ॥
ತತೋಽವೈ ಗಚ್ಛಮಾನಸ್ಯ ತಸ್ಯ ಮಾರ್ಗೇ ವ್ಯವಸ್ಥಿತಾ ।
ಪುಣ್ಯಾನದೀ ಸುವಿಖ್ಯಾತಾ ಮುರಲಾ ಸಾಗರಂಗಮಾ ॥ ೪೯ ॥

---

೪೩—೪೫. ಅವನು ಹೀಗೆ ಚಿಂತಿಸುತ್ತಿರಲು ಮಳೆಗಾಲವು ಬಂದಿತು. ಶ್ರಾವಣ ಕೃಷ್ಣಪಕ್ಷದಲ್ಲಿ ಸೂರ್ಯನು ಕರ್ಕಟರಾಶಿಯಲ್ಲಿರಲು ಧನಿಕನಾದ ಒಬ್ಬ ಶಿವಭಕ್ತನು ಅಲ್ಲಿಗೆ ಬಂದನು. ಅವನು ನಿಂಬಶುಚಮುನಿಗೆ ನಮಸ್ಕರಿಸಿ, "ಸ್ವಾಮಿ! ನಿನ್ನ ಅಪ್ಪಣೆಯಾದರೆ ನೀನು ಅನುಗ್ರಹಿಸಿ ನನ್ನ ಗ್ರಾಮಕ್ಕೆ ಬಂದರೆ ನಾನು ಚತುರ್ದಶೀ ದಿನ ಪವಿತ್ರಕವನ್ನು ಮಾಡುವೆನು" ಎಂದನು.

೪೬—೪೭. ಸೂತನು ಹೇಳುತ್ತಾನೆ:—ನಿಂಬಶುಚ ಮುನಿಯು ಆ ಮಾತನ್ನು ಕೇಳಿ ಸಂತೋಷಗೊಂಡು ಹಾಗೆಯೇ ಆಗಲಿ. ನಾನು ಸಕಾಲದಲ್ಲಿ ಶಿಷ್ಯನೊಡನೆ ಬರುವೆನು. ನಿನಗೆ ನಿಶ್ಚಯವಾಗಿಯೂ ಶ್ರೇಯಸ್ಸನ್ನುಂಟುಮಾಡುವೆನು ಎಂದು ಹೇಳಿ ಕೂಡಲೆ ಅವನನ್ನು ಕಳುಹಿಸಿದನು.

೪೮. ಬಳಿಕ ಆ ಕಾಲವೊದಗಲು ಆ ಶೈವನು ಬೆಳಗ್ಗೆ ಪ್ರಾತಃಕಾಲದ ಕಾರ್ಯವನ್ನು ಚಿಂತಿಸಿ ದುಶ್ಶೀಲನೊಡನೆ ಸಂತೋಷದಿಂದ ಹೊರಟನು.

೪೯. ಅವನು ಹೋಗುತ್ತಿರಲು ದಾರಿಯಲ್ಲಿ ಪವಿತ್ರವೂ, ಸಾಗರವನ್ನು ಸೇರುವುದೂ ಆದ ಮುರಳಾ ಎಂಬ ನದಿಯು ಸಂಧಿಸಿತು.

ಸ ತಾಂ ದೃಷ್ಟ್ವಾಽಬ್ರವೀದ್ವಾಕ್ಯಂ ವತ್ಸ ಶಿಷ್ಯ ಕರೋಮ್ಯಹಂ ।
ಭವತಾ ಸಹ ದೇವಾರ್ಚಾಂ ಮುರಲಾಯಾಂ ಸ್ಥಿರೋ ಭವ ॥ ೫೦ ॥
ಬಾಢಮಿತ್ಯೇವ ಸ ಪ್ರೋಕ್ತ್ವಾ ಸಂಸ್ಥಿತೋಽಸ್ಯಾಸ್ತಟೇ ಶುಭೇ ।
ಸೋಽಪಿ ನಿಂಬಶುಚಸ್ತಸ್ಯ ರಂಜಿತಃ ಸರ್ವದಾ ಗುಣೈಃ ॥ ೫೧ ॥
ಸುಶಿಷ್ಯಂ ತಂ ಪರಿಜ್ಞಾಯ ವಿಶ್ವಾಸಂ ಪರಮಂ ಗತಃ ।
ಸ್ಥಗಿತಾಂ ತಾಂ ಸಮಾದಾಯ ಹೇಮಮಾತ್ರಾಸಮುದ್ಭವಾಂ ॥ ೫೨ ॥
ಜಾಗೇಶ್ವರ ಸಮೋಪೇತಾಂ ಸ ಕಂಥಾಂ ವ್ಯಾಕ್ಷಿಪತ್ಕ್ಷಿತೌ ।
ಪುರೀಷೋತ್ಸರ್ಗಕಾರ್ಯೇಣ ತತಸ್ತೋಽಕಾಂತರಂ ಗತಃ ॥ ೫೩ ॥
ಯಾವಚ್ಚಾಽದರ್ಶನಂ ಪ್ರಾಪ್ತೋ ವೇತಸೈಃ ಪರಿವಾರಿತಃ ।
ತಾವನ್ಮಾತ್ರಾಂ ಸಮಾದಾಯ ದುಶ್ಶೀಲಃ ಪ್ರಸ್ಥಿತೋ ದ್ರುತಂ ।
ಉತ್ತರಾಂ ದಿಶಮಾಶ್ರಿತ್ಯ ಪ್ರಹೃಷ್ಟೇನಾಂತರಾತ್ಮನಾ ॥ ೫೪ ॥
ಅಥಾಽಸೌ ಚಾಽಽಗತೋ ಯಾವದ್ದುಶ್ಶೀಲಂ ನೈವ ಪಶ್ಯತಿ ।
ಕೇವಲಂ ದೃಶ್ಯತೇ ಕಂಥಾ ಜಾಗೇಶ್ವರ ಸಮನ್ವಿತಾ ॥ ೫೫ ॥
ತತಃ ಶೀಘ್ರತರಂ ಶೌಚಂ ಕಿಂಚಿತ್ಕೃತ್ವಾ ಸುದುರ್ಮನಾಃ ।
ವಿನೈವಾಽಽಚಮನಂ ಪ್ರಾಪ್ತಃ ಸಾ ಕಂಥಾ ಯತ್ರ ತಿಷ್ಠತಿ ॥ ೫೬ ॥

---

೫೦. ಅವನು ಆ ನದಿಯನ್ನು ಕಂಡು, "ಮಗು! ನಾನು ನಿನ್ನೊಡನೆ ಈ ಮುರಳಾ ನದಿಯಲ್ಲಿ ದೇವಪೂಜೆಯನ್ನು ಮಾಡುವೆನು; ಸ್ಥಿರಮನಸ್ಕನಾಗಿರು" ಎಂದನು.

೫೧–೫೩. ಆ ಶಿಷ್ಯನು ಹಾಗೆಯೇ ಆಗಲೆಂದು ಹೇಳಿ ಆ ನದಿಯ ದಡದಲ್ಲಿ ಇದ್ದನು. ಆ ನಿಂಬಶುಚನು ಯಾವಾಗಲೂ ಆ ಶಿಷ್ಯನ ಗುಣಗಳಿಂದ ಸಂತೋಷಗೊಂಡವನಾದ್ದರಿಂದ ಅವನು ಒಳ್ಳೆಯ ಶಿಷ್ಯನೆಂದು ನಂಬಿ ಮುಚ್ಚಿಟ್ಟ ಆ ದ್ರವ್ಯದ ಗಂಟು, ಜಾಗೇಶ್ವರ ಇವುಗಳಿಂದ ಸಹಿತವಾದ ಕಂತೆಯನ್ನು ಭೂಮಿಯಲ್ಲಿಟ್ಟು ಮಲವಿಸರ್ಜನೆಗಾಗಿ ಸ್ವಲ್ಪದೂರ ಹೋದನು.

೫೪. ಆ ಗುರುವು ಜೊಂಡುಗಳಿಂದ ಅದೃಶ್ಯನಾಗಲು, ದುಶ್ಶೀಲನು ಆ ಚಿನ್ನದ ಗಂಟನ್ನು ತೆಗೆದುಕೊಂಡು ಸಂತೋಷದಿಂದ ಉತ್ತರದಿಕ್ಕಿಗೆ ಶೀಘ್ರವಾಗಿ ಪ್ರಯಾಣಮಾಡಿದನು.

೫೫. ಬಳಿಕ ಆ ನಿಂಬಶುಚನು ಬಂದು ನೋಡಲು ದುಶ್ಶೀಲನಿರಲಿಲ್ಲ. ಕೇವಲ ಜಾಗೇಶ್ವರನಿಂದ ಸಹಿತವಾದ ಕಂತೆಯು ಮಾತ್ರ ಕಾಣುತ್ತಿದ್ದಿತು.

೫೬. ಬಳಿಕ ಅವನು ಶೀಘ್ರವಾಗಿ ಸ್ವಲ್ಪ ಶೌಚವನ್ನು ಮಾಡಿ ಆಚಮನ ಮಾಡದೆ ಕಂತೆಯಿರುವ ಸ್ಥಳಕ್ಕೆ ಬಂದನು.

ಯಾವನ್ಮಾತ್ರಾವಿಹೀನಾಂ ಚ ತತೋ ಜ್ಞಾತ್ವಾ ಚ ತಾಂ ಹೃತಾಂ ।
ತೇನ ಶಿಷ್ಯೇಣ ಮೂರ್ಛಾಢ್ಯೋ ನಿಪಪಾತ ಮಹೀತಲೇ ॥ ೫೭ ॥
ತತಶ್ಚ ಚೇತನಾಂ ಪ್ರಾಪ್ಯ ಕೃಚ್ಛ್ರಾದುತ್ಥಾಯ ತತ್ಕ್ಷಣಾತ್ ।
ಶಿಲಾಯಾಂ ತಾಡಯಾಮಾಸ ನಿಜಾಂಗಾನಿ ಶಿರಸ್ತಥಾ ॥ ೫೮ ॥
ಹಾ ಹತೋಽಸ್ಮಿ ವಿನಷ್ಟೋಽಸ್ಮಿ ಮುಷ್ಟಸ್ತೇನ ದುರಾತ್ಮನಾ ।
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ತಂ ವೀಕ್ಷಯಾಮ್ಯಹಂ ॥ ೫೯ ॥
ತತಸ್ತು ಪದವೀಂ ವೀಕ್ಷ್ಯ ತಸ್ಯತಾಂ ಚಲಿತೋ ಧ್ರುವಂ ।
ವೃದ್ಧಭಾವಾತ್ಪರಿಶ್ರಾಂತೋಽನಾವೃತ್ಯ ಸ ಮಠಂ ಗತಃ ॥ ೬೦ ॥
ದುಃಶೀಲೋಽಪಿ ಸಮಾದಾಯ ಮಾತ್ರಾಂ ಸ್ಥಾನಾಂತರಂ ಗತಃ ।
ತತಸ್ತೇನ ಸುವರ್ಣೇನ ವ್ಯವಹಾರಾನ್ ಕರೋತಿ ಸಃ ॥ ೬೧ ॥
ತತೋ ಗೃಹಸ್ಥತಾಂ ಪ್ರಾಪ್ತಃ ಕೃತದಾರಪರಿಗ್ರಹಃ ।
ವೃದ್ಧಭಾವಂ ಸಮಾಪನ್ನಃ ಸಂತಾನೇನ ವಿವರ್ಜಿತಃ ॥ ೬೨ ॥
ಕಸ್ಯಚಿತ್ತ್ವಥ ಕಾಲಸ್ಯ ತೀರ್ಥಯಾತ್ರಾಪರಾಯಣಃ ।
ಭಾರ್ಯಯಾ ಸಹಿತೋ ವಿಪ್ರಶ್ಚಮತ್ಕಾರಪುರಂ ಗತಃ ॥ ೬೩ ॥

---

೫೭. ಅವನು ಕಂತೆಯಲ್ಲಿ ಚಿನ್ನದ ಗಂಟು ಇಲ್ಲ ಎಂಬುದನ್ನೂ, ಅದನ್ನು ಶಿಷ್ಯನು ಅಪಹರಿಸಿದ್ದಾನೆಂಬುದನ್ನೂ ಅರಿತು ಮೂರ್ಛೆಗೊಂಡು ನೆಲದಮೇಲೆ ಬಿದ್ದನು.

೫೮-೫೯. ಬಳಿಕ ಕಷ್ಟದಿಂದ ಜ್ಞಾನವನ್ನು ಹೊಂದಿ ಕೂಡಲೇ ಎದ್ದು ಅಯ್ಯೋ! ಹಾಳಾದೆನು. ದುರಾತ್ಮನಾದ ಆ ದುಶ್ಶೀಲನು ನನ್ನ ಚಿನ್ನದ ಗಂಟನ್ನು ಕದ್ದನು. ಏನುಮಾಡಲಿ. ಎಲ್ಲಿಗೆ ಹೋಗಲಿ. ಅವನನ್ನು ಹೇಗೆ ನೋಡಲಿ ಎಂದು ಗೋಳಾಡುತ್ತ ತನ್ನ ಅವಯವಗಳನ್ನೂ, ತಲೆಯನ್ನೂ ಕಲ್ಲಿಗೆ ಬಡಿದುಕೊಂಡನು.

೬೦. ಬಳಿಕ ಆ ಶಿಷ್ಯನ ದಾರಿಯನ್ನು ಹಿಡಿದು ಬೇಗನೆ ಹೊರಟು ಮುಪ್ಪಿನಿಂದ ಬಳಲಿದವನಾಗಿ ಹಿಂದಿರುಗಿ ಮಠವನ್ನು ಸೇರಿದನು.

೬೧. ದುಶ್ಶೀಲನೂ ಆ ಗಂಟನ್ನು ತೆಗೆದುಕೊಂಡು ಬೇರೆ ಸ್ಥಳಕ್ಕೆ ಹೋಗಿ ಆ ಸುವರ್ಣದಿಂದ ವ್ಯವಹಾರ ಮಾಡುತ್ತಿದ್ದನು.

೬೨. ಬಳಿಕ ಅವನು ಮದುವೆಮಾಡಿಕೊಂಡು ಗೃಹಸ್ಥನಾಗಿ ಸಂತತಿಯಿಲ್ಲದೆ ಮುದುಕನಾದನು.

೬೩. ಒಂದಾನೊಂದು ಕಾಲದಲ್ಲಿ ಅವನು ತೀರ್ಥಯಾತ್ರಾನಿರತನಾಗಿ ಪತ್ನಿಯೊಡನೆ ಚಮತ್ಕಾರಪುರವನ್ನು ಸೇರಿದನು.

ಸ್ನಾತ್ವಾ ತೀರ್ಥೇಷು ಸರ್ವೇಷು ದೇವತಾಯತನೇಷು ಚ ।
ಭ್ರಮಮಾಣೇನ ಸಂದೃಷ್ಟೋ ದುರ್ವಾಸಾ ನಾಮ ಸನ್ಮುನಿಃ ॥ ೬೪ ॥
ನಿಜದೇವಸ್ಯ ಸದ್ಭಕ್ತ್ಯಾ ನೃತ್ಯಗೀತಪರಾಯಣಃ ।
ತಂ ಚ ದೃಷ್ಟ್ವಾ ನಮಸ್ಕೃತ್ಯ ವಾಕ್ಯಮೇತದುವಾಚ ಸಃ ॥ ೬೫ ॥
ಕೇನೈತತ್ಸ್ಥಾಪಿತಂ ಲಿಂಗಂ ನಿರ್ಮಲಂ ಶಂಕರೋದ್ಭವಂ ।
ಕಿಂ ತ್ವಂ ನೃತ್ಯಸಿ ಗೀತಂ ಚ ಪುರೋಽಸ್ಯ ಪ್ರಕರೋಷಿ ಚ ।
ಮುನೀನಾಂ ಯುಜ್ಯತೇ ನೈವ ಯದೇತತ್ತವ ಚೇಷ್ಟಿತಂ ॥ ೬೬ ॥

ದುರ್ವಾಸಾ ಉವಾಚ :—

ಮಯೈತತ್ಸ್ಥಾಪಿತಂ ಲಿಂಗಂ ದೇವದೇವಸ್ಯ ಶೂಲಿನಃ
ನೃತ್ಯಗೀತಪ್ರಿಯೋ ಯಸ್ಮಾದ್ದೇವದೇವೋ ಮಹೇಶ್ವರಃ ॥ ೬೭ ॥
ನಮೇಽಸ್ತಿ ವಿಭವಃ ಕಶ್ಚಿದ್ಯೇನ ಭೋಗಂ ಕರೋಮ್ಯಹಂ ॥ ೬೮ ॥
ಏತಸ್ಮಿನ್ನಂತರೇ ಪ್ರಾಪ್ತಶ್ಚಿರ್ಭಟಿರ್ನಾಮ ಯೋಗವಿತ್ ।
ತೇನ ಪೃಷ್ಟಃ ಸ ದುರ್ವಾಸಾ ವೇದಾಂತಿಕಮಿದಂ ವಚಃ ॥ ೬೯ ॥
ಅಸೂರ್ಯಾನಾಮ ತೇ ಲೋಕಾ ಅಂಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಽಭಿಗಚ್ಛಂತಿ ಯೇ ಕೇಚಾಽಽತ್ಮಹನೋ ಜನಾಃ ॥ ೭೦ ॥

---

೬೪–೬೫. ಸಕಲ ತೀರ್ಥಗಳಲ್ಲಿ ಮಿಂದು ದೇವಾಲಯಗಳಲ್ಲಿ ಸಂಚರಿಸುತ್ತಿರುವ ಅವನು ದೇವರಲ್ಲಿ ಭಕ್ತಿಯಿಂದ ನೃತ್ಯಗೀತಾಸಕ್ತನಾದ ದುರ್ವಾಸನೆಂಬ ಮುನಿಯನ್ನು ಕಂಡನು. ಅವನು ಆ ಮುನಿಯನ್ನು ವಂದಿಸಿ ಇಂತೆಂದನು.

೬೬. ಈ ನಿರ್ಮಲವಾದ ಮಹೇಶ್ವರ ಲಿಂಗವನ್ನು ಯಾರು ಪ್ರತಿಷ್ಠೆ ಮಾಡಿದರು? ಇದರ ಮುಂದೆ ನೀನು ನೃತ್ಯಗಾಯನಗಳನ್ನು ಏಕೆ ಮಾಡುತ್ತಿರುವೆ? ಈ ನಿನ್ನ ಕಾರ್ಯವು ಮುನಿಗಳಿಗೆ ಯುಕ್ತವಲ್ಲವಲ್ಲ!

೬೭. ದುರ್ವಾಸನು ಹೇಳುತ್ತಾನೆ:—ನಾನೇ ಈ ಮಹೇಶ್ವರ ಲಿಂಗವನ್ನು ಸ್ಥಾಪಿಸಿದೆನು. ಆ ಮಹೇಶ್ವರನು ನೃತ್ಯಗೀತಪ್ರಿಯನಾಗಿರುವುದರಿಂದ ನಾನು ಅದನ್ನು ಮಾಡುತ್ತಿರುವೆನು.

೬೮. ನನಗೆ ಸುಖವನ್ನನುಭವಿಸಲು ಐಶ್ವರ್ಯವಿಲ್ಲ.

೬೯. ಈ ಸಮಯದಲ್ಲಿ ಚಿರ್ಭಟಿಯೆಂಬ ಯೋಗಜ್ಞನು ಅಲ್ಲಿಗೆ ಬಂದು ದುರ್ವಾಸಮುನಿಯನ್ನು ವೇದಾಂತಸಂಬಂಧವಾದ ಈ ಮಾತನ್ನು ಕೇಳಿದನು.

೭೦. ಆತ್ಮಘಾತುಕರು ಮಡಿದ ತರುವಾಯ ಕತ್ತಲೆಯಿಂದ ವ್ಯಾಪ್ತವಾದ ಅಸೂರ್ಯ ಎಂಬ ಲೋಕಗಳಿಗೆ ತೆರಳುವರು.

ಉಪವಿಶ್ಯ ತತಸ್ತೇನ ತಸ್ಯ ದತ್ತಸ್ತು ನಿರ್ಣಯಃ ।
ದುಶ್ಶೀಲೇನಾಽಪಿ ತತ್ಸರ್ವಂ ವಿಜ್ಞಾತಂ ತಸ್ಯ ಸಂಸ್ತುತಂ ॥ ೭೧ ॥
ತತೋ ವಿಶೇಷತೋ ಜಾತಾ ಭಕ್ತಿಸ್ತಸ್ಯ ಹರಂ ಪ್ರತಿ ।
ತಂ ಪ್ರಣಮ್ಯ ತತಶ್ಶೋಽಚ್ಚೈರ್ವಾಕ್ಯಮೇತದುವಾಚಹ ॥ ೭೨ ॥
ಭಗವನ್ ಬ್ರಾಹ್ಮಣೋಽಸ್ಮೀತಿ ಜಾತ್ಯಾ ಚೈವ ನ ಕರ್ಮಣಾ ।
ನ ಕಸ್ಯಚಿನ್ಮಯಾ ದತ್ತಂ ಕದಾಚಿನ್ನೈವ ಭೋಜನಂ ॥ ೭೩ ॥
ಕೇವಲಂ ದೇವವಿಪ್ರಾಣಾಂ ವಂಚಯಿತ್ವಾ ಧನಂ ಹೃತಂ ।
ವ್ಯಸನೇನಾಽಭಿಭೂತೇನ ದ್ಯೂತವೇಶ್ಯೋದ್ಭವೇನ ಚ ॥ ೭೪ ॥
ತಥಾ ಚ ಬ್ರಾಹ್ಮಣೇನಾಽಪಿ ಮಯಾ ಶೈವೋ ಗುರುಃ ಕೃತಃ
ವಂಚಿತಶ್ಚ ತಥಾಽನೇಕೈಶ್ಚಾಟುಭಿರ್ವಿಹೃತಂ ಧನಂ ॥ ೭೫ ॥
ತಸ್ಯ ಸಕ್ತಂ ಧನಂ ಭೂಯಃ ಸಾಧುಮಾರ್ಗೇಣ ಚಾಽಽಹೃತಂ ।
ಸ ಚಾಽಪಿ ಚ ಗುರುರ್ಮಹ್ಯಂ ಪರಲೋಕಮಿಹಾಽಽಗತಃ ॥ ೭೬ ॥
ಪಶ್ಚಾತ್ತಾಪೇನ ತೇನೈವ ಪ್ರದಹ್ಯಾಮಿ ದಿವಾ ನಿಶಂ ।
ಪುರಶ್ಚರಣದಾನೇನ ತತ್ಪ್ರಸಾದಂ ಕುರುಷ್ವ ಮೇ ॥ ೭೭ ॥

---

೭೧. ಬಳಿಕ ದುರ್ವಾಸನು ಕುಳಿತುಕೊಂಡು ಆ ಚರ್ಭಟನಿಗೆ ಅದರ ನಿಶ್ಚಿತವಾದ ಅರ್ಥವನ್ನು ಹೇಳಿದನು. ಅವನು ಹೇಳಿದ್ದನ್ನೆಲ್ಲ ದುಶ್ಶೀಲನೂ ಕೇಳಿದನು.

೭೨. ಬಳಿಕ ಅವನಿಗೆ ಶಿವನಲ್ಲಿ ಅಧಿಕ ಭಕ್ತಿಯುಂಟಾಯಿತು. ಅವನು ಆ ದುರ್ವಾಸಮುನಿಯನ್ನು ವಂದಿಸಿ ಹೀಗೆಂದನು.

೭೩–೭೪. ಪೂಜ್ಯನೆ! ನಾನು ಜಾತಿಯಿಂದ ಬ್ರಾಹ್ಮಣನಾಗಿರುವೆನು. ಕರ್ಮದಿಂದಲ್ಲ. ನಾನು ಯಾವಾಗಲೂ ಯಾರಿಗೂ ಭೋಜನವನ್ನು ನೀಡಲಿಲ್ಲ. ಜೂಜು, ವೇಶ್ಯೆ ಸಂಬಂಧವಾದ ವ್ಯಸನದಿಂದ ಸಹಿತನಾಗಿ ದೇವಬ್ರಾಹ್ಮಣರನ್ನು ವಂಚಿಸಿ ದ್ರವ್ಯವನ್ನು ಅಪಹರಿಸಿದೆನು.

೭೫. ಬ್ರಾಹ್ಮಣನಾದ ನಾನು ಶೈವನನ್ನು ಗುರುವನ್ನಾಗಿ ಮಾಡಿಕೊಂಡು ಅವನನ್ನು ಅನೇಕ ಪ್ರಿಯೋಕ್ತಿಗಳಿಂದ ವಂಚಿಸಿ ಅವನ ದ್ರವ್ಯವನ್ನು ಅಪಹರಿಸಿದೆನು.

೭೬. ಗುರುವು ಆ ದ್ರವ್ಯವನ್ನೆಲ್ಲ ಒಳ್ಳೆಯ ದಾರಿಯಿಂದ ಸಂಪಾದಿಸಿದ್ದನು. ಅವನು ನನಗಾಗಿ ಮಡಿದನು.

೭೭. ಆ ಪಶ್ಚಾತ್ತಾಪದಿಂದ ಹಗಲು ರಾತ್ರಿ ಸಂತಪ್ತನಾಗುತ್ತಿದ್ದೇನೆ. ಆದುದರಿಂದ ನನ್ನನ್ನು ಪುರಶ್ಚರಣ ದಾನದಿಂದ ಅನುಗ್ರಹಿಸು.

ಅಸ್ತಿ ಮೇ ವಿಪುಲಂ ವಿತ್ತಂ ನ ಸಂತಾನಂ ಮುನೀಶ್ವರ ।
ತನ್ಮೇ ವದ ಮುನೇ ಶ್ರೇಯಸ್ತದ್ವಿತ್ತಸ್ಯ ಯಥಾ ಭವೇತ್ ।
ಇಹ ಲೋಕೇ ಪರೇ ಚೈವ ಯೇನ ಸರ್ವಂ ಕರೋಮ್ಯಹಂ ॥ ೭೮ ॥

ದುರ್ವಾಸಾ ಉವಾಚ:—

ಕೃತ್ವಾ ಪಾಪಸಹಸ್ರಾಣಿ ಪಶ್ಚಾದ್ಧರ್ಮಪರೋ ಭವೇತ್ ।
ಯಃ ಪುಮಾನ್ ಸೋಽತಿಕೃಚ್ಛ್ರೇಣ ತರೇತ್ಸಂಸಾರಸಾಗರಂ ॥ ೭೯ ॥
ದಿನೇನಾಽಪಿ ಗುರುರ್ಯೋಽಸೌ ತ್ವಯಾ ಶೈವೋ ವಿನಿರ್ಮಿತಃ ।
ಅಧರ್ಮೇಣಾಽಪಿ ಸಂಜಾತಃ ಸ ಗುರುಸ್ತೇನ ಸಂಶಯಃ ॥ ೮೦ ॥
ಬ್ರಾಹ್ಮಣೋ ಬ್ರಹ್ಮಚಾರೀ ಸ್ಯಾದ್ಗೃಹಸ್ಥಸ್ತದನಂತರಂ ।
ವಾನಪ್ರಸ್ಥೋ ಯತಿಶ್ಚೈವ ತತಶ್ಚೈವ ಕುಟೀಚಕಃ ॥ ೮೧ ॥
ಬಹೂದಕಸ್ತತೋ ಹಂಸಃ ಪರಮಶ್ಚ ತತೋ ಭವೇತ್ ।
ತತಶ್ಚ ಮುಕ್ತಿಮಾಯಾತಿ ಮಾರ್ಗಮೇನಂ ಸಮಾಶ್ರಿತಃ ॥ ೮೨ ॥
ತ್ವಯಾ ಪುನಃ ಕುಮಾರ್ಗೇಣ ಯದ್ಧೃತಂ ಬ್ರಾಹ್ಮಣೇನ ಚ ।
ಶೈವಮಾರ್ಗಂ ಸಮಾಸ್ಥಾಯ ತನ್ಮಹಾಪಾತಕಂ ಕೃತಂ ॥ ೮೩ ॥

ದುಶ್ಶೀಲ ಉವಾಚ:—

ಸರ್ವೇಷ್ವೇವಹಿ ವೇದೇಷು ರುದ್ರಃ ಸಂಕೀರ್ತ್ಯತೇ ಪ್ರಭುಃ ।
ತತ್ಕಿಂ ದೋಷಸ್ತ್ವಯಾ ಪ್ರೋಕ್ತಸ್ತಸ್ಯದೀಕ್ಷಾ ಸಮುದ್ಭವಃ ॥ ೮೪ ॥

---

೭೮. ಮುನಿವರ್ಯನೆ! ನನ್ನಲ್ಲಿ ಅಧಿಕದ್ರವ್ಯವಿದೆ. ಸಂತತಿಯಿಲ್ಲ. ಆದುದರಿಂದ ಆ ದ್ರವ್ಯದಿಂದ ನನಗೆ ಇಹಪರಲೋಕಗಳಲ್ಲಿ ಶ್ರೇಯಸ್ಸು ಹೇಗಾದೀತೆಂಬುದನ್ನು ಹೇಳು. ಅದನ್ನೆಲ್ಲ ಮಾಡುವೆನು.

೭೯. ದುರ್ವಾಸನು ಹೇಳುತ್ತಾನೆ:—ಅನೇಕ ಪಾಪಗಳನ್ನೆಸಗಿ ಅನಂತರ ಧರ್ಮನಿರತನಾದ ಮಾನವನು ಅತಿ ಕಷ್ಟದಿಂದ ಸಂಸಾರಸಾಗರವನ್ನು ದಾಟುವನು.

೮೦. ನೀನು ಒಂದು ದಿನವಾದರೂ ಶೈವನನ್ನು ಗುರುವಾಗಿ ಮಾಡಿಕೊಂಡಿರುವುದರಿಂದ ಅಧರ್ಮದಿಂದಲಾದರೂ ಅವನು ನಿಶ್ಚಯವಾಗಿಯೂ ಗುರುವಾಗಿರುವನು.

೮೧–೮೨. ಬ್ರಾಹ್ಮಣ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ, ಕುಟೀಚಕ, ಬಹೂದಕ, ಹಂಸ, ಪರಮಹಂಸ ಇವರ ದಾರಿಯನ್ನು ಹಿಡಿದವನು ಮುಕ್ತನಾಗುವನು.

೮೩. ಬ್ರಾಹ್ಮಣನಾದ ನೀನು ಶೈವಮಾರ್ಗವನ್ನು ಅವಲಂಬಿಸಿ ದುರ್ಮಾರ್ಗದಿಂದ ದ್ರವ್ಯವನ್ನು ಅಪಹರಿಸಿ ಮಹಾ ಪಾತಕವನ್ನು ಮಾಡಿರುವೆ.

೮೪. ದುಶ್ಶೀಲನು ಹೇಳುತ್ತಾನೆ:—ಸಕಲ ವೇದಗಳೂ ರುದ್ರನನ್ನು ಪ್ರತಿ

ದುರ್ವಾಸ ಉವಾಚ:—

ಸತ್ಯಮೇತತ್ತ್ವಯಾ ಖ್ಯಾತಂ ವೇದೇ ರುದ್ರಃ ಪ್ರಕೀರ್ತಿತಃ ।
ಬಹುಧಾ ವಾಸುದೇವ್ರೋಽಪಿ ಬ್ರಹ್ಮಾಚೈವ ವಿಶೇಷತಃ ॥ ೮೫ ॥
ಪರಂ ವಿಪ್ರಸ್ಯ ಯಾ ದೀಕ್ಷಾ ವ್ರತಬಂಧಸಮುದ್ಭವಾ ।
ಗಾಯತ್ರೀ ಪರಮಾ ಜಾಪ್ಯೇ ಗುರುರ್ವ್ರತಪರೋ ಹಿ ಸಃ ॥
ವೈಷ್ಣವೀಂ ಚಾಽಥ ಶೈವೀಂ ಚ ಯೋಽನ್ಯಾಂ ದೀಕ್ಷಾಂ ಸಮಾಚರೇತ್॥೮೬॥
ಬ್ರಾಹ್ಮಣೋ ನ ಭವೇತ್ಸೋಽತ್ರ ಯದ್ಯಪಿಸ್ಯಾತ್ಷಡಂಗವಿತ್ ।
ಅಪರಂ ಲಿಂಗಭೇದಸ್ತೇ ಸಂಜಾತಃ ಕಪಟಾದಿಷು ॥ ೮೭ ॥
ವ್ರತತ್ಯಾಗಾನ್ನಸಂದೇಹಸ್ತತ್ರ ತೇನಾಸ್ತಿಕಿಂಚನ ।
ಪ್ರಾಯಶ್ಚಿತ್ತಂ ಮಯಾ ಸಮ್ಯಕ್ಸ್ಮೃತಿಮಾರ್ಗೇಣ ಚಿಂತಿತಂ ॥ ೮೮ ॥

ದುಶ್ಶೀಲ ಉವಾಚ:—

ಸತಾಂ ಸಪ್ತಪದೀಂ ಮೈತ್ರೀಂ ಪ್ರವದಂತಿ ಮನೀಷಿಣಃ ।
ಮಿತ್ರತಾಂ ತು ಪುರಸ್ಕೃತ್ಯ ಕಿಂಚಿದ್ವಕ್ಷ್ಯಾಮಿ ತಚ್ಛೃಣು ॥ ೮೯ ॥
ಅಸ್ತಿ ಮೇ ವಿಪುಲಂ ವಿತ್ತಂ ಯದಿ ತೇನ ಪ್ರಸಿದ್ಧ್ಯತಿ ।
ತದ್ವದಸ್ವ ಮಹಾಭಾಗ ಯೇನ ಸರ್ವಂ ಕರೋಮ್ಯಹಂ ॥ ೯೦ ॥

---

ಪಾದಿಸುವುವು. ಅವನ ದೀಕ್ಷೆಯಿಂದ ದೋಷವುಂಟಾಗುವುದೆಂದು ನೀನು ಹೇಗೆ ಹೇಳುವೆ?

೮೫. ಧುರ್ವಾಸನು ಹೇಳುತ್ತಾನೆ:—ನೀನು ವೇದವು ರುದ್ರನನ್ನು ಪ್ರತಿಪಾದಿಸುವುದೆಂದು ಹೇಳಿರುವುದು ನಿಜ. ಹಾಗೆಯೇ ವೇದವು ವಿಷ್ಣು ಬ್ರಹ್ಮರನ್ನೂ ಪ್ರತಿಪಾದಿಸುವುದು.

೮೬—೮೮. ಆದರೆ ಬ್ರಾಹ್ಮಣನಿಗೆ ಗಾಯತ್ರೀಜಪವು ಉತ್ತಮವಾದುದು. ಗುರುವು ವ್ರತಪರನಾದ್ದರಿಂದ ವ್ರತದೀಕ್ಷೆಯು ಅವನಿಂದಾಗತಕ್ಕುದು. ಇತರ ವೈಷ್ಣವ ಅಥವಾ ಶೈವದೀಕ್ಷೆಯನ್ನು ಸ್ವೀಕರಿಸಿದವನು ಷಡಂಗಸಹಿತ ವೇದವನ್ನು ಅಧ್ಯಯನ ಮಾಡಿದ್ದರೂ ಬ್ರಾಹ್ಮಣನಾಗುವುದಿಲ್ಲ. ಮತ್ತು ನೀನು ಕಪಟದಿಂದ ವ್ರತವನ್ನು ತ್ಯಜಿಸಿದ್ದರಿಂದ ಲಿಂಗಭೇದವಾಯಿತು. ಆ ವಿಷಯದಲ್ಲಿ ಯಾವ ಪ್ರಾಯಶ್ಚಿತ್ತವೂ ಇಲ್ಲ. ನಾನು ಚೆನ್ನಾಗಿ ಸ್ಮೃತಿಮಾರ್ಗದಿಂದ ಆಲೋಚಿಸಿರುವೆನು.

೮೯. ದುಶ್ಶೀಲನು ಹೇಳುತ್ತಾನೆ:— ಸಜ್ಜನರಿಗೆ ಸಪ್ತಪದಗಳಿಂದ ಸ್ನೇಹ ವುಂಟಾಗುವುದೆಂದು ಜ್ಞಾನಿಗಳು ಹೇಳುವರು. ಆದುದರಿಂದ ಮೈತ್ರಿಯಿಂದ ಒಂದು ಮಾತನ್ನು ಹೇಳುವೆನು ಕೇಳು.

೯೦. ನನ್ನಲ್ಲಿ ಬಹಳ ದ್ರವ್ಯವಿರುವುದು. ಅದರಿಂದ ಪ್ರಾಯಶ್ಚಿತ್ತವು ಸಿದ್ಧಿಸುವುದಾದರೆ ಹೇಳು; ಅದನ್ನೆಲ್ಲ ಮಾಡುವೆನು.

ದುರ್ವಾಸಾ ಉವಾಚ :—
ಏಕ ಏವಹ್ಯುಪಾಯೋಽಸ್ತಿ ತವ ಪಾತಕನಾಶನೇ ।
ತಂಚೇತ್ಕರೋಷಿ ಮೇ ವಾಕ್ಯಾದ್ವಿಶುದ್ಧಃ ಸಂಭವಿಷ್ಯಸಿ ॥ ೯೧ ॥
ತಪಃ ಕೃತೇ ಪ್ರಶಂಸಂತಿ ತ್ರೇತಾಯಾಂ ಜ್ಞಾನಮೇವ ಚ
ದ್ವಾಪರೇ ತೀರ್ಥಯಾತ್ರಾಂ ಚ ದಾನಮೇವ ಕಲೌಯುಗೇ ॥ ೯೨ ॥
ಸಾಂಪ್ರತಂ ಕಲಿಕಾಲೋಽಯಂ ವರ್ತತೇ ದಾರುಣಾಕೃತಿಃ ।
ತಸ್ಮಾತ್ಕೃಷ್ಣಾಜಿನಂ ದೇಹಿ ಸರ್ವಪಾಪವಿಶುದ್ಧಯೇ ॥ ೯೩ ॥
ತಥಾ ಚ ತೇ ಘೃಣಾಽಪ್ಯಸ್ತಿ ಗುರುವಿತ್ತಸಮುದ್ಭವಾ ।
ತದರ್ಥಂ ಕುರು ತನ್ನಾಮ್ನಾ ಶಂಕರಸ್ಯ ನಿವೇಶನಂ ॥ ೯೪ ॥
ಯೇನ ತಸ್ಮಾದಪಿ ತ್ವಂ ಹಿ ಆನೃಣ್ಯಂ ಯಾಸಿ ತತ್ಕ್ಷಣಾತ್ ।
ಅನ್ಯತ್ರಾಽಪಿ ಚ ತದ್ವಿತ್ತಂ ಯತ್ಕಿಂಚಿಚ್ಚ ಪ್ರಪದ್ಯತೇ ॥ ೯೫ ॥
ಬ್ರಾಹ್ಮಣೇಭ್ಯೋ ವಿಶಿಷ್ಟೇಭ್ಯೋ ನಿತ್ಯಂ ದೇಹಿ ಸಮಾಹಿತಃ ।
ತಿಲಪಾತ್ರಂ ಸದಾ ದೇಹಿ ಸ ಹಿರಣ್ಯಂ ವಿಶೇಷತಃ ॥ ೯೬ ॥
ಯೇನ ತೇ ಸಕಲಂ ಪಾಪಂ ದೇಹಾನ್ನಾಶಂ ಪ್ರಗಚ್ಛತಿ ।
ಅಪರಂ ಚೈತ್ರಮಾಸೇಽಹಂ ಸದಾಽಽಗಚ್ಛಾಮಿ ಭಕ್ತಿತಃ ॥ ೯೭ ॥
ಕಲ್ಪಗ್ರಾಮಾತ್ಸುದೂರಾಚ್ಚ ಪ್ರಾಸಾದೇಽತ್ರ ಸ್ವಯಂ ಕೃತೇ ।
ಪುನರ್ಯಾಮಿ ಚ ತತ್ರೈವ ವ್ರತಮೇತದ್ಧಿ ಮೇ ಸ್ಥಿತಂ ॥ ೯೮ ॥

---

೯೧. ದುರ್ವಾಸನು ಹೇಳುತ್ತಾನೆ:— ನಿನ್ನ ಪಾಪಪರಿಹಾರಕ್ಕೆ ಒಂದೇ ಉಪಾಯವಿರುವುದು. ನನ್ನ ಮಾತಿನಿಂದ ಅದನ್ನು ಮಾಡುವುದಾದರೆ ಶುದ್ಧನಾಗುವೆ.

೯೨. ಕೃತಯುಗದಲ್ಲಿ ತಪಸ್ಸನ್ನೂ, ತ್ರೇತಾಯುಗದಲ್ಲಿ ಜ್ಞಾನವನ್ನೂ, ದ್ವಾಪರಯುಗದಲ್ಲಿ ತೀರ್ಥಯಾತ್ರೆಯನ್ನೂ, ಕಲಿಯುಗದಲ್ಲಿ ದಾನವನ್ನೂ ಹೊಗಳುವರು.

೯೩. ಈಗ ಭಯಂಕರವಾದ ಕಲಿಕಾಲವಾಗಿರುವುದು. ಆದುದರಿಂದ ಸಕಲ ಪಾಪಶುದ್ಧಿಗಾಗಿ ಕೃಷ್ಣಾಜಿನವನ್ನು ದಾನ ಮಾಡು.

೯೪. ಹಾಗೆಯೇ ನಿನಗೆ ಗುರುವಿತ್ತದಿಂದ ದಯೆಯುಂಟಾಗಿದೆ. ಅದಕ್ಕಾಗಿ ಅವನ ಹೆಸರಿನಿಂದ ಶಿವಾಲಯವನ್ನು ನಿರ್ಮಿಸು.

೯೫–೯೮. ಅದರಿಂದ ನೀನು ಕೂಡಲೆ ಆನೃಣ್ಯವನ್ನು ಹೊಂದುವೆ. ಉಳಿದ ದ್ರವ್ಯಗಳನ್ನು ಬೇರೆಡೆಯಲ್ಲಿ ಉತ್ತಮ ಬ್ರಾಹ್ಮಣರಿಗೆ ನಿತ್ಯವೂ ದಾನಮಾಡು. ಸುವರ್ಣಸಹಿತವಾಗಿ ತಿಲಪಾತ್ರವನ್ನು ದಾನಮಾಡು. ಅದರಿಂದ ನಿನ್ನ ದೇಹದ ಪಾಪವು ಪರಿಹಾರವಾಗುವುದು. ನಾನು ಚೈತ್ರಮಾಸದಲ್ಲಿ ಯಾವಾಗಲೂ

ತಸ್ಮಾಚ್ಚಿಂತ್ಯಸ್ತ್ವಯಾಹ್ಯೇಷ ಪ್ರಾಸಾದೋ ಯೋ ಮಯಾ ಕೃತಃ ।
ಚಿಂತನೀಯಂ ಸದೈವೇಹ ಸ್ನಾನಾದಿಭಿರನೇಕಶಃ ॥ ೯೯ ॥

ದುಶ್ಶೀಲ ಉವಾಚ:—

ಕರಿಷ್ಯಾಮಿ ವಚಸ್ತೇಽಹಂ ಯಥಾ ವದಸಿ ಸನ್ಮುನೇ ॥ ೧೦೦ ॥

ದುರ್ವಾಸಾ ಉವಾಚ:—

ಸರ್ವಪಾಪವಿಶುದ್ಧ್ಯರ್ಥಂ ದತ್ತೇ ಕೃಷ್ಣಾಜಿನೇ ದ್ವಿಜಃ ।
ಪ್ರಯಚ್ಛ ತಿಲಪಾತ್ರಾಣಿ ಗುಪ್ತಪಾಪಸ್ಯ ಶುದ್ಧಯೇ ॥ ೧೦೧ ॥

ಸೂತ ಉವಾಚ:—

ತಸ್ಯ ತದ್ವಚನಂ ಶ್ರುತ್ವಾ ದತ್ತಂ ತೇನ ಮಹಾತ್ಮನಾ ।
ತತಃ ಕೃಷ್ಣಾಜಿನಂ ಭಕ್ತ್ಯಾ ಬ್ರಾಹ್ಮಣಾಯಾಽಽಹಿತಾಗ್ನಯೇ ॥ ೧೦೨ ॥
ದುರ್ವಾಸಸಃ ಸಮಾದೇಶಾದ್ಯಥೋಕ್ತವಿಧಿನಾ ದ್ವಿಜಾಃ ।
ಯಚ್ಛತಸ್ತಿಲಪಾತ್ರಾಣಿ ತಸ್ಯ ನಿತ್ಯಂ ಪ್ರಭಕ್ತಿತಃ ॥ ೧೦೩ ॥
ಗತಪಾಪಸ್ಯ ದೀಕ್ಷಾಂ ಚ ದದೌ ನಿರ್ವಾಣಸಂಭವಾಂ ।
ತಥಾಽಸೌ ಗತಪಾಪಸ್ಯ ದೀಕ್ಷಾಂ ದತ್ವಾ ಯಥಾವಿಧಿ ॥ ೧೦೪ ॥
ತತಃ ಪ್ರೋವಾಚ ಮಧುರಂ ದೇಹಿ ಮೇ ಗುರುದಕ್ಷಿಣಾಂ ॥ ೧೦೫ ॥

---

ಕಲ್ಪಗ್ರಾಮದಿಂದ ನಾನು ನಿರ್ಮಿಸಿದ ಈ ದೇವಾಲಯಕ್ಕೆ ದೂರದಿಂದ ಭಕ್ತಿ ಪೂರ್ವಕವಾಗಿ ಬರುವೆನು. ಮರಳಿ ಹೋಗುವೆನು. ಇದು ನನ್ನ ವ್ರತವಾಗಿರುವುದು.

೯೯. ಆದುದರಿಂದ ನಾನು ರಚಿಸಿದ ಈ ದೇವಾಲಯವನ್ನು ಚಿಂತಿಸು. ಸ್ನಾನಾದಿಗಳನ್ನು ಮಾಡಿ ಈ ಲಿಂಗವನ್ನೂ ಧ್ಯಾನಿಸು.

೧೦೦. ದುಶ್ಶೀಲನು ಹೇಳುತ್ತಾನೆ:— ಮಹರ್ಷಿಯೆ! ನಾನು ನೀವು ಹೇಳಿದಂತೆ ಮಾಡುವೆನು.

೧೦೧. ದುರ್ವಾಸನು ಹೇಳುತ್ತಾನೆ:—ಬ್ರಾಹ್ಮಣನೆ! ಸಕಲ ಪಾಪಶುದ್ಧಿಗಾಗಿ ಕೃಷ್ಣಾಜಿನವನ್ನು ದಾನ ಮಾಡಿದಮೇಲೆ ಗುಪ್ತಪಾಪಶುದ್ಧಿಗಾಗಿ ತಿಲಪಾತ್ರೆಗಳನ್ನು ದಾನ ಮಾಡು.

೧೦೨–೧೦೫. ಸೂತನು ಹೇಳುತ್ತಾನೆ:— ಆ ಮಹಾತ್ಮನು ದುರ್ವಾಸನ ಆ ಮಾತನ್ನು ಕೇಳಿ ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಮುನಿಯು ಹೇಳಿದ ಕ್ರಮದಿಂದ ಕೃಷ್ಣಾಜಿನವನ್ನು ದಾನ ಮಾಡಿದನು. ಹಾಗೆಯೇ ನಿತ್ಯವೂ ಭಕ್ತಿಯಿಂದ ತಿಲಪಾತ್ರೆಗಳನ್ನು ದಾನಮಾಡಿ ಪಾಪರಹಿತನಾದ ಅವನಿಗೆ ದುರ್ವಾಸನು ಮೋಕ್ಷ ಸಂಬಂಧವಾದ ದೀಕ್ಷೆಯನ್ನು ಕೊಟ್ಟನು. ಹಾಗೆ ದೀಕ್ಷೆಯನ್ನಿತ್ತು ನನಗೆ ಗುರುದಕ್ಷಿಣೆಯನ್ನು ಕೊಡು ಎಂದು ಮೃದುವಾಗಿ ನುಡಿದನು.

ದುಶ್ಶೀಲ ಉವಾಚ:—
ಯಾಚಸ್ವ ತ್ವಂ ಪ್ರಭೋ ಶೀಘ್ರಂ ಯಾಂ ತೇ ಯಚ್ಛಾಮಿ ದಕ್ಷಿಣಾಂ ।
ತಾಂ ಪ್ರದಾಸ್ಯಾಮಿ ಚೇಚ್ಛಕ್ತಿರ್ವಿತ್ತಶಾಠ್ಯವಿವರ್ಜಿತಾಂ ॥ ೧೦೬ ॥
ದುರ್ವಾಸಾ ಉವಾಚ:—
ಕಲ್ಪಗ್ರಾಮಂ ಗಮಿಷ್ಯಾಮಿ ಸಾಂಪ್ರತಂ ವರ್ತತೇ ಕಲಿಃ ।
ನಾಽಹಮತ್ರಾಽಽಗಮಿಷ್ಯಾಮಿ ಯಾವನ್ನೈವ ಕೃತಂ ಭವೇತ್ ॥ ೧೦೭ ॥
ಅರ್ಧನಿಷ್ಪಾದಿತೋಹ್ಯೇಷ ಪ್ರಾಸಾದೋ ಯೋ ಮಯಾ ಕೃತಃ ।
ಪರಿಪೂರ್ತಿ ತ್ವಯಾಂ ನೇಯ ಮೇಷಾ ಮೇ ಗುರುದಕ್ಷಿಣಾ ॥ ೧೦೮ ॥
ನೃತ್ಯಗೀತಾದಿಕಂ ಯಚ್ಚ ತಥಾ ಕಾರ್ಯಂ ಸ್ವಶಕ್ತಿತಃ ।
ಪುರತೋಽಸ್ಯ ಬಲಿರ್ದೇಯಸ್ತಥಾಽನ್ಯತ್ಕುಸುಮಾದಿಕಂ ॥ ೧೦೯ ॥
ಏವಮುಕ್ತ್ವಾ ಗತಃ ಸೋಽಥ ಕಲ್ಪಗ್ರಾಮಂ ಮುನೀಶ್ವರಃ
ದುಶ್ಶೀಲೋಪಿ ತಥಾ ಚಕ್ರೇ ಯತ್ತೇನ ಸಮುದಾಹೃತಂ ॥ ೧೧೦ ॥
ಸೂತ ಉವಾಚ:—
ಏವಂ ತಸ್ಯ ಪ್ರಭಕ್ತಸ್ಯ ತತ್ಕಾರ್ಯಾಣಿ ಪ್ರಕುರ್ವತಃ ।
ತನ್ನಾಮ್ನಾ ಕೀರ್ತ್ಯತೇ ಸೋಽಥ ದುಶ್ಶೀಲ ಇತಿ ಸಂಜ್ಞಿತಃ ॥ ೧೧೧ ॥

---

೧೦೬. ದುಶ್ಶೀಲನು ಹೇಳುತ್ತಾನೆ:—ಪ್ರಭುವೆ! ಬೇಗನೆ ಬೇಡು. ನೀನು ಕೇಳಿದ ದಕ್ಷಿಣೆಯನ್ನು ಶಕ್ತಿಯಿದ್ದರೆ ವಿತ್ತಶಾಠ್ಯವಿಲ್ಲದೆ ಕೊಡುವೆನು.

೧೦೭. ದುರ್ವಾಸನು ಹೇಳುತ್ತಾನೆ:—ಈಗ ಕಲಿಯುಗವು ಬಂದಿರುವುದರಿಂದ ಕಲ್ಪಗ್ರಾಮಕ್ಕೆ ಹೋಗುವೆನು. ಕೃತಯುಗವು ಬರುವವರೆಗೆ ಮರಳಿ ಹಿಂದಿರುಗುವುದಿಲ್ಲ.

೧೦೮. ನಾನು ಅರ್ಧವಾಗಿ ನಿರ್ಮಿಸಿದ ಈ ದೇವಾಲಯವನ್ನು ಪೂರ್ತಿಗೊಳಿಸು. ಇದೇ ನನ್ನ ಗುರುದಕ್ಷಿಣೆಯು.

೧೦೯. ಇವನ ಮುಂದೆ ಶಕ್ತ್ಯನುಸಾರ ನೃತ್ಯಗೀತಾದಿಗಳನ್ನು ಮಾಡು. ಹಾಗೆಯೇ ಹೂವು ಮೊದಲಾದವುಗಳಿಂದ ಬಲಿಯನ್ನು ಕೊಡು.

೧೧೦. ಆ ದುರ್ವಾಸ ಮುನೀಶ್ವರನು ಹೀಗೆ ಹೇಳಿ ಕಲ್ಪಗ್ರಾಮಕ್ಕೆ ಹೊರಟು ಹೋದನು. ದುಶ್ಶೀಲನೂ ಅವನು ಹೇಳಿದಂತೆ ಮಾಡಿದನು.

೧೧೧. ಸೂತನು ಹೇಳುತ್ತಾನೆ:— ಹೀಗೆ ಭಕ್ತಿಯಿಂದ ಕಾರ್ಯವನ್ನು ಮಾಡುತ್ತಿರುವ ಅವನ ದುಶ್ಶೀಲ ಎಂಬ ಹೆಸರಿನಿಂದ ಆ ದೇವಾಲಯವು ಪ್ರಸಿದ್ಧವಾಯಿತು.

ಚೈತ್ರಮಾಸೇ ಚ ಯೋ ನಿತ್ಯಂ ತಂ ಚ ದೇವಂ ಪ್ರಪಶ್ಯತಿ ।
ಕ್ಷಣಂ ಕೃತ್ವಾ ಸ ಪಾಪೇನ ವಾರ್ಷಿಕೇಣ ಪ್ರಮುಚ್ಯತೇ ॥ ೧೧೨ ॥
ಯಃ ಪುನಃ ಸ್ನಪನಂ ತಸ್ಯ ಸರ್ವಂ ಚೈವ ಕರೋತಿ ಚ ।
ತ್ರಿಂಶದ್ವರ್ಷೋದ್ಭವಂ ಪಾಪಂ ತಸ್ಯ ಗಾತ್ರಾತ್ಪ್ರಣಶ್ಯತಿ ॥ ೧೧೩ ॥
ಯಃ ಪುನರ್ನೃತ್ಯಗೀತಾದ್ಯಂ ಕುರುತೇ ಚ ತದಗ್ರತಃ ।
ಆಜನ್ಮಮರಣಾತ್ಪಾಪಾತ್ಸೋಽಪಿ ಮುಕ್ತಿಮವಾಪ್ನುಯಾತ್ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದುಶ್ಶೀಲೇಶ್ವರಸಂಜ್ಞಾಪ್ರಾಪ್ತಿಕಾರಣವೃತ್ತಾಂತವರ್ಣನಂ" ನಾಮ
ಚತುಃಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೧೧೨. ಚೈತ್ರಮಾಸದಲ್ಲಿ ಆ ಮಹೇಶ್ವರನನ್ನು ನಿತ್ಯವೂ ಸ್ವಲ್ಪಹೊತ್ತಾದರೂ ನೋಡಿದವನು ಒಂದು ವರ್ಷ ಮಾಡಿದ ಪಾಪದಿಂದ ಮುಕ್ತನಾಗುವನು.

೧೧೩. ಆವನಿಗೆ ಅಭಿಷೇಕಮಾಡಿ ಪೂಜಾದಿಗಳನ್ನು ಮಾಡಿದವನ ಶರೀರದಿಂದ ಮೂವತ್ತು ವರ್ಷಗಳ ಪಾಪವು ನೀಗುವುದು.

೧೧೪. ಆ ಮಹೇಶ್ವರನ ಮುಂದೆ ನೃತ್ಯಗೀತಾದಿಗಳನ್ನು ಮಾಡಿದವನು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದುಶ್ಶೀಲೇಶ್ವರಸಂಜ್ಞಾಪ್ರಾಪ್ತಿಕಾರಣವೃತ್ತಾಂತವರ್ಣನ"ವೆಂಬ
ಇನ್ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ನಿಂಬೇಶ್ವರ ಶಾಕಂಭರ್ಯುತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ:—

ದುಶ್ಶೀಲೋಽಪಿ ಚ ತತ್ಕೃತ್ವಾ ಗುರೋರ್ನಾಮ್ನಾ ಶಿವಾಲಯಂ ।
ನಿಂಬೇಶ್ವರ ಇತಿ ಖ್ಯಾತಂ ದಕ್ಷಿಣಾಂ ದಿಶಮಾಶ್ರಿತಂ ॥ ೧ ॥
ಚಕಾರ ಪರಯಾ ಭಕ್ತ್ಯಾ ತತ್ಪಾದಾಬ್ಜಮನುಸ್ಮರನ್ ।
ತಥಾ ತಸ್ಯ ತು ಭಾರ್ಯಾಯಾ ನಾಮ್ನಾ ಶಾಕಂಭರೀ ಸ್ಮೃತಾ ॥ ೨ ॥
ಸ್ವನಾಮಾಂಕಾ ತತ್ರ ದುರ್ಗಾ ತಥಾ ಸಂಸ್ಥಾಪಿತಾ ತಯಾ ।
ತತಸ್ತು ತದ್ಧನಂ ತಾಭ್ಯಾಂ ಕಿಂಚಿಚ್ಛೇಷಂ ವ್ಯವಸ್ಥಿತಂ ॥ ೩ ॥
ಪೂಜಾರ್ಥಂ ದೇವತಾಭ್ಯಾಂ ಚ ಬ್ರಾಹ್ಮಣೇಭ್ಯಃ ಸಮರ್ಪಿತಂ ।
ಭಿಕ್ಷಾಭುಜೌ ತತೋ ಜಾತೌ ದಂಪತೀತೌ ತತಃ ಪರಂ ॥ ೪ ॥
ಕಸ್ಯಚಿತ್ತ್ವಥ ಕಾಲಸ್ಯ ದುಶ್ಶೀಲೋ ನಿಧನಂ ಗತಃ ॥ ೫ ॥
ಶಾಕಂಭರ್ಯಪಿ ತತ್ಕಾಯಂ ಗೃಹೀತ್ವಾ ಹವ್ಯವಾಹನಂ ।
ಪ್ರವಿಷ್ಟಾ ನೃಪಶಾರ್ದೂಲ ನಿರ್ವಿಕಲ್ಪೇನ ಚೇತಸಾ ॥ ೬ ॥
ತತೋ ವಿಮಾನಮಾರುಹ್ಯ ವರಾಽಪ್ಸರಃ ಸುಸೇವಿತಂ ।
ಗತೌ ತೌ ದ್ವಾವಪಿ ಸ್ವರ್ಗಂ ಸಂಪ್ರಹೃಷ್ಟತನೂರುಹೌ ॥ ೭ ॥

---

### ಕನ್ನಡದ ಅನುವಾದ

#### ನಿಂಬೇಶ್ವರ ಶಾಕಂಭರ್ಯುತ್ಪತ್ತಿವರ್ಣನ

೧-೪. ಸೂತನು ಹೇಳುತ್ತಾನೆ:— ದುಶ್ಶೀಲನೂ ಗುರುವಿನ ಹೆಸರಿನಿಂದ ಅವನನ್ನೇ ದಕ್ಷಿಣ ದಿಕ್ಕಿನಲ್ಲಿ ನಿಂಬೇಶ್ವರನ ಆಲಯವನ್ನು ಸ್ಮರಿಸುತ್ತ ಅತಿ ಭಕ್ತಿಯಿಂದ ರಚಿಸಿದನು. ಹಾಗೆಯೇ ಶಾಕಂಭರಿಯೆಂಬ ಅವನ ಪತ್ನಿಯೂ ತನ್ನ ಹೆಸರಿನ ದುರ್ಗೆಯನ್ನು ಪ್ರತಿಷ್ಠೆ ಮಾಡಿದಳು. ಬಳಿಕ ಅವರಿಬ್ಬರೂ ಸ್ವಲ್ಪ ಉಳಿದ ದ್ರವ್ಯವನ್ನು ಆ ದೇವತೆಗಳ ಪೂಜೆಗಾಗಿ ಬ್ರಾಹ್ಮಣರಿಗೆ ಕೊಟ್ಟರು. ತಾವು ಭಿಕ್ಷಾನ್ನವನ್ನೆತ್ತಿಕೊಂಡು ತಿನ್ನುತ್ತಿದ್ದರು.

೫. ಕೆಲವು ಕಾಲದ ಮೇಲೆ ದುಶ್ಶೀಲನು ಮಡಿದನು.

೬. ಶಾಕಂಭರಿಯು ಅವನ ಶರೀರವನ್ನು ತೆಗೆದುಕೊಂಡು ನಿಶ್ಚಲಮನಸ್ಸಿನಿಂದ ಅಗ್ನಿಯನ್ನು ಪ್ರವೇಶಿಸಿದಳು.

೭. ಬಳಿಕ ಅವರು ಉತ್ತಮ ಅಪ್ಸರೆಯರಿಂದ ಸೇವಿತವಾದ ವಿಮಾನವನ್ನೇರಿ ರೋಮಾಂಚಗೊಂಡವರಾಗಿ ಸ್ವರ್ಗಕ್ಕೆ ಹೋದರು.

ಏತದ್ದುಶ್ಶೀಲಜಂ ಯಸ್ತು ಪಠೇದಾಖ್ಯಾನಮುತ್ತಮಂ ।
ಸ ಸರ್ವೈರ್ಮುಚ್ಯತೇ ಪಾಪೈರಜ್ಞಾನವಿಹಿತೈರ್ನೃಪ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಿಂಬೇಶ್ವರ ಶಾಕಂಭರ್ಯುತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಪಂಚಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೮. ದೊರೆಯೆ! ದುಶ್ಶೀಲನ ಈ ಆಖ್ಯಾನವನ್ನು ಪಠಿಸಿದವನು ಅಜ್ಞಾನದಿಂದ ಮಾಡಿದ ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಿಂಬೇಶ್ವರ ಶಾಕಂಭರ್ಯುತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ಏಕಾದಶರುದ್ರೋತ್ಪತ್ತಿವರ್ಣನಂ

ಸೂತ ಉವಾಚ :—

ತಥಾಽನ್ಯೇಪಿ ವಸಂತೀಹ ರುದ್ರಾ ಏಕಾದಶೈವ ತು ।
ಸಂಜಾತಾ ಬ್ರಾಹ್ಮಣಶ್ರೇಷ್ಠಾ ಮುನೀನಾಂ ಹಿತಕಾಮ್ಯಯಾ ॥ ೧ ॥
ಯೈರ್ದೃಷ್ಟೈಃ ಪೂಜಿತೈರ್ವಾಽಪಿ ಸ್ತುತೈರ್ವಾಽಥ ನಮಸ್ಕೃತೈಃ ।
ವಿಪಾಪ್ಮಾ ಜಾಯತೇ ಮರ್ತ್ಯಃ ಸರ್ವದೋಷವಿವರ್ಜಿತಃ ॥ ೨ ॥

ಋಷಯ ಊಚುಃ :—

ಏಕ ಏವ ಶ್ರುತೋ ರುದ್ರೋ ನ ದ್ವಿತೀಯಃ ಕಥಂಚನ ।
ಗೌರೀ ಭಾರ್ಯಾ ಪ್ರಿಯಾ ಯಸ್ಯ ಸ್ಕಂದಃ ಪುತ್ರಃ ಪ್ರಕೀರ್ತಿತಃ ॥ ೩ ॥
ತೇನೇಕಂ ವಿದ್ಮಹೇ ರುದ್ರಂ ನಾಽನ್ಯಮಿಾಶಂ ಕಥಂಚನ ।
ತಸ್ಮಾದ್ಬ್ರೂಹಿ ಮಹಾಭಾಗ ಸರ್ವಾನೇತಾನ್ ಸುವಿಸ್ತರಾತ್ ॥ ೪ ॥

ಸೂತ ಉವಾಚ :—

ಸತ್ಯಮೇತನ್ಮಹಾಭಾಗಾ ಯದ್ಭವದ್ಭಿರುದಾಹೃತಂ ।
ಏಕ ಏವ ಸ್ಥಿತೋ ರುದ್ರೋ ನ ದ್ವಿತೀಯಃ ಕಥಂಚನ ॥ ೫ ॥

---

### ಕನ್ನಡದ ಅನುವಾದ

### ಏಕಾದಶರುದ್ರೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ :—ಬ್ರಾಹ್ಮಣವರ್ಯರೆ! ಮುನಿಗಳಿಗೆ ಹಿತವನ್ನು ಉಂಟುಮಾಡಲಿಚ್ಛೆಯಿಂದ ಉದ್ಭವಿಸಿದ ಏಕಾದಶರುದ್ರರು ಅಲ್ಲಿರುವರು.

೨. ಇವರ ದರ್ಶನ, ಪೂಜೆ, ಸ್ತೋತ್ರ, ನಮಸ್ಕಾರಗಳಿಂದ ಮಾನವನು ಸಕಲದೋಷರಹಿತನಾಗಿ ಪಾಪವಿಲ್ಲದವನಾಗುವನು.

೩. ಋಷಿಗಳು ಹೇಳುತ್ತಾರೆ :—ನಾವು ಒಬ್ಬನೇ ರುದ್ರನನ್ನು ಕೇಳಿದ್ದೇವೆ. ಎರಡನೆಯವನನ್ನು ಕೇಳಲಿಲ್ಲ. ಅವನಿಗೆ ಗೌರಿಯು ಪತ್ನಿಯೂ, ಸ್ಕಂದನು ಪುತ್ರನೂ ಆಗಿರುವರು.

೪. ಆದುದರಿಂದ ಒಬ್ಬ ರುದ್ರನನ್ನು ಮಾತ್ರ ನಾವು ತಿಳಿದಿರುತ್ತೇವೆ. ಇತರರನ್ನು ತಿಳಿಯೆವು. ಮಹಾಭಾಗ್ಯವಂತನೆ! ಆದುದರಿಂದ ಇವರ ವಿಷಯವನ್ನೆಲ್ಲ ಹೇಳು.

೫. ಸೂತನು ಹೇಳುತ್ತಾನೆ :—ಮಹಾಭಾಗ್ಯಶಾಲಿಗಳೆ! ನೀವು ಹೇಳಿರುವುದು ನಿಜ. ಒಬ್ಬನೇ ರುದ್ರನಿರುವನು; ಎರಡನೆಯವನಿಲ್ಲ.

ಪರಂ ಯಥಾ ಚ ಸಂಜಾತಾ ರುದ್ರಾ ಏಕಾದಶಾಽತ್ರ ಭೋಃ ।
ತಥಾಽಹಂ ಕೀರ್ತಯಿಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೬ ॥
ವಾರಾಣಸ್ಯಾಂ ಪುರಾ ಸಂಸ್ಥಾ ಮುನಯಃ ಶಂಸಿತವ್ರತಾಃ ।
ಹಾಟಕೇಶ್ವರದೇವಸ್ಯ ದರ್ಶನಾರ್ಥಂ ಸಮುತ್ಸುಕಾಃ ॥ ೭ ॥
ಪ್ರಸ್ಥಿತಾಃ ಸಮಯಂ ಕೃತ್ವಾ ಸ್ಪರ್ಧಮಾನಾಃ ಪರಸ್ಪರಂ ।
ಅಹಂ ಪೂರ್ವಮಹಂ ಪೂರ್ವಂ ವೀಕ್ಷಯಿಷ್ಯಾಮಿ ತಂ ವಿಭುಂ ॥ ೮ ॥
ಸರ್ವೇಷಾಮಗ್ರತೋ ಭೂತ್ವಾ ಪಾತಾಲೇ ಹಾಟಕೇಶ್ವರಂ ।
ಯಶ್ಚಾಽಽದೌ ತತ್ರ ಗತ್ವಾ ಚ ನೇಕ್ಷಯಿಷ್ಯತಿ ತಂ ಹರಂ ।
ಸರ್ವೇಷಾಂ ಶ್ರಮಜಂ ಪಾಪಂ ತಸ್ಯೈಕಸ್ಯ ಭವಿಷ್ಯತಿ ॥ ೯ ॥
ಏವಮುಕ್ತ್ವಾ ತತಃ ಸರ್ವೇ ವಾರಾಣಸ್ಯಾಂ ತತಃ ಪರಂ ।
ಪ್ರಸ್ಥಿತಾ ಧಾವಮಾನಾಶ್ಚ ವೇಗೇನ ಮಹತಾ ತತಃ ॥ ೧೦ ॥
ಏತಸ್ಮಿನ್ನಂತರೇ ದೇವೋ ಹಾಟಕೇಶ್ವರಸಂಜ್ಞಿತಃ ।
ಜ್ಞಾತ್ವಾ ತೇಷಾಮಭಿಪ್ರಾಯಂ ಮಿಥಃಸ್ಪರ್ಧಾಸಮುದ್ಭವಂ ।
ಆತ್ಮನೋ ದರ್ಶನಾರ್ಥಾಯ ಬಹುಭಕ್ತಿಪುರಸ್ಕೃತಂ ॥ ೧೧ ॥
ಲಘುನಾ ರಕ್ಷ್ಯಮಾಣೇನ ಸರ್ವೇಷಾಂ ಚ ಮಹಾತ್ಮನಾಂ ।
ನಾಗರಂಧ್ರೇಣ ನಿಷ್ಕ್ರಮ್ಯ ಪಾತಾಲಾಚ್ಚೈವ ತತ್ಕ್ಷಣಾತ್ ॥ ೧೨ ॥
ಏಕಾದಶಪ್ರಕಾರಂ ಸ ಕೃತ್ವಾ ರೂಪಂ ಮನೋಹರಂ ।
ತ್ರಿಶೂಲಭೃತ್ತ್ರಿನೇತ್ರಂ ಚ ಕಪರ್ದೇನ ವಿಭೂಷಿತಂ ॥ ೧೩ ॥

---

೬. ಆದರೆ ಏಕಾದಶರುದ್ರರು ಹೇಗೆ ಉಂಟಾದರೆಂಬುದನ್ನು ನಿಮಗೆ ಹೇಳುವೆನು; ಸಾವಧಾನಮನಸ್ಸಿನಿಂದ ಕೇಳಿರಿ.

೭–೯. ಹಿಂದೆ ವಾರಾಣಸಿಯಲ್ಲಿ ವಾಸಮಾಡುತ್ತಿದ್ದ ಸ್ತುತ್ಯವಾದ ವ್ರತವುಳ್ಳ ಮುನಿಗಳು ಹಾಟಕೇಶ್ವರನ ದರ್ಶನದಲ್ಲಿ ಉತ್ಸುಕರಾಗಿ ನಾನು ಮೊದಲು ನೋಡುವೆನು, ನಾನು ಮೊದಲು ನೋಡುವೆನು ಎಂದು ಸ್ಪರ್ಧಿಸುತ್ತ ಎಲ್ಲರಿಗಿಂತ ಮೊದಲು ಪಾತಾಳದಲ್ಲಿರುವ ಹಾಟಕೇಶ್ವರನನ್ನು ನೋಡದವನಿಗೆ ಎಲ್ಲರ ಶ್ರಮದಿಂದುಂಟಾದ ಪಾಪವು ಅವನೊಬ್ಬನಿಗೆ ಸಂಭವಿಸುವುದು ಎಂದು ಸಂಕೇತದಿಂದ ಹೊರಟರು.

೧೦. ಬಳಿಕ ಅವರೆಲ್ಲ ಹೀಗೆ ಹೇಳಿ ಕಾಶಿಯಿಂದ ಬಹು ವೇಗದಿಂದ ಓಡುತ್ತ ಹೋದರು.

೧೧–೧೮. ಈ ಸಮಯದಲ್ಲಿ ಹಾಟಕೇಶ್ವರನು ತನ್ನ ದರ್ಶನಕ್ಕಾಗಿ ಬಹು ಭಕ್ತಿಯಿಂದ ಪರಸ್ಪರ ಸ್ಪರ್ಧೆಗೊಂಡ ಅವರ ಅಭಿಪ್ರಾಯವನ್ನು ತಿಳಿದು ಪಾತಾಳದಿಂದ ಲಘುವಾದ ನಾಗರಂಧ್ರದ ಮೂಲಕ ಮೇಲಕ್ಕೆ ಹೊರಟು, ತ್ರಿಶೂಲವನ್ನು

ಶಶಿಖಂಡಧರಂ ಚೈವ ರುಂಡಮಾಲಾಪ್ರಧಾರಕಂ ।
ಸಮಂ ಚೈವ ಸ್ಥಿತಸ್ತೇಷಾಂ ದರ್ಶನೇ ಶಂಕರಃ ಪ್ರಭುಃ ॥ ೧೪ ॥
ತತಸ್ತೇ ವೈ ಸಮಾಲೋಕ್ಯ ಪುರಸ್ಥಂ ವೃಷಭಧ್ವಜಂ ।
ಜಾನುಭ್ಯಾಂ ಧರಣೀಂ ಗತ್ವಾ ಸ್ತುತಿಂ ಚಕ್ರುಸ್ತತಸ್ತತಃ ॥ ೧೫ ॥
ಏಕೋ ಜಾನಾತಿ ದೇವೋಽಯಂ ಮಮ ಸಂದರ್ಶನಂ ಗತಃ ।
ದೇವದೇವೋ ಮಹಾದೇವಃ ಪ್ರಥಮಂ ಭಕ್ತವತ್ಸಲಃ ॥ ೧೬ ॥
ಅನ್ಯೋ ಜಾನಾತಿ ಮೇ ಪೂರ್ವಂ ಜಾತಸ್ತೇ ತಾಪಸೋತ್ತಮಃ ।
ಸ್ತುತಿಂ ಚಕ್ರುಶ್ಚ ವಿಪ್ರೇಂದ್ರಾ ಜಾನುಭ್ಯಾಮವನಿಂ ಗತಾಃ ॥ ೧೭ ॥

ತಾಪಸಾ ಊಚುಃ:—

ನಮೋ ದೇವಾಧಿದೇವಾಯ ಸರ್ವದೇವಮಯಾಯ ಚ ।
ನಮಃ ಶಾಂತಾಯ ಸೂಕ್ಷ್ಮಾಯ ನಮಶ್ಚಾಂಧಕಭೇದಿನೇ ॥ ೧೮ ॥
ನಮೋಽಸ್ತು ಸರ್ವರುದ್ರೇಭ್ಯೋ ಯೇ ದಿವಂ ಸಂಶ್ರಿತಾಃ ಸದಾ ।
ಜೀವಾಪಯಂತಿ ಜಗತೀಂ ವಾಯುಭಿಶ್ಚ ಪೃಥಗ್ವಿಧೈಃ ॥ ೧೯ ॥
ನಮೋಽಸ್ತು ಸರ್ವರುದ್ರೇಭ್ಯೋ ಯೇ ಸ್ಥಿತಾ ವಾರುಣೀಂ ದಿಶಂ ।
ರಕ್ಷಂತಿ ಸರ್ವಲೋಕಾಂಶ್ಚ ಪಿಶಾಚಾನಾಂ ದುರಾತ್ಮನಾಂ ॥ ೨೦ ॥

---

ಧರಿಸಿರುವುವೂ, ಮೂರು ಕಣ್ಣುಳ್ಳವೂ, ಕಪರ್ದ ಶಶಿಖಂಡ, ರುಂಡಮಾಲೆ ಇವುಗಳನ್ನು ಧರಿಸಿರುವುವೂ, ಮನೋಹರಗಳೂ ಆದ ಹನ್ನೊಂದು ರೂಪಗಳನ್ನು ತಾಳಿ ಆ ಮುನಿಗಳಿಗೆ ಒಂದೇ ಸಾರಿ ದರ್ಶನವಿತ್ತನು.

೧೫. ಬಳಿಕ ಆ ಮುನಿಗಳು ತಮ್ಮ ಮುಂದಿರುವ ಶಂಕರನನ್ನು ನೋಡಿ ಮೊಣಕಾಲನ್ನೂರಿ ಸ್ತುತಿಸಿದರು.

೧೬. ಒಬ್ಬನು ಭಕ್ತವತ್ಸಲನಾದ ಮಹಾದೇವನು ನನಗೆ ಮೊದಲು ದರ್ಶನ ವನ್ನಿತ್ತನೆಂದು ತಿಳಿಯುವನು.

೧೭. ಮತ್ತೊಬ್ಬನು ನನಗೆ ಮೊದಲು ದರ್ಶನವನ್ನು ಕೊಟ್ಟನೆಂದು ತಿಳಿಯು ವನು. ಅವರೆಲ್ಲ ಮೊಣಕಾಲನ್ನೂರಿ ಆ ಮಹಾದೇವನನ್ನು ಸ್ತುತಿಮಾಡಿದರು.

೧೮. ತಾಪಸರು ಹೇಳುತ್ತಾರೆ:—ದೇವತೆಗಳಿಗೆ ದೇವನೂ, ಸಕಲ ದೇವ ಸ್ವರೂಪನೂ, ಶಾಂತನೂ, ಸೂಕ್ಷ್ಮನೂ, ಅಂಧಕನಾಶಕನೂ ಆದ ರುದ್ರನಿಗೆ ನಮಸ್ಕಾರವು.

೧೯. ನಾನಾ ವಿಧ ವಾಯುಗಳಿಂದ ಜಗತ್ತನ್ನು ಜೀವನಗೊಳಿಸುವ ಆಕಾಶ ವನ್ನು ಆಶ್ರಯಿಸಿದ ಸಕಲ ರುದ್ರರಿಗೆ ನಮಸ್ಕಾರವು.

೨೦. ಪಶ್ಚಿಮ ದಿಕ್ಕನ್ನು ಆಶ್ರಯಿಸಿ ದುಷ್ಟಪಿಶಾಚಗಳಿಂದ ಸಮಸ್ತ ಲೋಕ ಗಳನ್ನು ರಕ್ಷಿಸುವ ಸಮಸ್ತ ರುದ್ರರಿಗೆ ನಮಸ್ಕಾರವು.

ನಮೋಽಸ್ತು ಸರ್ವರುದ್ರೇಭ್ಯೋ ದಿಶಮೂರ್ಧ್ವಂ ಸಮಾಶ್ರಿತಾಃ ।
ರಕ್ಷಂತಿ ಸಕಲಾಂಲ್ಲೋಕಾನ್ಭೂತಾನಾಂ ಜಂಭಕಾದ್ಭಯಾತ್ ॥ ೨೧ ॥
ನಮೋಽಸ್ತು ಸರ್ವರುದ್ರೇಭ್ಯೋ ಯೇಽಥ ಊರ್ಧ್ವಂ ಸಮಾಶ್ರಿತಾಃ ।
ರಕ್ಷಂತಿ ಸಕಲಾಂಲ್ಲೋಕಾನ್ ಕೂಷ್ಮಾಂಡಾನಾಂ ಭಯಾತ್ಸದಾ ॥ ೨೨ ॥
ಅಸಂಖ್ಯಾತಾಃ ಸಹಸ್ರಾಣಿ ಯೇ ರುದ್ರಾ ಭೂಮಿಮಾಶ್ರಿತಾಃ ।
ನಮಸ್ತೇಭ್ಯೋಽಪಿ ಸರ್ವೇಭ್ಯಸ್ತೇಷಾಂ ರಕ್ಷಂತಿ ಯೇ ರುಜಃ ॥ ೨೩ ॥
ಏವಂ ಸ್ತುತಾಸ್ತು ತೇ ರುದ್ರಾ ಏಕಾದಶ ತಪಸ್ವಿಭಿಃ ।
ಏಕಾದಶಾಽಪಿ ತಾನ್ ಪ್ರೋಚುರ್ಭಕ್ತಿನಮ್ರಾಂಸ್ತು ತಾಪಸಾನ್ ॥ ೨೪ ॥

ರುದ್ರಾ ಊಚುಃ:—

ಏಕಾದಶ ಪ್ರಕಾರೋಽಹಂ ತುಷ್ಟೋ ವಸ್ತಾಪಸೋತ್ತಮಾಃ ।
ಬಹುಭಕ್ತ್ಯತಿರೇಕೇಣ ವ್ರಿಯತಾಂ ಚ ಯಥೇಪ್ಸಿತಂ ॥ ೨೫ ॥

ತಾಪಸಾ ಊಚುಃ:—

ಯದಿ ತುಷ್ಟೋಽಸಿ ನೋ ದೇವ ಯದಿ ಯಚ್ಛಸಿ ವಾಂಛಿತಂ ।
ಏಕಾದಶಪ್ರಕಾರೈಸ್ತು ಸದಾ ಸ್ಥೇಯಮಿಹೈವ ತು ॥ ೨೬ ॥
ಹಾಟಕೇಶ್ವರಜೇ ಕ್ಷೇತ್ರೇ ಸರ್ವತೀರ್ಥಮಯೇ ಶುಭೇ ।
ಆರಾಧನಂ ಪ್ರಕುರ್ವಾಣಾ ವಸಾಮೋ ಯೇನ ವೈ ವಯಂ ॥ ೨೭ ॥

---

೨೧. ಊರ್ಧ್ವ ದಿಕ್ಕನ್ನು ಆಶ್ರಯಿಸಿ ಸಕಲ ಲೋಕಗಳನ್ನು ಜಂಭಕನ ಭಯದಿಂದ ರಕ್ಷಿಸುವ ಸಮಸ್ತ ರುದ್ರರಿಗೆ ವಂದನೆಯು.

೨೨. ಕೆಳಗಿನ ಮತ್ತು ಮೇಲಿನ ದಿಕ್ಕನ್ನು ಆಶ್ರಯಿಸಿ ಕೂಷ್ಮಾಂಡಭೂತಗಳ ಭಯದಿಂದ ಸಕಲ ಲೋಕಗಳನ್ನು ರಕ್ಷಿಸುವ ಸಕಲ ರುದ್ರರಿಗೆ ನಮಸ್ಕಾರವು.

೨೩. ಭೂಮಿಯನ್ನು ಆಶ್ರಯಿಸಿ ಸಕಲರನ್ನೂ ರೋಗದಿಂದ ಕಾಪಾಡುವ ಆ ಅಸಂಖ್ಯಾತ ರುದ್ರರಿಗೆ ನಮಸ್ಕಾರವು.

೨೪. ಹನ್ನೊಂದು ಮಂದಿ ಮುನಿಗಳಿಂದ ಸ್ತುತಿಸಲ್ಪಟ್ಟ ಆ ಏಕಾದಶ ರುದ್ರರು ಭಕ್ತಿನಮ್ರರಾದ ಆ ಮುನಿಗಳನ್ನು ಕುರಿತು ಹೀಗೆಂದರು.

೨೫. ರುದ್ರರು ಹೇಳುತ್ತಾರೆ:—ತಾಪಸವರ್ಯರೆ! ನೀವು ಅತಿಶಯವಾದ ಭಕ್ತಿಯಿಂದ ಏಕಾದಶವಿಧನಾದ ನನ್ನನ್ನು ಸ್ತೋತ್ರಮಾಡಿರುವುದರಿಂದ ನಾನು ಸಂತುಷ್ಟನಾಗಿರುವೆನು. ಇಷ್ಟವಾದ ವರವನ್ನು ಕೇಳಿರಿ.

೨೬. ತಾಪಸರು ಹೇಳುತ್ತಾರೆ:—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ, ಇಷ್ಟಾರ್ಥವನ್ನು ಕೊಡುವುದಾದರೆ ನೀನು ಇಲ್ಲಿ ಏಕಾದಶವಿಧದಿಂದ ಯಾವಾಗಲೂ ವಿರಾಜಿಸುತ್ತಿರು.

೨೭. ಆದರಿಂದ ನಾವು ಸಕಲ ತೀರ್ಥರೂಪವಾದ ಹಾಟಕೇಶ್ವರಜಕ್ಷೇತ್ರದಲ್ಲಿ ನಿನ್ನನ್ನು ಪೂಜಿಸುತ್ತ ಯಾವಾಗಲೂ ವಾಸಿಸುವೆವು.

ಶ್ರೀ ಭಗವಾನುವಾಚ:—

ಏಕಾದಶಪ್ರಕಾರಾ ಯಾ ಮೂರ್ತಯೋ ನಿರ್ಮಿತಾ ಮಯಾ ।
ಏತಾಭಿರೇವ ಸರ್ವಾಭಿಃ ಸ್ಥಾಸ್ಯಾಮ್ಯತ್ರ ಸದೈವಹಿ ॥ ೨೮ ॥
ಆದ್ಯಾ ತು ಮಮ ಯಾ ಮೂರ್ತಿಃ ಸಾ ಕೈಲಾಸಂ ಸಮಾಶ್ರಿತಾ ।
ಸಂತಿಷ್ಠತಿ ಸದೈವಾಽತ್ರ ಕೈಲಾಸೇ ಪರ್ವತೋತ್ತಮೇ ॥ ೨೯ ॥
ಏತಾಸ್ತು ಮೂರ್ತಯೋಽಸ್ಮಾಕಂ ಸ್ಥಾಸ್ಯಂತ್ಯತ್ರೈವ ಸರ್ವದಾ ।
ಸರ್ವೇಷಾಮೇವಲೋಕಾನಾಂ ಹಿತಾಯ ದ್ವಿಜಸತ್ತಮಾಃ ॥ ೩೦ ॥
ನಾಮಭಿಶ್ಚ ಕ್ರಮೇಣೈವ ಯುಷ್ಮದೀಯೈಃ ಸ್ವಯಂ ದ್ವಿಜಾಃ ।
ವಿಶ್ವಾಮಿತ್ರಹ್ರದೇ ಸ್ನಾತ್ವಾ ಏತಾ ಮೂರ್ತೀರ್ಮಮಾಽತ್ರ ವೈ ।
ಪೂಜಯಿಷ್ಯಂತಿ ಯೇ ಮರ್ತ್ಯಾಸ್ತೇ ಯಾಸ್ಯಂತಿ ಪರಾಂಗತಿಂ ॥ ೩೧ ॥
ಕಿಂ ವಾಚಾ ಬಹುನೋಕ್ತೇನ ಭೂಯೋ ಭೂಯೋ ದ್ವಿಜೋತ್ತಮಾಃ ।
ಯಾ ತಾಸಾಂ ಕ್ರಿಯತೇ ಪೂಜಾ ಏಕಾದಶಗುಣಾ ಭವೇತ್ ॥ ೩೨ ॥
ಏವಮುಕ್ತ್ವಾ ತ್ರಿಣೇತ್ರಸ್ತು ತತ್ರೈವಾಽದರ್ಶನಂ ಗತಃ ।
ತೇಽಪಿ ತತ್ರಾಽಽಶ್ರಮಂ ಕೃತ್ವಾ ಶ್ರದ್ಧಯಾ ಪರಯಾ ಯುತಾಃ ।
ಮೂರ್ತಿಶ್ಚ ತಾಃ ಸಮಾರಾಧ್ಯ ಸಂಪ್ರಾಪ್ತಾಃ ಪರಮಂ ಪದಂ ॥ ೩೩ ॥
ಅನ್ಯೋಽಪಿ ಯಃ ಪುಮಾಂಸ್ತಾಶ್ಚ ಆರಾಧಯತಿ ಶ್ರದ್ಧಯಾ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೩೪ ॥

---

೨೮. ಶ್ರೀಭಗವಂತನು ಹೇಳುತ್ತಾನೆ:—ನಾನು ನಿರ್ಮಿಸಿದ ಹನ್ನೊಂದು ವಿಧ ಮೂರ್ತಿಗಳಿಂದ ಯಾವಾಗಲೂ ಇಲ್ಲಿ ನೆಲೆಸುವೆನು.

೨೯. ನನ್ನ ಮೊದಲನೆಯ ಮೂರ್ತಿಯು ಯಾವಾಗಲೂ ಕೈಲಾಸಪರ್ವತದಲ್ಲಿರುವುದು.

೩೦. ದ್ವಿಜವರ್ಯರೆ! ನನ್ನ ಈ ಮೂರ್ತಿಗಳು ಇಲ್ಲಿ ಸಕಲ ಜನರ ಹಿತಕ್ಕಾಗಿ ಇರುವುವು.

೩೧. ದ್ವಿಜರೆ! ಈ ವಿಶ್ವಾಮಿತ್ರಹ್ರದದಲ್ಲಿ ಮಿಂದು ನಿಮ್ಮ ಹೆಸರಿನಿಂದ ಈ ಮೂರ್ತಿಗಳನ್ನು ಪೂಜಿಸುವ ಮಾನವರು ಉತ್ತಮ ಗತಿಯನ್ನು ಹೊಂದುವರು.

೩೨. ಬಹುಮಾತಿನಿಂದೇನು ಪ್ರಯೋಜನ? ಅವರಿಗೆ ಮಾಡಿದ ಪೂಜೆಯು ಹನ್ನೊಂದರಷ್ಟು ಹೆಚ್ಚಾಗುವುದು.

೩೩. ಈಶ್ವರನು ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಆ ಮುನಿಗಳು ಅಲ್ಲಿ ಆಶ್ರಮವನ್ನು ರಚಿಸಿಕೊಂಡು ಅತಿಶಯ ಶ್ರದ್ಧೆಯಿಂದ ಆ ಮೂರ್ತಿಗಳನ್ನು ಆರಾಧಿಸಿ ಉತ್ತಮಸ್ಥಾನವನ್ನು ಹೊಂದಿದರು.

೩೪. ಇತರ ಮಾನವನು ಅವರನ್ನು ಶ್ರದ್ಧೆಯಿಂದ ಆರಾಧಿಸಿದರೆ ಮಹೇಶ್ವರನಿರುವ ಉತ್ತಮಸ್ಥಾನವನ್ನು ಹೊಂದುವನು.

ತತಃ ಪ್ರಭೃತಿ ತೇ ಜಾತಾ ರುದ್ರಾ ಏಕಾದಶೈವ ತು ।
ಸಂಖ್ಯಯಾ ದೇವದೇವಸ್ಯ ಮಹೇಶ್ವರವಪುರ್ಧರಾಃ ॥ ೩೫ ॥
ತೇಜೋತ್ತಮಾಸ್ತೇ ಸಂಯುಕ್ತಾಸ್ತ್ರಿನೇತ್ರಾಃ ಶೂಲಪಾಣಯಃ ।
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ॥ ೩೬ ॥
ಏಕಾದಶಪ್ರಕಾರಸ್ತು ಯಥಾ ಜಾತೋ ಮಹೇಶ್ವರಃ ।
ಚೈತ್ರೇ ಮಾಸಿ ಸಿತೇಪಕ್ಷೇ ಚತುರ್ದಶ್ಯಾಂ ದಿನೇ ಸ್ಥಿತೇ ॥ ೩೭ ॥
ಯಸ್ತಾನ್ ಪೂಜಯತೇ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ।
ಅಧನೋ ಧನಮಾಪ್ನೋತಿ ಹ್ಯಪುತ್ರಃ ಪುತ್ರವಾನ್ ಭವೇತ್ ॥ ೩೮ ॥
ಸರೋಗೋ ರೋಗಮುಕ್ತಸ್ತು ಪರಾಭೂತೋ ರಿಪುಕ್ಷಯಂ ।
ತತ್ಸಮಾರಾಧನಾದೇವ ಕಾಮಾನಂತ್ಯಮವಾಪ್ನುಯಾತ್ ॥ ೩೯ ॥
ಯಃ ಪುನಃ ಶಿವದೀಕ್ಷಾಢ್ಯೋ ಭಸ್ಮಸ್ನಾನಪರಾಯಣಃ ।
ತತ್ಸಮಾರಾಧನಂ ಕುರ್ಯಾಚ್ಛೃಣು ತಸ್ಯಾಪಿ ಯತ್ಫಲಂ ॥ ೪೦ ॥
ಯದನ್ಯಃ ಪ್ರಾಪ್ನುಯಾನ್ಮರ್ತ್ಯಸ್ತತ್ಪೂಜಾ ಸಂಭವಂ ಫಲಂ ।
ಷಡಕ್ಷರೇಣ ಮಂತ್ರೇಣ ಪುಷ್ಪೇಣೈಕೇನ ತತ್ಫಲಂ ॥ ೪೧ ॥
ಶಿವದೀಕ್ಷಾಧರೋ ಯಸ್ತು ಶತಘ್ನಂ ಲಭತೇ ಫಲಂ ।
ತಸ್ಮಾಚ್ಛತಘ್ನಮಾಪ್ನೋತಿ ಶೈವಾತ್ಪಾಶುಪತಶ್ಚ ಯಃ ।
ತಸ್ಮಾತ್ಕಾಲಮುಖೋ ಯಶ್ಚ ಮಹಾವ್ರತಧರಶ್ಚ ಯಃ ॥ ೪೨ ॥

---

೩೫–೩೯. ಅದು ಮೊದಲ್ಗೊಂಡು ಅವರು ಮಹೇಶ್ವರನ ಶರೀರವನ್ನು ಧರಿಸಿ ಉತ್ತಮ ತೇಜಸ್ಸುಳ್ಳವರೂ, ಮೂರು ಕಣ್ಣುಳ್ಳವರೂ, ಶೂಲಪಾಣಿಗಳೂ ಆಗಿ ಏಕಾದಶರುದ್ರರಾದರು. ದ್ವಿಜವರ್ಯರೆ! ನೀವು ಕೇಳಿದಂತೆ ಮಹೇಶ್ವರನು ಹನ್ನೊಂದು ವಿಧವಾಗಿ ಹೇಗಾದನೆಂಬುದನ್ನು ನಿಮಗೆ ಹೇಳಿರುವೆನು. ಚೈತ್ರಮಾಸದ ಶುಕ್ಲಪಕ್ಷದ ಚತುರ್ದಶೀ ದಿನ ಭಕ್ತಿಯಿಂದ ಅವರನ್ನು ಪೂಜಿಸುವವರು ಉತ್ತಮ ಗತಿಯನ್ನು ಹೊಂದುವರು. ಧನವಿಲ್ಲದವನು ಧನವನ್ನೂ, ಪುತ್ರನಿಲ್ಲದವನು ಪುತ್ರನನ್ನೂ, ರೋಗಿಯು ರೋಗಮುಕ್ತನೂ, ಶತ್ರುಗಳಿಂದ ಸೋತವನು ಶತ್ರು ನಾಶವನ್ನೂ ಹೊಂದುವನು. ನರರು ಅವನ ಪೂಜೆಯಿಂದ ಅನಂತೇಷ್ಟಾರ್ಥಗಳನ್ನು ಹೊಂದುವರು.

೪೦. ಶಿವದೀಕ್ಷೆಯುಳ್ಳವನಾಗಿ ಭಸ್ಮಸ್ನಾನ ಮಾಡಿದವನು ಅವನ ಪೂಜೆಯನ್ನು ಮಾಡಿದರೆ ಉಂಟಾಗುವ ಫಲವನ್ನು ಕೇಳು.

೪೧. ಇತರ ಮಾನವನು ಅವನ ಪೂಜೆಯಿಂದ ಪಡೆಯುವ ಫಲವು ಷಡಕ್ಷರ ಮಂತ್ರವನ್ನುಚ್ಚರಿಸಿ ಒಂದು ಪುಷ್ಪದಿಂದ ಪೂಜಿಸಿದರೆ ಲಭಿಸುವುದು.

೪೨. ಶೈವನು ಅದರ ನೂರರಷ್ಟೂ, ಪಾಶುಪತನು ಅದರ ನೂರರಷ್ಟೂ,

ಮೂರ್ತೀರ್ಯಾಸ್ತಾಶ್ಚ ಯೇ ಭಕ್ತ್ಯಾ ವಿನತಾಃ ಪೂಜಯಂತಿ ಚ ।
ಸರ್ವೇಷಾಮೇವ ತೇಷಾಂ ತು ಫಲಂ ಶತಗುಣಂ ಭವೇತ್ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಏಕಾದಶರುದ್ರೋತ್ಪತ್ತಿವರ್ಣನಂ" ನಾಮ
ಷಟ್‌ಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

ಕಾಲಮುಖನು ಅದರ ನೂರರಷ್ಟೂ, ಮಹಾವ್ರತಧಾರಿಯು ಅದರ ನೂರರಷ್ಟೂ ಫಲವನ್ನು ಪಡೆಯುವರು.

೪೩. ಆ ಮೂರ್ತಿಗಳನ್ನು ಭಕ್ತಿನಮ್ರರಾಗಿ ಪೂಜಿಸಿದವರಿಗೆಲ್ಲ ನೂರರಷ್ಟು ಫಲವು ದೊರೆಯುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಏಕಾದಶರುದ್ರೋತ್ಪತ್ತಿವರ್ಣನ"ವೆಂಬ
ಇನ್ನೂರಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

### ದಾನಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಕಿಂ ನಾಮಾನೋ ದ್ವಿಜಾಸ್ತೇ ಚ ವಾರಾಣಸ್ಯಾಃ ಸಮಾಗತಾಃ ।
ಏಕಾದಶ ಪ್ರಕಾರೋಽಸೌ ಯೇಷಾಂ ರುದ್ರಃ ಪ್ರಭಕ್ತಿತಃ ।
ತತ್ಸಂಜ್ಞಾಶ್ಚ ಸಮಾಚಕ್ಷ್ವ ವಿಸ್ತರೇಣ ಮಹಾಮುನೇ ॥ ೧ ॥

ಸೂತ ಉವಾಚ :—

ಏಕಸ್ತೇಷಾಂ ಮೃಗವ್ಯಾಧೋ ವಿಖ್ಯಾತೋ ಭುವನತ್ರಯೇ ।
ದ್ವಿತೀಯಃ ಸರ್ವಸಂಜ್ಞಶ್ಚ ನಿಂದಿತಶ್ಚ ತೃತೀಯಕಃ ॥ ೨ ॥
ಮಹಾ ಯಶಾಶ್ಚತುರ್ಥಸ್ತು ಕಥ್ಯತೇ ಮುನಿಸತ್ತಮಾಃ ।
ಅಜೈಕಪಾದ ಇತ್ಯುಕ್ತಃ ಪಂಚಮೋ ಮುನಿಸತ್ತಮಾಃ ॥ ೩ ॥
ಅಹಿರ್ಬುಧ್ನ್ಯಸ್ತಥಾ ಷಷ್ಠಃ ಪಿನಾಕೀ ಸಪ್ತಮಸ್ತಥಾ ।
ಪರಂತಪಸ್ತಥಾಽನ್ಯಸ್ತು ದಹನೋ ನವಮಸ್ತಥಾ ॥ ೪ ॥
ಈಶ್ವರೋ ದಶಮಃ ಪ್ರೋಕ್ತಃ ಕಪಾಲೀ ಚಾಂತಿಮಸ್ತಥಾ ।
ತೇಷಾಮೇತಾನಿ ನಾಮಾನಿ ಸ್ಥಿತಾನ್ಯೇವ ಹಿ ಯಾನಿ ಚ ।
ರುದ್ರಾಣಾಮಪಿ ತಾನ್ಯೇವ ವಿಹಿತಾನಿ ಹರೇಣ ತು ॥ ೫ ॥

---

### ಕನ್ನಡದ ಅನುವಾದ

#### ದಾನಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಯಾರ ಭಕ್ತಿಯಿಂದ ರುದ್ರನು ಹನ್ನೊಂದು ವಿಧನಾದನು? ವಾರಾಣಸಿಯಿಂದ ಬಂದ ಅವರ ಹೆಸರುಗಳೇನು? ವಿಸ್ತಾರವಾಗಿ ಹೇಳು.

೨-೫. ಸೂತನು ಹೇಳುತ್ತಾನೆ :—ಅವರು ಹನ್ನೊಂದು ಮಂದಿ ಮುನಿಗಳೂ ಕ್ರಮವಾಗಿ ಮೃಗವ್ಯಾಧ, ಸರ್ವ, ನಿಂದಿತ, ಮಹಾಯಶ, ಅಜೈಕಪಾದ, ಅಹಿರ್ಬುಧ್ಯ, ಪಿನಾಕಿ, ಪರಂತಪ, ದಹನ, ಈಶ್ವರ, ಕಪಾಲಿ ಎಂದು ಹೆಸರುಳ್ಳವರಾಗಿದ್ದರು. ಹರನು ಅವರ ಹೆಸರನ್ನೇ ಏಕಾದಶರುದ್ರರಿಗಿಟ್ಟನು.

ಋಷಯ ಊಚುಃ:—

ಕಾನಿ ದಾನಾನಿ ಶಸ್ತಾನಿ ತದರ್ಥಂ ವದ ನೋ ದ್ರುತಂ ।
ಜಪಶ್ಚೈವ ಪುರಾ ಪ್ರೋಕ್ತಸ್ತ್ವಯಾ ಕಾರ್ಯೋ ಯಥೈವ ಚ ॥ ೬ ॥

ಸೂತ ಉವಾಚ:—

ತದುದ್ದಿಶ್ಯ ಪ್ರದಾತವ್ಯಮೇಕೈಕಸ್ಯ ಪೃಥಕ್ ಪೃಥಕ್ ।
ಪ್ರತ್ಯಕ್ಷಾಶ್ಚ ಮಹಾಭಾಗ ದಾತವ್ಯಾ ಧೇನವಃ ಕ್ರಮಾತ್ ॥ ೭ ॥
ಮೃಗವ್ಯಾಧಾಯ ಪ್ರತ್ಯಕ್ಷಾ ಗೌರ್ದೇಯಾ ಚ ಗುಡೋದ್ಭವಾ ।
ಕಪಾಲಿನೇ ಪ್ರದಾತವ್ಯಾ ನವನೀತಸಮುದ್ಭವಾ ॥ ೮ ॥
ಅಜಪಾದಾಯ ಚಾಜ್ಯೋತ್ಥಾ ಅಹಿರ್ಬುಧ್ನ್ಯಾಯ ಹೇಮಜಾ ।
ಪಿನಾಕಿನೇ ಪ್ರದಾತವ್ಯಾ ಧೇನುರ್ಲವಣಸಂಭವಾ ॥ ೯ ॥
ಪರಂತಪಾಯ ವಿಪ್ರೇಂದ್ರಾಸ್ತಥೈವ ರಸಸಂಭವಾ ।
ಅನ್ನಜಾ ದಹನಾಯೋಕ್ತಾ ಈಶ್ವರಾಯ ಜಲೋದ್ಭವಾ ॥ ೧೦ ॥
ಏತಾ ದದಾತಿ ಯೋ ವಿಪ್ರಾ ಏತೇಷಾಂ ಚ ಮಹಾತ್ಮನಾಂ ।
ಚಕ್ರವರ್ತೀ ಭವೇನ್ನೂನಮೇತದಾಹ ಪಿತಾಮಹಃ ॥ ೧೧ ॥
ಅನ್ಯತ್ರಾಽಪಿ ಪ್ರದತ್ತಾಶ್ಚ ಕಿಂ ಪುನರ್ಭವಸನ್ನಿಧೌ ।
ತಸ್ಮಾತ್ಸರ್ವಪ್ರಯತ್ನೇನ ಏತಾ ದೇಯಾಃ ಪ್ರಯತ್ನತಃ ॥ ೧೨ ॥

---

೬. ಋಷಿಗಳು ಹೇಳುತ್ತಾರೆ:—ನೀನು ಈ ಮೊದಲೇ ಮಾಡತಕ್ಕ ಜಪವನ್ನು ಹೇಳಿರುವೆ. ಈಗ ಅವರಿಗೆ ಕೊಡಲರ್ಹವಾದ ದಾನವನ್ನು ಹೇಳು.

೭. ಸೂತನು ಹೇಳುತ್ತಾನೆ:—ಅವರನ್ನು ಉದ್ದೇಶಿಸಿ ಪ್ರತ್ಯೇಕವಾಗಿ ಈ ರೀತಿ ಗೋವುಗಳನ್ನು ಕ್ರಮವಾಗಿ ದಾನ ಮಾಡಬೇಕು.

೮–೧೦. ಮೃಗವ್ಯಾಧನಿಗೆ ಗುಡಧೇನುವನ್ನೂ, ಕಪಾಲಿಗೆ ಬೆಣ್ಣೆಯ ಗೋವನ್ನೂ, ಅಜಪಾದನಿಗೆ ಘೃತಧೇನುವನ್ನೂ, ಅಹಿರ್ಬುಧ್ನ್ಯನಿಗೆ ಸುವರ್ಣ ಧೇನುವನ್ನೂ, ಪಿನಾಕಿಗೆ ಲವಣಧೇನುವನ್ನೂ, ಪರಂತಪನಿಗೆ ರಸಧೇನುವನ್ನೂ, ದಹನನಿಗೆ ಅನ್ನಧೇನುವನ್ನೂ, ಈಶ್ವರನಿಗೆ ಜಲಧೇನುವನ್ನೂ ದಾನ ಮಾಡಬೇಕು.

೧೧. ಈ ಮಹಾತ್ಮರಿಗೆ ಹೀಗೆ ಗೋವುಗಳನ್ನು ದಾನ ಮಾಡಿದವನು ನಿಶ್ಚಯ ವಾಗಿಯೂ ಚಕ್ರವರ್ತಿಯಾಗುವನೆಂದು ಬ್ರಹ್ಮನು ಹೇಳಿರುವನು.

೧೨. ಇತರ ಕಡೆಗಳಲ್ಲಿ ಇವುಗಳನ್ನು ದಾನ ಮಾಡುವುದರಿಂದಲೇ ಈ ಫಲ ವುಂಟಾಗುವುದು. ಶಿವಸನ್ನಿಧಿಯಲ್ಲಿ ಇನ್ನೇನು. ಆದುದರಿಂದ ಪ್ರಯತ್ನಿಸಿ ಇವು ಗಳನ್ನು ದಾನ ಮಾಡಬೇಕು.

ಧೇನವೋ ಯೋ ನ ಶಕ್ತಃ ಸ್ಯಾದೇಕಾ ದೇಯಾ ಪ್ರಯತ್ನತಃ ।
ಸರ್ವೇಷಾಮೇವ ರುದ್ರಾಣಾಂ ಭರ್ತೃಯಜ್ಞವಚೋ ಯಥಾ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದಾನಮಾಹಾತ್ಮ್ಯವರ್ಣನಂ" ನಾಮ
ಸಪ್ತಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೧೩. ಇಷ್ಟು ಗೋವುಗಳನ್ನು ದಾನಮಾಡಲಶಕ್ತನಾದವನು ಭರ್ತೃಯಜ್ಞನ ವಚನದಂತೆ ಸಕಲ ರುದ್ರರಿಗೂ ಒಂದು ಧೇನುವನ್ನು ದಾನ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದಾನಮಾಹಾತ್ಮ್ಯವರ್ಣನ"ವೆಂಬ ಇನ್ನೂರ ಎಪ್ಪತ್ತೇಳನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

## ಯಾಜ್ಞವಲ್ಕ್ಯವೃತ್ತಾಂತವರ್ಣನಂ

ಸೂತ ಉವಾಚ:—

ಯೇ ಚಾಽನ್ಯೇ ಭಾಸ್ಕರಾಸ್ತತ್ರ ಸಂತಿ ಬ್ರಾಹ್ಮಣಸತ್ತಮಾಃ ।
ಹಾಟಕೇಶ್ವರಜೇ ಕ್ಷೇತ್ರೇ ಯಾಜ್ಞವಲ್ಕ್ಯಪ್ರತಿಷ್ಠಿತಾಃ ॥ ೧ ॥
ಯಸ್ತಾನ್ ಪೂಜಯತೇ ಭಕ್ತ್ಯಾ ಹೃದಿಕೃತ್ವಾಽಭಿವಾಂಛಿತಾನ್ ।
ಸಪ್ತಮ್ಯಾಂ ಚೈವ ಸಪ್ತಮ್ಯಾಂ ಲಭತೇ ನಾಽತ್ರಸಂಶಯಃ ॥ ೨ ॥

ಋಷಯ ಊಚುಃ:—

ಏಕ ಏವ ಸ್ಥಿತಃ ಸೂರ್ಯೋ ದೃಶ್ಯತೇ ಚ ನಭಸ್ತಲೇ ।
ತತ್ಕಥಂ ದ್ವಾದಶೈತೇ ಚ ತತ್ರ ಕ್ಷೇತ್ರೇ ಪ್ರತಿಷ್ಠಿತಾಃ ।
ಕಸ್ಮಿನ್ ಕಾಲೇ ತಥಾ ಕೃತ್ಯೇ ಕಿಮರ್ಥಂ ಸೂತನಂದನ ॥ ೩ ॥

ಸೂತ ಉವಾಚ:—

ಆಸೀತ್ಪೂರ್ವಂ ಕೃತಿರ್ನಾಮ ಶುನಃಶೇಪ ಸಮುದ್ಭವಃ ॥ ೪ ॥
ತಸ್ಯ ಪುತ್ರಃ ಶುನಃಪುತ್ರೋ ಬಭೂವ ಮುನಿಸತ್ತಮಃ ।
ಚಾರಾಯಣಃ ಸುತಸ್ತಸ್ಯ ಬಭೂವ ಮುನಿಸತ್ತಮಃ ॥ ೫ ॥

---

## ಕನ್ನಡದ ಅನುವಾದ

### ಯಾಜ್ಞವಲ್ಕ್ಯವೃತ್ತಾಂತವರ್ಣನ

೧-೨. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಹಾಟಕೇಶ್ವರಜ ಕ್ಷೇತ್ರದಲ್ಲಿ ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಸೂರ್ಯರನ್ನು ಪ್ರತಿ ಸಪ್ತಮಿ ದಿನದಲ್ಲಿ ಭಕ್ತಿಯಿಂದ ಪೂಜಿಸಿದ ಮಾನವನು ಅಖಿಲೇಷ್ಟಾರ್ಥವನ್ನು ನಿಶ್ಚಯವಾಗಿಯೂ ಪಡೆಯುವನು.

೩. ಋಷಿಗಳು ಹೇಳುತ್ತಾರೆ:—ಆಕಾಶದಲ್ಲಿ ಒಬ್ಬನೇ ಸೂರ್ಯನು ಕಾಣಿಸುವನು. ಆ ಕ್ಷೇತ್ರದಲ್ಲಿ ಯಾಜ್ಞವಲ್ಕ್ಯನು ಯಾವಾಗ ಏತಕ್ಕಾಗಿ ಹೇಗೆ ಹನ್ನೆರಡು ಮಂದಿ ಸೂರ್ಯರನ್ನು ಪ್ರತಿಷ್ಠೆಮಾಡಿದನು.

೪-೫. ಸೂತನು ಹೇಳುತ್ತಾನೆ:—ಹಿಂದೆ ಶುನಶ್ಶೇಪನಿಗೆ ಕೃತಿಯೆಂಬ ಪುತ್ರನಾದನು. ಅವನಿಗೆ ಮುನಿವರ್ಯನಾದ ಶುನ ಎಂಬ ಪುತ್ರನೂ, ಅವನಿಗೆ ಚಾರಾಯಣನೆಂಬ ಪುತ್ರನೂ ಜನಿಸಿದರು.

ಕಸ್ಯಚಿತ್ತ್ವಥ ಕಾಲಸ್ಯ ಬ್ರಹ್ಮಾ ಲೋಕಪಿತಾಮಹಃ ।
ಸಾವಿತ್ರೀಶಾಪನಿರ್ದಗ್ಧೋ ಹ್ಯವತೀರ್ಣೋ ಧರಾತಲೇ ॥ ೬ ॥
ಗಾಯತ್ರೀ ಚ ಯದಾ ವಿಪ್ರಾಸ್ತೇನೋಢಾ ಯಜ್ಞಕರ್ಮಣಿ ।
ಪ್ರಾಕ್ಸ್ಥಿತಾಂ ಚ ಪರಿತ್ಯಜ್ಯ ಸರ್ವದೇವಸಮಾಗಮೇ ।
ಕಾಲಾತ್ಯಯೋ ಭವೇನ್ನೈವ ಸಾವಿತ್ರ್ಯಾಗಮನೇ ಸ್ಥಿರೇ ॥ ೭ ॥
ತತಸ್ತಸ್ಯ ಸಮಾದೇಶಾದ್ಗಾಯತ್ರೀ ಗೋಪಕನ್ಯಕಾ ।
ಶಕ್ರೇಣ ಚ ಸಮಾನೀತಾ ದಿವ್ಯಲಕ್ಷಣಲಕ್ಷಿತಾ ॥ ೮ ॥
ಗೋಪಕನ್ಯಾಂ ಚ ತಾಂ ಜ್ಞಾತ್ವಾ ಗೋಶ್ಚ ವಕ್ತ್ರೇಣ ಪದ್ಮಜಃ ।
ಪ್ರವೇಶ್ಯಾಕರ್ಷಯಾಮಾಸ ಗುಹ್ಯೇನ ಚ ತತಃ ಪರಂ ॥ ೯ ॥
ಬ್ರಾಹ್ಮಣಾನಾಂ ಗವಾಂ ಚೈವ ಕುಲಮೇಕಂ ದ್ವಿಧಾ ಸ್ಥಿತಂ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ಸಂಸ್ಥಿತಂ ॥ ೧೦ ॥
ತೇನ ತಾಂ ಬ್ರಾಹ್ಮಣೀಂ ಕೃತ್ವಾ ಪಶ್ಚಾತ್ತಸ್ಯಾಃ ಪರಿಗ್ರಹಂ ।
ಗೃಹ್ಯೋಕ್ತವಿಧಿನಾ ಚಕ್ರೇ ಪುರಸ್ಥೋಽಪಿ ಪಿತಾಮಹಃ ॥ ೧೧ ॥
ಪತ್ನೀಶಾಲೋಪವಿಷ್ಟಾಯಾಂ ತತಸ್ತಸ್ಯಾಂ ದ್ವಿಜೋತ್ತಮಾಃ ।
ಸಾವಿತ್ರೀ ಸಮನುಪ್ರಾಪ್ತಾ ದೇವಪತ್ನೀಭಿರಾವೃತಾ ॥ ೧೨ ॥

---

೬. ಒಂದಾನೊಂದು ಕಾಲದಲ್ಲಿ ಲೋಕಪಿತಾಮಹನಾದ ಬ್ರಹ್ಮನು ಸಾವಿತ್ರೀ ಶಾಪದಿಂದ ಭೂಮಿಯಲ್ಲಿ ಅವತರಿಸಿದನು.

೭. ಅವನು ಸಕಲ ದೇವತೆಗಳ ಸಮೂಹದಲ್ಲಿ ಸಾವಿತ್ರಿಯು ಬಾರದೆ ಯಜ್ಞ ಕಾಲ ಮೀರುತ್ತಿರಲು ಹಿಂದೆ ಪತ್ನಿಯಾಗಿದ್ದ ಸಾವಿತ್ರಿಯನ್ನು ತ್ಯಜಿಸಿ ಗಾಯತ್ರಿಯನ್ನು ಮದುವೆ ಮಾಡಿಕೊಂಡನು.

೮. ಇಂದ್ರನು ಬ್ರಹ್ಮನ ಅಪ್ಪಣೆಯಿಂದ ದಿವ್ಯಲಕ್ಷಣಗಳಿಂದ ಕೂಡಿದ ಗೋಪಕನ್ಯೆಯನ್ನು ಕರೆತಂದನು.

೯. ಬ್ರಹ್ಮನು ಅವಳು ಗೋಪಕನ್ಯೆಯೆಂದರಿತು ಅವಳನ್ನು ಗೋವಿನ ಬಾಯಿಯಲ್ಲಿ ಹೊಗಿಸಿ ಗುದದ್ವಾರದಿಂದ ಸೆಳೆದನು.

೧೦. ಬ್ರಾಹ್ಮಣರ ಮತ್ತು ಗೋವುಗಳ ಕುಲವು ಒಂದೇ ಆಗಿರುವುದು. ಒಂದೆಡೆಯಲ್ಲಿ ಮಂತ್ರಗಳೂ, ಇನ್ನೊಂದೆಡೆಯಲ್ಲಿ ಹವಿಸ್ಸೂ ಇರುವುದು.

೧೧. ಆದುದರಿಂದ ಪಿತಾಮಹನು ಅವಳನ್ನು ಬ್ರಾಹ್ಮಣಕನ್ಯೆಯನ್ನಾಗಿಸಿ ಗೃಹ್ಯೋಕ್ತವಿಧಿಯಿಂದ ಮದುವೆ ಮಾಡಿಕೊಂಡನು.

೧೨. ದ್ವಿಜವರ್ಯರೆ! ಆ ಗಾಯತ್ರಿಯು ಪತ್ನೀಶಾಲೆಯಲ್ಲಿ ಕುಳಿತಿರಲು ಸಾವಿತ್ರಿಯು ದೇವಪತ್ನಿಯರೊಡನೆ ಅಲ್ಲಿಗೆ ಬಂದಳು.

ತತಸ್ತಾಂ ಸಾ ಸಮಾಲೋಕ್ಯ ರಶನಾಸಮಲಂಕೃತಾಂ ।
ದೌರ್ಭಾಗ್ಯ ದುಃಖಮಾಪನ್ನಾ ಶಶಾಪ ಚ ವಿಧಿಂ ತತಃ ॥ ೧೩ ॥

ಸಾವಿತ್ರ್ಯುವಾಚ :—

ಯಸ್ಮಾತ್ತ್ವಯಾ ಪರಿತ್ಯಕ್ತಾ ನಿರ್ದೋಷಾಽಹಂ ಪಿತಾಮಹ ।
ಪಿತಾಮಹೋಽಸಿ ಮೇ ನೂನಮದ್ಯ ಪ್ರಭೃತಿ ಸಂಗಮೇ ॥ ೧೪ ॥
ಮನುಷ್ಯಾಣಾಂ ಭವೇತ್ಕೃತ್ಯಮನ್ಯನಾರೀಪರಿಗ್ರಹಃ ।
ಏತತ್ತ್ವಯಾ ಕೃತಂ ಯಸ್ಮಾನ್ಮಾನುಷಸ್ತ್ವಂ ಭವಿಷ್ಯಸಿ ॥ ೧೫ ॥
ಕಾಮಾರ್ತಶ್ಚ ವಿಶೇಷೇಣ ಮಮ ವಾಕ್ಯಾದಸಂಶಯಂ ॥ ೧೬ ॥
ಏವಮುಕ್ತ್ವಾ ತು ಸಾವಿತ್ರೀ ತ್ಯಕ್ತ್ವಾ ತಂ ಯಜ್ಞಮಂಡಪಂ ।
ಗಿರೇಃ ಶಿಖರಮಾರೂಢಾ ತಪಶ್ಚಕ್ರೇ ಮಹತ್ತತಃ ॥ ೧೭ ॥
ಪಿತಾಮಹೋಽಪಿ ತಚ್ಛಾಪಾಚ್ಚಾರಾಯಣ ನಿವೇಶನೇ ।
ಅವತೀರ್ಣೋ ಧರಾಪೃಷ್ಠೇ ಕಾಲೇನ ಮಹತಾ ತತಃ ॥ ೧೮ ॥
ಸ ಯದಾ ಯೌವನಂ ಭೇಜೇ ಮಾನುಷಂ ಚ ಪುರಾಸ್ಥಿತಃ ।
ತಥಾ ತಥಾ ಚ ತಾಪೇನ ಕಾಮೋತ್ಥೇನ ಪ್ರಪೀಡ್ಯತೇ ॥ ೧೯ ॥
ತತೋಽಸೌ ವೀಕ್ಷ್ಯತೇ ನಾರೀಂ ಕನ್ಯಾಂ ವಾಽಥ ತಪಸ್ವಿನೀಂ ।
ಅವಿಕಲ್ಪಮನಾ ಭೇಜೇ ರೂಪಸೌಭಾಗ್ಯಗರ್ವಿತಃ ॥ ೨೦ ॥

---

೧೩. ಅವಳು ಯಜ್ಞದ ಮೌಂಜಿಯಿಂದ ಅಲಂಕಾರಗೊಂಡ ಆ ಗಾಯತ್ರಿಯನ್ನು ನೋಡಿ ದೌರ್ಭಾಗ್ಯದಿಂದ ದುಃಖಗೊಂಡವಳಾಗಿ ಬ್ರಹ್ಮನನ್ನು ಈ ರೀತಿ ಶಪಿಸಿದಳು.

೧೪. ಸಾವಿತ್ರಿಯು ಹೇಳುತ್ತಾಳೆ:—ಪಿತಾಮಹ! ನೀನು ನಿರ್ದುಷ್ಟಳಾದ ನನ್ನನ್ನು ತ್ಯಜಿಸಿದ್ದರಿಂದ ಸಂಗಮ ವಿಷಯದಲ್ಲಿ ನನಗೆ ಪಿತಾಮಹನೇ ಆಗಿರುವೆ.

೧೫–೧೬. ಬೇರೆ ಸ್ತ್ರೀಯರನ್ನು ಪರಿಗ್ರಹಿಸುವುದು ಮನುಷ್ಯರ ಕಾರ್ಯವು. ನೀನು ಕಾಮಾರ್ತನಾಗಿ ಇದನ್ನು ಮಾಡಿದ್ದರಿಂದ ನನ್ನ ಮಾತಿನಂತೆ ಮನುಷ್ಯನಾಗುವೆ.

೧೭. ಸಾವಿತ್ರಿಯು ಹೀಗೆ ಹೇಳಿ ಆ ಯಜ್ಞಶಾಲೆಯನ್ನು ತ್ಯಜಿಸಿ ಪರ್ವತದ ಶಿಖರವನ್ನು ಏರಿ ಮಹಾ ತಪಸ್ಸನ್ನು ಮಾಡಿದಳು.

೧೮–೧೯. ಪಿತಾಮಹನೂ ಸಾವಿತ್ರಿಯ ಶಾಪದಿಂದ ಬಹುಕಾಲದ ಮೇಲೆ ಚಾರಾಯಣನ ಮನೆಯಲ್ಲಿ ಅವತರಿಸಿದನು. ಅವನು ಮನುಷ್ಯರಂತೆ ಯೌವನವನ್ನು ಹೊಂದಿದಹಾಗೆಲ್ಲ ಕಾಮಪೀಡಿತನಾಗುತ್ತಿದ್ದನು.

೨೦. ಸೌಂದರ್ಯದಿಂದ ಗರ್ವಿತನಾದ ಅವನು ಸ್ತ್ರೀಯನ್ನಾಗಲಿ, ಕನ್ಯೆಯನ್ನಾಗಲಿ ತಪಸ್ವಿನಿಯನ್ನಾಗಲಿ ನೋಡಿದೊಡನೆ ವಿಚಾರಮಾಡದೆ ಅವಳೊಡನೆ ರಮಿಸುತ್ತಿದ್ದನು.

ತತಸ್ತಂ ವ್ಯಸನಾರ್ತಂ ಚ ದೃಷ್ಟ್ವಾ ಚಾರಾಯಣೋ ಮುನಿಃ ।
ಸ್ವಯಂ ನಿಃಸಾರಯಾಮಾಸ ಪ್ರಕೋಪೇನ ನಿಜಾಶ್ರಮಾತ್ ॥ ೨೧ ॥
ಸ ಚ ಪಿತ್ರಾ ಪರಿತ್ಯಕ್ತೋ ಭ್ರಮಮಾಣಸ್ತತಸ್ತತಃ ।
ಚಮತ್ಕಾರಪುರಂ ಪ್ರಾಪ್ತಃ ಶಾಕಲ್ಯೋ ಯತ್ರ ತಿಷ್ಠತಿ ॥ ೨೨ ॥
ನಾಮ್ನಾ ಬ್ರಾಹ್ಮಣ ಶಾರ್ದೂಲೋ ನಾಗರೋ ವೇದಪಾರಗಃ ।
ವೃತಃ ಶಿಷ್ಯ ಸಹಸ್ರೇಣ ವೇದವಿದ್ಯಾಂ ಪ್ರಚಾರಯನ್ ॥ ೨೩ ॥
ಅಥ ತಂ ಸ ಪ್ರಣಮ್ಯೋಚ್ಚೈಃ ಶಿಷ್ಯತ್ವಂ ಸಮುಪಾಗತಃ ।
ವೇದಾಧ್ಯಯನ ಸಂಪನ್ನೋ ಬಭೂವಾಽಥ ಚಿರಾದಪಿ ॥ ೨೪ ॥
ಏತಸ್ಮಿನ್ನೇವ ಕಾಲೇತು ಆನರ್ತಾಧಿಪತಿಃ ಸ್ವಯಂ ।
ಆಗತಸ್ತಿಷ್ಠತೇ ಯತ್ರ ಜಲಶಾಯೀ ಹರಿಃ ಸ್ವಯಂ ॥ ೨೫ ॥
ಚಾತುರ್ಮಾಸ್ಯವ್ರತಂ ತೇನ ಗೃಹೀತಂ ತತ್ಪುರಸ್ತದಾ ।
ಪ್ರಾರ್ಥಿತಸ್ತು ತತೋ ವಿಪ್ರಾಃ ಶಾಕಲ್ಯಸ್ತೇನ ಭೂಭುಜಾ ॥ ೨೬ ॥
ಶಾಂತಿಕಂ ಪೌಷ್ಟಿಕಂ ನಿತ್ಯಂ ತ್ವಯಾ ಕಾರ್ಯಂ ಮಮಾಲಯೇ ।
ಯಾವತ್ತಿಷ್ಠಾಮ್ಯಹಂ ಚಾಽತ್ರ ಪ್ರಸಾದಃ ಕ್ರಿಯತಾಮಿತಿ ॥ ೨೭ ॥
ಬಾಢಮಿತ್ಯೇವ ಸ ಪ್ರೋಕ್ತ್ವಾ ದಾಕ್ಷಿಣ್ಯೇನ ದ್ವಿಜೋತ್ತಮಾಃ ।
ಏಕೈಕಂ ಪ್ರೇಷಯಾಮಾಸ ಸ್ವಶಿಷ್ಯಂ ತಸ್ಯ ಮಂದಿರೇ ॥ ೨೮ ॥

---

೨೧. ಬಳಿಕ ಚಾರಾಯಣಮುನಿಯು ಸ್ತ್ರೀವ್ಯಸನಾರ್ತನಾದ ಪುತ್ರನನ್ನು ನೋಡಿ ಅವನನ್ನು ಕೋಪದಿಂದ ತನ್ನ ಆಶ್ರಮದಿಂದ ಹೊರಡಿಸಿದನು.

೨೨—೨೩. ತಂದೆಯು ತ್ಯಜಿಸಲು ಅವನು ಅಲ್ಲಿ ಇಲ್ಲಿ ಅಲೆಯುತ್ತ ವೇದ ಪಾರಂಗತನೂ, ಅನೇಕ ಮಂದಿ ಶಿಷ್ಯರೊಡನೆ ವೇದವಿದ್ಯೆಯನ್ನು ಪ್ರಚಾರಗೊಳಿಸು ವವನೂ ಆದ ಶಾಕಲ್ಯನೆಂಬ ನಾಗರಬ್ರಾಹ್ಮಣನಿರುವ ಚಮತ್ಕಾರಪುರಕ್ಕೆ ಬಂದನು.

೨೪. ಅಲ್ಲಿ ಅವನಿಗೆ ನಮಸ್ಕಾರಮಾಡಿ ಶಿಷ್ಯತ್ವವನ್ನು ವಹಿಸಿ ಬಹುಕಾಲದ ಮೇಲೆ ವೇದಾಧ್ಯಯನಸಂಪನ್ನನಾದನು.

೨೫. ಈ ಸಮಯದಲ್ಲಿ ಜಲಶಾಯಿಯಾದ ವಿಷ್ಣುವಿರುವ ಆ ಸ್ಥಳಕ್ಕೆ ಆನರ್ತಾಧಿಪತಿಯು ಬಂದನು.

೨೬—೨೭. ಆ ರಾಜನು ಆ ವಿಷ್ಣುವಿನ ಮುಂದೆ ಚಾತುರ್ಮಾಸ್ಯವ್ರತವನ್ನು ಸ್ವೀಕರಿಸಿದನು. ವಿಪ್ರರೆ! ಅನಂತರ ಅವನು ಶಾಕಲ್ಯನನ್ನು ನಾನಿಲ್ಲಿರುವವರೆಗೆ ನೀನು ನನ್ನ ಮನೆಯಲ್ಲಿ ಶಾಂತಿಕ ಪೌಷ್ಟಿಕ ಕಾರ್ಯವನ್ನು ನೆರವೇರಿಸುತ್ತ ಅನುಗ್ರಹಿಸೆಂದು ಪ್ರಾರ್ಥಿಸಿದನು.

೨೮. ಶಾಕಲ್ಯನು ದಾಕ್ಷಿಣ್ಯದಿಂದ ಹಾಗೆಯೇ ಆಗಲೆಂದು ಹೇಳಿ ಅವನ ಮನೆಗೆ ಒಬ್ಬೊಬ್ಬ ಶಿಷ್ಯನನ್ನು ಕಳುಹಿಸುತ್ತಿದ್ದನು.

ಸ ಶಾಂತಿಕಂ ವಿಧಾಯಾsಥ ದತ್ವಾsssಶೀಃ ಪಾರ್ಥಿವಸ್ಯ ಚ ।
ಸಂಪ್ರಾಪ್ಯ ದಕ್ಷಿಣಾಂ ತಸ್ಮಾತ್ಪುನರೇತಿ ಚ ತಂ ದ್ವಿಜಂ ॥ ೨೯ ॥
ಶಾಕಲ್ಯಾಯ ಚ ತಾಂ ದತ್ವಾ ದಕ್ಷಿಣಾಂ ನಿಜಮಂದಿರೇ ।
ಜಗಾಮ ನಿತ್ಯಮೇವಂ ಹಿ ವ್ಯವಹಾರೋ ವ್ಯವಸ್ಥಿತಃ ॥ ೩೦ ॥
ಅನ್ಯಸ್ಮಿನ್ನಹನಿ ಪ್ರಾಪ್ತೇ ಶಾಕಲ್ಯೇನ ವಿಸರ್ಜಿತಃ ।
ಶಾಂತ್ಯರ್ಥಂ ಯಾಜ್ಞವಲ್ಕ್ಯಸ್ತು ಪಾರ್ಥಿವಸ್ಯ ನಿವೇಶನಂ ॥ ೩೧ ॥
ತಸ್ಯ ಭೂಪಸ್ಯ ರೂಪಾಢ್ಯಾ ಮಂಥರಾsಸ್ತಿ ವಿಲಾಸಿನೀ ।
ರಾತ್ರೌ ಚ ಕಾಮಿತಾ ತೇನ ಕಾಮಾಢ್ಯೇನ ಸುಕಾಮಿನೀ ॥ ೩೨ ॥
ಭಾವೈರ್ವಾತ್ಸ್ಯಾಯನ ಪ್ರೋಕ್ತೈಃ ಸಮಾಲಿಂಗನ ಪೂರ್ವಕೈಃ ।
ಸ ತಯಾ ವಿವಿಧೈಃ ಕೃತ್ತೋ ಮಯೂರಪದಕಾದಿಭಿಃ ।
ಶರೀರೇ ಚಾsಧರೇ ಚೈವ ತಥಾ ಮಣಿಪ್ರವಾಲಕೈಃ ॥ ೩೩ ॥
ಸಂಪ್ರಾಪ್ತೋsಧ್ಯಯನಾರ್ಥಾಯ ಯಾವಚ್ಛಾಕಲ್ಯ ಸನ್ನಿಧೌ ।
ತಾವತ್ಸಂಪ್ರೇಷಿತಸ್ತೇನ ಶಾಂತ್ಯರ್ಥಂ ಭೂಪಮಂದಿರೇ ॥ ೩೪ ॥
ಸೋsಪಿ ಸಂಪ್ರೇಷಿತಸ್ತೇನ ಗತ್ವಾ ತಂ ಪಾರ್ಥಿವಾಲಯಂ ।
ಶಾಂತಿಕಂ ಚ ತತಶ್ಚಕ್ರೇ ಯಥೋಕ್ತವಿಧಿನಾ ದ್ವಿಜಾಃ ॥ ೩೫ ॥

---

೨೯–೩೦. ಆ ಶಿಷ್ಯನು ಶಾಂತಿಕರ್ಮವನ್ನು ಮಾಡಿ ರಾಜನನ್ನು ಆಶೀರ್ವದಿಸಿ ಅವನಿಂದ ದಕ್ಷಿಣೆಯನ್ನು ತೆಗೆದುಕೊಂಡು ಶಾಕಲ್ಯನ ಬಳಿಗೆ ಬಂದು ಆ ದಕ್ಷಿಣೆಯನ್ನು ಶಾಕಲ್ಯನಿಗಿತ್ತು ತನ್ನ ಮನೆಗೆ ತೆರಳುತ್ತಿದ್ದನು. ಪ್ರತಿದಿನವೂ ಹೀಗೆಯೇ ನಡೆಯುತ್ತಿದ್ದಿತು.

೩೧. ಇನ್ನೊಂದು ದಿನ ಶಾಕಲ್ಯನು ಯಾಜ್ಞವಲ್ಕ್ಯನನ್ನು ಶಾಂತಿಕರ್ಮಕ್ಕಾಗಿ ದೊರೆಯ ಬಿಡಾರಕ್ಕೆ ಕಳುಹಿಸಿದನು.

೩೨. ಆ ದೊರೆಗೆ ಸುಂದರಿಯಾದ ಮಂಥರೆಯೆಂಬ ಪ್ರಿಯಳಿದ್ದಳು. ಕಾಮುಕನಾದ ಯಾಜ್ಞವಲ್ಕ್ಯನು ರಾತ್ರಿಯಲ್ಲಿ ಆ ಕಾಮಿನಿಯನ್ನು ಕಾಮಿಸಿದನು.

೩೩. ಅವನನ್ನು ಅವಳು ವಾತ್ಸ್ಯಾಯನೋಕ್ತವಾದ ಭಾವಗಳಿಂದ ಸಹಿತಳಾಗಿ ಆಲಿಂಗಿಸಿ, ಮಯೂರಪದಕ, ಮಣಿಪ್ರವಾಲಕ ಮೊದಲಾದುವುಗಳಿಂದ ಶರೀರದಲ್ಲಿಯೂ, ತುಟಿಯಲ್ಲಿಯೂ ಕ್ಷತಗೊಳಿಸಿದಳು.

೩೪. ಅಂತಹ ಅವನು ಅಧ್ಯಯನಮಾಡಲೋಸುಗ ಶಾಕಲ್ಯನ ಹತ್ತಿರ ಬರಲು ಶಾಕಲ್ಯನು ಅವನನ್ನು ರಾಜನ ಮನೆಗೆ ಕಳುಹಿಸಿದನು.

೩೫. ಯಾಜ್ಞವಲ್ಕ್ಯನು ರಾಜನ ಮನೆಗೆ ಹೋಗಿ ವಿಧಿಯಂತೆ ಶಾಂತಿಕರ್ಮವನ್ನು ಮಾಡಿದನು.

ಶಾಂತಿಕಸ್ಯಾಽವಸಾನೇ ತು ಪ್ರಗೃಹ್ಯ ಕಲಶೋದಕಂ ।
ಪಂಚಾಂಗೈಃ ಕಲ್ಪಿತಂ ರುದ್ರೈಃ ಸ್ವಯಮೇವಾಽಭಿಮಂತ್ರಿಕೈಃ ॥ ೩೬ ॥
ಸಾಽಕ್ಷತಂ ಸುಮನೋಯುಕ್ತಂ ಸಮಾದಾಯ ಗತಸ್ತತಃ ।
ಸಂತಿಷ್ಠತೇ ನೃಪೋ ಯತ್ರ ಆನರ್ತೋ ವ್ರತಸಂಯುತಃ ॥ ೩೭ ॥
ದ್ಯಾಮಾಲೇಖೀತಿ ಮಂತ್ರಂ ಸ ಪ್ರೋಚ್ಚಾರ್ಯ ವಿಧಿಪೂರ್ವಕಂ ।
ಛಂದರ್ಷಿಸಹಿತಂ ಚೈವ ಯಾವತ್ಕ್ಷಿಪತಿ ಮಸ್ತಕೇ ।
ತಾವನ್ನಿರೀಕ್ಷಿತಸ್ತೇನ ನಖಲೇಖಾ ವಿಕರ್ಶಿತಃ ॥ ೩೮ ॥
ಖಂಡಿತೇನಾಽಧರೇಣೈವ ತತೋಽಭೂದ್ದುರ್ಮನಾ ನೃಪಃ ॥ ೩೯ ॥
ವಿಟಪ್ರಾಯಂ ತು ತಂ ದೃಷ್ಟ್ವಾ ಮಲಿನಾಂಬರಧಾರಿಣಂ ।
ತಂ ಪ್ರೋವಾಚ ವಿಹಸ್ಯೋಚ್ಚೈರ್ದೇಹಿ ವಿಪ್ರಾಕ್ಷತಾಂಜಲಂ ॥ ೪೦ ॥
ಮಂದುರಾಯಾಂ ಸ್ಥಿತಂ ಯಚ್ಚ ಕಾಷ್ಠಮೇತತ್ರ್ರದೃಶ್ಯತೇ ।
ಯಾಜ್ಞವಲ್ಕ್ಯಸ್ತತೋ ದೃಷ್ಟ್ವಾ ಸಕೋಪಸ್ತಮುಪಾದ್ರವತ್ ॥ ೪೧ ॥
ಕ್ಷಿಪ್ತ್ವಾ ತತ್ರ ಜಲಂ ವಿಪ್ರಾಃ ಸಾಕ್ಷತಂ ಗೃಹಮಾಗಮತ್ ।
ಅಗೃಹ್ಯ ದಕ್ಷಿಣಾಂ ತಸ್ಯ ಪಾರ್ಥಿವಸ್ಯ ಯಥಾ ಸ್ಥಿತಾಂ ॥ ೪೨ ॥
ಏತಸ್ಮಿನ್ನಂತರೇ ತಸ್ಯ ಧವಕಾಷ್ಠಸ್ಯ ಸರ್ವತಃ ।
ನಿಷ್ಕ್ರಾಂತಾ ವಿವಿಧಾಃ ಶಾಖಾಃ ಪಲ್ಲವೈಃ ಸಮಲಂಕೃತಾಃ ॥ ೪೩ ॥

---

೩೬–೩೭. ಅವನು ಶಾಂತಿಕರ್ಮದ ಅವಸಾನದಲ್ಲಿ ತಾನೇ ಅಭಿಮಂತ್ರಿಸಿದ ಪಂಚಾಂಗ ರುದ್ರಮಂತ್ರಗಳಿಂದ ಕಲ್ಪಿತವಾದುದೂ, ಅಕ್ಷತ ಪುಷ್ಪಗಳಿಂದ ಕೂಡಿರುವುದೂ ಆದ ಕಲಶೋದಕವನ್ನು ತೆಗೆದುಕೊಂಡು ವ್ರತಧಾರಿಯಾದ ರಾಜನ ಸಮೀಪಕ್ಕೆ ಹೋದನು.

೩೮–೪೨. ಅವನು ಛಂದಸ್ಸು ಋಷಿಸಹಿತವಾದ ದ್ಯಾಮಾಲೇಖೀತ್ಯಾದಿ ಮಂತ್ರವನ್ನು ವಿಧಿಪೂರ್ವಕವಾಗಿ ಉಚ್ಚರಿಸಿ ರಾಜನ ಮಸ್ತಕದಲ್ಲಿ ಪ್ರೋಕ್ಷಿಸುವಷ್ಟರಲ್ಲಿ ದೊರೆಯು ದಂತಕ್ಷತ ನಖಕ್ಷತಗಳನ್ನು ನೋಡಿ ವ್ಯಥಿತನಾಗಿ ಕೊಳೆಬಟ್ಟೆಯನ್ನುಟ್ಟಿರುವ ಅವನು ವಿಟನೆಂದರಿತು ನಕ್ಕು ಅವನನ್ನು ಕುರಿತು, "ವಿಪ್ರ! ಅಶ್ವಶಾಲೆಯಲ್ಲಿರುವ ಆ ಕಟ್ಟಿಗೆಗೆ ಈ ಅಕ್ಷತೋದಕದಿಂದ ಪ್ರೋಕ್ಷಿಸು" ಎಂದನು. ಅದರಿಂದ ಕುಪಿತನಾದ ಯಾಜ್ಞವಲ್ಕ್ಯನು ಆ ಕಟ್ಟಿಗೆಯೆಡೆಗೆ ಓಡಿ ಅಕ್ಷತೆ ಸಹಿತವಾದ ನೀರನ್ನು ಅದಕ್ಕೆ ಚಿಮುಕಿಸಿ ಎಂದಿನಂತೆ ಕೊಡುವ ರಾಜನ ದಕ್ಷಿಣೆಯನ್ನು ತೆಗೆದುಕೊಳ್ಳದೆ ಮನೆಗೆ ಬಂದನು.

೪೩. ಇಷ್ಟರಲ್ಲಿ ಆ ಧವಕಾಷ್ಠದ ಸುತ್ತಲೂ ಚಿಗುರುಗಳಿಂದ ಅಲಂಕಾರಗೊಂಡ ನಾನಾ ವಿಧ ಶಾಖೆಗಳು ಹೊರಟವು.

ತದ್ದೃಷ್ಟ್ವಾ ವಿಸ್ಮಿತಃ ಸೋಽಥ ಆನರ್ತಾಧಿಪತಿರ್ನೃಪಃ ।
ಪಶ್ಚಾತ್ತಾಪಂ ಪರಂ ಚಕ್ರೇ ಧಿಙ್ಮಯೈವಮನುಷ್ಠಿತಂ ॥ ೪೪ ॥
ಸ ನೂನಂ ವಿಬುಧಃ ಕೋಽಪಿ ವಿಪ್ರರೂಪೇಣ ಸಂಗತಃ ।
ಯೇನೇದೃಶಃ ಪ್ರಭಾವೋಽಯಂ ತಸ್ಯ ಮಂತ್ರಸ್ಯ ಸಂಸ್ಥಿತಃ ॥ ೪೫ ॥
ಯದ್ಯಹಂ ಪ್ರತಿಗೃಹ್ಣಾಮಿ ತಸ್ಯ ಮಂತ್ರೋದಿತಂ ಜಲಂ ।
ಜರಾಮರಣಹೀನಸ್ತು ತದ್ಭವಾಮಿ ನ ಸಂಶಯಃ ॥ ೪೬ ॥
ಏವಂ ಚಿಂತಯತಸ್ತಸ್ಯ ತದ್ದಿನಂ ವಿಸ್ಮಿತಸ್ಯ ಚ ।
ಪಾರ್ಥಿವಸ್ಯ ದ್ವಿಜಶ್ರೇಷ್ಠಾ ಜಾತಂ ವರ್ಷಶತೋಪಮಂ ॥ ೪೭ ॥
ದಿವಸೇ ತು ಸಮಾಕ್ರಾಂತೇ ಕಥಂಚಿತ್ತಸ್ಯ ಭೂಪತೇಃ ।
ವಿಭಾವರೀ ಕ್ಷಯಂ ಯಾತಿ ಕಥಂಚಿನ್ನೈವ ಶಾರದೀ ॥ ೪೮ ॥
ತತಃ ಪ್ರಭಾತಸಮಯೇ ಸಮುತ್ಥಾಯ ಮಹೀಪತಿಃ ।
ಆಹ್ವಯಾಮಾಸ ಶಾಕಲ್ಯಂ ಪುರುಷೈರಾಪ್ತಕಾರಿಭಿಃ ॥ ೪೯ ॥
ತತಃ ಪ್ರೋವಾಚ ವಿನಯಾತ್ಸಾದರಂ ಪ್ರಾಂಜಲಿಃ ಸ್ಥಿತಃ ।
ಕಲ್ಯೇ ಶಿಷ್ಯಃ ಸಮಾಯಾತೋ ಯಸ್ತ್ವದೀಯೋ ಮಮಾಂತಿಕಂ ॥ ೫೦ ॥
ಶಾಂತ್ಯರ್ಥಂ ಪ್ರೇಷಣೀಯಸ್ತು ಸೋಽದ್ಯಾಪಿ ಚ ದ್ವಿಜೋತ್ತಮ ।
ತಸ್ಯೋಪರಿ ಪರಾಭಕ್ತಿರ್ಮಮ ಜಾತಾಽದ್ಯ ಕೇವಲಂ ॥ ೫೧ ॥

---

೪೪. ಅದನ್ನು ನೋಡಿ ಆಶ್ಚರ್ಯಗೊಂಡ ಆ ಆನರ್ತರಾಜನು ನಾನು ಎಂತಹ ಕೆಲಸವನ್ನು ಮಾಡಿದೆನೆಂದು ಪಶ್ಚಾತ್ತಾಪಗೊಂಡನು.

೪೫. ಅವನ ಮಂತ್ರವು ಇಷ್ಟು ಪ್ರಭಾವವುಳ್ಳದ್ದಾದುದರಿಂದ ಅವನು ನಿಶ್ಚಯವಾಗಿಯೂ ಬ್ರಾಹ್ಮಣರೂಪದಿಂದ ಬಂದ ದೇವತೆಯೇ ಆಗಿರುವನು.

೪೬. ಅವನ ಮಂತ್ರಜಲವನ್ನು ನಾನು ಸ್ವೀಕರಿಸಿದರೆ ನಿಶ್ಚಯವಾಗಿಯೂ ಜರಾಮರಣರಹಿತನಾಗುವೆನು.

೪೭. ಹೀಗೆ ಆಶ್ಚರ್ಯದಿಂದ ಚಿಂತಿಸುತ್ತಿರುವ ಆ ರಾಜನಿಗೆ ಆ ದಿನವು ಒಂದು ವರ್ಷದಂತಾಯಿತು.

೪೮. ಆ ರಾಜನಿಗೆ ಹೇಗಾದರೂ ಹಗಲು ಕಳೆದರೂ ಶರತ್ಕಾಲದ ರಾತ್ರಿಯು ಕಳೆಯಲೇ ಇಲ್ಲ.

೪೯. ಬಳಿಕ ಬೆಳಗ್ಗೆ ರಾಜನು ಎದ್ದು ಆಪ್ತಪುರುಷರಿಂದ ಶಾಕಲ್ಯನನ್ನು ಕರೆಯಿಸಿದನು.

೫೦–೫೧. ಅವನು ವಿನಯದಿಂದ ಕೈಮುಗಿದುಕೊಂಡು ನಿಂತು ನಿನ್ನೆ ಬೆಳಗ್ಗೆ ನನ್ನ ಹತ್ತಿರಕ್ಕೆ ಶಾಂತಿಗಾಗಿ ಬಂದ ಶಿಷ್ಯನನ್ನು ಈ ದಿನವೂ ಕಳುಹಿಸು. ಅವನಲ್ಲಿ ನನಗೆ ಅತಿಶಯ ಭಕ್ತಿಯುಂಟಾಗಿದೆ ಎಂದನು.

ಸ ತಥೇತಿ ಪ್ರತಿಜ್ಞಾಯ ಗತ್ವಾಽಥ ನಿಜಮಂದಿರಂ ।
ಪ್ರೋವಾಚ ಯಾಜ್ಞವಲ್ಕ್ಯಂ ಚ ಶಾಂತ್ಯರ್ಥಂ ಶ್ಲಕ್ಷ್ಣಯಾ ಗಿರಾ ॥ ೫೨ ॥
ಗಚ್ಛ ವತ್ಸ ತ್ವಮದ್ಯೈವ ಪಾರ್ಥಿವಸ್ಯ ನಿವೇಶನಂ ।
ಶಾಂತ್ಯರ್ಥಂ ತೇನ ಭೂಯೋಽಪಿ ತ್ವಮೇವಾಽಶು ನಿಮಂತ್ರಿತಃ ॥ ೫೩ ॥

ಯಾಜ್ಞವಲ್ಕ್ಯ ಉವಾಚ :—

ನಾಽಹಂ ಯಾಸ್ಯಾಮಿ ತದ್ಧರ್ಮ್ಯೇ ಶಾಂತ್ಯರ್ಥಂ ದ್ವಿಜಪುಂಗವ ।
ಅನಾದರೇಣ ದೃಷ್ಟೋಽಹಂ ನಾಽಶೀರ್ನೋ ಚ ಸಮಾಹೃತಾ ॥ ೫೪ ॥
ಕಾಷ್ಠೋಪರಿ ಮಯಾ ದತ್ತಾ ತಸ್ಯ ವಾಕ್ಯಾದಸಂಶಯಂ ।
ತಸ್ಮಾತ್ಪ್ರೇಷಯ ಚಾಽನ್ಯಂ ತ್ವಂ ಗುರೋ ಶಿಷ್ಯಂ ವಿಚಕ್ಷಣಂ ।
ಆನರ್ತಂ ರಂಜಯೇದ್ಯಸ್ತು ವಿವೇಕೇನ ಸಮನ್ವಿತಂ ॥ ೫೫ ॥

ಶಾಕಲ್ಯ ಉವಾಚ :—

ರಾಜಾಽಽದೇಶಃ ಸದಾ ಕಾರ್ಯಃ ಪುರುಷೈರ್ದೇಶವಾಸಿಭಿಃ ।
ಯೋಗಕ್ಷೇಮವಿಧಾನಾಯ ತಥಾ ಲಾಭಾಯ ಕೇವಲಂ ॥ ೫೬ ॥
ಪ್ರತಿಕೂಲೋ ಭವೇದ್ಯಸ್ತು ಪಾರ್ಥಿವಾನಾಂ ಸ ಮಂದಧೀಃ ।
ನ ತಸ್ಯ ಜಾಯತೇ ಸೌಖ್ಯಂ ಕಥಂಚಿದ್ದ್ವಿಜಸತ್ತಮ ॥ ೫೭ ॥
ಯೇ ಜಾತ್ಯಾದಿ ಮಹೋತ್ಸೇಕಾನ್ನ ನರೇಂದ್ರಾನುಪಾಸತೇ ।
ತೇಷಾಮಾಮರಣಂ ಭಿಕ್ಷಾ ಪ್ರಾಯಶ್ಚಿತ್ತಂ ವಿನಿರ್ಮಿತಂ ॥ ೫೮ ॥

---

೫೨. ಅವನು ಹಾಗೆಯೇ ಆಗಲೆಂದು ಒಪ್ಪಿ ತನ್ನ ಮನೆಗೆ ಹೋಗಿ ಯಾಜ್ಞವಲ್ಕ್ಯನನ್ನು ಕುರಿತು ಮೃದುವಚನದಿಂದ ಇಂತೆಂದನು.

೫೩. "ಮಗು! ನೀನು ಈಗಲೇ ದೊರೆಯ ಮನೆಗೆ ಹೋಗು. ಅವನು ಮರಳಿ ನಿನ್ನನ್ನೇ ಶಾಂತಿಗಾಗಿ ಕರೆದಿರುವನು."

೫೪. ಯಾಜ್ಞವಲ್ಕ್ಯನು ಹೇಳುತ್ತಾನೆ:—ದ್ವಿಜವರ್ಯನೆ! ನಾನು ಶಾಂತಿ ಕರ್ಮಕ್ಕಾಗಿ ಅವನ ಮನೆಗೆ ಹೋಗುವುದಿಲ್ಲ. ಅವನು ನನ್ನನ್ನು ಅನಾದರದಿಂದ ನೋಡಿರುವನು. ನನ್ನ ಆಶೀರ್ವಾದವನ್ನು ಸ್ವೀಕರಿಸಲಿಲ್ಲ.

೫೫. ಅವನ ಮಾತಿನಂತೆ ನಾನು ಕಟ್ಟಿಗೆಯ ಮೇಲೆ ಅಕ್ಷತೋದಕವನ್ನು ಚಿಮುಕಿಸಿದೆನು. ಆದುದರಿಂದ ಗುರುವೆ! ನೀನು ಆ ಆನರ್ತನನ್ನು ಸಂತೋಷ ಗೊಳಿಸುವ ವಿವೇಕವುಳ್ಳ ಇತರ ಶಿಷ್ಯನನ್ನು ಕಳುಹಿಸು.

೫೬–೫೭. ಶಾಕಲ್ಯನು ಹೇಳುತ್ತಾನೆ:—ದೇಶವಾಸಿಗಳಾದ ಪ್ರಜೆಗಳು ಯಾವಾಗಲೂ ಯೋಗಕ್ಷೇಮಕ್ಕಾಗಿಯೂ, ಲಾಭಕ್ಕಾಗಿಯೂ ರಾಜನ ಅಪ್ಪಣೆಯನ್ನು ನೆರವೇರಿಸಬೇಕು. ರಾಜರಿಗೆ ವಿರುದ್ಧನಾದ ಮೂಢನಿಗೆ ಹೇಗೂ ಸೌಖ್ಯವುಂಟಾಗುವುದಿಲ್ಲ.

೫೮. ಉತ್ತಮ ಜಾತಿಯವನೆಂದು ಅಹಂಕಾರದಿಂದ ರಾಜರನ್ನು ಸೇವಿಸದ ಮಾನವರಿಗೆ ಸಾಯುವವರೆಗೆ ಭಿಕ್ಷಾಟನೆಯೇ ಪ್ರಾಯಶ್ಚಿತ್ತವಾಗಿರುವುದು.

ಏವಂ ತಯೋರ್ವಿವದತೋಸ್ತದಾ ವೈ ಗುರುಶಿಷ್ಯಯೋಃ ।
ಭೂಯೋಽಪಿ ತತ್ರ ಸಂಪ್ರಾಪ್ತಾಃ ಪುರುಷಾಃ ಪಾರ್ಥಿವೇರಿತಾಃ ॥ ೫೯ ॥
ಪ್ರೋಚುಶ್ಚ ತ್ವರಯಾ ಯುಕ್ತಾಃ ಶಾಕಲ್ಯಂ ಪ್ರಾಂಜಲಿಸ್ಥಿತಾಃ ।
ಶಿಷ್ಯಂ ತಂ ಪ್ರೇಷಯ ಕ್ಷಿಪ್ರಂ ರಾಜಾ ಮಾರ್ಗಂ ಪ್ರತೀಕ್ಷತೇ ॥ ೬೦ ॥
ಅಸಕೃತ್ಪ್ರೇಚ್ಯಮಾನೋಽಪಿ ಯದಾ ಗಚ್ಛತಿ ನೈವ ಸಃ ।
ತದಾ ಸಂಪ್ರೇಷಯಾಮಾಸ ಉದ್ದಾಲಕಮಥಾರುಣಿಂ ॥ ೬೧ ॥
ಶಿಷ್ಯಂ ವಿನಯಸಂಪನ್ನಂ ಕೃತಾಂಜಲಿಪುಟಂ ಸ್ಥಿತಂ ।
ಗಚ್ಛ ವತ್ಸ ಸಮಾದೇಶಾತ್ಸಾಂಪ್ರತಂ ನೃಪಮಂದಿರಂ ॥ ೬೨ ॥
ಶಾಂತಿಕರ್ಮ ವಿಧಾಯಾಽಥ ಸ್ವಾಧ್ಯಾಯಂ ಚ ತತಃ ಕುರು ॥ ೬೩ ॥
ಸ ತಥೇತಿ ಪ್ರತಿಜ್ಞಾಯ ಗತ್ವಾ ತಂ ಪಾರ್ಥಿವಾಲಯಂ ।
ಚಕಾರ ಶಾಂತಿಕಂ ಕರ್ಮ ವಿಧಿದೃಷ್ಟೇನ ಕರ್ಮಣಾ ॥ ೬೪ ॥
ತತಃ ಕಲಶ ತೋಯಂ ಸ ಸಾಕ್ಷತಂ ಸುಮನೋಽನ್ವಿತಂ ।
ಗೃಹೀತ್ವೋಪಾದ್ರವತ್ತತ್ರ ಯತ್ರ ರಾಜಾ ವ್ಯವಸ್ಥಿತಃ ॥ ೬೫ ॥

ರಾಜೋವಾಚ :—

ಸ್ವಕೀಯ ಮಂತ್ರಲಿಂಗೇನ ಅಭಿಷೇಕಂ ತು ಯಚ್ಛ ಭೋಃ ।
ಕಾಷ್ಠಸ್ಯಾಽಸ್ಯ ಯದಗ್ರೇ ತೇ ಪ್ರೋತ್ಥಿತಂ ತಿಷ್ಠತೇ ದ್ವಿಜ ॥ ೬೬ ॥

---

೫೯. ಹೀಗೆ ಆ ಗುರು ಶಿಷ್ಯರು ವಿವಾದಮಾಡುತ್ತಿರಲು ಮರಳಿ ರಾಜನು ಕಳುಹಿಸಿದ ಜನರು ಬಂದರು.

೬೦. ಅವರು ತ್ವರೆಯಿಂದ ಶಾಕಲ್ಯನನ್ನು ಕುರಿತು ಕೈಮುಗಿದುಕೊಂಡು ಆ ಶಿಷ್ಯನನ್ನು ಕಳುಹಿಸು; ರಾಜನು ಮಾರ್ಗವನ್ನು ಕಾಯುತ್ತಿದ್ದಾನೆ ಎಂದರು.

೬೧–೬೩. ಶಾಕಲ್ಯನು ಅನೇಕ ಬಾರಿ ಹೇಳಿದರೂ ಆ ಯಾಜ್ಞವಲ್ಕ್ಯನು ರಾಜನೆಡೆಗೆ ಹೋಗದಿರಲು, ವಿನೀತನೂ, ಕೈಮುಗಿದು ನಿಂತಿರುವವನೂ ಆದ ಆರುಣಿ ಉದ್ದಾಲಕನನ್ನು ಕುರಿತು, ಮಗು! ಈಗ ನನ್ನ ಅಪ್ಪಣೆಯಿಂದ ರಾಜನ ಮನೆಗೆ ಹೋಗಿ ಶಾಂತಿಕರ್ಮವನ್ನು ಮಾಡಿ ಬಂದು ವೇದಾಧ್ಯಯನ ಮಾಡು ಎಂದು ಹೇಳಿಕಳುಹಿಸಿದನು.

೬೪. ಅವನು ಹಾಗೆಯೇ ಆಗಲೆಂದು ಒಪ್ಪಿ ಆ ರಾಜನ ಮನೆಗೆ ಹೋಗಿ ವಿಧಿಯಂತೆ ಶಾಂತಿಕರ್ಮವನ್ನು ಮಾಡಿದನು.

೬೫. ಬಳಿಕ ರಾಜನೆಡೆಗೆ ಅಕ್ಷತ ಪುಷ್ಪಗಳಿಂದ ಸಹಿತವಾದ ಕಲಶೋದಕವನ್ನು ತೆಗೆದುಕೊಂಡುಹೋದನು.

೬೬. ರಾಜನು ಹೇಳುತ್ತಾನೆ:—ದ್ವಿಜನೆ! ಮುಂದೆ ಇರುವ ಈ ಕಾಷ್ಠಕ್ಕೆ ಮಂತ್ರದಿಂದ ಅಭಿಷೇಕ ಮಾಡು.

ತತಸ್ತೇನ ಶುಭಂ ಮಂತ್ರಂ ಪ್ರೋಚ್ಯಾಽಭಿಷ್ಟಂ ಜಲಂ ಸ್ವಯಂ ।
ಅಭಿಷಿಚ್ಯ ಚ ತತ್ಕಾಷ್ಠಂ ತತಶ್ಚ ಸ್ವಗೃಹಂ ಯಯೌ ॥ ೬೭ ॥
ತಾವದ್ರೂಪಂ ಚ ತತ್ಕಾಷ್ಠಂ ದೃಷ್ಟ್ವಾಽಽನರ್ತೋ ಮಹೀಪತಿಃ ।
ವಿಷಾದಸಹಿತಶ್ಚೈವ ಪಶ್ಚಾತ್ತಾಪಸಮನ್ವಿತಃ ॥ ೬೮ ॥
ಭೂಯಸ್ತು ಪ್ರೇಷಯಾಮಾಸ ಯಾಜ್ಞವಲ್ಕ್ಯಕೃತೇ ತದಾ ।
ಅನ್ಯಂ ದೂತಂ ವಿದಗ್ಧಂ ಚ ಶಾಕಲ್ಯಸ್ಯ ದ್ವಿಜಾಶ್ರಯಂ ॥ ೬೯ ॥
ವೇದನಾ ಕಾಯಸಂಸ್ಥಾ ಮೇ ವರ್ತತೇ ದ್ವಿಜಸತ್ತಮ ।
ಶಾಂತ್ಯರ್ಥಂ ಪ್ರೇಷಯ ಕ್ಷಿಪ್ರಂ ತಂ ಶಿಷ್ಯಂ ಪೂರ್ವಸಂಚಿತಂ ॥ ೭೦ ॥
ಅಪಮಾನಂ ಕೃತಂ ತಸ್ಯ ಮಯಾ ಕಲ್ಯೇ ದ್ವಿಜೋತ್ತಮ ।
ತೇನ ಮೇ ನ ಸಹಸಾ ವ್ಯಾಧಿರಾಶೀರ್ವಾದಮನಿಚ್ಛತಃ ॥ ೭೧ ॥
ತಸ್ಮಾತ್ಪ್ರೇಷಯ ಮೇ ಶೀಘ್ರಂ ಯೇನ ಮೇ ಸ್ವಸ್ಥತಾ ಭವೇತ್ ।
ಅಸಕೃತ್ಪ್ರೋಚ್ಯಮಾನೋಽಪಿ ಯದಾ ನೈವ ಸ ಗಚ್ಛತಿ ॥ ೭೨ ॥
ಯಾಜ್ಞವಲ್ಕ್ಯಸ್ತತಃ ಶಿಷ್ಯಮನ್ಯಂ ಪ್ರೋವಾಚ ಸಾದರಂ ।
ತತಸ್ತಂ ಮಧುಕಂ ಪೈಂಗ್ಯಂ ಪ್ರೇಷಯಾಮಾಸ ತದ್ಗೃಹೇ ॥ ೭೩ ॥
ತೇನಾಽಪಿ ವಿಹಿತಂ ತಚ್ಚ ಯಥೋದ್ದಾಲಕನಿರ್ಮಿತಂ ।
ಆಶೀರ್ವಾದೋ ನೃಪೋದ್ದೇಶಾದ್ದತ್ತಃ ಕಾಷ್ಠಸ್ಯ ತಸ್ಯ ಚ ॥ ೭೪ ॥

---

೬೭. ಅದರಂತೆ ಉದ್ದಾಲಕನು ಮಂಗಳಕರವಾದ ಮಂತ್ರವನ್ನು ಉಚ್ಚರಿಸಿ ಜಲದಿಂದ ಕಾಷ್ಠಕ್ಕೆ ಅಭಿಷೇಕ ಮಾಡಿ ತನ್ನ ಮನೆಗೆ ಹೋದನು.

೬೮. ಆನರ್ತರಾಜನು ಆ ಕಾಷ್ಠವು ಹಾಗೆಯೇ ಇರುವುದನ್ನು ಕಂಡು ವಿಷಾದ ಪಶ್ಚಾತ್ತಾಪಗಳಿಂದ ಕೂಡಿ ಮರಳಿ ಯಾಜ್ಞವಲ್ಕ್ಯನಿಗಾಗಿ ಕುಶಲನಾದ ದೂತನನ್ನು ಶಾಕಲ್ಯನೆಡೆಗೆ ಹೀಗೆ ಹೇಳಿಕಳುಹಿಸಿದನು.

೬೯. "ದ್ವಿಜವರ್ಯನೆ! ನನ್ನ ಶರೀರದಲ್ಲಿ ವೇದನೆಯುಂಟಾಗಿದೆ. ಅದರ ಶಾಂತಿಗಾಗಿ ಹಿಂದೆ ಬಂದ ಶಿಷ್ಯನನ್ನು ಶೀಘ್ರವಾಗಿ ಕಳುಹಿಸು.

೭೦. ದ್ವಿಜವರ್ಯನೆ! ನಾನು ಅವನಿಗೆ ನಿನ್ನೆ ಅಪಮಾನ ಮಾಡಿದ್ದೇನೆ. ಅವನ ಆಶೀರ್ವಾದವನ್ನು ಇಚ್ಛಿಸದಿರುವ ನನಗೆ ಕೂಡಲೆ ವ್ಯಾಧಿಯುಂಟಾಗಿದೆ.

೭೧–೭೩. ಆದುದರಿಂದ ನನಗೆ ಸ್ವಾಸ್ಥ್ಯವುಂಟಾಗುವುದಕ್ಕಾಗಿ ಆ ಶಿಷ್ಯನನ್ನು ಬೇಗನೆ ಕಳುಹಿಸು." ಅದರಂತೆ ಶಾಕಲ್ಯನು ಆ ಯಾಜ್ಞವಲ್ಕ್ಯನಿಗೆ ಅನೇಕ ಸಾರಿ ಹೇಳಿದರೂ ಹೋಗದಿರಲು ಮತ್ತೊಬ್ಬ ಮಧುಕಪೈಂಗ್ಯನನ್ನು ರಾಜನ ಮನೆಗೆ ಕಳುಹಿಸಿದನು.

೭೪. ಆ ಪೈಂಗ್ಯನೂ ಉದ್ದಾಲಕನು ಮಾಡಿದಂತೆಯೇ ರಾಜನ ಅಪ್ಪಣೆ ಯಿಂದ ಆ ಕಾಷ್ಠಕ್ಕೆ ಆಶೀರ್ವಾದ ಮಾಡಿದನು.

ತದ್ರೂಪಮಪಿ ತತ್ಕಾಷ್ಠಂ ದೃಷ್ಟ್ವಾ ಭೂಯೋಽಪಿ ಪಾರ್ಥಿವಃ ।
ಅನ್ಯಂ ಸಂಪ್ರೇಷಯಾಮಾಸ ಯಾಜ್ಞವಲ್ಕ್ಯ ಕೃತೇ ನರಂ ॥ ೭೫ ॥
ಅಸಕೃತ್ಪ್ರೋಚ್ಯಮಾನೋಽಪಿ ಯಾಜ್ಞವಲ್ಕ್ಯೋ ವ್ರಜೇನ್ನ ಹಿ ।
ಯದಾ ತದಾ ಬಹುಗುಣಮನ್ಯಂ ಶಿಷ್ಯಂ ಪ್ರದಿಷ್ಟವಾನ್ ॥ ೭೬ ॥
ಪ್ರಚೂಡಂ ಭಾಗವಿತ್ತಿಂ ಚ ಸೋಽಪಿ ಗತ್ವಾ ಯಥಾ ಪುರಾ ।
ಚಕಾರ ಶಾಂತಿಕಂ ಕರ್ಮ ಯಥಾ ತಾಭ್ಯಾಂ ಪುರಾ ಕೃತಂ ॥ ೭೭ ॥
ತತಃ ಶಾಂತ್ಯುದಕಂ ತಸ್ಮಿನ್ ಪ್ರಾಕ್ಷಿಪಚ್ಚೈವ ದಾರುಣಿ ।
ಮಂತ್ರವಚ್ಚ ತಥಾಽಪ್ಯೇವ ತದ್ರೂಪಂ ಚ ವ್ಯವಸ್ಥಿತಂ ॥ ೭೮ ॥
ತತಃ ಸ್ವಯಂ ಯಯೌ ರಾಜಾ ಶಾಕಲ್ಯಸ್ಯ ನಿವೇಶನಂ ।
ಯಾಜ್ಞವಲ್ಕ್ಯಸ್ಯ ಮಂತ್ರಾರ್ಥಂ ಪಶ್ಚಾತ್ತಾಪಸಮನ್ವಿತಃ ॥ ೭೯ ॥
ಪ್ರಣಮ್ಯ ಸ ದ್ವಿಜಶ್ರೇಷ್ಠಃ ಶಾಕಲ್ಯಂ ಚ ದ್ವಿಜೋತ್ತಮಂ ।
ಶಾಂತ್ಯರ್ಥಂ ಮಮ ಹರ್ಮ್ಯೇ ತ್ವಂ ಕಲ್ಯೇ ಶಿಷ್ಯಂ ಸಮಾದಿಶ ।
ಯೇನ ಮೇ ಜಾಯತೇ ಶಾಂತಿಃ ಶರೀರಸ್ಯ ದ್ವಿಜೋತ್ತಮ ॥ ೮೦ ॥
ತತಃ ಪ್ರೋವಾಚ ಶಾಕಲ್ಯೋ ಯಾಜ್ಞವಲ್ಕ್ಯಂ ದ್ವಿಜೋತ್ತಮಾಃ ।
ಭೂಯೋಽಪಿ ಶೃಣ್ವತಸ್ತಸ್ಯ ಆನರ್ತಸ್ಯ ಮಹೀಪತೇಃ ॥ ೮೧ ॥
ಯಾಜ್ಞವಲ್ಕ್ಯ ದ್ರುತಂ ಗಚ್ಛ ಮಮಾದೇಶಾನ್ನೃಪಾಲಯಂ ।
ರಾಜ್ಞೋಽಸ್ಯ ರೋಗನಾಶಾಯ ಶಾಂತಿಕಂ ಕುರು ಪುತ್ರಕ ॥ ೮೨ ॥

---

೭೫. ದೊರೆಯು ಮೊದಲಿನಂತೆಯೇ ಇರುವ ಆ ಕಾಷ್ಠವನ್ನು ನೋಡಿ ಯಾಜ್ಞವಲ್ಕ್ಯನಿಗಾಗಿ ಬೇರೆ ಮನುಷ್ಯನನ್ನು ಕಳುಹಿಸಿದನು.

೭೬–೭೮. ಅನೇಕ ಬಾರಿ ಹೇಳಿದರೂ ಯಾಜ್ಞವಲ್ಕ್ಯನು ಹೋಗದಿರಲು ಶಾಕಲ್ಯನು ಅಧಿಕಗುಣವುಳ್ಳ ಪ್ರಚೂಡಭಾಗವಿತ್ತಿಯೆಂಬ ಇನ್ನೊಬ್ಬ ಶಿಷ್ಯನನ್ನು ಕಳುಹಿಸಿದನು. ಅವನು ರಾಜನ ಮನೆಗೆ ಹೋಗಿ ಹಿಂದಿನವರು ಮಾಡಿದಂತೆಯೇ ಶಾಂತಿಕರ್ಮವನ್ನು ನೆರವೇರಿಸಿ ಆ ಕಾಷ್ಠದಲ್ಲಿ ಮಂತ್ರದಿಂದ ಶಾಂತ್ಯುದಕವನ್ನು ಚಿಮುಕಿಸಿದನು. ಆದರೂ ಆ ಕಾಷ್ಠವು ಹಾಗೆಯೇ ಇದ್ದಿತು.

೭೯. ಬಳಿಕ ದೊರೆಯು ಪಶ್ಚಾತ್ತಾಪಗೊಂಡು ಯಾಜ್ಞವಲ್ಕ್ಯನನ್ನು ಕರೆಯುವುದಕ್ಕಾಗಿ ತಾನೇ ಆ ಶಾಕಲ್ಯನ ಮನೆಗೆ ಹೋದನು.

೮೦. ಅವನು ಆ ಶಾಕಲ್ಯನನ್ನು ವಂದಿಸಿ, ದ್ವಿಜವರ್ಯನೆ! ಶಾಂತಿಕರ್ಮಕ್ಕಾಗಿ ಆ ಹಿಂದೆ ಬಂದ ಶಿಷ್ಯನನ್ನೇ ಕಳುಹಿಸು. ಅವನಿಂದ ನನ್ನ ಶರೀರಕ್ಕೆ ಶಾಂತಿಯುಂಟಾಗುವುದು ಎಂದನು.

೮೧–೮೨. ದ್ವಿಜವರ್ಯರೆ! ಬಳಿಕ ಶಾಕಲ್ಯನು ಯಾಜ್ಞವಲ್ಕ್ಯನನ್ನು ಕುರಿತು ಆನರ್ತರಾಜನು ಕೇಳುತ್ತಿರುವಾಗಲೆ ಯಾಜ್ಞವಲ್ಕ್ಯ! ನನ್ನ ಅಪ್ಪಣೆಯಂತೆ

ಯಾಜ್ಞವಲ್ಕ್ಯ ಉವಾಚ:—

ನಾಽಹಂ ತತ್ರ ಗಮಿಷ್ಯಾಮಿ ಗುರೋ ಮೈವಂ ಬ್ರವೀಹಿ ಮಾಂ ।
ಅಪಮಾನಃ ಕೃತೋಽನೇನ ಗುರೋ ಮಮ ಮಹೀಭುಜಾ ॥ ೮೩ ॥
ತಸ್ಯ ತದ್ವಚನಂ ಶ್ರುತ್ವಾ ಸ ಕೋಪಂ ಪರಮಂ ಗತಃ ।
ಅಬ್ರವೀತ್ಭರ್ತ್ಸಮಾನಸ್ತು ಯಾಜ್ಞವಲ್ಕ್ಯಂ ತತಃ ಪರಂ ॥ ೮೪ ॥
ಏಕಮಪ್ಯಕ್ಷರಂ ಯಸ್ತು ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಽಸ್ತಿ ತದ್ದ್ರವ್ಯಂ ಯದ್ದತ್ವಾ ಚಾಽನೃಣೀ ಭವೇತ್ ॥ ೮೫ ॥
ಯಸ್ಮಾತ್ತ್ವಂ ಶಿಷ್ಯತಾಂ ಗತ್ವಾ ಮಮ ವಾಕ್ಯಂ ಕರೋಷಿ ನ ।
ತಸ್ಮಾತ್ತ್ವಾಂ ಯೋಜಯಿಷ್ಯಾಮಿ ಬ್ರಹ್ಮಶಾಪೇನ ಸಾಂಪ್ರತಂ ॥ ೮೬ ॥

ಯಾಜ್ಞವಲ್ಕ್ಯ ಉವಾಚ:—

ಅನ್ಯಾಯೇನ ಹಿ ಚೇಚ್ಛಾಪಂ ಗುರೋ ಮಮ ಪ್ರದಾಸ್ಯಸಿ ।
ಅಹಮಪ್ಯೇವ ದಾಸ್ಯಾಮಿ ಪ್ರತಿಶಾಪಂ ತವಾಽಧುನಾ ॥ ೮೭ ॥
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।
ಉತ್ಪಥೇ ವರ್ತಮಾನಸ್ಯ ಪರಿತ್ಯಾಗೋ ವಿಧೀಯತೇ ॥ ೮೮ ॥

---

ರಾಜನ ಮನೆಗೆ ಹೋಗಿ ಅವನ ರೋಗಪರಿಹಾರಕ್ಕಾಗಿ ಶಾಂತಿಕರ್ಮವನ್ನು ಮಾಡು ಎಂದನು.

೮೩. ಯಾಜ್ಞವಲ್ಕ್ಯನು ಹೇಳುತ್ತಾನೆ:— ಗುರುಗಳೆ! ನಾನು ಅಲ್ಲಿಗೆ ಹೋಗುವುದಿಲ್ಲ. ನನಗೆ ಹೀಗೆ ಹೇಳಬೇಡಿರಿ. ಈ ರಾಜನು ನನಗೆ ಅಪಮಾನ ಮಾಡಿದ್ದಾನೆ.

೮೪. ಶಾಕಲ್ಯನು ಅವನ ಆ ಮಾತನ್ನು ಕೇಳಿ ಅತ್ಯಂತ ಕ್ರುದ್ಧನಾಗಿ ಅವನನ್ನು ಗದರಿಸುತ್ತ ಇಂತೆಂದನು.

೮೫. ಒಂದು ಅಕ್ಷರವನ್ನಾದರೂ ಉಪದೇಶಮಾಡಿದ ಗುರುವಿಗೆ ಪ್ರತಿಯಾಗಿ ಕೊಟ್ಟು ಆನೃಣ್ಯವನ್ನು ಹೊಂದಲು ಲೋಕದಲ್ಲಿ ಯಾವ ದ್ರವ್ಯವೂ ಇಲ್ಲ.

೮೬. ನೀನು ನನ್ನ ಶಿಷ್ಯನಾಗಿ ಮಾತನ್ನು ಕೇಳದಿರುವುದರಿಂದ ನಿನಗೆ ಈಗ ಶಾಪವನ್ನು ಕೊಡುವೆನು.

೮೭. ಯಾಜ್ಞವಲ್ಕ್ಯನು ಹೇಳುತ್ತಾನೆ:—ಗುರುಗಳೆ! ನನಗೆ ಅನ್ಯಾಯದಿಂದ ನೀವು ಶಾಪವನ್ನು ಕೊಡುವುದಾದರೆ ನಾನೂ ನಿಮಗೆ ಪ್ರತಿಶಾಪವನ್ನು ಕೊಡುವೆನು.

೮೮. ಅಹಂಕಾರಗೊಂಡವನೂ, ಕಾರ್ಯಾಕಾರ್ಯವನ್ನರಿಯದವನೂ, ದುರ್ಮಾರ್ಗದಲ್ಲಿ ನಡೆಯುವವನೂ ಆದ ಗುರುವನ್ನು ತ್ಯಜಿಸಬೇಕು.

ತಸ್ಮಾತ್ತ್ವಂ ಹಿ ಮಯಾ ತ್ಯಕ್ತಃ ಸಾಂಪ್ರತಂ ಹಿ ನ ಮೇ ಗುರುಃ ।
ಅವಶೇಷೇಣ ಶಿಷ್ಯಾರ್ಥಂ ಯದಾದೇಶಂ ಪ್ರಯಚ್ಛಸಿ ॥ ೮೯ ॥
ಯಾವಂತಸ್ತೇ ಸ್ಥಿತಾಃ ಶಿಷ್ಯಾಸ್ತಾವದ್ಭಿರ್ದಿವಸೈರಹಂ ।
ತವಾಽಽದೇಶಂ ಕರಿಷ್ಯಾಮಿ ನೋ ಚೇದ್ಯಾಸ್ಯಾಮಿ ದೂರತಃ ॥ ೯೦ ॥

ಶಾಕಲ್ಯ ಉವಾಚ :—

ಯದಿ ಗಚ್ಛಸಿ ಚಾಽನ್ಯತ್ರ ತತ್ತ್ವಂ ವಿದ್ಯಾಂ ಪರಿತ್ಯಜ ।
ಯಾಂ ಮಯಾ ಪಾಠಿತಃ ಪಾಪ ವ್ರಜ ಪಶ್ಚಾತ್ಕುಶಿಷ್ಯ ಭೋಃ ॥ ೯೧ ॥
ಮಯಾಽಭಿಮಂತ್ರಿತಂ ತೋಯಂ ಕ್ಷುರಿಕಾಮುಂಡ ಸಂಭವಂ ।
ಪಿಬ ತಸ್ಯಾಃ ಪ್ರಭಾವೇಣ ಶೀಘ್ರಮೇವ ತ್ಯಜಿಷ್ಯಸಿ ।
ಜಠರಾನ್ಮಾಮಕೀಂ ವಿದ್ಯಾಂ ತ್ವಯಾಽಧೀತಾ ಪುರಾ ತು ಯಾ ॥ ೯೨ ॥
ಏವಮುಕ್ತ್ವಾ ಸ ಚಾಽಽಮಂತ್ರ್ಯ ಮಂತ್ರೈರಾಥರ್ವಣೈರ್ಜಲಂ ।
ಪಾನಾಯ ಪ್ರದದೌ ತಸ್ಮೈ ವಾಂತ್ಯರ್ಥಂ ಸ ದ್ವಿಜೋತ್ತಮಃ ॥ ೯೩ ॥
ಯಾಜ್ಞವಲ್ಕ್ಯೋಽಪಿ ತತ್ಪೀತ್ವಾ ಜಲಂ ತೇನಾಽಭಿಮಂತ್ರಿತಂ ।
ವಾಂತಿಂ ಕೃತ್ವಾ ಸಹಾಽನ್ನೇನ ತದ್ವಿದ್ಯಾಂ ತಾಂ ಪರಿತ್ಯಜತ್ ॥ ೯೪ ॥
ತತೋ ಮೂಢತ್ವಮಾಪನ್ನೋ ವಿಶ್ವಾಮಿತ್ರಹ್ರದಂ ಶುಭಂ ।
ಗತ್ವಾ ಸ್ನಾತೋ ವಿಧಾನೇನ ಶುಚಿರ್ಭೂತ್ವಾ ಸಮಾಹಿತಃ ॥ ೯೫ ॥

---

೮೯. ಆದುದರಿಂದ ನಾನು ನಿನ್ನನ್ನು ಈಗ ತ್ಯಜಿಸಿರುವೆನು. ಶಿಷ್ಯನಿಗೆ ವಿಶೇಷವನ್ನರಿಯದೆ ಅಪ್ಪಣೆ ಮಾಡುವುದರಿಂದ ನೀನು ನನಗೆ ಗುರುವಲ್ಲ.

೯೦. ನಿನಗೆ ಎಷ್ಟುಮಂದಿ ಶಿಷ್ಯರಿರುವರೊ, ಅಷ್ಟುದಿವಸ ನಾನು ನಿನ್ನ ಅಪ್ಪಣೆಯನ್ನು ಮಾಡುವೆನು. ಹಾಗಿಲ್ಲದಿದ್ದರೆ ದೂರ ಹೋಗುವೆನು.

೯೧. ಶಾಕಲ್ಯನು ಹೇಳುತ್ತಾನೆ:—ದುಷ್ಟ ಶಿಷ್ಯನೆ! ನೀನು ಇತರ ಕಡೆಗೆ ಹೋಗುವುದಾದರೆ ನಾನು ಹೇಳಿಕೊಟ್ಟ ವಿದ್ಯೆಯನ್ನು ತ್ಯಜಿಸಿ ಅನಂತರ ಹೋಗು.

೯೨. ನಾನು ಅಭಿಮಂತ್ರಿಸಿದ ಚೂರಿಯ ಮುಂಡದಿಂದುಂಟಾದ ನೀರನ್ನು ಕುಡಿ. ಅದರ ಪ್ರಭಾವದಿಂದ ಶೀಘ್ರವಾಗಿ ನನ್ನಿಂದ ಅಧ್ಯಯನಮಾಡಿದ ವಿದ್ಯೆಯನ್ನು ಹೊಟ್ಟೆಯಿಂದ ತ್ಯಜಿಸುವೆ.

೯೩. ಆ ಶಾಕಲ್ಯನು ಹೀಗೆ ಹೇಳಿ, ಅಥರ್ವಣ ಮಂತ್ರಗಳಿಂದ ನೀರನ್ನು ಮಂತ್ರಿಸಿ ವಮನಮಾಡುವುದಕ್ಕಾಗಿ ಕುಡಿಯಲು ಅವನಿಗಿತ್ತನು.

೯೪. ಯಾಜ್ಞವಲ್ಕ್ಯನೂ ಆ ಅಭಿಮಂತ್ರಿಸಿದ ನೀರನ್ನು ಕುಡಿದು ಅನ್ನದೊಡನೆ ಆ ವಿದ್ಯೆಯನ್ನೂ ತ್ಯಜಿಸಿದನು.

೯೫–೯೭. ಬಳಿಕ ಯಾಜ್ಞವಲ್ಕ್ಯನು ಮೂಢನಾಗಿ ಮಂಗಳಕರವಾದ ವಿಶ್ವಾಮಿತ್ರನ ಹ್ರದವನ್ನು ಪ್ರವೇಶಿಸಿ ವಿಧಿಯಂತೆ ಮಿಂದು ಶುದ್ಧನಾಗಿ ಧಾತಾ,

ಚಕಾರ ಮೂರ್ತೀಸ್ತ್ರು ಭಕ್ತ್ಯಾ ರವೇರ್ದ್ವಾದಶ ಸಂಖ್ಯಯಾ ।
ಪ್ರತಿಷ್ಠಾಪ್ಯ ತತಃ ಸರ್ವಾಃ ಪೂಜಯಾಮಾಸ ಭಕ್ತಿತಃ ॥ ೯೬ ॥
ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಃ ಸಾಂಬ ಏವ ಚ ।
ಭಗೋ ವಿವಸ್ವಾನ್ ಪೂಷಾ ಚ ಸವಿತಾ ದಶಮಸ್ತಥಾ ।
ಏಕಾದಶಸ್ತಥಾ ತ್ವಷ್ಟಾ ವಿಷ್ಣುರ್ದ್ವಾದಶ ಉಚ್ಯತೇ ॥ ೯೭ ॥
ಏವಂ ದ್ವಾದಶಧಾ ಸೂರ್ಯಃ ಸ್ಥಾಪಿತೋಽತ್ರ ವಿಪಶ್ಚಿತಾ ।
ಆರಾಧಿತಸ್ತತೋ ನಿತ್ಯಂ ಗಂಧಪುಷ್ಪಾನುಲೇಪನೈಃ ॥ ೯೮ ॥
ತತಃ ಕಾಲೇನ ಮಹತಾ ಗತ್ವಾ ಪ್ರತ್ಯಕ್ಷತಾಂ ರವಿಃ ।
ಪ್ರೋವಾಚ ಸುಂದರಂ ಪ್ರೀತ್ಯಾ ವಾಕ್ಯಮೇತನ್ಮುನಿಂ ಪ್ರತಿ ॥ ೯೯ ॥
ಯಾಜ್ಞವಲ್ಕ್ಯ ಪ್ರತುಷ್ಟೋಽಹಂ ತವ ಬ್ರಾಹ್ಮಣಸತ್ತಮ ।
ಇಷ್ಟಂ ದದಾಮಿ ತೇ ಬ್ರೂಹಿ ಯದ್ಯತ್ಸಂಪ್ರತಿ ವಾಂಛಿತಂ ॥ ೧೦೦ ॥

ಯಾಜ್ಞವಲ್ಕ್ಯ ಉವಾಚ :—

ವರಂ ದದಾಸಿ ಚೇನ್ಮಹ್ಯಂ ವೇದಪಾಠೇ ನಿಯೋಜಯ ।
ಮಾಂ ವಿಭೋ ಯೇನ ಶಿಷ್ಯತ್ವಂ ತವ ಗಚ್ಛಾಮಿ ಸಾಂಪ್ರತಂ ॥ ೧೦೧ ॥

ಆದಿತ್ಯ ಉವಾಚ :—

ಮಯಾ ಪರ್ಯಟನಂ ಕಾರ್ಯಂ ಸದೈವ ದ್ವಿಜಸತ್ತಮ ।
ಮೇರೋಃ ಪ್ರದಕ್ಷಿಣಾರ್ಥಾಯ ಲೋಕಾಲೋಕಕೃತೇ ದ್ವಿಜ ॥ ೧೦೨ ॥
ತತ್ಕಥಂ ಯೋಜಯಾಮಿ ತ್ವಾಂ ವೇದಪಾಠೇನ ಸದ್ವಿಜ ॥ ೧೦೩ ॥

---

ಮಿತ್ರ, ಅರ್ಯಮಾ, ಶಕ್ರ, ವರುಣ, ಸಾಂಬ, ಭಗ, ವಿವಸ್ವಾನ್, ಪೂಷಾ, ಸವಿತಾ, ತ್ವಷ್ಟ, ವಿಷ್ಣು ಎಂಬ ಹನ್ನೆರಡುವಿಧ ಸೂರ್ಯರನ್ನು ಪ್ರತಿಷ್ಠೆಮಾಡಿ ಗಂಧಪುಷ್ಪಾನುಲೇಪನಗಳಿಂದ ಪೂಜಿಸಿದನು.

೯೯. ಅನಂತರ ಬಹುಕಾಲದಮೇಲೆ ಸೂರ್ಯನು ಪ್ರತ್ಯಕ್ಷನಾಗಿ ಯಾಜ್ಞವಲ್ಕ್ಯನನ್ನು ಕುರಿತು ಪ್ರೀತಿಯಿಂದ ಸವಿಯಾಗಿ ಹೀಗೆ ಮಾತಾಡಿದನು.

೧೦೦. ಬ್ರಾಹ್ಮಣವರ್ಯನಾದ ಯಾಜ್ಞವಲ್ಕ್ಯನೆ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನ್ನ ಇಷ್ಟಾರ್ಥವನ್ನು ಬೇಡು. ಈಗ ಇಷ್ಟಾರ್ಥವು ಯಾವುದೆಂಬುದನ್ನು ಹೇಳು.

೧೦೧. ಯಾಜ್ಞವಲ್ಕ್ಯನು ಹೇಳುತ್ತಾನೆ:—ಸ್ವಾಮಿ! ನೀನು ನನಗೆ ವರವನ್ನೀಯುವುದಾದರೆ ವೇದಪಾಠವನ್ನು ಹೇಳಿಕೊಡು. ನಿನಗೆ ಶಿಷ್ಯನಾಗುವೆನು.

೧೦೨—೧೦೩. ಆದಿತ್ಯನು ಹೇಳುತ್ತಾನೆ:—ದ್ವಿಜವರ್ಯನೆ! ನಾನು ಯಾವಾಗಲೂ ಮೇರುಪರ್ವತದಲ್ಲಿರುವ ಲೋಕಾಲೋಕಪರ್ವತದ ಪ್ರದಕ್ಷಿಣೆಗಾಗಿ ಸಂಚರಿಸಬೇಕು. ಆದುದರಿಂದ ನಿನಗೆ ನಾನು ಹೇಗೆ ವೇದಪಾಠವನ್ನು ಹೇಳಿಕೊಡಲಿ.

ತಸ್ಮಾತ್ತ್ವಂ ಲಘುತಾಂ ಗತ್ವಾ ಮನು ಮುಖ್ಯ ಹಯಸ್ಯಚ ।
ಶ್ರವಣೇ ತಿಷ್ಠ ಮದ್ವಾಕ್ಯಾತ್ತೇಜಸಾ ಚೈವ ಯೇನ ಮೇ ॥ ೧೦೪ ॥
ನ ದಹ್ಯಸಿ ಮಹಾಭಾಗ ತತ್ರಸ್ಥೋಽಧ್ಯಯನಂ ಕುರು ।
ಸ ತಥೇತಿ ಪ್ರತಿಜ್ಞಾಯ ಪ್ರವಿಶ್ಯಾದಿತ್ಯವಾಜಿನಃ ॥ ೧೦೫ ॥
ಕರ್ಣೇಽಪಠತ್ತತೋ ವೇದಾಂಶ್ಚತುರೋಽಪಿ ಚ ತನ್ಮುಖಾತ್ ।
ಅಂಗೋಪಾಂಗ ಸಮೋಪೇತಾನ್ ಪರಿಶಿಷ್ಟ ಸಮನ್ವಿತಾನ್ ॥ ೧೦೬ ॥
ತತಃ ಸಮಾಪ್ತೇ ಸ ಪ್ರಾಹ ಪ್ರಾರ್ಥಯ ಸ್ವವಿಭೋ ಹಿಮಾಂ ।
ಪ್ರದಾಸ್ಯಾಮಿ ನ ಸಂದೇಹಸ್ತವಾಽದ್ಯ ಗುರುದಕ್ಷಿಣಾಂ ॥ ೧೦೭ ॥

ಆದಿತ್ಯ ಉವಾಚ :—

ಯಾನಿ ಸೂಕ್ತಾನಿ ಋಗ್ವೇದೇ ಮದೀಯಾನಿ ದ್ವಿಜೋತ್ತಮ ।
ಸಾವನಾನಿ ಯಜುರ್ವೇದೇ ಸಾಮಾನಿ ಚ ತೃತೀಯಕೇ ॥ ೧೦೮ ॥
ಕಲ್ಪೋಕ್ತಾನಿ ಚತುರ್ಥೇ ಚ ತಾನಿ ಸರ್ವಾಣಿ ಭೂತಲೇ ।
ತ್ವಯಾ ಪ್ರಚಾರಣೀಯಾನಿ ಕೃತ್ವಾ ವ್ಯಾಖ್ಯಾನಮುತ್ತಮಂ ॥ ೧೦೯ ॥
ಯೇ ದ್ವಿಜಾಸ್ತಾನಿ ಸರ್ವಾಣಿ ಕೀರ್ತಯಿಷ್ಯಂತಿ ಮೇ ಪುರಃ
ತೇ ಸರ್ವೇ ಪಾಪನಿರ್ಮುಕ್ತಾಃ ಪ್ರಯಾಸ್ಯಂತಿ ದಿವಾಲಯಂ ॥ ೧೧೦ ॥

---

೧೦೪–೧೦೬. ಆದಕಾರಣ ನೀನು ಲಘುವಾಗಿ ನನ್ನ ಮಾತಿನಂತೆ ಮುಖ್ಯ ವಾದ ಕುದುರೆಯ ಕಿವಿಯ ಹತ್ತಿರ ಇರು. ಅದರಿಂದ ನೀನು ನನ್ನ ತೇಜಸ್ಸಿನಿಂದ ದಗ್ಧನಾಗುವುದಿಲ್ಲ. ಹಾಗೆಯೇ ಅಲ್ಲಿಯೇ ಅಧ್ಯಯನ ಮಾಡು. ಯಾಜ್ಞವಲ್ಕ್ಯನು ಹಾಗೆಯೇ ಆಗಲೆಂದು ಒಪ್ಪಿ ಸೂರ್ಯನ ಕುದುರೆಯ ಕಿವಿಯ ಹತ್ತಿರವಿದ್ದು ಅಂಗ, ಉಪಾಂಗ, ಪರಿಶಿಷ್ಟಗಳಿಂದ ಕೂಡಿದ ನಾಲ್ಕು ವೇದಗಳನ್ನೂ ಅವನ ಬಾಯಿಯಿಂದ ಅಧ್ಯಯನ ಮಾಡಿದನು.

೧೦೭. ವೇದಾಧ್ಯಯನವು ಮುಗಿಯಲು ಯಾಜ್ಞವಲ್ಕ್ಯನು ಸೂರ್ಯನನ್ನು ಕುರಿತು, "ಸ್ವಾಮಿ! ಗುರುದಕ್ಷಿಣೆಯನ್ನು ಕೇಳು. ನಿನಗೆ ಅದನ್ನು ಕೊಡುವೆನು" ಎಂದನು.

೧೦೮–೧೦೯. ಆದಿತ್ಯನು ಹೇಳುತ್ತಾನೆ:—ದ್ವಿಜವರ್ಯನೆ! ನೀನು ಋಗ್ವೇದದಲ್ಲಿರುವ ಸೂಕ್ತಗಳನ್ನೂ, ಯಜುರ್ವೇದದಲ್ಲಿರುವ ಸಾವನಗಳನ್ನೂ, ಸಾಮವೇದದಲ್ಲಿರುವ ಸಾಮಗಳನ್ನೂ, ಅಥರ್ವಣವೇದದಲ್ಲಿರುವ ಕಲ್ಪೋಕ್ತಗಳನ್ನೂ ವ್ಯಾಖ್ಯಾನಮಾಡಿ ಪ್ರಚಾರಗೊಳಿಸು.

೧೧೦. ನನ್ನ ಮುಂದೆ ಅವುಗಳನ್ನು ಪಠಿಸುವ ಬ್ರಾಹ್ಮಣರು ಪಾಪರಹಿತರಾಗಿ ದೇವಲೋಕಕ್ಕೆ ತೆರಳುವರು.

ವ್ಯಾಖ್ಯಾಸ್ಯಂತಿ ಪುನರ್ಯೇ ಚ ಮಮ ಭಕ್ತಿಪರಾಯಣಾಃ ॥
ತೇ ಯಾಸ್ಯಂತಿ ದ್ವಿಜಾ ಮುಕ್ತಿಂ ಸತ್ಯಮೇತನ್ಮಯೋದಿತಂ ॥ ೧೧೧ ॥

ಸೂತ ಉವಾಚ:—

ಏವಂ ವೇದಾನ್ ಪಠಿತ್ವಾ ಸ ಪ್ರದತ್ವಾ ಗುರುದಕ್ಷಿಣಾಂ ।
ಸೂರ್ಯಾಯಾಭ್ಯಾಗತೋ ಭೂಯಶ್ಚಮತ್ಕಾರಪುರಂ ಪ್ರತಿ ॥ ೧೧೨ ॥
ತತಃ ಶಾಕಲ್ಯಮಭ್ಯೇತ್ಯ ಗುರುಸ್ತ್ವಂ ಪ್ರಾಙ್ಮಮ ಸ್ಥಿತಃ ।
ಪ್ರಾರ್ಥಯಸ್ವ ಮಹಾಭಾಗ ದಾಸ್ಯಾಮಿ ಗುರುದಕ್ಷಿಣಾಂ ॥ ೧೧೩ ॥
ಜ್ಯೇಷ್ಠೋ ಭ್ರಾತಾ ಪಿತಾಚೈವ ಮಾತಾಚೈವ ಗುರುಸ್ತಥಾ ।
ವೈರುದ್ಧ್ಯೇನಾಽಪಿ ವರ್ತಂತೇ ಯದ್ಯೇತೇ ದ್ವಿಜಸತ್ತಮ ।
ತಥಾಽಪಿ ಪೂಜನೀಯಾಶ್ಚ ಪುರುಷೇಣ ನ ಸಂಶಯಃ ॥ ೧೧೪ ॥
ಸಾಂಗೋಪಾಂಗಾ ಮಯಾಽಧೀತಾ ವೇದಾಶ್ಚತ್ವಾರ ಏವ ಚ ।
ಅಧೀತಾಶ್ಚೈವ ಸರ್ವೇಷಾಂ ತೇಷಾಮರ್ಥೋಽವಧಾರಿತಃ ॥ ೧೧೫ ॥
ತತ್ತ್ವಂ ವದ ಮಹಾಭಾಗ ಕಾಂ ತೇ ಯಚ್ಛಾಮಿ ದಕ್ಷಿಣಾಂ ॥ ೧೧೬ ॥

ಶಾಕಲ್ಯ ಉವಾಚ:—

ಯಾನಿ ವೇದರಹಸ್ಯಾನಿ ಸೂರ್ಯೇಣ ಕಥಿತಾನಿ ತೇ ॥ ೧೧೭ ॥
ಯೈಃ ಸ್ಯಾತ್ಪಾಪಪ್ರಣಾಶಶ್ಚ ವ್ಯಾಖ್ಯಾತೈಃ ಪಠಿತೈಸ್ತಥಾ ।
ತಾನಿ ಮೇ ಕೀರ್ತಯ ಕ್ಷಿಪ್ರಮೇಷಾ ಮೇ ಗುರುದಕ್ಷಿಣಾ ॥ ೧೧೮ ॥

---

೧೧೧. ನನ್ನಲ್ಲಿ ಭಕ್ತಿಯುಳ್ಳವರಾಗಿ ಇದನ್ನು ವ್ಯಾಖ್ಯಾನಮಾಡುವವರು ಮುಕ್ತಿಯನ್ನು ಹೊಂದುವರು.

೧೧೨. ಸೂತನು ಹೇಳುತ್ತಾನೆ:— ಅವನು ಹೀಗೆ ವೇದಗಳನ್ನು ಪಠಿಸಿ ಸೂರ್ಯನಿಗೆ ಗುರುದಕ್ಷಿಣೆಯನ್ನಿತ್ತು ಚಮತ್ಕಾರಪುರಕ್ಕೆ ಹಿಂದಿರುಗಿದನು.

೧೧೩–೧೧೬. ಬಳಿಕ ಶಾಕಲ್ಯನೆಡೆಗೆ ಹೋಗಿ ನೀನು ನನಗೆ ಪೂರ್ವದ ಗುರುವಾಗಿರುವೆ. ಗುರುದಕ್ಷಿಣೆಯನ್ನು ಕೇಳು ಕೊಡುವೆನು. ದೊಡ್ಡ ಅಣ್ಣ, ತಂದೆ, ತಾಯಿ, ಗುರು ಇವರು ವಿರುದ್ಧರಾಗಿದ್ದರೂ ಮನುಷ್ಯನು ನಿಶ್ಚಯವಾಗಿಯೂ ಅವರನ್ನು ಪೂಜಿಸಬೇಕು. ನಾನು ನಾಲ್ಕು ವೇದಗಳನ್ನೂ ಸಾಂಗೋಪಾಂಗವಾಗಿ ಅಧ್ಯಯನಮಾಡಿ ಅವುಗಳ ಅರ್ಥವನ್ನು ಗ್ರಹಿಸಿರುವೆನು. ಆದುದರಿಂದ ಪೂಜ್ಯನೆ! ನಿನಗೆ ಯಾವ ಗುರುದಕ್ಷಿಣೆಯನ್ನು ಕೊಡಲಿ, ಹೇಳು ಎಂದನು.

೧೧೭–೧೧೮. ಶಾಕಲ್ಯನು ಹೇಳುತ್ತಾನೆ:—ಯಾಜ್ಞವಲ್ಕ್ಯ! ನೀನು ಸೂರ್ಯನಿಂದ ಅಧ್ಯಯನಮಾಡಿರುವುದೂ, ಪಠಿಸುವುದರಿಂದಲೂ, ವ್ಯಾಖ್ಯಾನ ಮಾಡುವುದ

ಯಾಜ್ಞವಲ್ಕ್ಯ ಉವಾಚ:—
ತದಾಗಚ್ಛ ಮಯಾ ಸಾರ್ಧಂ ಯತ್ರ ಸೂರ್ಯಾಃ ಪ್ರತಿಷ್ಠಿತಾಃ ।
ಮಯಾ ದ್ವಾದಶ ತೇಷಾಂ ಚ ಕೀರ್ತಯಿಷ್ಯಾಮಿ ಜಾಗ್ರತಃ ॥ ೧೧೯ ॥
ತಚ್ಛ್ರುತ್ವಾ ಶಿಷ್ಯಸಂಯುಕ್ತಃ ಶಾಕಲ್ಯಸ್ತೈಶ್ಚ ಸದ್ದ್ವಿಜೈಃ ।
ಶಿಷ್ಯೈಸ್ತಿಷ್ಠಂತಿ ಯೇ ತತ್ರ ಸ್ಥಾಪಿತಾಸ್ತೇನ ಭಾಸ್ಕರಾಃ ॥ ೧೨೦ ॥
ತತಸ್ತು ಕೀರ್ತಯಾಮಾಸ ವ್ಯಾಖ್ಯಾನಂ ತತ್ಪುರಃ ಸ್ಥಿತಃ ।
ವೇದಾಂತಾನಾಂ ಚ ಸರ್ವೇಷಾಂ ಯಥೋಕ್ತಂ ರವಿಣಾ ಪುರಾ ॥ ೧೨೧ ॥
ಅವಸಾನೇ ಚ ತೇಷಾಂ ತು ಚತುಶ್ಚರಣಸಂಭವೈಃ ।
ಬ್ರಾಹ್ಮಣೈರ್ಯಾಜ್ಞವಲ್ಕ್ಯಸ್ತು ವೇದಾಂತಜ್ಞೈಃ ಪ್ರತೋಷಿತಃ ॥ ೧೨೨ ॥
ಪ್ರೋಕ್ತಸ್ತವ ಪ್ರಸಾದೇನ ವೇದಾಂತಜ್ಞಾ ವಯಂ ಸ್ಥಿತಾಃ ।
ಶ್ರುತಾಽಧ್ಯಯನಸಂಪನ್ನಾ ಯಾಚಸ್ವ ಗುರುದಕ್ಷಿಣಾಂ ॥ ೧೨೩ ॥
ಯಾಜ್ಞವಲ್ಕ್ಯ ಉವಾಚ:—
ಏತೇಷಾಂ ಭಾಸ್ಕರಾಣಾಂ ಚ ಮದೀಯಾನಾಂ ಪುರೋ ದ್ವಿಜಾಃ ।
ಕೀರ್ತಯಿಷ್ಯಂತಿ ಯೇ ವಿಪ್ರಾಸ್ತೇಷಾಂ ಯುಷ್ಮತ್ಪ್ರಸಾದತಃ ।
ಭೂಯಾತ್ಸ್ವರ್ಗಗತಿರ್ವಿಪ್ರಾ ಏಷಾ ಮೇ ಗುರುದಕ್ಷಿಣಾ ॥ ೧೨೪ ॥

---

ರಿಂದಲೂ ಪಾಪಗಳನ್ನು ಪರಿಹರಿಸುವುದೂ ಆದ ವೇದರಹಸ್ಯಗಳನ್ನು ನನಗೆ ಹೇಳು. ಇದೇ ನನ್ನ ಗುರುದಕ್ಷಿಣೆಯಾಗಿರುವುದು.

೧೧೯. ಯಾಜ್ಞವಲ್ಕ್ಯನು ಹೇಳುತ್ತಾನೆ:— ಹಾಗಾದರೆ ನಾನು ಪ್ರತಿಷ್ಠೆ ಮಾಡಿರುವ ದ್ವಾದಶಾದಿತ್ಯರ ಸನ್ನಿಧಿಗೆ ಬಾ. ಅವರ ಮುಂದೆ ಹೇಳುವೆನು.

೧೨೦. ಶಾಕಲ್ಯನು ಅದನ್ನು ಕೇಳಿ ಶಿಷ್ಯರೊಡನೆ ಅವನು ಪ್ರತಿಷ್ಠಿಸಿರುವ ಸೂರ್ಯರೆಡೆಗೆ ಹೋದನು.

೧೨೧. ಬಳಿಕ ಯಾಜ್ಞವಲ್ಕ್ಯನು ಸೂರ್ಯನು ಹೇಳಿದಂತೆ ಸಕಲ ವೇದಾಂತವನ್ನೂ ವ್ಯಾಖ್ಯಾನ ಮಾಡಿದನು.

೧೨೨–೧೨೩. ವ್ಯಾಖ್ಯಾನದ ಕೊನೆಯಲ್ಲಿ ವೇದಾಂತವನ್ನರಿತ ಚತುಶ್ಚರಣ ಬ್ರಾಹ್ಮಣರು ಯಾಜ್ಞವಲ್ಕ್ಯನನ್ನು ಸಂತೋಷಗೊಳಿಸಿ ನಿನ್ನ ಅನುಗ್ರಹದಿಂದ ನಾವು ವೇದಾಂತಜ್ಞರೂ, ಶ್ರುತಾಧ್ಯಯನಸಂಪನ್ನರೂ ಆದೆವು. ಗುರುದಕ್ಷಿಣೆಯನ್ನು ಕೇಳು ಎಂದರು.

೧೨೪. ಯಾಜ್ಞವಲ್ಕ್ಯನು ಹೇಳುತ್ತಾನೆ:—ವಿಪ್ರರೆ! ನಾನು ಪ್ರತಿಷ್ಠಿಸಿರುವ ಈ ಸೂರ್ಯರ ಮುಂದೆ ವೇದಾಧ್ಯಯನ ಮಾಡುವವರಿಗೆ ನಿಮ್ಮ ಅನುಗ್ರಹದಿಂದ ಸ್ವರ್ಗವು ಲಭಿಸಲಿ. ಇದೇ ನನ್ನ ಗುರುದಕ್ಷಿಣೆಯು.

ಯೇ ಪುನರ್ಭಕ್ತಿಸಂಯುಕ್ತಾಃ ಕರಿಷ್ಯಂತಿ ವಿಚಾರಣಂ ।
ತೇಷಾಂ ತುರ್ಯಪದಂ ಯಚ್ಚ ಜರಾಮರಣವರ್ಜಿತಂ ॥ ೧೨೫ ॥
ಬ್ರಾಹ್ಮಣಾ ಊಚುಃ:—
ಭವಿಷ್ಯಂತಿ ಕಲೌ ವಿಪ್ರಾ ದೌಃಸ್ಥ್ಯಭಾವಸಮನ್ವಿತಾಃ ।
ಪಠನೇನೈವ ಶಕ್ತಾಶ್ಚ ವ್ಯಾಖ್ಯಾನಸ್ಯ ಚ ಕಾ ಕಥಾ ॥ ೧೨೬ ॥
ತಸ್ಮಾತ್ಸಾರಸ್ವತಂ ಬ್ರೂಹಿ ವೇದಾನಾಂ ದ್ವಿಜಸತ್ತಮ ।
ಅಪಿ ದೌಃಸ್ಥ್ಯಸಮಾಯುಕ್ತಾ ಯೇನ ತೇ ಕೀರ್ತಯಂತಿ ಚ ॥ ೧೨೭ ॥
ಯಾಜ್ಞವಲ್ಕ್ಯ ಉವಾಚ:—
ರಥಂ ಯುಂಜಂತಿ ಸೂಕ್ತಂ ಯತ್ಪ್ರಥಮಂ ವಿತ್ತಲಕ್ಷಣಂ ।
ತ್ರಿಷ್ಟುಭೇತಿ ಚ ಯತ್ಸೂಕ್ತಂ ತಥಾಽಽದ್ಯಂ ಬ್ರಾಹ್ಮಣೋತ್ತಮಾಃ ॥೧೨೮॥
ಚಿತ್ರಂ ದೇವಾನಾಮಿತಿ ಚ ತಥಾಽನ್ಯತ್ತಸ್ಯ ವಲ್ಲಭಂ ।
ಹಂಸಃ ಶುಚಿಷದಿತ್ಯುಕ್ತಂ ತತಶ್ಚಾಽಪಿ ಪ್ರಹರ್ಷದಂ ॥ ೧೨೯ ॥
ಪಾವಮಾನಂ ತಥಾ ಸೂಕ್ತಂ ಯೇ ಪಠಿಷ್ಯಂತಿ ಬಹ್ವೃಚಃ ।
ಇತ್ಯೇಷಾಮಾದ್ಯಮೇವಂ ತು ತೇ ಯಾಸ್ಯಂತಿ ಪರಾಂ ಗತಿಂ ॥ ೧೩೦ ॥
ಏಕವಿಂಶತಿಸಾಮಾನಿ ಆದಿತ್ಯೇಷ್ಟಾನಿ ಯಾನಿ ಚ ।
ಸಾಮಗಾಃ ಕೀರ್ತಯಿಷ್ಯಂತಿ ಯೇಽತ್ರಸ್ಥಾಃ ಶುಚಯಃ ಸ್ಥಿತಾಃ ॥ ೧೩೧ ॥
ನಿಶ್ಚಯಂ ತು ಪರಂ ಧೃತ್ವಾ ಯೇಽಪಿ ಸ್ತೋಷ್ಯಂತಿ ಭಾಸ್ಕರಂ ।
ತತಸ್ತೇಽಪಿ ಪ್ರಯಾಸ್ಯಂತಿ ನಿರ್ಭಿದ್ಯ ರವಿಮಂಡಲಂ ॥ ೧೩೨ ॥

---

೧೨೫. ಇದನ್ನು ಭಕ್ತಿಯಿಂದ ವಿಚಾರಮಾಡುವವರಿಗೆ ಜರಾಮರಣವಿಲ್ಲದ ಮೋಕ್ಷವು ಲಭಿಸಲಿ.

೧೨೬. ಬ್ರಾಹ್ಮಣರು ಹೇಳುತ್ತಾರೆ:—ಕಲಿಯುಗದಲ್ಲಿ ಜನರು ದುರವಸ್ಥೆಯನ್ನು ಹೊಂದಿ ಪಠಿಸುವುದರಲ್ಲಿ ಸಮರ್ಥರಾಗುವುದಿಲ್ಲ. ವ್ಯಾಖ್ಯಾನ ವಿಷಯದಲ್ಲಿನ್ನೇನು.

೧೨೭. ಆದುದರಿಂದ ದುರವಸ್ಥೆಯನ್ನು ಹೊಂದಿದವರೂ ಪಠಿಸಲರ್ಹವಾದ ವೇದಗಳ ಸಾರವನ್ನು ಹೇಳು.

೧೨೮–೧೩೦. ಯಾಜ್ಞವಲ್ಕ್ಯನು ಹೇಳುತ್ತಾನೆ:—ರಥಂ ಯುಂಜಂತಿ, ತ್ರಿಷ್ಟುಭ, ಚಿತ್ರಂ ದೇವಾನಾಂ, ಹಂಸಃ ಶುಚಿಷತ್ ಇತ್ಯಾದಿ ಸೂಕ್ತಗಳನ್ನೂ, ಪವಮಾನ ಸೂಕ್ತಗಳನ್ನೂ ಪಠಿಸುವವರು ಉತ್ತಮ ಗತಿಯನ್ನು ಹೊಂದಲಿ.

೧೩೧–೧೩೨. ಶುದ್ಧರಾಗಿ ಸೂರ್ಯನಿಗೆ ಇಷ್ಟವಾದ ಏಕವಿಂಶತಿ ಸಾಮಗಳನ್ನು ದೃಢಮನಸ್ಸಿನಿಂದ ಪಠಿಸಿ ಸೂರ್ಯನನ್ನು ಸಂತೋಷಗೊಳಿಸುವ ಸಾಮವೇದಿಗಳು ಸೂರ್ಯಮಂಡಲವನ್ನು ಭೇದಿಸಿ ಪ್ರಯಾಣಮಾಡಲಿ.

ಕ್ಷುರಿಕಾಸಂಪುಟಂ ಚೈವ ಸೂರ್ಯಕಲ್ಪಂ ತಥೈವ ಚ ।
ಶಾಂತಿಕಲ್ಪಸಮಾಯುಕ್ತಂ ಕೀರ್ತಯಿಷ್ಯಂತಿ ಯೇ ದ್ವಿಜಾಃ ॥ ೧೩೩ ॥
ಅಥರ್ವಪಾಠಕಾಸ್ತೇಽಪಿ ಪ್ರಯಾಸ್ಯಂತಿ ಪರಾಂಗತಿಂ ।
ಮೂರ್ಖಾ ಅಪಿ ಸಮಾಗತ್ಯ ಸಂಪ್ರಾಪ್ತೇ ಸೂರ್ಯವಾಸರೇ ॥ ೧೩೪ ॥
ಪ್ರಣಾಮಂ ಯೇ ಕರಿಷ್ಯಂತಿ ಶ್ರದ್ಧಯಾ ಪರಯಾ ಯುತಾಃ ।
ಸಪ್ತರಾತ್ರಕೃತಾತ್ಪಾಪಾನ್ಮುಕ್ತಿಂ ಪ್ರಾಪ್ಸ್ಯಂತಿ ತೇ ದ್ವಿಜಾಃ ॥ ೧೩೫ ॥

ಸೂತ ಉವಾಚ:—

ತಥೇತಿ ತೈಃ ಪ್ರತಿಜ್ಞಾತೇ ಚತುಶ್ಚರಣಸಂಭವೈಃ ।
ಬ್ರಾಹ್ಮಣೈರ್ಯಾಜ್ಞವಲ್ಕ್ಯಸ್ತು ವಿಜ್ಞಾತೋ ಯೇನ ಕೇನ ತು ॥ ೧೩೬ ॥
ವಿದೇಹೇನ ತತಃ ಪ್ರಾಪ್ತಃ ಶ್ರವಣಾರ್ಥಂ ನರಾಧಿಪಃ ।
ವೇದಾಂತಾನಾಂ ಚ ಸರ್ವೇಷಾಂ ರತ್ನಾಖ್ಯೇನ ಮಹೀಭುಜಾ ॥ ೧೩೭ ॥
ತೇನಾಽಪಿ ಚ ಪರಿಜ್ಞಾಯ ಮಾಹಾತ್ಮ್ಯಂ ಸೂರ್ಯಸಂಭವಂ ।
ತತಃ ಸಂಸ್ಥಾಪಿತಃ ಸೂರ್ಯಸ್ತಸ್ಮಿನ್ ಸ್ಥಾನೇ ದ್ವಿಜೋತ್ತಮಾಃ ॥ ೧೩೮ ॥
ತಂ ಚಾಽಪಿ ಸೂರ್ಯವಾರೇಣ ಯಃ ಪ್ರಪಶ್ಯತಿ ಮಾನವಃ ।
ಸಪ್ತರಾತ್ರಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೧೩೯ ॥
ಏತದ್ವಃ ಕಥಿತಂ ಸರ್ವಂ ಮಾಹಾತ್ಮ್ಯಂ ಸೂರ್ಯಸಂಭವಂ ।
ಯಃ ಶೃಣೋತಿ ನರೋ ಭಕ್ತ್ಯಾ ಅಶ್ವಮೇಧಫಲಂ ಲಭೇತ್ ॥ ೧೪೦ ॥

---

೧೩೩–೧೩೫. ಕ್ಷುರಿಕಾಸಂಪುಟ, ಸೂರ್ಯಕಲ್ಪ, ಶಾಂತಿಕಲ್ಪಗಳನ್ನು ಪಠಿಸುವ ದ್ವಿಜರೂ, ಅಥರ್ವವೇದವನ್ನು ಪಠಿಸುವವರೂ ಉತ್ತಮಗತಿಯನ್ನು ಹೊಂದುವರು. ಮೂರ್ಖರು ಕೂಡ ಭಾನುವಾರದ ದಿನ ಇಲ್ಲಿಗೆ ಬಂದು ಶ್ರದ್ಧೆಯಿಂದ ನಮಸ್ಕಾರ ಮಾಡಿದರೆ ಏಳು ರಾತ್ರಿಗಳಲ್ಲಿ ಅವರು ಮಾಡಿದ ಪಾಪದಿಂದ ಮುಕ್ತರಾಗಲಿ.

೧೩೬–೧೩೭. ಸೂತನು ಹೇಳುತ್ತಾನೆ:— ಚತುಶ್ಚರಣ ಬ್ರಾಹ್ಮಣರು ಹಾಗೆಯೇ ಆಗಲೆನ್ನಲು ಆ ಯಾಜ್ಞವಲ್ಕ್ಯನನ್ನರಿತ ರತ್ನನೆಂಬ ವಿದೇಹ ರಾಜನು ಸಕಲ ವೇದಾಂತಗಳನ್ನು ಕೇಳಲೋಸುಗ ಅಲ್ಲಿಗೆ ಬಂದನು.

೧೩೮. ದ್ವಿಜವರ್ಯರೆ! ಅವನು ಸೂರ್ಯನ ಮಾಹಾತ್ಮ್ಯವನ್ನರಿತು ಅಲ್ಲಿ ಸೂರ್ಯನನ್ನು ಪ್ರತಿಷ್ಠೆ ಮಾಡಿದನು.

೧೩೯. ಆ ಸೂರ್ಯನನ್ನು ಭಾನುವಾರದ ದಿನ ದರ್ಶನ ಮಾಡಿದವನು ಏಳು ರಾತ್ರಿ ಮಾಡಿದ ಪಾಪದಿಂದ ಮುಕ್ತನಾಗುವನು.

೧೪೦. ನಿಮಗೆ ಈ ಸೂರ್ಯನ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು. ಇದನ್ನು ಭಕ್ತಿಯಿಂದ ಕೇಳಿದ ಮಾನವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

ಸಂಕ್ರಾಂತೌ ಯತ್ಪ್ರದಾನೇನ ಸೂರ್ಯೇ ವಾ ಶ್ರವಣೇನ ತು ।
ತತ್ಫಲಂ ಸಮವಾಪ್ನೋತಿ ಶ್ರುತ್ವಾ ಮಾಹಾತ್ಮ್ಯಮುತ್ತಮಂ ॥ ೧೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಾಜ್ಞವಲ್ಕ್ಯವೃತ್ತಾಂತವರ್ಣನಂ" ನಾಮ
ಅಷ್ಟಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ

---

೧೪೧. ಈ ಮಾಹಾತ್ಮ್ಯವನ್ನು ಕೇಳಿದವನು ಸಂಕ್ರಾಂತಿಯ ದಿನ ದಾನ ಮಾಡುವುದರಿಂದಲೂ, ಭಾನುವಾರದ ದಿನ ಕೇಳುವುದರಿಂದಲೂ ಉಂಟಾಗುವ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಾಜ್ಞವಲ್ಕ್ಯವೃತ್ತಾಂತವರ್ಣನ" ವೆಂಬ
ಇನ್ನೂರ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಏಕೋನಾಽಶೀತ್ಯುತ್ತರದ್ವಿಶತತಮೋಽಧ್ಯಾಯಃ

### ಪುರಾಣಶ್ರವಣಮಾಹಾತ್ಮ್ಯವರ್ಣನಂ

**ಸೂತ ಉವಾಚ:—**

ಏತತ್ಪುರಾಣಮಖಿಲಂ ಪುರಾ ಸ್ಕಂದೇನ ಭಾಷಿತಂ ।
ಭೃಗವೇ ಬ್ರಹ್ಮಪುತ್ರಾಯ ತಸ್ಮಾಲ್ಲೇಭೇ ತಥಾಂಗಿರಾಃ ॥ ೧ ॥
ತತಶ್ಚ ಚ್ಯವನಃ ಪ್ರಾಪ ಸ ಋಚೀಕಸ್ತತೋ ಮುನಿಃ ।
ಏವಂ ಪರಂಪರಾಪ್ರಾಪ್ತಂ ಸರ್ವೇಷು ಭುವನೇಷ್ವಪಿ ॥ ೨ ॥
ಸ್ಕಾಂದಂ ಪುರಾಣಮೇತಚ್ಚ ಕುಮಾರೇಣ ಪುರೋದ್ಧೃತಂ ।
ಯಃ ಶೃಣೋತಿ ಸತಾಂ ಮಧ್ಯೇ ನರಃ ಪಾಪಾತ್ಪ್ರಮುಚ್ಯತೇ ॥ ೩ ॥
ಇದಂ ಪುರಾಣಮಾಯುಷ್ಯಂ ವರ್ಣಾನಾಂ ತು ಸುಖಾವಹಂ ।
ನಿರ್ಮಿತಂ ಷಣ್ಮುಖೇನೇಹ ನಿಯತಂ ಸುಮಹಾತ್ಮನಾ ॥ ೪ ॥
ಏವಮೇತತ್ಪುರಾ ಖ್ಯಾತಮಾಖ್ಯಾನಂ ಭದ್ರಮಸ್ತು ವಃ ॥ ೫ ॥
ಹಾಟಕೇಶ್ವರಕ್ಷೇತ್ರಸ್ಯ ಮಾಹಾತ್ಮ್ಯಂ ಶೃಣುತೇ ನರಃ ।
ನ ತಸ್ಯ ಪುಣ್ಯಸಂಖ್ಯಾನಂ ಕರ್ತುಂ ಶಕ್ಯೇನ ಕೇನಚಿತ್ ॥ ೬ ॥
ಯ ಇದಂ ಧರ್ಮಮಾಹಾತ್ಮ್ಯಂ ಬ್ರಾಹ್ಮಣಾಯ ಪ್ರಯಚ್ಛತಿ ।
ಸ್ವರ್ಗಲೋಕೇ ವಸೇತ್ತಾವದ್ಯಾವದಕ್ಷರಸಂಖ್ಯಯಾ ॥ ೭ ॥

---

### ಕನ್ನಡದ ಅನುವಾದ

#### ಪುರಾಣಶ್ರವಣಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಈ ಸಮಗ್ರ ಪುರಾಣವನ್ನು ಹಿಂದೆ ಸ್ಕಂದನು ಬ್ರಹ್ಮನ ಮಗನಾದ ಭೃಗುವಿಗೆ ಹೇಳಿದನು. ಅವನಿಂದ ಅಂಗಿರನು ಕೇಳಿದನು.

೨. ಬಳಿಕ ಚ್ಯವನನೂ, ಅವನಿಂದ ಋಚೀಕಮುನಿಯೂ ಕೇಳಿದರು. ಹೀಗೆ ಸಕಲ ಲೋಕಗಳಲ್ಲಿ ಇದು ಪರಂಪರೆಯಿಂದ ವ್ಯಾಪಿಸಿತು.

೩. ಹಿಂದೆ ಸ್ಕಂದನು ಹೇಳಿದ ಈ ಸ್ಕಾಂದಪುರಾಣವನ್ನು ಸಜ್ಜನರ ನಡುವೆ ಕೇಳಿದ ಮಾನವನು ಪಾಪಮುಕ್ತನಾಗುವನು.

೪. ಆಯುಷ್ಯವನ್ನುಂಟುಮಾಡುವುದೂ, ಸಮಸ್ತ ಜಾತಿಯವರಿಗೆ ಸುಖಕರವೂ ಆದ ಈ ಪುರಾಣವನ್ನು ಮಹಾತ್ಮನಾದ ಸ್ಕಂದನು ನಿರ್ಮಿಸಿದನು.

೫. ಹೀಗೆ ಹಿಂದೆ ಪ್ರಸಿದ್ಧವಾದ ಈ ಪುರಾಣವು ನಿಮಗೆ ಮಂಗಳವನ್ನುಂಟು ಮಾಡಲಿ.

೬. ಹಾಟಕೇಶ್ವರಕ್ಷೇತ್ರದ ಮಾಹಾತ್ಮ್ಯವನ್ನು ಕೇಳಿದ ಮನುಷ್ಯನ ಪುಣ್ಯವನ್ನು ಎಣಿಸಲು ಯಾರಿಗೂ ಸಾಧ್ಯವಿಲ್ಲ.

೭. ಧರ್ಮದಾಯಕವಾದ ಈ ಮಾಹಾತ್ಮ್ಯವನ್ನು ಬರೆದು ಬ್ರಾಹ್ಮಣನಿಗೆ

ಯಥಾ ಹಿ ವರ್ಷತೋ ಧಾರಾ ಯಥಾ ವಾ ದಿವಿ ತಾರಕಾಃ ।
ಗಂಗಾಯಾಂ ಸಿಕತಾ ಯದ್ವತ್ತದ್ವತ್ಸಂಖ್ಯಾ ನ ವಿದ್ಯತೇ ॥ ೮ ॥
ಯೋ ನರಃ ಶೃಣುಯಾದ್ಭಕ್ತ್ಯಾ ದಿನಾನಿ ಚ ಕಿಯಂತಿ ವೈ ।
ಸರ್ವಾರ್ಥಸಿದ್ಧೋ ಭವತಿ ಯ ಇಮಾಂ ಪಠತೇ ಕಥಾಂ ॥ ೯ ॥
ಪುತ್ರಾರ್ಥೀ ಲಭತೇ ಪುತ್ರಾನ್ ಧನಾರ್ಥೀ ಲಭತೇ ಧನಂ ।
ಲಭತೇ ಪತಿಕಾಮಾಯಾ ಪತಿಂ ಕನ್ಯಾ ಮನೋರಮಂ ॥ ೧೦ ॥
ಸಮಾಗಮಂ ಲಭಂತೇ ಚ ಬಾಂಧವಾಶ್ಚ ಪ್ರವಾಸಿಭಿಃ ।
ಸ್ಕಾಂದಂ ಪುರಾಣಂ ಶ್ರುತ್ವಾ ತು ಪುಮಾನಾಪ್ನೋತಿ ವಾಂಛಿತಂ ॥ ೧೧ ॥
ಶೃಣ್ವತಃ ಪಠತಶ್ಚೈವ ಸರ್ವಕಾಮಪ್ರದಂ ನೃಣಾಂ ।
ಮಹೀಂ ವಿಜಯತೇ ರಾಜಾ ಶತ್ರೂಂಶ್ಚಾಽಪ್ಯಧಿತಿಷ್ಠತಿ ॥ ೧೨ ॥
ಪುಣ್ಯಂ ಶ್ರುತ್ವಾ ಪುರಾಣಂ ವೈ ದೀರ್ಘಮಾಯುಶ್ಚ ವಿಂದತಿ ।
ವೇದವಿಚ್ಚ ಭವೇದ್ವಿಪ್ರಃ ಕ್ಷತ್ರಿಯೋ ರಾಜ್ಯಮಾಪ್ನುಯಾತ್ ॥ ೧೩ ॥
ಧನಂ ಧಾನ್ಯಂ ತಥಾ ವೈಶ್ಯಃ ಶೂದ್ರಃ ಸುಖಮವಾಪ್ನುಯಾತ್ ।
ಯಃ ಶ್ಲೋಕಪಾದಂ ಶೃಣುಯಾದ್ವಿಷ್ಣುಲೋಕಂ ಸ ಗಚ್ಛತಿ ॥ ೧೪ ॥
ಶ್ರುತ್ವಾ ಪುರಾಣಮೇತದ್ಧಿ ವಾಚಕಂ ಯಸ್ತು ಪೂಜಯೇತ್ ।
ತೇನ ಬ್ರಹ್ಮಾ ಚ ವಿಷ್ಣುಶ್ಚ ರುದ್ರಶ್ಚೈವ ಪ್ರಪೂಜಿತಃ ॥ ೧೫ ॥

---

ದಾನ ಮಾಡಿದವನು ಅದರ ಅಕ್ಷರಗಳ ಸಂಖ್ಯೆಯಷ್ಟುಕಾಲ ಸ್ವರ್ಗದಲ್ಲಿ ವಾಸ ಮಾಡುವನು.

೮. ಮಳೆಯ ಧಾರೆ, ಆಕಾಶದಲ್ಲಿ ನಕ್ಷತ್ರಗಳು, ಗಂಗೆಯಲ್ಲಿ ಮರಳುಗಳು ಅಸಂಖ್ಯಾತವಾಗಿರುವಂತೆ ಅವನ ಪುಣ್ಯವೂ ಅಸಂಖ್ಯಾತವಾಗಿರುವುದು.

೯–೧೧. ಕೆಲವು ದಿನಗಳ ಕಾಲ ಇದನ್ನು ಕೇಳುವವನು ಸಕಲ ಸಿದ್ಧಿಯನ್ನೂ ಪಡೆಯುವನು. ಇದನ್ನು ಪಠಿಸುವವನು ಪುತ್ರಾರ್ಥಿಯಾಗಿದ್ದರೆ ಪುತ್ರರನ್ನೂ, ಧನಾರ್ಥಿಯಾಗಿದ್ದರೆ ಧನವನ್ನೂ, ಪತಿಯನ್ನು ಬಯಸುವ ಕನ್ಯೆಯು ಸುಂದರನಾದ ಪತಿಯನ್ನೂ ಪಡೆಯುವರು. ಬಾಂಧವರು ದೇಶಾಂತರಕ್ಕೆ ಹೋದವರೊಡನೆ ಸೇರುವರು. ಹೀಗೆ ಇದನ್ನು ಕೇಳಿದ ನರನು ತನ್ನ ಇಷ್ಟವನ್ನು ಪಡೆಯುವನು.

೧೨–೧೪. ಇದು ಕೇಳುವವರಿಗೂ, ಪಠಿಸುವವರಿಗೂ ಸಕಲೇಷ್ಟಾರ್ಥಗಳನ್ನು ನೀಡುವುದು. ಈ ಪುಣ್ಯಕರವಾದ ಪುರಾಣವನ್ನು ಕೇಳಿದ ರಾಜನು ಶತ್ರುಗಳನ್ನು ಗೆದ್ದು ಭೂಮಿಯನ್ನು ಪಡೆಯುವನು. ವೇದಜ್ಞನಾದ ಬ್ರಾಹ್ಮಣನು ದೀರ್ಘಾಯುಷ್ಯವನ್ನೂ, ಕ್ಷತ್ರಿಯನು ರಾಜ್ಯವನ್ನೂ, ವೈಶ್ಯನು ಧನಧಾನ್ಯಗಳನ್ನೂ, ಶೂದ್ರನು ಸುಖವನ್ನೂ ಹೊಂದುವನು. ಇದರ ಶ್ಲೋಕಗಳ ಒಂದು ಪಾದವನ್ನು ಕೇಳಿದವನು ಕೂಡ ವಿಷ್ಣುಲೋಕಕ್ಕೆ ತೆರಳುವನು.

೧೫. ಈ ಪುರಾಣವನ್ನು ಕೇಳಿ ಪೌರಾಣಿಕನನ್ನು ಪೂಜಿಸುವವನು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪೂಜಿಸಿದವನಂತಾಗುವನು.

ಏಕಮಪ್ಯಕ್ಷರಂ ಯಸ್ತು ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಽಸ್ತಿ ತದ್ದ್ರವ್ಯಂ ಯದ್ದತ್ವಾ ಹ್ಯನೃಣೀ ಭವೇತ್ ॥ ೧೬ ॥
ಅತಃ ಸಂಪೂಜನೀಯಸ್ತು ವ್ಯಾಸಃ ಶಾಸ್ತ್ರೋಪದೇಶಕಃ ।
ಗೋ ಭೂ ಹಿರಣ್ಯವಸ್ತ್ರಾದ್ಯೈರ್ಭೋಜನೈಃ ಸಾರ್ವಕಾಮಿಕೈಃ ॥ ೧೭ ॥
ಯ ಏವಂ ಭಕ್ತಿಯುಕ್ತಸ್ತು ಶ್ರುತ್ವಾ ಶಾಸ್ತ್ರಮನುತ್ತಮಂ ।
ಪೂಜಯೇದುಪದೇಷ್ಟಾರಂ ಸ ಶೈವಪದಮಾಪ್ನುಯಾತ್ ॥ ೧೮ ॥
ಪುರಾಣಶ್ರವಣಾದೇವ ಅನೇಕಭವಸಂಚಿತಂ ।
ಪಾಪಂ ಪ್ರಶಮಮಾಯಾತಿ ಸರ್ವತೀರ್ಥಫಲಂ ಲಭೇತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪುರಾಣಶ್ರವಣಮಾಹಾತ್ಮ್ಯವರ್ಣನಂ" ನಾಮ
ಏಕೋನಾಽಶೀತ್ಯುತ್ತರದ್ವಿಶತತಮೋಽಧ್ಯಾಯಃ

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಷಷ್ಠಂ ನಾಗರಖಂಡಂ ಸಮಾಪ್ತಂ

---

೧೬. ಇದರ ಒಂದಕ್ಷರವನ್ನು ಶಿಷ್ಯನಿಗೆ ಉಪದೇಶಮಾಡಿದ ಗುರುವಿಗೆ ಪ್ರತಿಯಾಗಿ ಕೊಟ್ಟು ಆನೃಣ್ಯವನ್ನು ಹೊಂದಲು ಭೂಮಿಯಲ್ಲಿ ಯಾವ ವಸ್ತುವೂ ಇರುವುದಿಲ್ಲ.

೧೭. ಆದುದರಿಂದ ಶಾಸ್ತ್ರೋಪದೇಶಮಾಡುವ ವ್ಯಾಸನನ್ನು ಗೋವು, ಭೂಮಿ, ಸುವರ್ಣ, ವಸ್ತ್ರ, ಭೋಜನ ಮೊದಲಾದ ಇಷ್ಟಾರ್ಥಗಳನ್ನಿತ್ತು ಪೂಜಿಸಬೇಕು.

೧೮. ಹೀಗೆ ಭಕ್ತಿಯಿಂದ ಉತ್ತಮ ಶಾಸ್ತ್ರವನ್ನು ಕೇಳಿ ಉಪದೇಶಿಸುವವನನ್ನು ಪೂಜಿಸುವ ನರನು ಶಿವಪದವಿಯನ್ನು ಹೊಂದುವನು.

೧೯. ಪುರಾಣಶ್ರವಣದಿಂದಲೇ ಅನೇಕ ಜನ್ಮಗಳಲ್ಲಿ ಸಗಿದ ಪಾಪವು ಪರಿಹಾರವಾಗುವುದು. ಸಕಲ ತೀರ್ಥಗಳ ಫಲವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪುರಾಣಶ್ರವಣಮಾಹಾತ್ಮ್ಯವರ್ಣನ"ವೆಂಬ
ಇನ್ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

ಇಲ್ಲಿಗೆ ಸ್ಕಾಂದಪುರಾಣದಲ್ಲಿ ಆರನೆಯ ನಾಗರಖಂಡವು ಮುಗಿದುದು.

---

437–54. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿದವರು.

